ಸಂಪುಟ - 7

# ತರ್ಕತಾಂಡವ ವಿಶ್ವರೂಪ



ಪ್ರಕಾಶನ

**ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ**

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀ ರಾಘವೇಂದ್ರಸ್ವಾಮಿಗಳ ಮಠ

ಮಂತ್ರಾಲಯ - ೫೧೮ ೩೦೨ (ಆಂಧ್ರ ಪ್ರದೇಶ)

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

# ಸಂಪುಟ -7

ಶ್ರೀವ್ಯಾಸತೀರ್ಥಗುರುಸಾರ್ವಭೌಮವಿರಚಿತ

# ತರ್ಕತಾಂಡವ

# ವಿಶ್ವರೂಪ

ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತ

# ನ್ಯಾಯದೀಪ

ಪ್ರಮಾಣಲಕ್ಷಣಟೀಕೆ, ಪ್ರಮಾಣಪದ್ಧತಿ, ಯುಕ್ತಿಮಲ್ಲಿಕಾ, ಅಭಿನವತಾಂಡವ
ಗ್ರಂಥಗಳ ಆಯ್ದಭಾಗದ ಮೂಲ ಹಾಗೂ ಕನ್ನಡ ಅನುವಾದ.
ನ್ಯಾಯಕುಸುಮಾಂಜಲಿ, ನ್ಯಾಯಲೀಲಾವತಿ, ತತ್ವಚಿಂತಾಮಣಿ, ಪ್ರಕಾಶ ಎಂಬ
ನಾಕು ಪ್ರಾಚೀನ ತರ್ಕಗ್ರಂಥಗಳ ಮೂಲ ಹಾಗೂ ಕನ್ನಡ ಅನುವಾದ.

ವಿವರಣೆ, ವಿಶೇಷವಿಚಾರ, ನೆನಪಿಡಿ, ಗೋಷ್ಠಿವಿಚಾರ, ಪ್ರಶ್ನೋತ್ತರ,
ಆಕರ್ಷಕ ಶಿರೋನಾಮ, ಸಾರಾಮೃತಗಳೊಂದಿಗೆ ಕನ್ನಡದ ಕನ್ನಡಿಯಲ್ಲಿ

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

II

‘ತರ್ಕತಾಂಡವ-ವಿಶ್ವರೂಪ’ : ಶ್ರೀಗುರುಸಾರ್ವಭೌಮರ ೪೨೦ನೆಯ ವರ್ಧಂತಿಯ ಶುಭಮುಹೂರ್ತದಲ್ಲಿ ಜಯನಾಮಸಂವತ್ಸರದ ಫಾಲ್ಗುಣಮಾಸ ಶುದ್ಧಸಪ್ತಮಿಯಂದು ಮಂತ್ರಾಲಯ ಕ್ಷೇತ್ರದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸುಬುಧೇಂದ್ರತೀರ್ಥಶ್ರೀಪಾದಂಗಳವರು ಈ ಕೃತಿಯನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.

| | |
|---|---|
| ಪ್ರಕಾಶನ | : ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು. |
| ಪ್ರಥಮಮುದ್ರಣ | : 2015 |
| ಪುಟಗಳು | : 650 |
| ಬೆಲೆ | : 600 ರೂ |
| ಪ್ರತಿಗಳು | : 1000 |





ಅಕ್ಷರಜೋಡಣೆ :
ಸುಬ್ಬಣ್ಣ ಕೆಂಪದಾಳಿಹಳ್ಳಿ. (080-26761614)

ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

**VOLUME - 7**

# TARKA TAṆḌAVA

## VIŚVARŪPA

a work of

## Śri Vyāsatirtha gurusārvabhouma

with Glossary

# NYĀYADĪPA

of

## Śri Rāghavendragurusārvabhouma

along with extracts of

Purvapakśa texts

**NYĀYA KUSUMĀNJALI; NYĀYALEELAVATI; TATVA-CINTĀMAṆI**

Siddhānta texts

**PRAMĀṆALAKŚANA-TIKA; PRAMĀṆAPADDHATI; YUKTIMALLIKĀ; ABHINAVATAṆḌAVA**

including meanings in Kannada

Notes, things to remember, Q&A and Headings,

* * * * *

PUBLISHERS

**SRI GURUSĀRVABHOUMA SAMŚHODHANA MANDIRA**

Jagaduguru Śrimanmadhvāchārya Mūlamahāsamsthāna

Sri Rāghavendraswāmigala Matha, Mantralayam- 518 345

ANDHRAPRADESH

**TARKA TAṆḌAVA VIŚVARŪPA-** a work of Śri Vyāsatirtha guru-sārvabhouma with glossaries and notes was released on the auspicious occassion of 420th Vardhanti of Sri Raghavendraswamiji by His Holiness Sri Sri Subudhendra Swamiji.

PUBLISHERS : **SRI GURUSĀRVABHOUMA SAMŚHODHANA MANDIRA**
Jagaduguru Śrimanmadhvāchārya Mūlamahāsamsthāna
Sri Rāghavendraswāmigala Matha, Mantralayam- 518 345
ANDHRAPRADESH

**COMPILED, EDITED AND TRANSLATED BY** : **Vidwan Bemmatti Venkateshacharya,** Bangalore

**YEAR OF PUBLICATION** : **2015**

**NO OF PAGES** : **48+602**

**PRICE** : **Rs 600 only**

**No of prints** : **1000**





**D.T.P.**
**Subbanna Kempadhali Halli (080-26761624)**

**PRINTERS:**
**MUKTIPATHA MUDRANALAYA,**
**BANGALORE**

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ತರ್ಕತಾಂಡವ

## ವಿಶ್ವರೂಪ

* * * *

ಅಧ್ಯಕ್ಷರು :

**ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು**

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :

ವಿ॥ ರಾಜಾ ಎಸ್. ಗಿರಿಆಚಾರ್ಯ

ಮಂತ್ರಾಲಯ.

ಮಾರ್ಗದರ್ಶನ :

ವಿ॥ ಆರ್.ವೇಂಕಟೇಶಾಚಾರ್ಯ,

ಶ್ರೀರಂಗಂ.

ಸಂಪಾದನೆ ಮತ್ತು ಅನುವಾದ :

ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

Srimanmularamo vijayate Sri Gururajo vijayate

**VOLUME - 7**

# TARKA TAṆḌAVA

## VIŚVARŪPA

* * * * * *

PRESIDENT

**HIS HOLINESS SRI SUBUDHENDRATIRTHA SWAMIJI,**

Pitadhipathi, Sri Rāghavendraswāmigala Matha, Mantralayam

HONOURARY EDITOR

**Vidwan RAJA S. GIRI ACHARYA**

GUIDANCE

**Vidwan R. VENKATESHACHARYA,**

Srirangam

Compiled, edited and translated by

**Vidwan BEMMATTI VENKATESHACHARYA**

Bengaluru.

# ಸಂಪಾದಿತ ಹಾಗೂ ಅನುವಾದಿತ ಗ್ರಂಥಗಳು ಮತ್ತು ಗ್ರಂಥಕಾರರು

(ಸಿದ್ಧಾಂತ ಗ್ರಂಥಗಳು)

1. ಪ್ರಮಾಣಲಕ್ಷಣ - ಜಗದ್ಗುರು - ಶ್ರೀಮನ್ಮಧ್ವಾಚಾರ್ಯರು

2. ಪ್ರಮಾಣಲಕ್ಷಣ ಟೀಕೆ - ಶ್ರೀಜಯತೀರ್ಥಭಿಕ್ಷುಗಳು

3. ಪ್ರಮಾಣಪದ್ಧತಿ - ಶ್ರೀಜಯತೀರ್ಥಭಿಕ್ಷುಗಳು

4. ಯುಕ್ತಿಮಲ್ಲಿಕಾ - ಶ್ರೀವಾದಿರಾಜತೀರ್ಥ- ಗುರುಸಾರ್ವಭೌಮರು

5. ತರ್ಕತಾಂಡವ - ಶ್ರೀವ್ಯಾಸತೀರ್ಥ- ಗುರುಸಾರ್ವಭೌಮರು

6. ನ್ಯಾಯದೀಪ - ಶ್ರೀರಾಘವೇಂದ್ರತೀರ್ಥ-
ಗುರುಸಾರ್ವಭೌಮರು

7. ಅಭಿನವ ತಾಂಡವ -ಶ್ರೀಸತ್ಯನಾಥತೀರ್ಥಶ್ರೀಪಾದರು

(ಪೂರ್ವಪಕ್ಷ ಗ್ರಂಥಗಳು)

8. ನ್ಯಾಯಕುಸುಮಾಂಜಲಿ - ಉದಯನಾಚಾರ್ಯ

9. ನ್ಯಾಯಲೀಲಾವತಿ - ಭಾಸ್ಕರಾಚಾರ್ಯ

10. ತತ್ವಚಿಂತಾಮಣಿ - ಗಂಗೇಶೋಪಾಧ್ಯಾಯ

11. ಪ್ರಕಾಶ - ರುಚಿದತ್ತ

ತರ್ಕತಾಂಡವ ಗ್ರಂಥವು ಅತ್ಯಂತ ಕಠಿಣವಾಗಿರುವುದರಿಂದ ಸುಲಭವಾಗಿ ಅರ್ಥಮಾಡಿಕೊಳ್ಳಲು ಅನೇಕ ಮಜಲುಗಳಲ್ಲಿ ಅನುವಾದ ಮಾಡಲಾಗಿದೆ. ಆ ಮಜಲುಗಳನ್ನು ಭಾಗಾನುಕ್ರಮಣಿಕೆಯಲ್ಲಿ ವಿವರಿಸಲಾಗಿದೆ.

# ಭಾಗಾನುಕ್ರಮಣಿಕಾ

## ತರ್ಕತಾಂಡವ-ವಿಶ್ವರೂಪ -೧

1. ಸಾರಾಮೃತ,
2. ತರ್ಕತಾಂಡವ - ಸಂಸ್ಕೃತ ಮೂಲ
3. ನ್ಯಾಯದೀಪ-ಸಂಸ್ಕೃತ ಮೂಲ
4. ತರ್ಕತಾಂಡವ - ಕನ್ನಡದಲ್ಲಿ ಮೂಲ
5. ಅನುವಾದ
6. ವಿವರಣೆ,
7. ನ್ಯಾಯದೀಪ -ಕನ್ನಡದಲ್ಲಿ ಮೂಲ,
8. ಅನುವಾದ
9. ವಿಶೇಷವಿಚಾರ
10. ಪ್ರಶ್ನೋತ್ತರ,
11. ಗೋಷ್ಠಿಯ ವಿಚಾರ,
12. ನೆನಪಿಡಿ

## ಪೂರ್ವಪಕ್ಷ ತಾಂಡವ -2

1. ಉದಯನಾಚಾರ್ಯಪ್ರಣೀತ-ನ್ಯಾಯಕುಸುಮಾಂಜಲಿ
2. ಭಾಸ್ಕರಾಚಾರ್ಯಪ್ರಣೀತ-ನ್ಯಾಯಲೀಲಾವತಿ
3. ಗಂಗೇಶೋಪಾಧ್ಯಾಯಪ್ರಣೀತ-ತತ್ವಚಿಂತಾಮಣಿ
4. ರುಚಿದತ್ತಪ್ರಣೀತ-ಪ್ರಕಾಶ

## ಸಿದ್ಧಾಂತ ತಾಂಡವ -3

1. ಪ್ರಮಾಣಲಕ್ಷಣ
2. ಪ್ರಮಾಣಲಕ್ಷಣಟೀಕೆ
3. ಪ್ರಮಾಣಪದ್ಧತಿ
4. ಯುಕ್ತಿಮಲ್ಲಿಕಾ
5. ಅಭಿನವ ತಾಂಡವ

ಇವುಗಳ ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

# ತರ್ಕತಾಂಡವ-ವಿಶ್ವರೂಪ

# ವಾಙ್ಮಯ ಕುಸುಮಹಾರ

## ಸಮರ್ಪಣೆ



ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾದ
ಪರಮಪೂಜ್ಯ ॥ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು
ತಮ್ಮ ಪಾದಕಾಣಿಕೆಯಿಂದ ಈ ಕೃತಿಯನ್ನು
ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ
ಜಗದ್ಗುರು ಶ್ರೀಮಧ್ವಾಚಾರ್ಯರಲ್ಲಿ ನೆಲೆಸಿದ ಶ್ರೀಮನ್ಮೂಲರಘುಪತಿದೇವರಿಗೆ
ವಾಙ್ಮಯಕುಸುಮಹಾರವನ್ನಾಗಿ ಸಮರ್ಪಣೆ ಮಾಡಿರುವರು.

## ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದರ ಸಾರಥ್ಯದಲ್ಲಿ

# ತರ್ಕತಾಂಡವ-ವಿಶ್ವರೂಪ ದರ್ಶನ

ಓ ಶಾಸ್ತ್ರರಸಿಕರೇ! ಧಾವಿಸಿ ಬನ್ನಿರಿ. ಶ್ರೀಸುಬುಧೇಂದ್ರತೀರ್ಥಶ್ರೀಪಾದರ ಸಾರಥ್ಯದಲ್ಲಿ ತರ್ಕ-ತಾಂಡವದ ವಿಶ್ವರೂಪದರ್ಶನವನ್ನು ಮಾಡಿ ನಾವೂ ನರ್ತನ ಮಾಡೋಣ. ಶ್ರೀವ್ಯಾಸತೀರ್ಥರ ತಾಂಡವನರ್ತನದ ಅದ್ಭುತದೃಶ್ಯವನ್ನು ಸವಿದು, ಕುಣಿಯೋಣ.

ಶ್ರೀಸುಬುಧೇಂದ್ರತೀರ್ಥಶ್ರೀಪಾದರು ಈ ಮುದ್ರಣಕ್ಕೆ ತಗಲುವ ದುಬಾರಿವೆಚ್ಚವನ್ನು ತಮ್ಮ ಪಾದಕಾಣಿಕೆಯಿಂದಲೇ ನಿರ್ವಹಿಸಿರುವರು. ಮತ್ತು ತರ್ಕತಾಂಡವ ಗ್ರಂಥವನ್ನು ಪ್ರತಿಯೊಬ್ಬ ಸಾಧಕರೂ ಕೂಡ ಪರಿಪೂರ್ಣವಾಗಿ ಅರ್ಥಮಾಡಿಕೊಳ್ಳುವಂತೆ ಶ್ರಮವಹಿಸಿರುವರು. ಕೇವಲ ತರ್ಕತಾಂಡವ ಗ್ರಂಥದ ಅನುವಾದವಷ್ಟೇ ಅಲ್ಲದೇ ಇದರ ಅಧ್ಯಯನದ ಪರಿಪೂರ್ಣತೆಗೆ ಉಪಯುಕ್ತವಾಗುವ ಹತ್ತಾರು ಗ್ರಂಥಗಳನ್ನು ಒಂದೇ ಕೃತಿಯಲ್ಲಿ ಸುಲಭವಾಗಿ ನೀಡಿರುವರು. ಈ ಕೃತಿಗೆ ಮುಖ್ಯಮಾರ್ಗದರ್ಶಕರು ಮತ್ತು ಸಂಪಾದಕರು ಪರಿಪೂರ್ಣಕಲ್ಪನೆಯುಳ್ಳವರು ಸ್ವತಃ ಶ್ರೀಪಾದರೇ ಆಗಿರುತ್ತಾರೆ. ತರ್ಕತಾಂಡವಗ್ರಂಥವನ್ನು ಅಧ್ಯಯನ ಮಾಡುವ ವಿದ್ಯಾರ್ಥಿ-ಗಳಿಗಿದು ಪರಿಪಕ್ವವಾದ ಕಳಿತ ರಸವತ್ತಾದ ಹಣ್ಣಿನಂತಿದೆ. ಶ್ರೀಪಾದಂಗಳವರ ಉದಾರತೆ, ವಿಶಾಲ ಮನೋಭಾವನೆ ಹಾಗೂ ಜ್ಞಾನದೀಕ್ಷೆ ಈ ಎಲ್ಲಾ ಗುಣಗಳಿಗೆ **'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ'** ಎಂದಷ್ಟೇ ಹೇಳಲು ನಮ್ಮಿಂದ ಸಾಧ್ಯ .

ಲೇಖಕ-

ವಿ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

॥ ಶ್ರೀಮನ್ ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಶ್ರೀರಾಘವೇಂದ್ರಸ್ವಾಮಿಗಳ ೩೯೪ನೇ ಪಟ್ಟಾಭಿಷೇಕ ಮಹೋತ್ಸವದ ಶುಭಸಂದರ್ಭದಲ್ಲಿ ಹಾಗೂ ೪೨೦ನೇ ವರ್ಧಂತಿಮಹೋತ್ಸವದ ಗುರುವೈಭವೋತ್ಸವದಲ್ಲಿ ತರ್ಕತಾಂಡವದ ಏಳನೆಯ ಸಂಪುಟವು ಶ್ರೀರಾಘವೇಂದ್ರಸ್ವಾಮಿಗಳಿಗೆ ಸಮರ್ಪಣೆಯಾಗುತ್ತಿರುವುದು ನಮಗೆ ಬಹಳ ಸಂತೋಷವಾಗಿದೆ.

ಜಗತ್ತಿನ ಕಲ್ಯಾಣಕ್ಕಾಗಿಯೇ ಅವತರಿಸಿಬಂದ ಮಂತ್ರಾಲಯಪ್ರಭುಗಳಿಗೆ ನಾವು ಪ್ರತಿಯಾಗಿ ಏನನ್ನೂ ಕೂಡ ನೀಡಲು ಸಾಧ್ಯವಿಲ್ಲ. ಅವರು ನಮಗೆ ಅನುಗ್ರಹಿಸಿದ ಜ್ಞಾನವನ್ನು ಪಡೆದು-ಕೊಂಡರೆ ಸಾಕು. ಅದಕ್ಕಿಂತ ಅವರಿಗೆ ಬೇರೆಯದರಲ್ಲಿ ಸಂತೋಷವಿಲ್ಲ. ನಾವು ರಾಯರಿಗೆ ಸಲ್ಲಿಸುವ ಸೇವೆಯೆಂದರೆ ಅವರ ಗ್ರಂಥಗಳ ಅಧ್ಯಯನ ಹಾಗೂ ಅಧ್ಯಾಪನಗಳು ಮಾತ್ರ.

ಈ ನಿಟ್ಟಿನಲ್ಲಿ ಚಿಂತನೆ ಮಾಡಿದಾಗ ರಾಯರ ಎಲ್ಲಾ ಗ್ರಂಥಗಳನ್ನು ಎಲ್ಲಾ ವಿಧದ ಭಕ್ತರಿಗೆ ನೀಡಬೇಕೆಂಬುದೇ ನಮ್ಮ ಉತ್ಕಟ ಅಪೇಕ್ಷೆಯಾಗಿದೆ. ಅದಕ್ಕಾಗಿ ಈಗ ತರ್ಕತಾಂಡವಗ್ರಂಥದ ಟಿಪ್ಪಣಿಯಾದ ನ್ಯಾಯದೀಪವನ್ನು ಕನ್ನಡದಲ್ಲಿ ಭಾಷಾಂತರಗೊಳಿಸಲಾಗಿದೆ.

ತರ್ಕತಾಂಡವಗ್ರಂಥ ಎಂಥ ವಿದ್ವಾಂಸರಿಗೂ ಕೂಡ ಬಲು ಕಠಿಣವಾದದ್ದು. ಇದಕ್ಕಿಂತ ಕಠಿಣವಾದ ಮತ್ತೊಂದು ಗ್ರಂಥವೇ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗುವುದಿಲ್ಲ. ಗ್ರಂಥವು ಕಠಿಣವೆಂದು ಓದದೇ ಕುಳಿತುಕೊಳ್ಳುವುದು ಬುದ್ಧಿವಂತಿಕೆಯಲ್ಲ. ಅದಕ್ಕಾಗಿ ಕಠಿಣವಾದ ಭಾಷೆಯನ್ನು ತಿಳಿಯಾಗಿ ಎಲ್ಲಾ ಬುಭುತ್ಸುಗಳಿಗೆ ಜ್ಞಾನಪ್ರಸಾರ ಮಾಡಬೇಕೆಂಬ ಸಂಕಲ್ಪವು ನಮಗೆ ಉದಿಸಿದಾಗ ನೆನಪು ಬಂದವರೇ ವಿದ್ವಾನ್॥ ಬೆಮ್ಮತ್ತಿ ವೆಂಕಟೇಶಾಚಾರ್ಯರು.

'ಅತ್ಯಂತ ಕಠಿಣವಾದ ಈ ತರ್ಕತಾಂಡವಗ್ರಂಥ ಹಾಗೂ ನ್ಯಾಯದೀಪಗ್ರಂಥಗಳ ಅನುವಾದವನ್ನು ಕೂಡ ಇವರು ಸಮರ್ಥವಾಗಿ ನಿಭಾಯಿಸುತ್ತಾರೆ' ಎಂಬ ವಿಶ್ವಾಸದಿಂದ ಇವರಿಗೆ ವಹಿಸಿದೆವು. ಅಲ್ಪಾವಧಿಯಲ್ಲಿ ಬಹಳ ಸೊಗಸಾಗಿ ಅನುವಾದ ಕಾರ್ಯವನ್ನು ಗುರುಗಳು ಇವರ ಮೂಲಕ ಮಾಡಿಸಿದ್ದಾರೆ.

ಈ ಗ್ರಂಥದಲ್ಲಿ ಕೇವಲ ತರ್ಕತಾಂಡವದ ಅನುವಾದ ಮಾತ್ರವಲ್ಲ ಪೂರ್ವಪಕ್ಷಕ್ಕೆ ಸಂಬಂಧಪಟ್ಟ ಎಲ್ಲಾ ತಾರ್ಕಿಕಗ್ರಂಥಗಳ ಅನುವಾದವೂ ಸೇರಿದೆ. ಕಠಿಣವಾದ ನಾಕುಪ್ರಾಚೀನ ತರ್ಕಗ್ರಂಥಗಳ ಅನುವಾದವನ್ನು ಉತ್ತಮ ವಿದ್ವಾಂಸರಾದ ಹಾಗೂ ನಮ್ಮ ಮಠದ ಹಿರಿಯ ಪಂಡಿತರಾದ ವಿ ॥ ಪಿ.ಎಸ್. ಶೇಷಗಿರಿ ಆಚಾರ್ಯ ಇವರು ಸರಳ ಸುಂದರ ಶೈಲಿಯಲ್ಲಿ ಮಾಡಿರುತ್ತಾರೆ.

ತರ್ಕತಾಂಡವಗ್ರಂಥದಲ್ಲಿರುವ ಶಕ್ತಿವಾದವು ಪ್ರಮಾಣಪದ್ಧತಿಯ ಶಬ್ದಖಂಡದ ವ್ಯಾಖ್ಯಾನರೂಪವಾಗಿದೆ. ಆದ್ದರಿಂದ ಪ್ರಮಾಣಪದ್ಧತಿಯ ಮೂಲ ಹಾಗೂ ಅನುವಾದವನ್ನು ಕೂಡ ಈ ಗ್ರಂಥದಲ್ಲಿ ಕಾಣಬಹುದು. ಮತ್ತು ಪ್ರಮಾಣಲಕ್ಷಣಟೀಕೆಯನ್ನು ಅನುವಾದ ಮಾಡುವುದನ್ನೂ ಕೂಡ ಇಲ್ಲಿ ಮರೆತಿಲ್ಲ. ಅಷ್ಟೇ ಅಲ್ಲದೇ ಶ್ರೀಸತ್ಯನಾಥತೀರ್ಥ-ಶ್ರೀಪಾದಂಗಳವರು ವಿರಚಿಸಿದ ಅಭಿನವತಾಂಡವವನ್ನು ನಾವು ಅಧ್ಯಯನ ಮಾಡದಿದ್ದರೆ ತರ್ಕತಾಂಡವದ ಅಧ್ಯಯನವು ಪರಿಪೂರ್ಣವಾಗಲಾರದೆಂಬ ದೃಷ್ಟಿಯಿಂದ ಅಭಿನವತಾಂಡವದ ಮೂಲ ಹಾಗೂ ಕನ್ನಡ ಅನುವಾದವನ್ನು ಇದರಲ್ಲಿ ಸೇರಿಸಲಾಗಿದೆ. ಮತ್ತೊಂದು ಸಂತಸದ ಸಂಗತಿ. ಶ್ರೀಮದ್‌ವಾದಿರಾಜಪೂಜ್ಯಚರಣರ ಯುಕ್ತಿಮಲ್ಲಿಕಾ ಗ್ರಂಥ ಓದಬೇಕೆಂಬ ಹಂಬಲ

ಅನೇಕ ಬುಭುತ್ಸುಗಳಿಗೆ ಸಹಜವಾಗಿರುತ್ತದೆ. ಆಯಾ ಗ್ರಂಥಗಳಲ್ಲಿ ಪ್ರಾಸಂಗಿಕವಾಗಿ ಯುಕ್ತಿಮಲ್ಲಿಕೆಯನ್ನು ಓದಿದಾಗ ಅದರಿಂದ ಉಂಟಾಗುವ ಸಂತೋಷ ಹೇಳತೀರದು. ಈ ದೃಷ್ಟಿಯಿಂದ ತರ್ಕತಾಂಡವದಲ್ಲಿ ಬರುವ ಅನೇಕ ಪ್ರಮೇಯಗಳನ್ನು ಶ್ರೀವಾದಿರಾಜರು ಸೊಗಸಾಗಿ ಹೇಗೆ ತಮ್ಮ ಗ್ರಂಥದಲ್ಲಿ ನಿರೂಪಣೆ ಮಾಡಿದ್ದಾರೆಂಬುದನ್ನು ತಿಳಿಸುವುದಕ್ಕಾಗಿ ಹಾಗೂ ಅದರ ರಸವನ್ನು ಪಿಪಾಸುಗಳು ಆಸ್ವಾದನೆ ಮಾಡಲಿ ಎಂಬ ಉದ್ದೇಶದಿಂದ ಈ ಕೃತಿಯಲ್ಲಿ ಅದನ್ನು ಕೂಡ ಸೇರಿಸಲಾಗಿದೆ.

ತರ್ಕತಾಂಡವದ ಪ್ರತಿಯೊಂದು ವಿಷಯಗಳಿಗೆ ಅನುವಾದ ಮಾತ್ರವಲ್ಲದೆ ವಿವರಣೆ ವಿಶೇಷವಿಚಾರಗಳು ಇರುತ್ತವೆ. ಹಾಗೂ ಮತ್ತೆರಡು ನೂತನ ಪ್ರಯೋಗಗಳನ್ನು ಈ ಪುಸ್ತಕದಲ್ಲಿ ನೀವು ಕಾಣಬಹುದು. 'ನೆನಪಿಡಿ' ಎಂಬ ಭಾಗ. ಹಾಗೂ 'ಗೋಷ್ಠಿವಿಚಾರಗಳು' ಎಂಬ ಭಾಗ. ಇದನ್ನು ಎಲ್ಲಾ ಬುಭುತ್ಸುಗಳು ಓದಲೇ ಬೇಕು. ಎಲ್ಲಾ ವಿಷಯಗಳನ್ನು ಮನಸ್ಸಿನಲ್ಲಿ ತುಂಬಿಕೊಳ್ಳಲು ಕಷ್ಟವಾಗಬಹುದು ಎಂಬ ದೃಷ್ಟಿಯಿಂದ 'ಸಾರಾಮೃತ'ವನ್ನು ಕೂಡ ಪ್ರತಿಯೊಂದು ವಿಷಯಗಳಿಗೆ ಸಂಬಂಧಪಟ್ಟಂತೆ ನೀಡಲಾಗಿದೆ. ಆದ್ದರಿಂದ ಈ ಕೃತಿ ತರ್ಕತಾಂಡವ ಗ್ರಂಥದ ವಿಶ್ವರೂಪವೇ ಆಗಿದೆ. 'ತರ್ಕತಾಂಡವ-ವಿಶ್ವರೂಪ' ಎಂಬ ಹೆಸರು ಇದಕ್ಕೆ ಸಾರ್ಥಕವಾಗಿದೆ. ತರ್ಕತಾಂಡವದ ವಿಶ್ವರೂಪಕ್ಕೆ ಮುಖ್ಯಕಾರಣರು ವಿ ॥ ಬೆಮ್ಮತ್ತಿ ವೇಂಕಟೇಶಾಚಾರ್ಯರು.

ವಿದ್ವಾಂಸರಾದ ಬೆಮ್ಮತ್ತಿ ವೆಂಕಟೇಶಾಚಾರ್ಯರು ಪ್ರಾರಂಭದಲ್ಲಿ ಸುಧಾಸೌರಭ-ಗ್ರಂಥವನ್ನು ಪ್ರಕಟಣೆಮಾಡಿ ವಿದ್ವಲ್ಲೋಕದಲ್ಲಿ ಖ್ಯಾತಿಪಡೆದರು. ಅದಕ್ಕಿಂತಲೂ ಹೆಚ್ಚು ಸ್ವರಸವಾಗಿ ಪರಿಪೂರ್ಣಚಂದ್ರಿಕೆಯನ್ನು ಬರೆದು ಹೆಸರುಗಳಿಸಿದರು. ಈಗ ಆ ಎರಡು ಕೃತಿಗಳಿಗಿಂತಲೂ ಹೆಚ್ಚಿನ ವೈಶಿಷ್ಟ್ಯವನ್ನು ಹಾಗೂ ತಮ್ಮ ಸಂಪೂರ್ಣಸಾಮರ್ಥ್ಯವನ್ನು ಈ ತರ್ಕತಾಂಡವಗ್ರಂಥದ ಅನುವಾದದಲ್ಲಿ ತೋರಿಸಿಕೊಂಡಿದ್ದಾರೆ. ತಮ್ಮ ೧೫ ವರ್ಷಗಳ ಅನುಭವದ ರಸಪಾಕವನ್ನು ಈ ಕೃತಿಯಲ್ಲಿ ಪ್ರದರ್ಶಿಸಿದ್ದಾರೆ. ನವವೃಂದಾವನದಲ್ಲಿ ಕುಳಿತು ಈ ಕಠಿಣಗ್ರಂಥವನ್ನು ಬರೆದಿದ್ದಾರೆ. ಇವರಿಗೆ ಗುರುಗಳಾದ ಶ್ರೀವ್ಯಾಸತೀರ್ಥರು ಹಾಗೂ ಶ್ರೀರಾಘವೇಂದ್ರಸ್ವಾಮಿಗಳು ಸಂಪೂರ್ಣವಾಗಿ ಅನುಗ್ರಹಿಸಲಿ ಹಾಗೂ ಇತೋಪ್ಯತಿಶಯವಾಗಿ

ಗ್ರಂಥವನ್ನು ಅನುವಾದ ಮಾಡುವ ಸಾಮರ್ಥ್ಯ ಇವರಿಗೆ ಬರಲಿ ಎಂದು ನಮ್ಮ ಉಪಾಸ್ಯ-ಮೂರ್ತಿಯಾದ ಶ್ರೀಮನ್ ಮೂಲರಾಮಚಂದ್ರದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀಯುತ ನಂದಗುಡಿ ॥ ನಾಗು-ಶ್ರೀನಿವಾಸ್ ಇವರು ಶ್ರೀವ್ಯಾಸತೀರ್ಥರ ಸೇವೆಗಾಗಿ ಕಂಕಣಬದ್ಧರಾಗಿದ್ದಾರೆ. ಇಲ್ಲಿಯ ತನಕ ಹಲವು ಕ್ರಮಗಳಲ್ಲಿ ಶ್ರೀವ್ಯಾಸತೀರ್ಥರ ಆರಾಧನೆಯನ್ನು ಜ್ಞಾನಪ್ರಸಾರದ ಮೂಲಕ ಮಾಡಿರುತ್ತಾರೆ. ಆದ್ದರಿಂದಲೇ ಇವರು ನಮಗೆ ನೀಡಿದ ಪಾದಕಾಣಿಕೆಯನ್ನು ಈ ಕೃತಿಯ ಮುದ್ರಣಕ್ಕಾಗಿ ವಿನಿಯೋಗಿಸಿದ್ದೇವೆ. ಶ್ರೀವ್ಯಾಸರಾಜರ ಹಾಗೂ ರಾಯರ ಹರಿಭಕ್ತರಾದ ಶ್ರೀ ನಂದಗುಡಿ ॥ ನಾಗು-ಶ್ರೀನಿವಾಸ್ ಇವರಿಗೆ ಇತೋಪ್ಯತಿಶಯವಾಗಿ ಸಾಧನೆ ನಡೆದು ಆಯುರಾರೋಗ್ಯ ಐಶ್ವರ್ಯಗಳು ದೊರಕಲಿ ಎಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮನ್ ಮೂಲರಾಮಚಂದ್ರದೇವರಲ್ಲಿ ಪ್ರಾರ್ಥಿಸುತ್ತೇವೆ.

ಈ ಕೃತಿಗಾಗಿ ಸಹಕರಿಸಿದ ಎಲ್ಲಾ ಸಾಧಕರಿಗೂ ಹಾಗೂ ವಿದ್ವಾಂಸರಿಗೂ ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ-ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್‌ಮೂಲರಘುಪತಿ - ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

## Foreword

## TarkaTandava of Vyasatirtha with Nyayadipika of Sri Raghavendra Tirtha

Vedas constitute the reservoir of profound spiritual Knowledge. The Brahmasutras composed by Sri Vedavyasa, are aimed at providing guidelines for deriving the authentic tatparyartha of the Vedas. Even though there have been many Bhashyas on the Brahmasutras, the Bhashya written by Sri Madhwacharya is accepted as the one providing the authentic interpretation as is meant by Sri Vedavyasa himself. Sri Madhwachrya also wrote three other profound treatises on Sutraprasthana, viz. Anuvyakhyana, Nyayavivarana and Anubhashya, aimed at establishing the veracity of the Tatvavada, by using the rigorous principles of Nyaya, Tarka and Vyakarana, to refute many other schools of thought, such as, Mayavadins, Tarkikas, Meemamsakas, Bouddhas, Charvakas, among others.

The gradual spread of the Prameyas of the Tatvavada , is very aptly described in the following Sloka of Sri Guruguna Stavan composed by Sri Vadindra Tirtha,- the great grand disciple of Sri Raghavendra Tirtha:

व्यामेन व्युप्तबीजः श्रुतिभुवि भगवत्पादलब्धाङ्कुरश्रीः ।
प्रत्नैरीषत्प्रभिन्नोऽजनि जयमुनिना सम्यगुद्भिन्नशाखः ॥
मौनीशव्यासराजादुदितकिसलयः पुष्पितोऽयं जयीन्द्राद-
द्यश्रीराघवेन्द्राद्विलसति फलितो मध्वसिद्धान्तशाखी ॥

The Tree of Madhva Siddhanta has had the sowing of the seeds by Sage Vedavyasa, in the earth of the Vedas. The seed vgerminated with the efforts of Sri Madhwacharya. Then it grew above the earth with the support of many traditional Scholars. Then it got branches withe efforts of Sri Jayatirtha.Thereafter,

with the efforts of Sri Vyasatirtha it got many small and tender leaves. The efforts of Sri Vijayeendra Tirtha it got blossomed. Now with the fostering of Sri Raghavendra Tirtha it has developed Fruits. It therefore looks very bright and effective.

In the domain of the Madhwa Siddhanta, Sri Madhvaachaarya, Sri Jayatirtha and Sri Vyasatirtha are known as Munitrayas.

The three great Granthas of Sri Vyaraya, viz. Tatparya Chandrika, Nyayamrutaṃ and TarkaTandava are know as the Three Eyes of Lord Naraṡimha.

The present work by Vidwan Sri Bemmati Venkateshacharya is concerned, mainly with the Kannada translation of the most difficult Treatise of Sri Vyasatirtha, viz. Tarka Tandava. As the title suggests, this Grantha is aimed at providing insight into the rigorous Tarkas, which embellish the arguments of the Prameyas in Madhwa Siddhanta. This work is confined to the second Pariccheda of Tarka Tandava, in which the concepts of AAkaanksha, AAsatti and Yogyataa , are discussed in great detail. The ultimate objective of this discussion is to establish the Praamaanya of the Vedas and hence to establish the veracity of the main prameyas proponded in the Srutis.

Sri Raghavendra Tirtha has written a very perceptive Tippani on Tarkatandava,, called, Nyayadipa,, which is very lucid and easily understood even by the beginners.

That is the characeristic style of Sri Raghvendra Tirtha in making even the most complex themes, appear very simple and understandable. Sri Raghavendra states in his Mangalasloka that even though His parama Guru, Sri Vijayeendra Tirtha has written a commentary on Tarkatandava, that commentary is very elaborate and not easily comprehensible by the beginners. He therefore states that His Tippani is meant for the beginners.

Sri Vyasatirtha, refutes the arguments and definitions given by the opponents , regarding the conepts of, AAkaanksha, Aasatti and Yogyata. He takes many illustartive Vaakyas and brings out the correctness of his own style.

The kannada translations given by Sri Bemmatti Venkatesharya, is very lucid and clear. He has taken the trouble of setting out some specific themes, which could be useful for Shastrartha Goshthis.

Hence Sri Venkateshacharya's effort is not just confined to translation but it pertains to the wider objective of inducing further debate and thinking on the terse subjects of the otherwise difficult treatise of Tarkatandava.

The style throughout the Book is highly rich in literary embellishments.

The text also contains the translations of the relevant materials from the related Granthas, such as, Pramana-LakshanaTika, PramanaPaddhati, Yuktimallika, Abhinava Tandava of Madhva sampradaya and also the other Granthas, such as Nyayalilavati, Tatvachintamani, Nyayakusumanjali, and Prakasha. The translations and the Notes of the Purva Paksha Granthas, which contain very terse Tarka propositions have been carried out by the eminent Scholar, writer and pravachanakara, Vidwan Sri P.S Seshagiri Acharya.

This Grantha has a very satisfying Anugraha Vachana by His Holinees Sri Subudhendra Tirtha, the head pontiff of Sri Raghavendra Swami Mutt.

We express our sincere Danda Pranamas to His Holiness Sri Sri Subudhendra Tirtha for encouraging research and

publication of all Prameya Granthas of Madhva Siddhanta with good translations in Kannada, English and other languages.

We also express our gratitude to Vidwan, Mahamahopadhyaya, Rashtrapati Prasasti Vijeta, Sri Raja. S. Giri Acharya for his constant interest in, encouragement for and intellectual guidance in the editing and publishing of the Madhwa Granthas. This Grantha owes a great deal to the guidance and support given by Sri Acharya.

We would also like to express our profound gratitude to Vidwan Sri SeshagiriAcharya for his valuable Contributions in making this Volume attain high Standards and usefulness.

Last but not the least is the expression of our great admiration and gratitude to Vidwan Sri Bemmatti Venkateshacharya in completing many daunting tasks of editing and translations of many Sastra Granthas of Madhwa Siddhanta. The fact that Sri Bemmatti Acharya has really done a Jnana Tapasya, of sitting at the Sannidhi of Sri Vyasarayara Brindavana and writing this great work, which we are sure would be a miles tone in the intellectual Journey of Sri Acharya and also in our Publication Series of Madhwa Granthas.

We would also like to place on record our gratitude to all those who have provided their invaluable support and guidance in the publication of this very useful Grantha.

**Vachaspati Dr. V.R. Panchamukhi**
Executive Director,
Sri Gurusarvabhouma Samsodhana Mandira
and
Chancellor of Sri Gurusarvabhouma Sanskrit Vidyappetha,
Mantralayam

# ತರ್ಕಮರ್ದನದ ತಾಂಡವದೃಶ್ಯ ಸವಿಯುವ ಮುನ್ನ ............

ಅಂದು ಮಾರ್ಗಶಿರಮಾಸದ ತೃತೀಯಾತಿಥಿ. ರಾತ್ರಿ ಸುಮಾರು ಗಂಟೆ ಎಂಟಾಗಿತ್ತು. ಮಂತ್ರಾಲಯದಲ್ಲಿ ರಾಯರ ವೃಂದಾವನದ ಎದುರು ನಿಂತಿದ್ದೆ. ಮಂಗಳಾರತಿಗಾಗಿ ಗುರು ಶ್ರೀಸುಬುಧೇಂದ್ರತೀರ್ಥರು ಆಗಮಿಸಿದರು. ಅವರು ನನ್ನ ಮುಖ ನೋಡಿದರು. ನಾನು ಅವರ ಮುಖ ನೋಡಿದೆ. ನೋಡಿ ನನ್ನಷ್ಟಕ್ಕೆ ನಾನು ರಾಯರ ಮುಂದೆ ನಿಂತೆ. ಕೆಲವು ಭಕ್ತರು ಮಠದ ಸಿಬ್ಬಂದಿಗಳೂ ಕೂಡ ತಮ್ಮಷ್ಟಕ್ಕೆ ರಾಯರ ಎದುರು ನಿಂತಿದ್ದರು. ಪಕ್ಕದಲ್ಲಿದ್ದ ಶಿಷ್ಯನ ಕಿವಿಯಲ್ಲಿ ಶ್ರೀಪಾದರು ಅದೇನೋ ಗುನುಗಿದರು.

ಆ ಶಿಷ್ಯ ಕೂಡಲೇ ಓಡಿಹೋಗಿ ಮೂರು ಪುಸ್ತಕಗಳನ್ನು ತಂದು ಶ್ರೀಪಾದರಿಗೆ ನೀಡಿದ. ರಾಯರ ಮುಂದೆ ಶ್ರೀಪಾದರು ಆ ಪುಸ್ತಕಗಳನ್ನಿಟ್ಟರು. ರಾಯರಿಗೆ ಆರತಿಯಾಯಿತು. ಪುಸ್ತಕಗಳಿಗೂ ಆರತಿ ಮಾಡಿದರು.

ಎಂದೂ ಇಲ್ಲದ ಪುಸ್ತಕಪೂಜೆ ಇಂದೇಕೆ? ನೆರೆದವರಿಗೆ ಕುತೂಹಲ ಮೂಡಿತು. ಕುತೂಹಲಗಳು ಎಷ್ಟೋ ಇರುತ್ತವೆ. ಹೇಳಬಾರದವೂ ಎಷ್ಟೂ ಇರುತ್ತವೆಂದು ಸುಮ್ಮನಾದೆ.

ಆದರೆ ಮುಂದಿನ ಘಟನೆಯಲ್ಲಿ ಬಹಳ ಆಶ್ಚರ್ಯವೇ ಕಾದಿತ್ತು.

ಶ್ರೀಪಾದರು ಮೂರು ಪುಸ್ತಕಗಳನ್ನು ಹಾಗೂ ಮಂತ್ರಾಕ್ಷತೆಯನ್ನು ಕೈಯಲ್ಲಿ ಹಿಡಿದು ಗಂಭೀರಧ್ವನಿಯಲ್ಲಿ ನುಡಿದರು. ಇದೇ ಬರುವ ಫಾ||ಶು|| ಸಪ್ತಮಿ ರಾಯರ ಜಯಂತಿಯ

ಪರ್ವಕಾಲದಲ್ಲಿ ತರ್ಕತಾಂಡವಗ್ರಂಥದ ಕನ್ನಡಾನುವಾದ ಪುಸ್ತಕ ರಾಯರಿಗೆ ಸಮರ್ಪಣೆ ಮಾಡಬೇಕು. ಈ ಜವಾಬ್ದಾರಿಯನ್ನು ಬೆಮ್ಮತ್ತಿಯವರಿಗೆ ನೀಡುತ್ತಿದ್ದೇನೆಂದು ಘೋಷಣೆ ಮಾಡಿದರು.

ನನಗೆ ಶ್ರೀಸುಬುಧೇಂದ್ರತೀರ್ಥಶ್ರೀಪಾದರಲ್ಲಿ ರಾಯರೇ ನಿಂತು ಮಾತನಾಡಿದಂತಾಯಿತು.

ಈ ಘಟನೆ ಕನಸೋ ನನಸೊ ಎಂಬ ಸಂದೇಹದಲ್ಲಿ ನನ್ನ ಯೋಗ್ಯತೆಯನ್ನೂ ಮರೆತು ಶ್ರೀಪಾದರ ಅನುಗ್ರಹ ಪಡೆದು 'ಆಗಲಿ ಗುರುಗಳೆ !' ಎಂದುಬಿಟ್ಟೆ.

ರಾಯರ ವರ್ಧಂತಿಗೆ ಹೆಚ್ಚು ದಿನ ಉಳಿದಿರಲಿಲ್ಲ. ೭೮ ದಿನಗಳು ಮಾತ್ರ ಉಳಿದಿದ್ದವು.

ಅನಂತರ ಭಯವೋ ಭಯ. ಹೆಸರು ನೆನಪಿಸಿಕೊಂಡೇ ನಡುಕ ಹುಟ್ಟಿತು. ಇನ್ನು ಅದರ ಹತ್ತಿರ ಹೋಗೋದು ಹೇಗೆ?

ಸ್ವಲ್ಪ ಧೈರ್ಯ ತುಂಬಿಕೊಂಡು ಮುಂದೆ ಹೆಜ್ಜೆ ಹಾಕಿದೆ. ಒಂದಿಬ್ಬರು ಬಲಿಷ್ಠರು ಜೊತೆಯಲ್ಲಿದ್ದು ಧೈರ್ಯ ತುಂಬಿದರೆ ನಿಧಾನವಾಗಿ ಮುಂದೆ ಮುಂದೆ ಸಾಗಬಹುದೆಂದೆನಿಸಿತು.

ಆದರೆ ಪರಿಸ್ಥಿತಿ ಬಿಗುಡಾಯಿಸಿತ್ತು. ನಡುಕದಿಂದ ಏಕಾಂಗಿಯಾಗಿ ನಿಂತಲ್ಲೇ ನಿಂತಿರುವಾಗ ಭಯಾನಕ ವಾತಾವರಣವೇ ಹೆಚ್ಚಾಯಿತು. ನನ್ನಿಂದ 'ತರ್ಕತಾಂಡವ ಅನುವಾದ ಮಾಡಲು ಸಾಧ್ಯವೇ ಇಲ್ಲ' ಎಂದು ಸುತ್ತಮುತ್ತಲಿನ ವಿದ್ವಾಂಸರು ಹೇಳುತ್ತಲೇ ಇದ್ದರು. ನಮ್ಮ ಸುತ್ತಮುತ್ತಲಿರುವರೇ ಬಲವಾಗಿ ಹೀಗೆ ಹೇಳಿದಾಗ ಮುನ್ನುಗ್ಗಲು ಹೇಗೆ ಸಾಧ್ಯ !!! ಮತ್ತು ಹೀಗೆ ಹೇಳಿದವರಲ್ಲಿ ಯಾವ ದುರುದ್ದೇಶವೂ ನನಗೆ ಕಾಣಸಲಿಲ್ಲ. ಗ್ರಂಥದ ಔನ್ನತ್ಯ ನನ್ನ ಅಲ್ಪತ್ವಗಳಷ್ಟೇ ಪ್ರತಿಬಿಂಬಿತವಾದವು.

ಇಂಥ ಬಿಗುಸ್ಥಿತಿಯಲ್ಲಿಯೂ ಅಂತರಂಗದಲ್ಲಿ ಪ್ರೇರಣೆ ಮೂಡಿಸಿದ್ದು ಶ್ರೀಸುಬುಧೇಂದ್ರತೀರ್ಥರ ಅನುಗ್ರಹ ಹಾಗೂ ರಾಯರ ಮುಂದೆ ಅವರು ಹೇಳಿದ ಮಾತುಗಳು ಮಾತ್ರ. ಇಲ್ಲದಿದ್ದರೆ ಈ ಕಾರ್ಯ ಸರ್ವಥಾ ನಡೆಯುತ್ತಿರಲಿಲ್ಲ.

ಸುತ್ತಮುತ್ತಲಿನ ವಿದ್ವಲ್ಲೋಕ ನನ್ನ ಬರೆವಣಿಗೆಕಾರ್ಯವನ್ನು ನಿರಾಕರಿಸಿದಾಗ ಶ್ರೀಪಾದರಿಗೆ ದೂರವಾಣಿಯ ಮೂಲಕ ಬಿನ್ನವಿಸಿದೆ. 'ಶ್ರೀಪಾದರೇ ನಾನು ಕೆಲವು ಭಾಗವನ್ನು ಅನುವಾದ ಮಾಡಿ ನೀಡುವೆ ತಾವು ಹತ್ತಾರು ವಿದ್ವಾಂಸರಿಗೆ ತೋರಿಸಿ; ವಿರೋಧ ಬಾರದಿದ್ದರೆ ಮಾತ್ರ ನನ್ನ ಮೂಲಕ ಈ ಕಾರ್ಯ ಮಾಡಿಸಿರಿ' ಎಂದು.

ಆ ಕ್ಷಣದಲ್ಲಿ ಶ್ರೀಪಾದರಿಂದ ಬಂದ ಉತ್ತರ ಹಾಗಿರುತ್ತದೆಂದು ನಾನು ನಿರೀಕ್ಷಿಸಲೇ ಇರಲಿಲ್ಲ.

'ಆಚಾರ್ಯರೇ! ತಾವು ಈ ಕಾರ್ಯಕ್ಕೆ ಪರಿಪೂರ್ಣಯೋಗ್ಯರಾಗಿದ್ದೀರಿ. ಎಲ್ಲಾ ವಿದ್ವಾಂಸರೂ ನಿಷ್ಕಲ್ಮಷಹೃದಯದಿಂದಲೇ ಅಭಿಪ್ರಾಯ ನೀಡುತ್ತಾರೆಂದು ನಿರ್ಣಯಿಸುವುದು ಕಷ್ಟ. ಸ್ವತಃ ನಮಗೆ ನಿಮ್ಮ ಬರವಣಿಗೆ ಪೂರ್ಣವಾಗಿ ತೃಪ್ತಿ ತಂದಿದೆ. ಇದಕ್ಕಿಂತ ನಿಮಗೆ ಇನ್ನೇನು ಬೇಕು?'

ಶ್ರೀಪಾದರ ಈ ಮಾತುಗಳು ಒಣಗಿದ ಸಸಿಗೆ ನೀರೆರೆಯಿತು. ಸಸಿ ಚಿಗುರಿತು. ದಷ್ಟಪುಷ್ಟವಾಗಿ ಬೆಳೆಯಿತು. ಹೂ ಹಣ್ಣುಗಳನ್ನು ಬಿಟ್ಟಿತು. ರಸಿಕರು ಸ್ವೀಕರಿಸುವರು ಇತರರು ಬಿಡುವರು. ಇದರಲ್ಲಿ ಎನ್ನದು ಏನು .....?

ಶ್ರೀವ್ಯಾಸತೀರ್ಥರು ವಿರಚಿಸಿದ 'ತರ್ಕತಾಂಡವ' ಎಂಬ ಗ್ರಂಥದ ಹೆಸರು ಕೇಳಿದಾಗಲೆಲ್ಲ ನನಗೂ ನಡುಕ ಹುಟ್ಟುತ್ತಿತ್ತು. ಈ ಜನ್ಮದಲ್ಲಿ ಇದರ ಅಧ್ಯಯನ ನನ್ನಿಂದ ಸಾಧ್ಯವಿಲ್ಲವೆಂದೇ ತೀರ್ಮಾನಿಸಿದ್ದೆ.

ಆದರೆ ತರ್ಕತಾಂಡವ ಗ್ರಂಥವೆ ಎನ್ನಡೆ ಅನುಗ್ರಹಿಸಲು ಬಂದಾಗ ಆಪದ್ಬಾಂಧವರಾಗಿ ರಕ್ಷಿಸಲು ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು ಇದ್ದಾಗ ಇನ್ನೇಕೆ ಭಯ!

ಶ್ರೀಪಾದರ ಅನುಗ್ರಹ ಹಾಗೂ ವಿಶ್ವಾಸದಿಂದ ನನ್ನ ಭಯ ಕುಗ್ಗಿತು, ಉತ್ಸಾಹ ಚಿಮ್ಮಿತು. ಕೆಲವೇ ದಿನಗಳಲ್ಲಿ ಅನುವಾದ ಪ್ರಾರಂಭವಾಯಿತು.

ಪ್ರಾರಂಭವೇನೋ ಆಯಿತು. ಆದರೆ ಮೊದಲ ತುತ್ತಿಗೆ ಹಲ್ಲು 'ಕಠಂ' ಎಂದು ಮುರಿದೇ ಹೋಯಿತು. ಪ್ರಾರಂಭದ ಪ್ರಾಮಾಣ್ಯಸ್ವತಸ್ತ್ವವಿಚಾರವೇ ನನ್ನ ವೇಗದ ಓಟಕ್ಕೆ ಅಭೇದ್ಯ ಬಂಡೆಗಲ್ಲಾಗಿ ಅಡ್ಡನಿಂತಿತು.

ಪುನಃ ಈ ಸಂಕಟ ಶ್ರೀಪಾದರ ಬಳಿ ಹೇಳುವಂತಿರಲಿಲ್ಲ. ಪ್ರಥಮಪರಿಚ್ಛೇದದ ಕಾರ್ಯ ದೊರೆತ ಅಲ್ಪ ಸಮಯದಲ್ಲಿ ಸಾಧ್ಯವಾಗದೆಂದು ಅರಿತು ದ್ವಿತೀಯ ಪರಿಚ್ಛೇದದ ಕಾರ್ಯ ಪ್ರಾರಂಭವಾಯಿತು. ಆಗಲೂ ಹಾದಿ ಕಠಿಣವಾದಾಗ ಶ್ರೀವ್ಯಾಸತೀರ್ಥರ ಸೇವೆಯೇ ಅನಿ-

ವಾರ್ಯ ಎನಿಸಿತು. ನವವೃಂದಾವನದಲ್ಲಿ ಕುಳಿತ ಗುರುಗಳೆಡೆ ಮನ ಧಾವಿಸಿತು. ಶರೀರವೂ ಸಹ ಅದರ ಬೆನ್ನತ್ತಿತು. ಅನುವಾದಕಾರ್ಯ ಮುಗಿಯದೆ ಮನೆ, ಮಠ, ಬಂಧು, ಬಳಗ, ಆಹಾರ, ವಿಹಾರ, ವ್ಯವಹಾರ, ಜಪ, ತಪ ಯಾವುದೂ ಬೇಡವೆಂದೆನಿಸಿತು. ನವವೃಂದಾವನದಲ್ಲಿ ಕುಳಿತ ಒಂಭತ್ತು ಗುರುಗಳ ಜೊತೆ ಗುಹೆಯಲ್ಲಿ ಕುಳಿತು ಅನುವಾದ ಪ್ರಾರಂಭವಾಯಿತು. ನಾನು ಜಡವಾಗಿ ಕುಳಿತೆ. ಗುರು ಶ್ರೀವ್ಯಾಸತೀರ್ಥರು ಜೀವಕಳೆಯಾಗಿ ಕೆಲಸಮಾಡಿ ಮುಗಿಸಿದರು. ನಾನೇ ನಂಬಲಾಗದಂತೆ ಇನ್ನು ೧೦ ದಿವಸ ಉಳಿದಿರುವಾಗಲೇ ಕೆಲಸ ಮುಗಿಯಿತು. ಅನುವಾದಕಾರ್ಯಮುಗಿದ ಮೇಲೆ ಗುರುಗಳ ಮುಂದಿಟ್ಟು 'ಕೃಷ್ಣಾರ್ಪಣ' ಎಂದು ನಿಟ್ಟುಸಿರು ಬಿಟ್ಟೆ.

ಶ್ರೀಸುಬುಧೇಂದ್ರತೀರ್ಥ ಶ್ರೀಪಾದರ ಒಂದೇ ಮಾತು ನನ್ನಲ್ಲಿ ಕುಳಿತು ಹುಚ್ಚನಂತೆ ಇಷ್ಟು ಕೆಲಸ ಮಾಡಿಸಿತು.

ಅಂತೂ ಇಂತು ಶ್ರೀರಾಘವೇಂದ್ರಸ್ವಾಮಿಗಳ ವರ್ಧಂತಿಯಂದು ಈ ಸಂಪುಟ ಸಮರ್ಪಣೆ ಆಗುತ್ತಿದೆ.

ಇದರಲ್ಲಿ ನನ್ನದೇನೂ ಇಲ್ಲ
ನನ್ನೊಳಗೆ ನಿಂತು ಮಾಡಿದ್ದು ದೊಡ್ಡವರು
ನಿಮಗಾಗಿ ಬಡಿಸಿದ್ದು ಮಾತ್ರ ನಾನು
ಉಳಿದದ್ದೆಲ್ಲಾ ನಿಮಗೆ ಸಂದದ್ದು
ವಿಧಿವಿಲಾಸವ ಕೈಕಟ್ಟಿ ನಿಂತು ನೋಡುವುದಷ್ಟೇ ನಮ್ಮ ಕೆಲಸ
ದೂರದಲ್ಲಿ ನಿಂತು ನೋಡುತಾ ನಲಿಯುವುದಷ್ಟೇ ಎನ್ನ ಸೌಭಾಗ್ಯ.

ಪ್ರಥಮಪರಿಚ್ಛೇದಕ್ಕೆ ಸಂಬಂಧಿಸಿದ ೬ ಸಂಪುಟಗಳ ಮುದ್ರಣವಾಗದೆ ೭ನೇ ಸಂಪುಟ ಮುದ್ರಣವಾಗುತ್ತಿದೆ. ಈ ಗ್ರಂಥಕ್ಕೆ ಬರೆಯಬೇಕಾದ ವಿಸ್ತಾರ ಮುನ್ನುಡಿಯೂ ಇನ್ನು ತೆರೆ ಹಿಂದೆಯೇ ಕಾಯುತ್ತಿದೆ.

ನವವೃಂದಾವನಕ್ಕೆ ಕರೆಸಿಕೊಂಡು ಅನುವಾದಕಾರ್ಯ ಮಾಡಿಸಿದ ಶ್ರೀವ್ಯಾಸರಾಜಗುರು-ಸಾರ್ವಭೌಮರಿಗೆ ಜಯಕಾರವನ್ನಷ್ಟೇ ಹೇಳಲು ನನ್ನಿಂದ ಸಾಧ್ಯ .....

ಜಯ ಜಯವೆನ್ನಿ ತಾರ್ಕಿಕರ ಹಮ್ಮು
ಮುರಿದವಗೆ ತಾಂಡವಕಾರರಿಗೆ
ಜಯಜಯವೆನ್ನಿ ಮಾಯಾವಾದಿಗಳ ಸೊಕ್ಕ
ಮುರಿದವಗೆ ನ್ಯಾಯಾಮೃತಕಾರರಿಗೆ
ಜಯಜಯವೆನ್ನಿರಿ ಜ್ಞಾನಿಗಳ ಮಧ್ಯ
ಶೋಭಿಸುವರಿಗೆ ಚಂದ್ರಿಕಾಚಾರ್ಯರಿಗೆ

* * * * *

## ಈ ಗ್ರಂಥದ ಬಗ್ಗೆ

ಈ ಗ್ರಂಥದ ಬಗ್ಗೆ ಪ್ರಾರಂಭದಲ್ಲಿ ತರ್ಕತಾಂಡವ ಗ್ರಂಥವನ್ನಷ್ಟೇ ಅನುವಾದ ಮಾಡಿ ನ್ಯಾಯದೀಪದಲ್ಲಿರುವ ಕೆಲವು ವಿಶೇಷ ವಿಚಾರಗಳನ್ನು ಬರೆದರೆ ಸಾಕು ಎಂದು ಸಂಕಲ್ಪಿಸಿದ್ದೆ. ಬರೆಯಲು ಪ್ರಾರಂಭಿಸಿದಾಗ ನ್ಯಾಯದೀಪದಲ್ಲಿರುವ ಒಂದೊಂದು ವಾಕ್ಯಗಳೂ, ಒಂದೊಂದು ಪದಗಳು ನನಗೆ ವಿಶ್ವರೂಪದರ್ಶನವನ್ನೇ ನೀಡಿದವು. ತರ್ಕತಾಂಡವದ ವಿಶ್ವರೂಪದರ್ಶನ ನ್ಯಾಯದೀಪದ ಮೂಲಕ ಕಂಡು ಅಚ್ಚರಿಪಟ್ಟೆನು. ಆಮೂಲಾಗ್ರವಾಗಿ ನ್ಯಾಯದೀಪದ ಅನುವಾದ ತನ್ನಷ್ಟಕ್ಕೇ ಮಾಡುವ ಪ್ರೇರಣೆಯಾಯಿತು.

ತರ್ಕತಾಂಡವಗ್ರಂಥದ ಶಕ್ತಿವಾದದಲ್ಲಿ ಇದು 'ಪ್ರಮಾಣಪದ್ಧತಿಯ ಶಬ್ದಖಂಡದ ವ್ಯಾಖ್ಯಾನ' ಎಂದು ಸ್ವತಃ ಗ್ರಂಥಕಾರರೇ ಹೇಳಿಕೊಂಡಿದ್ದಾರೆ. ಆದ್ದರಿಂದ ಪ್ರಮಾಣಪದ್ಧತಿಯ ಶಬ್ದಖಂಡವನ್ನು ಅನುವಾದ ಮಾಡುವುದು ಕರ್ತವ್ಯವೆಂದೆನಿಸಿತು. ಜೊತೆಯಲ್ಲಿ ಪ್ರಮಾಣಲಕ್ಷಣಟೀಕೆಯ ಅನುವಾದವನ್ನು ಸೇರಿಸಲಾಯಿತು. ಪ್ರತಿಯೊಂದು ಹಂತದಲ್ಲಿ ಕಠಿಣವಿಷಯಗಳನ್ನು ಸ್ವರಸವಾಗಿ ತಿಳಿಸುವುದರಲ್ಲಿ ಚತುರರಾದ ಶ್ರೀವಾದಿರಾಜಪೂಜ್ಯಚರಣರ ಯುಕ್ತಿಮಲ್ಲಿಕೆಯನ್ನು ಜೋಡಿಸಿದರೆ ಓದುಗರಿಗೆ ಬಹಳ ಇಷ್ಟವಾಗುತ್ತದೆ ಎಂದೆನಿಸಿತು.

ಅಭಿನವತಾಂಡವ ಗ್ರಂಥವನ್ನು ಚೆನ್ನಾಗಿ ಅಧ್ಯಯನ ಮಾಡಿದರೆ ಮಾತ್ರ ತರ್ಕತಾಂಡವದ ಅಧ್ಯಯನವು ಪರಿಪೂರ್ಣವಾಗುತ್ತದೆಂಬ ವಿದ್ವಲ್ಲೋಕದ ವಾಡಿಕೆಯಂತೆ ಅಭಿನವತಾಂಡವವನ್ನೂ ಕೂಡ ಇದರಲ್ಲಿ ಸೇರಿಸಿದ್ದೇನೆ.

ತರ್ಕಗ್ರಂಥಗಳ ನಿರಾಕರಣೆಯನ್ನು ತಿಳಿಯಬೇಕೆಂದರೆ ಆ ತರ್ಕಗ್ರಂಥವನ್ನು ಆಮೂಲಾಗ್ರವಾಗಿ ಒಮ್ಮೆಯಾದರೂ ಓದಲೇ ಬೇಕು. ಅದಕ್ಕಾಗಿ ಈ ಗ್ರಂಥದಲ್ಲಿ ನಿರಾಕರಣೆ ಮಾಡಲ್ಪಡುವ ಎಲ್ಲಾ ತರ್ಕಗ್ರಂಥಗಳನ್ನು ಮುದ್ರಿಸಿ ಅನುವಾದ ಮಾಡಲಾಗಿದೆ. ಆದರೆ ಶ್ರೀವ್ಯಾಸತೀರ್ಥರು ಅಲ್ಲಲ್ಲಿ ಖಂಡನೆ ಮಾಡುವ ಪಕ್ಷಧರಮಿಶ್ರನ ಆಲೋಕವ್ಯಾಖ್ಯಾನ ಸಿಗದಿರುವುದು ನಮ್ಮ ಜ್ಞಾನಪರಂಪರೆಯ ನ್ಯೂನತೆಯನ್ನು ಅರ್ಥಮಾಡಿಸುತ್ತಿದೆ. ಆದರೆ ಉದಯನನ ನ್ಯಾಯಕುಸುಮಾಂಜಲಿ, ಭಾಸ್ಕರಾಚಾರ್ಯನ ನ್ಯಾಯಲೀಲಾವತಿ, ಗಂಗೇಶೋಪಾಧ್ಯಾಯನ ತತ್ತ್ವಚಿಂತಾಮಣಿ ಹಾಗೂ ರುಚಿದತ್ತನ ಪ್ರಕಾಶ ಇವುಗಳು ಉಪಲಬ್ಧವಿದ್ದುದರಿಂದ ಈ ಕೃತಿಯಲ್ಲಿ ಮುದ್ರಿಸಲಾಗಿದೆ.

ಮೇಲೆ ಉಲ್ಲೇಖಿಸಿದ ನಾಕು ತರ್ಕಗ್ರಂಥಗಳನ್ನು ಅನುವಾದ ಮಾಡಲು ಪ್ರಚಂಡ ಪಾಂಡಿತ್ಯವೇ ಬೇಕು. ನಮ್ಮ ಸಮಾಜದಲ್ಲಿ ಅತ್ಯಂತ ಶ್ರೇಷ್ಠ ವಿದ್ವಾಂಸರಾದ ವಿ॥ ಪಿ.ಎಸ್. ಶೇಷಗಿರಿ ಆಚಾರ್ಯ ಇವರು ಇದರ ಅನುವಾದವನ್ನು ಮಾಡಿರುತ್ತಾರೆ. ಹಾಗೂ ಮೂಲಗ್ರಂಥದಲ್ಲಿರುವ ಅನೇಕ ತಪ್ಪುಗಳನ್ನು ಸರಿಪಡಿಸಿ ಸಂಪಾದನೆಯನ್ನೂ ಕೂಡ ಮಾಡಿರುತ್ತಾರೆ. ಆದ್ದರಿಂದ ಈ ಕೃತಿಯು ತರ್ಕತಾಂಡವದ ಅಧ್ಯಯನಕ್ಕೆ ಮಾತ್ರ ಅನುಕೂಲವಲ್ಲದೇ ತರ್ಕಗ್ರಂಥಗಳ ಅಧ್ಯಯನಕ್ಕೂ ಕೂಡ ಅತ್ಯುಪಯುಕ್ತವಾಗಿದೆ.

ಹೀಗೆ ಮೊದಲು ತರ್ಕತಾಂಡವದ ಅನುವಾದವನ್ನು ಮಾತ್ರ ಮಾಡಲು ಹೊರಟ ಕಾರ್ಯವು ಮತ್ಸ್ಯಾವತಾರದಂತೆ ಬೆಳೆದು ವಿಶ್ವರೂಪವಾಗಿದೆ. ಆದ್ದರಿಂದ ಈ ಕೃತಿಗೆ **ತರ್ಕತಾಂಡವ-ವಿಶ್ವರೂಪ** ಎಂಬ ಹೆಸರು ಅನ್ವರ್ಥಕವಾಗಿದೆ.

## ಕೃತಜ್ಞತೆಗಳು

ವಿದ್ಯಾರ್ಥಿದೆಸೆಯಲ್ಲಿ ಅನೇಕ ಪ್ರಕರಣಗ್ರಂಥಗಳನ್ನು ಪಾಠಮಾಡಿ ಉಜ್ವಲ ಭವಿಷ್ಯಕ್ಕೆ ಆದರ್ಶಪ್ರಾಯರಾದ ಗುರುಶ್ರೇಷ್ಠರಾದ ಪರಮಪೂಜ್ಯ ಶ್ರೀವಿದ್ಯಾಮಾನ್ಯಶ್ರೀಪಾದಂಗಳವರ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾದ ಅನಂತ ಕೃತಜ್ಞತೆಗಳೊಂದಿಗೆ ನಮಸ್ಕಾರಗಳು. ಹಾಗೂ ಅಶನ ವಸನಗಳ ಜೊತೆ ವಿದ್ಯೆಯನ್ನು ಧಾರೆಯರೆದು ವ್ಯಕ್ತಿತ್ವವನ್ನು ರೂಪಿಸಿದ ವಿದ್ಯಾಗುರುಗಳಾದ ಶ್ರೀವಿಶ್ವೇಶತೀರ್ಥಶ್ರೀಪಾದಂಗಳವರ ಚರಣಕಮಲಗಳಲ್ಲಿ ತುಂಬು ಹೃದಯದ ಭಕ್ತಿಗಳೊಂದಿಗೆ ಕೃತಜ್ಞತಾಪೂರ್ವಕವಾಗಿ ಅನಂತ ನಮಸ್ಕಾರಗಳು.

ಈ ಕೃತಿಗೆ ಪ್ರಧಾನಸಂಪಾದಕರಾಗಿ ಪ್ರೋತ್ಸಾಹನೀಡಿ ಆಶೀರ್ವಾದಿಸಿದ ವಿದ್ವಾನ್ ರಾಜಾ ಎಸ್. ಗಿರಿಆಚಾರ್ಯರಿಗೆ ಕೃತಜ್ಞತಾಪೂರ್ವಕವಾಗಿ ಅನಂತ ನಮಸ್ಕಾರಗಳು.

ಶ್ರೀಗುರುಸಾರ್ವಭೌಮಸಂಶೋಧನಾಮಂದಿರದ ಕಾರ್ಯನಿರ್ವಾಹಕನಿರ್ದೇಶಕರಾದ ವಾಚಸ್ಪತಿ ಡಾ II ವಿ.ಆರ್. ಪಂಚಮುಖಿ ಇವರು ಈ ಕೃತಿಯನ್ನು ಆಮೂಲಾಗ್ರವಾಗಿ ಪರಿಶೀಲನೆ ಮಾಡಿರುವರು. ಮತ್ತು ಅನೇಕರೀತಿಯ ಮಾರ್ಗದರ್ಶನವನ್ನು ಕೂಡ ನೀಡಿರುವರು. ಇವರಿಗೆ ನಾನು ಎಂದೆಂದೂ ಆಭಾರಿಯಾಗಿರುವೆ.

* ಎಲ್ಲಾ ಕಠಿಣ ತರ್ಕಗ್ರಂಥಗಳನ್ನು ಸಂಪಾದಿಸಿ ಹಾಗೂ ಕಸ್ತೂರಿ ಕನ್ನಡದಲ್ಲಿ ಅನುವಾದ ಮಾಡಿ, ಸಮಯಕ್ಕೆ ಸರಿಯಾಗಿ ನೀಡಿರುವ ಪೂಜ್ಯ ವಿ II ಪಿ.ಎಸ್. ಶೇಷಗಿರಿ ಆಚಾರ್ಯ ಇವರಿಗೆ ಕೃತಜ್ಞತಾಪೂರ್ವಕವಾಗಿ ಅನಂತ ನಮಸ್ಕಾರಗಳು.

* ತರ್ಕತಾಂಡವ ಹಾಗೂ ನ್ಯಾಯದೀಪಗ್ರಂಥಗಳ ವಿಷಯಗಳನ್ನೆಲ್ಲಾ ಸಂಪೂರ್ಣವಾಗಿ ಹೇಳಿಕೊಟ್ಟ ವಿ II ಶ್ರೀರಂಗಂ ಆರ್. ವೆಂಕಟೇಶಾಚಾರ್ಯ ಇವರಿಗೂ ಕೃತಜ್ಞತಾಪೂರ್ವಕವಾಗಿ ಅನಂತ ನಮಸ್ಕಾರಗಳು.

* ಈ ಕೃತಿಯಲ್ಲಿ ಪ್ರತಿಯೊಂದು ವಿಷಯಗಳಿಗೆ ಸಂಬಂಧಪಟ್ಟಂತೆ ಗೋಷ್ಠಿಯ ವಿಚಾರಗಳನ್ನು ಬರೆಯಲಾಗಿದೆ. ಇದಕ್ಕೆ ಪೂರಕವಾದ ಅನೇಕ ಆಕ್ಷೇಪಗಳನ್ನು ಹಾಗೂ ಪ್ರಶ್ನೆಗಳನ್ನು ಎತ್ತುಕೊಟ್ಟು ಉಪಕರಿಸಿದ ಸ್ನೇಹಿತರಾದ ಜೆ. ವಿಜಯಾನಂದ ಇವರಿಗೆ ಅನೇಕ ಕೃತಜ್ಞತೆಗಳು.

* ಪರ್ವತದಷ್ಟು ಭಾರವಾದ ಈ ಕಾರ್ಯವನ್ನು ಶ್ರೀಪಾದರು ವಹಿಸಿದಾಗ ಭುಜಬಲತೊಟ್ಟು ಸಹಕರಿಸಿದವರು ೧. ವಿದ್ವಾನ್ ರವಿಕುಮಾರಾಚಾರ್ಯ, ೨. ವಿದ್ವಾನ್ ಸಿ. ಆರ್. ಪ್ರದೀಪ-ಸಿಂಹಾಚಾರ್ಯ ಎಂಬ ಇಬ್ಬರು ನನ್ನ ಸ್ನೇಹಿತವಿದ್ವಾಂಸರು ಕೆಲವು ಭಾಗದ ಅನುವಾದಮಾಡಿ ತಾವೂ ಕೂಡ ಸೇರಿಕೊಂಡು ನನ್ನ ಶ್ರಮವನ್ನು ಹಂಚಿಕೊಂಡರು. ಇವರ ಉಪಕಾರವನ್ನು ಮುಂದೆಂದೂ ಮರೆಯಲಾರೆ. ಈ ಕೃತಿಯಲ್ಲಿ ನೀಡಿದ ಅಭಿನವತಾಂಡವ ಹಾಗೂ ಪ್ರಮಾಣಪದ್ಧತಿ ಗ್ರಂಥದ ಅನುವಾದವನ್ನು ವಿ॥ ಪ್ರದೀಪಸಿಂಹಾಚಾರ್ಯರು ಮಾಡಿರು-ತ್ತಾರೆ. ಇವರೀರ್ವ ವಿದ್ವಾಂಸರಿಗೆ ನಮಸ್ಕಾರಗಳು ಹಾಗು ಕೃತಜ್ಞತೆಗಳು.

* ಪುಸ್ತಕದ ಮುಖಪುಟವನ್ನು ಸುಂದರವಾಗಿ ವಿನ್ಯಾಸಮಾಡಿದ ಕೆ.ಗಿರಿ ಇವರಿಗೆ ಮಂತ್ರಾಲಯ ಪ್ರಭುಗಳು ವಿಶೇಷವಾಗಿ ಅನುಗ್ರಹಿಸಲಿ ಎಂದು ಕೃತಜ್ಞತೆಗಳನ್ನು ಸಲ್ಲಿಸುವೆ.

* ಮುಕ್ತಿಪಥ ಮುದ್ರಣಾಲಯದ ಮೂಲಕ ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟ ಅಶ್ವಿನಿಪ್ರಿಂಟರ್ಸ್ ಮಾಲೀಕರಾದ ಪ್ರಭಾಕರ್ ಇವರಿಗೆ ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರಸ್ವಾಮಿಗಳು ಸಂಪೂರ್ಣವಾಗಿ ಅನುಗ್ರಹಮಾಡಲಿ.

* ಪುಸ್ತಕವು ಅಲ್ಪಸಮಯದಲ್ಲಿ ತಯಾರುಗೊಳ್ಳಬೇಕಿತ್ತು. ಕಠಿಣವಾದ ವಿಷಯಗಳನ್ನು ಅಚ್ಚುಕಟ್ಟಾಗಿ ಬರೆಯುವವರು ಅನಿವಾರ್ಯವಾಗಿತ್ತು. ಈ ಸಂದರ್ಭದಲ್ಲಿ ಸ್ವಲ್ಪವೂ ತಪ್ಪು-ಬಾರದಂತೆ ಅಚ್ಚುಕಟ್ಟಾಗಿ ಸಮಯಕ್ಕೆ ತಕ್ಕಂತೆ ಡಿ.ಟಿ.ಪಿ. ಮಾಡಿಕೊಟ್ಟವರು ಸುಬ್ಬಣ್ಣ ಕೆಂಪದಾಳಿಹಳ್ಳಿ ಇವರು. ತಮಗೆ ಕುಳಿತುಕೊಳ್ಳಲಾಗದಷ್ಟು ಅನಾರೋಗ್ಯವಿದ್ದರೂ ರಾಯರ ಮೇಲಿನ ಭಕುತಿಯಿಂದ ಹಾಗೂ ಶ್ರೀವ್ಯಾಸತೀರ್ಥರ ಸೇವೆ ಎಂಬ ಭಾವನೆಯಿಂದ ಸಮಯಕ್ಕೆ ಸರಿಯಾಗಿ ಟೈಪ್‌ಮಾಡಿಕೊಟ್ಟಿರುವರು. ಇವರ ಉಪಕಾರವನ್ನು ಎಂದೆಂದೂ ಮರೆಯಲಾರೆ ಇವರಿಗೂ ಅನಂತ ಕೃತಜ್ಞತೆಗಳು.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

# ಸ್ಥೂಲವಿಷಯಾನುಕ್ರಮಣಿಕೆ



* * * * *

# ವಿಷಯಾನುಕ್ರಮಣಿಕೆ (ವಿಸ್ತೃತ)

# ತರ್ಕತಾಂಡವವಿಶ್ವರೂಪ

## ದ್ವಿತೀಯಪರಿಚ್ಛೇದ

## ಆಕಾಂಕ್ಷಾ ಪ್ರಕರಣ



### ಕನ್ನಡಾನುವಾದ

## ಆಸತ್ತಿಪ್ರಕರಣ



### ಕನ್ನಡಾನುವಾದ

## ಯೋಗ್ಯತಾಪ್ರಕರಣ

## ಕನ್ನಡಾನುವಾದ

# ಪೂರ್ವಪಕ್ಷತಾಂಡವ

## ಉದಯನಾಚಾರ್ಯವಿರಚಿತ ನ್ಯಾಯಕುಸುಮಾಂಜಲಿ



## ವಲ್ಲಭಾಚಾರ್ಯರಿಂದ ವಿರಚಿತವಾದ ನ್ಯಾಯಲೀಲಾವತಿಶಬ್ದಪ್ರಕರಣ

## ಗಂಗೇಶೋಪಾಧ್ಯಾಯವಿರಚಿತವಾದ ತತ್ವಚಿಂತಾಮಣಿ



## ಸಿದ್ಧಾಂತತಾಂಡವ

### ಪ್ರಮಾಣಲಕ್ಷಣ ಪ್ರಮಾಣಲಕ್ಷಣ ಟೀಕೆ

## ಪ್ರಮಾಣಪದ್ಧತಿ



## ಅಭಿನವತಾಂಡವ



## ಶಬ್ದಪ್ರಕರಣ

* * * * * * * *

# ತರ್ಕತಾಂಡವ

## ದ್ವಿತೀಯಪರಿಚ್ಛೇದ

# ಆಕಾಂಕ್ಷಾ ಪ್ರಕರಣ

೧. ಸಾರಾಮೃತ,
೨. ತರ್ಕತಾಂಡವ - ಸಂಸ್ಕೃತ ಮೂಲ
೩. ನ್ಯಾಯದೀಪ-ಸಂಸ್ಕೃತ ಮೂಲ
೪. ತರ್ಕತಾಂಡವ - ಕನ್ನಡದಲ್ಲಿ ಮೂಲ
೫. ಅನುವಾದ
೬. ವಿವರಣೆ,
೭. ನ್ಯಾಯದೀಪ -ಕನ್ನಡದಲ್ಲಿ ಮೂಲ,
೮. ಅನುವಾದ
೯. ವಿಶೇಷವಿಚಾರ
೧೦. ಪ್ರಶ್ನೋತ್ತರ,
೧೧. ಗೋಷ್ಠಿಯ ವಿಚಾರ,
೧೨. ನೆನಪಿಡಿ

॥ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥

# ಶ್ರೀವ್ಯಾಸತೀರ್ಥಗುರುಸಾರ್ವಭೌಮರಿಂದ ವಿರಚಿತವಾದ ತರ್ಕತಾಂಡವಗ್ರಂಥ

## ಮಂಗಲಾಚರಣೆ

ಅನಂತಕಲ್ಯಾಣಗುಣೈಕರಾಶಿಮ್
ಅಶೇಷದೋಷೋಜ್ಝಿತಮಪ್ರಮೇಯಮ್ ।
ಮುಮುಕ್ಷುಭಿಃ ಸೇವ್ಯಮನಂತಸೌಖ್ಯ-
ಪ್ರದಂ ರಮೇಶಂ ಪ್ರಣಮಾಮಿ ನಿತ್ಯಮ್ ॥೧॥

ಓ ರಮೇಶನೇ ! ನೀನು ಅನಂತ ಕಲ್ಯಾಣಗುಣಗಳಿಗೆ ಮುಖ್ಯ ಆಶ್ರಯನಾಗಿರುವಿ. ಎಲ್ಲಾ ಬಗೆಯ ದೋಷಗಳಿಂದ ಬಲುದೂರನಾಗಿರುವಿ. ನಿನ್ನನ್ನು ಪರಿಪೂರ್ಣವಾಗಿ ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಮುಮುಕ್ಷುಗಳಿಂದ ನಿರಂತರ ಸೇವ್ಯನಾಗಿರುವಿ. ನಿನ್ನ ಭಕುತರಿಗೆ ಅನಂತ ಕಾಲದ ತನಕ ಸುಖವನ್ನು ನೀಡುವಿ. ಇದೋ ನಿನಗೆ ಭಕ್ತಿಪೂರ್ವಕವಾಗಿ ನಿತ್ಯದಲ್ಲಿಯೂ ನಮಸ್ಕರಿಸುವೆ.

ಶ್ರೀಶಪಾದಾಂಬುಜಾಸಕ್ತಃ
ಕರುಣಾಪೂರಶೀತಲಃ ।
ಮಧ್ವಾಖ್ಯೋ ಮರುದಂಶೋ ಮೇ
ಸಂತಾಪಾನ್ ಹಂತು ಸಂತತಮ್ ॥೨॥

ಓ ವಾಯ್ವಂಶರಾದ ಮಧ್ವರೇ ! ಈ ಸಂಸಾರದಲ್ಲಿ ನಾನು ಬೆಂದು ಬಳಲಿರುವೆ. ಶ್ರೀಶನ ಪಾದಕಮಲಗಳಲ್ಲಿ ಆಸಕ್ತರಾದ್ದರಿಂದ ಪರಿಮಳಯುಕ್ತರಾಗಿ ಕಾರುಣ್ಯ-ವೆಂಬ ಪ್ರವಾಹದಿಂದ ಯುಕ್ತರಾದ್ದರಿಂದ ಶೀತಲವಾದ ಮಂದಮಾರುತರಾಗಿ ತಾವು ಆಗಮಿಸಿ ನನ್ನ ಸಂತಾಪಗಳನ್ನು ಪರಿಹರಿಸಿರಿ.

ಆನಂದತೀರ್ಥೋಪದಿಷ್ಟೋ
ನಿಧಿರ್ನಾರಾಯಣಾಹ್ವಯಃ ।
ಪ್ರದರ್ಶಿತೋ ಯೇನ ಸಮ್ಯಕ್
ಜಯತೀರ್ಥಂ ತಮಾಶ್ರಯೇ ॥೩॥

ಓ ಜಯತೀರ್ಥರೇ ! ತಾವು ಶ್ರೀಮದಾಚಾರ್ಯರಿಂದ ಉಪದೇಶಿಸಲ್ಪಟ್ಟ ನಾರಾಯಣ ಎಂಬ ನಿಧಿಯನ್ನು ಸಜ್ಜನವರ್ಗಕ್ಕೆ ಸ್ಪಷ್ಟವಾಗಿ ತೋರಿಸಿರುವಿರಿ. ಅನನ್ಯವಾಗಿ ನಿಮ್ಮನ್ನೇ ಶರಣೆನ್ನುವೆ.

ಶ್ರೀಮದಾನಂದತೀರ್ಥಾರ್ಯ-
ಸ್ವಾಮಿನಃ ಕಮಲಾಪತೇಃ ।
ಪ್ರೀತಯೇ ಕ್ರಿಯತೇ
ವ್ಯಾಸಯತಿನಾ ತರ್ಕತಾಂಡವಮ್ ॥೪॥

ಶ್ರೀಮದಾಚಾರ್ಯರ ಸ್ವಾಮಿಯಾದ ಲಕ್ಷ್ಮೀಪತಿಯ ಪ್ರೀತಿಗೋಸ್ಕರ ಶ್ರೀ-ವ್ಯಾಸತೀರ್ಥರಿಂದ ಈ ತರ್ಕತಾಂಡವ ಗ್ರಂಥವು ರಚಿಸಲ್ಪಡುತ್ತಿದೆ.

ಸ್ವತಃಪ್ರಮಾಣೈರಾಮ್ನಾಯೈರಾದರೇಣಾದಿವರ್ಜಿತೈಃ ।
ಆಖ್ಯಾತಾನಂತಕಲ್ಯಾಣಗುಣಂ ಶ್ರೀರಮಣಂ ಭಜೇ ॥೫॥

ಸ್ವತಃಪ್ರಮಾಣವಾದ ಅನಾದಿಯಾದ ವೇದಗಳಿಂದ ಯಾವ ಲಕ್ಷ್ಮೀಪತಿಯ ಅನಂತ ಕಲ್ಯಾಣಗುಣಗಳು ಪ್ರತಿಪಾದಿಸಲ್ಪಟ್ಟವೆಯೋ, ಅಂಥ ಲಕ್ಷ್ಮೀಪತಿಯನ್ನು ಆದರದಿಂದ ಭಜಿಸುವೆ.

* * * * *

## ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರಿಂದ ವಿರಚಿತವಾದ
## ನ್ಯಾಯದೀಪ - ಟಿಪ್ಪಣಿ

# ಮಂಗಲಾಚರಣೆ

ವಿಶ್ವೋತ್ಪತ್ತಿಸ್ಥಿತಿಧ್ವಂಸ-
ಕಾರಣಂ ರಮಣಂ ಶ್ರಿಯಃ ।
ಪ್ರಣಮ್ಯ ಪೂರ್ಣಬೋಧಾದೀನ್
ವ್ಯಾಕುರ್ವೇ ತರ್ಕತಾಂಡವಮ್ ॥೧॥

ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳಿಗೆ ಕಾರಣನಾದ ಲಕ್ಷ್ಮೀಪತಿಯನ್ನು ಭಕ್ತಿಪೂರ್ವಕ

ನಮಸ್ಕರಿಸಿ ಶ್ರೀಮದಾಚಾರ್ಯರೇ ಮೊದಲಾದ ಗುರುವರ್ಯರನ್ನೂ ಕೂಡ ನಮಿಸಿ, ತರ್ಕತಾಂಡವ ಗ್ರಂಥಕ್ಕೆ ವ್ಯಾಖ್ಯಾನ ಮಾಡುವೆನು.

**ಗುರುಪಾದಕೃತಾऽಪ್ಯಸ್ತಿ**
**ವ್ಯಾಖ್ಯಾ ಸಾऽತ್ಯಂತವಿಸ್ತರಾ ।**
**ವ್ಯಾಖ್ಯೇಯಂ ಮಂದಬೋಧಾಯ**
**ಕ್ರಿಯತೇऽಶೇಷಗೋಚರಾ ॥೨॥**

ತರ್ಕತಾಂಡವ ಗ್ರಂಥಕ್ಕೆ ಗುರುಪಾದರಾದ ಶ್ರೀವಿಜಯೀಂದ್ರತೀರ್ಥ-ಶ್ರೀಪಾದಂಗಳವರು ಅತ್ಯಂತವಿಸ್ತಾರವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಆದರೂ ಕೂಡ ಮಂದಮತಿಗಳಿಗೆ ಗ್ರಂಥದ ಎಲ್ಲಾ ವಿಚಾರಗಳು ಸ್ಪಷ್ಟವಾಗಿ ಅರ್ಥವಾಗುವುದಕ್ಕಾಗಿ ಈ ನ್ಯಾಯದೀಪಟಿಪ್ಪಣಿಯನ್ನು ವಿರಚಿಸುತ್ತಿದ್ದೇವೆ.

* * * * *

# ಆಕಾಂಕ್ಷಾ ಪ್ರಕರಣ

## ಸಾರಾಮೃತ

ವೇದವು ಅಪೌರುಷೇಯವೆಂದು ಸಾಧಿಸಿದ್ದಾಯಿತು. ಅಪೌರುಷೇಯವೇ ಆದ ಮೇಲೆ ಪ್ರಮಾಣವಾಗದಿರಲು ಸಾಧ್ಯವಿಲ್ಲ. ಕಷ್ಟಕರವಾದ ಅಪೌರುಷೇಯತ್ವವನ್ನೇ ಸಾಧಿಸಿದ ಮೇಲೆ ಸುಲಭವಾದ ಪ್ರಾಮಾಣ್ಯವನ್ನು ಸಾಧಿಸುವುದೇನು ಕಠಿಣವಲ್ಲ. ವೇದಪ್ರಾಮಾಣ್ಯದ ಸಮರ್ಥನೆಗಾಗಿ ಆಗಮಸ್ವರೂಪವನ್ನು ನಿರೂಪಣೆ ಮಾಡುವುದಕ್ಕಾಗಿಯೇ ಈ ಎರಡನೆಯ ಪರಿಚ್ಛೇದ ಹೊರಟಿದೆ.

ವೇದಪ್ರಾಮಾಣ್ಯದ ಸಮರ್ಥನೆಗೋಸ್ಕರ ಆಗಮದ ಲಕ್ಷಣವನ್ನು ನಿರೂಪಣೆ ಮಾಡಿ ಅದರಲ್ಲಿ ಸೇರಿರುವ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಇವುಗಳ ವಿಶ್ಲೇಷಣೆಯನ್ನು ವಿವರವಾಗಿ ಈ ಪರಿಚ್ಛೇದದಲ್ಲಿ ಮಾಡಿದ್ದಾರೆ. ಇದರಿಂದ ವೇದವು ಅಪೌರುಷೇಯ ಮಾತ್ರವಲ್ಲ; ಆಕಾಂಕ್ಷಾ, ಯೋಗ್ಯತಾ, ಸನ್ನಿಧಿಗಳಿಂದ ಕೂಡಿರುವ ಪದಗಳ ಸಮೂಹರೂಪವಾದ ವಾಕ್ಯಗಳುಳ್ಳದ್ದು. ಇಂಥ ವೇದವು ಪರಮಪ್ರಮಾಣವಾಗುತ್ತದೆ. ಹೀಗೆ ಈ ಎರಡನೆಯ ಪರಿಚ್ಛೇದದಲ್ಲಿ ಸಮರ್ಥಿಸುತ್ತಿದ್ದಾರೆ.

ವೇದವು ಅಪೌರುಷೇಯವೆನ್ನಲು ತಾರ್ಕಿಕರಿಗೆ ಮನಸ್ಸಿಲ್ಲ. ನಮ್ಮ ಆಪ್ತರು ಹೇಳಿದ್ದಷ್ಟೇ ನಮಗೆ ಪ್ರಮಾಣವಾಗುತ್ತದೆ. ಯಾರಿಂದಲೂ ಹೇಳಲ್ಪಡದ ವೇದವು ಪ್ರಮಾಣವೆಂದು ಒಪ್ಪುವುದು ಹೇಗೆ ? ಇದು ತಾರ್ಕಿಕರಿಗೆ ಇರುವ ದೊಡ್ಡ ಗೊಂದಲ. ಇದರ ಪರಿಹಾರವನ್ನು ಬಹು ಸುಲಭದಲ್ಲಿ ಮಾಡಿದ್ದಾರೆ. ಆಪ್ತವಾಕ್ಯವು ಪ್ರಮಾಣದ ಲಕ್ಷಣವೇ ಅಲ್ಲ. ವಾಕ್ಯ ಅಥವಾ ಶಬ್ದ ನಿರ್ದುಷ್ಟವಾಗಿದ್ದರೆ ಸಾಕು ಪ್ರಮಾಣವಾಗುತ್ತದೆ. ವೇದದಲ್ಲಿರುವ ವಾಕ್ಯಗಳು ನಿರ್ದುಷ್ಟವಾದ್ದರಿಂದ ಪ್ರಮಾಣವೆಂದು ಒಪ್ಪಲು ಯಾವುದೇ ಆತಂಕವಿಲ್ಲ.

ಆಗಮದ ಲಕ್ಷಣವನ್ನು ಹೇಳಬೇಕಾದರೆ ಪ್ರಮಾಣಲಕ್ಷಣವೆಂಬ ಗ್ರಂಥದಲ್ಲಿ 'ನಿರ್ದೋಷಃ ಶಬ್ದಃ' ಎಂದಿದ್ದಾರೆ. ಆದರೆ ವಿಷ್ಣುತತ್ತ್ವನಿರ್ಣಯದಲ್ಲಿ ಬ್ರಹ್ಮತರ್ಕವನ್ನು ಉಲ್ಲೇಖಿಸಿ 'ಅದುಷ್ಟಂ ವಾಕ್ಯಂ' ಎಂದಿದ್ದಾರೆ. ಈ ಎರಡೂ ಕಡೆಯಿರುವ ವಾಕ್ಯಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಒಂದೆಡೆ ಶಬ್ದವೆಂಬ ಪದವಿದೆ. ಮತ್ತೊಂದೆಡೆ 'ವಾಕ್ಯ' ಎಂಬ ಪದವಿದೆ. ಇವರೆಡರಲ್ಲಿ ಯಾವುದೇ ವ್ಯತ್ಯಾಸವಿಲ್ಲ. 'ಶಬ್ದ' ಎಂಬ ಪದಕ್ಕೆ ವಾಕ್ಯ ಎಂದು ಅರ್ಥ ಎಂದು ತಿಳಿಯಬಹುದು. 'ವಾಕ್ಯ' ಎಂಬ ಪದಕ್ಕೆ ಶಬ್ದ ಎಂದು ಅರ್ಥ ಎಂದು ತಿಳಿಯಬಹುದು. ಮೇಲ್ನೋಟಕ್ಕೆ ವ್ಯತ್ಯಾಸವಿದ್ದಂತೆ ಕಾಣಿಸುತ್ತದಷ್ಟೇ. 'ಶಬ್ದಃ' ಎಂದೇ ಹೇಳಬಹುದಾಗಿದ್ದರೂ ವಾಕ್ಯ ಎಂಬ ಪದವನ್ನು ಉಲ್ಲೇಖಿಸಿರುವುದು ಪದವಾಕ್ಯಾದಿಗಳ ವ್ಯತ್ಯಾಸವನ್ನು ತಿಳಿಸುವ ಉದ್ದೇಶಕ್ಕಾಗಿ.

ವಿಭಕ್ತ್ಯಂತವಾದ ವರ್ಣಗಳ ಸಮೂಹವು ಪದ ಎನಿಸುತ್ತದೆ. ಆಕಾಂಕ್ಷಾಯೋಗ್ಯತಾಸನ್ನಿಧಿಗಳುಳ್ಳ ಪದಗಳ ಸಮೂಹವು ವಾಕ್ಯ ಎನಿಸುತ್ತದೆ. ಹೀಗೆ ಪದ ಮತ್ತು ವಾಕ್ಯಗಳಲ್ಲಿರುವ ವ್ಯತ್ಯಾಸವನ್ನು ಗಮನಿಸಬೇಕು.

'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಂ' 'ಆಕಾಂಕ್ಷಾ, ಯೋಗ್ಯತಾ, ಸನ್ನಿಧಿಗಳುಳ್ಳ ಪದಗಳ ಸಮೂಹವೇ ವಾಕ್ಯ' ಎಂಬುದಾಗಿ ವಾಕ್ಯದ ಲಕ್ಷಣವನ್ನು ಹೇಳಿದಾಗ ನಮಗೆ ಆಕಾಂಕ್ಷಾ ಎಂದರೇನು? ಯೋಗ್ಯತಾ ಎಂದರೇನು? ಸನ್ನಿಧಿ ಎಂದರೇನು? ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಅದಕ್ಕಾಗಿ ಗ್ರಂಥಕಾರರು ಒಂದೊಂದರ ಬಗ್ಗೆಯೂ ಪ್ರತ್ಯೇಕವಾಗಿ ವಿಶ್ಲೇಷಣೆ ಮಾಡಲು ಪ್ರಾರಂಭಿಸಿದ್ದಾರೆ. ಪ್ರಮಾಣಪದ್ಧತಿಯಲ್ಲಿ ಈ ಮೂರರ ಲಕ್ಷಣವನ್ನು ನಿಖರವಾಗಿ ಹೇಳಿದ್ದಾರೆ. ಅದನ್ನು ತಿಳಿಯುವ ಮೊದಲು ಪರಮತದವರು ಇವುಗಳ ಲಕ್ಷಣವನ್ನು ಎಷ್ಟು ಕ್ರಮದಲ್ಲಿ ಹೇಳಿದ್ದಾರೆಂಬುದನ್ನು ಕೂಲಂಕಷವಾಗಿ ವಿಮರ್ಶೆ ಮಾಡುತ್ತಾರೆ ಗ್ರಂಥಕಾರರು.

ಮೊದಲು ಆಕಾಂಕ್ಷೆ ಎಂದರೇನು? ಎಂಬುದಾಗಿ ಪ್ರಶ್ನಿಸಿಕೊಂಡು, ಪರರು ಹೇಳುವ ಮೂರು ಲಕ್ಷಣವನ್ನು ಹೇಳುತ್ತಾರೆ.

(1) ಅವಿನಾಭಾವಃ ಆಕಾಂಕ್ಷಾ;

(2) ಶ್ರೋತರಿ ತದುಚ್ಚಾರಣಜನ್ಯಸಂಸರ್ಗಾವಗಮಪ್ರಾಗಭಾವಃ ಆಕಾಂಕ್ಷಾ;

(3) ಶ್ರೋತೃತಾತ್ಪರ್ಯವಿಷಯೀಭೂತಸಂಸರ್ಗಾವಗಮಪ್ರಾಗಭಾವಃ ಆಕಾಂಕ್ಷಾ

ವಿಚಾರ ಮಾಡಿದಾಗ ಈ ಮೂರು ಲಕ್ಷಣಗಳು ಕೂಡ ಅನೇಕ ದೋಷಗಳಿಂದ ದುಷ್ಟವಾಗಿವೆ. ಮತ್ತು ಇವುಗಳನ್ನು ಆಕಾಂಕ್ಷೆಯ ಲಕ್ಷಣಗಳೆಂದು ಒಪ್ಪಲು ಯಾರ ಅನುಭವವೂ ಕೂಡ ಪ್ರಮಾಣವಾಗುವುದಿಲ್ಲ ಎಂಬುದನ್ನು ಈಗ ತಿಳಿಯೋಣ.

ಅವಿನಾಭಾವವೇ ಆಕಾಂಕ್ಷೆ ಎಂಬ ಮೊದಲನೆಯ ಲಕ್ಷಣದಲ್ಲಿ ಅವ್ಯಾಪ್ತಿ, ಹಾಗೂ ಅತಿವ್ಯಾಪ್ತಿ ಎಂಬೆರಡು ದೋಷಗಳು ಬರುತ್ತವೆ. ಕ್ರಿಯಾ, ಕಾರಕಗಳು ಒಟ್ಟಿಗೆ ಇರುವುದೇ ಆಕಾಂಕ್ಷೆ ಎಂದು ಇವರ ಅಭಿಪ್ರಾಯ. ಆದರೆ ಯಾರಿಗೂ ಈ ವಿಚಾರವು ಮನದಟ್ಟಾಗುವುದಿಲ್ಲ. ಮತ್ತು 'ಘಟಮಾನಯ' ಎಂಬ ವಾಕ್ಯದಲ್ಲಿ ಆಕಾಂಕ್ಷೆಯು ಇರುವುದು ಪ್ರಸಿದ್ಧವಾದ ವಿಚಾರ. ಆದರೆ ಆನಯನಕ್ರಿಯೆಯಿಂದ ಘಟವು ಅವಿನಾಭೂತವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಆಕಾಂಕ್ಷೆಯ ಲಕ್ಷಣ ಸಾಕಾಂಕ್ಷವಾದ ಪದದಲ್ಲಿಯೇ ಇಲ್ಲವಾದ್ದರಿಂದ ಅವ್ಯಾಪ್ತಿದೋಷವನ್ನು ಪೂರ್ವಪಕ್ಷಿಗಳು ಕೂಡ ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಘಟ ಇದ್ದ ಮಾತ್ರಕ್ಕೆ ಅದರಲ್ಲಿ ಆನಯನಕ್ರಿಯೆ ಇರಬೇಕೆಂಬ ನಿಯಮವಿಲ್ಲ. ಅದರಂತೆ ಆನಯನ ಕ್ರಿಯೆಯಲ್ಲಿ ಘಟವು ಅನ್ವಯವನ್ನು ಹೊಂದಿಯೇ ಇರುತ್ತದೆಂಬ ನಿಯಮವೂ ಇಲ್ಲ ಹೀಗಿರುವಾಗ 'ಘಟಮಾನಯ' ಎಂಬಲ್ಲಿ ಅವಿನಾಭೂತತ್ವವನ್ನು ಹೇಳಲು ಹೇಗೆ ಸಾಧ್ಯ?

ಮತ್ತು 'ಅಹೋ ವಿಮಲಂ ಜಲಂ ನದ್ಯಾಃ; ಕಚ್ಛೇ ಮಹಿಷಶ್ಚರತಿ' 'ಅಬ್ಬಾ! ನದಿಯ ನೀರು ಎಷ್ಟೊಂದು ನಿರ್ಮಲ! ತೀರದಲ್ಲಿ ಎಮ್ಮೆ ಸಂಚರಿಸುತ್ತಿದೆ' ಎಂಬುದಾಗಿ ಒಬ್ಬ ಹೇಳುತ್ತಾನೆ. ಇಲ್ಲಿ ಎರಡು ವಾಕ್ಯಗಳಿವೆ. 'ಅಹೋ ವಿಮಲಂ ಜಲಂ ನದ್ಯಾಃ' ಎಂಬುದು ಒಂದು, 'ಕಚ್ಛೇ ಮಹಿಷಶ್ಚರತಿ' ಎಂಬುದು ಇನ್ನೊಂದು. ಈ ಎರಡೂ ಭಿನ್ನ ಭಿನ್ನ ವಾಕ್ಯಗಳು. ಈ

ವಾಕ್ಯಗಳನ್ನು ಕೇಳಿದಾಗ ಪ್ರತಿಯೊಬ್ಬರಿಗೂ ಸಹಜವಾಗಿ ನದೀಪದಕ್ಕೆ ಜಲಪದದಲ್ಲಿಯೇ ಅನ್ವಯವೆಂದು ತಿಳಿಯುತ್ತದೆ ಹೊರತು ತೀರ ಎನಿಸಿಕೊಳ್ಳುವ ಕಚ್ಛಪದದಲ್ಲಿ ಅನ್ವಯದ ತಿಳುವಳಿಕೆಯು ಸುತರಾಂ ಬರುವುದಿಲ್ಲ. ಒಟ್ಟಿಗೆ ಇರುವುದನ್ನೇ ಆಕಾಂಕ್ಷೆಯೆಂದು ಹೇಳುವುದಾದರೆ ತೀರವು ನದಿಯ ಜೊತೆ ಇದ್ದೇ ಇರುತ್ತದೆ. ಆದ್ದರಿಂದ ನದೀಪದಕ್ಕೆ ಜಲಪದದಲ್ಲಿ ಆಕಾಂಕ್ಷೆ ಇದೆ ಎಂಬ ಅನುಭವಕ್ಕೆ ವಿರುದ್ಧವಾಗಿ ತೀರದಲ್ಲಿ ಆಕಾಂಕ್ಷೆ ಇದೆಯೆಂದಾಗಬೇಕಾದೀತು! ಹೀಗೆ ಅವಿನಾಭಾವವೇ ಆಕಾಂಕ್ಷೆ ಎಂದರೆ ಅತಿಪ್ರಸಂಗವು ಕೂಡ ಬರುತ್ತದೆ.

ಈ ಅವ್ಯಾಪ್ತಿ ಹಾಗೂ ಅತಿವ್ಯಾಪ್ತಿ ಎಂಬ ಎರಡು ದೋಷಗಳನ್ನು ಉದಯನಕಾರನು ಪರಿಹರಿಸಿಕೊಂಡು ''ತದುಚ್ಚಾರಣಜನ್ಯಸಂಸರ್ಗಾವಗಮಪ್ರಾಗಭಾವಃ ಆಕಾಂಕ್ಷಾ'' ಎಂದು ಆಕಾಂಕ್ಷೆಯ ಲಕ್ಷಣವನ್ನು ಹೇಳಲು ಪ್ರಯತ್ನಿಸಿದ್ದಾನೆ. ವಕ್ತೃವು ವಾಕ್ಯವನ್ನು ಉಚ್ಚಾರಣೆ ಮಾಡಿದಾಗ ಕೇಳುಗನಿಗೆ ಶಾಬ್ದಬೋಧವು ಬರುತ್ತದೆ. ಅದಕ್ಕಿಂತ ಮೊದಲು ಶಾಬ್ದಬೋಧದ ಪ್ರಾಗಭಾವವು ಶ್ರೋತೃವಿನಲ್ಲಿ ಇರುತ್ತದೆ. ಪ್ರಾಗಭಾವ ಇರುವ ಸ್ಥಿತಿಯೇ ಆಕಾಂಕ್ಷೆ ಎಂಬುದು ಇವನ ತರ್ಕಬದ್ಧವಾದ ವಾದ. ಮುಂದೆ ಘಟ ಹುಟ್ಟುವ ಸನ್ನಿವೇಶ ಇದ್ದಾಗ ಮೊದಲು ಆ ಘಟದ ಪ್ರಾಗಭಾವವು ಇರುತ್ತದೆಂಬುದು ಎಲ್ಲರೂ ಒಪ್ಪುವ ವಿಚಾರ. ಎಂದೂ ಹುಟ್ಟದ ಪದಾರ್ಥದ ಪ್ರಾಗಭಾವವು ಕೂಡ ಇರುವುದಿಲ್ಲ. ಭಗವಂತನಲ್ಲಿ ದೋಷಗಳು ಎಂದೂ ಹುಟ್ಟಲಾರದಾದ್ದರಿಂದ ಭಗವಂತನಲ್ಲಿ ದೋಷಗಳ ಅತ್ಯಂತಾಭಾವವನ್ನೇ ಹೇಳಬೇಕು; ಹೊರತು ದೋಷಗಳ ಪ್ರಾಗಭಾವವನ್ನು ಹೇಳಬಾರದು. ಅದರಂತೆ 'ಘಟಮಾನಯ' ಎಂಬ ವಾಕ್ಯವನ್ನು ವಕ್ತೃವು ಉಚ್ಚಾರಣೆ ಮಾಡಿದಾಗ ಕೇಳುವವನಿಗೆ ಘಟವನ್ನು ತರಬೇಕು ಎಂಬ ಶಾಬ್ದಬೋಧವು ಬರುತ್ತದೆ. ಅದಕ್ಕಿಂತ ಮೊದಲಿನ ಕ್ಷಣದಲ್ಲಿ ಆ ಶಾಬ್ದಬೋಧದ ಪ್ರಾಗಭಾವವು ಕೂಡ ಕೇಳುವವನಲ್ಲಿ ಇರುತ್ತದೆ ಎಂಬುದು ಈ ಲಕ್ಷಣದ ಅಭಿಪ್ರಾಯ.

ಆದರೆ 'ಅಯಮೇತಿ ಪುತ್ರೋ ರಾಜ್ಞಃ; ಪುರುಷೋ ಅಪಸಾರ್ಯತಾಮ್' 'ರಾಜನ ಮಗ ಬರುತ್ತಿದ್ದಾನೆ, ಓ ಪುರುಷನೇ! ದಾರಿಬಿಡು' ಎಂದು ಒಬ್ಬ ಹೇಳುತ್ತಾನೆ. ಇಲ್ಲಿಯೂ ಸಹ 'ಅಯಮೇತಿ ಪುತ್ರೋ ರಾಜ್ಞಃ' ಎಂಬ ವಾಕ್ಯವೇ ಬೇರೆ; 'ಪುರುಷೋ ಅಪಸಾರ್ಯತಾಮ್' ಎಂಬ ವಾಕ್ಯವೇ ಬೇರೆ. ಇಲ್ಲಿ ರಾಜಪದಕ್ಕೆ ಪುತ್ರನಲ್ಲಿ ಆಕಾಂಕ್ಷೆ ಇದೆಯೇ ಹೊರತು ಪುರುಷನಲ್ಲಿ ಆಕಾಂಕ್ಷೆ ಇರುವುದಿಲ್ಲ. ಪುತ್ರಪದದಲ್ಲಿ ಆಕಾಂಕ್ಷೆ ಇದ್ದು ಅನ್ವಯ ಹೊಂದಿದಮೇಲೆ ಪುನಃ ಪುರುಷನ ಜೊತೆ ಆಕಾಂಕ್ಷೆ ಬರಲು ಸಾಧ್ಯವೇ ಇಲ್ಲ. ಆದರೆ ಈ ಎರಡು ವಾಕ್ಯವನ್ನು ಕೇಳಿದ ಒಬ್ಬ ಅವ್ಯುತ್ಪನ್ನನು 'ಮಗ ಬರುತ್ತಿದ್ದಾನೆ, ರಾಜಪುರುಷನೇ! ದಾರಿ ಬಿಡು' ಎಂದು ಅಪಾರ್ಥವನ್ನು ತಿಳಿಯುತ್ತಾನೆ. ಇಲ್ಲಿ ರಾಜಪದಕ್ಕೆ ಪುರುಷನ ಜೊತೆ ಭ್ರಾಂತಿಯಿಂದ ಅನ್ವಯವನ್ನು ತಿಳಿಯುತ್ತಾನೆ. ಈ ಸಂದರ್ಭದಲ್ಲಿ ತದುಚ್ಚಾರಣಜನ್ಯಸಂಸರ್ಗಾವಗಮದ ಪ್ರಾಗಭಾವವು ಅವ್ಯುತ್ಪನ್ನನಾದ ಶ್ರೋತೃವಿಗೆ ಇರುವುದರಿಂದ ಇಲ್ಲಿಯೂ ಕೂಡ ಆಕಾಂಕ್ಷೆಯ ಲಕ್ಷಣ ಬಂದಿತು. ಆದ್ದರಿಂದ ಅತಿಪ್ರಸಂಗ ಇವರಿಗೂ ಕೂಡ ತಪ್ಪಿದ್ದಲ್ಲ. ಅಷ್ಟೇ ಅಲ್ಲದೇ 'ಅಹೋ ವಿಮಲಂ ಜಲಂ ನದ್ಯಾಃ, ಕಚ್ಛೇ ಮಹಿಷಶ್ಚರತಿ' ಎಂಬಲ್ಲಿಯೂ ಕೂಡ ಇದೇ ತರಹ ಅತಿವ್ಯಾಪ್ತಿ ಇವರ ಪಕ್ಷದಲ್ಲಿಯೂ ಸಮಾನವಾಗಿದೆ. 'ಘಟಮಾನಯ'

ಎಂಬ ಸ್ಥಳದಲ್ಲಿ ಅವ್ಯಾಪ್ತಿ ಪರಿಹಾರವಾಗುತ್ತದೆಂಬ ಸಂತೋಷಪಟ್ಟ ಇವರಿಗೆ ಅನೇಕ ಸ್ಥಳಗಳಲ್ಲಿ ಅತಿವ್ಯಾಪ್ತಿದೋಷವನ್ನು ಎದುರಿಸಬೇಕಾದ ಸಂಕಟಸ್ಥಿತಿ ಬರುತ್ತದೆ.

ಇನ್ನು ಕೆಲವರು ಮೇಲಿನ ಅತಿಪ್ರಸಂಗವನ್ನು ಪರಿಹರಿಸಿಕೊಳ್ಳಲು 'ವಕ್ತೃತಾತ್ಪರ್ಯವಿಷಯೀಭೂತಸಂಸರ್ಗಾ-ವಗಮಪ್ರಾಗಭಾವಃ ಆಕಾಂಕ್ಷಾ' 'ವಕ್ತೃತಾತ್ಪರ್ಯಕ್ಕೆ ವಿಷಯೀಭೂತವಾದ ಸಂಸರ್ಗಾವಗಮದ ಪ್ರಾಗಭಾವವೇ ಆಕಾಂಕ್ಷೆ ಎಂದು ಹೇಳುತ್ತಾರೆ. 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬ ವಾಕ್ಯವನ್ನು ಪ್ರಯೋಗಿಸುವ ವಕ್ತೃವಿಗೆ ರಾಜಪದಕ್ಕೆ ಪುತ್ರನಲ್ಲಿಯೇ ಅನ್ವಯ ಹೊಂದಬೇಕೆಂಬ ತಾತ್ಪರ್ಯವಿದೆ; ಹೊರತು ಪುರುಷನಲ್ಲಿ ಅನ್ವಯ ಹೊಂದಬೇಕೆಂಬ ತಾತ್ಪರ್ಯ ಇರುವುದಿಲ್ಲ.ಆದ್ದರಿಂದ ಅವ್ಯುತ್ಪನ್ನನಿಗೆ ಬಂದಿರುವ ತಾತ್ಪರ್ಯ-ಭ್ರಮವನ್ನು ವಿವಕ್ಷಿಸಲು ಇಲ್ಲಿ ಸಾಧ್ಯವೇ ಇಲ್ಲ. ಹಾಗಾಗಿ ಅತಿಪ್ರಸಂಗಕ್ಕೆ ಅವಕಾಶವಿಲ್ಲ ಎಂಬುದು ಇವರ ಧೋರಣೆ. ಆದರೆ ಪ್ರಾಗಭಾವವು ಶಾಬ್ದಬೋಧಕ್ಕೆ ಅಸಾಧಾರಣಕಾರಣವಾಗಲು ಸಾಧ್ಯವಿಲ್ಲ. ಯಾವುದು ಕಾರ್ಯಸಾಮಾನ್ಯವನ್ನು ಕುರಿತು ಕಾರಣವಾಗಿದೆಯೋ ಅದನ್ನು ಅಸಾಧಾರಣಕಾರಣವೆಂದು ಯಾವ ಬುದ್ಧಿವಂತರೂ ಕೂಡ ಒಪ್ಪಿಕೊಂಡಿಲ್ಲ. ಪ್ರತಿಯೊಂದು ಕಾರ್ಯಗಳು ಹುಟ್ಟಬೇಕಾದರೆ ಅದರ ಪ್ರಾಗಭಾವವು ಪೂರ್ವಭಾವಿಯಾಗಿ ಇದ್ದೇ ಇರುತ್ತದೆ. ಇಂತಹ ಪ್ರಾಗಭಾವವನ್ನು ಕಾರ್ಯದ ಅಸಾಧಾರಣಕಾರಣವೆಂದು ಪರಿಗಣಿಸುವುದು ಮೂರ್ಖತನ.

ತತ್ತ್ವಚಿಂತಾಮಣಿಕಾರ ಹೇಳಿದ ಆಕಾಂಕ್ಷೆಯ ಲಕ್ಷಣ ಅಯುಕ್ತವಾಗಿದೆ. ಈ ಲಕ್ಷಣಕ್ಕೆ ಅಸಂಭವ, ಅವ್ಯಾಪ್ತಿ ಮೊದಲಾದ ದೋಷಗಳಿವೆ. 'ಘಟಮಾನಯ', 'ಗಾಂ ಬಧಾನ' ಮೊದಲಾದ ಮುಖ್ಯವೃತ್ತಿಯುಳ್ಳ ವಾಕ್ಯಗಳಲ್ಲಿ ಆಕಾಂಕ್ಷೆಯ ಲಕ್ಷಣ ಸಮನ್ವಯವಾಗುವಂತೆ ಗಂಗಾಯಾಂ ಘೋಷಃ ಮೊದಲಾದ ಅಮುಖ್ಯವೃತ್ತಿಸ್ಥಳಗಳಲ್ಲಿಯೂ ಕೂಡ ಆಕಾಂಕ್ಷೆಯ ಲಕ್ಷಣ ಸಮನ್ವಯವಾಗಬೇಕು. ಆದರೆ ತತ್ತ್ವಚಿಂತಾಮಣಿಯಲ್ಲಿ ಹೇಳಿದ ಆಕಾಂಕ್ಷೆಯ ಲಕ್ಷಣ 'ಘಟಮಾನಯ' ಇತ್ಯಾದಿ ಮುಖ್ಯವೃತ್ತಿಯ ಸ್ಥಳಗಳಲ್ಲಿ ಸಮನ್ವಯವಾಗುತ್ತದೆಯೇ ಹೊರತು ಗೌಣೀವೃತ್ತಿಯಲ್ಲಾಗಲೀ, ಲಾಕ್ಷಣಿಕಪ್ರಯೋಗ-ದಲ್ಲಾಗಲೀ ಸಮನ್ವಯವಾಗುವುದಿಲ್ಲ.

'ಸಿಂಹಶ್ಚೈತ್ರಃ' 'ಚೈತ್ರನು ಸಿಂಹನು' ಎಂಬ ವಾಕ್ಯದಲ್ಲಿ ಇರುವ ಸಿಂಹಪದವಾಗಲೀ, ಚೈತ್ರಪದವಾಗಲೀ ಇತರ-ಪದವಿರಹಪ್ರಯುಕ್ತವಾಗಿ ಸ್ವಾರ್ಥಾನ್ವಯಾನುಭವಜನಕವಾಗಿರುವುದಿಲ್ಲ. ಸ್ವಾಭಾವಿಕವಾಗಿಯೇ ಸ್ವಾರ್ಥವನ್ನು ತಿಳಿಸು-ತ್ತಿಲ್ಲ. ಈ ವಿಷಯವನ್ನು ತಾರ್ಕಿಕರೇ ಒಪ್ಪಿರುತ್ತಾರೆ. ಆದರೆ ಈಗ ಆಕಾಂಕ್ಷೆಯ ಲಕ್ಷಣದಲ್ಲಿ ಮತ್ತೊಂದು ಪದವಿಲ್ಲದೇ ಯಾವಪದವು ಸ್ವಾರ್ಥವನ್ನು ತಿಳಿಸುವುದಿಲ್ಲವೋ ಅಲ್ಲಿಯೇ ಆಕಾಂಕ್ಷೆಯ ಲಕ್ಷಣ ಇರುತ್ತದೆಂದು ಹೇಳಿದ್ದಾರೆ. ಹಾಗಾದರೆ ಲಾಕ್ಷಣಿಕಪ್ರಯೋಗದಲ್ಲಿ ಆಕಾಂಕ್ಷೆಯ ಲಕ್ಷಣ ಬರಲೇ ಇಲ್ಲ. ಇನ್ನು ಚೈತ್ರಪದವು ಸಿಂಹಪದದಿಂದ ಆಕಾಂಕ್ಷೆಯನ್ನು ಹೊಂದಿದೆ. ಆದರೆ ಸಿಂಹಪದ ಮಾತ್ರ ಚೈತ್ರಪದದಿಂದ ಆಕಾಂಕ್ಷೆಯನ್ನು ಹೊಂದಿಲ್ಲ ಎಂದು ಉತ್ತರಿಸುವುದಂತೂ ಬಲು ಮೂರ್ಖತನ. ಎರಡು ಪದಗಳಿಗೂ ಪರಸ್ಪರ ಆಕಾಂಕ್ಷೆಯನ್ನು ಹೇಳಬೇಕೇ ಹೊರತು ಅರ್ಧಜರತೀಯ ಮಾಡುವುದು ಅತ್ಯಂತ ಅಯುಕ್ತ.

ಗೌಣಪ್ರಯೋಗದಲ್ಲಿರುವ ಶಬ್ದಗಳು ಅನುಭವಜನಕವೇ ಅಲ್ಲ. ಕೇವಲ ಸ್ಮಾರಕಗಳಾಗಿವೆ. ಹೀಗೆ ಅಲಕ್ಷ್ಯವಾಗಿರುವ ಕಾರಣ ಆಕಾಂಕ್ಷೆಯ ಲಕ್ಷಣ ಬಾರದಿದ್ದರೆ ಅದು ಗುಣ ಆಗುತ್ತದಲ್ಲವೇ ಎಂಬುದು ತಾರ್ಕಿಕರ ಧೋರಣೆ.

ಹೀಗೆ ಹೇಳುವುದಾದರೆ ಇತರಪದದ ಸಹಕಾರವಾದರೂ ಏಕೆ ಬೇಕು? ಇತರಪದವಿಲ್ಲದಿದ್ದರೂ ಕೂಡ ಪದವು ಸ್ಮಾರಕವಾಗುತ್ತದೆಂದು ಹೇಳಿ ಸುಲಭವಾಗಿಯೇ ಉತ್ತರಿಸಲು ಬರುವಾಗ ಆಕಾಂಕ್ಷೆಯ ಲಕ್ಷಣದಲ್ಲಿ ಅನನುಭಾವಕತ್ವ ಎಂಬ ಅಂಶವನ್ನು ಬಿಟ್ಟು 'ಅಜ್ಞಾಪಕತ್ವ' ಎಂಬ ಪದದ ಪ್ರಕ್ಷೇಪವನ್ನಾದರೂ ಏಕೆ ಮಾಡಬೇಕು?

ತಾರ್ಕಿಕರು ಹೇಳಿದ ಆಕಾಂಕ್ಷೆಯ ಲಕ್ಷಣದಲ್ಲಿ 'ಪ್ರಾಗಭಾವ' ಎಂಬ ಪದವನ್ನು ಸೇರಿಸಿರುವುದು ಮತ್ತೊಂದು ದೊಡ್ಡದೋಷ. ಶಾಬ್ದಬೋಧ ಬರುವ ಮೊದಲು ಶಾಬ್ದಬೋಧದ ಪ್ರಾಗಭಾವ ಇರುತ್ತದೆ. ಇದೇ ಆಕಾಂಕ್ಷೆ ಎಂದು ತಾರ್ಕಿಕಶಿರೋಮಣಿಯಾದ ಮಣಿಕಾರನು ಹೇಳಿರುವುದು ಆತ್ಯಾಶ್ಚರ್ಯಕರಸಂಗತಿ. ಘಟ ಹುಟ್ಟಲು ಏನು ಬೇಕು? ಎಂದು ಪ್ರಶ್ನಿಸಿದಾಗ ಘಟಪ್ರಾಗಭಾವ ಬೇಕು ಎಂದು ಯಾರಾದರೂ ಹೇಳುತ್ತಾರೆಯೇ? ಅಸಾಧಾರಣ-ಕಾರಣವಾಗಿದ್ದನ್ನೇ ಕಾರಣಶಬ್ದದಿಂದ ಪ್ರಯೋಗಿಸುವುದು ಲೋಕದಲ್ಲಿ ಕಂಡಿರುವ ನಿಯಮ. ಕಾರ್ಯೋತ್ಪತ್ತಿಯ ಪೂರ್ವದಲ್ಲಿ ಆಯಾ ಕಾರ್ಯಗಳ ಪ್ರಾಗಭಾವವು ಅನಿವಾರ್ಯವಾಗಿ ಇದ್ದೇ ಇರುತ್ತದೆಯಾದ್ದರಿಂದ ಇದನ್ನು ಕಾರಣಶಬ್ದದಿಂದ ಕರೆಯಲೇ ಬಾರದು. ಯಾವದು ಸಾಧಾರಣಕಾರಣವೋ ಅದು ನಿರುಪಪದವಾದ ಕಾರಣಶಬ್ದದಿಂದ ಪ್ರಯೋಗಿಸಲು ಅನರ್ಹವಾಗಿದೆ.

ಪ್ರಕೃತ ಶಾಬ್ದಬೋಧ ಹುಟ್ಟಲು ಆಕಾಂಕ್ಷೆ ಇರಲೇ ಬೇಕು. ಸಾಧಾರಣಕಾರಣವೆನಿಸಿದ ಪ್ರಾಗಭಾವವನ್ನೇ ಆಕಾಂಕ್ಷೆ ಎಂದು ಹೇಳಿಬಿಟ್ಟರೆ ಈ ವಿಷಯ ಯಾರಿಗೂ ಮನದಟ್ಟಾಗುವುದಿಲ್ಲ.

ಈ ಆಕ್ಷೇಪಕ್ಕೆ ತಾರ್ಕಿಕರು ಉತ್ತರಿಸಲು ಪ್ರಯತ್ನಿಸಿದ್ದಾರೆ. ಪ್ರಾಗಭಾವವು ಪ್ರಾಗಭಾವವಾಗಿ ಕಾರಣವೆಂದು ನಾವು ಹೇಳುವುದಿಲ್ಲ. ಇತರಪದವಿರಹಪ್ರಯುಕ್ತವಾಗಿ ಪ್ರಾಗಭಾವವು ಕಾರಣವೆನ್ನುತ್ತೇವೆ ಎಂದು.

ಈ ಮಾತಿಗೆ ಅರ್ಥವೇ ಇಲ್ಲ. ಇತರ ಪದಗಳು ಸಹಕಾರಿಯಾಗಿರುತ್ತವೆಯೇ ಹೊರತು ಕಾರಣಕೋಟಿಯಲ್ಲಿ ಸೇರಲಾರವು. ಆದ್ದರಿಂದ ಘಟಕ್ಕೆ ಘಟಪ್ರಾಗಭಾವವು ಘಟಪ್ರಾಗಭಾವವಾಗಿಯೇ ಹೇಗೆ ಕಾರಣವಾಗುತ್ತದೋ ಅದರಂತೆ ಶಾಬ್ದಬೋಧದ ಪ್ರಾಗಭಾವವೂ ಕೂಡ ಶಾಬ್ದಬೋಧಪ್ರಾಗಭಾವವಾಗಿಯೇ ಕಾರಣವೆನ್ನಬೇಕು; ಇತರಪದ-ವಿರಹಪ್ರಯುಕ್ತವಾಗಿ ಕಾರಣವೆನ್ನಬಾರದು. ಹೀಗೊಪ್ಪದಿದ್ದರೆ ಘಟಪ್ರಾಗಭಾವವೂ ಕೂಡ ದಂಡಚಕ್ರಾದಿವಿರಹ-ಪ್ರಯುಕ್ತವಾಗಿ ಕಾರಣವೆಂದು ಅಸಂಬದ್ಧವಾಗಿ ಹೇಳಬೇಕಾದೀತು.

ಪ್ರಾಗಭಾವವು ಶಾಬ್ದಬೋಧಕ್ಕೆ ಅಸಾಧಾರಣಕಾರಣವಲ್ಲ ಎಂಬ ಆಕ್ಷೇಪಕ್ಕೆ ತಾರ್ಕಿಕರು ನೀಡುವ ಮತ್ತೊಂದು ಸಮಾಧಾನ ಹೀಗಿದೆ – 'ಪ್ರಾಗಭಾವವು ಕಾರಣವೆಂದು ಹೇಳುವುದಿಲ್ಲ. ಪ್ರಾಗಭಾವಜ್ಞಾನವು ಶಾಬ್ದಬೋಧಕ್ಕೆ ಕಾರಣ' ಎಂದು.

'ಶಾಬ್ದಬೋಧ ಬರುವ ಮೊದಲು ನನಗೆ ಈ ವಿಷಯದಲ್ಲಿ ಜ್ಞಾನ ಇರುವುದಿಲ್ಲ' ಎಂಬ ಪರಿಜ್ಞಾನ ಪ್ರತಿಯೊಂದು ಸಂದರ್ಭದಲ್ಲಿಯೂ ಇದ್ದಿದ್ದರೆ ನೀವು ಪ್ರಾಗಭಾವಜ್ಞಾನವು ಕಾರಣವೆಂದು ಹೇಳಬಹುದಿತ್ತು. ಆದರೆ ಈ ಅನುಭವ ಯಾರಿಗೂ ಕೂಡ ಇರುವುದಿಲ್ಲ. ಆದ್ದರಿಂದ ತಾರ್ಕಿಕರಿಗೆ ನಿಖರವಾದ ಆಕಾಂಕ್ಷೆಯ ಲಕ್ಷಣವನ್ನು ಹೇಳಲು ಸಾಧ್ಯವಾಗಿಲ್ಲ.

ಆಕಾಂಕ್ಷೆಯ ಲಕ್ಷಣದಲ್ಲಿ ಸೇರಿದ ಪ್ರಾಗಭಾವವು ಪ್ರಾಗಭಾವತ್ವವೆಂಬ ಅವಚ್ಛೇದಕಧರ್ಮದಿಂದ ಶಾಬ್ದಬೋಧವನ್ನು ಕುರಿತು ಕಾರಣವಲ್ಲ. ಅಭಾವತ್ವವೆಂಬ ಅವಚ್ಛೇದಕಧರ್ಮದಿಂದ ಶಾಬ್ದಬೋಧವನ್ನು ಕುರಿತು ಕಾರಣವಾಗಿದೆ ಎಂಬುದಾಗಿ ತತ್ತ್ವಚಿಂತಾಮಣಿಕಾರ ತನ್ನ ವಾದವನ್ನು ಪುಷ್ಟಿಗೊಳಿಸಲು ಪ್ರಯತ್ನಿಸುತ್ತಿದ್ದಾನೆ. ಹೀಗೆ ಅಭಾವತ್ವವನ್ನು ಅವಚ್ಛೇದಕಧರ್ಮವೆಂದು ಹೇಳುವುದರಿಂದ ಅತ್ಯಂತಾಭಾವ ಹಾಗೂ ಪ್ರಧ್ವಂಸಾಭಾವಗಳನ್ನು ಕೂಡ ಲಕ್ಷಣದಲ್ಲಿ ಸೇರಿಸಿದಂತಾಗುತ್ತದೆ. ಇತರವಿರಹಪ್ರಯುಕ್ತ ಅನ್ವಯಾನುಭವ ಅಭಾವತ್ವವು ಹೇಗೆ ಪ್ರಾಗಭಾವದಲ್ಲಿದೆಯೋ ಅದರಂತೆ ಅತ್ಯಂತಾಭಾವ ಹಾಗೂ ಪ್ರಧ್ವಂಸಾಭಾವಗಳಲ್ಲಿಯೂ ಕೂಡ ಇರುತ್ತದೆ. ಘಟವನ್ನು ಕುರಿತು ಪ್ರಾಗಭಾವವು ಅಭಾವತ್ವೇನ ಕಾರಣವಲ್ಲ. ಪ್ರಾಗಭಾವತ್ವೇನ ಕಾರಣ. ಆದರೆ ಶಾಬ್ದಬೋಧ ಕುರಿತು ಪ್ರಾಗಭಾವವು ಪ್ರಾಗಭಾವತ್ವೇನ ಕಾರಣವಲ್ಲ. ಅಭಾವತ್ವೇನ ಕಾರಣವಾಗಿದೆ. ಹೀಗೆ ಅಸಾಧಾರಣ್ಯವನ್ನು ಆಕಾಂಕ್ಷೆಯಲ್ಲಿ ತಿಳಿಯಬೇಕು.

ಅತ್ಯಂತಾಭಾವ, ಪ್ರಾಗಭಾವ ಹಾಗೂ ಪ್ರಧ್ವಂಸಾಭಾವಗಳಲ್ಲಿ ಅಭಾವತ್ವವು ಅನುಗತವಾಗಿರುವ ಕಾರಣದಿಂದಲೇ ಶಾಬ್ದಬೋಧದಶೆಯಲ್ಲಿ ಪುನಃ ಆಕಾಂಕ್ಷೆಯು ಹುಟ್ಟಿ ಮತ್ತೊಂದು ಶಾಬ್ದಬೋಧ ಬರಲಿ ಎಂಬ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಏಕೆಂದರೆ ಶಾಬ್ದಬೋಧದಶೆಯಲ್ಲಿ ಶಾಬ್ದಬೋಧದ ಪ್ರಾಗಭಾವವೆಂಬ ಕಾರಣವಾಗಲಿ, ಶಾಬ್ದಬೋಧದ ಅತ್ಯಂತಾಭಾವವೆಂಬ ಕಾರಣವಾಗಲೀ ಇರುವುದಿಲ್ಲ. ಕಾರಣವಿಲ್ಲದ ಪ್ರಯುಕ್ತ ಶಾಬ್ದಬೋಧವೆಂಬ ಮತ್ತೊಂದು ಕಾರ್ಯವು ಹುಟ್ಟಲು ಸಾಧ್ಯವಿಲ್ಲ.

ಆಕಾಂಕ್ಷೆಯಿಲ್ಲದಿದ್ದರೂ ಶಾಬ್ದಬೋಧಧ್ವಂಸದ ದಶೆಯಲ್ಲಿ ಆಕಾಂಕ್ಷೆ ಇದೆಯಲ್ಲವೇ? ಏಕೆಂದರೆ ಪ್ರಧ್ವಂಸಾಭಾವವೂ ಅಭಾವವಾಗಿರುವುದರಿಂದ ಅಭಾವತ್ವವೆಂಬ ಕಾರಣತಾವಚ್ಛೇದಕತ್ವವು ಇರುತ್ತದೆ. ಆದ್ದರಿಂದ ಶಾಬ್ದಬೋಧ ಬಂದು ಅದರ ಧ್ವಂಸವಾದ ಮೇಲೆ ಪುನಃ ಅದೇ ಶಾಬ್ದಬೋಧ ಹುಟ್ಟಲಿ ಎಂಬುದು ಮತ್ತೊಂದು ಅತಿಪ್ರಸಂಗ. ಇದನ್ನು ಪರಿಹಾರ ಮಾಡುವುದಕ್ಕಾಗಿ ಇತರಪದವಿರಹಪ್ರಯುಕ್ತ ಎಂಬ ವಿಶೇಷಣವನ್ನು ಅನ್ವಯಾನುಭವದಲ್ಲಿ ನೀಡಲಾಗಿದೆ. ಅನ್ವಯಬೋಧಧ್ವಂಸದಲ್ಲಿ ಇತರವಿರಹಪ್ರಯುಕ್ತತ್ವವೆಂಬುದಿಲ್ಲ. ಮತ್ತೊಂದು ಪದವಿಲ್ಲದ ಪ್ರಯುಕ್ತ ಶಾಬ್ದಬೋಧವು ಧ್ವಂಸವಾಗಿರುವುದಲ್ಲ. ಆದ್ದರಿಂದ ಅಲ್ಲಿ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಹೀಗೆ ಮಣಿಕಾರನು ತಾನು ಹೇಳಿದ ಇತರವಿರಹಪ್ರಯುಕ್ತತ್ವಅನ್ವಯಾನುಭವಾಭಾವವೆಂಬ ಆಕಾಂಕ್ಷೆಯ ಲಕ್ಷಣವು ನಿರ್ದುಷ್ಟವಾಗಿದೆಯೆಂದು ಸಮರ್ಥಿ-ಸುತ್ತಾನೆ.

ಮಣಿಕಾರನು ಹೇಳಿದ ಆಕಾಂಕ್ಷೆಯ ಲಕ್ಷಣವು ಕೂಡ ಅಯುಕ್ತವಾಗಿದೆ. ಇತರಪದವಿರಹಪ್ರಯುಕ್ತವಾದ ಅನ್ವಯಾನುಭವದ ಅಭಾವವು ಅಭಾವತ್ವೇನ ರೂಪೇಣ ಶಾಬ್ದಬೋಧಕ್ಕೆ ಕಾರಣವಾಗುತ್ತದೆಂದು ತಾರ್ಕಿಕರು ಹೇಳಿದರು. ಈ ಅಭಾವವು ಅತ್ಯಂತಾಭಾವಸಾಧಾರಣವಾಗಿದೆ ಎಂಬುದು ಅವರ ಉದ್ದೇಶ.

ತಾರ್ಕಿಕರು ಏನೂ ವಿಚಾರ ಮಾಡದೇ ಈ ಮಾತನ್ನು ಹೇಳುತ್ತಿದ್ದಾರೆ. ಸ್ವಲ್ಪ ವಿಚಾರ ಮಾಡಿದರೂ ಇದು ವ್ಯಾಹತವಾಗಿದೆ ಎಂಬುದು ಮನದಟ್ಟಾಗುತ್ತದೆ. ಏಕೆಂದರೆ, ಘಟದ ಉತ್ಪತ್ತಿಗೆ ಘಟದ ಅತ್ಯಂತಾಭಾವವು ಕಾರಣವೆಂದು ಹೇಳುವುದು ಹೇಗೆ ವ್ಯಾಹತವೋ ಅದರಂತೆ ಸ್ವಾತ್ಯಂತಾಭಾವಸಾಧಾರಣವಾದ ಶಾಬ್ದಬೋಧದ ಅತ್ಯಂತಾಭಾವಹೇತುವೂ ಕೂಡ ಶಾಬ್ದಬೋಧದ ಉತ್ಪತ್ತಿಗೆ  ಕಾರಣವೆಂದು ಹೇಳಿದಂತಾಗುತ್ತದೆ. ಆದ್ದರಿಂದ ಅತ್ಯಂತಾಭಾವದಲ್ಲಿ ಸಾಧಾರಣವಾದ ಹೇತುತ್ವದ ಆಸೆಯನ್ನು ತಾರ್ಕಿಕರು ಬಿಡಬೇಕು.

ಪ್ರಾಗಭಾವವು ಶಾಬ್ದಬೋಧವನ್ನು ಕುರಿತು ಕಾರಣವೆಂದಾಗ ಹೆಚ್ಚು ಸಮಸ್ಯೆ ಇಲ್ಲ. ಪ್ರಾಗಭಾವದ ಜೊತೆಗೆ ಅತ್ಯಂತಾಭಾವವನ್ನು ಕೂಡ ಸೇರಿಸಿಕೊಂಡರೆ ಸಮಸ್ಯೆಗಳು ಬಹಳ ಹೆಚ್ಚಾಗುತ್ತವೆ. ಏಕೆಂದರೆ, ಅತ್ಯಂತಾಭಾವವನ್ನು ಶಾಬ್ದಬೋಧಕ್ಕೆ ಕಾರಣವೆಂದಾಗ ಪ್ರತಿಬಂಧಕಾಭಾವವನ್ನೇ ಕಾರಣವೆಂದಂತಾಯಿತು. ಒಮ್ಮೆ ಶಾಬ್ದಬೋಧ ಬಂದ ಮೇಲೆ ಅದೇ ಶಾಬ್ದಬೋಧ ಮತ್ತೊಮ್ಮೆ ಬರುವುದಿಲ್ಲ. ಆಗ ಮತ್ತೊಂದು ಶಾಬ್ದಬೋಧದ ಅಭಾವವು ಈ ಶಾಬ್ದಬೋಧಕ್ಕೆ ಕಾರಣವೆಂದಂತಾಯಿತು. ಅಂದರೆ ಶಾಬ್ದಬೋಧ ಹುಟ್ಟಲು ಪ್ರತಿಬಂಧಕಾಭಾವ ಇರಬೇಕೆಂದಂತಾಯಿತು. ಆಗಲಿ ಎಂದು ತಾರ್ಕಿಕರಿಗೆ ಉತ್ತರಿಸಲಾಗದು. ಆಕಾಂಕ್ಷೆಯು ಜ್ಞಾತವಾಗಿಯೇ ಶಾಬ್ದಬೋಧಕ್ಕೆ ಕಾರಣವೆಂದು ಸಮರ್ಥಿಸುವ ತಾರ್ಕಿಕರು ಈಗ ಅಜ್ಞಾತವಾದ ಆಕಾಂಕ್ಷೆಯನ್ನು ಶಾಬ್ದಬೋಧಕ್ಕೆ ಕಾರಣವೆಂದು ತಮಗೆ ಗೊತ್ತಿಲ್ಲದಂತೆಯೇ ಒಪ್ಪಿಕೊಂಡಂತಾಯಿತು. ಏಕೆಂದರೆ, ಪ್ರತಿಬಂಧಕಾಭಾವವು ಕಾರ್ಯದ ಉತ್ಪತ್ತಿಗೆ ಜ್ಞಾತವಾಗಿ ಕಾರಣವಾಗಿರುವುದು ಲೋಕದಲ್ಲಿ ಕಂಡಿಲ್ಲ. ಯಾವುದೇ ಕಾರ್ಯ ಉತ್ಪತ್ತಿಯಾಗಲು ಪ್ರತಿಬಂಧಕ ಇರಬಾರದು. ಅದರ ಪರಿಜ್ಞಾನ ನಮಗಿರಬೇಕೆಂಬ ನಿಯಮವಿಲ್ಲ. ಆದ್ದರಿಂದ ಆಕಾಂಕ್ಷೆಯೂ ಕೂಡ ಪ್ರತಿಬಂಧಕಸ್ವರೂಪವಾಗಿರುವ ಕಾರಣ ಅಜ್ಞಾತವಾಗಿಯೇ ಕಾರಣವೆಂದಾಯಿತು.

ಮತ್ತೊಂದು ಪ್ರಬಲದೋಷ ತಾರ್ಕಿಕರಿಗೆ ಇದೆ. 'ಘಟಮಾನಯ' ಎಂಬಲ್ಲಿ 'ಘಟಂ' 'ಆನಯ' ಎಂಬ ಎರಡು ಪದಗಳನ್ನು ಕೇಳಿದಾಗ ಶಾಬ್ದಬೋಧ ಬರುವುದಿಲ್ಲ. ಈ ಎರಡೂ ಪದಗಳ ಶಕ್ತಿಸ್ಮರಣೆ ಬಂದು ನಂತರ ಪದಾರ್ಥಸ್ಮರಣೆ ಬಂದು ಅವುಗಳ ಅನ್ವಯಜ್ಞಾನದ ಮೂಲಕ ಶಾಬ್ದಬೋಧವು ಹುಟ್ಟುತ್ತದೆ. ಮಧ್ಯದಲ್ಲಿರುವ ಈ ಎರಡು ಕ್ಷಣಗಳಲ್ಲಿ ಶಾಬ್ದಬೋಧದ ಪ್ರಾಗಭಾವವಿದೆ. ಆದರೆ ಅದು ಇತರಪದವಿರಹಪ್ರಯುಕ್ತವಲ್ಲ. ಹೀಗೆ ಪ್ರಾಗಭಾವವನ್ನು ಕಾರಣಕೋಟಿಯಲ್ಲಿ ಸೇರಿಸಿದಾಗಲೂ ಕೂಡ ತಾರ್ಕಿಕರಿಗೆ ದೋಷ ತಪ್ಪಿದ್ದಲ್ಲ. ಆದ್ದರಿಂದ ಉದಯನನಿಗಾಗಲೀ ಮಣಿಕಾರನಿಗಾಗಲೀ ಆಕಾಂಕ್ಷೆಯ ಲಕ್ಷಣವನ್ನು ಇದಮಿತ್ಥಂ ಎಂದು ನಿರ್ಧಾರ ಮಾಡಲು ಸಾಧ್ಯವೇ ಇಲ್ಲ.

ಉದಯನ ಹಾಗೂ ಮಣಿಕಾರ ಹೇಳಿದ ಆಕಾಂಕ್ಷೆಯ ಲಕ್ಷಣವು ಪ್ರಾಗಭಾವರೂಪವಾಗಿದೆ. ಹೀಗೆ ಹೇಳಿದಾಗ ಅನೇಕ ದೋಷಗಳನ್ನು ಗ್ರಂಥಕಾರರು ತೋರಿಸುತ್ತಾರೆ. ಹಾಗಾದರೆ ಇತರವಿರಹಪ್ರಯುಕ್ತರೂಪವಾದ ಆಕಾಂಕ್ಷೆಯ ಲಕ್ಷಣವು ನಿರ್ದುಷ್ಟವಾಗಲು ಹೇಗೆ ಪರಿಷ್ಕಾರ ಮಾಡಬೇಕು ಎಂಬುದನ್ನು ಗ್ರಂಥಕಾರರೇ ತಾರ್ಕಿಕರಿಗೆ ತೋರಿಸುತ್ತಿದ್ದಾರೆ. ''ಯಸ್ಯ ಪದಸ್ಯ ಯದನ್ವಯಾನನುಭಾವಕತ್ವಂ ಯತ್ಪದಗತಯದ್ರೂಪವಿರಹಪ್ರಯುಕ್ತಂ ತಸ್ಯ ಪದಸ್ಯ ತನ್ನಿನ್ನನ್ವಯೇ ತೇನ ಪದೇನ ಸಹ ತದ್ರೂಪಮಾಕಾಂಕ್ಷಾ ಎಂದು. ಇದರ ಅಭಿಪ್ರಾಯ ಹೀಗಿದೆ. ಅನ್ವಯಬೋಧಕ್ಕೆ ಉಪಯುಕ್ತವಾದ ಪದನಿಷ್ಠವಾದ ಧರ್ಮವಿಶೇಷವೇ ಆಕಾಂಕ್ಷಾ ಎಂದು. ಹೀಗೆ ಪರಿಷ್ಕಾರವನ್ನು ವಿವಕ್ಷಿಸಿದಾಗ ಯಾವುದೇ ದೋಷಗಳಿಗೆ ಅವಕಾಶವಿಲ್ಲ.

'ಘಟಮಾನಯ' ಎಂಬಲ್ಲಿ ಕ್ರಿಯಾಕಾರಕಭಾವಾನ್ವಯಬೋಧವು ಬರಬೇಕಾದರೆ ಕ್ರಿಯಾಪದತ್ವಾದಿಗಳು ಆಕಾಂಕ್ಷೆ ಎನಿಸುತ್ತವೆ. ಘಟಪದದಲ್ಲಿ ಕಾರಕಪದತ್ವವಿದೆ. ಆನಯಪದದಲ್ಲಿ ಕ್ರಿಯಾಪದತ್ವವಿದೆ ಎಂಬ ಜ್ಞಾನವು ನಮಗೆ ಬಂದಾಗ ಮಾತ್ರ 'ಘಟಮಾನಯ' ಎಂಬ ವಾಕ್ಯವನ್ನು ಕೇಳಿದರೆ ಆನಯನಾನ್ವಿತವಾಗಿದೆ ಘಟ ಎಂಬುದಾಗಿ ಕ್ರಿಯಾಕಾರಕಭಾವದ ಅನ್ವಯಬೋಧವು ಉಂಟಾಗುತ್ತದೆ.

'ರಾಜ್ಞಃ ಪುರುಷಃ' ಎಂಬಲ್ಲಿ ಸ್ವಾಮಿಭೃತ್ಯರೂಪವಾದ ಸಂಬಂಧಬೋಧ ಬರುತ್ತದೆ. ಹೊರತು ಕ್ರಿಯಾಕಾರಕ-ಭಾವಾನ್ವಯಬೋಧ ಬರುವುದಿಲ್ಲ. ಆದ್ದರಿಂದ ಇಲ್ಲಿ ಕ್ರಿಯಾಪದತ್ವ, ಕಾರಕಪದತ್ವಗಳನ್ನು ಶಾಬ್ದಬೋಧಕ್ಕೆ ಉಪ-ಯುಕ್ತವಾದ ಧರ್ಮಗಳೆಂದು ವಿವಕ್ಷಿಸಬಾರದು. ಹಾಗೂ ಷಷ್ಠ್ಯಂತತ್ವ ಹಾಗೂ ಷಷ್ಠ್ಯಂತತ್ವಭಿನ್ನವಿಭಕ್ತಿಕತ್ವ ಇವುಗಳನ್ನು ಶಾಬ್ದಬೋಧಕ್ಕೆ ಉಪಯುಕ್ತವಾದ ಧರ್ಮಗಳೆಂದು ವಿವಕ್ಷಿಸಬೇಕು. 'ನೀಲಾಭಿನ್ನಂ ಉತ್ಪಲಮ್' ಎಂಬ ಅಭೇದಾ-ನ್ವಯಬೋಧ ಬರುವಾಗ ಸಮಾನವಿಭಕ್ತಿಕತ್ವವನ್ನು ಶಾಬ್ದಬೋಧಕ್ಕೆ ಉಪಯುಕ್ತವಾದ ಆಕಾಂಕ್ಷೆಯ ಧರ್ಮವೆಂದು ವಿವಕ್ಷಿಸಬೇಕು. ಹೀಗೆ ಒಂದೊಂದು ಬಗೆಯ ಬೋಧ ಬರಲು ಉಪಯುಕ್ತವಾದ ಧರ್ಮಗಳು ಭಿನ್ನ ಭಿನ್ನವಾಗಿರುತ್ತವೆ. ಕೇವಲ ವಾಕ್ಯದಲ್ಲಿ ಮಾತ್ರ ಆಕಾಂಕ್ಷೆ ಇರುವುದಲ್ಲ; ಪದದಲ್ಲಿಯೂ ಇರುತ್ತದೆ. ಯಾವುದೇ ಒಂದು ಪದವನ್ನು ತೆಗೆದುಕೊಂಡರೂ ಆ ಪದದಲ್ಲಿ ಪ್ರಕೃತಿ ಹಾಗೂ ಪ್ರತ್ಯಯಗಳಿರುತ್ತವೆ. ಪ್ರಕೃತ್ಯರ್ಥ ಹಾಗೂ ಪ್ರತ್ಯಯಾರ್ಥಗಳಿಗೆ ಆಧಾರಾಧೇಯಭಾವವೆಂಬ ಅನ್ವಯವನ್ನು ತಿಳಿಯುವುದಕ್ಕಾಗಿ ಪ್ರಕೃತಿತ್ವ ಹಾಗೂ ಪ್ರತ್ಯಯತ್ವ ಎಂಬ ಧರ್ಮಗಳು ಉಪಯುಕ್ತವಾಗುತ್ತವೆ. ಹೀಗೆ 'ಘಟಂ' ಎಂಬಲ್ಲಿ ಘಟ ಎಂಬುದು ಪ್ರಕೃತಿಯಾಗಿದೆ, 'ಅಮ್' ಎಂಬುದು ಪ್ರತ್ಯಯವಾಗಿದೆ ಎಂಬ ಅರಿವು ನಮಗೆ ಬಂದಾಗ 'ಘಟನಿಷ್ಠಂ ಕರ್ಮತ್ವಂ' ಎಂಬ ಶಾಬ್ದಬೋಧ ಬರುತ್ತದೆ ಎಂದು ಅಭಿಪ್ರಾಯ.

ಹೀಗೆ ಆಕಾಂಕ್ಷೆಯ ಲಕ್ಷಣವನ್ನು ತಿಳಿದಾಗ 'ಘಟಃ ಕರ್ಮತ್ವಂ ಆನಯನಂ ಕೃತಿಃ ಇಷ್ಟಸಾಧನತ್ವಂ' ಎಂಬಲ್ಲಿ ಅತಿವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಏಕೆಂದರೆ 'ಘಟಃ' ಎಂಬ ಪದದಲ್ಲಿ ಇರುವ ಕಾರಕಪದತ್ವ ಹಾಗೂ 'ಆನಯ' ಪದದಲ್ಲಿ ಇರುವ ಕ್ರಿಯಾಪದತ್ವಜ್ಞಾನವು ಜ್ಞಾತ್ವವಿಗೆ ಇರುವುದಿಲ್ಲ. ಆದ್ದರಿಂದ ಇವು ಅಲಕ್ಷ್ಯವಾದ ಕಾರಣ ಇದರಲ್ಲಿ ಆಕಾಂಕ್ಷೆಯ ಲಕ್ಷಣ ಸುತರಾಂ ಬರುವುದಿಲ್ಲ. ಒಂದು ವೇಳೆ ಇದೇ ವಾಕ್ಯದಲ್ಲಿ ಅಭೇದಾನ್ವಯವು ವಿವಕ್ಷಿತವಾದರೆ ಸಮಾನವಿಭಕ್ತಿಕತ್ವವು ಪ್ರಯೋಜಕಧರ್ಮವಾಗುವುದರಿಂದ ಆಕಾಂಕ್ಷೆಯು ಇದ್ದೇ ಇರುತ್ತದೆ.

ಇನ್ನು ಕೆಲವೆಡೆ ಅನ್ವಯಬೋಧಕವಾದ ಎರಡುಪದಗಳು ದೂರದಲ್ಲಿದ್ದರೂ ಕೂಡ ವಕ್ತೃವಿವಕ್ಷಾಧೀನವಾಗಿ ಆಕಾಂಕ್ಷೆಯ ಲಕ್ಷಣ ಸಮನ್ವಯವಾಗುತ್ತದೆ. ಉದಾಹರಣೆಗೆ 'ಗಿರಿರ್ಭುಕ್ತಂ ಅಗ್ನಿಮಾನ್ ದೇವದತ್ತೇನ' ಎಂಬಲ್ಲಿ 'ಭುಕ್ತಂ' ಎಂಬ ಪದವು 'ದೇವದತ್ತೇನ' ಎಂಬ ಪದದ ಜೊತೆ ಇಲ್ಲದಿದ್ದರೂ ವಕ್ತೃವಿವಕ್ಷಾಧೀನವಾದ ಆಕಾಂಕ್ಷೆಯನ್ನು ಹೊಂದಿರುವ ಕಾರಣ ಅನ್ವಯಬೋಧಜನಕವಾಗುತ್ತದೆ. ಆದ್ದರಿಂದ ಆಕಾಂಕ್ಷೆಯ ಲಕ್ಷಣವನ್ನು ತಾರ್ಕಿಕರಾದ ನೀವು ಹೀಗೆ ಹೇಳಬೇಕೆಂದು ಗ್ರಂಥಕಾರರು ಪ್ರೌಢವಾದ ಮಾಡಿದ್ದಾರೆ. ಪ್ರಮಾಣಪದ್ಧತಿಯಲ್ಲಿ ಹೇಳಿದ ಆಕಾಂಕ್ಷೆಯ ಲಕ್ಷಣ ಬೇರೆ ರೀತಿಯಾಗಿದೆ. ಅದೇ ಗ್ರಂಥಕಾರರಿಗೆ ಸಮ್ಮತವಾದದ್ದು. ಅದನ್ನು ಮುಂದೆ ಸಮರ್ಥಿಸುತ್ತಾರೆ.

ಆಕಾಂಕ್ಷೆಯ ಲಕ್ಷಣದಲ್ಲಿ ಪದ ಎಂಬುದಕ್ಕೆ ಶಬ್ದ ಎಂಬರ್ಥವನ್ನು ವಿವಕ್ಷಿಸಬೇಕು. ಆಗ ಪ್ರಕೃತಿ ಪ್ರತ್ಯಯಗಳ, ಪರಸ್ಪರ ವಾಕ್ಯಗಳ ಆಕಾಂಕ್ಷೆಯನ್ನು ಕೂಡ ಸಂಗ್ರಹಿಸಿದಂತಾಗುತ್ತದೆ.

ಪದಶಬ್ದದಿಂದ ಪದದ ಉಪಸ್ಥಿತಿಯನ್ನು ವಿವಕ್ಷಿಸಬೇಕು. ಆಗ ಪದವು ಸ್ವಾಭಾವಿಕವಾಗಿ ಅನನುಭಾವಕವಾಗಿರುವುದರಿಂದ ಇತರವಿರಹಪ್ರಯುಕ್ತವಾಗಿಲ್ಲವೆಂಬ ಕಾರಣದಿಂದ ಅಸಂಭವದೋಷಕ್ಕೆ ಅವಕಾಶ ಬರುವುದಿಲ್ಲ.

ಸಮಭಿವ್ಯಾಹಾರಪದವು ಆಭಿಪ್ರಾಯಿಕವಾಗಿ ವಿವಕ್ಷಿತವಾಗಿದೆ. ಕೆಲವೊಮ್ಮೆ ದ್ವಾರಂ ಎಂದಷ್ಟೇ ವಕ್ತ ಹೇಳಿದಾಗ ಪಿಧೇಹಿ ಎಂಬ ಪದವನ್ನು ಪ್ರಾಸಂಗಿಕವಾಗಿ ಶ್ರೋತೃವು ವಿವಕ್ಷಿಸುತ್ತಾನೆ. ವೇದದಲ್ಲಿಯೂ ಕೂಡ 'ವಿಶ್ವಜಿತಾ ಯಜೇತ' ಎಂದಷ್ಟೇ ಹೇಳಿದಾಗ ಸ್ವರ್ಗಕಾಮಃ ಎಂಬ ಪದವನ್ನು ಪ್ರಾಸಂಗಿಕವಾಗಿ ಅಧ್ಯಾಹಾರ ಮಾಡಿಕೊಳ್ಳುತ್ತಾನೆ. ಇಲ್ಲಿ ಉಚ್ಚಾರಣಾ ರೂಪವಾದ ಸಮಭಿವ್ಯಾಹಾರ ಇಲ್ಲದಿದ್ದರೂ ಆಭಿಪ್ರಾಯಿಕವಾದ ಘಟಪದಕ್ಕೆ ಸಮಭಿವ್ಯಾಹಾರ ಇರುವುದರಿಂದ ಅವ್ಯಾಪ್ತಿದೋಷ ಬರುವುದಿಲ್ಲ. (ಈ ಶಬ್ದವನ್ನು ಅಧ್ಯಾಹಾರ ಮಾಡಬೇಕೆಂದು ಅಭಿಪ್ರಾಯ)

ಆಭಿಪ್ರಾಯಿಕವಾದ ಸಮಭಿವ್ಯಾಹಾರವನ್ನು ವಿವಕ್ಷಿಸಿದ್ದರಿಂದ 'ಘಟೋ ಭವತಿ' ಎಂಬಲ್ಲಿ ಘಟಪದಕ್ಕೆ ರಕ್ತಪದದ ಜೊತೆ ಸಮಾನವಿಭಕ್ತಿಕತ್ವವಿದ್ದರೂ ಆಭಿಪ್ರಾಯಿಕವಾದ ಸಮಭಿವ್ಯಾಹಾರವಿಲ್ಲವೆಂಬ ಕಾರಣದಿಂದ ಅತಿವ್ಯಾಪ್ತಿ- ದೋಷಕ್ಕೆ ಅವಕಾಶವಿಲ್ಲ.

ಆಕಾಂಕ್ಷೆ ಎಂದರೆ ಸ್ವರೂಪಯೋಗ್ಯತೆ. ಸ್ವರೂಪಯೋಗ್ಯತೆ ಎಂದರೆ ಪಾರಿಭಾಷಿಕವಾಗಿ ಇತರಪದವಿರಹ-ಪ್ರಯುಕ್ತಅನನುಭಾವಕತಾಪ್ರಯೋಜಕರೂಪವತ್ವ. ಮತ್ತೊಂದು ಪದವಿಲ್ಲದೇ ಶಬ್ದವು ಶಾಬ್ದಬೋಧ ಜನಕವಾಗು-ವುದಿಲ್ಲ ಎಂದು ಇದರ ಅಭಿಪ್ರಾಯ. ಹೀಗೆ ಸ್ವರೂಪಯೋಗ್ಯತೆಯೇ ಆಕಾಂಕ್ಷೆ ಎನ್ನುವುದಾದರೆ ಯಾವ ವಾಕ್ಯ ಕೇಳಿದಾಗ ಒಮ್ಮೆ ಶಾಬ್ದಬೋಧ ಬಂದಿರುತ್ತದೋ ಪುನಃ ಅದೇ ವಾಕ್ಯದಿಂದ ಮತ್ತೊಮ್ಮೆ ಶಾಬ್ದಬೋಧ ಹುಟ್ಟಲಿ ಎಂಬ ಆಕ್ಷೇಪವನ್ನು ತಾರ್ಕಿಕರು ಮಾಡುತ್ತಿದ್ದಾರೆ. ಅದಕ್ಕಾಗಿ ಪ್ರಾಗಭಾವಘಟಿತವಾದ ಆಕಾಂಕ್ಷೆಯ ಲಕ್ಷಣವನ್ನು ಹೇಳಬೇಕು. ಆಗ ಶಾಬ್ದಬೋಧ ಬಂದ ಮೇಲೆ ಅದರ ಪ್ರಾಗಭಾವ ಇರಲು ಸಾಧ್ಯವಿಲ್ಲದ ಕಾರಣ ಪುನಃ ಶಾಬ್ದಬೋಧ ಹುಟ್ಟಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ ಎಂಬುದು ಅವರ ಅಭಿಪ್ರಾಯ.

ತಾರ್ಕಿಕರ ಈ ಆಕ್ಷೇಪಕ್ಕೆ ಇಷ್ಟಾಪತ್ತಿ ಎಂಬುದೇ ನಮ್ಮ ಉತ್ತರ. ಯಾರಿಗೆ ಒಂದು ವಿಷಯದಲ್ಲಿ ಬಹಳ ಆಸಕ್ತಿ ಇರುತ್ತದೋ ಅವನು ಅದೇ ವಾಕ್ಯವನ್ನು ಅನೇಕ ಬಾರಿ ಕೇಳಿ ಮತ್ತೆ ಮತ್ತೆ ಶಾಬ್ದಬೋಧವನ್ನು ತಂದು ಕೊಳ್ಳುತ್ತಾನೆ. ಪ್ರಾಗಭಾವವನ್ನೇ ಆಕಾಂಕ್ಷೆ ಎನ್ನುವುದಾದರೆ ಇಂತಹ ಸ್ಥಳದಲ್ಲಿ ಶಾಬ್ದಬೋಧ ಹುಟ್ಟದಿರುವ ಪ್ರಸಂಗ ಬರುತ್ತದೆ. ಮತ್ತು ಒಮ್ಮೆ ಶಾಬ್ದಬೋಧ ಬಂದಮೇಲೆ ಪುನಃ ಶಾಬ್ದಬೋಧವು ಅನೇಕ ಸ್ಥಳದಲ್ಲಿ ಬರುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಶ್ರೋತೃವಿಗೆ ಆಸಕ್ತಿ ಇಲ್ಲದಿರುವುದು ಮಾತ್ರ. ಉದಾ- ವಿರಕ್ತನನ್ನು ಕುರಿತು ವಾಣಿಜ್ಯವ್ಯವಹಾರದ ಬಗ್ಗೆ ಉಪದೇಶಿಸಿದರೆ ಅವನಿಗೆ ಶಾಬ್ದಬೋಧವೇ ಹುಟ್ಟುವುದಿಲ್ಲ. ಏಕೆಂದರೆ 'ವಾಣಿಜ್ಯವ್ಯವಹಾರವನ್ನು ತಿಳಿದುಕೊಳ್ಳುವ ಅಪೇಕ್ಷೆ ಅವನಿಗೆ ಇರುವುದಿಲ್ಲ' ಎಂದಷ್ಟೇ ಹೊರತು ಶಬ್ದಗಳು ನಿರಾಕಾಂಕ್ಷವಾಗಿವೆ ಎಂಬ ಕಾರಣದಿಂದಲ್ಲ. ಆದ್ದರಿಂದ ಶಾಬ್ದಬೋಧ ಬರುವ ಮೊದಲು ಶಬ್ದಗಳು ಹೇಗೆ ಆಕಾಂಕ್ಷೆಯಿಂದ ಕೂಡಿರುತ್ತವೋ, ಶಾಬ್ದಬೋಧ ಬಂದ ಅನಂತರವೂ ಶಬ್ದಗಳು ಅದೇ ಆಕಾಂಕ್ಷೆಯಿಂದ ಕೂಡಿರುತ್ತವೆ.

ಆಕ್ಷೇಪ– ಮತ್ತೊಂದು ಪದವಿಲ್ಲದ ಕಾರಣ ಶಬ್ದವು ಅನುಭಾವಕವಾಗುವುದಿಲ್ಲ ಎಂದು ಹೇಳುತ್ತಿದ್ದೀರಿ. ಇದು ಲಾಕ್ಷಣಿಕ ಪದಗಳಲ್ಲಿ ಹೇಗೆ ಬರುತ್ತದೆ? 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾಪದಕ್ಕೆ ಘೋಷಪದದಲ್ಲಿ ಆಕಾಂಕ್ಷೆಯು ಇರುತ್ತದೆ. ಆದ್ದರಿಂದ ಆಕಾಂಕ್ಷೆಯ ಲಕ್ಷಣ ಗಂಗಾಪದದಲ್ಲಿ ಬರಬೇಕು. ಇತರಪದವಿರಹಪ್ರಯುಕ್ತವಾಗಿ ಗಂಗಾಪದವು ಅನನುಭಾವಕ ಆಗಿರುವುದಲ್ಲ. ಸ್ವಾಭಾವಿಕವಾಗಿಯೇ ಅನನುಭಾವಕವಾಗಿದೆ. ಆದ್ದರಿಂದ ಆಕಾಂಕ್ಷೆಯ ಲಕ್ಷಣ ಗಂಗಾ-ಪದದಲ್ಲಿ ಬಾರದ ಕಾರಣ ಅವ್ಯಾಪ್ತಿದೋಷ ಬರುತ್ತದಲ್ಲವೇ?

ಸಮಾಧಾನ– ಈ ಆಕ್ಷೇಪಕ್ಕೂ ಕೂಡ ಈಗ ಅವಕಾಶವಿಲ್ಲ. ನಾವು ಲಾಕ್ಷಣಿಕಪದಗಳಲ್ಲಿ ಹಾಗೂ ಗೌಣಪದಗಳಲ್ಲಿ ಅನುಭಾವಕತ್ವವನ್ನು ಒಪ್ಪಿರುತ್ತೇವೆ. ಆದ್ದರಿಂದ ಸಹಜವಾದ ಅನನುಭಾವಕತ್ವ ಇಲ್ಲದ ಕಾರಣ ಇತರಪದ-ವಿರಹಪ್ರಯುಕ್ತವಾದ ಅನನುಭಾವಕತ್ವವನ್ನು ಗಂಗಾದಿಪದಗಳಲ್ಲಿ ಹೇಳಬಹುದಾದ್ದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

ಜಿಜ್ಞಾಸೆ– ಸ್ವರೂಪಯೋಗ್ಯತೆಯು ಕಾರಣತಾ ಆಗುತ್ತದೆ ಹೊರತು ಕಾರಣ ಆಗುವುದಿಲ್ಲ. ಆಗ ಶಾಬ್ದಬೋಧಕ್ಕೆ ಆಕಾಂಕ್ಷೆಯು ಕಾರಣ ಎಂದು ಹೇಳುವುದು ತಪ್ಪಾಗುತ್ತದಲ್ಲವೇ?

ಸಮಾಧಾನ– ಈ ಜಿಜ್ಞಾಸೆಗೂ ನಾವು ಇಷ್ಟಾಪತ್ತಿ ಎಂದೇ ಉತ್ತರಿಸುತ್ತೇವೆ. ಆಕಾಂಕ್ಷಾಜ್ಞಾನವಷ್ಟೇ ಶಾಬ್ದಬೋಧಕ್ಕೆ ಕಾರಣ, ಆಕಾಂಕ್ಷೆಯು ಶಾಬ್ದಬೋಧಕ್ಕೆ ಕಾರಣವೇ ಅಲ್ಲ. ಸ್ವರೂಪಯೋಗ್ಯತೆಯ ಜ್ಞಾನವು ಶಾಬ್ದಬೋಧಕ್ಕೆ ಕಾರಣವೆಂದು ಹೇಳಿದಾಗ ಮಾತ್ರ ಅಸಾಧಾರಣ್ಯವನ್ನು ಸಮರ್ಥಿಸಲು ಸಾಧ್ಯ. ಏಕೆಂದರೆ ಘಟಪಟಾದಿಗಳ ಉತ್ಪತ್ತಿಗೆ ಕಾರಣತಾಜ್ಞಾನವು ಹೇತುವೆಂದು ಯಾರೂ ಹೇಳುವುದಿಲ್ಲ. ಶಬ್ದದ ವಿಷಯದಲ್ಲಿ ಮಾತ್ರ ಇದನ್ನು ಹೇಳಲು ಸಾಧ್ಯ.

ಸ್ವರೂಪಯೋಗ್ಯತೆಯ ಜ್ಞಾನವು ಶಾಬ್ದಬೋಧಕ್ಕೆ ಕಾರಣವೆನ್ನಲು ಏನು ಪ್ರಮಾಣ? ಎಂದು ಪ್ರಶ್ನಿಸಬಾರದು. ಒಬ್ಬನಿಗೆ ಪದಗಳ ಶಕ್ತಿಜ್ಞಾನವಿದೆ. ಆದರೆ ವಾಕ್ಯವ್ಯುತ್ಪತ್ತಿ ಇಲ್ಲ. ಅವನಿಗೆ ವಾಕ್ಯವನ್ನು ಕೇಳಿದಾಗ ಶಾಬ್ದಬೋಧ ಹುಟ್ಟುವುದಿಲ್ಲ.

ಆದ್ದರಿಂದ ಶಾಬ್ದಬೋಧಕ್ಕೆ ಸ್ವರೂಪಯೋಗ್ಯತಾಜ್ಞಾನವನ್ನೇ ಕಾರಣವೆನ್ನಬೇಕು; ಹೊರತು ಸ್ವರೂಪಯೋಗ್ಯತೆಯನ್ನು ಕಾರಣವೆಂದು ಹೇಳಬಾರದು. ಹೀಗೊಪ್ಪದಿದ್ದರೆ ವಾಕ್ಯದ ವ್ಯುತ್ಪತ್ತಿ ಇಲ್ಲದಿದ್ದವನಿಗೂ ಶಾಬ್ದಬೋಧವು ಹುಟ್ಟುವ ಪ್ರಸಂಗ ಬರುತ್ತದೆ. ಆದ್ದರಿಂದ ಶಾಬ್ದಬೋಧಕ್ಕೆ ಸ್ವರೂಪಯೋಗ್ಯತಾಜ್ಞಾನವೆಂಬ ಆಕಾಂಕ್ಷಾಜ್ಞಾನವೇ ಕಾರಣವೆಂದು ಸಿದ್ಧವಾಯಿತು.

****

ಇತರಪದವಿರಹಪ್ರಯುಕ್ತವಾಗಿ ಅನನುಭಾವಕತ್ವಕ್ಕೆ ಪ್ರಯೋಜಕವಾದ ಧರ್ಮವಿರುವುದೇ ಆಕಾಂಕ್ಷೆಯೆಂದು ಹೇಳಿದರೆ 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬಲ್ಲಿ ರಾಜಪದಕ್ಕೆ ಪುತ್ರಪದದ ಜೊತೆಗೆ ಅನ್ವಯ ಬರುವಂತೆ ಪುರುಷಪದದ ಜೊತೆಗೂ ಅನ್ವಯ ಬರಲಿ 'ರಾಜಪುತ್ರನು ಆಗಮಿಸುತ್ತಿದ್ದಾನೆ ರಾಜಪುರುಷನೇ ದಾರಿ ಬಿಡು' ಎಂಬುದಾಗಿ ಯಾರೂ ಕೂಡ ಈ ವಾಕ್ಯವನ್ನು ಕೇಳಿದಾಗ ಶಾಬ್ದಬೋಧವನ್ನು ಹೊಂದುವುದಿಲ್ಲ. ಈಗ ಇನ್ನೊಂದು ಪದವು ಇಲ್ಲದೇ ಶಬ್ದವು ಅನ್ವಯಬೋಧವನ್ನು ಹುಟ್ಟಿಸಬಾರದೆಂದಷ್ಟೇ ಹೇಳಿದರೆ ರಾಜಪದಕ್ಕೆ ಪುತ್ರಪದದ ಜೊತೆ ಅನನುಭಾವಕತ್ವ ಇದ್ದಂತೆ ಪುರುಷಪದದ ಜೊತೆಗೆ ಕೂಡ ಅನನುಭಾವಕತ್ವ ಇರುತ್ತದೆ. ಆದ್ದರಿಂದ ಅತಿವ್ಯಾಪ್ತಿದೋಷವನ್ನು ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಾನೆ.

ಇದಕ್ಕೆ ಇಷ್ಟಾಪತ್ತಿಯೆಂದೇ ಸಿದ್ಧಾಂತದ ಉತ್ತರ. ಯಾವುದೇ ವಾಕ್ಯವನ್ನು ಕೇಳಿದಾಗ ನಿಶ್ಚಯಾತ್ಮಕವಾದ ಶಾಬ್ದಬೋಧ ಬರಬೇಕೆಂದರೆ ಮೊದಲು ವಕ್ತೃತಾತ್ಪರ್ಯವು ನಿಶ್ಚಯವಾಗಿರಬೇಕು. ''ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್'' ಎಂಬ ವಾಕ್ಯವನ್ನು ಕೇಳಿದಾಗ ಪುತ್ರಪದಕ್ಕೆ ರಾಜಪದದ ಜೊತೆಗೆ ಅನ್ವಯ ಮಾಡಬೇಕೆಂಬ ತಾತ್ಪರ್ಯನಿಶ್ಚಯವು ಕೇಳುವವನಿಗೆ ಇರುವುದರಿಂದ ಅವನು ಪುರುಷಪದದ ಜೊತೆಗೆ ಆಕಾಂಕ್ಷೆಯನ್ನು ಹೊಂದುವುದೇ ಇಲ್ಲ. ಆದ್ದರಿಂದ 'ಎರಡೂ ಕಡೆ ಅನ್ವಯಬೋಧ ಹುಟ್ಟಲಿ' ಎಂಬ ಆಕ್ಷೇಪವೇ ತಪ್ಪು. ಒಂದು ವೇಳೆ ವಕ್ತೃ ಆದವನಿಗೆ 'ರಾಜಪದವು ಪುತ್ರಪದದ ಜೊತೆಗೆ ಮಾತ್ರವಲ್ಲ; ಪುರುಷಪದದ ಜೊತೆಗೆ ಕೂಡ ಅನ್ವಯವನ್ನು ಹೊಂದಲಿ' ಎಂಬ ಅಭಿಪ್ರಾಯವಿದ್ದರೆ ಆಗ ಶ್ರೋತೃವಾದವನು ರಾಜಪದ ಮತ್ತು ಪುರುಷಪದಗಳಲ್ಲಿ ಎರಡೂ ಕಡೆಯೂ ಆಕಾಂಕ್ಷೆಯನ್ನು ಹೊಂದುತ್ತಾನೆ. ಹೀಗೆ ಹೇಳಿದಲ್ಲಿ ಏನು ತಪ್ಪಿದೆ? ಒಬ್ಬ ರಾಜಭಟನು ಎದುರಿನಲ್ಲಿ ನಿಂತಿರುವಾಗ ರಾಜಪುತ್ರನು ಬರುತ್ತಿರುವಾಗ ವಕ್ತೃವಾದವನು 'ರಾಜನ ಮಗ ಬರುತ್ತಿದ್ದಾನೆ. ರಾಜಪುರುಷನೇ ದಾರಿಬಿಡು' ಎಂದು ವಾಕ್ಯವನ್ನು ಪ್ರಯೋಗ ಮಾಡಬಹುದು.

'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ನದಿಯ ನೀರು ಎಷ್ಟೊಂದು ನಿರ್ಮಲವಾಗಿದೆ. ದಡದಲ್ಲಿ ಎಮ್ಮೆಯು ಹೋಗುತ್ತಿದೆ' ಎಂಬ ವಾಕ್ಯದಲ್ಲಿ ನದೀಪದಕ್ಕೆ ಜಲಪದಾರ್ಥದಲ್ಲಿ ಮಾತ್ರ ಅನ್ವಯ; ಹೊರತು ಕಚ್ಛಪದಾರ್ಥದಲ್ಲಿ ಅಲ್ಲ ಎಂದು ತಿಳಿಯಬಾರದು. ಇಲ್ಲಿಯೂ ಸಹ ವಕ್ತೃವಾದವನಿಗೆ ಎರಡು ಕಡೆಯೂ ಅನ್ವಯವು

ವಿವಕ್ಷಿತವಾಗಿದ್ದರೆ ಶ್ರೋತೃವಾದವನಿಗೆ ವಕ್ತೃತಾತ್ಪರ್ಯಕ್ಕೆ ಅನುಗುಣವಾಗಿ ಎರಡೂಕಡೆಯೂ ಅನ್ವಯಬೋಧವು ಬರುತ್ತದೆ. ಕಚ್ಛಪದಾರ್ಥದಲ್ಲಿ ಮಾತ್ರ ಅನ್ವಯವಾಗಬೇಕೆಂಬ ವಿವಕ್ಷೆ ಇದ್ದರೆ ಕಚ್ಛಪದಾರ್ಥದಲ್ಲಿ ಅನ್ವಯ ಬರುತ್ತದೆ. ಅಥವಾ ಜಲಪದಾರ್ಥದಲ್ಲಿ ಮಾತ್ರ ಅನ್ವಯವಾಗಬೇಕೆಂಬ ವಿವಕ್ಷೆ ಇದ್ದರೆ ಜಲಪದಾರ್ಥದಲ್ಲಿ ಮಾತ್ರ ಶಾಬ್ದಬೋಧ ಬರುತ್ತದೆ.

ಆದ್ದರಿಂದ ಯಾವುದೇ ವಾಕ್ಯವನ್ನು ಕೇಳಿದಾಗ ಮೊದಲು ವಕ್ತೃತಾತ್ಪರ್ಯವನ್ನು ಗಮನಿಸಬೇಕು. ಅದಕ್ಕನುಗುಣ-ವಾಗಿಯೇ ಆಕಾಂಕ್ಷೆಯು ಶಾಬ್ದಬೋಧಕ್ಕೆ ಜನಕವಾಗುತ್ತದೆಂದು ತಿಳಿಯಬೇಕು.

* * * *

ಪ್ರಶ್ನೆ– ತಾರ್ಕಿಕರು ಹೇಳಿದ ಆಕಾಂಕ್ಷೆಯ ಲಕ್ಷಣಕ್ಕೂ ತತ್ತ್ವವಾದಿಗಳು ಹೇಳುತ್ತಿರುವ ಆಕಾಂಕ್ಷೆಯ ಲಕ್ಷಣಕ್ಕೂ ಏನೂ ವ್ಯತ್ಯಾಸವಿಲ್ಲ. ತಾರ್ಕಿಕರು ರೂಪಗ್ರಹವಿರಹಪ್ರಯುಕ್ತಶಾಬ್ದಾನುಭವಪ್ರಾಗಭಾವವನ್ನು ಆಕಾಂಕ್ಷೆ ಎಂದರೆ ನೀವು ಅದನ್ನೇ ವಿಪರೀತವಾಗಿ 'ಪ್ರಾಗಭಾವಪ್ರಯೋಜಕವಿರಹಪ್ರತಿಯೋಗಿಗ್ರಹವಿಷಯೀಭೂತರೂಪವತ್ತ್ವಂ' ಎಂದು ಹೇಳುವಿರಿ. ಇಬ್ಬರ ಲಕ್ಷಣದಲ್ಲಿ ಏನು ವ್ಯತ್ಯಾಸ?

ಸಮಾಧಾನ– ವ್ಯತ್ಯಾಸವಿದೆ. ಆಕಾಂಕ್ಷೆಯ ಲಕ್ಷಣವು ಪದಗಳಲ್ಲಿ ಬರಬೇಕು; ಹೊರತು ಬೇರೆಡೆ ಬರಬಾರದು. ತಾರ್ಕಿಕರು ಹೇಳುತ್ತಿರುವ ಆಕಾಂಕ್ಷೆಯ ಲಕ್ಷಣ ಶ್ರೋತೃವಿನಲ್ಲಿ ಬರುತ್ತದೆ; ಹೊರತು ಶಬ್ದದಲ್ಲಿ ಬರುವುದೇ ಇಲ್ಲ. ಮತ್ತು ತಾರ್ಕಿಕರು ಪ್ರಾಗಭಾವಜ್ಞಾನವು ಶಾಬ್ದಬೋಧಕ್ಕೆ ಕಾರಣವೆಂದು ಹೇಳುತ್ತಾರೆ. ಯಾರಿಗಾದರೂ ಶಾಬ್ದಬೋಧವು ಬರುವ ಮೊದಲು 'ನನಗೆ ಇಲ್ಲಿಯ ತನಕ ಈ ವಸ್ತುವಿನ ಜ್ಞಾನ ಇರಲಿಲ್ಲ' ಎಂಬ ಅರಿವು ಬರುತ್ತದೇನು? ಮತ್ತು ಪ್ರಾಗಭಾವಘಟಿತವಾದ ಆಕಾಂಕ್ಷಾ ಲಕ್ಷಣವನ್ನು ಹೇಳಿದರೆ ಒಮ್ಮೆ ಶಾಬ್ದಬೋಧ ಬಂದ ಅನಂತರ ಆ ಪದಗಳಲ್ಲಿ ಆಕಾಂಕ್ಷೆಯ ಲಕ್ಷಣವೇ ಬರುವುದಿಲ್ಲ. ಅಗ್ನಿ ಒಂದು ವಸ್ತುವನ್ನು ಸುಟ್ಟ ಮೇಲೆ ಮತ್ತೊಂದು ವಸ್ತುವನ್ನು ಸುಡಬಾರದೆಂಬ ನಿಯಮವಿಲ್ಲವಷ್ಟೇ. ಅದರಂತೆ ಘಟಮಾನಯ ಎಂಬ ವಾಕ್ಯದಲ್ಲಿರುವ ಪದಗಳು ಶಾಬ್ದಬೋಧ ಹುಟ್ಟಿಸಿದ ಮೇಲೆ ಪುನಃ ಶಾಬ್ದಬೋಧವನ್ನು ಹುಟ್ಟಿಸಬಾರದೆಂಬ ನಿಯಮವಿರುವುದಿಲ್ಲ. ಪುನಃಪುನಃ ಶಾಬ್ದಬೋಧವನ್ನು ಹುಟ್ಟಿಸಬಹುದು. ವ್ಯಕ್ತಿಭೇದದಿಂದ ಅಥವಾ ಆಸಕ್ತಿಯ ವ್ಯತ್ಯಾಸದಿಂದ ಅದೇ ಪದಗಳು ಪುನಃ ಶಾಬ್ದಬೋಧವನ್ನು ಹುಟ್ಟಿಸುವುದು ಲೋಕಸಿದ್ಧವಾಗಿದೆ. ಆದರೆ ತಾರ್ಕಿಕರ ಪ್ರಕಾರ ಒಮ್ಮೆ ಶಾಬ್ದಬೋಧ ಹುಟ್ಟಿಸಿದ ಮೇಲೆ ಪುನಃ ಆ ಪದಗಳಲ್ಲಿ ಆಕಾಂಕ್ಷೆಯೇ ಇಲ್ಲದಂತಾಗುವ ಪ್ರಸಂಗವಿದೆ.

ಆದರೆ ನಮ್ಮ ಸಿದ್ಧಾಂತದಲ್ಲಿ ಈ ಯಾವ ದೋಷಗಳಿಗೂ ಅವಕಾಶವಿಲ್ಲ. ಏಕೆಂದರೆ, ಆಸತ್ತಿ, ಯೋಗ್ಯತಾಗಳು ಹೇಗೆ ಶಬ್ದದಲ್ಲಿರುವ ಧರ್ಮವಾಗಿವೆಯೋ ಅದರಂತೆ ಆಕಾಂಕ್ಷೆಯೂ ಕೂಡ ಶಬ್ದಗತವಾದ ಧರ್ಮವೇ ಆಗಿದೆ. ಏಕೆಂದರೆ ನಾವು ಕ್ರಿಯಾಪದತ್ವ, ಕಾರಕಪದತ್ವ ಮೊದಲಾದ ಧರ್ಮಗಳನ್ನು ಆಕಾಂಕ್ಷೆ ಎಂದು ಕರೆಯುತ್ತಿದ್ದೇವೆ. ಮತ್ತು

ಆಕಾಂಕ್ಷಾಜ್ಞಾನವು ಶಾಬ್ದಬೋಧಕ್ಕೆ ಕಾರಣವಾಗುತ್ತದೆಂದು ನಮ್ಮ ಮತದಲ್ಲಿ ಸುಲಭವಾಗಿ ಹೇಳಬಹುದು. ಏಕೆಂದರೆ ಕ್ರಿಯಾಪದವು ಕಾರಕಪದವಿಲ್ಲದೇ ಶಾಬ್ದಬೋಧ ಹುಟ್ಟಿಸುವುದಿಲ್ಲ ಎಂಬ ಜ್ಞಾನವು ಶಾಬ್ದಬೋಧ ಬರುವ ಮೊದಲು ಇರಲೇಬೇಕು. ಆದ್ದರಿಂದ ನಮ್ಮಲ್ಲಿ ಕ್ರಿಯಾಪದ ಇತ್ಯಾದಿಗಳನ್ನು ಆಕಾಂಕ್ಷೆ ಎಂದು ಕರೆದಿದ್ದರಿಂದ ದೋಷವಿಲ್ಲ.

ಇದರಂತೆ ಒಮ್ಮೆ ಶಾಬ್ದಬೋಧ ಹುಟ್ಟಿಸಿದ ಪದಗಳು ಪುನಃ ಶಾಬ್ದಬೋಧ ಹುಟ್ಟಿಸಲು ಬೇಕಾದ ಆಕಾಂಕ್ಷೆಯನ್ನು ಹೊಂದಿವೆ. ಏಕೆಂದರೆ ಕ್ರಿಯಾಪದತ್ವ, ಕಾರಕಪದತ್ವ ಮೊದಲಾದ ಧರ್ಮಗಳನ್ನೇ ಆಕಾಂಕ್ಷೆ ಎಂದು ಕರೆಯುವುದರಿಂದ ಶಾಬ್ದಬೋಧ ಹುಟ್ಟಿದ ಮೇಲೂ ಈ ಧರ್ಮಗಳು ಪದಗಳಲ್ಲಿರುವ ಕಾರಣ ಆಕಾಂಕ್ಷೆಯ ಲಕ್ಷಣ ಜನಿತಫಲವಾಕ್ಯದಲ್ಲಿ ಬರುತ್ತದೆಂದು ಅವ್ಯಾಪ್ತಿದೋಷಕ್ಕೂ ಕೂಡ ನಮ್ಮ ಮತದಲ್ಲಿ ಅವಕಾಶವಿಲ್ಲ.

ಆದ್ದರಿಂದ ನಮ್ಮ ಮತದಲ್ಲಿ ಹೇಳಿದ ಆಕಾಂಕ್ಷಾಲಕ್ಷಣವೇ ನಿರ್ದುಷ್ಟವಾಗಿದೆ. ಪರವಾದಿಗಳು ಹೇಳಿದ ಆಕಾಂಕ್ಷಾಲಕ್ಷಣವು ದುಷ್ಟವಾಗಿದೆಯೆಂದು ಸಿದ್ಧವಾಯಿತು.

* * * * * * *

।। श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः ।।

# तर्कताण्डवम्
# द्वितीयः परिच्छेदः

## ।। अथाकाङ्क्षाप्रकरणम् ।।

**तर्कताण्डवम्– यच्चेदमुच्यते वेदस्यापौरुषेयत्वे आप्तवाक्यत्वादि-रूपस्य प्रमाणशब्दलक्षणस्याभावात् प्रामाण्यं न स्यादिति ।**

न्यायदीपः– **यस्मिन् वेदस्य सर्वस्याप्याकाङ्क्षायोग्यतादयः ।**
**तं वन्दे परमानन्दमिन्दिरामन्दिरोरसम् ।।**

ननु– वेदापौरुषेयत्वसमर्थनं पूर्वपरिच्छेदे कृतमयुक्तम् । तथात्वे शब्दप्रमाणलक्षणाभावेन प्रमाणशब्दत्वानापत्तेः । एवञ्च ''आदिवर्जितैः, आदरेणाख्यातः' इत्युक्ते हरौ शक्तितात्पर्ये न युक्ते'' इति चोद्यमनूद्य निराह – **यच्चेति** ।।

आदिपदेन आप्तिपूर्वकशब्दत्वयथार्थवाक्यार्थज्ञानजन्यवाक्यत्वादिग्रहः । प्रमाणभूतशब्दस्य यल्लक्षणं तस्येत्यर्थः ।

**प्रामाण्यमिति** ।। प्रमाजनकत्वमित्यर्थः । तस्य स्वतस्त्वसाधनमिति भावः ।।

**तर्कताण्डवम्– तन्न । पद्धतौ 'निर्दोषशब्दत्वं निर्दोषवाक्यत्वं वा आगमलक्षणम्' इत्युक्तत्वात् ।।**

न्यायदीपः– **पद्धताविति** ।। 'निर्दोषः शब्द आगमः, निर्दोषं वाक्यम्' इति वा पद्धताविन्यर्थः ।

तर्कताण्डवम्– **अत्राद्यं 'निर्दोषः शब्द आगमः' इति प्रमाणलक्षणानुसारि ।**

न्यायदीपः– द्वयोरप्युक्तिः तदद्वयतात्पर्यव्यक्त्यर्था । तथा च लक्षणान्तरसम्भवात् प्रामाण्यं वेदस्य युक्तमिति भावः । एतेन एवमागमलक्षणोक्तेरभिप्रायः स्फुटीकृतो भवति । द्वयोक्तेर्मूलं भावं च व्यनक्ति - **अत्रेति** ।।

तर्कताण्डवम्– **निष्प्रयोजनत्वादिदोषनिरासार्थमावश्यकेन निर्दोषत्वविशेषणेनैव निरभिधेये अनन्विते चाप्यतिव्याप्तिनिरासेन वाक्यग्रहणस्यानपेक्षितत्वात् ।।**

**द्वितीयं तु 'आगमोऽदुष्टवाक्यं च' इति ब्रह्मतर्कानुसारि । अत्र वाक्यग्रहणं शिष्याणां पदवाक्यादिस्वरूपज्ञापनार्थम् ।।**

न्यायदीपः– ननु – कथं तर्हि अबोधकविपरीतबोधकरूपवाक्याभासेऽतिव्याप्तिनिरासः । पद्धतावेव 'आकाङ्क्षायोग्यतासन्निधिमन्तिपदानि वाक्यम्' इत्युक्त्वा 'पदत्वेनानभिधेयत्वस्य आकाङ्क्षासन्निधिभ्यामन्वयाभावस्य निरासः' इत्याद्युक्तेरित्यतः तद्द्वितीयलक्षणाभिप्रायमित्युपेत्य 'निरभिधेयत्वेनान्वयाभावेन वा अबोधकत्वम्' इत्यादि निर्दोषपदकृत्योक्तिपरपद्धत्युक्तिं हृदि कृत्वा तात्पर्यमाह – **निष्प्रयोजनत्वेति** ।।

**ब्रह्मतर्केति** ।। तत्वनिर्णयोक्तब्रह्मतर्केत्यर्थः । नन्वेवमुक्तदिशा 'शब्दः' इत्येव पूर्तौ

'वाक्यम्' इति व्यर्थमत आह – **अत्र वाक्येति** । अस्मिन्पक्षे निर्दोषपदं पद्धत्युक्तवाक्य-पदव्यावर्त्यान्यदोषव्यावृत्त्यर्थमिति भावः ॥

**तर्कताण्डवम्– अत एव पद्धतौ 'द्वितीयपक्षे विभक्त्यन्ता वर्णाः पदं, आकाङ्क्षायोग्यतासन्निधिमन्ति पदानि वा वाक्यम्' इत्यादिना पदादीनां लक्षणमुक्तम् । अत एव प्रमाणलक्षणटीकायां 'मूलस्थं शब्दपदं वाक्यपरम्' इत्युक्तम् ॥**

**न्यायदीपः– विभक्त्यन्ता इति** ॥ सुप्तिङ्रूपविभक्त्यन्ता इत्यर्थः । 'विभक्तिश्च' इति सूत्रे सुप्तिङोरुभयोरपि विभक्तिसञ्ज्ञोक्तेः । 'सुप्तिङन्तं पदम्' इति पाणिनीयसूत्रादिति भावः ।

अत्र बहुत्वं प्रायिकत्वाभिप्रायम् । विभक्त्यन्तो वर्णः तादृशौ वर्णौ वा तादृशा वर्णा वेत्यर्थः ।

विभक्त्यन्तवर्णत्वं पदत्वमिति यावत् । विभक्त्यन्तत्वस्य वर्णत्वाव्यभिचारेऽपि वर्णा इत्याद्युक्तिः स्पष्टार्था ।

'राजपुरुषः' इत्यादौ अनेकपदसमुदायस्य विभक्त्यन्तस्य पदत्वनिवृत्त्यर्थं 'वर्णा' इत्युक्तिः । तदर्थस्तु विभक्तिः अन्त एव येषां ते विभक्त्यन्ता इति । राजपुरुष इत्यादौ तु मध्येऽपि विभक्तिर्लुप्ताऽस्तीत्येके ।

अन्ये तु तस्यापि पदत्वलाभायैवमुक्तिः । पदद्वयावयवविभक्तिद्वयात् समुदायोत्पन्न-विभक्तेरन्यत्वेन पदद्वयस्थवर्णसमुदायस्यापि विभक्त्यन्तवर्णत्वादित्याहुः ।

'वर्णान्यस्फोटनिरासाय वर्णोक्तिः' इत्यपरे ॥

**आकाङ्क्षेति** ।। प्रयुज्यमानपदेष्वेवान्योन्याकाङ्क्षावन्ति पदानीत्यर्थः । तेन 'निराकाङ्क्षपदानि वाक्यम्' इति भाष्यटीकया न विरोधः । 'स्वस्मिन्नेव पूर्णाकाङ्क्षावत्वेनान्यत्र निराकाङ्क्षपदसन्दर्भो वाक्यम्' इति चन्द्रिकायां तस्यार्थोक्तेः ।

'पदानी'ति बहुत्वं प्रायिकाभिप्रायम् । अत्रापि पदशब्दप्रयोगकृत्यं पूर्वं वर्णपदकृत्यवत् पदान्यवाक्यस्फोटनिरासायेति बोध्यम् । (यद्वा प्रकृतिप्रत्ययसमभिव्याहारपदेऽतिव्याप्तिनिरासाय 'पदानी'त्युक्तिः ।)

पदादीनामित्यादिपदेन वाक्यस्याकाङ्क्षासन्निध्यादेर्ग्रहः । **अत एवेति** ।। पदादिस्वरूप-व्युत्पादनार्थत्वादेवेति ब्रह्मतर्कसंवादार्थत्वादेवेत्यर्थः । **मूलेति** ।। 'निर्दोषः शब्द आगमः' इति मूलस्थमित्यर्थः ।

तर्कताण्डवम् – **ननु – केयमाकाङ्क्षा ?**

**न तावदविनाभावः । 'घटमानय' इत्यादावभावात् । न हि घट आनयनाविनाभूतः ।**

न्यायदीपः– तत्र पद्धतौ वाक्यलक्षणे प्रथमोद्दिष्टाकाङ्क्षास्वरूपं निरूपयितुं पूर्वपक्षमाह– **नन्विति** ।। 'पदानां या आकाङ्क्षा सेयं का' इत्यर्थः ।

**अभावादिति** ।। कुतः परस्परव्यभिचारादिति भावेनाह – **न हीति** ।। आनयनं वा घटाविनाभूतमित्यप्युपलक्ष्यते ।

एतेन 'कारकस्य क्रियाऽविनाभावः क्रियायाः कारकाऽविनाभावोऽस्ती'ति निरस्तम् । क्रियाविशेषकारकविशेषयोः तदभावेन घटमानयेत्यनयोः निराकाङ्क्षताऽपत्तेरिति ।

मणौ नीलं सरोजमित्यादौ व्यभिचारोक्तिस्त्वयुक्ता । तत्र तात्पर्यविषययोः नीलसरोजयो-रविनाभावसत्वादिति भावः ।।

**तर्कताण्डवम्– 'अहो विमलं जलं; नद्याः कच्छे महिषश्चरति' इत्यत्र जले साकाङ्क्षस्य नदीपदस्य नद्यविनाभूते कच्छे साकाङ्क्षत्व-प्रसङ्गाच्च ।।**

ननु – पदार्थतावच्छेदकरूपेण क्रियाकारकभावेन विवक्षितोऽविनाभावः प्रकृतेप्यस्तीत्यत आह – **अहो विमलमिति ।।**

**तर्कताण्डवम्– नाप्युदयनाद्युक्तरीत्या श्रोतरि तदुच्चारणजन्यसंसर्गा-वगमप्रागभाव आकाङ्क्षा ।**

**न्यायदीपः–** पूर्वत्रोक्तातिव्याप्तेर्निरासकं पक्षमाशङ्क्य निराह – **नापीति ।।** श्रोतरि विद्य-मान उक्तरूपप्रागभाव आकाङ्क्षेत्यर्थः ।

अत्र 'घटः कर्मत्वम्, आनयनं कृतिः' इति वाक्याभासे 'घटमानय' इत्येतत्-समानार्थकेऽतिव्याप्तिनिरासाय तदुच्चारणजन्येत्यवगमविशेषणम् । वक्त्रपेक्षयाऽसम्भववारणाय 'श्रोतरि' इत्येके । 'स्वरूपकथनं तत्' इत्यन्ये ।।

'अहो विमलम्' इति पूर्वोक्तवाक्ये च तात्पर्यवशात् जलान्वितनद्याः अवगमेन तत्प्रागभावसत्वेऽपि तदुच्चारणे तात्पर्यवशात् जलान्वितनद्याः कच्छसंसर्गावगमो नेति न तत्प्रागभाव इति नातिव्याप्तिरिति भावः ।

**तर्कताण्डवम्– 'अयमेति पुत्रो राज्ञः पुरुषोऽपसार्यताम्' इत्यत्र पुत्रे**

**साकाङ्क्षस्य राजपदस्य तात्पर्यभ्रमेण पुरुषान्वयबोधे ततः प्राक् तदन्वयावगमप्रागभावस्य सत्वेनातिव्याप्तिः ।।**

न्यायदीपः– 'इत्यत्र' इत्युपलक्षणम् । पूर्ववाक्ये चेत्यपि ज्ञेयम् । कस्यचित् तात्पर्यवशात् जलान्वयावगमेन नद्याः कच्छान्वयानवगमेऽपि प्रयोगान्तरे पुनरस्य कच्छान्वयतात्पर्यभ्रमेण तदन्वयानवगमसम्भवात् ।।

तर्कताण्डवम्– **नापि तात्पर्यविषयीभूतसंसर्गावगमप्रागभाव आकाङ्क्षा । प्रागभावस्य कार्यमात्रहेतुत्वेन शाब्दासाधारण्यायोगात् । वक्ष्यते चैतत् ।।**

न्यायदीपः– **तात्पर्यविषयेति** ।। पुरुषान्वयबोधस्तु न तात्पर्यविषय इति न पूर्वोक्तदोष इति भावः । 'शाब्दासाधारण्यायोगात्' इत्युपलक्षणम् । संसर्गावगमान्तरप्रागभावस्य सत्वात् जनितान्वयबोधस्यापि वाक्यस्य साकाङ्क्षात्वापत्तिरित्यपि बोध्यम् । **वक्ष्यत इति** ।। मण्युक्ताकाङ्क्षा स्वरूपखण्डनप्रस्तावे 'किञ्च प्रागभावस्य' इत्यादिग्रन्थे ।।

तर्कताण्डवम्– **यत्तु मणावुक्तम् – अभिधानापर्यवसानमाकाङ्क्षा । यस्य येन विना स्वार्थान्वयाननुभावकत्वं तस्य तदेवापर्यवसानम् । अन्याननुभावकत्वं च अन्वयानुभवप्रागभावः ।**

न्यायदीपः– **यत्तु मणाविति** ।। शब्दखण्डे आकाङ्क्षावादसिद्धान्त इत्यर्थः ।।

ननु – अभिधानमन्वयानुभवः तस्यापर्यवसानमनिष्पत्तिः इत्यर्थश्चेत्, 'घटः कर्मत्वम्' इत्यादावस्त्येवेत्यतोऽन्यमेवापर्यवसानशब्दार्थं मण्युक्तमाह – **यस्येति** ।।

यस्य पदस्योपस्थितस्य यद्व्यतिरेकप्रयुक्तस्वार्थान्वयाननुभावकत्वं तस्य पदस्य तदननुभावकत्वमेवापर्यवसानं तेन च सह तदेवाकाङ्क्षेत्यर्थः ।।

ननु – इयमाकाङ्क्षा स्वरूपयोग्यतैव । सा च नाकाङ्क्षा । तस्याः शब्दसहकारित्वात् । स्वरूपयोग्यतायाश्च अतथात्वात् । इत्यतः पक्षधराद्युक्तमाह ।।

तर्कताण्डवम्– **अत एव जनितान्वयबोधं पदमनाकाङ्क्षं तदा प्रागभावाभावात् ।**

**अत एव स्वरूपयोग्यतात इयं भिन्ना । सा हि जनितफलेऽप्यस्ति । इयं तु फलजननात् प्रागेव ।**

न्यायदीपः– अत एव चेति ।। प्रागभावरूपत्वादेवेत्यर्थः ।

तर्कताण्डवम्– **न चाभावे तारतम्याभावेन आकाङ्क्षायामुत्कटत्वानुत्कटत्वरूपतारतम्यायोगः । ससम्बन्धिकासम्बन्धिकपदत्वादिनैव तदुपपत्तेः ।**

न्यायदीपः– प्रागभावस्य आकाङ्क्षारूपत्वे चोत्थितोऽत्थाप्याकाङ्क्षयोरुत्कर्षादिर्न स्यात् इत्याशङ्क्याह – **न चेति ।।**

'अयमेति पुत्रो राज्ञः पुरुषोऽपसार्यताम्' इत्यादौ राजपदादेः पुत्रादिनोत्कटाकाङ्क्षत्वं पुरुषपदादिना च न तथेति एतत्सम्बन्धिकत्वादिना युक्तमित्यर्थः ।

तर्कताण्डवम्– **ज्ञाता चेयं हेतुः । अन्यथा निराकाङ्क्षे तद्भ्रमाद् अन्वयधीर्न स्यात् ।**

न्यायदीपः– **अन्यथेति ।।** स्वरूपसत्याः हेतुत्वे घटः कर्मत्वमित्यादौ निराकाङ्क्षे साकाङ्क्षत्व-भ्रमात् कदाचिदन्वयधीर्न स्यादित्यर्थः । यद्वा 'अहो विमलम्' इत्यादिवाक्ये नद्याः कच्छेना-काङ्क्षाभ्रमादन्वयधीर्न स्यादित्यर्थः ।

**तर्कताण्डवम्– न तु समभिव्याहृतपदार्थजिज्ञासा आकाङ्क्षा । ज्ञाने इष्टसाधनत्वाज्ञानेन ज्ञानेच्छारहितस्यापि पुंसः शाब्दबोधदर्शनात् ।**

न्यायदीपः– पक्षान्तरं निराह – **नन्विति** ।। यत्पदोच्चारणानन्तरं यत्पदार्थज्ञानेच्छा भवति तद्वाचिना पदेन तत्पदं साकाङ्क्षमिति न भवति । ज्ञानेच्छा हि जिज्ञासा । सा च ज्ञानविषयिणी ज्ञायमानज्ञानस्य इष्टसाधनत्वज्ञाने सति भवति नान्यथा । तथा च कदाचिच्छब्दज्ञाने तदिष्टसाधनतावबोधहीनस्यापि शाब्दबोधदर्शनेन व्यतिरेकव्यभिचारात् नेयमाकाङ्क्षा शाब्दबोधहेतुरित्यर्थः ।।

**तर्कताण्डवम्– किञ्च अस्मिन् पक्षे आकाङ्क्षाज्ञानं हेतुर्न स्यात् । जिज्ञासाया अज्ञानेऽपि शाब्दबोधदर्शनात् इति ।।**

**तदपि न । गौणलाक्षणिकयोरव्याप्तेः । न हि त्वत्पक्षे तयोरितर-विरहप्रयुक्तमननुभावकत्वम् । किन्तु स्वत एव । किञ्च घोषपदमेव गङ्गापदेन साकाङ्क्षं, गङ्गापदं तु न घोषपदे नेति सम्भवति ।।**

न्यायदीपः– **गौणेति** ।। 'सिंहश्चैत्रः गङ्गायां घोषः' इत्यनयोरित्यर्थः । तत्र मणिकृन्मते सिंहगङ्गापदयोरननुभावकत्वं व्यनक्ति – **नहि त्वत्पक्ष इति** ।।

'यस्य येन' इत्यादिनोक्तार्थनिष्कर्षानुवादः – **इतरविरहेत्यादि ।। स्वत एवेति** ।। 'स्वरूपा-योग्यत्वप्रयुक्तत्वादेव' इत्यर्थः ।

'घटः कर्मत्वम्' इत्यादौ यथा स्वरूपायोग्यत्वप्रयुक्तमेवाननुभावकत्वं, न पदान्तरविरह-प्रयुक्तं तथा' इति भावः ।

**तर्कताण्डवम्– न चाननुभावकपदस्थानेऽज्ञापकपदप्रक्षेपेऽव्याप्तिर्नेति युक्तम् । इतरपदविरहेऽपि पदस्य स्मारकत्वेनाज्ञापकत्वस्येतरपद-विरहाप्रयुक्तत्वात् ।**

**न्यायदीपः–** अलक्ष्यत्वान्नाव्याप्तिर्दोषायेत्याशङ्क्य निराह – **न चेति** ।। अनुभवविरोधा-दिति भावः । **अज्ञापकपदेति** विच्छेदः ।।

न च पदस्य पदार्थस्मारकत्वेऽप्यन्वयाज्ञापकत्वमस्त्येव । तस्यैव लक्षणेऽभिमतत्वादिति युक्तम् । वक्ष्यमाणदिशाऽन्विताभिधानवादेऽन्वितस्वार्थस्मारकत्वस्यापि सत्वात् ।

परमतेऽपि जात्याकृत्यन्वितव्यक्तेरेव पदार्थत्वेन जात्याद्यन्वयस्मारकत्वाच्चेति तात्पर्यात् ।

**तर्कताण्डवम्– किञ्च प्रागभावस्य सर्वकार्यहेतुत्वेन शाब्दासाधारण्यं न स्यात् ।**

**न्यायदीपः–** ननु - यदुपस्थापितस्यार्थस्य यत्पदव्यतिरेकेण नानुभवविषयत्वं तस्य तत्साकाङ्क्षत्वमिति लक्षणार्थः । एवं च 'तीरादेरनुभवविषयत्वं न घोषादिपदं विनेति लाक्षणिकादेरपि साकाङ्क्षत्वम्' इति पक्षधराद्युक्तेर्नाव्याप्तिरित्यतो दोषान्तरमाह – **किञ्चेति** ।।

तट्टीकाकारैरुक्तमाशङ्क्य निराह – **न च शब्देत्यादिना** ।। **सहकारिकत्वेनेति** ।। शाब्दबोधसहकारित्वेनेत्यर्थः ।।

**तर्कताण्डवम्– न च शाब्दानुभवेऽन्वयानुभवप्रागभावस्येतरपदविरह-**

प्रयुक्तत्वेन हेतुत्वादसाधारण्यम्, अत एव 'येन विना' इति विशेषितमिति वाच्यम् ।

इतरपदानां सहकारित्वेन शाब्दबोधप्रागभावस्य तद्विरहप्रयुक्तत्वेऽपि घटादाविव शाब्दानुभवेऽपि प्रागभावत्वेनैव हेतुत्वात् ।

अन्यथा घटप्रागभावोऽपि घटे दण्डादिविरहप्रयुक्तत्वेन हेतुः स्यात् ।

न च शाब्दज्ञाने प्रागभावज्ञानं कारणमित्यसाधारण्यम् । तज्ज्ञानस्य कारणत्वे मानाभावात् ।

न हि शाब्दबोधात् प्राक् ममात्रान्वये ज्ञानं नेति ज्ञानमनुभवसिद्धम् । अन्यथा घटेऽपि प्रागभावो ज्ञातो हेतुः स्यात् ।।

अथ प्रागभावः प्रागभावत्वेन नाकाङ्क्षा, किन्तु प्रागभावात्यन्ताभावसाधारण्येनेतरविरहप्रयुक्तान्वयानुभवाभावत्वेनेति असाधारण्यम् ।

घटादौ प्रागभावत्वेनैव हेतुत्वात् । अत एवान्वयबोधदशायां नातिव्याप्तिः । तदा प्रागभावात्यन्ताभावयोरभावात् ।

न्यायदीपः– प्रकारान्तरेण शब्दासाधारण्यं संसर्गावगमप्रागभावस्य शङ्कते – **अथेति** ।। प्रागभावात्यन्ताभावेत्युपलक्षणम् । 'ध्वंस' इत्यपि ध्येयम् ।

अत एवेतरविरहप्रयुक्तान्वयानुभवाभावत्वेनेति हेतुतावच्छेदकोक्तिः । अन्यथाऽन्वया-

नुभवानाद्यभावत्वेनेत्येव हेतुतावच्छेदकमुक्त्वा इतरविरहप्रयुक्तेति न ब्रूयात् । तस्य ध्वंसदशायाम् अतिव्याप्तिवारकत्वात् । अन्वयानुभवसंसर्गाभावत्वेन हेतुत्वविवक्षायामेव इतरविरहप्रयुक्तेति सार्थक्यात् ।

ध्वंसस्याहेतुत्वान्न तत्साधारण्यं चेदत्यन्ताभावसाधारण्यमपि न स्यात् । अत एव 'नाप्यन्वयबोधध्वंसदशायामि'त्यादि व़क्ष्यतीति ध्येयम् ।

यद्वोक्तोभयसाधारण्यमेवास्तु अन्वयानुभवाभावत्वेनैव हेतुता ध्वंसेतिप्रसक्तेति तद्वारणायैव 'इतर' इत्यादिविशेषणोक्तिः । घटादौ तु नैवमित्याह – **घटादाविति** ।।

'तत्प्रागभावस्ये'ति योज्यम् । अत एवेत्युक्तं व्यनक्ति– **तदेति** ।।

**तर्कताण्डवम्– नाप्यन्वयबोधध्वंसदशायाम् । तदा ध्वंसस्य सत्वेऽपि तस्येतरविरहाप्रयुक्तत्वादिति चेन्न ।**

न्यायदीपः– **ध्वंसदशायामिति** ।। अतिव्याप्तिरित्यनुषङ्गः ।

**तर्कताण्डवम्– अत्यन्ताभावसाधारणेन रूपेण हेतुत्वे स्वात्यन्ताभावस्य स्वं प्रत्यहेतुत्वात् ।**

न्यायदीपः– अत्यन्ताभावसाधारण्येन हेतुत्वं किं स्वात्यन्ताभावसाधारण्येन विवक्षितम्, उत शाब्दानुभवान्तरात्यन्ताभावसाधारण्येनेति । आद्य आह – **स्वात्यन्ताभावस्येति** ।।

**तर्कताण्डवम्– शाब्दानुभवान्तराभावः शाब्दानुभावं प्रति, त्वन्मतेऽनुमित्यन्तराभावोऽनुमितिं प्रतीव प्रतिबन्धकाभावतया हेतुः स्यात् ।**

न्यायदीपः– अन्त्य आह – **शाब्दान्तरानुभवेति** ।।

**तर्कताण्डवम्– प्रतिबन्धकाभावश्चाज्ञात एव हेतुः कार्यमात्रसाधारणश्चेति त्वदङ्गीकृतमाकाङ्क्षाज्ञानस्य हेतुत्वमसाधारण्यं च न स्यात् ।**

न्यायदीपः– **प्रतिबन्धकाभावतयेति** ।। सिद्धसाधनता अनुमाने दोष इति सिद्धेरनुमितिप्रतिबन्धकत्वात् सिद्ध्यन्तराभावोऽनुमितौ यथा प्रतिवन्धकाभावतया हेतुः एवमप्राप्ते वाक्यमर्थवदिति न्यायाद् अन्वयगोचारनुभवान्तरे सति पुनः शाब्दानुभवस्य अनपेक्षितत्वेनानुदयादनुभवान्तरमन्वयानुभवे प्रतिबन्धकमिति तदभावोऽपि प्रतिबन्धकाभावत्वेनैव हेतुः स्यादित्यर्थः ।

ततश्च किमित्यत आह – **प्रतिबन्धकाभावश्चेति** ।।

**तर्कताण्डवम्– किञ्च सकलपदोपस्थितिदशायां शाब्दबोधात्पूर्वं प्रागभावस्येतरविरहाप्रयुक्तत्वादव्याप्तिः । तस्मादाकाङ्क्षा दुर्निरूपेति ।**

न्यायदीपः– **पूर्वमिति** ।। 'सङ्केतस्मरणपदार्थोपस्थितिदशायां पदानामुपस्थित्यन्तरम्' इत्यर्थः ।।

**तर्कताण्डवम्– उच्यते – यस्य पदस्य यदन्वयाननुभावकत्वं समभिव्याहृतयत्पदगतयद्रूपविरहप्रयुक्तं तस्य पदस्य तस्मिन्नन्वये तेन पदेन सह तद्रूपमाकाङ्क्षा ।**

न्यायदीपः– पद्धतौ ''आकाङ्क्षा जिज्ञासा चेतनधर्मः । तद्विषयत्वात् पदार्थाः साकाङ्क्षाः । तत्प्रतिपादकत्वात् पदान्यपि'' इति ग्रन्थेन जिज्ञासाविषयीभूतपदार्थविषयप्रतिपत्तिजनकत्वं

पदानां साकाङ्क्षत्वमिति यदुक्तं तत्र जनकत्वं न फलोपधानं, किन्तु स्वरूपयोग्यतैवाभिमतेति भावेन तत्रोक्तं निष्कृष्याग्रे स्वाभिमताकाङ्क्षालक्षणं विवक्षुरादौ तावत्प्रौढ्या पद्धत्युक्तलक्षणा-विनाभूतं लक्षणान्तरमाह – **यस्य पदस्येत्यादिना** ।।

पद्धतौ 'पदानी'त्युक्तत्वात् **पदस्येति** बाहुल्याभिप्रायेणोक्तम् । 'यस्य शब्दस्ये'त्यर्थः ।

तेन प्रातिपदिकप्रत्ययोर्महावाक्यावान्तरवाक्यस्य च ग्रहः । तदपि तदुपस्थितिपरम् । यत्पदेत्यत्रापि यच्छब्देत्यर्थः । यद्रूपेत्यत्र यद्रूपोपस्थितीत्यग्रे व्यक्तम् ।

तथाच च यस्य शब्दस्योपस्थितस्य यदन्वयाननुभावकत्वं यश्चासावन्वयश्चेति विग्रहः । 'तस्मिन्नन्वये' इत्यग्रे कथनात् । तादृशान्वयानुभावकत्वाभावः । स च प्रागभावः उच्चारणतो वा अभिप्रायतो वा सहस्थितयत्पदस्थितयद्रूपोपस्थितिविरहप्रयुक्तो भवति तद्रूपं क्रियापदत्वकारक-पदत्वैकविभक्तिकत्वादिकं तद्वत्त्वमित्यर्थः ।

उपस्थितशब्दस्याभिमतान्वयाननुभावकत्वप्रयोजकविरहप्रतियोगिज्ञानविषयीभूतरूपवत् पदा-न्तरसमभिव्याहृतत्वं साकाङ्क्षत्वमिति यावत् ।

उपस्थितिशब्दस्य अभिमतान्वयानुभावकत्वप्रयोजकरूपवदुपस्थितशाब्दान्तरसमभिव्याहृतत्वं तेन साकाङ्क्षमित्यन्वयार्थः ।

तद्यथा 'घटमानये'त्यत्र यस्य घटशब्दस्य यदन्वयाननुभावकत्वं समभिव्याहृतानयेति पदगतक्रियापदत्वविरहप्रयुक्तं घटमानयनमित्यादौ तथा दर्शनात्, तथा च तस्य घटपदस्य तस्मिन्नानयनान्वये तेनानयनपदेन सह तद्रूपं क्रियापदत्वरूपमाकाङ्क्षा ।

तथाऽऽनयेति पदस्य घटान्वयाननुभावकत्वं घटपदगतकर्मकारकत्वविरहप्रयुक्तम् । घटः

आनयेत्यादौ दर्शनात् । एवं च तस्यानयनपदस्य घटान्वये तेन घटपदेन सह कर्मकारकपदत्व-मेवाकाङ्क्षेति ध्येयम् ।

अत्र यस्य शब्दस्य समभिव्याहृतयच्छब्दविरहप्रयुक्तमननुभावकत्वमित्येवोक्तौ असम्भवः स्यात् । घटमानयनमित्यादौ सत्यपि पदान्तरे अन्वयाऽननुभावकत्वसत्वेन तस्य पदान्तर-विरहाप्रयुक्तत्वत् । यत्पदगतयद्रूपेत्युक्तम् ।

घटो भवतीत्यत्रानुच्चारितेनापि समानविभक्तिकेन 'रक्तः' इति पदेन घटपदस्य निराकाङ्क्षत्वैवेति पक्षे घटे रागान्वयाननुभावकताप्रयोजकविरहप्रतियोगिताज्ञानविषयरूपस्य समानविभक्तिकत्वस्य सत्वादतिव्याप्तिनिरासाय **समभिव्याहृतेत्युक्तिः** ।

साकाङ्क्षता तयोरप्यस्तीति मते तु यत्पदगतेत्याद्येव । 'समभिव्याहृत- पदमनादेयमि'त्यग्रे व्यक्तम् ।

'यदन्वयः' इत्युक्तिस्तु 'घटः कर्मत्वम्, आनयनं कृतिरि'ति वाक्ये क्रियाकर्मभावान्वये निराकाङ्क्षेऽभेदान्वये च साकाङ्क्षेऽतिव्याप्त्यव्याप्त्योर्निरासायेत्यग्रे व्यक्तम् ।।

तर्कताण्डवम्- **तच्च रूपं क्रियाकारकभावान्वये क्रियापदत्वादिकम् । सम्बन्धरूपान्वये षष्ठ्यन्तत्वादिकम् ।**

न्यायदीपः- कुत्र किंरूपमित्यतः तद्दर्शयति – **तच्चेति** ।। आदिपदेन कारकपदत्वग्रहः । राज्ञः पुरुष इत्यादावाह – **सम्बन्धेति** ।। प्रथमान्तत्वमादिपदार्थः ।

तर्कताण्डवम्- **अभेदान्वये समानविभक्तिकत्वम् । प्रकृतिप्रत्यया-र्थयोरन्वये प्रकृतित्वादिकम् ।।**

**न्यायदीपः**– रक्तो घट इत्यादावाह – **अभेदेति** ।। लक्षणवाक्ये पदग्रहणं शब्दपरम् इत्युपेत्याह – **प्रकृतीति** ।। घटमित्यादौ घटरूपप्रातिपदिकार्थद्वितीयाविभक्त्यर्थयोरन्वय इत्यर्थः । आदिपदेन द्वितीयत्वादिग्रहः ।

**तर्कताण्डवम्– अत एव 'घटंमानय' इत्यत्र आनयेति क्रियापदं विना घटमिति द्वितीयान्तं कारकपदं क्रियाकर्मभावान्वयान-नुभावकमिति क्रियाकारकभावान्वये तेन साकाङ्क्षम् ।**

**न्यायदीपः**– क्रियापदत्वादिकं तद्रूपमित्युक्तं तत्कथमित्यतः क्वचिद्व्यनक्ति – **अत एवेति** ।। क्रियापदत्वादेरितरपदविरहप्रयुक्तान्वयाननुभावकताप्रयोजकत्वादेवेत्यर्थः । **क्रियापदं विनेति** ।। क्रियापदत्वाश्रयशब्दं विना आनयनमित्यादिपदप्रयोगेऽपीत्यर्थः ।

**क्रियाकारकभावेति** ।। अभेदान्वये तु निराकाङ्क्षत्वात्तदनुभावकताप्रयोजकसमान-विभक्तित्वाभावेऽपि नाव्याप्तिशङ्का । अत एव लक्षणे यदन्वयेत्युक्तमिति भावः ।।

**तर्कताण्डवम्– 'घटः कर्मत्वमानयनं कृतिरिष्टसाधनत्वम्' इत्यादौ घटमानयेत्यनेन सहैकार्थ्ये सत्यपि क्रियाकारकपदत्वाभावान्न तदन्वये घट इत्यादिपदं साकाङ्क्षम् ।**

न्यायदीपः– नन्वथाप्युक्तवाक्यसमानार्थकवाक्यान्तरेऽव्याप्तिरेव । तत्रोक्तान्वयानुभवप्रयो-जकक्रियापदत्वादेरभावादित्यत आह – **घट इति** ।।

आनयेत्यत्र लुप्तविधिप्रत्ययस्याख्यातत्वेन वाच्यार्थोक्तिः कृतिरिति विधित्वेन वाच्यार्थोक्तिरिष्टसाधनत्वमितीष्टसाधनत्वमेव विध्यर्थ इति विधिवादे वक्ष्यमाणत्वात् । **न तदन्वय इति** ।। तथा च अलक्ष्यत्वान्न दोष इति भावः ।।

यद्वा क्रियापदत्वादिकमभिमतान्वयानुभावकताप्रयोजकमित्यन्वयेनोपपाद्य व्यतिरेकमुखेनोपपादयति – घट इति ।।

तर्कताण्डवम्– **अभेदान्वये तु समानविभक्तिकत्वात्साकाङ्क्षम् ।**

न्यायदीपः– अन्वयान्तरे तु लक्ष्यत्वेऽपि प्रयोजकमप्यस्तीति नाव्याप्तिरित्याह – **अभेदेति** ।। एतेन 'यदन्वयः' इत्युक्तः कृत्यं विवृतं ध्येयम् ।

तर्कताण्डवम्– **'गिरिर्भुक्तमग्निमान् देवदत्तेन' इत्यत्र 'भुक्तम्' इत्यस्य क्रियापदस्य आसन्नेनाप्यकारकगिरिपदेन नाकाङ्क्षा । किन्त्वानासन्नेनापि कारकेण देवदत्तेनेति पदेनैवाकाङ्क्षा ।।**

न्यायदीपः– वाक्यान्तरेऽप्यतिव्याप्त्यव्याप्ती आशङ्क्य, यत्रोक्तरूपप्रयोजकं तत्राकाङ्क्षासत्वेन लक्ष्यत्वम्, यत्र तन्नास्ति तत्राकाङ्क्षाऽपि नेत्यलक्ष्यत्वमतो न दोष इत्याह – **गिरिरिति** ।। **क्रियापदस्येति** ।। क्रियावाचिसुबन्तपदस्येत्यर्थः ।

तर्कताण्डवम्– **अत्र च पदशब्देन शब्दमात्रं विवक्षितम् । तेन प्रकृतिप्रत्यययोरन्योन्यं वाक्ययोश्चान्योन्यमाकाङ्क्षायां नाव्याप्तिः ।**

न्यायदीपः– **अत्र चेति** । लक्षणवाक्य इत्यर्थः । **अन्योन्यं वाक्ययोरिति** ।। महावाक्यस्थयोरित्यर्थः । एतेन यत्पदेति पदशब्दोऽपि शब्दपरः । यद्रूपेत्यपि यद्रूपोपस्थितिपरमिति सूचितम् ।।

तर्कताण्डवम्– **एवं पदशब्देन तदुपस्थितिरेव विवक्षिता । तेन पदमात्रस्य स्वत एवान्वयाननुभावकत्वेनानुभावकत्वस्य इतरविरहप्रयुक्तत्वादसम्भव इति शङ्कानवाकाशः ।**

**'द्वारम्' इत्यत्र द्वारशब्दस्य 'पिधेहि'शब्देन सह, 'विश्वजिता यजेत' इत्यत्र 'यजेते'त्यस्य स्वर्गकामशब्देन सोच्चारणनिबन्धनसमभिव्याहाराभावेऽपि मौनिश्लोकादाविवाभिप्रायिकः समभिव्याहारोऽस्तीति नाव्याप्तिः ।**

न्यायदीपः– लौकिकवैदिकवाक्यान्तरेषु पदान्तरसमभिव्याहाररहितेषु साकाङ्क्षेष्वव्याप्तिमाशङ्क्य निराह – **द्वारमित्यत्रेति** ।।

**स्वर्गकामेति** ।। 'सः स्वर्गः सर्वान्प्रत्यविशिष्टत्वात्' इति चतुर्थाध्यायतृतीयपादीयसप्तमाधिकरणे 'विश्वजित' इत्यादौ स्वर्गकामपदाध्याहारस्य सिद्धत्वादिति भावः ।

तर्कताण्डवम्– **'घटो भवती'त्यत्र तु घटपदेन सह 'रक्तः' इति पदस्य समानविभक्तिकत्वेऽपि आभिप्रायकोऽपि समभिव्याहारो नास्तीति नातिव्याप्तिः ।।**

न्यायदीपः– एवं तर्ह्यतिव्याप्तिरित्याशङ्क्य निराह – **घट इति** ।।

**समानेति** ।। अभेदान्वयानुभावकताप्रयोजकरूपवत्त्वेऽपीत्यर्थः । एतेन समभि-व्याहृतेति पदकृत्यं विवृतं ध्येयम् ।

तर्कताण्डवम्– **यद्वा तत्र रक्तपदेनाकाङ्क्षाऽस्त्येव । नहि समभिव्याहारादाकाङ्क्षा । किन्तु साकाङ्क्षाणां समभिव्याहारः । तत्रानाकाङ्क्षत्वव्यवहारस्तु रक्तान्वये तात्पर्याभावात् ।**

न्यायदीपः– समभिव्याहाराभावे कथमाकाङ्क्षेत्यत आह– **न हीति** ।। तथात्वे द्वारमि-

त्यादावाकाङ्क्षाभावप्रसङ्गादिति भावः । **साकाङ्क्षाणामिति** ।। अत एव द्वारमित्यादावध्याहार इति भावः ।

**तत्रेति** ।। रक्तपद इत्यर्थः । अन्वयेन = अन्वितत्वेन ।

तर्कताण्डवम्– **भवनक्रियान्वयेन घटपदस्य रक्तपदे उत्थिताकाङ्क्षाऽभावाच्च ।**

न्यायदीपः– **उत्थितेति** ।। स्वारसिकेत्यर्थः । आकाङ्क्षारूपहेतौ सति कुतो नान्वयधीरित्यत आह – **पटस्येति** ।।

तर्कताण्डवम्– **घटस्य रक्ताभेदाप्रतीतिस्तु रक्तपदानुपस्थितेः । अस्मिंश्च पक्षे आकाङ्क्षालक्षणे समभिव्याहृतविशेषणमनपेक्षितमेव ।।**

न्यायदीपः– **अस्मिंश्च पक्ष इति** ।। रक्तपदेऽस्त्याकाङ्क्षेति पक्ष इत्यर्थः । तस्यापि लक्ष्यत्वेनातिव्याप्तेरभावात् । एवं द्वारमित्यादावव्याप्तिशङ्का नास्तीति भावः ।।

तर्कताण्डवम्– **नन्वेवमितरपदविरहप्रयुक्ताननुभावकताप्रयोजकरूपवत्त्वात्मिका स्वरूपयोग्यता आकाङ्क्षेति पर्यवसितम् । सा च जनितफलेऽप्यस्तीति तत्रातिव्याप्तिः स्यात् । प्रागभावपक्षे तु नायं दोष इति चेन्न । इष्टापत्तेः । जनितफलेऽनाकाङ्क्षत्वव्यवहारस्तु विरक्तं प्रति वाणिज्योपदेश इव श्रोतुरन्वयबोधान्तरस्यानपेक्षिकत्वात् । न तु पदस्य निराकाङ्क्षत्वात् । न च लाक्षणिकादावव्याप्तिः । मन्मते लाक्षणिकगौणयोरप्यनुभावकत्वात् ।।**

न्यायदीपः– 'इतरपदविरहप्रयुक्तानुभवप्रागभाव आकाङ्क्षे'ति मण्युक्तलक्षणाभिमानी शङ्कते

**– नन्वेवमिति** ।। पदान्तरस्य पदान्तरविरहप्रयुक्ताननुभावकतायाः पदान्तरे क्रियापदत्वादि-लक्षणप्रयोजकरूपं यत् तद्वत्वात्मिकेत्यर्थः । जनितान्वयानुभवेऽपि वाक्येऽस्तिक्रियापदत्वा-देस्तदाऽप्यनपायादिति भावः । **अनपेक्षितत्वादिति** ।।

एतेन 'जनितान्वयबोधेनापि द्वितीयान्वयबोधजननापत्तेरि'ति रुचिदत्ताद्युक्तं निरस्तम् । अनपेक्षाया एव प्रतिबन्धकत्वात्, अपेक्षायां त्विष्टापत्तरिति ।।

मणिकृन्मतेऽभिहितदोषो नात्रास्तीत्याह – **नचेति** ।। **मन्मत** इति ।। तत्रोक्तदोषस्तु गौणलक्षणवृत्तिविचारे निरसिष्यत इति भावः ।

तर्कताण्डवम्– **नन्वथापि स्वरूपयोग्यता कारणतैव, न तु कारणम् । तथाचाकाङ्क्षायाः शाब्दबोधहेतुत्वं न स्यादिति चेन्न ।**

न्यायदीपः– **नन्वथापीति** ।। जनितफलेऽतिव्याप्तेरदोषत्वेऽपीत्यर्थः । अत एवेत्येतद् व्यनक्ति – **उक्तयोग्यतेत्यादि** ।।

तर्कताण्डवम्– **उक्ताकाङ्क्षाज्ञानस्यैव हेतुत्वेनेष्टापत्तेः । अत एवोक्त-योग्यताज्ञानस्य शाब्दबोध एव हेतुत्वादेवासाधरण्यम् ।**

**न हि घटादौ कारणताज्ञानं हेतुः । न च शाब्दबोधेऽपि तज्ज्ञान-स्य हेतुत्वे मानाभावः ।**

न्यायदीपः– **नहीति** ।। येनासाधारण्यं न स्यादिति भावः ।।

यत्तु 'आकाङ्क्षाज्ञानस्य हेतुत्वे जनितफलेऽपि वाक्ये परेणेतरविरहप्रयुक्ताननुभावकता-

प्रयोजकरूपवदिति शब्द उद्भावितेऽन्वयबोधापत्तिः' इति । तत्र । प्राचीनान्वयबोधस्यैव प्रतिबन्धकत्वाच्छ्रोतुरनपेक्षितत्वाच्चेति ॥

**मानाभाव इति** ॥ शक्तिस्मरणे सति तज्ज्ञानाभावेनान्वयबोधविलम्बाभावादिति शङ्कितुर्भावः । तदभावेऽस्त्यन्वयबोधविलम्ब इत्याह – **पदशक्तीति** ॥

उक्तं च जयदेवेनापि 'आकाङ्क्षाहेतुत्वे मानाभावेन तज्ज्ञानं कारणम्' इति ॥

तर्कताण्डवम्– **पदशक्तिग्रहरूपपदव्युत्पत्तौ सत्यामपि क्रियापदं विना कारकपदं नान्वयबोधकमिति सामान्यज्ञानरूपवाक्यव्युत्पत्तिं विना वाक्यार्थबोधाभावात् । अन्यथा वाक्यं वाक्याव्युत्पन्नस्याप्यन्वयबोधकं स्यात् ॥**

न्यायदीपः– एतेन 'न हि तस्यापि ज्ञानं हेतुरिति शक्यते वक्तुम् । तत्र मानाभावात्' इति रुचिदत्तोक्तं निरस्तं ध्येयम् । **वाक्याव्युत्पन्नस्येति** ॥ उक्तरूपवाक्यव्युत्पत्तिहीनस्यापीत्यर्थः ॥

तर्कताण्डवम्– **नन्वेवं चेत्, 'अयमेति पुत्रो राज्ञः पुरुषोऽपसार्यताम्' इत्यत्र राजपदे पुत्रपुरुषपदगतरूपविरहप्रयुक्ततत्तदन्वयाननुभावकत्वरूपाकाङ्क्षायाः सत्वादुभयान्वयधीः स्यादिति चेन्न ।**

न्यायदीपः– उक्तलक्षणस्य वाक्यान्तरेऽतिव्याप्तिमाशङ्कते – **नन्वेवमिति** ॥ इतरपदविरहप्रयुक्ताननुभावकताप्रयोजकरूपवत्वमाकाङ्क्षा चेदित्यर्थः । **पुत्रपुरुषपदगतेति** ॥ प्रथमाविभक्त्यन्तत्वलक्षणधर्मेत्यर्थः । रूपशब्दो धर्मपर्यायः । **उभयेति** ॥ नास्ति च पुरुषपदेनाकाङ्क्षा । अतस्तत्रोक्तलक्षणमतिव्याप्तमिति भावः ।

**तर्कताण्डवम्– उभयत्र आकाङ्क्षायाः सत्वेऽपि पुत्रान्वय एव तात्पर्यग्रहे पुरुषान्वयबोधाभावसम्भवात् । उभयत्र तात्पर्यग्रहे चेष्टापत्तेः ।**

न्यायदीपः– लक्ष्यत्वमुपेत्य समाधिमाह – **उभयत्रेति** ।। तात्पर्यग्रहस्य शाब्दबोधे हेतुत्वादन्यत्र तदभावादेवान्वयबोधाभावो न त्वाकाङ्क्षाविरहात्; येनातिव्याप्तिः स्यादिति भावः ।

**तर्कताण्डवम्– अत एव तत्रावृत्तिः कल्प्यते । 'अहो विमलं जलं नद्याः, कच्छे महिषश्चरति' इत्यत्र येन पुंसा 'नद्याः' इत्यादिकमेव श्रुतं तं प्रति नदीपदं जलपदाश्रवणेन कच्छ एव साकाङ्क्षम् ।।**

न्यायदीपः– **आवृत्तिरिति** ।। राजपदस्येत्यर्थः । **कच्छ एवेति** ।। एवञ्च जलस्याश्रवणेनानुपस्थितेस्तत्र षष्ठ्यन्तान्वयप्रयोजकोपस्थितिविषयरूपवत्वाभावात् प्रथमान्तेनापि जलपदेन निराकाङ्क्षतैवेति न तत्राव्याप्तिर्दोषाय । उपस्थितौ तु तत्राकाङ्क्षासत्वेऽपि तात्पर्याग्रहादन्वय- बोधाभावः । तत्रापि तात्पर्यग्रहे तूभयत्रान्वयबोधो नदीपदावृत्तिश्च पूर्ववदिष्टैवेति भावः ।।

**तर्कताण्डवम्–नन्वेवमुदयनादिमते त्वदुक्तरूपग्रहविरहप्रयुक्तः शाब्दानुभवप्रागभाव आकाङ्क्षा । त्वन्मते तु प्रागभावप्रयोजकविरहप्रतियोगिग्रहविषयीभूतं रूपमाकाङ्क्षा । ततः कोऽत्र विशेष इति चेत्, इयानेव विशेषः । त्वन्मते आकाङ्क्षा श्रोतृगता स्यात्, 'प्रागभावज्ञानं शाब्दबोधजनकमि'त्यस्योक्तरीत्या दुर्घटत्वात् शाब्दबोधं प्रत्याकाङ्क्षाज्ञानस्य हेतुत्वं न स्यात्, जनितफलवाक्यस्थपदे विरक्तं**

**वाणिज्योपदेश इव साकाङ्क्षत्वे सत्यपि पुरुषस्यानपेक्षामात्रेण शब्दस्याकाङ्क्षापलापश्च स्यादिति दोषत्रयम् ।**

**मन्मते तु आकाङ्क्षा आसत्तिवच्छब्दगतैव, तज्ज्ञानस्य जनकत्वं च सुघटम्, जनितफलेप्याकाङ्क्षाऽनपलापश्चेति दोषत्रयं नेति । इदं चाकाङ्क्षालक्षणं टीकोक्तजिज्ञासाविषयप्रतिपादकत्वरूपलक्षणाविनाभूतम् ।।**

न्यायदीपः– एवं सर्वत्र लक्ष्येऽलक्ष्ये च स्वोक्ताकाङ्क्षालक्षणस्य भावाभावावुपपाद्य, इदानीं परोक्तलक्षणात्स्वोक्तलक्षणस्यातिशयं शङ्कापूर्वं व्यनक्ति – **नन्विति ।। प्रागभावेति ।।** अन्वयानुभवप्रागभावे प्रयोजकीभूतो यो विरहः तत्प्रतियोगी यो ग्रहः ज्ञानं तद्विषयीभूतं रूपमित्यर्थः ।

यद्रूपविरहेति लक्षणवाक्ये यद्रूपविरहशब्देन यद्रूपोपस्थितिविरहस्याभिमतत्वादिति भावः । **श्रोत्रगतेति** ।। अत एवोदयनलक्षणे श्रोतरीत्युक्तिरिति भावः । **उक्तरीत्येति** ।। तज्ज्ञानस्य कारणत्वे मानाभावादित्यादिनोक्तरीत्येत्यर्थः । **आकाङ्क्षेति** ।। शब्दगतैवेत्यन्वयः । **सुघटमिति** ।। प्रागुक्तवाक्यव्युत्पत्तिरूपप्रमाणभावादिति भावः ।।

नन्विदं मूलग्रन्थे नोपलभ्यत इत्यत आह – **इदं चेति ।। टीकोक्तेति ।।** टीकाकृता पद्धतावुक्तेत्यर्थः । प्रमाणलक्षणटीकायामुक्तेति वाऽर्थः । तदुक्तेरपि पद्धत्युक्त्यैकार्थत्वात् ।।

ननु लक्षणे यस्याननुभावकत्वं यद्रूपविरहप्रयुक्तमिति नञ्द्वयप्रवेशाद्गौरवम् । यस्यानुभावकत्वं यत्पदगतयद्रूपप्रयुक्तमित्येवोक्तौ लाघवम् ।

किञ्चान्वयानुभवप्रागभावस्य विरहप्रयुक्तत्वं च दुर्वचम् । अनादेर्जन्यत्वायोगात् । तद्-

व्याप्यत्वस्यापि भिन्नाधिकरणतया दैशिकस्यायोगात् । कालिकस्य च सङ्केतस्मृतिदशायां सत्यपीतरपदेऽनुभवप्रागभावसम्भवेन व्यभिचारात् ।

**तर्कताण्डवम्– वस्तुतस्तु यत्पदप्रयोज्यजिज्ञासाविषयत्वयोग्यज्ञान-जनकत्वावच्छेदकरूपवत्वं यस्य सह तस्य तद्रूपमेवाकाङ्क्षा ।**

न्यायदीपः– किञ्चैवं सति टीकाकृदुक्तलक्षणमसमञ्जसमित्यपि धीर्मन्दानां प्राप्नोतीत्यत आह – **वस्तुतस्त्विति ।**

**यत्पदप्रयोज्येति** ।। यच्छब्दोपस्थितिजन्येत्यर्थः । पदेति शब्दपरं सत्तदुपस्थितिपरमिति प्रागेवोक्तत्वात् । अन्यथा पूर्वोक्तदोषापत्तिः ।

जिज्ञासा ज्ञानविषयकेच्छा । तद्विषयत्वयोग्यं ज्ञानं तज्जनकतावच्छेदं रूपं क्रिया-पदत्वादिकं पूर्वोक्तमेव ध्येयम् ।।

**तर्कताण्डवम्– भवति हि 'घटमानय' इत्यत्र घटमिति कारक-पदप्रयोज्या या जिज्ञासा तस्य विषयत्वयोग्यं यत्क्रियाज्ञानं तज्जनकं यदानयेति क्रियापदं तन्निष्ठजनकतावच्छेदकं क्रिया-पदत्वमाकाङ्क्षा ।**

न्यायदीपः– लक्षणार्थं विवृण्वन्नेव लक्ष्यनिष्ठतया दर्शयति – **भवति हीति** ।।

**तर्कताण्डवम्– इयं च जिज्ञासायोग्यताऽजिज्ञासितेऽप्यस्तीति न अव्याप्तिः ।।**

न्यायदीपः– **इयं चेति** ।। इयं च जिज्ञासां प्रति योग्यता अजिज्ञासिते जनितफले

जिज्ञासापूर्वभाविन्यपि वाक्य इत्यर्थः । तस्मादव्याप्तिशून्यत्वादित्यर्थः । न च स्वरूपयोग्यताया आकाङ्क्षात्वे शाब्दबोधसाधारण्यं न स्यादिति शङ्क्यम् । उक्तरूपाकाङ्क्षाज्ञानस्यैव हेतुत्वादित्युपपादितत्वादिति भावः ।

तर्कताण्डवम्– **तस्मात्स्वरूपयोग्यतैवाकाङ्क्षा । अत एव पद्धतौ 'आकाङ्क्षा जिज्ञासा चेतनधर्मः । तद्विषयत्वात्पदार्थः साकाङ्क्षाः । तत्प्रतिपादकत्वात् पदानीत्यपि' इत्यत्र प्रतिपादकशब्देन जिज्ञासाविषयज्ञानजनकतावच्छेदकरूपवत्त्वात्मिका जिज्ञासितार्थप्रतिपादनयोग्यतैवाकाङ्क्षा इत्युक्तम् । न तु फलोपाधानम् । अन्वयबोधात्प्रागाकाङ्क्षाभावप्रसङ्गात् ।।**

न्यायदीपः– **अत एवेति** ।। उक्तरूपस्वरूपयोग्यताया आकाङ्क्षात्वादेवेत्यर्थः । **जिज्ञासाविषयज्ञानेति** ।। इच्छाविषज्ञानेत्यर्थः । **इच्छाविषयेति** ।। इच्छाविषयोत्पादकस्यैवेत्यर्थः । **टीकायामिति** ।। प्रमाणलक्षणटीकायामित्यर्थः ।।

।। इत्याकाङ्क्षानिरूपणम् ।।

तर्कताण्डवम्– **प्रमाणलक्षणटीकायामपि 'पूर्वपदजनिताकाङ्क्षापूरकत्वम्' इत्यत्र 'पूरकशब्देनास्मदुक्ता जिज्ञासाविषयत्वयोग्यज्ञानजनकतावच्छेदकरूपवत्त्वात्मिका जिज्ञासापूरकतैवाकाङ्क्षा' इत्युक्तम् । भवति हि जिज्ञासाविषयज्ञानजनको जिज्ञासापूरकः । इच्छाविषसाधकस्यैव लोके इच्छापूरकत्वेन व्यवहारात् ।।**

**यत्तु टीकायां विरक्तं प्रति वाणिज्योपदेशे नैराकाङ्क्ष्यमुक्तं, तदन्वयबोधोपयोगिसाकाङ्क्षत्वे सत्यपि श्रोतृरनपेक्षितत्वमात्रेण ।**

अत एव टीकायामन्वयबोधोपयोग्याकाङ्क्षाभावे 'गौरश्वः पुरुषो हस्ती' इत्यादिकमेवोदाहृतम् ।।

।। इत्याकाङ्क्षानिरूपणम् ।।

# ತರ್ಕತಾಂಡವ

## ದ್ವಿತೀಯಪರಿಚ್ಛೇದ

### ಆಕಾಂಕ್ಷಾ ಪ್ರಕರಣ ॥೧॥

## ವೇದವು ಅಪೌರುಷೇಯವಾದರೆ ಪ್ರಾಮಾಣ್ಯ ಇಲ್ಲದೇ ಇರುವುದು ಹೇಗೆ?

**ತರ್ಕತಾಂಡವ – ಯಚ್ಛೇದಮುಚ್ಯತೇ 'ವೇದಸ್ಯ ಅಪೌರುಷೇಯತ್ವೇ ಆಪ್ತ-ವಾಕ್ಯತ್ವಾದಿರೂಪಸ್ಯ ಪ್ರಮಾಣಶಬ್ದಲಕ್ಷಣಸ್ಯಾಭಾವಾತ್ ಪ್ರಾಮಾಣ್ಯಂ ನ ಸ್ಯಾತ್' ಇತಿ ।**

ಆಕ್ಷೇಪ – 'ವೇದವು ಅಪೌರುಷೇಯ' ಎಂದು ಹಿಂದಿನ ಪ್ರಕರಣದಲ್ಲಿ ಸಮರ್ಥಿಸಲಾಗಿದೆ. ಇದು ಸರಿಯಲ್ಲ. ಒಂದು ವೇಳೆ ವೇದವು ಅಪೌರುಷೇಯವಾದರೆ ಪ್ರಮಾಣಶಬ್ದದ ಲಕ್ಷಣವೇ ವೇದದಲ್ಲಿ ಬರುವುದಿಲ್ಲ. ಆದ್ದರಿಂದ ವೇದವನ್ನು ಪ್ರಮಾಣವೆಂದು ಒಪ್ಪುವುದೇ ಕಷ್ಟವಾಗುತ್ತದೆ. ಏಕೆಂದರೆ ಆಪ್ತವಾಕ್ಯತ್ವವೇ ಮೊದಲಾದ್ದು ಪ್ರಮಾಣದ ಲಕ್ಷಣವಾಗಿದೆ. ವೇದವು ಪೌರುಷೇಯ-ವಾದರೆ ಮಾತ್ರ ಆಪ್ತವಾಕ್ಯತ್ವಾದಿರೂಪವಾದ ಪ್ರಮಾಣದ ಲಕ್ಷಣವು ಸಮನ್ವಯವಾಗುತ್ತದೆ. ಆದರೆ ನೀವು ವೇದವು ಅಪೌರುಷೇಯವೆಂದು ಹೇಳುತ್ತಿದ್ದೀರಿ. ಆದ್ದರಿಂದ ವೇದಕ್ಕೆ ಪ್ರಾಮಾಣ್ಯವೇ ಇಲ್ಲದಿರಬೇಕಾದೀತು?

## ಗ್ರಂಥಮಧ್ಯದಲ್ಲಿ ಮಂಗಳಾಚರಣೆ
## ಲಕ್ಷಣಭರಿತಶಬ್ದಪ್ರತಿಪಾದ್ಯನಿಗೆ ನಮೋ ನಮಃ

**ನ್ಯಾಯದೀಪ –**

**ಯಸ್ಮಿನ್ ವೇದಸ್ಯ ಸರ್ವಸ್ಯಾಪ್ಯಾಕಾಂಕ್ಷಾಯೋಗ್ಯತಾದಯಃ ।**
**ತಂ ವಂದೇ ಪರಮಾನಂದಂ ಇಂದಿರಾಮಂದಿರೋರಸಮ್ ॥**

**ಅನುವಾದ** - ವೇದಲ್ಲಿರುವ ಎಲ್ಲಾ ಪದಗಳು ಆಕಾಂಕ್ಷಾ, ಯೋಗ್ಯತಾ ಮೊದಲಾದ ಶಬ್ದಲಕ್ಷಣಗಳಿಂದ ಯುಕ್ತವಾಗಿವೆ. ಇಂಥ ಪದಗಳಿಂದ ಯಾರು ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೋ; ಪರಮಾನಂದಭರಿತನಾಗಿದ್ದಾನೋ; ಲಕುಮಿಗೆ ಆಲಯವಾದ ವಕ್ಷಃಸ್ಥಳವುಳ್ಳವನಾಗಿದ್ದಾನೋ ಅಂಥ ಮಹಾವಿಷ್ಣುವನ್ನು ಭಕ್ತಿಯಿಂದ ನಮಸ್ಕರಿಸುವೆ.

ವಿಶೇಷವಿಚಾರ - ಗ್ರಂಥಾರಂಭದಲ್ಲಿ, ಗ್ರಂಥದ ಮಧ್ಯದಲ್ಲಿ ಗ್ರಂಥದ ಕೊನೆಯಲ್ಲಿ ಮಂಗಳಾಚರಣೆಯನ್ನು ಆಚರಿಸಬೇಕೆಂಬುದು ಶಿಷ್ಟಾಚಾರಪರಂಪರಾಪ್ರಾಪ್ತವಾದ್ದರಿಂದ ನ್ಯಾಯದೀಪಕಾರರು ದ್ವಿತೀಯಪರಿಚ್ಛೇದಪ್ರಾರಂಭದಲ್ಲಿ (ಗ್ರಂಥಮಧ್ಯದಲ್ಲಿ) ''ಯಸ್ಮಿನ್ ವೇದಸ್ಯ'' ಇತ್ಯಾದಿಯಾಗಿ ಮಂಗಳಾಚರಣೆಯನ್ನು ಮಾಡುತ್ತಿದ್ದಾರೆ. ಕೇವಲ ಮಂಗಳವನ್ನಷ್ಟೇ ಈ ಶ್ಲೋಕದಲ್ಲಿ ಆಚರಣೆ ಮಾಡಿಲ್ಲ. ಸಮಗ್ರ ಈ ಪರಿಚ್ಛೇದದಲ್ಲಿ ಬರುವ ವಿಷಯಸಂಗ್ರಹವನ್ನು ಕೂಡ ಮಾಡಿರುತ್ತಾರೆ.

''ಯಸ್ಮಿನ್ ವೇದಸ್ಯ ಸರ್ವಸ್ಯ ಅಪಿ ಆಕಾಂಕ್ಷಾಯೋಗ್ಯತಾದಯಃ' ಎಂಬುದರಿಂದ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿಗಳಿಂದ ಕೂಡಿರುವ ಪದಗಳ ಸಮೂಹವನ್ನೇ ವಾಕ್ಯವೆಂದು ಪರಿಗಣಿಸಿ, ಅಂತಹ ವಾಕ್ಯಗಳ ಸಮೂಹರೂಪವಾದ ವೇದದಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಹೇಳಿದ್ದರಿಂದ ಆಕಾಂಕ್ಷಾದಿಗಳ ವಿಚಾರವೇ ಈ ದ್ವಿತೀಯಪರಿಚ್ಛೇದದಲ್ಲಿ ಪ್ರಾಪ್ತವಾಗಿದೆಯೆಂದು ತಿಳಿಯಬೇಕು.

## ಅಪೌರುಷೇಯತ್ವದ ಸಿದ್ಧಿಗಾಗಿ ಪ್ರಾಮಾಣ್ಯಸಮರ್ಥನೆ
## ವೇದದಲ್ಲಿ ಪ್ರಮಾಣದ ಲಕ್ಷಣ

**ನ್ಯಾಯದೀಪ – ನನು ವೇದಾಪೌರುಷೇಯತ್ವಸಮರ್ಥನಂ ಪೂರ್ವಪರಿಚ್ಛೇದೇ ಕೃತಮಯುಕ್ತಮ್ । ತಥಾತ್ವೇ ಶಬ್ದಪ್ರಮಾಣಲಕ್ಷಣಾಭಾವೇನ ಪ್ರಮಾಣಶಬ್ದತ್ವಾನಾಪತ್ತೇಃ । ಏವಂ ಚ 'ಆದಿವರ್ಜಿತೈಃ , ಆದರೇಣಾಖ್ಯಾತಃ' ಇತ್ಯುಕ್ತೇಃ ಹರೌ ಶಕ್ತಿತಾತ್ಪರ್ಯೇ ನ ಯುಕ್ತೇ' ಇತಿ ಚೋದ್ಯಮನೂದ್ಯ, ನಿರಾಹ - ಯಚ್ಚೇತಿ ॥**

ಪ್ರಶ್ನೆ - ಪ್ರಥಮಪರಿಚ್ಛೇದದಲ್ಲಿ ವೇದಾಪೌರುಷೇಯತ್ವವನ್ನು ಸಮರ್ಥನೆ ಮಾಡಲಾಯಿತು. ಇದು ಅಯುಕ್ತವಾಗಿದೆ. ವೇದವು ಅಪೌರುಷೇಯವಾದರೆ ಶಬ್ದಪ್ರಮಾಣದ ಲಕ್ಷಣವೇ ವೇದದಲ್ಲಿ ಬರುವುದಿಲ್ಲವಾದ್ದರಿಂದ, ವೇದದಲ್ಲಿರುವ ಶಬ್ದಗಳು ಪ್ರಮಾಣವೇ ಆಗದಿರಬೇಕಾದೀತು. ಆದ್ದರಿಂದ ಗ್ರಂಥಕಾರರು ಪ್ರಾರಂಭದಲ್ಲಿ 'ಆದಿವರ್ಜಿತೈಃ' ಎಂಬ ವಿಶೇಷಣದಿಂದ 'ವೇದವು ಅನಾದಿಯಾಗಿದೆ' ಎಂದು ತಿಳಿಸಿದ್ದಾರೆ. 'ಆದರೇಣ ಆಖ್ಯಾತಃ' ಎಂಬುದರಿಂದ ಶ್ರೀಹರಿಯಲ್ಲಿ ಸಕಲಶಬ್ದಗಳು ಶಕ್ತಿ-ತಾತ್ಪರ್ಯವನ್ನು ಹೊಂದಿವೆಯೆಂದು ತಿಳಿಸಿದ್ದಾರೆ. ಆದರೆ ವೇದವು ಅಪೌರುಷೇಯವಾದರೆ ಪ್ರಾಮಾಣ್ಯವೇ ಕೂಡುವುದಿಲ್ಲ. ಪ್ರಾಮಾಣ್ಯವೇ ಕೂಡದಿದ್ದಾಗ ಶಕ್ತಿತಾತ್ಪರ್ಯದಿಂದ ಪರಮಾತ್ಮನು ಪ್ರತಿಪಾದ್ಯನಾಗಿ-ದ್ದಾನೆಂಬುದು ಕೂಡ ಯುಕ್ತವಾಗುವುದಿಲ್ಲ.

ಈ ಆಕ್ಷೇಪವನ್ನು ಅನುವಾದ ಮಾಡಿ ನಿರಾಕರಣೆ ಮಾಡಲು ''ಯಚ್ಚ'' ಇತ್ಯಾದಿ ಗ್ರಂಥವು ಪ್ರವೃತ್ತ-ವಾಗಿದೆ.

> ಪ್ರಾಸಂಗಿಕವಿಚಾರ - 'ತತ್ವಚಿಂತಾಮಣಿ' ಎಂಬ ತಾರ್ಕಿಕರ ಗ್ರಂಥದ ನಿರಾಕರಣೆಯನ್ನು ಮುಖ್ಯವಾಗಿ ಈ ಗ್ರಂಥದಲ್ಲಿ ಮಾಡುತ್ತಿದ್ದಾರೆ. ತತ್ವಚಿಂತಾಮಣಿ ಗ್ರಂಥದಲ್ಲಿ ಯಾವ ಕ್ರಮವಿದೆಯೋ ಆ ಕ್ರಮವನ್ನೇ ಈ ಗ್ರಂಥದಲ್ಲಿ ಅನುಸರಿಸಿದ್ದಾರೆ. ತತ್ವಚಿಂತಾಮಣಿ ಗ್ರಂಥದಲ್ಲಿ ಪ್ರತ್ಯಕ್ಷಪರಿಚ್ಛೇದವು ಇರುವುದಿಲ್ಲ. ಆದ್ದರಿಂದ ಇಲ್ಲೂ ಪ್ರತ್ಯಕ್ಷ-ಪರಿಚ್ಛೇದವಿಲ್ಲ. ಪ್ರಾರಂಭದಲ್ಲಿ ವೇದಗಳಿಗೆ ಪ್ರಾಮಾಣ್ಯವನ್ನು ಸಮರ್ಥನೆ ಮಾಡುವ ಮೂಲಕ ಅಪೌರುಷೇಯತ್ವವನ್ನು ಸಮರ್ಥನೆ ಮಾಡಿದ್ದಾರೆ. ಈ ಎರಡನೆಯ ಪರಿ-ಚ್ಛೇದವು ಆಗಮಪ್ರಾಮಾಣ್ಯದ ಬಗ್ಗೆ ಹೊರಟಿದೆ. ಕೊನೆಯಲ್ಲಿ ಅನುಮಾನಪ್ರಮಾಣದ ಬಗ್ಗೆ ನಿರೂಪಣೆ ಇರುತ್ತದೆ.

## 'ಆಪ್ತವಾಕ್ಯತ್ವಾದಿ' ಎಂದರೇನು?
## ಆದಿಪದದಿಂದ ಏನು ಸಂಗ್ರಹಿಸಬೇಕು?

**ನ್ಯಾಯದೀಪ – ಆದಿಪದೇನ ಆಪ್ತಿಪೂರ್ವಕಶಬ್ದತ್ವಯಥಾರ್ಥವಾಕ್ಯಾರ್ಥ-ಜ್ಞಾನಜನ್ಯವಾಕ್ಯತ್ವಾದಿ ಗ್ರಹಃ । 'ಪ್ರಮಾಣಭೂತಶಬ್ದಸ್ಯ ಯಲ್ಲಕ್ಷಣಂ ತಸ್ಯ' ಇತ್ಯರ್ಥಃ ॥**

ಗ್ರಂಥದಲ್ಲಿ 'ಆಪ್ತವಾಕ್ಯತ್ವಾದಿರೂಪಸ್ಯ' ಎಂಬಲ್ಲಿ ಆದಿಪದವನ್ನು ಪ್ರಯೋಗಿಸಿದ್ದಾರೆ. ಇದರಿಂದ 'ಆಪ್ತಿಪೂರ್ವಕಶಬ್ದತ್ವ, ಯಥಾರ್ಥವಾಕ್ಯಾರ್ಥಜ್ಞಾನಜನ್ಯವಾಕ್ಯತ್ವ' ಮೊದಲಾದವುಗಳನ್ನು ವಿವಕ್ಷಿಸಬೇಕು.

'ಪ್ರಮಾಣಶಬ್ದಲಕ್ಷಣಸ್ಯ' ಎಂಬ ಪದಕ್ಕೆ ಪ್ರಮಾಣಭೂತವಾದ ಯಾವ ಶಬ್ದವಿದೆಯೋ ಅದರ ಲಕ್ಷಣಕ್ಕೆ ಎಂದರ್ಥ.

ವಿಶೇಷವಿಚಾರ - ಆಪ್ತವಾಕ್ಯತ್ವವನ್ನು ಪ್ರಾಮಾಣ್ಯದ ಲಕ್ಷಣವೆಂಬುದಾಗಿ ಗ್ರಂಥಕಾರರು ಹೇಳಿದ್ದಾರೆ. ಇದನ್ನೇ ಪ್ರಮಾಣಲಕ್ಷಣವೆಂದು ವಿವಕ್ಷಿಸಿದರೆ ಒಬ್ಬ ವ್ಯಕ್ತಿಯು ಯಾವ ವಿಷಯದಲ್ಲಿ ಆಪ್ತನಾಗಿದ್ದಾನೋ ಅವನು ಬೇರೆ ವಿಷಯದಲ್ಲಿ ಆಪ್ತನಾಗಲು ಸಾಧ್ಯವಿಲ್ಲ. ಉದಾ – ವಿರಕ್ತನಾದ ಸನ್ಯಾಸಿಯು ಕಾಮಶಾಸ್ತ್ರದ ವಿಷಯದಲ್ಲಿ ಅನಾಪ್ತನಾಗಿರುತ್ತಾನೆ. ಒಂದು ವೇಳೆ ಆಪ್ತವಾಕ್ಯತ್ವವನ್ನೇ ಪ್ರಮಾಣದ ಲಕ್ಷಣವೆಂದು ಹೇಳುವುದಾದರೆ ವಿರಕ್ತನಾದ ಸನ್ಯಾಸಿಯು ಕೂಡ ಆಪ್ತನಾಗಿರುವುದರಿಂದ ಅವನು ಕಾಮಶಾಸ್ತ್ರದಲ್ಲಿ ಹೇಳಿದ ವಿಷಯಕ್ಕೂ ಆಪ್ತತ್ವವು ಬರಬೇಕಾದೀತು. ಅದಕ್ಕೋಸ್ಕರ ಆಪ್ತಿಪೂರ್ವಕಶಬ್ದತ್ವವನ್ನು ಪ್ರಮಾಣದ ಲಕ್ಷಣವೆಂದು ಪರಿಷ್ಕರಿಸಬೇಕು. ವಿರಕ್ತನಾದ ಸನ್ಯಾಸಿಯು ಹೇಳುವ ಕಾಮಶಾಸ್ತ್ರದ ವಿಷಯವು ಆಪ್ತವಾಕ್ಯವೆನಿಸಿದರೂ ಆಪ್ತಿಪೂರ್ವಕಶಬ್ದತ್ವವು ಅದರಲ್ಲಿ ಇರಲು ಸಾಧ್ಯವಿಲ್ಲ.

ಅಥವಾ ಯಥಾರ್ಥವಾಕ್ಯಜನ್ಯವಾಕ್ಯತ್ವವು ಪ್ರಮಾಣದ ಲಕ್ಷಣವೆಂದು ಹೇಳಬೇಕು. ಯಾವ ವ್ಯಕ್ತಿಯು ಯಾವ ವಾಕ್ಯವನ್ನು ಪ್ರಯೋಗಿಸುತ್ತಾನೋ ಅದು ಅರ್ಥಜ್ಞಾನಪೂರ್ವಕವಾಗಿರಬೇಕು. ಆದ್ದರಿಂದ ಸಂಸ್ಕೃತಭಾಷೆಯನ್ನು ಅರಿಯದ ವ್ಯಕ್ತಿ ಸಂಸ್ಕೃತಭಾಷೆಯನ್ನು ಉಚ್ಚರಿಸಿದರೆ ಅದು ಪ್ರಮಾಣವೆಂದು ಕರೆಸಿಕೊಳ್ಳುವುದಿಲ್ಲ.

## ಪ್ರಾಮಾಣ್ಯ ಎಂದರೆ ಪ್ರಮಾಜನಕ ಎಂದರ್ಥ

**ನ್ಯಾಯದೀಪ – ಪ್ರಾಮಾಣ್ಯಮಿತಿ ॥ 'ಪ್ರಮಾಜನಕತ್ವಮ್' ಇತ್ಯರ್ಥಃ । 'ತಸ್ಯ ಸ್ವತಸ್ತ್ವಸಾಧನಮ್' ಇತಿ ಭಾವಃ ।**

ಗ್ರಂಥದಲ್ಲಿ 'ಪ್ರಾಮಾಣ್ಯಂ ನ ಸ್ಯಾತ್' ಎಂದು ಹೇಳಿದ್ದಾರೆ. 'ಯಥಾರ್ಥಜ್ಞಾನಜನಕತ್ವವು ಇಲ್ಲದಿರಬೇಕಾದೀತು' ಎಂದಿದರ ಅರ್ಥ. ವೇದದಲ್ಲಿ ಪ್ರಮಾಜನಕತ್ವವೇ ಇಲ್ಲದಿದ್ದಾಗ ಸ್ವತಃಪ್ರಮಾಣವಾಗಿದೆಯೆಂದು ಹೇಳುವುದು ದೂರತೋಪಾಸ್ತ ಎಂದಿದರ ಅಭಿಪ್ರಾಯ.

## ‘ಪ್ರಾಮಾಣ್ಯ’ ಎಂದರೆ ‘ಆಪ್ತವಾಕ್ಯತ್ವ’ ಅಲ್ಲವೇ ಅಲ್ಲ

**ತರ್ಕತಾಂಡವ – ತನ್ನ । ಪದ್ಧತೌ ‘ನಿರ್ದೋಷಶಬ್ದತ್ವಂ ನಿರ್ದೋಷವಾಕ್ಯತ್ವಂ ವಾ ಆಗಮಲಕ್ಷಣಮ್’ ಇತ್ಯುಕ್ತತ್ವಾತ್ ।**

ಪರಿಹಾರ. ಈ ಆಕ್ಷೇಪ ತಪ್ಪು. ಆಪ್ತವಾಕ್ಯತ್ವವು ಪ್ರಮಾಣದ ಲಕ್ಷಣವೆಂದು ಒಪ್ಪಿದ್ದರೆ ವೇದಪ್ರಾಮಾಣ್ಯವು ಸಿದ್ಧಿಸುತ್ತಿರಲಿಲ್ಲ. ಆದರೆ ನಾವು ಆಪ್ತವಾಕ್ಯತ್ವವನ್ನು ಪ್ರಮಾಣವೆಂದು ಒಪ್ಪುವುದೇ ಇಲ್ಲ. ಪ್ರಮಾಣಪದ್ಧತಿಯಲ್ಲಿ ‘ನಿರ್ದೋಷಶಬ್ದತ್ವಂ ಪ್ರಾಮಾಣ್ಯಂ’ ಎಂದು, ಅಥವಾ ‘ನಿರ್ದೋಷವಾಕ್ಯತ್ವಂ ಪ್ರಾಮಾಣ್ಯಂ’ ಎಂದು ಹೇಳುತ್ತಾರೆ. ಆದ್ದರಿಂದ ನಿರ್ದೋಷವಾದ ವಾಕ್ಯವಾಗಿದ್ದರೆ ಅದು ಪ್ರಮಾಣವಾಗುವುದರಿಂದ ವೇದವು ಅಪೌರುಷೇಯವಾದರೂ ಕೂಡ ಈ ಲಕ್ಷಣವು ಸಮನ್ವಯವಾಗುವುದರಿಂದ ಪ್ರಮಾಣವಾಗುತ್ತದೆ.

## ಪ್ರಮಾಣಪದ್ಧತಿಯಲ್ಲಿ ಆಗಮದ ಲಕ್ಷಣ

**ನ್ಯಾಯದೀಪ– ಪದ್ಧತಾವಿತಿ ॥ ‘ನಿರ್ದೋಷಃ ಶಬ್ದ ಆಗಮಃ, ನಿರ್ದೋಷಂ ವಾಕ್ಯಮ್’ ಇತಿ ವಾ ಪದ್ಧತಾವಿತ್ಯರ್ಥಃ ।**

ಪ್ರಮಾಣಪದ್ಧತಿಯಲ್ಲಿ ‘ನಿರ್ದೋಷಃ ಶಬ್ದಃ ಆಗಮಃ’ ಎಂಬುದಾಗಿ ಆಗಮದ ಲಕ್ಷಣವನ್ನು ಮೊದಲು ಹೇಳಿ ಕೆಲವು ವಾಕ್ಯಗಳ ಅನಂತರ ‘ನಿರ್ದೋಷಂ ವಾಕ್ಯಂ’ ಎಂಬ ಮತ್ತೊಂದು ಲಕ್ಷಣವನ್ನು ಹೇಳಿದ್ದಾರೆ. ಅದನ್ನು ಗ್ರಂಥಕಾರರು ಪದ್ಧತೌ ಇತ್ಯಾದಿ ವಾಕ್ಯದಿಂದ ಉಲ್ಲೇಖ ಮಾಡಿದ್ದಾರೆ.

## ಪ್ರಮಾಣಲಕ್ಷಣದಲ್ಲಿ ಹೇಳಿದ ಆಗಮಲಕ್ಷಣವೇನು?

**ತರ್ಕತಾಂಡವ – ಅತ್ರಾದ್ಯಂ ‘ನಿರ್ದೋಷಃ ಶಬ್ದ ಆಗಮಃ’ ಇತಿ ಪ್ರಮಾಣಲಕ್ಷಣಾನುಸಾರಿ ।**

‘ನಿರ್ದೋಷಃ ಶಬ್ದಃ ಆಗಮಃ’ ಎಂಬುದು ಪ್ರಮಾಣಲಕ್ಷಣಗ್ರಂಥಕ್ಕೆ ಅನುಸಾರಿಯಾದ ಆಗಮಲಕ್ಷಣವಾಗಿದೆ.

ವಿವರಣೆ - ಬ್ರಹ್ಮತರ್ಕದಲ್ಲಿ 'ನಿರ್ದೋಷಂ ವಾಕ್ಯಂ ಪ್ರಮಾಣಲಕ್ಷಣಮ್' ಎಂದು ಹೇಳಿದ್ದಾರೆ. ಮೇಲೆ ಹೇಳಿದ ಈ ಎರಡು ಲಕ್ಷಣಗಳಲ್ಲಿ ಯಾವುದು ಸರಿ? ಈ ಪ್ರಶ್ನೆಗೆ ಇಲ್ಲಿ ಉತ್ತರಿಸಲಾಗಿದೆ. ಶ್ರೀಮದಾಚಾರ್ಯರ ಎರಡು ಗ್ರಂಥಗಳಲ್ಲಿರುವ ವಾಕ್ಯಗಳ ಪರಸ್ಪರ ವಿರೋಧವನ್ನು ಇಲ್ಲಿ ಪರಿಹರಿಸಲಾಗಿದೆ.

## ಪ್ರಮಾಣದ ಎರಡೂ ಲಕ್ಷಣಗಳಿಗೆ ಆಚಾರ್ಯರ ವಾಕ್ಯವೇ ಆಧಾರ

**ನ್ಯಾಯದೀಪ – ದ್ವಯೋರಪ್ಯುಕ್ತಿಃ ತದ್‌ದ್ವಯತಾತ್ಪರ್ಯವ್ಯಕ್ತ್ಯರ್ಥಾ । ತಥಾ ಚ ಲಕ್ಷಣಾಂತರಸಂಭವಾತ್ ಪ್ರಾಮಾಣ್ಯಂ ವೇದಸ್ಯ ಯುಕ್ತಮಿತಿ ಭಾವಃ । ಏತೇನ ಏವ ಆಗಮಲಕ್ಷಣೋಕ್ತೇರಭಿಪ್ರಾಯಃ ಸ್ಫುಟೀಕೃತೋ ಭವತಿ । ದ್ವಯೋಕ್ತೇರ್ಮೂಲಂ ಭಾವಂ ಚ ವ್ಯನಕ್ತಿ - ಅತ್ರೇತಿ ॥**

ಪ್ರಮಾಣದ ಎರಡೂ ಲಕ್ಷಣಗಳನ್ನು ಹೇಳಲು ಏನು ಕಾರಣ? ಎಂದರೆ ಅತಿವ್ಯಾಪ್ತ್ಯಾದಿ ದೋಷಗಳನ್ನು ಪರಿಹರಿಸುವ ಮೂಲಕ ಎರಡು ಲಕ್ಷಣಗಳ ತಾತ್ಪರ್ಯವನ್ನು ಸ್ಪಷ್ಟಪಡಿಸುವುದೇ ಆಗಿದೆ. ಆದ್ದರಿಂದ ಆಪ್ತವಾಕ್ಯತ್ವವನ್ನು ಪ್ರಮಾಣದ ಲಕ್ಷಣವೆಂದು ತಿಳಿಯಬೇಕಾಗಿಲ್ಲ. ನಿರ್ದೋಷವಾದ ವಾಕ್ಯವೂ ಪ್ರಮಾಣದ ಲಕ್ಷಣವಾಗುವುದರಿಂದ ವೇದಪ್ರಾಮಾಣ್ಯವು ಸಿದ್ಧವಾಗುತ್ತದೆ.

ಹೀಗೆ ಹೇಳಿದ್ದರಿಂದ ಗ್ರಂಥದಲ್ಲಿ ಆಗಮಲಕ್ಷಣವನ್ನು ಹೇಳಿದ್ದರ ಅಭಿಪ್ರಾಯವನ್ನು ಸ್ಪಷ್ಟಪಡಿಸಿದಂತಾಗುತ್ತದೆ. ಗ್ರಂಥದಲ್ಲಿ ಎರಡು ಪ್ರಮಾಣಲಕ್ಷಣಗಳನ್ನು ಹೇಳಿದ್ದಕ್ಕೆ ಆಚಾರ್ಯರ ವಾಕ್ಯವೇ ಆಧಾರವೆಂಬುದನ್ನು, ಹಾಗೂ ಎರಡೂ ಲಕ್ಷಣಗಳ ಅಭಿಪ್ರಾಯವನ್ನು ''ಅತ್ರ'' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

## 'ನಿರ್ದೋಷ' ಎಂಬ ವಿಶೇಷಣವೇ ಸಾಕೇ?

**ತರ್ಕತಾಂಡವ – ನಿಷ್ಪ್ರಯೋಜನತ್ವಾದಿದೋಷನಿರಾಸಾರ್ಥಮಾವಶ್ಯಕೇನ ನಿರ್ದೋಷತ್ವವಿಶೇಷಣೇನೈವ ನಿರಭಿಧೇಯೇ ಅನನ್ವಿತೇ ಚಾಪ್ಯತಿವ್ಯಾಪ್ತಿನಿರಾಸೇನ ವಾಕ್ಯಗ್ರಹಣಸ್ಯಾನಪೇಕ್ಷಿತತ್ವಾತ್ ॥**

'ನಿರ್ದೋಷಃ ಶಬ್ದಃ ಆಗಮಃ' ಎಂಬ ಪ್ರಮಾಣಲಕ್ಷಣಗ್ರಂಥದಲ್ಲಿ ಹೇಳಿದ ಆಗಮಲಕ್ಷಣವನ್ನು ವಿವಕ್ಷಿಸಿದಾಗ 'ವಾಕ್ಯ'ಗ್ರಹಣವು ಅನಾವಶ್ಯಕ. ಅದು ಹೀಗೆ - ನಿಷ್ಪ್ರಯೋಜನತ್ವ ಮೊದಲಾದ ದೋಷಗಳ ಪರಿಹಾರಕ್ಕೋಸ್ಕರ ನಿರ್ದೋಷತ್ವವಿಶೇಷಣವು ಅತ್ಯಂತ ಆವಶ್ಯಕ. ಇದರಿಂದಲೇ ನಿರಭಿಧೇಯವಾದ ಮತ್ತು ಅನನ್ವಿತವಾದ ಸ್ಥಳಗಳಲ್ಲಿ ಅತಿವ್ಯಾಪ್ತಿಯು ಪರಿಹಾರವಾಗುತ್ತದೆ. ಆದ್ದರಿಂದ ಇಲ್ಲಿ ವಾಕ್ಯಗ್ರಹಣವು ಅನಪೇಕ್ಷಿತವಾಗಿದೆ.

ವಿವರಣೆ - ಕೇವಲ 'ಶಬ್ದಃ ಆಗಮಃ' ಎಂದಷ್ಟೇ ಪ್ರಮಾಣಲಕ್ಷಣವನ್ನು ಹೇಳಿದರೆ 'ಕಚಟತಪಾನಾಂ ಗಜಡದಬತ್ವಾತ್' ಎಂಬ ನಿರಭಿಧೇಯವಾಕ್ಯದಲ್ಲಿ ಅತಿವ್ಯಾಪ್ತಿದೋಷ ಬರುತ್ತದೆ. ಏಕೆಂದರೆ ಇದೂ ಕೂಡ ಶಬ್ದರೂಪವಾದ ಆಗಮವಾಗಿದೆ. ಈ ಅತಿ-ವ್ಯಾಪ್ತಿದೋಷದ ಪರಿಹಾರಕ್ಕಾಗಿ 'ಪದಂ' ಎಂದು ಹೇಳಬೇಕು. ಇವುಗಳಿಗೆ ಪದಸಂಜ್ಞೆ ಇರುವುದಿಲ್ಲ. ಏಕೆಂದರೆ ಪ್ರಾತಿಪದಿಕಸಂಜ್ಞೆ ಇದ್ದರೆ ಮಾತ್ರ ಪದಸಂಜ್ಞೆ ಬರುತ್ತದೆ. ಪ್ರಾತಿ-ಪದಿಕಸಂಜ್ಞೆ ಬರಬೇಕಾದರೆ ಅರ್ಥವತ್ತಾಗಿರಬೇಕು. 'ಕಚಟತಪಾನಾಂ ಗಜಡದಬತ್ವಾತ್' ಇತ್ಯಾದಿ ನಿರಭಿಧೇಯವಾದ ಶಬ್ದಗಳಲ್ಲಿ ಅರ್ಥವತ್ವವೇ ಇಲ್ಲದ ಕಾರಣ ಪ್ರಾತಿ-ಪದಿಕಸಂಜ್ಞೆಯು ಇರುವುದಿಲ್ಲ. ಆದ್ದರಿಂದ ಪದಸಂಜ್ಞೆಯೂ ಇರುವುದಿಲ್ಲ. ಕೇವಲ 'ಪದಂ' ಎಂದಿಷ್ಟೇ ಹೇಳಿದರೆ ಅನನ್ವಿತವಾದ 'ಕುಂಡಮಜಾಜಿನಂ ಷಡಪೂಪಾಃ' ಇತ್ಯಾದಿ ಅನನ್ವಿತವಾದ ವಾಕ್ಯದಲ್ಲಿ ಅತಿವ್ಯಾಪ್ತಿದೋಷವು ಬರುತ್ತದೆ. ಏಕೆಂದರೆ ಕುಂಡಮ್, ಅಜಾಜಿನಂ ಮೊದಲಾದವುಗಳಿಗೆ ಅರ್ಥವತ್ವವು ಇರುವುದರಿಂದ ಪ್ರಾತಿಪದಿಕಸಂಜ್ಞೆ ಹಾಗೂ ಪದಸಂಜ್ಞೆಗಳು ಇರುತ್ತವೆ. ಇದರ ಪರಿಹಾರಕ್ಕೋಸ್ಕರ 'ವಾಕ್ಯಮ್' ಎಂದು ಹೇಳಬೇಕು.

'ಆಕಾಂಕ್ಷಾಯೋಗ್ಯತಾಸನ್ನಿಧಿವತಾಂ ಪದಾನಾಮೇವ ವಾಕ್ಯತ್ವಂ' ಎಂಬಂತೆ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಮೊದಲಾದವುಗಳಿಂದ ಕೂಡಿದ ಪದಗಳ ಸಮೂಹವೇ ವಾಕ್ಯ ಎಂದು ಕರೆಸಿಕೊಳ್ಳುತ್ತದೆ. 'ಕುಂಡಮಜಾಜಿನಂ' ಇತ್ಯಾದಿ ಸ್ಥಳಗಳಲ್ಲಿ ಆಕಾಂಕ್ಷಾದಿಗಳಿಂದ ಕೂಡಿದ ಪದಗಳಿಲ್ಲದ ಕಾರಣ ವಾಕ್ಯದ ಲಕ್ಷಣವು ಬರುವುದಿಲ್ಲ.

ಆದರೆ ವಾಕ್ಯಗ್ರಹಣ ಮಾಡಿದರೂ ಕೂಡ ನಿಷ್ಪ್ರಯೋಜಕವಾದ ವಾಕ್ಯಗಳಲ್ಲಿ ಅತಿವ್ಯಾಪ್ತಿ-ದೋಷವು ಬಂದೇ ಬರುತ್ತದೆ. 'ಗುಡೋ ಮಧುರಃ' ಎಂಬುದು ಆಕಾಂಕ್ಷಾದಿಗಳಿಂದ

ಕೂಡಿರುವ ಪದಗಳ ಸಮುದಾಯಾತ್ಮಕವಾದ ವಾಕ್ಯವಾಗಿದೆ. ಆದರೆ ಇದನ್ನು ಆಗಮವೆಂದು ಒಪ್ಪುವುದಿಲ್ಲ. ಏಕೆಂದರೆ ಜ್ಞಾತಜ್ಞಾಪಕತ್ವ ಎಂಬ ದೋಷವು ಇದರಲ್ಲಿದೆ. ಆದ್ದರಿಂದ ಇದು ಆಗಮವಾಕ್ಯವಲ್ಲ. ಆದ್ದರಿಂದ ವಾಕ್ಯಗ್ರಹಣದಿಂದ ನಿರಭಿಧೇಯವಾದ ಹಾಗೂ ಅನನ್ವಿತವಾದ ಸ್ಥಳಗಳಲ್ಲಿ ಅತಿವ್ಯಾಪ್ತಿ ದೋಷವು ಪರಿಹಾರವಾದರೂ ನಿಷ್ಪ್ರಯೋಜಕವಾದ ಜ್ಞಾತಜ್ಞಾಪಕವಾದ ಸ್ಥಳಗಳಲ್ಲಿ ಅತಿವ್ಯಾಪ್ತಿದೋಷವನ್ನು ಪರಿಹಾರ ಮಾಡುವುದಕ್ಕಾಗಿ 'ನಿರ್ದೋಷ' ಎಂಬ ಪದವನ್ನು ಗ್ರಹಣ ಮಾಡಲೇಬೇಕು. ಹೀಗೆ ನಿರ್ದೋಷಪದದ ಗ್ರಹಣವು ಅತ್ಯಾವಶ್ಯಕವಾಗಿದೆ. ಈ ನಿರ್ದೋಷ ಎಂಬ ಪದದಿಂದಲೇ ಎಲ್ಲಾ ದೋಷಗಳು ಪರಿಹಾರವಾಗುತ್ತಿರುವಾಗ ವಾಕ್ಯಗ್ರಹಣವು ಅನಾವಶ್ಯಕ. ಆದ್ದರಿಂದ 'ಆಗಮೋಽದುಷ್ಟವಾಕ್ಯಂ ಚ' ಎಂಬ ಬ್ರಹ್ಮತರ್ಕದ ಮಾತು ತಪ್ಪಾಯಿತಲ್ಲವೇ? ಎಂಬ ಪ್ರಶ್ನೆಗೆ 'ದ್ವಿತೀಯಂ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

## ಬ್ರಹ್ಮತರ್ಕದಲ್ಲಿ ಹೇಳಿದ ಆಗಮದ ಲಕ್ಷಣವೇನು?

**ತರ್ಕತಾಂಡವ – ದ್ವಿತೀಯಂ ತು 'ಆಗಮೋಽದುಷ್ಟವಾಕ್ಯಂ ಚ' ಇತಿ ಬ್ರಹ್ಮತರ್ಕಾನು-ಸಾರಿ । ಅತ್ರ ವಾಕ್ಯಗ್ರಹಣಂ ಶಿಷ್ಯಾಣಾಂ ಪದವಾಕ್ಯಾದಿಸ್ವರೂಪಜ್ಞಾಪನಾರ್ಥಮ್ ।**

ಅನುವಾದ - 'ನಿರ್ದೋಷವಾಕ್ಯತ್ವಂ' ಎಂಬ ಎರಡನೆಯ ಆಗಮಲಕ್ಷಣವು 'ಆಗಮೋಽ-ದುಷ್ಟವಾಕ್ಯಂ ಚ' ಎಂಬ ಬ್ರಹ್ಮತರ್ಕದ ಮಾತಿಗೆ ಅನುಸಾರಿಯಾಗಿದೆ. ವಾಸ್ತವಿಕವಾಗಿ 'ನಿರ್ದೋಷ' ಎಂಬ ಪದದಿಂದಲೇ ಅತಿವ್ಯಾಪ್ತ್ಯಾದಿ ದೋಷಗಳೆಲ್ಲವೂ ಪರಿಹಾರವಾಗುತ್ತವೆ. ಆದರೂ ವಾಕ್ಯಗ್ರಹಣವನ್ನು ಮಾಡಿರುವುದೇಕೆಂದರೆ, ಶಿಷ್ಯರಿಗೆ ಪದವಾಕ್ಯಾದಿಗಳ ಸ್ವರೂಪವನ್ನು ತಿಳಿಸು-ವುದಕ್ಕೋಸ್ಕರ ಹೊರತು ಅತಿವ್ಯಾಪ್ತ್ಯಾದಿಗಳನ್ನು ಪರಿಹಾರ ಮಾಡುವುದಕ್ಕೋಸ್ಕರವಲ್ಲ.

ವಿವರಣೆ - ಪ್ರಶ್ನೆ - ಬ್ರಹ್ಮತರ್ಕದಲ್ಲಿ 'ಆಗಮೋಽದುಷ್ಟವಾಕ್ಯಂ ಚ' ಎಂಬುದಾಗಿ ಪ್ರಮಾಣಲಕ್ಷಣವನ್ನು ಹೇಳಿದ್ದಾರೆ. ಪ್ರಮಾಣಲಕ್ಷಣಗ್ರಂಥದ ಟೀಕೆಯಲ್ಲಿ 'ಶಬ್ದಃ' ಎಂಬ ಪದಕ್ಕೆ 'ಯದ್ವಾ' ಎಂಬ ಪಕ್ಷದಲ್ಲಿ 'ವಾಕ್ಯ' ಎಂಬರ್ಥವನ್ನು ಹೇಳಿದ್ದಾರೆ ಆದ್ದರಿಂದ ವಾಕ್ಯಗ್ರಹಣವು ಅನಾವಶ್ಯಕವೆಂದು ಹೇಗೆ ಹೇಳುತ್ತಿದ್ದೀರಿ.

ಉತ್ತರ - ಹೌದು; ''ನಿರ್ದೋಷಃ'' ಎಂಬ ಪದದಿಂದಲೇ ಎಲ್ಲಾ ದೋಷಗಳು ಪರಿಹಾರವಾಗುತ್ತವೆ. ಆದರೂ ಕೂಡ ವಾಕ್ಯಗ್ರಹಣ ಮಾಡಿರುವುದು ಸ್ವರೂಪಕಥನಕ್ಕೋಸ್ಕರವೆಂದು ತಿಳಿಯಬೇಕು. ಸ್ವರೂಪಕಥನಕ್ಕೂ ಕೂಡ ಪ್ರಯೋಜನವಿದೆ. ಕೇವಲ 'ಶಬ್ದಃ' ಎಂಬುದನ್ನು ಗ್ರಹಣ ಮಾಡಿದರೆ ಯಾವುದೇ ಜಿಜ್ಞಾಸೆಯು ಹುಟ್ಟುವುದಿಲ್ಲ. 'ವಾಕ್ಯಂ' ಎಂಬುದಾಗಿ ಹೇಳಿದಾಗ ಶಿಷ್ಯರಿಗೆ ಪದ ವಾಕ್ಯಗಳ ವಿಭಾಗದ ಅರಿವುಂಟಾಗುತ್ತದೆ. ಆಗ ಆಕಾಂಕ್ಷಾದಿಗಳಿಂದ ಸಹಿತವಾದ ಪದಗಳ ಸಮೂಹವೇ ವಾಕ್ಯ ಎಂದು ತಿಳಿಯುತ್ತದೆ.

## ನಿರ್ದೋಷಪದದಿಂದಲೇ ದೋಷಪರಿಹಾರ ಸಾಧ್ಯ; ಪ್ರಮಾಣಪದ್ಧತಿಯಲ್ಲಿ ಹೇಳಿದ ಲಕ್ಷಣದ ತಾತ್ಪರ್ಯವೇನು?

**ನ್ಯಾಯದೀಪ – ನನು - ಕಥಂ ತರ್ಹಿ ಅಬೋಧಕವಿಪರೀತಬೋಧಕರೂಪವಾಕ್ಯಾಭಾಸೇ ಅತಿವ್ಯಾಪ್ತಿನಿರಾಸಃ । ಪದ್ಧತಾವೇವ 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿಪದಾನಿ ವಾಕ್ಯಮ್' ಇತ್ಯುಕ್ತ್ವಾ, 'ಪದತ್ವೇನಾನಭಿಧೇಯತ್ವಸ್ಯ ಆಕಾಂಕ್ಷಾಸನ್ನಿಧಿಭ್ಯಾಮ್ ಅನ್ವಯಾಭಾವಸ್ಯ ನಿರಾಸಃ' ಇತ್ಯಾದ್ಯುಕ್ತೇಃ? ಇತ್ಯತಃ 'ತದ್ ದ್ವಿತೀಯಲಕ್ಷಣಾಭಿಪ್ರಾಯಮ್' ಇತ್ಯುಪೇತ್ಯ, 'ನಿರಭಿಧೇಯತ್ವೇನ ಅನ್ವಯಾಭಾವೇನ ವಾ ಅಬೋಧಕತ್ವಮ್' ಇತ್ಯಾದಿ ನಿರ್ದೋಷಪದಕೃತ್ಯೋಕ್ತಿಪರಪದ್ಧತ್ಯುಕ್ತಿಂ ಹೃದಿ ಕೃತ್ವಾ ತಾತ್ಪರ್ಯಮಾಹ - ನಿಷ್ಪ್ರಯೋಜನತ್ವೇತಿ ॥**

ಅನುವಾದ ಪ್ರಶ್ನೆ - 'ನಿರ್ದೋಷಃ ಶಬ್ದಃ ಆಗಮಃ' ಎಂಬುದಾಗಿ ಆಗಮ ಲಕ್ಷಣವನ್ನು ಹೇಳಿದರೆ ಅಬೋಧಕವಾದ ಹಾಗೂ ವಿಪರೀತಬೋಧಕವಾದ ವಾಕ್ಯಾಭಾಸಗಳಲ್ಲಿ ಅತಿವ್ಯಾಪ್ತಿಯು ಹೇಗೆ ತಾನೆ ಪರಿಹಾರವಾಗಲು ಸಾಧ್ಯ? ಏಕೆಂದರೆ ಪ್ರಮಾಣಪದ್ಧತಿಯಲ್ಲಿ 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಮ್' 'ಆಕಾಂಕ್ಷಾ, ಯೋಗ್ಯತಾ, ಸನ್ನಿಧಿಗಳಿರುವ ಪದಗಳ ಸಮೂಹವೇ ವಾಕ್ಯವೆಂದು ಕರೆಸಿಕೊಳ್ಳುತ್ತದೆ ಎಂಬುದಾಗಿ ವಾಕ್ಯದ ಲಕ್ಷಣವನ್ನು ಹೇಳಿದ್ದಾರೆ. ಈ ವಾಕ್ಯಲಕ್ಷಣದಲ್ಲಿ ಪದ ಎಂಬ ಶಬ್ದಗ್ರಹಣದಿಂದ ಅಭಿಧೇಯತ್ವವು ತಿಳಿಯುತ್ತಿದೆ. ಆಕಾಂಕ್ಷಾ ಹಾಗೂ ಸನ್ನಿಧಿ ಎಂಬ ಶಬ್ದಗಳಿಂದ ಅನ್ವಯಾಭಾವವು ನಿರಾಸವಾಗುತ್ತದೆ. ಆದ್ದರಿಂದ ಪದಗ್ರಹಣದಿಂದ ನಿರಭಿಧೇಯವಾದ ಶಬ್ದಗಳಲ್ಲಿ ಅತಿವ್ಯಾಪ್ತಿಯು ಪರಿಹಾರವಾಗುತ್ತದೆ. ಆಕಾಂಕ್ಷಾ ಹಾಗೂ ಸನ್ನಿಧಿ ಎಂಬ ಪದಗಳಿಂದ ನಿರನ್ವಯಕವಾದ

ಶಬ್ದಗಳಲ್ಲಿ ಅತಿವ್ಯಾಪ್ತಿಯು ಪರಿಹಾರವಾಗುತ್ತದೆ. ನೀವು 'ವಾಕ್ಯ' ಎಂಬ ಪದವನ್ನೇ ಹೇಳದಿದ್ದರೆ ಈ ಸ್ಥಳಗಳಲ್ಲಿ ಅತಿವ್ಯಾಪ್ತಿಯನ್ನು ಹೇಗೆ ಪರಿಹರಿಸುತ್ತೀರಿ?

ಉತ್ತರ - ಈ ಆಕ್ಷೇಪ ಸರಿಯಲ್ಲ. ಏಕೆಂದರೆ, 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಂ' ಎಂದು ಪ್ರಮಾಣಪದ್ಧತಿಯಲ್ಲಿ ಹೇಳಿದ್ದು ಎರಡನೆಯ ಆಗಮಲಕ್ಷಣವೆಂಬ ದೃಷ್ಟಿಯಿಂದ ಮಾತ್ರ. 'ನಿರ್ದೋಷಃ ಶಬ್ದಃ ಆಗಮಃ' ಎಂಬ ಮೊದಲನೆಯ ಲಕ್ಷಣವನ್ನು ವಿವಕ್ಷಿಸಿದಾಗ ನಿರ್ದೋಷ ಪದದಿಂದಲೇ ನಿರಭಿಧೇಯವಾದ, ನಿರನ್ವಯಕವಾದ ಸ್ಥಳಗಳಲ್ಲಿ ಅತಿವ್ಯಾಪ್ತಿ ಪರಿಹಾರವಾಗುತ್ತದೆ. ಇದನ್ನು ಕೂಡ ''ನಿರಭಿಧೇಯತ್ವೇನಾನ್ವಯಾಭಾವೇನ ವಾ ಅಬೋಧಕತ್ವಂ'' ಇತ್ಯಾದಿಯಾಗಿ ಪ್ರಮಾಣಪದ್ಧತಿಯಲ್ಲಿ ತಿಳಿಸಿದ್ದಾರೆ. ಈ ಅಭಿಪ್ರಾಯವನ್ನೇ ಹೃದಯದಲ್ಲಿಟ್ಟುಕೊಂಡು ''ನಿಷ್ಪ್ರಯೋಜನತ್ವ'' ಇತ್ಯಾದಿ ವಾಕ್ಯ ಹೊರಟಿದೆ.

ವಿಶೇಷವಿಚಾರ -

ಪ್ರಶ್ನೆ - 'ನಿರ್ದೋಷಃ ಶಬ್ದಃ ಆಗಮಃ' ಎಂಬುದು ಪ್ರಮಾಣಲಕ್ಷಣಗ್ರಂಥದಲ್ಲಿ ಹೇಳಿದ ಆಗಮದ ಲಕ್ಷಣ. ಒಂದು ವೇಳೆ 'ಶಬ್ದಃ' ಎಂಬ ಪದವನ್ನು ಹೇಳುವ ಬದಲು 'ವಾಕ್ಯಮ್' ಎಂದು ಹೇಳಿದ್ದಲ್ಲಿ, ಅಬೋಧಕವಾದ ಹಾಗೂ ವಿಪರೀತಬೋಧಕವಾದ ಸ್ಥಳಗಳಲ್ಲಿ ಅತಿವ್ಯಾಪ್ತಿ ದೋಷವು ಪರಿಹಾರವಾಗುತ್ತಿತ್ತು. ಆದರೆ ನೀವು 'ವಾಕ್ಯಂ' ಎಂದು ಹೇಳದೇ 'ಶಬ್ದಃ' ಎಂದು ಹೇಳುತ್ತಿರುವಿರಿ. ಇದರಿಂದ ಅಬೋಧಕವಾದ ಹಾಗೂ ವಿಪರೀತ-ಬೋಧಕವಾದ ಸ್ಥಳಗಳಲ್ಲಿ ಅತಿವ್ಯಾಪ್ತಿದೋಷವು ಹೇಗೆ ಪರಿಹಾರವಾಗುತ್ತದೆ?

ಉತ್ತರ - ''ಅಬೋಧಕವಾಕ್ಯ'' ಎಂದರೆ 'ಕಚಟತಪಾನಾಂ ಗಜಡದಬತ್ವಾತ್' ಎಂಬುದು. ವಿಪರೀತಬೋಧಕವಾಕ್ಯ ಎಂದರೆ 'ನದೀತೀರೇ ಪಂಚಫಲಾನಿ ಸಂತಿ' ಎಂಬ ಪ್ರತಾರಕನ ವಾಕ್ಯ.

'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಂ' ಎಂಬುದು ವಾಕ್ಯದ ಲಕ್ಷಣ. 'ಪದ' ಎಂಬ ಶಬ್ದದಿಂದ ನಿರಭಿಧೇಯವೆನಿಸಿದ ಅಬೋಧಕವಾಕ್ಯಗಳಲ್ಲಿ ಅತಿವ್ಯಾಪ್ತಿಯು ಪರಿಹಾರವಾಗುತ್ತದೆ. ಏಕೆಂದರೆ, 'ವಿಭಕ್ತ್ಯಂತಾಃ ವರ್ಣಾಃ ಪದಂ' 'ವಿಭಕ್ತ್ಯಂತವಾದ ವರ್ಣಗಳೇ ಪದ' ಎಂದು ಕರೆಸಿಕೊಳ್ಳುತ್ತವೆ. ವಿಭಕ್ತಿಯು ಬರಬೇಕೆಂದರೆ ಅರ್ಥವತ್ತಾಗಿ-

ರಬೇಕು. 'ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಂ' ಎಂಬ ಸೂತ್ರವು ಅರ್ಥವತ್ತಾದ ಪದಗಳಿಗೆ ಮಾತ್ರ ಪ್ರಾತಿಪದಿಕಸಂಜ್ಞೆಯನ್ನು ಹೇಳಿದೆ. ಪ್ರಾತಿಪದಿಕಸಂಜ್ಞೆಯು ಬಂದ ಅನಂತರ 'ಸುಪ್ತಿಙಂತಂ ಪದಂ' ಎಂಬ ಸೂತ್ರವು ಸುಬಂತವಾದ ಹಾಗೂ ತಿಙಂತವಾದ ಪ್ರಾತಿಪದಿಕಗಳಿಗೆ ಪದಸಂಜ್ಞೆಯನ್ನು ಹೇಳುತ್ತದೆ. 'ಕಚಟತಪಾನಾಂ' ಇತ್ಯಾದಿ ಪದಗಳಿಗೆ ಅರ್ಥವೇ ಇಲ್ಲದ ಕಾರಣ ಪ್ರಾತಿಪದಿಕಸಂಜ್ಞೆಯನ್ನು 'ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಂ' ಎಂಬ ಸೂತ್ರದಿಂದ ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ 'ಸುಪ್ತಿಙಂತಂ ಪದಂ' ಎಂಬ ಸೂತ್ರವೂ ಕೂಡ ಪದಸಂಜ್ಞೆಯನ್ನು ವಿಧಾನ ಮಾಡಲು ಸಾಧ್ಯವಿಲ್ಲ. ಹೀಗೆ 'ಪದ' ಎಂಬ ಶಬ್ದದ ಗ್ರಹಣದಿಂದಲೇ ಅಬೋಧಕವಾದ ಸ್ಥಳದಲ್ಲಿ ಅತಿವ್ಯಾಪ್ತಿಯು ಪರಿಹಾರವಾಗುತ್ತದೆ.

''ಆಕಾಂಕ್ಷೆ ಇರಬೇಕು'' ಹಾಗೂ 'ಸಾನ್ನಿಧ್ಯ ಇರಬೇಕು' ಎಂದು ಹೇಳಿದ್ದರಿಂದ ಆಕಾಂಕ್ಷೆಯಿಲ್ಲದ ವಾಕ್ಯದಲ್ಲಿ ಅತಿವ್ಯಾಪ್ತಿಯು ಪರಿಹಾರವಾಗುತ್ತದೆ. 'ಕುಂಡಮಜಾಜಿನಂ ದಶ ದಾಡಿಮಾನಿ ಷಡಪೂಪಾಃ' ಎಂಬ ವಾಕ್ಯದಲ್ಲಿ ಅನ್ವಯವಿಲ್ಲದ ಕಾರಣ ಆಕಾಂಕ್ಷೆಯು ಕೂಡ ಹುಟ್ಟುವುದಿಲ್ಲ. ಇದರಂತೆ 'ಗಾಂ' ಎಂದು ಇವತ್ತು ಉಚ್ಚಾರಣೆ ಮಾಡಿ 'ಆನಯ' ಎಂಬುದನ್ನು ನಾಳೆಯ ದಿವಸ ಉಚ್ಚಾರಣೆ ಮಾಡಿದರೆ ಈ ಎರಡು ಪದಗಳಲ್ಲಿ ಸಾನ್ನಿಧ್ಯವು ಇರುವುದಿಲ್ಲ. 'ಅವಿಲಂಬೇನ ಉಚ್ಚಾರಣರೂಪವಾದ ಸನ್ನಿಧಿಯು ಇರುವುದಿಲ್ಲ.ಇಂತಹ ಸಂದರ್ಭದಲ್ಲಿ ಅನ್ವಯಪ್ರತೀತಿಯು ಬರುವುದಿಲ್ಲ.

ಈ ಎರಡು ಸ್ಥಳಗಳಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸಬೇಕೆಂದರೆ ಆಕಾಂಕ್ಷೆ ಹಾಗೂ ಸಾನ್ನಿಧ್ಯ ಇರಬೇಕು ಎಂದು ವಾಕ್ಯಲಕ್ಷಣದಲ್ಲಿ ಹೇಳಬೇಕಾಗುತ್ತದೆ.

ಯೋಗ್ಯತಾ ಇರಬೇಕು ಎಂದು ಹೇಳಿದ್ದರಿಂದ 'ವಹ್ನಿನಾ ಸಿಂಚತಿ' ಎಂಬ ಸ್ಥಳದಲ್ಲಿ ಅತಿ-ವ್ಯಾಪ್ತಿಯನ್ನು ಪರಿಹರಿಸಿದಂತಾಗುತ್ತದೆ. ಏಕೆಂದರೆ ಈ ವಾಕ್ಯದಲ್ಲಿ ವಹ್ನಿಯಲ್ಲಿ ಸೇಚನ-ಕರಣತ್ವವು ಅಯುಕ್ತವಾದ್ದರಿಂದ ಈ ವಾಕ್ಯದಲ್ಲಿ ಯೋಗ್ಯತೆಯೇ ಇರುವುದಿಲ್ಲ.

ಆದ್ದರಿಂದ 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿಪದಾನಿ ವಾಕ್ಯಮ್' ಎಂಬುದಾಗಿ ವಾಕ್ಯ-ಲಕ್ಷಣದಲ್ಲಿ 'ಪದ' ಎಂಬ ಶಬ್ದದಿಂದ ನಿರಭಿಧೇಯವಾದ ಶಬ್ದದಲ್ಲಿ, ಆಕಾಂಕ್ಷಾ ಮತ್ತು ಸನ್ನಿಧಿ ಎಂಬ ಪದಗಳಿಂದ ನಿರನ್ವಯಶಬ್ದದಲ್ಲಿ, ಯೋಗ್ಯತಾ ಎಂಬ ಪದದಿಂದ ನಿರನು-ಯೋಜ್ಯವಾದ ಸ್ಥಳದಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸಿದಂತಾಗುತ್ತದೆ.

ಹೀಗೆ 'ವಾಕ್ಯ' ಎಂಬ ಶಬ್ದಗ್ರಹಣದಿಂದ ಈ ಎಲ್ಲಾ ಸ್ಥಳಗಳಲ್ಲಿಯೂ ಅತಿವ್ಯಾಪ್ತಿಯು ಸುಲಭವಾಗಿ ಪರಿಹಾರವಾಗುತ್ತದೆ. ನೀವು ಆಗಮದ ಲಕ್ಷಣದಲ್ಲಿ ವಾಕ್ಯ ಎಂಬ ಪದವನ್ನೇ ಉಪಯೋಗ ಮಾಡದಿದ್ದರೆ ಅತಿವ್ಯಾಪ್ತಿದೋಷವು ಪರಿಹಾರವಾಗುವುದಿಲ್ಲ.

ಈ ಆಕ್ಷೇಪ ತಪ್ಪು. ಏಕೆಂದರೆ, ಶ್ರೀಮಟ್ಟೀಕಾಕೃತ್ಪಾದರು 'ನಿರ್ದೋಷಂ ವಾಕ್ಯಂ ಆಗಮಃ' ಎಂಬ ಎರಡನೆಯ ಲಕ್ಷಣದಲ್ಲಿ ವಾಕ್ಯಗ್ರಹಣವು ಇರುವುದರಿಂದ ಮೇಲಿನ ದೋಷ-ಗಳೆಲ್ಲವೂ ಪರಿಹಾರವಾಗುತ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ. 'ನಿರ್ದೋಷಃ ಶಬ್ದಃ ಆಗಮಃ' ಎಂಬ ಮತ್ತೊಂದು ಲಕ್ಷಣವನ್ನು ವಿವಕ್ಷಿಸಿದಾಗ 'ನಿರ್ದೋಷ' ಎಂಬ ಪದ-ದಿಂದಲೇ ಮೇಲಿನ ಅತಿವ್ಯಾಪ್ತಿ ದೋಷಗಳು ಪರಿಹಾರವಾಗುತ್ತವೆ. ಈ ಅಭಿಪ್ರಾಯ-ದಿಂದ ಶ್ರೀಮಟ್ಟೀಕಾಕೃತ್ಪಾದರು ಎರಡೂ ಬಗೆಯ ಲಕ್ಷಣಗಳನ್ನು ವ್ಯಾಖ್ಯಾನ ಮಾಡಿದ್ದಾರೆ.

## ಬ್ರಹ್ಮತರ್ಕದಲ್ಲಿ ಪ್ರಮಾಣಲಕ್ಷಣ; ನಿರ್ದೋಷಪದದಿಂದ ವ್ಯಾವರ್ತ್ಯವಾದದ್ದು ಯಾವುದು?

**ನ್ಯಾಯದೀಪ – ಬ್ರಹ್ಮತರ್ಕೇತಿ ॥ 'ತತ್ವನಿರ್ಣಯೋಕ್ತಬ್ರಹ್ಮತರ್ಕೇ' ಇತ್ಯರ್ಥಃ । ನನ್ವೇವಮುಕ್ತದಿಶಾ 'ಶಬ್ದಃ' ಇತ್ಯೇವ ಪೂರ್ತೌ 'ವಾಕ್ಯಮ್' ಇತಿ ವ್ಯರ್ಥಮ್, ಅತ ಆಹ – ಅತ್ರ ವಾಕ್ಯೇತಿ ॥ ಅಸ್ಮಿನ್ ಪಕ್ಷೇ ನಿರ್ದೋಷಪದಂ ಪದ್ಧತ್ಯುಕ್ತವಾಕ್ಯಪದ-ವ್ಯಾವರ್ತ್ಯಾನ್ಯದೋಷವ್ಯಾವೃತ್ತ್ಯರ್ಥಮಿತಿ ಭಾವಃ ।**

ಅನುವಾದ - ಗ್ರಂಥದಲ್ಲಿ 'ಬ್ರಹ್ಮತರ್ಕ' ಎಂದಿದ್ದಾರೆ. 'ವಿಷ್ಣುತತ್ವನಿರ್ಣಯಗ್ರಂಥದಲ್ಲಿ ಉದಾಹ-ರಿಸಿದ ಬ್ರಹ್ಮತರ್ಕದಲ್ಲಿ' ಎಂದು ಇದರ ಅರ್ಥ.

ಈ ಹಿಂದೆ ಹೇಳಿದಂತೆ 'ಶಬ್ದಃ' ಎಂದಷ್ಟೇ ಸಾಕು 'ವಾಕ್ಯ' ಎಂಬ ಪದವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ''ಅತ್ರ ವಾಕ್ಯ'' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಈ ಪಕ್ಷದಲ್ಲಿ ನಿರ್ದೋಷಪದಕ್ಕೆ ಪ್ರಮಾಣಪದ್ಧತಿಯಲ್ಲಿ ಹೇಳಿದ 'ವಾಕ್ಯ'ಪದದಿಂದ ವ್ಯಾವರ್ತ್ಯವಾದ ದೋಷಗಳಿಗಿಂತ ಬೇರೆಯಾದ ದೋಷಗಳ ವ್ಯಾವೃತ್ತಿ ಎಂಬ ಪ್ರಯೋಜನವನ್ನು ವಿವಕ್ಷಿಸಬೇಕು.

ವಿವರಣೆ - 'ನಿರ್ದೋಷಂ ವಾಕ್ಯಂ ಆಗಮಃ' ಎಂಬ ಬ್ರಹ್ಮತರ್ಕದಲ್ಲಿ ಪ್ರಮಾಣಲಕ್ಷಣ-ವನ್ನು ಹೇಳಲಾಗಿದೆ. ಇಲ್ಲಿರುವ ನಿರ್ದೋಷಪದದಿಂದಲೇ ಎಲ್ಲಾ ದೋಷಗಳೂ ಪರಿ-ಹಾರವಾಗುತ್ತಿರುವಾಗ ವಾಕ್ಯಪದವು ವ್ಯರ್ಥವೆಂದು ಶಂಕಿಸಬಾರದು. ನಿರ್ದೋಷಪದ-ದಿಂದ ಪ್ರಮಾಣಪದ್ಧತಿಯಲ್ಲಿ ಹೇಳಿದ ಅತಿವ್ಯಾಪ್ತಿದೋಷಗಳನ್ನು ಪರಿಹಾರಮಾಡಿ, ಉಳಿದ ದೋಷಗಳ ಪರಿಹಾರಕ್ಕಾಗಿ ವಾಕ್ಯಪದದ ಸಾರ್ಥಕ್ಯವನ್ನು ವಿವಕ್ಷಿಸಬೇಕು. ನಿರಭಿಧೇಯವಾದ ನಿರನ್ವಯವಾದ ಹಾಗೂ ವಿಪರೀತಬೋಧಕವಾದ ವಾಕ್ಯಗಳಲ್ಲಿ ಅತಿವ್ಯಾಪ್ತಿಯ ಪರಿಹಾರಕ್ಕಾಗಿ ನಿರ್ದೋಷಪದವು ಸಾರ್ಥಕವಾಗುತ್ತದೆ. ಜ್ಞಾತಜ್ಞಾಪಕ-ವಾದ ನಿಷ್ಪ್ರಯೋಜನಕವಾದ ವಾಕ್ಯಗಳಲ್ಲಿ ಅತಿವ್ಯಾಪ್ತಿಯನ್ನು ಪರಿಹಾರ ಮಾಡುವುದಕ್ಕಾಗಿ ವಾಕ್ಯ ಎಂಬ ಪದವು ಸಾರ್ಥಕವಾಗುತ್ತದೆ.

ದೋಷಗಳು ಎರಡು ವಿಧ. ಕೆಲವು ಯಾಥಾರ್ಥ್ಯಕ್ಕೆ ಹಾನಿಕರ. ಕೆಲವು ಆಗಮತ್ವಕ್ಕೆ ಹಾನಿಕರ. 'ಗುಡೋ ಮಧುರಃ' ಎಂಬಲ್ಲಿ ಜ್ಞಾತಜ್ಞಾಪಕತ್ವವಿದೆ. ಇದು ಆಗಮತ್ವಕ್ಕೆ ಹಾನಿಕರ; ಹೊರತು ಯಾಥಾರ್ಥ್ಯಕ್ಕೆ ಹಾನಿಕರವಲ್ಲ. ನಿರಭಿಧೇಯತ್ವ, ಅನ್ವಯಾಭಾವ ಹಾಗೂ ವಿಪರೀತಬೋಧಕತ್ವಗಳು ಪ್ರಾಮಾಣ್ಯಕ್ಕೆ ಹಾನಿಕರವಾಗಿವೆ. ಪ್ರಾಮಾಣ್ಯಕ್ಕೆ ಹಾನಿಕರವಾದ ದೋಷಗಳನ್ನು 'ವಾಕ್ಯ' ಎಂಬ ಪದದಿಂದ ವ್ಯಾವೃತ್ತಿ ಮಾಡಬೇಕು. ಆಗಮತ್ವಕ್ಕೆ ಹಾನಿಕರವಾದ ದೋಷಗಳನ್ನು 'ನಿರ್ದೋಷ' ಎಂಬ ವಿಶೇಷಣದಿಂದ ವ್ಯಾವೃತ್ತಿ ಮಾಡಬೇಕು.

## ಪ್ರಮಾಣಲಕ್ಷಣಟೀಕೆಯಲ್ಲಿ ಏನು ಹೇಳಿದ್ದಾರೆ?

**ತರ್ಕತಾಂಡವ – ಅತ ಏವ ಪದ್ಧತೌ 'ದ್ವಿತೀಯಪಕ್ಷೇ ವಿಭಕ್ತ್ಯಂತಾ ವರ್ಣಾಃ ಪದಂ, ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾ ವಾಕ್ಯಮ್' ಇತ್ಯಾದಿನಾ ಪದಾ-ದೀನಾಂ ಲಕ್ಷಣಮುಕ್ತಮ್ । ಅತ ಏವ ಪ್ರಮಾಣಲಕ್ಷಣಟೀಕಾಯಾಂ 'ಮೂಲಸ್ಥಂ ಶಬ್ದಪದಂ ವಾಕ್ಯಪರಮ್' ಇತ್ಯುಕ್ತಮ್ ।**

ಅನುವಾದ– ಪದವಾಕ್ಯಾದಿಗಳ ಸ್ವರೂಪವನ್ನು ತಿಳಿಸುವ ಉದ್ದೇಶಕ್ಕೋಸ್ಕರ ವಾಕ್ಯಗ್ರಹಣವನ್ನು ಮಾಡಿದ್ದರಿಂದಲೇ ಪ್ರಮಾಣಪದ್ಧತಿಗ್ರಂಥದಲ್ಲಿ ಹೀಗೆ ಹೇಳಿದ್ದಾರೆ. ''ದ್ವಿತೀಯಪಕ್ಷೇ ವಿಭಕ್ತ್ಯಂತಾ

ವರ್ಣಾಃ ಪದಂ, ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾ ವಾಕ್ಯಮ್' - 'ಎರಡನೆಯ ಪಕ್ಷದಲ್ಲಿ ವಿಭಕ್ತ್ಯಂತವಾದ ವರ್ಣಗಳೇ ಪದವೆಂದು ತಿಳಿಯಬೇಕು; ಆಕಾಂಕ್ಷಾಯೋಗ್ಯತಾಸನ್ನಿಧಿ ಗಳಿಂದ ಕೂಡಿರುವ ಪದಗಳೇ ವಾಕ್ಯವೆಂದು ಕರೆಸಿಕೊಳ್ಳುತ್ತದೆ' ಇತ್ಯಾದಿಯಾಗಿ ಪದ ಮೊದಲಾದವುಗಳ ಲಕ್ಷಣವನ್ನು ಹೇಳಿದ್ದಾರೆ. ಆದ್ದರಿಂದಲೇ ಪ್ರಮಾಣಲಕ್ಷಣದ ಟೀಕೆಯಲ್ಲಿಯೂ ಕೂಡ 'ಮೂಲಸ್ಥಶಬ್ದಪದಂ ವಾಕ್ಯಮ್' ಮೂಲದಲ್ಲಿರುವ ಶಬ್ದಪದಕ್ಕೆ ವಾಕ್ಯ ಎಂದು ಹೇಳಿದ್ದಾರೆ. ಇದರಿಂದ ವಾಕ್ಯಗ್ರಹಣದಿಂದ ಪದ ಮೊದಲಾದವುಗಳ ಸ್ವರೂಪವನ್ನು ತಿಳಿಸುವುದೇ ಇದರ ಉದ್ದೇಶವೆಂದು ಸ್ಪಷ್ಟವಾಗುತ್ತದೆ.

## 'ಪದ' ಎಂದರೇನು?; ವಿಭಕ್ತಿ ಸಂಜ್ಞೆ ಯಾವುಗಳಿಗೆ ಇದೆ?

**ನ್ಯಾಯದೀಪ– ವಿಭಕ್ತ್ಯಂತಾ ಇತಿ ॥ 'ಸುಪ್ ತಿಙ್‌ರೂಪವಿಭಕ್ತ್ಯಂತಾ' ಇತ್ಯರ್ಥಃ । 'ವಿಭಕ್ತಿಶ್ಚ' ಇತಿ ಸೂತ್ರೇ ಸುಪ್‌ತಿಙೋರುಭಯೋರಪಿ ವಿಭಕ್ತಿ-ಸಂಜ್ಞೋಕ್ತೇಃ । 'ಸುಪ್‌ತಿಙಂತಂ ಪದಮ್' ಇತಿ ಪಾಣಿನೀಯಸೂತ್ರಾದಿತಿ ಭಾವಃ ।**

ಅನುವಾದ - 'ವಿಭಕ್ತ್ಯಂತಾಃ ವರ್ಣಾಃ ಪದಮ್' ಎಂಬುದಾಗಿ ಗ್ರಂಥದಲ್ಲಿ ಪದದ ಲಕ್ಷಣವನ್ನು ಹೇಳಿದ್ದಾರೆ. ಇಲ್ಲಿರುವ 'ವಿಭಕ್ತ್ಯಂತಾಃ' ಎಂಬ ಪದಕ್ಕೆ 'ಸುಪ್ ಹಾಗೂ ತಿಙ್ ಸ್ವರೂಪವಾದ ವಿಭಕ್ತಿಗಳೇ ಕೊನೆಯಾಗಿ ಇರುವ ವರ್ಣಗಳು' ಎಂದರ್ಥ.

'ವಿಭಕ್ತಿಶ್ಚ' ಎಂಬ ಸೂತ್ರದಲ್ಲಿ 'ಸುಪ್' ಹಾಗೂ 'ತಿಙ್' ಎರಡಕ್ಕೂ ಕೂಡ ವಿಭಕ್ತಿ ಸಂಜ್ಞೆಯನ್ನು ಹೇಳಿದ್ದಾರೆ. 'ಸುಬ್‌ತಿಙಂತಂ ಪದಮ್' ಎಂಬ ಪಾಣಿನೀಯಸೂತ್ರದಲ್ಲಿ ಸುಬಂತ ಹಾಗೂ ತಿಙಂತವಾದ ವರ್ಣಗಳಿಗೆ ಪದಸಂಜ್ಞೆಯನ್ನು ಹೇಳಲಾಗಿದೆ.

> ವಿವರಣೆ - ವಿಭಕ್ತ್ಯಂತವಾದ ವರ್ಣಗಳಿಗೆ ಪದಸಂಜ್ಞೆ ಬರುತ್ತದೆಂದು ಹೇಳಿದಾಗ 'ರಾಮಃ' 'ಕೃಷ್ಣಃ' ಮೊದಲಾದ ಶಬ್ದಗಳಿಗೆ ಮಾತ್ರ ಪದಸಂಜ್ಞೆ ಬರುತ್ತದೆಂಬ ಭ್ರಾಂತಿ ಬರುವ ಅವಕಾಶವಿದೆ. ಅದಕ್ಕಾಗಿ ಇಲ್ಲಿ ರಾಯರು 'ಸುಪ್ತಿಙ್‌ರೂಪವಿಭಕ್ತ್ಯಂತಾಃ' ಎಂದು ಟಿಪ್ಪಣಿ ಬರೆದಿದ್ದಾರೆ. ಅಂದರೆ 'ರಾಮಃ ಕೃಷ್ಣಃ ಮೊದಲಾದವು ಮಾತ್ರ ಪದಗಳಲ್ಲ. ಭವತಿ ಕರೋತಿ ಗಚ್ಛತಿ ಮೊದಲಾದ ತಿಙಂತಶಬ್ದಗಳೂ ಕೂಡ ಪದಗಳಾಗಿವೆ' ಎಂಬುದನ್ನು

ತಿಳಿಸಿದ್ದಾರೆ. 'ಭವತಿ' ಇತ್ಯಾದಿ ಧಾತುಗಳಲ್ಲಿ ವಿಭಕ್ತಿ ಇಲ್ಲವಲ್ಲ ಎಂಬ ಸಂಶಯವು ಬಂದರೆ 'ವಿಭಕ್ತಿಶ್ಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪಾಣಿನಿ ಸೂತ್ರದಲ್ಲಿ ಸು ಔ ಜಸ್ ಮೊದಲಾದವುಗಳಿಗೆ ಮಾತ್ರ ವಿಭಕ್ತಿಸಂಜ್ಞೆ ಹೇಳಿರುವುದಲ್ಲ. ತಿಪ್, ತಸ್, ಝಿ ಮೊದಲಾದ ತಿಙ್ಪ್ರತ್ಯಯಗಳಿಗೂ ಕೂಡ ವಿಭಕ್ತಿಸಂಜ್ಞೆಯನ್ನು ಹೇಳಲಾಗಿದೆ.

ವಿಭಕ್ತ್ಯಂತವಾದ ವರ್ಣಗಳಿಗೆ ಪದಸಂಜ್ಞೆಯನ್ನು ಹೇಳುವ ಸೂತ್ರ ಯಾವುದು ಎಂಬ ಪ್ರಶ್ನೆಗೆ 'ಸುಪ್ತಿಙಂತಂ ಪದಂ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಸುಬಂತವಾದ ಹಾಗೂ ತಿಙಂತವಾದ ವರ್ಣಗಳಿಗೆ ಪದಸಂಜ್ಞೆಯು ಬರುತ್ತದೆಂದು ಈ ಸೂತ್ರದ ಅರ್ಥ.

ಸುಪ್ ಹಾಗೂ ತಿಙ್ಪ್ರತ್ಯಯಗಳು ಬರುವ ಮೊದಲು ಅರ್ಥವತ್ತಾಗಿದ್ದಲ್ಲಿ ಕೇವಲ ವರ್ಣ ಎಂದು ಕರೆಸಿಕೊಳ್ಳುತ್ತದೆ. ಸುಪ್ ಹಾಗೂ ತಿಙ್ಪ್ರತ್ಯಯಗಳು ಬಂದ ಮೇಲಷ್ಟೇ ಪದ ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದಲೇ ವಿಭಕ್ತ್ಯಂತವಾದ ವರ್ಣಗಳು ಪದಸಂಜ್ಞೆಯನ್ನು ಹೊಂದುತ್ತವೆಂದು ಲಕ್ಷಣವನ್ನು ಹೇಳಿದ್ದಾರೆ.

## 'ಪದ' ಎನಿಸಲು ಎಷ್ಟು ಅಕ್ಷರಗಳಿರಬೇಕು?; 'ವಿಭಕ್ತ್ಯಂತಾಃ ವರ್ಣಾಃ' ಎಂಬ ಬಹುವಚನದ ಕೃತ್ಯವೇನು?

**ನ್ಯಾಯದೀಪ – ಅತ್ರ ಬಹುತ್ವಂ ಪ್ರಾಯಿಕತ್ವಾಭಿಪ್ರಾಯಮ್ । ವಿಭಕ್ತ್ಯಂತೋ ವರ್ಣಃ, ತಾದೃಶೌ ವರ್ಣೌ ವಾ, ತಾದೃಶಾ ವರ್ಣಾ ವಾ ಇತ್ಯರ್ಥಃ ।**

ಅನುವಾದ – 'ವಿಭಕ್ತ್ಯಂತಾಃ ವರ್ಣಾಃ' ಎಂಬುದಾಗಿ ಬಹುವಚನ ಪ್ರಯೋಗವನ್ನು ಗ್ರಂಥಕಾರರು ಮಾಡಿದ್ದಾರೆ. ಇದರಿಂದ ಪದ ಎಂದು ಕರೆಸಿಕೊಳ್ಳಬೇಕಾದರೆ ಮೂರಕ್ಕಿಂತ ಹೆಚ್ಚು ವರ್ಣಗಳು ಇರಲೇ ಬೇಕೆಂದು ಅನಿಸುತ್ತದೆ. ಹಾಗೇನಿಲ್ಲ. ಆದ್ದರಿಂದ ಇಲ್ಲಿರುವ ಬಹುತ್ವವು ಪ್ರಾಯಿಕವೆಂದು ತಿಳಿಯಬೇಕು. ವಿಭಕ್ತಿಯನ್ನು ಕೊನೆಯಲ್ಲಿ ಹೊಂದಿರುವ ಒಂದೇ ವರ್ಣವಾಗಲಿ, ಎರಡು ವರ್ಣಗಳಾಗಲೀ, ಮೂರು ವರ್ಣಗಳಾಗಲಿ ಅಥವಾ ಅದಕ್ಕಿಂತ ಹೆಚ್ಚು ವರ್ಣಗಳಾಗಲೀ ಪದಸಂಜ್ಞೆಯನ್ನು ಹೊಂದುತ್ತವೆಂದು ಅಭಿಪ್ರಾಯ.

ವಿಶೇಷವಿಚಾರ - ಪದ ಎಂದು ಕರೆಸಿಕೊಳ್ಳಬೇಕಾದರೆ ಮೂರು ಅಥವಾ ಹೆಚ್ಚು ವರ್ಣ-

ಗಳೇ ಇರಬೇಕೆಂಬ ನಿಯಮವಿಲ್ಲ. ಕಃ, ಅಃ ಇತ್ಯಾದಿಯಾಗಿ ಒಂದೇ ವರ್ಣವಿದ್ದರೂ ಪದ ಎಂದು ಕರೆಸಿಕೊಳ್ಳುತ್ತದೆ. ಅಥವಾ ತ್ವಂ, ಮೊದಲಾದ ಎರಡು ವರ್ಣಗಳಿಂದ ಕೂಡಿರುವ ಶಬ್ದವೂ ಕೂಡ ಪದಸಂಜ್ಞೆಯನ್ನು ಹೊಂದುತ್ತದೆ. ಗೋವಿಂದಃ, ಭೀಮಸೇನಃ ಇತ್ಯಾದಿಯಾಗಿ ಅನೇಕವರ್ಣಗಳಿಂದ ಕೂಡಿರುವ ಶಬ್ದವು ಕೂಡ ಪದಸಂಜ್ಞೆಯನ್ನು ಹೊಂದುತ್ತದೆಂದು ತಿಳಿಯಬೇಕು.

ಗ್ರಂಥದಲ್ಲಿ 'ವಿಭಕ್ತ್ಯಂತಾಃ ವರ್ಣಾಃ' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿದ್ದು ಪ್ರಾಯಿಕ ಎಂದು ತಿಳಿಯಬೇಕು. 'ಪ್ರಾಯಿಕ' ಎಂದರೆ ಸಾಮಾನ್ಯವಾಗಿ ಅನೇಕ ವರ್ಣ-ಗಳು ಹೆಚ್ಚಾಗಿರುವುದರಿಂದ ಬಹುವಚನವನ್ನು ಪ್ರಯೋಗಿಸಿದ್ದಾರೆ. ಒಂದು ಅಥವಾ ಎರಡು ವರ್ಣಗಳಿದ್ದರೂ ಕೂಡ ಪದಸಂಜ್ಞೆಯನ್ನು ಹೇಳಬಹುದು.

## ಪದಲಕ್ಷಣದಲ್ಲಿ 'ವರ್ಣಾಃ' ಎಂಬುದೇಕೆ?

**ನ್ಯಾಯದೀಪ – 'ವಿಭಕ್ತ್ಯಂತವರ್ಣತ್ವಂ ಪದಮ್' ಇತಿ ಯಾವತ್ । ವಿಭಕ್ತ್ಯಂತತ್ವಸ್ಯ ವರ್ಣತ್ವಾವ್ಯಭಿಚಾರೇಽಪಿ ವರ್ಣಾ ಇತ್ಯಾದ್ಯುಕ್ತಿಃ ಸ್ಪಷ್ಟಾರ್ಥಾ ।**

ಅನುವಾದ - 'ವಿಭಕ್ತ್ಯಂತವರ್ಣತ್ವಂ ಪದತ್ವಂ' ಎಂಬ ಪದದ ಲಕ್ಷಣವನ್ನು ವಿವಕ್ಷಿಸಿದಾಗ ಸಂಶಯಕ್ಕೆ ಅವಕಾಶವೇ ಇಲ್ಲ.

ವಿಭಕ್ತ್ಯಂತತ್ವವು ವರ್ಣತ್ವದಿಂದ ಅವ್ಯಭಿಚರಿತವೇ ಆಗಿರುತ್ತದೆ. ಆದರೂ ಗ್ರಂಥದಲ್ಲಿ 'ವರ್ಣಾಃ' ಎಂದು ಹೇಳಿರುವುದು ಸ್ಪಷ್ಟಾರ್ಥಕ್ಕೋಸ್ಕರ.

ವಿವರಣೆ - ಅಥವಾ 'ವಿಭಕ್ತ್ಯಂತವರ್ಣತ್ವಂ ಪದತ್ವಂ' ಎಂಬುದಾಗಿ ಪದದ ಲಕ್ಷಣವನ್ನು ತಿಳಿಯಬೇಕು. ಈ ಲಕ್ಷಣವು ಒಂದು ವರ್ಣದಲ್ಲಿ ಎರಡು ವರ್ಣದಲ್ಲಿ ಅಥವಾ ಇನ್ನೂ ಹೆಚ್ಚಿನ ವರ್ಣಗಳಲ್ಲಿ ಸಮನ್ವಯವಾಗುವುದರಿಂದ ಒಂದೇ ವರ್ಣದಲ್ಲಿ ಲಕ್ಷಣ ಬಾರದ ಕಾರಣ ಅವ್ಯಾಪ್ತಿ ಬರುತ್ತದಲ್ಲವೇ? ಎಂಬ ದೋಷಕ್ಕೆ ಅವಕಾಶವಿಲ್ಲ.

ವಿಭಕ್ತ್ಯಂತವಾಗಿದೆಯೆಂದು ಹೇಳಿದರೆ ಸಾಕು. ಅದು ವರ್ಣವೇ ಆಗಿರುತ್ತದೆ. ವಿಭಕ್ತಿ ಇದ್ದೂ ವರ್ಣವಾಗಿಲ್ಲ ಎಂದು ಎಲ್ಲೂ ವ್ಯಭಿಚಾರ ಕಂಡಿಲ್ಲ. ಹಾಗಿದ್ದಾಗ ವರ್ಣಂ ಎಂಬ ಪದವನ್ನು

ಏಕೆ ಗ್ರಂಥದಲ್ಲಿ ಬಳಸಿದರು? ಎಂಬ ಸಂಶಯ ಬರುತ್ತದೆ. ಇದಕ್ಕೆ ವಿಭಕ್ತ್ಯಂತತ್ವಸ್ಯ ಎಂಬ ವಾಕ್ಯದಿಂದ ರಾಯರು ಉತ್ತರಿಸುತ್ತಿದ್ದಾರೆ.

## 'ರಾಜಪುರುಷಃ' ಎಂಬುದು ಪದವೇ, ಅಲ್ಲವೇ?; ಪದಲಕ್ಷಣದ ದಲಕೃತ್ಯವಿಚಾರ

**ನ್ಯಾಯದೀಪ – ರಾಜಪುರುಷಃ ಇತ್ಯಾದೌ ಅನೇಕಪದಸಮುದಾಯಸ್ಯ ವಿಭಕ್ತ್ಯಂತಸ್ಯ ಪದತ್ವನಿವೃತ್ತ್ಯರ್ಥಂ 'ವರ್ಣಾಃ' ಇತ್ಯುಕ್ತಿಃ । ತದರ್ಥಸ್ತು 'ವಿಭಕ್ತಿಃ ಅಂತ ಏವ ಯೇಷಾಂ ತೇ ವಿಭಕ್ತ್ಯಂತಾಃ' ಇತಿ । 'ರಾಜಪುರುಷಃ' ಇತ್ಯಾದೌ ತು ಮಧ್ಯೇऽಪಿ ವಿಭಕ್ತಿರ್ಲುಪ್ತಾऽಸ್ತಿ – ಇತ್ಯೇಕೇ ।**

ಅನುವಾದ – 'ರಾಜಪುರುಷಃ' ಇತ್ಯಾದಿ ಸಮಾಸಸ್ಥಳದಲ್ಲಿ ಅನೇಕ ಪದಗಳ ಸಮುದಾಯವಿದೆ. ಇದೂ ಕೂಡ ವಿಭಕ್ತ್ಯಂತವಾದ್ದರಿಂದ ಪದವೆಂಬ ಭ್ರಾಂತಿ ಬರುತ್ತದೆ. ಇದರ ನಿವಾರಣೆಗಾಗಿ 'ವಿಭಕ್ತ್ಯಂತಾಃ ವರ್ಣಾಃ' ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. 'ವಿಭಕ್ತ್ಯಂತಾಃ' ಎಂಬ ಪದಕ್ಕೆ ವಿಭಕ್ತಿಯು ಕೊನೆಯಲ್ಲಿ ಇರಬೇಕು ಎಂದರ್ಥ. 'ರಾಜಪುರುಷಃ' ಎಂಬ ಸ್ಥಳದಲ್ಲಿ ರಾಜಪದದ ನಂತರ ಲುಪ್ತವಾದ ಷಷ್ಠೀ ವಿಭಕ್ತಿಯು ಇದೆ. ವಿಭಕ್ತಿಯು ಕೊನೆಯಲ್ಲಿ ಮಾತ್ರ ಇರುವುದಲ್ಲ. ಮಧ್ಯದಲ್ಲಿಯೂ ಇದೆ ಎಂದು ಕೆಲವರ ಅಭಿಪ್ರಾಯ.

ವಿವರಣೆ - 'ರಾಜ್ಞಃ ಪುರುಷಃ ರಾಜಪುರುಷಃ' ಎಂಬುದಾಗಿ ಷಷ್ಠೀತತ್ಪುರುಷಸಮಾಸ. ಇದಕ್ಕೆ ಪದಸಂಜ್ಞೆ ಇದೆಯೋ ಇಲ್ಲವೋ ಎಂದು ವಿಚಾರ ಮಾಡುತ್ತಿದ್ದಾರೆ. - ಕೆಲವರು ಇದಕ್ಕೆ ಪದಸಂಜ್ಞೆ ಇರುವುದಿಲ್ಲವೆಂದು ಹೇಳುತ್ತಾರೆ. ಏಕೆಂದರೆ 'ವಿಭಕ್ತ್ಯಂತಾಃ' ಎಂಬ ಪದಕ್ಕೆ ಕೊನೆಯಲ್ಲಿ ಮಾತ್ರ ವಿಭಕ್ತಿ ಇರುವ ವರ್ಣಗಳು ಎಂದರ್ಥ. 'ರಾಜಪುರುಷಃ' ಎಂಬಲ್ಲಿ 'ರಾಜ' ಎಂಬ ಶಬ್ದದಲ್ಲಿಯೂ ವಿಭಕ್ತಿಯಿದೆ. 'ಪುರುಷ' ಎಂಬ ಶಬ್ದದಲ್ಲಿಯೂ ವಿಭಕ್ತಿಯಿದೆ. 'ಪುರುಷ' ಎಂಬಲ್ಲಿರುವ ವಿಭಕ್ತಿಯು ಕಾಣಸುತ್ತಿದೆ. 'ರಾಜ' ಎಂಬಲ್ಲಿರುವ ವಿಭಕ್ತಿಯು ಕಾಣಸುತ್ತಿಲ್ಲ. 'ರಾಜ್ಞಃ ಪುರುಷಃ' ಎಂದು ವಿಗ್ರಹಕಾಲದಲ್ಲಿ ಯಾವ ಷಷ್ಠೀ-ವಿಭಕ್ತಿಯು ಕಾಣಸುತ್ತಿದೆಯೋ ಇದು ಸಮಾಸದಲ್ಲಿ ಲೋಪವಾಗಿದೆ. ಲೋಪವೆಂದರೆ 'ಅದರ್ಶನಂ ಲೋಪಃ' ಎಂಬಂತೆ ಕಾಣಸುವುದಿಲ್ಲ ಎಂದಷ್ಟೇ ಅರ್ಥ ಹೊರತು 'ಅಭಾವ'

ಎಂದರ್ಥವಲ್ಲ. ಆದ್ದರಿಂದ ರಾಜಶಬ್ದವು ವಿಭಕ್ತಿಸಹಿತವಾಗಿದೆಯೆಂದೇ ಹೇಳಬೇಕು. ಪದದ ಲಕ್ಷಣವನ್ನು ಹೇಳುವಾಗ ವಿಭಕ್ತಿಯು ಕೊನೆಯಲ್ಲಿ ಮಾತ್ರ ಇರಬೇಕೆಂದು ಹೇಳುತ್ತಿರುವುದರಿಂದ ಇದು ಪದವೆಂದು ಕರೆಸಿಕೊಳ್ಳುವುದಿಲ್ಲ. ಏಕೆಂದರೆ, ಮಧ್ಯದಲ್ಲಿಯೂ ಕೂಡ ವಿಭಕ್ತಿಯು ಇರುತ್ತದೆ. ಆದ್ದರಿಂದ ಸಮಾಸದ ಶಬ್ದಗಳು ಪದವೇ ಆಗುವುದಿಲ್ಲ ಎಂಬುದು ಕೆಲವರ ಅಭಿಪ್ರಾಯ. ಕೆಲವರು ಎಂದರೆ ಸ್ವಯೂಥ್ಯರು (ದ್ವೈತಿಗಳಲ್ಲೇ ಕೆಲವರು) ಎಂದು ತಿಳಿಯಬೇಕು.

## ಕೆಲವರ ಪ್ರಕಾರ ''ಪದ''

**ನ್ಯಾಯದೀಪ– ಅನ್ಯೇ ತು – 'ತಸ್ಯಾಪಿ ಪದತ್ವಲಾಭಾಯ ಏವಮುಕ್ತಿಃ । ಪದದ್ವಯಾವಯವವಿಭಕ್ತಿದ್ವಯಾತ್ ಸಮುದಾಯೋತ್ಪನ್ನವಿಭಕ್ತೇರನ್ಯತ್ವೇನ ಪದದ್ವಯಸ್ಥವರ್ಣಸಮುದಾಯಸ್ಯಾಪಿ ವಿಭಕ್ತ್ಯಂತವರ್ಣತ್ವಾತ್' ಇತ್ಯಾಹುಃ ।**

ಅನುವಾದ - ನಮ್ಮಲ್ಲೇ ಎರಡನೆಯ ಪಕ್ಷದವರ ಅಭಿಪ್ರಾಯ ಹೀಗಿದೆ. 'ರಾಜಪುರುಷಃ' ಎಂಬ ಸಮಾಸಕ್ಕೆ ಪದತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ 'ವಿಭಕ್ತ್ಯಂತಾಃ ವರ್ಣಾಃ' ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. 'ರಾಜ್ಞಃ' 'ಪುರುಷಃ' ಎಂಬೆರಡು ಪದಗಳ ಅವಯವ ವಿಭಕ್ತಿಗಳಿಗಿಂತ ರಾಜಪುರುಷಃ ಎಂಬ ಸಮುದಾಯದಲ್ಲಿರುವ ವಿಭಕ್ತಿಯು ಬೇರೆಯೇ ಆಗಿದೆ. ಆದ್ದರಿಂದ ಎರಡು ಪದಗಳ ವರ್ಣಸಮುದಾಯಕ್ಕೆ ವಿಭಕ್ತ್ಯಂತವರ್ಣತ್ವವು ಇರುವುದರಿಂದ ಪದ ಎಂದು ವ್ಯವಹರಿಸಬಹುದು.

ವಿವರಣೆ - ಸ್ವಯೂಥ್ಯರಲ್ಲೇ ಬೇರೆ ಕೆಲವರು 'ವಿಭಕ್ತ್ಯಂತಾಃ' ಎಂಬ ವಿಶೇಷಣವನ್ನು ನೀಡಿರುವುದು 'ರಾಜಪುರುಷಃ' ಇತ್ಯಾದಿ ಸ್ಥಳಗಳಲ್ಲಿ ಪದತ್ವವನ್ನು ಸಮರ್ಥನೆ ಮಾಡುವುದಕ್ಕೆಂದು ಹೇಳುತ್ತಾರೆ. 'ರಾಜಪುರುಷಃ' ಎಂಬಲ್ಲಿ ರಾಜ ಹಾಗೂ ಪುರುಷ ಎಂಬ ಪ್ರತ್ಯೇಕಪದಗಳಲ್ಲಿ ವಿಭಕ್ತಿಯು ಇರುತ್ತದೆ. ಇದಕ್ಕೆ 'ಅವಯವವಿಭಕ್ತಿ' ಎಂದು ಹೆಸರು. ಸಮಾಸವಾದ ಮೇಲೆ ಎರಡೂ ಪದಗಳನ್ನು ಸೇರಿಸಿ ಬೇರೆ ವಿಭಕ್ತಿಯೇ ಬರುತ್ತದೆ. ಇದು ಅವಯವವಿಭಕ್ತಿಗಿಂತ ಭಿನ್ನವಾದದ್ದು. ಸಮುದಾಯವಿಭಕ್ತಿ ಎಂದು ಇದನ್ನು ಕರೆಯುತ್ತಾರೆ.

'ರಾಜ್ಞಃ ಪುರುಷಃ' ಎಂಬುದನ್ನು ಅಲೌಕಿಕವಿಗ್ರಹವೆಂದು ಕರೆಯುತ್ತಾರೆ. ರಾಜ+ ಙಸ್ = ರಾಜ್ಞಃ; ಪುರುಷ+ ಸು' = ಪುರುಷಃ. ಇದನ್ನು ಅಲೌಕಿಕವಿಗ್ರಹವಾಕ್ಯ ಎಂದು ಕರೆಯುತ್ತಾರೆ.

ಅಲೌಕಿಕವಿಗ್ರಹದಲ್ಲಿ ಜಸ್ ಎಂಬುದನ್ನು ಲೋಪ ಮಾಡಿ 'ರಾಜನ್' ಎಂಬಲ್ಲಿರುವ ನಕಾರಕ್ಕೂ ಕೂಡ ಲೋಪವನ್ನು ಮಾಡಿ, 'ರಾಜಪುರುಷಃ' ಎಂಬುದಾಗಿ ಸಮಾಸವನ್ನು ಮಾಡಲಾಗುತ್ತದೆ. ಸಮಾಸ ಮಾಡುವ ಸಂದರ್ಭದಲ್ಲಿ ಯಾವ ವಿಭಕ್ತಿಗಳಿದ್ದವೋ ಆ ವಿಭಕ್ತಿಯು ಸಮಾಸದ ಅನಂತರ ಇರುವುದಿಲ್ಲ.

'ಸು' ಎಂಬುದು ಅಲೌಕಿಕವಿಗ್ರಹಸಂದರ್ಭದಲ್ಲಿ ಹಾಗೂ ಲೌಕಿಕವಿಗ್ರಹಸಂದರ್ಭದಲ್ಲಿ ಇದೆಯಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ, ಅಲೌಕಿಕವಿಗ್ರಹಸಂದರ್ಭದಲ್ಲಿ ಪುರುಷ-ಪದದ ಮೇಲೆ ಮಾತ್ರ 'ಸು'ಪ್ರತ್ಯಯವನ್ನು ಹೇಳಲಾಗಿತ್ತು. ಆದರೆ ಪ್ರಕೃತದಲ್ಲಿ ರಾಜಪುರುಷಶಬ್ದದ ಮೇಲೆ 'ಸು'ಪ್ರತ್ಯಯವನ್ನು ಹೇಳಲಾಗುತ್ತಿದೆ. ಆದ್ದರಿಂದ ಸಮಾಸ-ದಲ್ಲಿರುವ ಸುಪ್ರತ್ಯಯವೇ ಬೇರೆಯಾಗಿದೆಯೆಂದು ತಿಳಿಯಬೇಕು. ಆದ್ದರಿಂದ ವಿಭಕ್ತ್ಯಂತ-ವಾದ ವರ್ಣಗಳು ಎಂದರೆ 'ರಾಜಪುರುಷ' ಎಂಬಲ್ಲಿರುವ ವರ್ಣಗಳು. ಇದಕ್ಕೂ ಪದ-ಸಂಜ್ಞೆಯನ್ನು ತಿಳಿಸುವುದಕ್ಕಾಗಿ 'ವಿಭಕ್ತ್ಯಂತಾಃ' ಎಂಬ ಪದವನ್ನು ಗ್ರಂಥದಲ್ಲಿ ಪ್ರಯೋಗಿಸಿ-ದ್ದಾರೆ.

## ಸ್ಫೋಟ ಅಪ್ರಾಮಾಣಿಕ;
## ವರ್ಣಶಬ್ದವು ಏಕೆ ಲಕ್ಷಣಘಟಕವಾಗಿದೆ?

### ನ್ಯಾಯದೀಪ –'ವರ್ಣಾನ್ಯಸ್ಫೋಟನಿರಾಸಾಯ ವರ್ಣೋಕ್ತಿಃ' ಇತ್ಯಪರೇ ।

ಅನುವಾದ – 'ವರ್ಣಾಃ' ಎಂಬ ಪದದ ಸಾರ್ಥಕ್ಯವನ್ನು ಮತ್ತೊಂದು ರೀತಿಯಲ್ಲಿ ಕೆಲವರು ಹೇಳುತ್ತಾರೆ. ತಾರ್ಕಿಕರು ಪದಸ್ಫೋಟವೂ ಕೂಡ ವಿಭಕ್ತ್ಯಂತವೆಂದು ಹೇಳುತ್ತಾರೆ. ಅವರನ್ನು ನಿರಾಕರಣೆ ಮಾಡುವುದಕ್ಕಾಗಿ '**ವರ್ಣಾಃ**' ಎಂದು ಹೇಳಿದ್ದಾರೆ. ಸ್ಫೋಟವನ್ನು ವರ್ಣವೆಂದು ಒಪ್ಪಿಲ್ಲದ ಕಾರಣ ಅತಿವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ.

ವಿವರಣೆ - ತಾರ್ಕಿಕರು ವರ್ಣಸ್ಫೋಟ, ಪದಸ್ಫೋಟ, ವಾಕ್ಯಸ್ಫೋಟ ಇತ್ಯಾದಿಯಾಗಿ ಒಪ್ಪಿದ್ದಾರೆ. ಶಾಬ್ದಬೋಧ ಬರಬೇಕಾದರೆ ಈ ಸ್ಫೋಟಗಳು ಆಗಲೇಬೇಕೆಂಬುದು ಇವರ ವಾದ. ಆದರೆ ಈ ಸ್ಫೋಟವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲವೆಂದು ತತ್ತ್ವನಿರ್ಣಯ ಮೊದಲಾದ ಗ್ರಂಥಗಳಲ್ಲಿ ನಿರಾಕರಣೆ ಮಾಡಲಾಗಿದೆ.

## ''ವಾಕ್ಯ'' ಎಂದರೇನು?

**ನ್ಯಾಯದೀಪ – ಆಕಾಂಕ್ಷೇತಿ ॥ 'ಪ್ರಯುಜ್ಯಮಾನಪದೇಷ್ವೇವ ಅನ್ಯೋನ್ಯಾ-ಕ್ಷಾವಂತಿ ಪದಾನಿ' ಇತ್ಯರ್ಥಃ । ತೇನ 'ನಿರಾಕಾಂಕ್ಷಪದಾನಿ ವಾಕ್ಯಮ್' ಇತಿ ಭಾಷ್ಯ-ಟೀಕಯಾ ನ ವಿರೋಧಃ । 'ಸ್ವಸ್ಮಿನ್ನೇವ ಪೂರ್ಣಾಕಾಂಕ್ಷಾವತ್ವೇನ ಅನ್ಯತ್ರ ನಿರಾ-ಕಾಂಕ್ಷಪದಸಂದರ್ಭೋ ವಾಕ್ಯಮ್' ಇತಿ ಚಂದ್ರಿಕಾಯಾಂ ತಸ್ಯಾರ್ಥೋಕ್ತೇಃ ।**

ಅನುವಾದ - ಪ್ರಯೋಗಿಸಲ್ಪಟ್ಟ ಪದಗಳಿಗೆ ಪರಸ್ಪರವಾಗಿ ಆಕಾಂಕ್ಷೆ ಇರಬೇಕು. ಇಂಥ ಪದಗಳ ಸಮೂಹವೇ ವಾಕ್ಯ ಎಂಬುದು 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಮ್' ಎಂಬ ಗ್ರಂಥದ ಅಭಿಪ್ರಾಯ.

ಹೀಗೆಯೇ ಆಕಾಂಕ್ಷೆಯ ಲಕ್ಷಣವನ್ನು ತಿಳಿಯಬೇಕು. ಆಗ ನಿರಾಕಾಂಕ್ಷಪದಾನಿ ವಾಕ್ಯಮ್' 'ಆಕಾಂಕ್ಷೆ ಹೊಂದದ ಪದಗಳ ಸಮೂಹವೇ ವಾಕ್ಯ' ಎಂಬ ಬ್ರಹ್ಮಸೂತ್ರಭಾಷ್ಯದ ಟೀಕೆಯಲ್ಲಿ ಹೇಳಿರುವ ಮಾತಿನಿಂದ ವಿರೋಧವು ಬರುವುದಿಲ್ಲ.

ಏಕೆಂದರೆ, ವಾಕ್ಯದಲ್ಲಿರುವ ಪದಗಳು ತಮ್ಮಲ್ಲಿಯೇ ಪೂರ್ಣವಾದ ಆಕಾಂಕ್ಷೆ ಉಳ್ಳವುಗಳಾಗಿರುತ್ತವೆ. ವಾಕ್ಯದಲ್ಲಿಲ್ಲದ ಪದಗಳಿಂದ ಆಕಾಂಕ್ಷೆಯನ್ನು ಹೊಂದಿರುವುದಿಲ್ಲ ಎಂಬುದು ಇದರ ಅಭಿಪ್ರಾಯ. ಇದನ್ನು ತಾತ್ಪರ್ಯಚಂದ್ರಿಕೆಯಲ್ಲಿ 'ಸ್ವಸ್ಮಿನ್ನೇವ ಪೂರ್ಣಾಕಾಂಕ್ಷವತ್ವೇನಾನ್ಯತ್ರ ನಿರಾಕಾಂಕ್ಷಪದಸಂದರ್ಭೋ ವಾಕ್ಯಮ್' ಎಂಬುದಾಗಿ 'ನಿರಾಕಾಂಕ್ಷಪದಾನಿ ವಾಕ್ಯಂ' ಎಂಬ ಟೀಕೆಯ ವ್ಯಾಖ್ಯಾನವನ್ನು ಮಾಡಿರುತ್ತಾರೆ.

> ವಿಶೇಷವಿಚಾರ - ಗ್ರಂಥಕಾರರು 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಮ್' ಎಂಬುದಾಗಿ ಪ್ರಮಾಣಪದ್ಧತಿಯಲ್ಲಿ ಹೇಳಿದ ವಾಕ್ಯದ ಲಕ್ಷಣವನ್ನು ಉಲ್ಲೇಖ ಮಾಡಿದ್ದಾರೆ. ಇಲ್ಲಿರುವ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಇವುಗಳ ಬಗ್ಗೆ ಮುಂದೆ ಪ್ರತ್ಯೇಕವಾದ ಪ್ರಕರಣಗಳಿಂದ ಸಂಪೂರ್ಣವಾಗಿ ವಿಶ್ಲೇಷಣೆಯನ್ನು ಸ್ವತಃ ಗ್ರಂಥಕಾರರೇ ಮಾಡುತ್ತಾರೆ. ಪ್ರಕೃತ ನ್ಯಾಯದೀಪಕಾರರು ಶಿಷ್ಯರ ಬುದ್ಧಿಯಲ್ಲಿ ಕೂಡಲೇ ಹುಟ್ಟುವ ಕುತೂಹಲಕ್ಕೆ ಉತ್ತರಿಸುತ್ತಿದ್ದಾರೆ.
>
> ಒಂದು ಪದವನ್ನು ಕೇಳಿದಾಗ ಸಹಜವಾಗಿ ಆಕಾಂಕ್ಷೆಯು ಹುಟ್ಟುತ್ತದೆ. ಇದನ್ನು ಶಮನ

ಮಾಡುವ ಸಾಮರ್ಥ್ಯ ಮತ್ತೊಂದು ಪದಕ್ಕೆ ಇರಬೇಕು. ಇದನ್ನೇ ಆಕಾಂಕ್ಷೆ ಎಂದು ಕರೆಯುತ್ತಾರೆ. ಇಂಥ ಆಕಾಂಕ್ಷೆಯು ವಾಕ್ಯದಲ್ಲಿರುವ ಎಲ್ಲಾ ಪದಗಳಲ್ಲಿಯೂ ಪರಸ್ಪರ-ವಾಗಿ ಇರಬೇಕು.

ಉದಾ- 'ಭೋ ದೇವದತ್ತ ಗಾಂ ಆನಯ' ಇದೊಂದು ವಾಕ್ಯ . ಯಾರನ್ನು ಕುರಿತು ಈ ವಾಕ್ಯವನ್ನು ಪ್ರಯೋಗಿಸುತ್ತಿದ್ದಾನೆ ಎಂಬ ಆಕಾಂಕ್ಷೆಗೆ 'ಭೋ ದೇವದತ್ತ' ಎಂಬ ಪದವು ಉತ್ತರಿಸುತ್ತಿದೆ. ಏನನ್ನು ತರಬೇಕು? ಎಂಬ ಆಕಾಂಕ್ಷೆಗೆ 'ಗಾಂ' ಎಂಬ ಕಾರಕಪದವು 'ಹಸುವನ್ನು' ಎಂಬುದಾಗಿ ಉತ್ತರಿಸುತ್ತಿದೆ. ಹಸುವನ್ನು ಏನು ಮಾಡಬೇಕು? ಎಂಬ ಪ್ರಶ್ನೆಗೆ 'ಆನಯ' (ತರಬೇಕು) ಎಂಬ ಪದವು ಉತ್ತರಿಸುತ್ತಿದೆ. ಹೀಗೆ 'ಭೋ ದೇವದತ್ತ ಗಾಂ ಆನಯ' ಎಂಬ ವಾಕ್ಯದಲ್ಲಿರುವ ಪ್ರತಿಯೊಂದು ಪದಗಳಿಗೂ ಪರಸ್ಪರವಾಗಿ ಆಕಾಂಕ್ಷೆಯು ಇರುವುದರಿಂದ ಇದನ್ನು ನಿರ್ದುಷ್ಟವಾದ ವಾಕ್ಯವೆಂದು ಪರಿಗಣಿಸುತ್ತಾರೆ.

ಪ್ರಶ್ನೆ - ಆಕಾಂಕ್ಷೆಯನ್ನು ಹೊಂದಿರುವ ಪದಗಳ ಸಮೂಹವೇ ವಾಕ್ಯವೆಂದು ಪ್ರಮಾಣ-ಪದ್ಧತಿಯಲ್ಲಿ ಹೇಳಿದ್ದಾರೆ. ಆದರೆ ''ಶ್ರುತಿರ್ಲಿಂಗಂ ಸಮಾಖ್ಯಾಚ ವಾಕ್ಯಂ ಪ್ರಕರಣಂ ತಥಾ'' ಎಂಬವುದಕ್ಕೆ ವ್ಯಾಖ್ಯಾನ ಮಾಡುವಾಗ ತತ್ವಪ್ರಕಾಶಿಕೆಯಲ್ಲಿ 'ನಿರಾಕಾಂಕ್ಷಪದಾನಿ ವಾಕ್ಯಮ್' 'ಆಕಾಂಕ್ಷೆಯಿಲ್ಲದ ಪದಗಳ ಸಮೂಹವೇ ವಾಕ್ಯ' ಎಂದು ಹೇಳಿದ್ದಾರೆ. ಹಾಗಾದರೆ ಪ್ರಮಾಣಪದ್ಧತಿಯಲ್ಲಿ ಪದಗಳು ಆಕಾಂಕ್ಷೆಯನ್ನು ಹೊಂದಿರಬೇಕು ಅಥವಾ ತತ್ವಪ್ರಕಾಶಿಕೆಯಲ್ಲಿ ಹೇಳಿದಂತೆ ಪದಗಳು ಆಕಾಂಕ್ಷೆಯನ್ನು ಹೊಂದಿರಬಾರದೋ? ಇವೆರಡರಲ್ಲಿ ಯಾವುದು ತಪ್ಪು ಯಾವುದು ಸರಿ?

ಉತ್ತರ -ಈ ಪ್ರಶ್ನೆಗೆ ತಾತ್ಪರ್ಯಚಂದ್ರಿಕೆಯಲ್ಲಿ ಸೊಗಸಾಗಿ ಉತ್ತರಿಸಿದ್ದಾರೆ. - 'ಸ್ವಸ್ಮಿನ್ನೇವ ಪೂರ್ಣಾಕಾಂಕ್ಷಾವತ್ವೇನ ಅನ್ಯತ್ರ ನಿರಾಕಾಂಕ್ಷಪದಸಂದರ್ಭೋ ವಾಕ್ಯಮ್' 'ತಮ್ಮಲ್ಲಿಯೇ ಆಕಾಂಕ್ಷೆಯು ಶಾಂತವಾಗಬೇಕು ಮತ್ತೊಂದು ಪದದ ಆಕಾಂಕ್ಷೆಯ ಅಪೇಕ್ಷೆಯನ್ನು ಹೊಂದಬಾರದು' ಇದೇ ವಾಕ್ಯ ಎನಿಸುತ್ತದೆ' ಎಂದು.

ಯಾವ ಒಂದು ವಾಕ್ಯವನ್ನು ಪ್ರಯೋಗಿಸುತ್ತೇವೋ ಆ ವಾಕ್ಯದಲ್ಲಿರುವ ಪದಗಳಿಗೆ ಪರಸ್ಪರವಾಗಿ ಆಕಾಂಕ್ಷೆಯು ಇರಲೇಬೇಕು ಮತ್ತು ಆ ವಾಕ್ಯದಲ್ಲಿರುವ ಪದಗಳಿಂದ ಆಕಾಂಕ್ಷೆಯು ಪೂರ್ಣವಾಗಿ ಶಾಂತವಾಗಿರಬೇಕು. ಮತ್ತೊಂದು ವಾಕ್ಯದಲ್ಲಿರುವ ಪದಗಳ

ಅಪೇಕ್ಷೆಯನ್ನು ಪಡಬಾರದು ಇದು ವಾಕ್ಯದ ಲಕ್ಷಣ. ತತ್ವಪ್ರಕಾಶಿಕೆಯು ಇದೇ ಅಭಿಪ್ರಾಯದಿಂದ 'ನಿರಾಕಾಂಕ್ಷಪದಾನಿ ವಾಕ್ಯಮ್' ಎಂದು ಹೇಳಿದೆ. ವಾಕ್ಯದಲ್ಲಿರುವ ಪದಗಳು ತಮ್ಮಲ್ಲಿರುವ ಪದಗಳನ್ನು ಬಿಟ್ಟು ಮತ್ತೊಂದು ಪದದಿಂದ ಆಕಾಂಕ್ಷೆಯನ್ನು ಹೊಂದಿರಬಾರದು ಎಂಬುದು ಇದರ ಆಂತರ್ಯ. ಪ್ರಮಾಣಪದ್ಧತಿಯಲ್ಲಿ ವಾಕ್ಯದಲ್ಲಿ-ರುವ ಪದಗಳು ತಮ್ಮಲ್ಲಿಯೇ ಪರಸ್ಪರವಾಗಿ ಆಕಾಂಕ್ಷೆಯನ್ನು ಹೊಂದಿರಬೇಕು ಎಂಬ ಅಭಿಪ್ರಾಯದಿಂದ ಆಕಾಂಕ್ಷೆಯನ್ನು ಹೊಂದಿರುವ ಪದಗಳ ಸಮೂಹವೇ ವಾಕ್ಯ ಎಂದು ಹೇಳಲಾಗಿದೆ.

ಈ ವಿಷಯ ಮನದಟ್ಟಾಗಲು ಒಂದು ಲೌಕಿಕ ಉದಾಹರಣೆ - ಗಂಡಹೆಂಡಂದಿರು ಪರಸ್ಪರವಾಗಿ ತಮ್ಮಲ್ಲಿಯೇ ಆಕಾಂಕ್ಷೆಯನ್ನು ಹೊಂದಿರಬೇಕು. ಇದು ಪ್ರಮಾಣಪದ್ಧತಿಯ ಅಭಿಪ್ರಾಯ. ಗಂಡನು ಮತ್ತೊಬ್ಬ ಹೆಂಗಸಿನಲ್ಲಿ; ಹೆಂಡತಿಯು ಮತ್ತೊಬ್ಬ ಪುರುಷನಲ್ಲಿ ಆಕಾಂಕ್ಷೆಯನ್ನು ಹೊಂದಿರಬಾರದು ಇದು ತತ್ವಪ್ರಕಾಶಿಕೆಯ ಅಭಿಪ್ರಾಯ.

## ವಾಕ್ಯ ಎನಿಸಲು ಎಷ್ಟು ಪದಗಳಿರಬೇಕು ಪದಾನಿ ಎಂಬ ಬಹುವಚನ ಏಕೆ?

**ನ್ಯಾಯದೀಪ – 'ಪದಾನಿ' ಇತಿ ಬಹುತ್ವಂ ಪ್ರಾಯಿಕಾಭಿಪ್ರಾಯಮ್ । ಅತ್ರಾಪಿ ಪದಶಬ್ದಪ್ರಯೋಗಕೃತ್ಯಂ ಪೂರ್ವಂ ವರ್ಣಪದಕೃತ್ಯವತ್ ಪದಾನ್ಯವಾಕ್ಯಸ್ಫೋಟ-ನಿರಾಸಾಯ ಇತಿ ಬೋಧ್ಯಮ್ । (ಯದ್ವಾ ಪ್ರಕೃತಿಪ್ರತ್ಯಯಸಮಭಿವ್ಯಾಹಾರ-ಪದೇಽತಿವ್ಯಾಪ್ತಿನಿರಾಸಾಯ 'ಪದಾನಿ' ಇತ್ಯುಕ್ತಿಃ) ।**

ಅನುವಾದ - ಪ್ರಮಾಣಪದ್ಧತಿಯಲ್ಲಿ 'ಪದಾನಿ' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿರು-ವುದು ಪ್ರಾಯಃ ಪದಗಳಲ್ಲಿ ಅನೇಕ ವರ್ಣಗಳಿರುತ್ತವೆ; ವಾಕ್ಯಗಳಲ್ಲಿ ಅನೇಕ ಪದಗಳಿರುತ್ತವೆ ಎಂಬ ಅಭಿಪ್ರಾಯದಿಂದ. ಅಥವಾ ಇಲ್ಲಿಯೂ ಸಹ ಹಿಂದೆ 'ವರ್ಣಾಃ' ಎಂಬ ಪದಕ್ಕೆ ಕೃತ್ಯವನ್ನು ವಿಚಾರ-ಮಾಡುವಾಗ ವರ್ಣಸ್ಫೋಟವನ್ನು ನಿರಾಸ ಮಾಡುವಾಗ ಹೇಗೆ ಎಂದು ಉತ್ತರಿಸಲಾಯಿತೋ ಅದರಂತೆ ಪದಸ್ಫೋಟವನ್ನು ಬಿಟ್ಟು ಉಳಿದ ವಾಕ್ಯಸ್ಫೋಟ ಮುಂತಾದವುಗಳನ್ನು ನಿರಾಸ ಮಾಡುವುದಕ್ಕಾಗಿ 'ಪದಾನಿ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆಂದು ಕೃತ್ಯವನ್ನು ತಿಳಿಯಬೇಕು.

(ಅಥವಾ ಪ್ರಕೃತಿಪ್ರತ್ಯಯ ಸಮಭಿವ್ಯಾಹಾರರೂಪವಾದ ಪದದಲ್ಲಿ ಅತಿವ್ಯಾಪ್ತಿಯ ಪರಿಹಾರಕ್ಕಾಗಿ ಪದಾನಿ ಎಂದು ಹೇಳಿದ್ದಾರೆ)

ವಿಶೇಷವಿಚಾರ -

ಪ್ರಶ್ನೆ - 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಂ' ಎಂಬುದಾಗಿ ಪ್ರಮಾಣಪದ್ಧತಿಯಲ್ಲಿ ವಾಕ್ಯದ ಲಕ್ಷಣವನ್ನು ಹೇಳಿದ್ದಾರೆ. ಇಲ್ಲಿ 'ಪದಾನಿ' ಎಂಬ ಬಹುವಚನದಿಂದ ಮೂರು ಅಥವಾ ಹೆಚ್ಚು ಪದಗಳಿದ್ದರೆ ಮಾತ್ರ ವಾಕ್ಯವಾಗುತ್ತದೆಂದು ಅನಿಸುತ್ತದೆ. ಆದರೆ 'ಘಟಃ ಅಸ್ತಿ' ಎಂಬಲ್ಲಿ ಎರಡೇ ಪದಗಳಿವೆ. ಇದನ್ನು ವಾಕ್ಯವೆಂದು ಎಲ್ಲರೂ ಒಪ್ಪಿದ್ದಾರೆ. ಹೀಗಿರುವಾಗ ಪ್ರಮಾಣಪದ್ಧತಿಯಲ್ಲಿ 'ಪದಾನಿ' ಎಂದು ಬಹುವಚನವನ್ನು ಏಕೆ ಪ್ರಯೋಗಿಸಿದ್ದಾರೆ?

ಉತ್ತರ - ಈ ಪ್ರಶ್ನೆಗೆ ಮೂರು ಬಗೆಯಲ್ಲಿ ಉತ್ತರವನ್ನು ತಿಳಿಯಬಹುದು. -

1. ಬಹುವಚನ ಪ್ರಯೋಗವು ಪ್ರಾಯಿಕವಾಗಿದೆ. ಹೆಚ್ಚಾಗಿ ವಾಕ್ಯಗಳಲ್ಲಿ ಮೂರಕ್ಕಿಂತ ಹೆಚ್ಚು ಪದಗಳಿರುವುದರಿಂದ ಬಹುವಚನವನ್ನು ಪ್ರಯೋಗಿಸಿದ್ದಾರೆ. ಮೂರು ಪದಗಳು ಇರಲೇಬೇಕೆಂಬ ನಿಯಮವು ಇರುವುದಿಲ್ಲ.

2. ವಾಕ್ಯಸ್ಫೋಟವನ್ನು ನಿರಾಸ ಮಾಡುವುದಕ್ಕಾಗಿ 'ಪದಾನಿ' ಎಂದಿದ್ದಾರೆ. ಹಿಂದೆ 'ವರ್ಣಾಃ' ಎಂಬ ಪದದ ಕೃತ್ಯವನ್ನು ವಿಚಾರ ಮಾಡುವಾಗ ವರ್ಣಸ್ಫೋಟ ನಿರಾಸಕ್ಕೋಸ್ಕರ 'ವರ್ಣಾಃ' ಎಂಬ ಪದವು ಸಾರ್ಥಕವೆಂದು ಹೇಗೆ ಕೆಲವರು ಸಮಾಧಾನವನ್ನು ಹೇಳಿದರೋ ಅದೇ ಸಮಾಧಾನವನ್ನು ಇಲ್ಲಿಯೂ ಕೂಡ ವಿವಕ್ಷಿಸಬೇಕು. 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ವಾಕ್ಯಂ' ಎಂದಷ್ಟೇ ಹೇಳಿದರೆ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಇವುಗಳುಳ್ಳದ್ದು ವಾಕ್ಯಸ್ಫೋಟವೆಂಬ ಭ್ರಾಂತಿ ಬರುತ್ತದೆ. ಅದಕ್ಕಾಗಿ 'ಪದಾನಿ' ಎಂಬುದಾಗಿ ಹೇಳಿದ್ದಾರೆ.

3. ಅಥವಾ ಪ್ರಕೃತಿಪ್ರತ್ಯಯಸಮಭಿವ್ಯಾಹಾರರೂಪವಾದ ಪದದಲ್ಲಿ ಅತಿವ್ಯಾಪ್ತಿನಿರಾಸ ಮಾಡುವುದಕ್ಕಾಗಿ 'ಪದಾನಿ' ಎಂದಿದ್ದಾರೆ. 'ಘಟಮ್' ಎಂಬುದು ಒಂದು ಪದ. ಇಲ್ಲಿ 'ಘಟ' ಎಂಬ ಪ್ರಕೃತಿ ಹಾಗೂ 'ಅಮ್' ಎಂಬ ಪ್ರತ್ಯಯವು ಸೇರಿದೆ. ಈ ಪ್ರಕೃತಿ ಹಾಗೂ ಪ್ರತ್ಯಯಗಳಿಗೆ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿಗಳು ಇರುವುದರಿಂದ ಇದೂ ಕೂಡ ವಾಕ್ಯ

ಎಂದಾಗಬೇಕಾದೀತು. ಅದಕ್ಕೋಸ್ಕರ 'ಪದಾನಿ' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿದ್ದಾರೆ. 'ಘಟಮ್' ಎಂಬುದು ಅನೇಕ ಪದಗಳ ಸಮುದಾಯರೂಪವಲ್ಲದ್ದರಿಂದ ಅತಿವ್ಯಾಪ್ತಿದೋಷವು ಬರುವುದಿಲ್ಲ.

## ವಾಕ್ಯಪ್ರಕ್ಷೇಪದ ಬಗ್ಗೆ ಒಂದು ವಿಮರ್ಶೆ -

'ಪ್ರಕೃತಿಪ್ರತ್ಯಯಸಮಭಿವ್ಯಾಹಾರಪದೇ ಅತಿವ್ಯಾಪ್ತಿನಿರಾಸಾಯ ಪದಾನಿ ಇತ್ಯುಕ್ತಿಃ' ಎಂಬ ವಾಕ್ಯವು ಕೆಲವು ಪ್ರಾಚೀನಕೋಶಗಳಲ್ಲಿ ಕಾಣಸುವುದಿಲ್ಲ. ಮುದ್ರಿತವಾದ ಪುಸ್ತಕಗಳಲ್ಲಿಯೂ ಕೂಡ 'ಯದ್ವಾ' ಎಂಬ ಪದವು ಕಾಣಸುತ್ತಿಲ್ಲ. 'ಯದ್ವಾ' ಎಂಬ ಪದವನ್ನು ಅನುಸಂಧಾನ ಮಾಡಿಕೊಂಡರೆ ಮಾತ್ರ ಈ ವಾಕ್ಯಕ್ಕೆ ಅರ್ಥವನ್ನು ಹೇಳಲು ಸಾಧ್ಯವಾಗುತ್ತದೆ.

ಪ್ರಾಚೀನಕೋಶಗಳಲ್ಲಿ ಈ ವಾಕ್ಯ ಕಾಣಸದಿರಲು ಕಾರಣ ಹೀಗಿರಬಹುದು - ಪ್ರಕೃತಿಪ್ರತ್ಯಯಸಮಭಿವ್ಯಾಹಾರರೂಪವಾದ ಪದದಲ್ಲಿ ಅತಿವ್ಯಾಪ್ತಿಯ ನಿರಾಸಕ್ಕಾಗಿ 'ಪದಾನಿ' ಎಂಬ ಶಬ್ದವನ್ನು ಹೇಳಬೇಕೆಂಬುದು ನ್ಯಾಯದೀಪಕಾರರ ಅಭಿಪ್ರಾಯವಾಗಿದ್ದಲ್ಲಿ ಹಿಂದೆ ಹೇಳಿದ 'ಪದಾನೀತಿ ಬಹುತ್ವಂ ಪ್ರಾಯಿಕಾಭಿಪ್ರಾಯಮ್' ಎಂಬ ವಾಕ್ಯದಿಂದ ವಿರೋಧ ಬರುತ್ತದೆ. ಏಕೆಂದರೆ, ಅಲ್ಲಿ ಅನೇಕ ಪದಗಳಿರಲೇಬೇಕೆಂಬ ನಿಯಮವಿಲ್ಲ ಎಂಬುದಾಗಿ ಸ್ಪಷ್ಟವಾಗಿ ಹೇಳಿದ್ದಾರೆ. ಈಗ ಅನೇಕ ಪದಗಳಿರಬೇಕೆಂದು ಹೇಳಿದರೆ ಏನಭಿಪ್ರಾಯ? ಎರಡು ಪದಗಳಿರಬೇಕೆಂಬ ಅಭಿಪ್ರಾಯವನ್ನು 'ಪದಾನಿ' ಎಂಬ ಬಹುವಚನದಿಂದ ಹೇಳಲು ಸಾಧ್ಯವಿಲ್ಲ. ಬಹುವಚನಕ್ಕೆ ಎರಡು ಪದಗಳು ಎಂಬ ಅಭಿಪ್ರಾಯವನ್ನು ಹೇಳುವುದು ಬಹಳ ಕಷ್ಟದ ಕೆಲಸ. ಅನೇಕ ಪದಗಳಿರಬೇಕೆಂಬ ಅರ್ಥವನ್ನು ಹೇಳಿದರೆ ಹಿಂದಿನ ವಾಕ್ಯದಿಂದ ವಿರೋಧವು ಬರುತ್ತದೆ. ಮತ್ತು ಹೇಗೆ ಎರಡೇ ಪದಗಳು ವಾಕ್ಯರೂಪವಾಗಿ ಶಾಬ್ದಬೋಧಕ್ಕೆ ಕಾರಣವಾಗುತ್ತದೋ ಹಾಗೆ ಕೆಲವೊಮ್ಮೆ ಒಂದೇ ಪದದಿಂದಲೂ ಕೂಡ ಶಾಬ್ದಬೋಧವು ಬರುತ್ತದೆ. ಆದ್ದರಿಂದ ಈ ವಾಕ್ಯವು ಪ್ರಕ್ಷಿಪ್ತವೆಂದು ವಿವಕ್ಷಿಸಿದಾಗ ಹೆಚ್ಚು ಸ್ವಾರಸ್ಯವಿದೆ.

ರಾಜಪುರುಷಃ ಎಂಬ ಸಮಾಸಶಬ್ದವನ್ನು ಕೆಲವರು ಪದವೆನ್ನುತ್ತಾರೆ. ಕೆಲವರು ವಾಕ್ಯವೆನ್ನುತ್ತಾರೆ. ಹೀಗೆ ವಾಕ್ಯ ಹಾಗೂ ಪದಗಳು ವೈವಕ್ಷಿಕವೆಂದು ವಿವಕ್ಷಿಸಿದಾಗ ಪ್ರಕೃತಿಪ್ರತ್ಯಯಸಮಭಿವ್ಯಾಹಾರರೂಪವಾದ ಪದದಲ್ಲಿ ಅತಿವ್ಯಾಪ್ತಿಯನ್ನು ಹೇಳುವುದು ಬಹಳ ಕಷ್ಟವೇ ಆಗುತ್ತದೆ.

ವಿದ್ವಾಂಸರು ಇನ್ನೂ ಹೆಚ್ಚು ವಿಚಾರವನ್ನು ಮಾಡಬಹುದು.

## 'ಶಬ್ದ' ಎಂದರೆ 'ವಾಕ್ಯ' ಎಂದೇಕೆ ವ್ಯಾಖ್ಯಾನಿಸಿದರು?

**ನ್ಯಾಯದೀಪ – 'ಪದಾದೀನಾಮ್' ಇತ್ಯಾದಿಪದೇನ ವಾಕ್ಯಸ್ಯ ಆಕಾಂಕ್ಷಾ-ಸಾನ್ನಿಧ್ಯಾದೇರ್ಗ್ರಹಃ । ಅತ ಏವೇತಿ ॥ ಪದಾದಿಸ್ವರೂಪವ್ಯುತ್ಪಾದನಾರ್ಥತ್ವಾದೇವ ಇತಿ ಬ್ರಹ್ಮತರ್ಕಸಂವಾದಾರ್ಥತ್ವಾದೇವ ಇತ್ಯರ್ಥಃ । ಮೂಲೇತಿ ॥ 'ನಿರ್ದೋಷಃ ಶಬ್ದ ಆಗಮಃ' ಇತಿ ಮೂಲಸ್ಥಮಿತ್ಯರ್ಥಃ ।**

ಅನುವಾದ– ಗ್ರಂಥದಲ್ಲಿ 'ಪದಾದೀನಾಂ' ಎಂಬಲ್ಲಿರುವ ಆದಿಪದದಿಂದ ವಾಕ್ಯದಲ್ಲಿರುವ ಆಕಾಂಕ್ಷೆ ಸಾನ್ನಿಧ್ಯ ಮೊದಲಾದವುಗಳನ್ನು ವಿವಕ್ಷಿಸಬೇಕು.

'ಅತ ಏವ' ಎಂಬುದಕ್ಕೆ ಎರಡರ್ಥ. (೧) ಪದ ಮೊದಲಾದವುಗಳ ಸ್ವರೂಪವನ್ನು ತಿಳಿಸುವ ಉದ್ದೇಶ ಇರುವುದರಿಂದಲೇ (೨) ಅಥವಾ ಬ್ರಹ್ಮತರ್ಕದ ಸಂವಾದ ತೋರಿಸುವುದಕ್ಕಾಗಿಯೂ ಪ್ರಮಾಣಲಕ್ಷಣ ಟೀಕೆಯಲ್ಲಿ 'ಶಬ್ದ' ಎಂಬುದಕ್ಕೆ 'ವಾಕ್ಯ' ಎಂದು ವ್ಯಾಖ್ಯಾನ ಮಾಡಿದ್ದಾರೆ.

'ಮೂಲಸ್ಥಂ' ಎಂದರೆ 'ನಿರ್ದೋಷಃ ಶಬ್ದಃ ಆಗಮಃ' ಎಂಬ ಪ್ರಮಾಣಲಕ್ಷಣದಲ್ಲಿರುವ ಎಂದರ್ಥ.

ವಿವರಣೆ - ಪ್ರಮಾಣಪದ್ಧತಿಯಲ್ಲಿ ಕೇವಲ ಪದದಲ್ಲಿರುವ ಆಕಾಂಕ್ಷಾದಿಗಳ ಬಗ್ಗೆ ಮಾತ್ರ ಹೇಳಿರುವುದಲ್ಲ ವಾಕ್ಯದಲ್ಲಿರುವ ಆಕಾಂಕ್ಷಾದಿಗಳ ಬಗ್ಗೆಯೂ ಹೇಳಿದ್ದಾರೆ.

'ನಿರ್ದೋಷಃ ಶಬ್ದಃ ಆಗಮಃ' ಎಂಬ ಪ್ರಮಾಣಲಕ್ಷಣದಲ್ಲಿರುವ ಶಬ್ದ ಎಂಬುದಕ್ಕೆ ಗ್ರಂಥ-ಕಾರರು ವಾಕ್ಯ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಇದರ ಉದ್ದೇಶ ಎರಡು. (1) ಪದ ಮೊದಲಾದವುಗಳ ಸ್ವರೂಪವನ್ನು ತಿಳಿಸುವುದು. (2) ಬ್ರಹ್ಮತರ್ಕದ ಸಂವಾದವಿದೆಯೆಂದು ತಿಳಿಸುವುದು. ಬ್ರಹ್ಮತರ್ಕದಲ್ಲಿ 'ಆಗಮೋಽದುಷ್ಟವಾಕ್ಯಂ ಚ' ಎಂದು ಹೇಳಿರುವುದರಿಂದ ಇಲ್ಲಿಯೂ 'ಶಬ್ದ' ಎಂಬ ಪದಕ್ಕೆ 'ವಾಕ್ಯಂ' ಎಂದು ವ್ಯಾಖ್ಯಾನ ಮಾಡಿದ್ದಾರೆ.

## ಗೋಷ್ಠಿಯ ವಿಚಾರಗಳು -
## ಜ್ಞಾತಜ್ಞಾಪಕತ್ವವು ದೋಷವೇ ಅಲ್ಲವೇ?

ಜ್ಞಾತಜ್ಞಾಪಕವಾದ ವಾಕ್ಯವು ಯಥಾರ್ಥವಾಗಬಹುದು. ಆದರೆ ಆಗಮರೂಪವಾದ ಪ್ರಮಾಣವೆಂದು ಕರೆಸಿಕೊಳ್ಳುವುದಿಲ್ಲ. ಈ ವಿಷಯವನ್ನು ನ್ಯಾಯಸುಧೆಯ ನವಿಲಕ್ಷಣತ್ವಾ-

ಧಿಕರಣದ ಟಿಪ್ಪಣಿಗಳಲ್ಲಿ ಹಾಗೂ ಪ್ರಮಾಣಪದ್ಧತಿಯ ವ್ಯಾಖ್ಯಾನವಾದ ಶ್ರೀಸತ್ಯನಾಥರ ಅಭಿನವಾಮೃತ ಮೊದಲಾದ ಕಡೆ ವಿಮರ್ಶೆ ಮಾಡಿರುತ್ತಾರೆ.

ದಾರ್ಢ್ಯಕ್ಕೋಸ್ಕರ ಅಥವಾ ತಾತ್ಪರ್ಯದ ಅತಿಶಯಕ್ಕೋಸ್ಕರ ಅಥವಾ ನಿಯಮಕ್ಕೋಸ್ಕರ ಜ್ಞಾತಜ್ಞಾಪಕವಾದ ವಾಕ್ಯಗಳನ್ನು ಉಚ್ಚರಿಸುವುದು ಅಪ್ರಮಾಣವಾಗುವುದಿಲ್ಲ. ಅಂಥಾ ವಾಕ್ಯಗಳೆಲ್ಲ ಯಥಾರ್ಥವೂ ಆಗುತ್ತವೆ; ಪ್ರಮಾಣವಾಕ್ಯವೂ ಆಗುತ್ತವೆ. ಆದರೆ ಗುಡೋ ಮಧುರಃ ಇತ್ಯಾದಿ ಜ್ಞಾತಜ್ಞಾಪಕವಾದ ವಾಕ್ಯಗಳನ್ನು ಪ್ರಯೋಗ ಮಾಡುವುದರಿಂದ ಯಾವುದೇ ಪ್ರಯೋಜನವು ಇರುವುದಿಲ್ಲ. ಆದ್ದರಿಂದ ಇಂಥಾ ವಾಕ್ಯಗಳನ್ನು ಆಗಮಾ-ಭಾಸವೆಂದೇ ಹೇಳಬೇಕು.

ಜ್ಞಾತಜ್ಞಾಪಕವಾದ ವಾಕ್ಯವು ಏಕೆ ಅಪ್ರಮಾಣವಾಗುತ್ತದೆ ಎಂಬುದಕ್ಕೆ ಕಾರಣ ಹೀಗಿದೆ. ಪ್ರತ್ಯಕ್ಷವು ಮತ್ತೊಬ್ಬರಿಗೋಸ್ಕರ ಇರುವುದಲ್ಲ. ಆದ್ದರಿಂದ ಜ್ಞಾತಜ್ಞಾಪಕತ್ವವು ಪ್ರತ್ಯಕ್ಷವಿಷಯದಲ್ಲಿ ಅಪ್ರಮಾಣವಾಗುವುದಿಲ್ಲ. ಸ್ವಾರ್ಥಾನುಮಾನದಲ್ಲಿಯೂ ಕೂಡ ಜ್ಞಾತಜ್ಞಾಪಕತ್ವವು ದೋಷವಲ್ಲ. ಆದರೆ ಪರಾರ್ಥಾನುಮಾನದಲ್ಲಿ ಮತ್ತೊಬ್ಬರಿಗೋಸ್ಕರವೇ ನಾವು ಅನುಮಾನವನ್ನು ಪ್ರಯೋಗಿಸುವುದರಿಂದ ಜ್ಞಾತಜ್ಞಾಪಕತ್ವವು ಅಲ್ಲಿ ದೋಷವಾಗುತ್ತದೆ. ಅದನ್ನೇ ಸಿದ್ಧಸಾಧನವೆಂದು ಕರೆಯುತ್ತಾರೆ.

ಆಗಮಪ್ರಮಾಣವು ಮತ್ತೊಬ್ಬರಿಗೆ ಬೋಧ ಹುಟ್ಟಿಸುವುದಕ್ಕೋಸ್ಕರವೇ ಇರುತ್ತದೆ. ಒಂದು ವೇಳೆ ಮೊದಲೇ ಮತ್ತೊಬ್ಬರಿಗೆ ವಿಷಯವು ತಿಳಿದಿದ್ದರೆ ಅದನ್ನೇ ಪುನಃ ನಾವು ಹೇಳಿದಾಗ ತಿಳಿಸಿದ್ದನ್ನೇ ತಿಳಿಸಿದಂತಾಗುವುದರಿಂದ ಜ್ಞಾತಜ್ಞಾಪಕತ್ವವು ಆಗಮದಲ್ಲಿ ದೋಷವಾಗುತ್ತದೆ.

ಆದ್ದರಿಂದ ಜ್ಞಾತಜ್ಞಾಪಕತ್ವವು ಸರ್ವಾತ್ಮನಾ ದೋಷವೆಂದು ಪರಿಗಣಿಸಬಾರದು. ಬುದ್ಧಿಯ ವ್ಯವಸ್ಥೆಯಿಂದ ದೋಷವೆಂದು ತಿಳಿಯಬೇಕು.

ಮತ್ತು ಇಷ್ಟಸಾಧನತಾಬೋಧಕವಾದ ವಾಕ್ಯವಷ್ಟೇ ಪ್ರಮಾಣವೆಂದು ನಾವು ಹೇಳುತ್ತೇವೆ. ನಮಗೆ ತಿಳಿಸಿದ ವಿಷಯವನ್ನೇ ಪುನಃ ತಿಳಿಸುವುದು ಇಷ್ಟಸಾಧನತಾಬೋಧಕವಲ್ಲದ್ದರಿಂದಲೂ ಜ್ಞಾತಜ್ಞಾಪಕತ್ವವು ಪ್ರಮಾಣವಾಗುವುದಿಲ್ಲ.

# ಸಮಾಸಕ್ಕೆ ಪದತ್ವವ್ಯವಹಾರವು ಸರಿಯೋ ತಪ್ಪೋ?

ಶಾಸ್ತ್ರದಲ್ಲಿ ಸಮಾಸವು ಸಂಸರ್ಗಬೋಧಕವಾಗ್ಗಿಂದ ವಾಕ್ಯವೆಂದು ಅನೇಕ ಕಡೆ ವ್ಯವಹರಿಸಲಾಗಿದೆ. ಇದನ್ನು ಸಮರ್ಥಿಸಲು ನಮ್ಮಲ್ಲೇ ಕೆಲವರು 'ರಾಜಪುರುಷः' ಎಂಬ ಸಮಾಸಕ್ಕೆ ಪದಸಂಜ್ಞೆ ಯಿಲ್ಲವೆಂದು ಹೇಳುತ್ತಾರೆ. ''ಸಮಸ್ತಪದ'' ಎಂಬುದಾಗಿ ಸಮಾಸದಲ್ಲಿಯೂ ಕೂಡ ಪದ ಎಂಬ ವ್ಯವಹಾರವು ಲೋಕದಲ್ಲಿ ಪ್ರಬಲ- ವಾಗಿದೆ. ಮತ್ತು ಇನ್ನೂ ಕೆಲವೆಡೆ 'ಪೀತಾಂಬರಃ' ಮೊದಲಾದವುಗಳನ್ನು ಪದವೆಂದೇ ಪ್ರಯೋಗಿಸಲಾಗುತ್ತದೆ. ಈ ವಿವಕ್ಷೆಯಿಂದ ನಮ್ಮಲ್ಲೇ ಕೆಲವರು 'ರಾಜಪುರುಷः' ಎಂಬುದನ್ನು ಪದವೆಂದು ಹೇಳುತ್ತಾರೆ.

ಸಮಾಸದಲ್ಲಿಯೂ ಶಕ್ತಿಯಿದೆಯೆಂದು ಗ್ರಂಥಕಾರರು ಸಮರ್ಥಿಸುತ್ತಾರೆ. ಒಂದು ವೇಳೆ ಸಮಾಸವನ್ನು ಪದವಲ್ಲವೆಂದು ಹೇಳಿದರೆ ಮುಂದೆ ಸಮರ್ಥಿಸುವ ಶಕ್ತಿವಿಚಾರವೇ ಅಸಂಗತವಾಗುತ್ತದೆ. ಆದ್ದರಿಂದ ಎರಡನೆಯ ಪಕ್ಷದವರು ರಾಜಪುರುಷಃ ಎಂಬುದನ್ನು ಪದವೆಂದು ಒಪ್ಪಿದ್ದಾರೆ.

ಹಾಗಾದರೆ ಮೊದಲನೆಯ ಪಕ್ಷದವರೇಕೆ ವಾಕ್ಯವೆಂದು ಪರಿಗಣಿಸಿದ್ದಾರೆ? ಎಂಬ ಪ್ರಶ್ನೆ ಬರುತ್ತದೆ. ಸಮಾಸವು ಸಂಸರ್ಗಬೋಧಕವಾದ್ದರಿಂದ ವಾಕ್ಯತುಲ್ಯವಾಗಿದೆಯೆಂಬ ವ್ಯವಹಾರವು ಶಾಸ್ತ್ರದಲ್ಲಿ ಅನೇಕಕಡೆ ಇರುವುದರಿಂದ ಇದನ್ನು ಕೂಡಿಸುವುದಕ್ಕಾಗಿ ಮೊದಲನೆಯ ಪಕ್ಷದವರು ಹಾಗೆ ಹೇಳಿದ್ದಾರೆ. ಕೇವಲ ಪದವು ಸಂಸರ್ಗಬೋಧಕವಲ್ಲ. ಆದರೆ ವಾಕ್ಯದಂತೆ ಸಮಾಸವು ಸಂಸರ್ಗಬೋಧಕವಾದ್ದರಿಂದ ಪದವಲ್ಲವೆಂದು ಇವರ ಅಭಿಪ್ರಾಯ. ಮತ್ತು ವೈಯ್ಯಾಕರಣರು ಕೂಡ 'ಕೃತ್ತದ್ಧಿತಸಮಾಸಾಶ್ಚ' 'ರಷಾಭ್ಯಾಂ ನೋಣಃ ಸಮಾನಪದೇ' ಇತ್ಯಾದಿ ಸೂತ್ರಗಳಲ್ಲಿ ಸಮಾಸವನ್ನು ಪದವೆಂದು ಪರಿಗಣಿಸಿರುವುದಿಲ್ಲ. ಆದ್ದರಿಂದ ವಿವಕ್ಷಾಭೇದದಿಂದ ಇಬ್ಬರ ಪಕ್ಷದಲ್ಲಿಯೂ ಕೂಡ ವಿರೋಧವಿರುವುದಿಲ್ಲ. ಆದರೆ ವಿಚಾರ ಮಾಡಬೇಕಾದ ಅಂಶ ಇನ್ನೂ ಬಹಳವಿದೆ.

'ರಾಜ್ಞಃ ಪುರುಷः' ಎಂಬುದನ್ನು ಪದವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಮಧ್ಯದಲ್ಲಿ ವಿಭಕ್ತಿಯಿದೆ. ಆದರೆ 'ರಾಜಪುರುಷः' ಎಂಬಲ್ಲಿ ಮಧ್ಯದಲ್ಲಿ ವಿಭಕ್ತಿ ಇರುವುದೇ ಇಲ್ಲ. ಸಮಾಸದ ಕೊನೆಯಲ್ಲಿ ಬೇರೆ ವಿಭಕ್ತಿ ಬಂದಿರುವುದರಿಂದ ಇದನ್ನು ಪದವೆಂದು ಹೇಳಲು ಯಾವ ಅಡ್ಡಿಯೂ ಇರುವುದಿಲ್ಲ ಎಂಬುದು ಎರಡನೆಯ ಪಕ್ಷದವರ ವಿಚಾರ. ಈ ಪಕ್ಷವು

ಹೆಚ್ಚು ಸ್ವರಸವಾಗಿದೆ. ಮತ್ತು ಗ್ರಂಥಕಾರರು ಮುಂದೆ ಸಮಾಸಪದಗಳಿಗೆ ಶಕ್ತಿಯನ್ನು ಸಮರ್ಥಿಸುವುದಕ್ಕೆ ಇದು ಪೂರಕವೂ ಆಗಿದೆ.

## ಅವಿನಾಭಾವವು ಆಕಾಂಕ್ಷೆಯೆಂದರೆ ಅವ್ಯಾಪ್ತಿ

**ತರ್ಕತಾಂಡವ – ನನು ಕೇಯಮಾಕಾಂಕ್ಷಾ? ನ ತಾವದವಿನಾಭಾವಃ । 'ಘಟಮಾನಯ' ಇತ್ಯಾದಾವಭಾವಾತ್ । ನ ಹಿ ಘಟ ಆನಯನಾವಿನಾಭೂತಃ ।**

ಅನುವಾದ – 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಮ್' ಎಂದು ಹೇಳಿದಿರಿ ಇಲ್ಲಿರುವ ಆಕಾಂಕ್ಷಾ ಎಂದರೆ ಏನು?

ಅವಿನಾಭಾವವೇ ಆಕಾಂಕ್ಷಾ ಎಂದು ಹೇಳಿದರೆ 'ಘಟಮಾನಯ' ಎಂಬಲ್ಲಿ ಅವ್ಯಾಪ್ತಿ ದೋಷ ಬರುತ್ತದೆ. ಇದು ನಿರ್ದುಷ್ಟವಾಕ್ಯವಾಗಿರುವುದರಿಂದ ಇಲ್ಲಿಯೂ ಆಕಾಂಕ್ಷಾಲಕ್ಷಣ ಬರಬೇಕು. ಘಟಕ್ಕೂ ಆನಯನಕ್ಕೂ ಪರಸ್ಪರವಾಗಿ ಅವಿನಾಭಾವವು ಇರುವುದಿಲ್ಲ. ಆದ್ದರಿಂದ ಅವ್ಯಾಪ್ತಿ-ದೋಷವು ಬರುತ್ತದೆ.

## ವಾಕ್ಯದ ಲಕ್ಷಣದಲ್ಲಿ ಪ್ರಥಮತಃ ಉದ್ದಿಷ್ಟ ಯಾವುದು?

**ನ್ಯಾಯದೀಪ – ತತ್ರ ಪದ್ಧತೌ ವಾಕ್ಯಲಕ್ಷಣೇ ಪ್ರಥಮೋದ್ದಿಷ್ಟಾಕಾಂಕ್ಷಾ-ಸ್ವರೂಪಂ ನಿರೂಪಯಿತುಂ ಪೂರ್ವಪಕ್ಷಮಾಹ – ನನ್ವಿತಿ ॥ 'ಪದಾನಾಂ ಯಾ ಆಕಾಂಕ್ಷಾ ಸೇಯಂ ಕಾ?' ಇತ್ಯರ್ಥಃ ।**

ಅನುವಾದ– ಪ್ರಮಾಣಪದ್ಧತಿಯಲ್ಲಿ ವಾಕ್ಯದ ಲಕ್ಷಣವನ್ನು ನಿರೂಪಣೆ ಮಾಡುವಾಗ ಮೊದಲು ಆಕಾಂಕ್ಷೆಯ ಸ್ವರೂಪವನ್ನು ಉದ್ದೇಶ ಮಾಡಿದ್ದಾರೆ. ಅದನ್ನು ನಿರೂಪಣೆ ಮಾಡುವುದಕ್ಕಾಗಿ ನನು ಇತ್ಯಾದಿ ಗ್ರಂಥದಿಂದ ಆಕಾಂಕ್ಷೆಯ ಪೂರ್ವಪಕ್ಷಲಕ್ಷಣವನ್ನು ಹೇಳುತ್ತಿದ್ದಾರೆ.

'ಕೇಯಂ ಆಕಾಂಕ್ಷಾ' ಇತ್ಯಾದಿವಾಕ್ಯಕ್ಕೆ 'ಪದಗಳಿಗೆ ಪರಸ್ಪರವಾಗಿ ಯಾವ ಆಕಾಂಕ್ಷೆ ಇದೆಯೋ ಅಂತಹ ಆಕಾಂಕ್ಷೆಯ ಲಕ್ಷಣವೇನು?' ಎಂದು ಅರ್ಥ.

**ನ್ಯಾಯದೀಪ – ಅಭಾವಾದಿತಿ ॥ ಕುತಃ ಪರಸ್ಪರವ್ಯಭಿಚಾರಾದಿತಿ ಭಾವೇನಾಹ – ನ ಹೀತಿ ॥ ಆನಯನಂ ವಾ ಘಟಾವಿನಾಭೂತಮಿತ್ಯುಪಲಕ್ಷ್ಯತೇ ॥**

ಅನುವಾದ– 'ಘಟಮಾನಯ' ಎಂಬಲ್ಲಿ ಅವಿನಾಭಾವ ಎಂಬ ಆಕಾಂಕ್ಷೆಯು ಬರುವುದಿಲ್ಲ. ಏಕೆಂದರೆ, ಪರಸ್ಪರ ವ್ಯಭಿಚಾರವಿದೆ ಎಂಬ ಅಭಿಪ್ರಾಯದಿಂದ 'ನಹಿ ಘಟಃ' ಇತ್ಯಾದಿ ವಾಕ್ಯವು ಹೊರಟಿದೆ. ಗ್ರಂಥದಲ್ಲಿ ಘಟವು ಆನಯನದಿಂದ ಅವಿನಾಭೂತವಾಗಿಲ್ಲ ಎಂದಷ್ಟೇ ಹೇಳಿದ್ದಾರೆ 'ಆನಯನವೂ ಸಹ ಘಟದಿಂದ ಅವಿನಾಭೂತವಾಗಿಲ್ಲ' ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

ವಿಶೇಷವಿಚಾರ – ಪ್ರಮಾಣಪದ್ಧತಿಯಲ್ಲಿ ಸಿದ್ಧಾಂತಪರವಾದ ಆಕಾಂಕ್ಷಾಲಕ್ಷಣವನ್ನು ಹೇಳಿರುತ್ತಾರೆ. ಅದನ್ನು ತಿಳಿಯುವ ಮೊದಲು ಪೂರ್ವಪಕ್ಷದ ಆಕಾಂಕ್ಷಾಲಕ್ಷಣವನ್ನು ಇಲ್ಲಿ ನಿರೂಪಣೆ ಮಾಡುತ್ತಿದ್ದಾರೆ.

'ಪ್ರಯುಜ್ಯಮಾನಾನಾಂ ಪದಾರ್ಥಾನಾಂ ಅವಿನಾಭಾವಃ ಆಕಾಂಕ್ಷಾ' 'ಪ್ರಯೋಗ ಮಾಡಲ್ಪಟ್ಟ ಎರಡು ಪದಾರ್ಥಗಳಿಗೆ ಪರಸ್ಪರ ಅವಿನಾಭಾವ ಇರುವುದೇ ಆಕಾಂಕ್ಷಾ ಎನಿಸುತ್ತದೆ. ಉದಾಹರಣೆ - 'ವಹ್ನಿಮಾನ್ ಧೂಮಾತ್' ಎಂಬಲ್ಲಿ ಧೂಮವು ವಹ್ನಿಯಿಂದ ಅವಿನಾಭೂತವಾದ ಕಾರಣ ಆಕಾಂಕ್ಷೆಯ ಲಕ್ಷಣ ಬರುತ್ತದೆ. ಆದರೆ ಈ ಲಕ್ಷಣಕ್ಕೆ 'ಘಟಮಾನಯ' ಎಂಬಲ್ಲಿ ಅವ್ಯಾಪ್ತಿದೋಷವಿದೆ. ಏಕೆಂದರೆ, ಪ್ರಯುಜ್ಯಮಾನವಾದ ಘಟ ಎಂಬ ಪದಾರ್ಥಕ್ಕೂ ಆನಯನ ಎಂಬ ಪದಾರ್ಥಕ್ಕೂ ಪರಸ್ಪರವಾಗಿ ಅವಿನಾಭಾವವೇ ಇರುವುದಿಲ್ಲ. ಘಟವು ಆನಯನದೊಂದಿಗೆ ನಿರಂತರವಾಗಿ ಅವಿನಾಭೂತವಾಗಿರಲು ಸಾಧ್ಯವೇ ಇಲ್ಲ. ಇದರಂತೆ ಆನಯನವೂ ಕೂಡ ಘಟದಿಂದ ಅವಿನಾಭೂತವಾಗಿರಲು ಸಾಧ್ಯವಿಲ್ಲ. ಅವಿನಾಭಾವವೇ ಆಕಾಂಕ್ಷೆಯ ಲಕ್ಷಣವೆನ್ನುವುದಾದರೆ, 'ಘಟಮಾನಯ' ಎಂಬ ನಿರ್ದುಷ್ಟವಾಕ್ಯದಲ್ಲಿಯೇ ಆಕಾಂಕ್ಷೆ ಇಲ್ಲವೆಂದಾಗಬೇಕಾದೀತು. ಹೀಗೆ ಅವ್ಯಾಪ್ತಿ-ದೋಷ ಬರುವ ಕಾರಣ ಅವಿನಾಭಾವವು ಆಕಾಂಕ್ಷೆಯ ಲಕ್ಷಣವೆಂದು ಹೇಳಬಾರದು.

## ಕ್ರಿಯಾಕಾರಕಗಳಿಗೆ ಅವಿನಾಭಾವವಿದೆಯೇ?

**ನ್ಯಾಯದೀಪ– ಏತೇನ 'ಕಾರಕಸ್ಯ ಕ್ರಿಯಾಽವಿನಾಭಾವಃ, ಕ್ರಿಯಾಯಾಃ**

ಹೆಚ್ಚು ಸ್ವರಸವಾಗಿದೆ. ಮತ್ತು ಗ್ರಂಥಕಾರರು ಮುಂದೆ ಸಮಾಸಪದಗಳಿಗೆ ಶಕ್ತಿಯನ್ನು ಸಮರ್ಥಿಸುವುದಕ್ಕೆ ಇದು ಪೂರಕವೂ ಆಗಿದೆ.

## ಅವಿನಾಭಾವವು ಆಕಾಂಕ್ಷೆಯೆಂದರೆ ಅವ್ಯಾಪ್ತಿ

**ತರ್ಕತಾಂಡವ – ನನು ಕೇಯಮಾಕಾಂಕ್ಷಾ? ನ ತಾವದವಿನಾಭಾವಃ । 'ಘಟಮಾನಯ' ಇತ್ಯಾದಾವಭಾವಾತ್ । ನ ಹಿ ಘಟ ಆನಯನಾವಿನಾಭೂತಃ ।**

ಅನುವಾದ – 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಮ್' ಎಂದು ಹೇಳಿದಿರಿ ಇಲ್ಲಿರುವ ಆಕಾಂಕ್ಷಾ ಎಂದರೆ ಏನು?

ಅವಿನಾಭಾವವೇ ಆಕಾಂಕ್ಷಾ ಎಂದು ಹೇಳಿದರೆ 'ಘಟಮಾನಯ' ಎಂಬಲ್ಲಿ ಅವ್ಯಾಪ್ತಿ ದೋಷ ಬರುತ್ತದೆ. ಇದು ನಿರ್ದುಷ್ಟವಾಕ್ಯವಾಗಿರುವುದರಿಂದ ಇಲ್ಲಿಯೂ ಆಕಾಂಕ್ಷಾಲಕ್ಷಣ ಬರಬೇಕು. ಘಟಕ್ಕೂ ಆನಯನಕ್ಕೂ ಪರಸ್ಪರವಾಗಿ ಅವಿನಾಭಾವವು ಇರುವುದಿಲ್ಲ. ಆದ್ದರಿಂದ ಅವ್ಯಾಪ್ತಿ-ದೋಷವು ಬರುತ್ತದೆ.

## ವಾಕ್ಯದ ಲಕ್ಷಣದಲ್ಲಿ ಪ್ರಥಮತಃ ಉದ್ದಿಷ್ಟ ಯಾವುದು?

**ನ್ಯಾಯದೀಪ – ತತ್ರ ಪದ್ಧತೌ ವಾಕ್ಯಲಕ್ಷಣೇ ಪ್ರಥಮೋದ್ದಿಷ್ಟಾಕಾಂಕ್ಷಾ-ಸ್ವರೂಪಂ ನಿರೂಪಯಿತುಂ ಪೂರ್ವಪಕ್ಷಮಾಹ – ನನ್ವಿತಿ ॥ 'ಪದಾನಾಂ ಯಾ ಆಕಾಂಕ್ಷಾ ಸೇಯಂ ಕಾ?' ಇತ್ಯರ್ಥಃ ।**

ಅನುವಾದ– ಪ್ರಮಾಣಪದ್ಧತಿಯಲ್ಲಿ ವಾಕ್ಯದ ಲಕ್ಷಣವನ್ನು ನಿರೂಪಣೆ ಮಾಡುವಾಗ ಮೊದಲು ಆಕಾಂಕ್ಷೆಯ ಸ್ವರೂಪವನ್ನು ಉದ್ದೇಶ ಮಾಡಿದ್ದಾರೆ. ಅದನ್ನು ನಿರೂಪಣೆ ಮಾಡುವುದಕ್ಕಾಗಿ ನನು ಇತ್ಯಾದಿ ಗ್ರಂಥದಿಂದ ಆಕಾಂಕ್ಷೆಯ ಪೂರ್ವಪಕ್ಷಲಕ್ಷಣವನ್ನು ಹೇಳುತ್ತಿದ್ದಾರೆ.

'ಕೇಯಂ ಆಕಾಂಕ್ಷಾ' ಇತ್ಯಾದಿವಾಕ್ಯಕ್ಕೆ 'ಪದಗಳಿಗೆ ಪರಸ್ಪರವಾಗಿ ಯಾವ ಆಕಾಂಕ್ಷೆ ಇದೆಯೋ ಅಂತಹ ಆಕಾಂಕ್ಷೆಯ ಲಕ್ಷಣವೇನು?' ಎಂದು ಅರ್ಥ.

**ನ್ಯಾಯದೀಪ – ಅಭಾವಾದಿತಿ ॥ ಕುತಃ ಪರಸ್ಪರವ್ಯಭಿಚಾರಾದಿತಿ ಭಾವೇನಾಹ – ನ ಹೀತಿ ॥ ಆನಯನಂ ವಾ ಘಟಾವಿನಾಭೂತಮಿತ್ಯುಪಲಕ್ಷ್ಯತೇ ॥**

ಅನುವಾದ– 'ಘಟಮಾನಯ' ಎಂಬಲ್ಲಿ ಅವಿನಾಭಾವ ಎಂಬ ಆಕಾಂಕ್ಷೆಯು ಬರುವುದಿಲ್ಲ. ಏಕೆಂದರೆ, ಪರಸ್ಪರ ವ್ಯಭಿಚಾರವಿದೆ ಎಂಬ ಅಭಿಪ್ರಾಯದಿಂದ 'ನಹಿ ಘಟಃ' ಇತ್ಯಾದಿ ವಾಕ್ಯವು ಹೊರಟಿದೆ. ಗ್ರಂಥದಲ್ಲಿ ಘಟವು ಆನಯನದಿಂದ ಅವಿನಾಭೂತವಾಗಿಲ್ಲ ಎಂದಷ್ಟೇ ಹೇಳಿದ್ದಾರೆ 'ಆನಯನವೂ ಸಹ ಘಟದಿಂದ ಅವಿನಾಭೂತವಾಗಿಲ್ಲ' ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

ವಿಶೇಷವಿಚಾರ – ಪ್ರಮಾಣಪದ್ಧತಿಯಲ್ಲಿ ಸಿದ್ಧಾಂತಪರವಾದ ಆಕಾಂಕ್ಷಾಲಕ್ಷಣವನ್ನು ಹೇಳಿರುತ್ತಾರೆ. ಅದನ್ನು ತಿಳಿಯುವ ಮೊದಲು ಪೂರ್ವಪಕ್ಷದ ಆಕಾಂಕ್ಷಾಲಕ್ಷಣವನ್ನು ಇಲ್ಲಿ ನಿರೂಪಣೆ ಮಾಡುತ್ತಿದ್ದಾರೆ.

'ಪ್ರಯುಜ್ಯಮಾನಾನಾಂ ಪದಾರ್ಥಾನಾಂ ಅವಿನಾಭಾವಃ ಆಕಾಂಕ್ಷಾ' 'ಪ್ರಯೋಗ ಮಾಡಲ್ಪಟ್ಟ ಎರಡು ಪದಾರ್ಥಗಳಿಗೆ ಪರಸ್ಪರ ಅವಿನಾಭಾವ ಇರುವುದೇ ಆಕಾಂಕ್ಷಾ ಎನಿಸುತ್ತದೆ. ಉದಾಹರಣೆ - 'ವಹ್ನಿಮಾನ್ ಧೂಮಾತ್'' ಎಂಬಲ್ಲಿ ಧೂಮವು ವಹ್ನಿಯಿಂದ ಅವಿನಾಭೂತವಾದ ಕಾರಣ ಆಕಾಂಕ್ಷೆಯ ಲಕ್ಷಣ ಬರುತ್ತದೆ. ಆದರೆ ಈ ಲಕ್ಷಣಕ್ಕೆ 'ಘಟಮಾನಯ' ಎಂಬಲ್ಲಿ ಅವ್ಯಾಪ್ತಿದೋಷವಿದೆ. ಏಕೆಂದರೆ, ಪ್ರಯುಜ್ಯಮಾನವಾದ ಘಟ ಎಂಬ ಪದಾರ್ಥಕ್ಕೂ ಆನಯನ ಎಂಬ ಪದಾರ್ಥಕ್ಕೂ ಪರಸ್ಪರವಾಗಿ ಅವಿನಾಭಾವವೇ ಇರುವುದಿಲ್ಲ. ಘಟವು ಆನಯನದೊಂದಿಗೆ ನಿರಂತರವಾಗಿ ಅವಿನಾಭೂತವಾಗಿರಲು ಸಾಧ್ಯವೇ ಇಲ್ಲ. ಇದರಂತೆ ಆನಯನವೂ ಕೂಡ ಘಟದಿಂದ ಅವಿನಾಭೂತವಾಗಿರಲು ಸಾಧ್ಯವಿಲ್ಲ. ಅವಿನಾಭಾವವೇ ಆಕಾಂಕ್ಷೆಯ ಲಕ್ಷಣವೆನ್ನುವುದಾದರೆ, 'ಘಟಮಾನಯ' ಎಂಬ ನಿರ್ದುಷ್ಟವಾಕ್ಯದಲ್ಲಿಯೇ ಆಕಾಂಕ್ಷೆ ಇಲ್ಲವೆಂದಾಗಬೇಕಾದೀತು. ಹೀಗೆ ಅವ್ಯಾಪ್ತಿದೋಷ ಬರುವ ಕಾರಣ ಅವಿನಾಭಾವವು ಆಕಾಂಕ್ಷೆಯ ಲಕ್ಷಣವೆಂದು ಹೇಳಬಾರದು.

## ಕ್ರಿಯಾಕಾರಕಗಳಿಗೆ ಅವಿನಾಭಾವವಿದೆಯೇ?

**ನ್ಯಾಯದೀಪ – ಏತೇನ 'ಕಾರಕಸ್ಯ ಕ್ರಿಯಾಽವಿನಾಭಾವಃ, ಕ್ರಿಯಾಯಾಃ**

**ಕಾರಕಾವಿನಾಭಾವೋಽಸ್ತಿ' ಇತಿ ನಿರಸ್ತಮ್ । ಕ್ರಿಯಾವಿಶೇಷಕಾರಕವಿಶೇಷಯೋಃ ತದಭಾವೇನ ಘಟಮಾನಯೇತ್ಯನಯೋಃ ನಿರಾಕಾಂಕ್ಷತಾಽಪತ್ತೇರಿತಿ ॥**

ಅನುವಾದ– ಹೀಗೆ ಸಮರ್ಥನೆ ಮಾಡಿದ್ದರಿಂದ ಮತ್ತೊಂದು ಆಕ್ಷೇಪವನ್ನು ನಿರಾಕರಣೆ ಮಾಡಿದಂತಾಯಿತು.

ಆಕ್ಷೇಪ – 'ಘಟಕ್ಕೂ ಆನಯನಕ್ಕೂ ಪರಸ್ಪರ ಅವಿನಾಭಾವ ಇಲ್ಲದಿದ್ದರೂ ಸಾಮಾನ್ಯವಾಗಿ ಕಾರಕಕ್ಕೆ ಕ್ರಿಯೆಯಿಂದ ಅವಿನಾಭಾವ ಇರುತ್ತದೆ. ಕ್ರಿಯೆಗೂ ಕೂಡ ಕಾರಕದಿಂದ ಅವಿನಾಭಾವ ಇರುತ್ತದೆ. ಹೀಗಿರುವಾಗ 'ಘಟಮಾನಯ' ಎಂಬಲ್ಲಿ ಅವಿನಾಭಾವವೆಂಬ ಆಕಾಂಕ್ಷೆಯೇ ಇರುವುದಿಲ್ಲವೆಂದು ಹೇಗೆ ಹೇಳುವಿರಿ?

ಪರಿಹಾರ – ಹೌದು ಆದರೆ 'ಆನಯನ' ಎಂಬ ಕ್ರಿಯಾವಿಶೇಷಕ್ಕೂ 'ಘಟ' ಎಂಬ ಕಾರಕ-ವಿಶೇಷಕ್ಕೂ ಅವಿನಾಭಾವ ಇರುವುದಿಲ್ಲ. ಇಲ್ಲಿ ವಕ್ತೃತಾತ್ಪರ್ಯಕ್ಕೆ ವಿಷಯವಾದದ್ದು 'ಕಾರಕಸಾಮಾನ್ಯಕ್ಕೂ ಕ್ರಿಯಾಸಾಮಾನ್ಯಕ್ಕೂ ಅವಿನಾಭಾವ ಇದೆ' ಎಂಬುದಲ್ಲ. ಹೊರತಾಗಿ ಕಾರಕವಿಶೇಷ ಹಾಗೂ ಕ್ರಿಯಾ-ವಿಶೇಷಗಳಿಗೆ ಅವಿನಾಭಾವ ಇರಬೇಕೆಂಬುದು. ಆದರೆ 'ಘಟಮಾನಯ' ಎಂಬಲ್ಲಿ ಘಟಕ್ಕೂ ಆನಯನ-ಕ್ರಿಯೆಗೂ ಅವಿನಾಭಾವ ಇಲ್ಲದ ಕಾರಣ ಆಕಾಂಕ್ಷೆಯ ಲಕ್ಷಣ ಬರುವುದಿಲ್ಲ. ಹೀಗೆ ಈ ಕಾರಣದಿಂದ ಗ್ರಂಥದಲ್ಲಿ 'ಘಟಮಾನಯ' ಎಂಬಲ್ಲಿ ಅವ್ಯಾಪ್ತಿದೋಷವನ್ನು ಗ್ರಂಥದಲ್ಲಿ ಹೇಳಲಾಗಿದೆ.

ವಿವರಣೆ– 'ಘಟಮಾನಯ' ಎಂಬ ಸ್ಥಳದಲ್ಲಿ 'ಘಟ'ಪದಕ್ಕೆ 'ಆನಯನ' ಎಂಬ ಕ್ರಿಯೆಯ ಜೊತೆಗೆ ಅನ್ವಯ ಇಲ್ಲದಿದ್ದರೂ ಬೇರೆ ಯಾವುದಾದರೂ ಕ್ರಿಯೆಯ ಜೊತೆಗೆ ಅನ್ವಯ ಇದ್ದೇ ಇರುತ್ತದೆ. ಇದೇ ರೀತಿಯಲ್ಲಿ 'ಆನಯನ' ಎಂಬ ಕ್ರಿಯೆಗೂ ಕೂಡ 'ಘಟ' ಎಂಬ ಪದಾರ್ಥದ ಜೊತೆ ಅನ್ವಯ ಇಲ್ಲದಿದ್ದರೂ ಬೇರೆ ಯಾವುದೋ ಒಂದು ಕಾರಕದ ಜೊತೆಗೆ ಅನ್ವಯ ಇದ್ದೇ ಇರುತ್ತದಲ್ಲವೇ? ಎಂಬುದು ಪೂರ್ವಪಕ್ಷಕಾರರ ಆಕ್ಷೇಪ.

ಕ್ರಿಯಾಸಾಮಾನ್ಯಕ್ಕೂ ಕಾರಕಸಾಮಾನ್ಯಕ್ಕೂ ಪರಸ್ಪರವಾಗಿ ಅವಿನಾಭಾವ ಇದ್ದರೂ ಕೂಡ ಕ್ರಿಯಾವಿಶೇಷ ಹಾಗೂ ಕಾರಕವಿಶೇಷಗಳಿಗೆ ಪರಸ್ಪರವಾಗಿ ಅವಿನಾಭಾವ ಇರುವುದಿಲ್ಲ ಎಂಬುದು ಸಿದ್ಧಾಂತಿಗಳ ಅಭಿಪ್ರಾಯ. ಘಟ ಎಂಬ ಕಾರಕಸಾಮಾನ್ಯದ ಜೊತೆಗೆ ಆನಯನ ಎಂಬ ಕ್ರಿಯಾಸಾಮಾನ್ಯದಿಂದ ಅನ್ವಯವಿಲ್ಲವೆಂಬುದು ಸಿದ್ಧಾಂತಿಗಳ ಅಭಿಪ್ರಾಯವಲ್ಲ.

**ನ್ಯಾಯದೀಪ – ಮಣೌ 'ನೀಲಂ ಸರೋಜಮ್' ಇತ್ಯಾದೌ ವ್ಯಭಿಚಾರೋಕ್ತಿಸ್ತು ಅಯುಕ್ತಾ । ತತ್ರ ತಾತ್ಪರ್ಯವಿಷಯಯೋಃ ನೀಲಸರೋಜಯೋರವಿನಾಭಾವ-ಸತ್ತ್ವಾದಿತಿ ಭಾವಃ ।**

**ಅನುವಾದ–** ತತ್ತ್ವಚಿಂತಾಮಣಿಯಲ್ಲಿ 'ನೀಲಂ ಸರೋಜಮ್' ಎಂಬ ವಾಕ್ಯಪ್ರಯೋಗದಲ್ಲಿಯೂ ಅವಿನಾಭಾವವು ವ್ಯಭಿಚರಿತವಾಗಿರುವುದರಿಂದ ಅವ್ಯಾಪ್ತಿದೋಷವನ್ನು ಹೇಳಲಾಗಿದೆ. ಇದು ಸರಿಯಲ್ಲ. ಏಕೆಂದರೆ, 'ನೀಲಂ ಸರೋಜಮ್' ಎಂಬಲ್ಲಿ ವಕ್ತೃತಾತ್ಪರ್ಯಕ್ಕೆ ವಿಷಯವಾದ ನೀಲ, ಮತ್ತು ಸರೋಜ-ಗಳಿಗೆ ಅವಿನಾಭಾವವು ಇದ್ದೇ ಇರುತ್ತದೆ.

ವಿವರಣೆ - ಅವಿನಾಭಾವವು ಆಕಾಂಕ್ಷೆಯ ಲಕ್ಷಣವಾಗಲು ಸಾಧ್ಯವಿಲ್ಲ. ಈ ವಿಷಯವನ್ನು ತತ್ತ್ವಚಿಂತಾಮಣಿಕಾರನು ಕೂಡ ಒಪ್ಪಿರುತ್ತಾನೆ. ಗ್ರಂಥಕಾರರು 'ಘಟಮಾನಯ' ಎಂಬ ಸ್ಥಳದಲ್ಲಿ ಅವ್ಯಾಪ್ತಿದೋಷವನ್ನು ಹೇಳಿದರೆ, ಮಣಿಕಾರನು 'ನೀಲಂ ಸರೋಜಂ' ಎಂಬಲ್ಲಿ ಅವ್ಯಾಪ್ತಿದೋಷವನ್ನು ಹೇಳಿರುತ್ತಾನೆ. ಮೇಲ್ನೋಟಕ್ಕೆ ಗ್ರಂಥಕಾರರು ಹೇಳಿದ್ದರಲ್ಲಿ ಹಾಗೂ ಮಣಿಕಾರನು ಹೇಳಿದ್ದರಲ್ಲಿ ವ್ಯತ್ಯಾಸ ಕಾಣಿಸುವುದಿಲ್ಲ. ವಿಚಾರ ಮಾಡಿದರೆ ಮಣಿಕಾರ ಹೇಳಿದ್ದು ಅಯುಕ್ತವಾಗಿದೆ. ಗ್ರಂಥಕಾರರು ಹೇಳಿದ್ದು ಯುಕ್ತವಾಗಿದೆ.

ಕಾರಣ ಹೀಗಿದೆ – ವಕ್ತೃತಾತ್ಪರ್ಯಕ್ಕೆ ವಿಷಯವಾದ ಏತತ್ ನೀಲರೂಪಕ್ಕೂ ಏತತ್ ಸರೋಜಕ್ಕೂ ಅವಿನಾಭಾವವು ಇದ್ದೇ ಇರುತ್ತದೆ. ಏತನ್ನೀಲವು ಏತತ್ಸರೋಜವನ್ನು ಬಿಟ್ಟು ಎಂದೂ ಇರಲು ಸಾಧ್ಯವಿಲ್ಲ. ಏತತ್ಸರೋಜವು ಏತನ್ನೀಲವನ್ನು ಬಿಟ್ಟು ಎಂದೂ ಇರಲು ಸಾಧ್ಯವಿಲ್ಲ. ಆದ್ದರಿಂದ, ಏತನ್ನೀಲವು ಏತತ್ಸರೋಜವನ್ನು ಬಿಟ್ಟಿರುತ್ತದೆಂಬ ವ್ಯಭಿಚಾರವನ್ನು ವಿವಕ್ಷಿಸಿ ಅವಿನಾಭಾವವೇ ಇಲ್ಲವೆಂದು ಅವ್ಯಾಪ್ತಿದೋಷವನ್ನು ಹೇಳಲು ಸಾಧ್ಯವಾಗು-ವುದಿಲ್ಲ.

ಗ್ರಂಥಕಾರರು 'ಘಟಮಾನಯ' ಎಂಬ ಸ್ಥಳದಲ್ಲಿ ಅವ್ಯಾಪ್ತಿದೋಷವನ್ನು ಹೇಳಿದ್ದು ಸಮಂಜಸವೇ ಆಗಿದೆ. ಏಕೆಂದರೆ ವಕ್ತೃತಾತ್ಪರ್ಯಕ್ಕೆ ವಿಷಯವಾದ ಏತದ್ಘಟವು ಏತದಾ-ನಯನದಿಂದ ಅವಿನಾಭೂತವಾಗಿದೆಯೆಂದು ಹೇಳಲು ಸಾಧ್ಯವೇ ಇಲ್ಲ. ನೈಲ್ಯ ಹಾಗೂ ಸರೋಜಗಳಿಗೆ ಅವಿನಾಭೂತತ್ವವು ಇರುವಂತೆ ಘಟಕ್ಕೂ ಆನಯನಕ್ಕೂ ಅವಿನಾ-

ಭೂತತ್ವವು ಇರುವುದಿಲ್ಲ. ಏತದ್ಘಟವು ಎದುರಿನಲ್ಲಿ ಇದ್ದಾಗ ಏತದಾನಯನ ಇರಲೇ-ಬೇಕೆಂಬ ನಿಯಮವಿಲ್ಲ. ಆದರೆ ಏತತ್ಸರೋಜವಿದ್ದಾಗ ಏತತ್ ನೈಲ್ಯವು ಇದ್ದೇ ಇರುತ್ತದೆ. ಈ ವ್ಯತ್ಯಾಸವನ್ನು ಗಮನಿಸಬೇಕು. ಆದ್ದರಿಂದ ಅವಿನಾಭಾವವು ಆಕಾಂಕ್ಷೆಯ ಲಕ್ಷಣವಲ್ಲ-ವೆಂದು ಗ್ರಂಥಕಾರರು ಹೇಳಿದ್ದು ಸಾಧುವಾಗಿದೆ. ಮಣಿಕಾರ ಹೇಳಿದ್ದು ಅಯುಕ್ತವಾಗಿದೆ.

## ಅವಿನಾಭಾವವೇ ಆಕಾಂಕ್ಷೆಯೆಂದರೆ ಅತಿವ್ಯಾಪ್ತಿದೋಷ

**ತರ್ಕತಾಂಡವ – 'ಅಹೋ ವಿಮಲಂ ಜಲಂ; ನದ್ಯಾಃ ಕಚ್ಛೇ ಮಹಿಷಶ್ಚರತಿ' ಇತ್ಯತ್ರ ಜಲೇ ಸಾಕಾಂಕ್ಷಸ್ಯ ನದೀಪದಸ್ಯ ನದ್ಯವಿನಾಭೂತೇ ಕಚ್ಛೇ ಸಾಕಾಂಕ್ಷತ್ವಪ್ರಸಂಗಾಚ್ಚ ॥**

ಅನುವಾದ– ಅವಿನಾಭಾವವೇ ಆಕಾಂಕ್ಷೆ ಎಂದು ಹೇಳಿದರೆ ಅತಿವ್ಯಾಪ್ತಿದೋಷವು ಕೂಡ ಬರುತ್ತದೆ. 'ಅಹೋ ವಿಮಲಂ ಜಲಂ; ನದ್ಯಾಃ ಕಚ್ಛೇ ಮಹಿಷಶ್ಚರತಿ' 'ಅಬ್ಬಾ! ನದಿಯ ನೀರು ಎಷ್ಟು ನಿರ್ಮಲವಾಗಿದೆ!; ದಡದಲ್ಲಿ ಎಮ್ಮೆ ಹೋಗುತ್ತಿದೆ' ಈ ಎರಡು ವಾಕ್ಯಪ್ರಯೋಗದಲ್ಲಿ ನದಿಯ ದಡಕ್ಕೆ ಜಲದ ಜೊತೆ ಆಕಾಂಕ್ಷೆಯು ಇರುತ್ತದೆ ಹೊರತು ಕಚ್ಛಪದದ ಅರ್ಥವಾದ ತೀರದ ಜೊತೆಗೆ ಆಕಾಂಕ್ಷೆ ಇರುವುದಿಲ್ಲ. ಅವಿನಾಭಾವವೇ ಆಕಾಂಕ್ಷೆ ಎನ್ನುವುದಾದರೆ ನದಿಯ ಜೊತೆಗೆ ತೀರವು ಅವಿನಾಭೂತವಾಗಿರುವುದರಿಂದ ಇಲ್ಲಿಯೂ ಕೂಡ ಆಕಾಂಕ್ಷೆಯ ಲಕ್ಷಣವು ಬರುತ್ತದೆ. ಆದ್ದರಿಂದ ನದಿಯಿಂದ ಅವಿನಾಭೂತವಾದ ನಿರಾಕಾಂಕ್ಷವಾದ ತೀರದಲ್ಲಿ ಸಾಕಾಂಕ್ಷತ್ವವು ಬರಬೇಕಾದೀತು ಎಂಬುದಾಗಿ ಅತಿಪ್ರಸಂಗವು ಪ್ರಾಪ್ತವಾಯಿತು.

## 'ಅವಿನಾಭಾವ'ಕ್ಕೆ ಪರಿಷ್ಕಾರಮಾಡಿದರೆ ಹೇಗೆ?

**ನ್ಯಾಯದೀಪ – ನನು – ಪದಾರ್ಥತಾವಚ್ಛೇದಕರೂಪೇಣ ಕ್ರಿಯಾಕಾರಕ-ಭಾವೇನ ವಿವಕ್ಷಿತೋಽವಿನಾಭಾವಃ ಪ್ರಕೃತೇಪ್ಯಸ್ತೀತ್ಯತ ಆಹ – ಅಹೋ ವಿಮಲಮಿತಿ ॥**

ಅನುವಾದ– ''ಪದಾರ್ಥತಾವಚ್ಛೇದಕರೂಪೇಣ ಕ್ರಿಯಾಕಾರಕಭಾವೇನ ವಿವಕ್ಷಿತೋಽವಿನಾಭಾವಃ' ಎಂಬುದಾಗಿ ಅವಿನಾಭಾವಲಕ್ಷಣವನ್ನು ಪರಿಷ್ಕರಿಸಿದರೂ ಸಹ 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ

ಮಹಿಷಶ್ಚರತಿ' ಎಂಬಲ್ಲಿಯೂ ಕೂಡ ಇಂತಹ ಅವಿನಾಭಾವಲಕ್ಷಣವು ಬರುವ ಕಾರಣ ಅತಿವ್ಯಾಪ್ತಿ-ದೋಷ ಬರುತ್ತದೆಂದು 'ಅಹೋ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ.

ವಿವರಣೆ – ಕೇವಲ ಅವಿನಾಭಾವವೇ ಆಕಾಂಕ್ಷೆಯ ಲಕ್ಷಣವಲ್ಲ. ಪದಾರ್ಥತಾವಚ್ಛೇದಕ-ರೂಪೇಣ ಕ್ರಿಯಾಕಾರಕಭಾವವುಳ್ಳ ಅವಿನಾಭಾವವು ಆಕಾಂಕ್ಷೆಯ ಲಕ್ಷಣವೆಂದು ತಿಳಿಯಬೇಕು. 'ಘಟಮಾನಯ' ಎಂಬಲ್ಲಿ ಅವ್ಯಾಪ್ತಿದೋಷವು ಬರುವುದಿಲ್ಲ. ಏಕೆಂದರೆ, 'ಘಟಂ' ಎಂಬಲ್ಲಿ ಪದಾರ್ಥತಾವಚ್ಛೇದಕವಾದದ್ದು ಕಾರಕತ್ವ. 'ಆನಯ' ಎಂಬಲ್ಲಿ ಪದಾರ್ಥತಾವಚ್ಛೇದಕವಾದದ್ದು ಆನಯನಕ್ರಿಯಾ. ಆದ್ದರಿಂದ ಕ್ರಿಯಾಕಾರಕಭಾವದಿಂದ ಘಟದಲ್ಲಿ ಪದಾರ್ಥತಾವಚ್ಛೇದಕರೂಪವಾದ ಆನಯನದ ಅವಿನಾಭೂತತ್ವವು ಇರುವು-ದರಿಂದ ಅವ್ಯಾಪ್ತಿದೋಷವು ಪರಿಹಾರವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅಹೋ ವಿಮಲಂ ಜಲಂ' ಎಂಬಿತ್ಯಾದಿ ಗ್ರಂಥವು ಹೊರಟಿದೆ. ಅವ್ಯಾಪ್ತಿದೋಷವು ಬಾರದಿದ್ದರೂ ಅತಿವ್ಯಾಪ್ತಿದೋಷವು ಬರುತ್ತದೆಂಬುದು ಅಭಿಪ್ರಾಯ.

## ಗೋಷ್ಠಿಯ ವಿಚಾರಗಳು

'ಅಹೋ ವಿಮಲಂ ಜಲಂ; ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬಲ್ಲಿ ನದಿಗೆ ಕಚ್ಛದಿಂದ ಆಕಾಂಕ್ಷೆಯು ಇಲ್ಲವೆಂದು ಹೇಳಲು ಹೇಗೆ ಸಾಧ್ಯ ? ತೀರದಲ್ಲಿ ಎಮ್ಮೆಯು ಹೋಗುತ್ತಿದೆ' ಎಂದಷ್ಟೇ ಹೇಳಿದರೆ 'ಯಾವ ತೀರದಲ್ಲಿ' ಎಂಬ ಆಕಾಂಕ್ಷೆ ಬರುತ್ತದೆ. ಇದನ್ನು ಶಾಂತ-ಮಾಡುವುದಕ್ಕಾಗಿ ನದ್ಯಾಃ ಎಂದು ಹೇಳಲೇ ಬೇಕಲ್ಲವೇ?

ಉತ್ತರ – 'ನದ್ಯಾಃ ಕಚ್ಛೇ ಮಹಿಷಃ ಚರತಿ' ಎಂದಷ್ಟೇ ವಾಕ್ಯಪ್ರಯೋಗವಿದ್ದಲ್ಲಿ ಪ್ರಶ್ನೆ ಸಮಂಜಸವಾಗುತ್ತಿತ್ತು. ಆದರೆ ಇಲ್ಲಿ 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬ ವಾಕ್ಯಪ್ರಯೋಗವನ್ನು ಗಮನಿಸಬೇಕು. ನದೀರೂಪಪದಾರ್ಥಕ್ಕೆ ಜಲಪದಾರ್ಥದಿಂದ ಅನ್ವಯವಿರುವ ಕಾರಣ ಆಕಾಂಕ್ಷೆಯು ಶಾಂತವಾಗಿದೆ. ಕಚ್ಛಪದಾರ್ಥದಲ್ಲಿ ಅನ್ವಯ ಹೊಂದುವ ಆಕಾಂಕ್ಷೆಯನ್ನು ನದೀಪದಾರ್ಥವು ಹೊಂದುವುದಿಲ್ಲ.

ಪ್ರಶ್ನೆ – ಹಾಗಿದ್ದರೆ 'ಯಾವ ತೀರದಲ್ಲಿ' ಎಂಬ ಆಕಾಂಕ್ಷೆಗೆ ಏನು ಉತ್ತರ?

ಉತ್ತರ– ಪ್ರಕರಣದಿಂದಲೇ ನದಿಯ ತೀರದಲ್ಲಿ ಎಂಬುದು ತಿಳಿಯುತ್ತದೆ. 'ಅಹೋ ವಿಮಲಂ

ಜಲಂ ನದ್ಯಾಃ' ಎಂಬ ಪ್ರಕರಣವು ಹಿಂದೆ ಪ್ರಸಕ್ತವಾಗಿರುವುದರಿಂದ ಮುಂದೆ 'ಕಚ್ಛೇ ಮಹಿಷಶ್ಚರತಿ' ಎಂಬ ವಾಕ್ಯಪ್ರಯೋಗವನ್ನು ಕೇಳಿದಾಕ್ಷಣ ನದಿಯ ತೀರದಲ್ಲಿ ಎಂಬರ್ಥವು ಸ್ಫುಟವಾಗಿ ಗೋಚರಿಸುತ್ತದೆ. ಆದ್ದರಿಂದ ಶಾಂತಾಕಾಂಕ್ಷೆಯುಳ್ಳ ನದೀಪದಾರ್ಥದೊಟ್ಟಿಗೆ ಪುನಃ ಕಚ್ಛಪದಾರ್ಥಕ್ಕೆ ಅನ್ವಯ ಮಾಡುವ ಆವಶ್ಯಕತೆ ಇರುವುದಿಲ್ಲ.

ಪ್ರಶ್ನೆ – ಆಕಾಂಕ್ಷೆಯು ಶಾಂತವಾಗಿದ್ದರೂ ಕೂಡ ಕೆಲವೊಂದು ವಿಶೇಷಣಗಳನ್ನು ವಾಕ್ಯದಲ್ಲಿ ಪ್ರಯೋಗಿಸುವುದು ಕಂಡಿದೆ. ಇಂತಹ ಸಂದರ್ಭದಲ್ಲಿ ಆಕಾಂಕ್ಷೆಯನ್ನು ಹೇಗೆ ತಿಳಿಯಬೇಕು? ಉದಾ– 'ಘಟಮಾನಯ' ಎಂದಷ್ಟೇ ಹೇಳಿದರೆ ಸಾಕು. 'ನೀಲಂ ಘಟಂ ಆನಯ' ಎಂಬಲ್ಲಿ ನೀಲಪದಕ್ಕೆ ಆಕಾಂಕ್ಷೆಯೇ ಇರುವುದಿಲ್ಲ. ಆದ್ದರಿಂದ 'ನೀಲ' ಎಂಬ ವಿಶೇಷಣವು ವ್ಯರ್ಥವಾಗುತ್ತದಲ್ಲವೇ?

ಉತ್ತರ – ಆದರೂ 'ನೀಲಂ ಘಟಮಾನಯ' ಎಂದು ಪ್ರಯೋಗಿಸಿದರೆ ಎರಡು ರೀತಿಯಲ್ಲಿ ಉತ್ತರವನ್ನು ತಿಳಿಯಬೇಕು. ಈ ವಾಕ್ಯವನ್ನು ಪ್ರಯೋಗ ಮಾಡಿದವನು ಆಪ್ತನಾಗಿದ್ದಲ್ಲಿ ಉತ್ಥಾಪ್ಯ ಆಕಾಂಕ್ಷೆಯನ್ನು ಹೇಳಿ, ವಾಕ್ಯಸಾಧುತ್ವವನ್ನು ಕೂಡಿಸಬೇಕು. ಅಥವಾ ಪೀತಘಟ ರಕ್ತಘಟ, ನೀಲಘಟ ಹೀಗೆ ಅನೇಕ ಘಟಗಳು ಎದುರಿನಲ್ಲಿದ್ದಾಗ 'ನೀಲಂ ಘಟಂ ಆನಯ' ಎಂಬ ವಾಕ್ಯವನ್ನು ಆಪ್ತನು ಪ್ರಯೋಗ ಮಾಡಿದರೆ, ಸ್ವಾರಸಿಕ ಆಕಾಂಕ್ಷೆಯನ್ನೇ ಸುಲಭ–ವಾಗಿ ಹೇಳಬಹುದು. ಉತ್ಥಾಪ್ಯಆಕಾಂಕ್ಷೆಯನ್ನು ಹೇಳುವ ಆವಶ್ಯಕತೆಯು ಕೂಡ ಇರುವುದಿಲ್ಲ.

'ನೀಲಂ ಘಟಂ ಆನಯ' ಎಂಬ ವಾಕ್ಯವನ್ನು ಅನಾಪ್ತನು ಪ್ರಯೋಗಿಸಿದ್ದಾನೆಂದು ಹೇಳಿದರೆ, 'ನೀಲಂ' ಎಂಬ ಪದಕ್ಕೆ ವೈಯ್ಯರ್ಥ್ಯವನ್ನೇ ಹೇಳಬೇಕು. ಬೇರೆ ಮಾರ್ಗವಿಲ್ಲ.

## ಉದಯನ ಹೇಳಿದ ಆಕಾಂಕ್ಷಾಲಕ್ಷಣ

**ತರ್ಕತಾಂಡವ – ನಾಪ್ಯುದಯನಾದ್ಯುಕ್ತರೀತ್ಯಾ ಶ್ರೋತರಿ ತದುಚ್ಚಾರಣಜನ್ಯ-ಸಂಸರ್ಗಾವಗಮಪ್ರಾಗಭಾವ ಆಕಾಂಕ್ಷಾ ।**

ಅನುವಾದ– ಉದಯನನು ಆಕಾಂಕ್ಷೆಯ ಲಕ್ಷಣವನ್ನು ಹೀಗೆ ಹೇಳಿದ್ದಾನೆ – 'ಶ್ರೋತರಿ

ತದುಚ್ಚಾರಣಜನ್ಯಸಂಸರ್ಗಾವಗಮಪ್ರಾಗಭಾವಃ ಆಕಾಂಕ್ಷಾ' ಶ್ರೋತೃಪುರುಷನಲ್ಲಿ ವಕ್ತೃವಿನ ಪದಗಳ ಉಚ್ಚಾರಣೆಯಿಂದ ಅನ್ವಯಾವಗಮವು (ಶಾಬ್ದಬೋಧವು) ಹುಟ್ಟುತ್ತದೋ ಅದರ ಪ್ರಾಗಭಾವವೇ ಆಕಾಂಕ್ಷಾ ಎನಿಸುತ್ತದೆ'.

**ನ್ಯಾಯದೀಪ – ಪೂರ್ವೋಕ್ತಾತಿವ್ಯಾಪ್ತೇರ್ನಿರಾಸಕಂ ಪಕ್ಷಮಾಶಂಕ್ಯ ನಿರಾಹ – ನಾಪೀತಿ ॥ ಶ್ರೋತರಿ ವಿದ್ಯಮಾನ ಉಕ್ತರೂಪಪ್ರಾಗಭಾವ ಆಕಾಂಕ್ಷೇತ್ಯರ್ಥಃ ॥**

ಅನುವಾದ– 'ಅಹೋ ವಿಮಲಂ ಜಲಂ ನದ್ಯಾಃ, ಕಚ್ಛೇ ಮಹಿಷಶ್ಚರತಿ' ಎಂಬಲ್ಲಿ ಆಕಾಂಕ್ಷೆಯ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನು ಪರಿಹರಿಸಲು ಮತ್ತೊಂದು ರೀತಿಯಲ್ಲಿ ಆಕಾಂಕ್ಷೆಯ ಲಕ್ಷಣವನ್ನು ಆಶಂಕಿಸಿ ನಿರಾಕರಣೆ ಮಾಡುತ್ತಿದ್ದಾರೆ. ''ನಾಪಿ'' ಇತ್ಯಾದಿ ಗ್ರಂಥದಿಂದ. ಶ್ರೋತೃವಿನಲ್ಲಿ ವಕ್ತೃವಿನ ಪದಗಳಿಂದ ಯಾವ ಶಬ್ದಬೋಧ ಹುಟ್ಟುತ್ತದೋ ಅದರ ಪ್ರಾಗಭಾವವೇ ಆಕಾಂಕ್ಷೆಯ ಲಕ್ಷಣವೆಂದು ಈ ವಾಕ್ಯದ ಅಭಿಪ್ರಾಯ.

ವಿವರಣೆ – 'ಅನ್ವಯಾವಗಮ' ಎಂದರೆ 'ಶಾಬ್ದಬೋಧ' ಎಂದರ್ಥ. 'ಘಟಂ' ಎಂದಷ್ಟೇ ಹೇಳಿದಾಗ ಶ್ರೋತೃವಿಗೆ ಅನ್ವಯಾವಗಮವು ಹುಟ್ಟುವುದಿಲ್ಲ. 'ಆನಯ' ಎಂದು ಹೇಳಿದಾಗ ಹುಟ್ಟುತ್ತದೆ. ಆದ್ದರಿಂದ ಆನಯನಾನ್ವಯಾವಗಮದ ಪ್ರಾಗಭಾವವು ಶ್ರೋತೃವಿನಲ್ಲಿ ಇರುವುದರಿಂದ 'ಘಟಮಾನಯ' ಎಂಬಲ್ಲಿ ಅವ್ಯಾಪ್ತಿದೋಷವು ಬರುವುದಿಲ್ಲ.

'ಕುಂಡಮಜಾಜಿನಂ ದಶ ದಾಡಿಮಾನಿ ಷಡಪೂಪಾಃ' ಎಂಬಲ್ಲಿ ಶ್ರೋತೃವಿಗೆ ಅನ್ವಯಾವಗಮವು ಹುಟ್ಟುವುದೇ ಇಲ್ಲ. ಕಾರ್ಯವು ಹುಟ್ಟದಿದ್ದಾಗ ಅದರ ಪ್ರಾಗಭಾವವನ್ನು ಕೂಡ ಹೇಳಲು ಸಾಧ್ಯವಿಲ್ಲ. 'ಕುಂಡಮಜಾಜಿನಂ' ಇತ್ಯಾದಿ ಪದಗಳನ್ನು ಕೇಳಿದಾಗ ಶಾಬ್ದಬೋಧರೂಪ ಕಾರ್ಯವು ಹುಟ್ಟದ ಕಾರಣ ಅದರ ಪ್ರಾಗಭಾವರೂಪವಾದ ಕಾರಣವೂ ಸಹ ಇರುವುದಿಲ್ಲ. ಹೀಗೆ ಹೇಳಿದ್ದರಿಂದ ಅತಿವ್ಯಾಪ್ತಿದೋಷವು ಪರಿಹಾರವಾಯಿತು. ಏಕೆಂದರೆ, ನದೀಪದಕ್ಕೆ ಜಲದ ಜೊತೆ ಅನ್ವಯವು ಶ್ರೋತೃವಿಗೆ ಬಂದಿರುತ್ತದೆ; ಹೊರತು ತೀರದ ಜೊತೆಗೆ ಅನ್ವಯಾನುಗಮವು ಬರುವುದಿಲ್ಲ. ಬಂದರೂ ಕೂಡ ಪ್ರಕರಣದಿಂದ ಬರುತ್ತದೆ; ಹೊರತು ಶಬ್ದೋಚ್ಚಾರಣದಿಂದಲ್ಲ. ಆದ್ದರಿಂದ ತದುಚ್ಚಾರಣಜನ್ಯಸಂಸರ್ಗಾ-

ವಗಮದ ಪ್ರಾಗಭಾವವನ್ನು 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ'ಎಂಬ ವಾಕ್ಯದಲ್ಲಿ ಹೇಳಲು ಸಾಧ್ಯವಿಲ್ಲ.

ಪ್ರಶ್ನೆ - ಈ ಲಕ್ಷಣಕ್ಕೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಎಲ್ಲಿ ಶಾಬ್ದಬೋಧದ ಪ್ರಾಗಭಾವವು ಇರುವುದಿಲ್ಲವೋ ಅಲ್ಲಿ ಶಾಬ್ದಬೋಧವು ಹುಟ್ಟುವುದಿಲ್ಲವೆಂದು ಹೇಳಿದ್ದೀರಿ. ಹಾಗಾದರೆ ಶಾಬ್ದಬೋಧ ಮುಂದೆ ಹುಟ್ಟುವುದಿಲ್ಲವಾದ್ದರಿಂದ ಪ್ರಾಗಭಾವವು ಇಲ್ಲ ಎಂದು ಹೇಳಬೇಕು. ಪ್ರಾಗಭಾವವು ಇಲ್ಲದ ಕಾರಣ ಮುಂದೆ ಶಾಬ್ದಬೋಧವು ಬರುವುದಿಲ್ಲ. ಹೀಗೆ ಪರಸ್ಪರ ಒಂದನ್ನೊಂದು ಆಶ್ರಯಿಸಿರುವುದರಿಂದ ಅನ್ಯೋನ್ಯಾಶ್ರಯದೋಷವು ಬರುತ್ತದಲ್ಲವೇ?

ಪರಿಹಾರ - ಪ್ರಾಗಭಾವವು ಹುಟ್ಟುವುದಿಲ್ಲವಾದ್ದರಿಂದ ಅನ್ವಯಾವಗಮವು ಬರುವುದಿಲ್ಲ ಎಂಬುದು ಸತ್ಯ. ಆದರೆ ಪ್ರಾಗಭಾವವು ಇಲ್ಲ ಎನ್ನಲು ಅನೇಕ ಕಾರಣಗಳಿವೆ. ಅನಾದಿಯಾದ ಪದಾರ್ಥಕ್ಕೆ ಪ್ರಾಗಭಾವವು ಇರುವುದಿಲ್ಲ. ಆದ್ದರಿಂದ ಪ್ರಾಗಭಾವ ಇಲ್ಲ ಎನ್ನಲು ಶಾಬ್ದಬೋಧವು ಇಲ್ಲವೆಂಬ ಕಾರಣವನ್ನು ಹೇಳಲಾಗದು. ಆದ್ದರಿಂದ ಅನ್ಯೋನ್ಯಾಶ್ರಯ ದೋಷಕ್ಕೆ ಅವಕಾಶವಿಲ್ಲ.

## 'ತದುಚ್ಚಾರಣಜನ್ಯತ್ವ' ಎಂಬ ವಿಶೇಷಣದ ಕೃತ್ಯಚಿಂತನೆ

**ನ್ಯಾಯದೀಪ– ಅತ್ರ 'ಘಟಃ ಕರ್ಮತ್ವಮ್, ಆನಯನಂ ಕೃತಿಃ' ಇತಿ ವಾಕ್ಯಾಭಾಸೇ 'ಘಟಮಾನಯ' ಇತ್ಯೇತತ್ಸಮಾನಾರ್ಥಕೇಽತಿವ್ಯಾಪ್ತಿನಿರಾಸಾಯ 'ತದುಚ್ಚಾರಣಜನ್ಯ' ಇತ್ಯವಗಮವಿಶೇಷಣಮ್ । ವಕ್ತ್ರಪೇಕ್ಷಯಾಽಸಂಭವವಾರಣಾಯ 'ಶ್ರೋತರಿ' ಇತ್ಯೇಕೇ । 'ಸ್ವರೂಪಕಥನಂ ತತ್' ಇತ್ಯನ್ಯೇ ॥**

ಅನುವಾದ– 'ಘಟಃ ಕರ್ಮತ್ವಂ, ಆನಯನಂ ಕೃತಿಃ' ಎಂಬ ವಾಕ್ಯಾಭಾಸವನ್ನು ಕೇಳಿಯೂ ಸಹ 'ಘಟಮಾನಯ' ಎಂಬ ಯೋಗ್ಯವಾಕ್ಯವನ್ನು ಕೇಳಿ ಬರುವ ಘಟಾನಯನರೂಪವಾದ, ಯೋಗ್ಯ-ವಾಕ್ಯಾರ್ಥಸಮಾನಾರ್ಥಕವಾದ ಶಾಬ್ದಬೋಧವು ಎಲ್ಲಿ ಬರುತ್ತದೋ ಅಂತಹ ಸಮಾನಾರ್ಥಕವಾದ ವಾಕ್ಯಾಭಾಸಸ್ಥಳದಲ್ಲಿ ಅತಿವ್ಯಾಪ್ತಿಯನ್ನು ಪರಿಹಾರ ಮಾಡುವುದಕ್ಕಾಗಿ 'ತದುಚ್ಚಾರಣಜನ್ಯ' ಎಂಬುದನ್ನು ಅವಗಮದಲ್ಲಿ ವಿಶೇಷಣವನ್ನಾಗಿ ನೀಡಬೇಕು. ಕೆಲವರು ವಕ್ತ್ರಪೇಕ್ಷಯಾ ಅಸಂಭವದೋಷವನ್ನು

ಪರಿಹಾರ ಮಾಡುವುದಕ್ಕಾಗಿ 'ಶ್ರೋತರಿ' ಎಂಬುದನ್ನು ಹೇಳಬೇಕು. ಕೆಲವರು 'ಸ್ವರೂಪಕಥನಕ್ಕಾಗಿ ಶ್ರೋತರಿ' ಎಂಬುದು ಎಂದು ಉತ್ತರಿಸುತ್ತಾರೆ.

ವಿವರಣೆ - 'ಶ್ರೋತರಿ ತದುಚ್ಚಾರಣಜನ್ಯಸಂಸರ್ಗಾವಗಮಪ್ರಾಗಭಾವಃ ಆಕಾಂಕ್ಷಾ' ಎಂಬ ಆಕಾಂಕ್ಷೆಯ ಲಕ್ಷಣದಲ್ಲಿ ತದುಚ್ಚಾರಣಜನ್ಯತ್ವವನ್ನು ಅವಗಮದಲ್ಲಿ ವಿಶೇಷಣವನ್ನಾಗಿ ಹೇಳದಿದ್ದರೆ ಅತಿವ್ಯಾಪ್ತಿದೋಷವು ಬರುತ್ತದೆ - 'ಘಟಃ ಕರ್ಮತ್ವಂ, ಆನಯನಂ ಕೃತಿಃ' ಎಂಬ ವಾಕ್ಯಾಭಾಸದಲ್ಲಿ ಸಂಸರ್ಗಾವಗಮಪ್ರಾಗಭಾವವು ಇರುವುದರಿಂದ ಅತಿವ್ಯಾಪ್ತಿ-ದೋಷವು ಬರುತ್ತದೆ. ವ್ಯುತ್ಪನ್ನನಿಗೆ ಈ ವಾಕ್ಯವನ್ನು ಕೇಳಿದಾಗ ಶಾಬ್ದಬೋಧವು ಬರುತ್ತದೆ. ಅವನಿಗೆ ಈ 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬ ವಾಕ್ಯವನ್ನು ಕೇಳಿದಾಗ 'ಘಟಮಾನಯ' ಎಂಬ ಯೋಗ್ಯವಾಕ್ಯವು ಸ್ಫುರಣವಾಗಿ ತನ್ಮೂಲಕವಾಗಿ ಘಟಾನಯನ-ರೂಪವಾದ ಅನ್ವಯಾವಗಮವು ಬರುತ್ತದೆ. ಅನ್ವಯಾವಗಮದ ಪ್ರಾಗಭಾವವು ಮೊದಲು ಇರುವುದರಿಂದ ಆಕಾಂಕ್ಷೆಯ ಲಕ್ಷಣವು ವಾಕ್ಯಾಭಾಸದಲ್ಲಿಯೂ ಬರುವ ಕಾರಣ ಅತಿವ್ಯಾಪ್ತಿ ಬರುತ್ತದೆ.

ಇದರ ಪರಿಹಾರಕ್ಕಾಗಿ 'ತದುಚ್ಚಾರಣಜನ್ಯತ್ವಂ' ಎಂಬುದನ್ನು ಅವಗಮದಲ್ಲಿ ವಿಶೇಷಣ-ವನ್ನಾಗಿ ನೀಡಬೇಕು. ವ್ಯುತ್ಪನ್ನನಿಗೆ 'ಘಟಃ ಕರ್ಮತ್ವಂ' ಎಂಬ ಪದಗಳ ಉಚ್ಚಾರಣೆಯಿಂದ ಅನ್ವಯಾನುಗಮವು ಬಂದಿರುವುದಿಲ್ಲ. ಹೊರತಾಗಿ ಈ ವಾಕ್ಯವನ್ನು ಕೇಳಿದಾಗ ಇದು ಅನನ್ವಿತವಾಗಿದೆಯೆಂದು ತಿಳಿದು 'ಘಟಮಾನಯ' ಎಂಬ ವಾಕ್ಯವನ್ನು ಅನುಮಾನದಿಂದ ತಿಳಿಯುತ್ತಾನೆ. ಅಂಥ 'ಘಟಮಾನಯ' ಎಂಬ ವಾಕ್ಯದಿಂದ ಅನ್ವಯಾವಗಮವು ಬಂದಿರು-ತ್ತದೆ. ಆದ್ದರಿಂದ ವಕ್ತೃವಿನ ಉಚ್ಚಾರಣೆಯಿಂದ ಇವನಿಗೆ ಅನ್ವಯಾವಗಮವು ಬಂದಿರು-ವುದಿಲ್ಲ. ತನ್ನ ಬುದ್ಧಿಶಕ್ತಿಯಿಂದ ಅನ್ವಯಾವಗಮವು ಬಂದಿರುತ್ತದೆ. ಆದ್ದರಿಂದ ಅತಿವ್ಯಾಪ್ತಿ ಇಲ್ಲ.

ಕೆಲವರು ಅಸಂಭವದೋಷವನ್ನು ಪರಿಹಾರ ಮಾಡಲು 'ಶ್ರೋತರಿ' ಎಂಬ ವಿಶೇಷಣವನ್ನು ಹೇಳಿದ್ದಾರೆ. ಯಾವ ವಕ್ತೃವು ಶಬ್ದವನ್ನು ಉಚ್ಚಾರಣೆ ಮಾಡುತ್ತಾನೋ ಅವನಿಗೆ ಮೊದಲೇ ಅನ್ವಯಾವಗಮವು ಇರುತ್ತದೆ. ಅನ್ವಯಾವಗಮವು ಮೊದಲು ಇದ್ದರೆ ಮಾತ್ರ ಶಬ್ದವನ್ನು ಉಚ್ಚಾರಣೆ ಮಾಡಲು ಸಾಧ್ಯ. ಆದ್ದರಿಂದ ತದುಚ್ಚಾರಣಜನ್ಯಸಂಸರ್ಗಾವಗಮಪ್ರಾಗ-

ಭಾವವನ್ನು ಹೇಳಲು ಸಾಧ್ಯವಿಲ್ಲದ ಕಾರಣ ಅಸಂಭವದೋಷವು ಬರುತ್ತದೆ. ಇದರ ಪರಿಹಾರಕ್ಕಾಗಿ 'ಶ್ರೋತರಿ' ಎಂದು ಹೇಳಬೇಕು.

ಕೆಲವರು ಹೀಗೆ ಪರಿಹಾರವನ್ನು ಹೇಳುತ್ತಾರೆ – 'ತದುಚ್ಚಾರಣಜನ್ಯಸಂಸರ್ಗಾವಗಮ-ಪ್ರಾಗಭಾವಃ' ಎಂದು ಹೇಳುವಾಗಲೇ 'ಶ್ರೋತರಿ = ಶ್ರೋತೃವಿನಲ್ಲಿ' ಎಂಬುದು ಅರ್ಥಾತ್ ಸಿದ್ಧವಾಯಿತು. ಹೇಗೆಂದರೆ, ಶಬ್ದೋಚ್ಚಾರಣೆ ಮಾಡಿದಾಗ ಸಂಸರ್ಗಾವಗಮವು ವಕ್ತೃವಿ-ಗಂತೂ ಹುಟ್ಟಲು ಸಾಧ್ಯವೇ ಇಲ್ಲ. ಶ್ರೋತೃವಿಗೆ ಮಾತ್ರವೇ ಹುಟ್ಟಲು ಸಾಧ್ಯ. ಆದ್ದರಿಂದ 'ಶಬ್ದೋಚ್ಚಾರಣಜನ್ಯಸಂಸರ್ಗಾವಗಮಪ್ರಾಗಭಾವಃ' ಎಂಬುದರಿಂದಲೇ 'ಶ್ರೋತರಿ' ಎಂದು ಸಿದ್ಧವಾಗಿರುವಾಗ ಪುನಃ 'ಶ್ರೋತರಿ' ಎಂದು ಹೇಳಿರುವುದು ಕೇವಲ ಸ್ವರೂಪಕಥನ ಪರವೆಂದು ಹೇಳಬೇಕು.

## 'ಅಹೋ ವಿಮಲಂ' ಎಂಬ ವಾಕ್ಯದಲ್ಲಿ ಅತಿವ್ಯಾಪ್ತಿ ಇಲ್ಲ

**ನ್ಯಾಯದೀಪ – 'ಅಹೋ ವಿಮಲಮ್' ಇತಿ ಪೂರ್ವೋಕ್ತವಾಕ್ಯೇ ಚ ತಾತ್ಪರ್ಯವಶಾತ್ ಜಲಾನ್ವಿತನದ್ಯಾಃ ಅವಗಮೇನ ತತ್ಪ್ರಾಗಭಾವಸತ್ತ್ವೇಽಪಿ ತದುಚ್ಚಾರಣೇ ತಾತ್ಪರ್ಯವಶಾತ್ ಜಲಾನ್ವಿತನದ್ಯಾಃ ಕಚ್ಛಸಂಸರ್ಗಾವಗಮೋ ನೇತಿ ನ ತತ್ಪ್ರಾಗಭಾವ ಇತಿ ನಾತಿವ್ಯಾಪ್ತಿರಿತಿ ಭಾವಃ ।।**

ಅನುವಾದ– 'ಶ್ರೋತರಿ ತದುಚ್ಚಾರಣಜನ್ಯಸಂಸರ್ಗಾವಗಮಪ್ರಾಗಭಾವಃ' ಎಂದು ಆಕಾಂಕ್ಷೆಯ ಲಕ್ಷಣವನ್ನು ಹೇಳಿದಾಗ ಹಿಂದಿನ 'ಅಹೋ ವಿಮಲಂ' ಎಂಬ ವಾಕ್ಯದಲ್ಲಿ ಅತಿವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಅದು ಹೀಗೆ - ವಕ್ತೃವಿನ ತಾತ್ಪರ್ಯಾಧೀನವಾಗಿ ಶ್ರೋತೃವಿಗೆ ಜಲಾನ್ವಿತವಾದ ನದಿಯ ಅವಗಮವೇ ಬರುತ್ತದೆ. ಅದಕ್ಕನುಗುಣವಾಗಿ ಪೂರ್ವದಲ್ಲಿ ಜಲಾನ್ವಿತನದಿಯ ಅವಗಮದ ಪ್ರಾಗ-ಭಾವವೇ ಇರುತ್ತದೆ; ಹೊರತು ಜಲಾನ್ವಿತವಾದ ನದಿಗೆ ಕಚ್ಛಸಂಸರ್ಗದ ಅವಗಮದ ಪ್ರಾಗಭಾವವು ಪೂರ್ವದಲ್ಲಿ ಇರುವುದಿಲ್ಲ. ಏಕೆಂದರೆ, 'ಅಹೋ ವಿಮಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂದು ಉಚ್ಚಾರಣೆ ಮಾಡಿದಾಗ ವಕ್ತೃತಾತ್ಪರ್ಯದ ಅಧೀನವಾಗಿ ಜಲಾನ್ವಿತವಾದ ನದಿಗೆ ಕಚ್ಛಸಂಸರ್ಗದ ಅವಗಮವು ಶ್ರೋತೃವಿಗೆ ಬರಲು ಸಾಧ್ಯವೇ ಇಲ್ಲ. ಅದಕ್ಕನುಗುಣವಾಗಿ ತತ್ಪೂರ್ವದಲ್ಲಿ ಜಲಾನ್ವಿತ ನದಿಗೆ ಕಚ್ಛಸಂಸರ್ಗಾವಗಮದ ಪ್ರಾಗಭಾವವು ಕೂಡ ಇರುವುದಿಲ್ಲವಾದ್ದರಿಂದ ಅತಿವ್ಯಾಪ್ತಿದೋಷಕ್ಕೆ

ಅವಕಾಶವಿಲ್ಲ. ಹೀಗೆ ಉದಯನ ಮುಂತಾದ ಪಕ್ಷದವರು ಅತಿವ್ಯಾಪ್ತಿದೋಷವನ್ನು ಪರಿಹರಿಸಿ-ಕೊಳ್ಳುತ್ತಾರೆ.

## ಉದಯನ ಹೇಳಿದ ಲಕ್ಷಣಕ್ಕೆ ಅತಿವ್ಯಾಪ್ತಿದೋಷ

**ತರ್ಕತಾಂಡವ – 'ಅಯಮೇತಿ ಪುತ್ರೋ ರಾಜ್ಞಃ ಪುರುಷೋಽಪಸಾರ್ಯತಾಮ್' ಇತ್ಯತ್ರ ಪುತ್ರೇ ಸಾಕಾಂಕ್ಷಸ್ಯ ರಾಜಪದಸ್ಯ ತಾತ್ಪರ್ಯಭ್ರಮೇಣ ಪುರುಷಾನ್ವಯ-ಬೋಧೇ ತತಃ ಪ್ರಾಕ್ ತದನ್ವಯಾವಗಮಪ್ರಾಗಭಾವಸ್ಯ ಸತ್ತ್ವೇನ ಅತಿವ್ಯಾಪ್ತಿಃ ।**

ಅನುವಾದ– 'ಅಯಮೇತಿ ಪುತ್ರೋ ರಾಜ್ಞಃಪುರುಷೋ ಅಪಸಾರ್ಯತಾಮ್' 'ರಾಜಪುತ್ರನು ಆಗಮಿಸುತ್ತಿದ್ದಾನೆ. ಓ ಪುರುಷನೇ ದಾರಿ ಬಿಡು' ಎಂಬ ವಾಕ್ಯವಿದೆ. ಇಲ್ಲಿ ಈ ರಾಜಪದಕ್ಕೆ ಪುತ್ರಪದದ ಜೊತೆ ಆಕಾಂಕ್ಷೆ ಇರುತ್ತದೆ; ಹೊರತು ಪುರುಷಪದದ ಜೊತೆ ಆಕಾಂಕ್ಷೆ ಇರುವುದಿಲ್ಲ. ಆದರೆ ಈ ವಾಕ್ಯವನ್ನು ಕೇಳಿದ ಒಬ್ಬ ವ್ಯಕ್ತಿಗೆ ರಾಜಪದಕ್ಕೆ ಪುರುಷಪದದ ಜೊತೆ ತಾತ್ಪರ್ಯ-ಭ್ರಾಂತಿಯು ಬರುತ್ತದೆ. 'ಮಗನು ಬರುತ್ತಿದ್ದಾನೆ ರಾಜಪುರುಷನೇ ದಾರಿ ಬಿಡು' ಎಂಬುದು ಈ ವಾಕ್ಯದ ಅರ್ಥ ಎಂದು ಭ್ರಾಂತನಾಗುತ್ತಾನೆ. ಇಂತಹ ವ್ಯಕ್ತಿಗೆ ಈ ವಾಕ್ಯದಿಂದ ಪುರುಷ-ಪದಾನ್ವಯಬೋಧವು ರಾಜಪದಕ್ಕೆ ಬರುತ್ತದೆ. ಅದಕ್ಕಿಂತ ಮೊದಲು ಪುರುಷಪದಾನ್ವಯ-ಬೋಧದ ಪ್ರಾಗಭಾವವು ಇರುವ ಕಾರಣ ತದುಚ್ಚಾರಣಜನ್ಯಸಂಸರ್ಗಾಭಾವಪ್ರಾಗಭಾವವೆಂಬ ಆಕಾಂಕ್ಷಾಲಕ್ಷಣವು ಪ್ರಾಪ್ತವಾಗುತ್ತದೆ. ಆದ್ದರಿಂದ ಅತಿವ್ಯಾಪ್ತಿ ಬರುತ್ತದೆ.

**ನ್ಯಾಯದೀಪ – 'ಇತ್ಯತ್ರ' ಇತ್ಯುಪಲಕ್ಷಣಮ್ । 'ಪೂರ್ವವಾಕ್ಯೇ ಚ' ಇತ್ಯಪಿ ಜ್ಞೇಯಮ್ । ಕಸ್ಯಚಿತ್ ತಾತ್ಪರ್ಯವಶಾತ್ ಜಲಾನ್ವಯಾವಗಮೇನ ನದ್ಯಾಃ ಕಚ್ಛಾನ್ವಯಾನವಗಮೇಽಪಿ ಪ್ರಯೋಗಾಂತರೇ ಪುನರಸ್ಯ ಕಚ್ಛಾನ್ವಯತಾತ್ಪರ್ಯ-ಭ್ರಮೇಣ ತದನ್ವಯಾನವಗಮಸಂಭವಾತ್ ॥**

ಅನುವಾದ– ಗ್ರಂಥಕಾರರು 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್'

ಎಂಬಲ್ಲಿ ಅತಿವ್ಯಾಪ್ತಿದೋಷವನ್ನು ಹೇಳಿದ್ದಾರೆ. ಆ ಸಂದರ್ಭದಲ್ಲಿ 'ಇತ್ಯತ್ರ' ಎಂಬ ಪದವನ್ನು ಪ್ರಯೋಗಿಸಿರುವುದು ಉಪಲಕ್ಷಣವೆಂದು ತಿಳಿಯಬೇಕು. 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬ ವಾಕ್ಯದಲ್ಲಿ ಕೂಡ ಅತಿವ್ಯಾಪ್ತಿದೋಷವು ಪರಿಹಾರವಾಗಿಲ್ಲ. ಅದು ಹೀಗೆ - ಒಬ್ಬ ವ್ಯುತ್ಪನ್ನನು 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬ ವಾಕ್ಯವನ್ನು ಕೇಳಿದಾಗ ವಕ್ತೃತಾತ್ಪರ್ಯಕ್ಕೆ ಅಧೀನವಾಗಿ ನದೀಪದಕ್ಕೆ ಜಲದಲ್ಲಿ ಅನ್ವಯವನ್ನು ತಿಳಿಯುತ್ತಾನೆ. ಕಚ್ಛದಲ್ಲಿ ನದೀಪದಕ್ಕೆ ಅನ್ವಯವನ್ನು ತಿಳಿಯುವುದಿಲ್ಲ. ಆದರೆ, ಅದೇ ವಾಕ್ಯವನ್ನು ಕೇಳಿದ ಮತ್ತೊಬ್ಬ ಅವ್ಯುತ್ಪನ್ನನು ಕಚ್ಛದಲ್ಲಿಯೇ ಅನ್ವಯತಾತ್ಪರ್ಯಭ್ರಮವನ್ನು ಹೊಂದುತ್ತಾನೆ. ಆಗ ಕಚ್ಛಾನ್ವಯಾವಗಮದ ಪ್ರಾಗ-ಭಾವವು ಇರುವ ಕಾರಣ ಆಕಾಂಕ್ಷೆಯ ಲಕ್ಷಣವು ಬರುತ್ತದೆಂದು ಅತಿವ್ಯಾಪ್ತಿದೋಷವು ಪರಿಹಾರ-ವಾಗುವುದಿಲ್ಲ.

## ಅಸಾಧಾರಣವಾದದ್ದೇ ಲಕ್ಷಣವಾಗಲು ಸಾಧ್ಯ

**ತರ್ಕತಾಂಡವ – ನಾಪಿ ತಾತ್ಪರ್ಯವಿಷಯೀಭೂತಸಂಸರ್ಗಾವಗಮಪ್ರಾಗಭಾವ ಆಕಾಂಕ್ಷಾ । ಪ್ರಾಗಭಾವಸ್ಯ ಕಾರ್ಯಮಾತ್ರಹೇತುತ್ವೇನ ಶಾಬ್ದಾಸಾಧಾರಣ್ಯಾ-ಯೋಗಾತ್ । ವಕ್ಷ್ಯತೇ ಚೈತತ್ ।**

ಅನುವಾದ– 'ಶ್ರೋತರಿ ತಾತ್ಪರ್ಯವಿಷಯೀಭೂತಸಂಸರ್ಗಾವಗಮಪ್ರಾಗಭಾವಃ ಆಕಾಂಕ್ಷಾ' ಎಂಬುದು ಆಕಾಂಕ್ಷೆಯ ಲಕ್ಷಣ.

ವಕ್ತೃತಾತ್ಪರ್ಯಕ್ಕೆ ವಿಷಯೀಭೂತವಾದ ಸಂಸರ್ಗಾವಗಮ ಎಂದರೆ ರಾಜಪದಕ್ಕೆ ಪುತ್ರಪದದ ಜೊತೆಗೆ ಬರುವ ಶಾಬ್ದಬೋಧ. ಇದರ ಪ್ರಾಗಭಾವವೇ ಆಕಾಂಕ್ಷೆ ಎನ್ನುತ್ತೇವೆ.

ಈ ಪರಿಷ್ಕಾರವು ಕೂಡ ಅಸಾಧುವಾಗಿದೆ. ಪ್ರಾಗಭಾವವು ಕಾರ್ಯಸಾಮಾನ್ಯವನ್ನು ಕುರಿತು ಕಾರಣವಾಗಿರುವುದರಿಂದ ಶಾಬ್ದಬೋಧಕ್ಕೆ ಅಸಾಧಾರಣಕಾರಣವಾಗಲು ಸಾಧ್ಯವಿಲ್ಲ.

ಈ ವಿಷಯವನ್ನು ಮುಂದೆ ಸ್ಪಷ್ಟಪಡಿಸುತ್ತೇವೆ.

## ಜನಿತಾನ್ವಯಬೋಧಕವಾಕ್ಯವೂ ಸಾಕಾಂಕ್ಷಾವಾಕ್ಯವಾಗಲಿ

**ನ್ಯಾಯದೀಪ– ತಾತ್ಪರ್ಯವಿಷಯೇತಿ ॥ ಪುರುಷಾನ್ವಯಬೋಧಸ್ತು ನ ತಾತ್ಪರ್ಯವಿಷಯ ಇತಿ ನ ಪೂರ್ವೋಕ್ತದೋಷ ಇತಿ ಭಾವಃ । 'ಶಾಬ್ದಾಸಾಧಾರಣ್ಯಾಯೋಗಾತ್' ಇತ್ಯುಪಲಕ್ಷಣಮ್ । ಸಂಸರ್ಗಾವಗಮಾಂತರಪ್ರಾಗಭಾವಸ್ಯ ಸತ್ವಾತ್ ಜನಿತಾನ್ವಯಬೋಧಸ್ಯಾಪಿ ವಾಕ್ಯಸ್ಯ ಸಾಕಾಂಕ್ಷತ್ವಾಪತ್ತಿರಿತ್ಯಪಿ ಬೋಧ್ಯಮ್ । ವಕ್ಷ್ಯತ ಇತಿ ॥ ಮಣ್ಯುಕ್ತಾಕಾಂಕ್ಷಾಸ್ವರೂಪಖಂಡನಪ್ರಸ್ತಾವೇ 'ಕಿಂಚ ಪ್ರಾಗಭಾವಸ್ಯ' ಇತ್ಯಾದಿ ಗ್ರಂಥೇ ।**

ಅನುವಾದ– 'ತಾತ್ಪರ್ಯವಿಷಯೀಭೂತಸಂಸರ್ಗಾವಗಮಪ್ರಾಗಭಾವಃ ಆಕಾಂಕ್ಷಾ' ಎಂಬುದಾಗಿ ಆಕಾಂಕ್ಷೆಯ ಲಕ್ಷಣವನ್ನು ಪರಿಷ್ಕಾರ ಮಾಡಿದಾಗ 'ಅಯಮೇತಿ' ಎಂಬ ಸ್ಥಳದಲ್ಲಿ ಅತಿವ್ಯಾಪ್ತಿದೋಷವು ಬರುವುದಿಲ್ಲ. ರಾಜಪದಕ್ಕೆ ಪುರುಷಪದದ ಜೊತೆ ಅನ್ವಯಬೋಧ ಬರಲಿ ಎಂಬ ತಾತ್ಪರ್ಯವು ವಕ್ತೃವಿಗೆ ಇರುವುದಿಲ್ಲ ಎಂದು 'ತಾತ್ಪರ್ಯವಿಷಯ' ಎಂಬುದರ ಅಭಿಪ್ರಾಯ.

'ಶಾಬ್ದಾಸಾಧಾರಣ್ಯಾಯೋಗಾತ್' ಎಂಬ ಗ್ರಂಥದ ಮಾತು ಉಪಲಕ್ಷಣೆಯಾಗಿದೆ. 'ಘಟಂ' ಎಂದಷ್ಟೇ ಹೇಳಿದಾಗ ಆಕಾಂಕ್ಷೆಯು ಬರುತ್ತದೆ. 'ಆನಯ' ಎಂಬ ಕ್ರಿಯಾವಾಚಕಪದವನ್ನು ಉಚ್ಚಾರಣೆ ಮಾಡಿದಾಗ ಆಕಾಂಕ್ಷೆಯು ಶಾಂತವಾಗುತ್ತದೆ. ಶಾಬ್ದಬೋಧ ಬಂದ ಮೇಲೆ ಈ ವಾಕ್ಯವು ಸಾಕಾಂಕ್ಷಾವಾಕ್ಯವೆಂದು ಕರೆಸಿಕೊಳ್ಳುವುದಿಲ್ಲ. ನಿರಾಕಾಂಕ್ಷವಾಕ್ಯವೆಂದು ಕರೆಸಿಕೊಳ್ಳುತ್ತದೆ. 'ಜನಿತಾನ್ವಯಬೋಧಕವಾಕ್ಯ = ಅನ್ವಯ ಹುಟ್ಟಿರುವ ವಾಕ್ಯ' ಎಂದು ಕೂಡ ಕರೆಯುತ್ತಾರೆ. ಆದರೆ ಘಟಪದಕ್ಕೆ ಆನಯನದ ಜೊತೆ ಸಂಸರ್ಗಾವಗಮವು ಬುದ್ಧಿಯಲ್ಲಿ ಅನೇಕಬಾರಿ ಬಂದಾಗ ಮತ್ತೊಂದು ಸಂಸರ್ಗಾವಗಮದ ಪ್ರಾಗಭಾವವು ಮೊದಲು ಇರುವುದರಿಂದ ಜನಿತಾನ್ವಯಬೋಧಕವಾದ ವಾಕ್ಯವೂ ಸಹ ಸಾಕಾಂಕ್ಷಾವಾಕ್ಯವೆಂದು ಕರೆಸಿಕೊಳ್ಳಬೇಕಾಗುತ್ತದೆ. ಈ ದೋಷವನ್ನು ಕೂಡ ಮೂಲದಲ್ಲಿ ವಿವಕ್ಷಿಸಬೇಕು.

'ವಕ್ಷ್ಯತೇ' ಎಂದರೆ ಮಣಿಕಾರನು ಹೇಳಿದ ಆಕಾಂಕ್ಷೆಯ ಸ್ವರೂಪವನ್ನು ಮುಂದೆ ಗ್ರಂಥಕಾರರು ಖಂಡನೆ ಮಾಡುತ್ತಾರೆ. ಆ ಭಾಗದಲ್ಲಿ 'ಕಿಂಚ ಪ್ರಾಗಭಾವಸ್ಯ' ಇತ್ಯಾದಿ ವಾಕ್ಯಗಳು ಹೊರಟಿವೆ. ಅಲ್ಲಿ ಪ್ರಾಗಭಾವವು ಆಕಾಂಕ್ಷೆಯ ಲಕ್ಷಣದಲ್ಲಿ ಸೇರಲು ಸಾಧ್ಯವಿಲ್ಲವೆಂದು ವಿವರವಾಗಿ ಖಂಡನೆ ಮಾಡುತ್ತಾರೆ ಎಂದು ತಿಳಿಯಬೇಕು.

# ಮಣಿಕಾರ ಹೇಳಿದ ಅವಾಂತರ ಆಕಾಂಕ್ಷಾಲಕ್ಷಣವೇನು?

**ತರ್ಕತಾಂಡವ – ಯತ್ತು ಮಣಾವುಕ್ತಮ್ - 'ಅಭಿಧಾನಾಪರ್ಯವಸಾನಮಾಕಾಂಕ್ಷಾ। ಯಸ್ಯ ಯೇನ ವಿನಾ ಸ್ವಾರ್ಥಾನ್ವಯಾನನುಭಾವಕತ್ವಂ ತಸ್ಯ ತದೇವಾಪರ್ಯವ-ಸಾನಮ್। ಅನ್ವಯಾನನುಭಾವಕತ್ವಂ ಚ ಅನ್ವಯಾನುಭವಪ್ರಾಗಭಾವಃ।**

ಅನುವಾದ– ತತ್ವಚಿಂತಾಮಣಿಯಲ್ಲಿ ಆಕಾಂಕ್ಷೆಯ ಲಕ್ಷಣ ಹೀಗಿದೆ - 'ಅಭಿಧಾನಅಪರ್ಯ-ವಸಾನಮಾಕಾಂಕ್ಷಾ' ಮುಖ್ಯವೃತ್ತಿಯಿಂದ ಪದಾರ್ಥಜ್ಞಾನದ ಅಪರ್ಯವಸಾನವೇ ಆಕಾಂಕ್ಷೆ. ಅಪರ್ಯವಸಾನ ಎಂದರೆ ಯಾವ ಪದಕ್ಕೆ ಯಾವ ಪದವಿಲ್ಲದೇ ಸ್ವಾರ್ಥಾನ್ವಯದ ಅನುಭವವು ಹುಟ್ಟುವುದಿಲ್ಲವೋ ಆ ಪದಕ್ಕೆ ಸ್ವಾರ್ಥಾನ್ವಯಾನನುಭಾವಕವೇ ಅಪರ್ಯವಸಾನ ಎನಿಸುತ್ತದೆ. ಅನ್ವಯಾನನುಭಾವಕತ್ವ ಎಂದರೆ ಅನ್ವಯಾನುಭವದ ಪ್ರಾಗಭಾವ ಎಂದರ್ಥ.

ವಿವರಣೆ - 'ಅಭಿಧಾನ' ಎಂಬ ಪದಕ್ಕೆ 'ಮುಖ್ಯವೃತ್ತ್ಯಾ ಪ್ರತಿಪಾದನಂ' ಎಂದರ್ಥ. 'ಪ್ರತಿಪಾದನ' ಎಂದರೆ ಪ್ರತಿಪತ್ತಿಜನನ ಎಂದರ್ಥ. ಅಪರ್ಯವಸಾನ ಎಂಬ ಪದಕ್ಕೆ ಯಾವ ಪದಕ್ಕೆ ಸ್ವಾರ್ಥಾನ್ವಯಾನನುಭಾವಕತ್ವವು ಬರುವುದಿಲ್ಲವೋ ಆ ಪದಕ್ಕೆ ಇರುವ ಸ್ವಾರ್ಥಾನ್ವಯಾನನುಭಾವಕತ್ವ ಎಂದರ್ಥ. ಉದಾ - 'ಘಟಮಾನಯ' ಎಂಬಲ್ಲಿ ಯಸ್ಯ ಘಟಪದಸ್ಯ ಯೇನ ವಿನಾ ಆನಯನಪದೇನ ವಿನಾ ಸ್ವಾರ್ಥಾನ್ವಯಾನನುಭಾವಕತ್ವಂ 'ಘಟಮಾನಯ' ಇತಿ ಸ್ವಾರ್ಥಾನ್ವಯಾನನುಭಾವಕತ್ವಂ, ತಸ್ಯ ಘಟಪದಸ್ಯ ತದೇವ ಸ್ವಾರ್ಥಾನ್ವಯಾನನುಭಾವಕತ್ವಮೇವ ಅಪರ್ಯವಸಾನಂ ಎಂದು ಲಕ್ಷಣಸಮನ್ವಯ. ಸ್ವಾರ್ಥಾನ್ವಯಾನನುಭಾವಕತ್ವ ಎಂದರೆ ಸ್ವಾರ್ಥಾನ್ವಯಾನನುಭಾವಪ್ರಾಗಭಾವ ಎಂದರ್ಥ. ಅಭಿಪ್ರಾಯ ಹೀಗಿದೆ. ಕೇವಲ 'ಘಟಂ' ಎಂಬ ಪದವನ್ನು ಉಚ್ಚಾರಣೆ ಮಾಡಿದ ಮಾತ್ರಕ್ಕೆ ಶಾಬ್ದಬೋಧವು ಬರುವುದಿಲ್ಲ. 'ಆನಯ' ಎಂಬ ಪದವನ್ನು ಉಚ್ಚಾರ ಮಾಡಿದಾಗ 'ಘಟಂ' ಎಂಬ ಪದವು ಸ್ವಾರ್ಥಾನ್ವಯಕ್ಕೆ ಬೋಧಕವಾಗುತ್ತದೆ. 'ಆನಯ' ಪದವನ್ನು ಉಚ್ಚಾರ ಮಾಡುವ ಪ್ರಾಕ್‌ಕ್ಷಣದಲ್ಲಿ ಸ್ವಾರ್ಥಾನ್ವಯಾನುಭವದ ಪ್ರಾಗಭಾವವು ಇರುತ್ತದೆ. 'ಆನಯ'ಪದವನ್ನು ಉಚ್ಚಾರಣೆ ಮಾಡಿದ ಅನಂತರದಲ್ಲಿ ಸ್ವಾರ್ಥಾನ್ವ-ಯಾನುಭವಪ್ರಾಗಭಾವವು ನಾಶವಾಗುವುದರಿಂದ ಆಕಾಂಕ್ಷೆಯು ಶಾಂತವಾಗುತ್ತದೆ.

**ನ್ಯಾಯದೀಪ – ಯತ್ತು ಮಣಾವಿತಿ ॥ ಶಬ್ದಖಂಡೇ ಆಕಾಂಕ್ಷಾವಾದಸಿದ್ಧಾಂತೇ ಇತ್ಯರ್ಥಃ ।**

ಅನುವಾದ– **'ಯತ್ತು ಮಣೌ'** ಎಂಬ ಗ್ರಂಥದ ಭಾಗಕ್ಕೆ 'ಶಬ್ದಖಂಡದಲ್ಲಿ ಆಕಾಂಕ್ಷಾವಾದದ ಸಿದ್ಧಾಂತದ ಸಂದರ್ಭದಲ್ಲಿ ಮಣಿಕಾರನು ಹೇಳಿದ' ಎಂದರ್ಥ.

ವಿವರಣೆ - ಮಣಿಕಾರನು ಶಬ್ದಖಂಡದಲ್ಲಿ ಬೇರೆ ವಾದಿಗಳು ಹೇಳುವ ಆಕಾಂಕ್ಷೆಯ ಲಕ್ಷಣವನ್ನು ಮೊದಲು ಅನುವಾದ ಮಾಡಿ ಅನಂತರ ತನಗೆ ಸಮ್ಮತವಾದ ಆಕಾಂಕ್ಷೆಯ ಲಕ್ಷಣವನ್ನು ಹೇಳಿರುತ್ತಾನೆ.

ಉದಯನ ಹೇಳಿರುವ ಆಕಾಂಕ್ಷೆಯ ಲಕ್ಷಣಕ್ಕಿಂತ ಹೆಚ್ಚಿನ ವ್ಯತ್ಯಾಸ ಇವನ ಲಕ್ಷಣದಲ್ಲಿ ಕಾಣಸುವುದಿಲ್ಲ. ಈ ವಿಷಯವನ್ನು ತೋರಿಸುವುದಕ್ಕಾಗಿ ಗ್ರಂಥಕಾರರು ಮಣಿಕಾರನು ಹೇಳಿರುವ ಆಕಾಂಕ್ಷೆಯ ಲಕ್ಷಣವನ್ನು ಇಲ್ಲಿ ಅನುವಾದ ಮಾಡುತ್ತಿದ್ದಾರೆ.

## ಅಪರ್ಯವಸಾನಶಬ್ದದ ಅಭಿಪ್ರಾಯವೇನು?

**ನ್ಯಾಯದೀಪ – ನನು – ಅಭಿಧಾನಾನ್ವಯಾನುಭವಃ ತಸ್ಯಾಪರ್ಯವಸಾನ-ಮನಿಷ್ಪತ್ತಿಃ ಇತ್ಯರ್ಥಶ್ಚೇತ್, 'ಘಟಃ ಕರ್ಮತ್ವಮ್' ಇತ್ಯಾದಾವಸ್ಯೇವೇತ್ಯತಃ, ಅನ್ಯಮೇವಾಪರ್ಯವಸಾನಶಬ್ದಾರ್ಥಂ ಮಣ್ಯುಕ್ತಮಾಹ – ಯಸ್ಯೇತಿ ॥**

ಅನುವಾದ– 'ಅಭಿಧಾನಾಪರ್ಯವಸಾನಮಾಕಾಂಕ್ಷಾ' ಎಂಬ ಆಕಾಂಕ್ಷೆಯ ಲಕ್ಷಣದಲ್ಲಿ 'ಅಭಿಧಾನ' ಎಂಬ ಪದಕ್ಕೆ ಅನ್ವಯದ ಅನುಭವ ಎಂದರ್ಥ. ಇದು ಪರ್ಯವಸಾನವಾಗದೇ ಅನಿಷ್ಪನ್ನವಾದಾಗ ಆ ವಾಕ್ಯವು ಸಾಕಾಂಕ್ಷಿತವಾಗುತ್ತದೆ. 'ಅಪರ್ಯವಸಾನ' ಎಂಬ ಪದಕ್ಕೆ ಅನಿಷ್ಪನ್ನ = ಹುಟ್ಟದಿರುವಿಕೆ ಎಂಬರ್ಥವನ್ನು ವಿವಕ್ಷಿಸುವುದಾದಲ್ಲಿ 'ಘಟಃ ಕರ್ಮತ್ವಂ, ಆನಯನಂ ಕೃತಿಃ' ಎಂಬ ವಾಕ್ಯಾಭಾಸಗಳಲ್ಲಿ ಅನ್ವಯಾನುಭವದ ಅನಿಷ್ಪತ್ತಿಯು ಇರುವುದರಿಂದ ಅತಿಪ್ರಸಂಗವು ಇವರಿಗೂ ಕೂಡ ತಪ್ಪಿದ್ದಲ್ಲ. ಇದರ ಪರ್ಯವಸಾನಕ್ಕಾಗಿ ಅಪರ್ಯವಸಾನ ಎಂಬ ಶಬ್ದದ ಅರ್ಥವನ್ನು ಬೇರೆ ಕ್ರಮದಲ್ಲಿ ಮಣಿಕಾರನೇ ಹೇಳಿರುತ್ತಾನೆ. ಅದರ ಅನುವಾದವನ್ನು ಗ್ರಂಥಕಾರರು 'ಯಸ್ಯ' ಎಂಬಿತ್ಯಾದಿ ಗ್ರಂಥದಿಂದ ಅನುವಾದ ಮಾಡಿರುತ್ತಾರೆ.

ವಿವರಣೆ– 'ಅಭಿಧಾನಾಪರ್ಯವಸಾನಂ ಆಕಾಂಕ್ಷಾ' ಎಂಬುದು ಮಣಿಕಾರನು ಹೇಳಿದ ಆಕಾಂಕ್ಷೆಯ ಲಕ್ಷಣ. ಇಲ್ಲಿರುವ ಅಭಿಧಾನ ಎಂಬ ಪದಕ್ಕೆ ಮುಖ್ಯವೃತ್ತ್ಯಾ ಪ್ರತಿಪಾದನಂ = ಮುಖ್ಯವೃತ್ತಿಯಿಂದ ಪ್ರತಿಪತ್ತಿಗೆ ಕಾರಣವಾದದ್ದು ಎಂದರ್ಥ. ಅಪರ್ಯವಸಾನ ಪದಕ್ಕೆ ಹುಟ್ಟದಿರುವುದು ಎಂದರ್ಥ.

'ಅಪರ್ಯಸಾನ' ಎಂಬ ಪದಕ್ಕೆ ಅನಿಷ್ಪನ್ನವಾದದ್ದು ಎಂದಷ್ಟೇ ಅರ್ಥವನ್ನು ವಿವಕ್ಷಿಸುವು-ದಾದರೆ, 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬ ವಾಕ್ಯಾಭಾಸದಲ್ಲಿ, 'ಕುಂಡಮ-ಜಾಜಿನಂ ದಶ ದಾಡಿಮಾನಿ ಷಡಪೂಪಾಃ' ಇತ್ಯಾದಿ ವಾಕ್ಯಾಭಾಸಗಳಲ್ಲಿಯೂ, ಅನ್ವಯಾನುಭವದ ಅಪರ್ಯವಸಾನವು ಇರುತ್ತದೆ. ಏಕೆಂದರೆ, 'ಘಟಃ' ಎಂಬ ಪದವನ್ನು ಕೇಳಿದಾಗಲೂ ಅನ್ವಯಾನುಭವವು ಅವನಿಗೆ ಬರುವುದಿಲ್ಲ. 'ಕರ್ಮತ್ವಂ' ಎಂಬ ಪದವನ್ನು ಕೇಳಿದಾಗಲೂ ಕೂಡ ಅನ್ವಯಾನುಭವವು ಬರುವುದಿಲ್ಲ. 'ಆನಯನಂ' ಇತ್ಯಾದಿ ಪದಗಳನ್ನು ಕೇಳಿದಾಗಲೂ ಕೂಡ ಅವನಿಗೆ ಶಾಬ್ದಬೋಧದ ಅನುಭವವು ಬರುವುದಿಲ್ಲ. ಆದ್ದರಿಂದ, ಅಪರ್ಯವಸಾನಪದಕ್ಕೆ ಶಾಬ್ದಬೋಧವು ಹುಟ್ಟಬಾರದು ಎಂಬರ್ಥವನ್ನು ಹೇಳುವುದಾದರೆ 'ಘಟಃ ಕರ್ಮತ್ವಂ' ಇತ್ಯಾದಿ ಸ್ಥಳಗಳಲ್ಲಿ ಅತಿವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ.

## ಮಣಿಕಾರ ಹೇಳಿದ ಆಕಾಂಕ್ಷೆಯ ನಿಷ್ಕರ್ಷ

**ನ್ಯಾಯದೀಪ – ಯಸ್ಯ ಪದಸ್ಯೋಪಸ್ಥಿತಸ್ಯ ಯದ್ವ್ಯತಿರಿಕ್ತಪ್ರಯುಕ್ತಸ್ವಾರ್ಥಾ-ನ್ವಯಾನನುಭಾವಕತ್ವಂ ತಸ್ಯ ಪದಸ್ಯ ತದನನುಭಾವಕತ್ವಮೇವಾಪರ್ಯವಸಾನಂ ತೇನ ಚ ಸಹ ತದೇವಾಕಾಂಕ್ಷಾ ಇತ್ಯರ್ಥಃ ।**

ಅನುವಾದ– 'ಯಸ್ಯ ಯೇನ ವಿನಾ' ಇತ್ಯಾದಿ ಗ್ರಂಥದ ವಾಕ್ಯದ ಅಭಿಪ್ರಾಯ ಹೀಗಿದೆ. - ಉಪಸ್ಥಿತವಾದ ಯಾವ ಪದಕ್ಕೆ ಯಾವ ಪದ ಪ್ರಯುಕ್ತವಾಗಿ ಸ್ವಾರ್ಥಾನ್ವಯದ ಅನುಭವವು ಬರುವುದಿಲ್ಲವೋ ಆ ಪದಕ್ಕೆ ಶಾಬ್ದಬೋಧಜನಕತ್ವ ಇಲ್ಲದಿರುವುದೇ ಅಪರ್ಯವಸಾನ. ಮತ್ತೊಂದು ಪದದಿಂದ ಆ ಪದಕ್ಕೆ ಇರುವುದೇ ಆಕಾಂಕ್ಷಾ ಎಂದು.

ವಿವರಣೆ - 'ಘಟಮಾನಯ' ಎಂಬ ವಾಕ್ಯದಿಂದ ಶಾಬ್ದಬೋಧ ಬರುವಾಗ ಆಕಾಂಕ್ಷೆ ಹೇಗೆ ಬರುತ್ತದೆ ಎಂದು ತಿಳಿಯಬೇಕು.

ಉಪಸ್ಥಿತಸ್ಯ = ಉಪಸ್ಥಿತವಾದ; ಯಸ್ಯ ಪದಸ್ಯ = ಘಟಂ ಎಂಬ ಪದಕ್ಕೆ; ಯದ್ವ್ಯತಿರೇಕಪ್ರಯುಕ್ತಸ್ವಾರ್ಥಾನ್ವಯಾನನುಭಾವಕತ್ವಂ = ಯಾವ ಪದವಿಲ್ಲದ ಪ್ರಯುಕ್ತವಾಗಿ ಘಟಂ ಎಂಬ ಪದವು ಘಟವನ್ನು ಎಂಬ ಸ್ವಾರ್ಥಾನ್ವಯದ ಅನುಭವಕ್ಕೆ ಜನಕವಾಗುವುದಿಲ್ಲವೋ; ತಸ್ಯ ಪದಸ್ಯ = ಆಘಟ ಎಂಬ ಪದಕ್ಕೆ, ತದನನುಭಾವಕತ್ವಮೇವ = ಶಾಬ್ದಬೋಧ ಜನಕತ್ವ ಇಲ್ಲದಿರುವಿಕೆಯೇ ಅಪರ್ಯವಸಾನಂ = ಅಪರ್ಯವಸಾನ ಎಂದು ಕರೆಸಿಕೊಳ್ಳುತ್ತದೆ. ಘಟ ಎಂಬ ಪದಕ್ಕೆ ಆನಯ ಎಂಬ ಪದದ ಜೊತೆಗಿರುವಿಕೆಯೇ ಆಕಾಂಕ್ಷೆ ಎಂದು ಇದರ ಅಭಿಪ್ರಾಯ.

'ಘಟಮಾನಯ' ಎಂಬ ಸ್ಥಳದಲ್ಲಿ ಅಭಿಧಾನ ಅಪರ್ಯವಸಾನರೂಪವಾದ ಆಕಾಂಕ್ಷೆಯ ಲಕ್ಷಣವನ್ನು ಮೇಲೆ ಹೇಳಿದ ಕ್ರಮದಲ್ಲಿ ತಿಳಿಯಬೇಕು. ಮುಖ್ಯವೃತ್ತಿಯಿಂದ ಸ್ವಾರ್ಥವನ್ನು ಹೇಳುವಾಗ ಮತ್ತೊಂದು ಪದಾರ್ಥದ ಅನ್ವಯವನ್ನು ಅಪೇಕ್ಷಿಪಡುವುದೇ ಆಕಾಂಕ್ಷೆಯೆಂದು ಕರೆಸಿಕೊಳ್ಳುತ್ತದೆ ಎಂಬುದು ಈ ಲಕ್ಷಣದ ಅಭಿಪ್ರಾಯ.

ಇಲ್ಲಿರುವ 'ಅನ್ವಯಾನನುಭಾವಕತ್ವಂ' ಎಂಬುದಕ್ಕೆ ಅನ್ವಯಾನುಭವಪ್ರಾಗಭಾವ ಎಂದರ್ಥ. ಆದ್ದರಿಂದ 'ಘಟಃ ಕರ್ಮತ್ವಂ, ಆನಯನಂ ಕೃತಿಃ' ಎಂಬ ವಾಕ್ಯಾಭಾಸದಲ್ಲಿ ಅತಿಪ್ರಸಂಗ ಬರುವುದಿಲ್ಲ. ಅದು ಹೀಗೆ - 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬಲ್ಲಿ 'ಘಟಃ' ಎಂಬ ಪದವು 'ಕರ್ಮತ್ವಂ' ಎಂಬ ಪದವಿಲ್ಲದೇ ಸ್ವಾರ್ಥವನ್ನು ತಿಳಿಸುವುದಿಲ್ಲ ಎಂದು ಹೇಳಲಾಗದು. ಏಕೆಂದರೆ 'ಕರ್ಮತ್ವಂ' ಎಂಬ ಪದವಿದ್ದಾಗಲೂ ಕೂಡ 'ಘಟಃ' ಎಂಬ ಪದವು ಸ್ವಾರ್ಥಬೋಧಕವಾಗುವುದಿಲ್ಲ. ಅದರಂತೆ 'ಆನಯನಂ' ಎಂಬ ಪದವನ್ನು ಉಚ್ಚಾರಣೆ ಮಾಡಿದಾಗಲೂ ಕೂಡ ಆ ಪದವು ಸ್ವಾರ್ಥಾನ್ವಯಬೋಧಕ ಆಗುವುದಿಲ್ಲ. ಆದ್ದರಿಂದ ಅಭಿಧಾನಾಪರ್ಯವಸಾಯಿತ್ವವನ್ನು ವಾಕ್ಯಾಭಾಸಸ್ಥಳದಲ್ಲಿ ಹೇಳಲು ಸಾಧ್ಯವಿಲ್ಲದ ಕಾರಣ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

## ಮಣಿಕಾರನ ಆಕಾಂಕ್ಷೆ ಯೋಗ್ಯತೆಯಲ್ಲ - ಪಕ್ಷಧರ

**ನ್ಯಾಯದೀಪ – ನನು - ಇಯಮಾಕಾಂಕ್ಷಾ ಸ್ವರೂಪಯೋಗ್ಯತೈವ । ಸಾ ಚ ನಾಕಾಂಕ್ಷಾ। ತಸ್ಯಾಃ ಶಬ್ದಸಹಕಾರಿತ್ವಾತ್ । ಸ್ವರೂಪಯೋಗ್ಯತಾಯಾಶ್ಚ ಅತಥಾತ್ವಾತ್ ಇತ್ಯತ ಪಕ್ಷಧರಾದ್ಯುಕ್ತಮಾಹ ।**

ಅನುವಾದ– ಪ್ರಶ್ನೆ - ಈ ಆಕಾಂಕ್ಷೆಯು ಸ್ವರೂಪಯೋಗ್ಯತೆಯೇ ಆಯಿತು. ಸ್ವರೂಪಯೋಗ್ಯತೆಯು ಆಕಾಂಕ್ಷಾ ಎನಿಸಲು ಸಾಧ್ಯವಿಲ್ಲ. ಏಕೆಂದರೆ ಆಕಾಂಕ್ಷೆಯು ಶಬ್ದಸಹಕಾರಿಯಾಗಿದೆ. ಸ್ವರೂಪ-ಯೋಗ್ಯತೆಯು ಶಬ್ದಸಹಕಾರಿಯಾಗಿಲ್ಲ. ಈ ಪ್ರಶ್ನೆಗೆ ಪಕ್ಷಧರಮಿಶ್ರನು ಹೇಳಿದ ಸಮಾಧಾನವನ್ನು ''ಅತ ಏವ ಚ'' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

ವಿವರಣೆ - 'ಅಭಿಧಾನಾಪರ್ಯವಸಾನಂ ಆಕಾಂಕ್ಷಾ' ಎಂಬುದಾಗಿ ಆಕಾಂಕ್ಷೆಯ ಲಕ್ಷಣವನ್ನು ಹೇಳಿದರೆ ಇದು ಸ್ವರೂಪಯೋಗ್ಯತೆಗಿಂತ ಬೇರೆ ಆಗುವುದಿಲ್ಲ. ಘಟಕ್ಕೆ ದಂಡವು ಕಾರಣವಾಗಿದೆ. ಈ ದಂಡದಲ್ಲಿ ಸ್ವರೂಪಯೋಗ್ಯತೆ ಇದೆ. ಧೂಮಕ್ಕೆ ವಹ್ನಿಯು ಕಾರಣವಾಗಿದೆ. ಇದರಲ್ಲಿಯೂ ಸ್ವರೂಪಯೋಗ್ಯತೆ ಇದೆ. ಇದರಂತೆ ಶಾಬ್ದಬೋಧಕ್ಕೆ ಕಾರಣವಾದದ್ದು ಶಬ್ದ. ಇದರಲ್ಲಿ ಸ್ವರೂಪಯೋಗ್ಯತೆಯು ಸಹಜವಾಗಿ ಇದ್ದೇ ಇರುತ್ತದೆ. ಈ ಸ್ವರೂಪಯೋಗ್ಯತೆಯನ್ನೇ ನೀವು 'ಅಭಿಧಾನಾಪರ್ಯವಸಾನಮಾಕಾಂಕ್ಷಾ' ಎಂದು ಹೇಳುತ್ತಿದ್ದೀರಿ. ಆದರೆ ಇದು ಸರಿಯಲ್ಲ.

'ಸಹಕಾರಿವಿರಹಪ್ರಯುಕ್ತಕಾರ್ಯಾಭಾವಃ ಯೋಗ್ಯತಾ'- ಎಂಬುದಾಗಿ ತಾರ್ಕಿಕರು ಸ್ವರೂಪ ಯೋಗ್ಯತೆಯ ಲಕ್ಷಣವನ್ನು ಹೇಳುತ್ತಾರೆ. ಶಾಬ್ದಬೋಧಜನಕತ್ವದ ಸಾಮರ್ಥ್ಯವು ಶಬ್ದದಲ್ಲಿ ಇಲ್ಲದಿದ್ದರೆ ಅದು ಸ್ವಾರ್ಥಬೋಧಕವಾಗುವುದಿಲ್ಲ. ಸಹಕಾರಿ ಇದ್ದರೆ ಮಾತ್ರ ಸ್ವಾರ್ಥಾ-ನ್ವಯವನ್ನು ಹೇಳಲು ಸಾಧ್ಯ.

ಪ್ರಕೃತದಲ್ಲಿ ಆಕಾಂಕ್ಷಾ ಎಂಬುದೇ ಶಾಬ್ದಬೋಧಕ್ಕೆ ಸಹಕಾರಿಯಾಗಿದೆ. ಈಗ ಸ್ವರೂಪ-ಯೋಗ್ಯತೆಯೇ ಆಕಾಂಕ್ಷೆ ಎಂದು ಹೇಳುವುದಾದರೆ ಸಹಕಾರ್ಯಂತರವಿರಹಪ್ರಯುಕ್ತ-ಕಾರ್ಯಾಭಾವಃ ಆಕಾಂಕ್ಷಾ ಎಂದು ಹೇಳಿದಂತಾಗುತ್ತದೆ. ಆಗ ಆಕಾಂಕ್ಷೆಯನ್ನು ಸಹಕಾರಿ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ, ಸಹಕಾರ್ಯಂತರ = ಮತ್ತೊಂದು ಸಹಕಾರಿಪದಾರ್ಥವು ಇಲ್ಲದಿದ್ದರೆ ಅನ್ವಯಅಜನಕತ್ವಪ್ರಯುಕ್ತವಾಗಿ ಕಾರ್ಯವು ಕೂಡ ಇರುವುದಿಲ್ಲ ಎಂದು ಹೇಳಿದಂತಾಗುತ್ತದೆ. ಇದು ಸಹಕಾರಿಯಾಗುವುದಿಲ್ಲ. ಹೀಗೆ ಹೇಳಿದಾಗ ಆತ್ಮಾಶ್ರಯದೋಷವೇ ಬರುತ್ತದೆ. ಆದ್ದರಿಂದ, ಸ್ವರೂಪಯೋಗ್ಯವಾದ ಸ್ವರೂಪಯೋಗ್ಯತೆ ಎನಿಸಿದ ಆಕಾಂಕ್ಷೆಯನ್ನು 'ಅಭಿಧಾನಾಪರ್ಯವಸಾನಂ' ಎಂಬ ರೀತಿಯಲ್ಲಿ ಪರಿಷ್ಕಾರ ಮಾಡಲು ಸಾಧ್ಯವಿಲ್ಲ. ಈ ಪಕ್ಷಕ್ಕೆ ಹೇಳಿದ ದೋಷಕ್ಕೆ ಪಕ್ಷಧರ-ಮಿಶ್ರನು ಹೇಳಿದ ಸಮಾಧಾನವನ್ನು ಗ್ರಂಥಕಾರರು ಅನುವಾದ ಮಾಡುತ್ತಿದ್ದಾರೆ.

## ಆಕಾಂಕ್ಷಾಲಕ್ಷಣದಲ್ಲಿ ಪ್ರಾಗಭಾವವೆಂಬ ಪದ ಅನಿವಾರ್ಯ

**ತರ್ಕತಾಂಡವ – ಅತ ಏವ ಜನಿತಾನ್ವಯಬೋಧಂ ಪದಮನಾಕಾಂಕ್ಷಂ ತದಾ ಪ್ರಾಗಭಾವಾಭಾವಾತ್ ।**

ಅನುವಾದ– ಆಕಾಂಕ್ಷೆಯು ಪ್ರಾಗಭಾವ ರೂಪವಾಗಿರುವುದರಿಂದಲೇ ಅನ್ವಯಬೋಧ ಹುಟ್ಟಿಸಿದ ಪದವು ನಿರಾಕಾಂಕ್ಷಿತವಾಗುತ್ತದೆ. ಏಕೆಂದರೆ ಆಗ ಅನ್ವಯಬೋಧ ಹುಟ್ಟಿದ ನಂತರ ಅದರ ಪ್ರಾಗಭಾವವೇ ಇರುವುದಿಲ್ಲ.

ವಿವರಣೆ - ಆಕಾಂಕ್ಷೆಯ ಲಕ್ಷಣದಲ್ಲಿ ಪ್ರಾಗಭಾವಪದವನ್ನು ಹೇಳಿರುವುದರಿಂದ ಯಾವ ವಾಕ್ಯವನ್ನು ಕೇಳಿದ ಮೇಲೆ ಶಾಬ್ದಬೋಧವು ಬರುತ್ತದೋ ಆ ವಾಕ್ಯದಲ್ಲಿ ಪುನಃ ಆಕಾಂಕ್ಷೆಯ ಲಕ್ಷಣವು ಸಮನ್ವಯವಾಗುವುದಿಲ್ಲ.

## ಆಕಾಂಕ್ಷೆಯು ಯೋಗ್ಯತಾರೂಪ ಏಕಲ್ಲ?

**ತರ್ಕತಾಂಡವ – ಅತ ಏವ ಸ್ವರೂಪಯೋಗ್ಯತಾತ ಇಯಂ ಭಿನ್ನಾ । ಸಾ ಹಿ ಜನಿತ-ಫಲೇऽಪ್ಯಸ್ತಿ । ಇಯಂ ತು ಫಲಜನನಾತ್ ಪ್ರಾಗೇವ ।**

ಅನುವಾದ– ಜನಿತಾನ್ವಯಬೋಧದಲ್ಲಿ ಪ್ರಾಗಭಾವಘಟಿತವಾದ ಆಕಾಂಕ್ಷೆಯ ಲಕ್ಷಣವು ಬರುವುದಿಲ್ಲವಾದ್ದರಿಂದ ಸ್ವರೂಪಯೋಗ್ಯತೆಗಿಂತ ಆಕಾಂಕ್ಷೆಯು ಭಿನ್ನವಾಗಿದೆ. ಸ್ವರೂಪ-ಯೋಗ್ಯತೆಯು ಜನಿತವಾದ ಫಲದಲ್ಲಿಯೂ ಕೂಡ ಇರುತ್ತದೆ. ಆದರೆ ಆಕಾಂಕ್ಷೆಯು ಶಾಬ್ದ-ಬೋಧವೆಂಬ ಫಲಜನನಕ್ಕಿಂತ ಮೊದಲಷ್ಟೇ ಇರುತ್ತದೆ.

ವಿವರಣೆ - ಶಬ್ದಾಂತರಸಹಕಾರವಿಲ್ಲದೇ ಅನ್ವಯಾನನುಭಾವಕತ್ವವು ಯಾವ ಪದಕ್ಕಿ-ರುತ್ತದೋ ಅದನ್ನೇ ಆಕಾಂಕ್ಷೆಯ ಲಕ್ಷಣ ಎಂದು ಹೇಳುತ್ತಿದ್ದೀರಿ. ಇದನ್ನು ನೋಡಿದಾಗ 'ಸಹಕಾರಿವಿರಹಪ್ರಯುಕ್ತಕಾರ್ಯಾಭಾವಃ ಎಂಬ ತಾತ್ಪರ್ಯವು ತಿಳಿಯುತ್ತದೆ. ಯೋಗ್ಯ-ತೆಯ ಲಕ್ಷಣವೂ ಕೂಡ ಇದೇ ಆಗಿರುವುದರಿಂದ ಆಕಾಂಕ್ಷೆಗೂ ಯೋಗ್ಯತೆಗೂ ಐಕ್ಯವನ್ನು ಹೇಳಿದಂತಾಯಿತಲ್ಲವೇ ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸಲಾಗಿದೆ. ಆಕಾಂಕ್ಷೆಯ ಲಕ್ಷಣದಲ್ಲಿ

ಪ್ರಾಗಭಾವವನ್ನು ಸೇರಿಸಿರುವುದರಿಂದ ವೈಲಕ್ಷಣ್ಯ ಬರುತ್ತದೆ. ಯೋಗ್ಯತೆಯು ಕಾರ್ಯ-ಹುಟ್ಟಿದ ಅನಂತರವು ಕೂಡ ಇರುತ್ತದೆ. ಆದರೆ ಆಕಾಂಕ್ಷೆಯು ಕಾರ್ಯಹುಟ್ಟುವ ಮೊದ-ಲಷ್ಟೇ ಇರುತ್ತದೆ. ಆದ್ದರಿಂದ ಎರಡಕ್ಕೂ ಐಕ್ಯ ಇರಲು ಸಾಧ್ಯವಿಲ್ಲ.

**ನ್ಯಾಯದೀಪ – ಅತ ಏವ ಚೇತಿ ॥ 'ಪ್ರಾಗಭಾವರೂಪತ್ವಾದೇವ' ಇತ್ಯರ್ಥಃ ।**

ಅನುವಾದ– 'ಅತ ಏವ' ಎಂಬ ಪದಕ್ಕೆ ಪ್ರಾಗಭಾವರೂಪವಾಗಿರುವುದರಿಂದಲೇ ಎಂದರ್ಥ.

## ಅಭಾವದಲ್ಲಿ ತಾರತಮ್ಯವಿಲ್ಲ

**ತರ್ಕತಾಂಡವ – ನ ಚಾಭಾವೇ ತಾರತಮ್ಯಾಭಾವೇನ ಆಕಾಂಕ್ಷಾಯಾಮ್ ಉತ್ಕಟ-ತ್ವಾನುತ್ಕಟತ್ವರೂಪತಾರತಮ್ಯಾಯೋಗಃ । ಸಸಂಬಂಧಿಕಾಸಂಬಂಧಿಕಪದತ್ವಾದಿನೈವ ತದುಪಪತ್ತೇಃ ।**

ಅನುವಾದ– ಪ್ರಶ್ನೆ– ಆಕಾಂಕ್ಷೆಯನ್ನು ಪ್ರಾಗಭಾವರೂಪವೆಂದು ಹೇಳುವುದಾದರೆ ಅಭಾವದಲ್ಲಿ ತಾರ-ತಮ್ಯವೇ ಇಲ್ಲದಿರುವುದರಿಂದ 'ಉತ್ಥಿತ ಆಕಾಂಕ್ಷೆ' ಮತ್ತು 'ಉತ್ಥಾಪ್ಯ ಆಕಾಂಕ್ಷೆ' ಇವೆರಡರಲ್ಲಿ ತಾರತಮ್ಯವು ಕೂಡ ಅಯುಕ್ತವಾಗುತ್ತದೆ. ಆದ್ದರಿಂದ ಆಕಾಂಕ್ಷೆಯನ್ನು ಪ್ರಾಗಭಾವರೂಪವೆಂದು ಹೇಗೆ ಹೇಳುವಿರಿ?

ಉತ್ತರ– ಸಸಂಬಂಧಿಕವಾದ ಆಕಾಂಕ್ಷೆಯು ಉತ್ಥಿತಾಕಾಂಕ್ಷೆಯೆಂದೂ ಸಸಂಬಂಧಿಯಲ್ಲದ ಆಕಾಂಕ್ಷೆಯು ಉತ್ಥಾಪ್ಯ ಆಕಾಂಕ್ಷೆಯೆಂದೂ ಹೇಳಲು ಬರುತ್ತದೆ. ಹೀಗೆ ಇವರೆಡರಲ್ಲಿ ತಾರತಮ್ಯವನ್ನು ಕೂಡಿಸಬಹುದು. ಆದ್ದರಿಂದ ಆಕಾಂಕ್ಷೆಯು ಪ್ರಾಗಭಾವರೂಪವಾದಲ್ಲಿ ಯಾವುದೇ ಬಾಧಕವಿಲ್ಲ.

ವಿವರಣೆ - ಉತ್ಥಿತ ಆಕಾಂಕ್ಷೆ, ಉತ್ಥಾಪ್ಯ ಆಕಾಂಕ್ಷೆ ಎಂಬುದಾಗಿ ಆಕಾಂಕ್ಷೆಯು ಎರಡು ವಿಧ. ಸಹಜವಾಗಿ ಬರುವ ಆಕಾಂಕ್ಷೆಯನ್ನು ಉತ್ಥಿತ ಆಕಾಂಕ್ಷೆಯೆನ್ನುವರು. ಪ್ರೇರಣೆಯ ಮೂಲಕವಾಗಿ ಅಸಹಜವಾಗಿ ಬರುವ ಆಕಾಂಕ್ಷೆಯನ್ನು ಉತ್ಥಾಪ್ಯ ಆಕಾಂಕ್ಷೆ ಎನ್ನುವರು. ಅಸಹಜವಾದ ಆಕಾಂಕ್ಷೆಗಿಂತ ಸಹಜವಾದ ಆಕಾಂಕ್ಷೆಯು ಬಲಿಷ್ಠವಾಗಿರುತ್ತದೆ. ಈ ವಿಷಯವನ್ನು ಎಲ್ಲರೂ ಕೂಡ ಒಪ್ಪಿರುತ್ತಾರೆ. ಆದರೆ ಅನ್ವಯಾನುಭವದ ಪ್ರಾಗ-ಭಾವವನ್ನು ಆಕಾಂಕ್ಷೆಯೆಂದು ವಿವಕ್ಷಿಸುವಾದರೆ ಇಲ್ಲಿ ತಾರತಮ್ಯವನ್ನು ಮಾಡುವುದು

ಹೇಗೆ ಸಾಧ್ಯವಾಗುತ್ತದೆ. ಉತ್ಥಾಪ್ಯ ಆಕಾಂಕ್ಷೆಯಲ್ಲಿರುವ ಅನ್ವಯಾನುಭವದ ಪ್ರಾಗ-ಭಾವಕ್ಕಿಂತ ಉತ್ಥಿತ ಆಕಾಂಕ್ಷೆಯಲ್ಲಿರುವ ಅನ್ವಯಾನುಭವದ ಪ್ರಾಗಭಾವವು ಶ್ರೇಷ್ಠವೆಂದು ಪರಿಗಣಿಸುವುದು ತಪ್ಪಾಗುತ್ತದಲ್ಲವೇ?

ಈ ಪ್ರಶ್ನೆಯು ಅಯುಕ್ತವಾಗುತ್ತದೆ. ಯಾವುದು ಸಸಂಬಂಧಿಯಾದ ಪದವೋ ಅದು ಉತ್ಥಿತ ಆಕಾಂಕ್ಷೆಯೆಂದು ಕರೆಸಿಕೊಳ್ಳುತ್ತದೆ. ಸಸಂಬಂಧಿಯಲ್ಲದ ಪದವು ಉತ್ಥಾಪ್ಯ ಆಕಾಂಕ್ಷೆಯೆಂದು ಕರೆಸಿಕೊಳ್ಳುತ್ತದೆ. ಹೀಗೆ ಉತ್ಥಿತ ಆಕಾಂಕ್ಷೆಗೂ ಉತ್ಥಾಪ್ಯ ಆಕಾಂಕ್ಷೆಗೂ ವೈಲಕ್ಷಣ್ಯವನ್ನು ತೋರಿಸಲು ಬರುವುದರಿಂದ ಯಾವುದೇ ಬಾಧಕವಿಲ್ಲ.

## ಉತ್ಥಾಪ್ಯ-ಆಕಾಂಕ್ಷೆಗಿಂತ ಉತ್ಥಿತ-ಆಕಾಂಕ್ಷೆ ಶ್ರೇಷ್ಠ ಎನ್ನಬಹುದು

**ನ್ಯಾಯದೀಪ– ಪ್ರಾಗಭಾವಸ್ಯ ಆಕಾಂಕ್ಷಾರೂಪತ್ವೇ ಚೋತ್ಥಿತೋಽತ್ಥಾಪ್ಯ-ಆಕಾಂಕ್ಷಯೋರುತ್ಕರ್ಷಾದಿರ್ನ ಸ್ಯಾತ್, ಇತ್ಯಾಶಂಕಾಯಾಮಾಹ - ನ ಚೇತಿ ॥**

ಅನುವಾದ– ಪ್ರಾಗಭಾವವು ಆಕಾಂಕ್ಷಾ ಸ್ವರೂಪವೆನ್ನುವುದಾದರೆ ಉತ್ಥಿತ ಆಕಾಂಕ್ಷೆಯು ಉತ್ಥಾಪ್ಯ ಆಕಾಂಕ್ಷೆಗಿಂತ ಶ್ರೇಷ್ಠ ಎಂಬ ತಾರತಮ್ಯವೇ ಇಲ್ಲದಿರಬೇಕಾದೀತು ಎಂಬ ಆಶಂಕೆಯನ್ನು 'ನ ಚ' ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ.

ವಿವರಣೆ - 'ಘಟಮಾನಯ' ಎಂಬುದು ಉತ್ಥಿತ ಆಕಾಂಕ್ಷೆಗೆ ಉದಾಹರಣೆ. 'ನೀಲಂ ಘಟಮಾನಯ' ಎಂಬುದು ಉತ್ಥಾಪ್ಯ ಆಕಾಂಕ್ಷೆಗೆ ಉದಾಹರಣೆ. 'ಘಟಮಾನಯ' ಎಂಬ ಸ್ಥಳದಲ್ಲಿ 'ಘಟಂ' ಎಂಬ ಪದವನ್ನು ಕೇಳಿದಾಗ ಸಹಜವಾಗಿ ಯಾವುದರ ಜೊತೆ ಇದಕ್ಕೆ ಅನ್ವಯ ಎಂಬ ಆಕಾಂಕ್ಷೆಯು ಬರುತ್ತದೆ. 'ಆನಯ' ಎಂಬ ಪದವನ್ನು ಕೇಳಿದಾಗ ಆನಯನದ ಜೊತೆಗೆ ಅನ್ವಯವೆಂದು ತಿಳಿದು ಆಕಾಂಕ್ಷೆಯು ಶಾಂತವಾಗುತ್ತದೆ. ಆದರೆ 'ನೀಲಂ ಘಟಂ' ಎಂಬ ಸ್ಥಳದಲ್ಲಿ ಇದೇ ರೀತಿಯಲ್ಲಿ 'ಘಟಂ' ಎಂಬ ಪದವನ್ನು ಕೇಳಿದಾಗ ಸಾಮಾನ್ಯಾನ್ವಯವು ಪ್ರಾಪ್ತವಾದರೆ 'ಆನಯ' ಎಂಬ ಪದವೇ ಆಕಾಂಕ್ಷೆಯನ್ನು ಶಾಂತ ಮಾಡುತ್ತದೆ. ಪುನಃ 'ನೀಲಂ' ಎಂಬ ಪದಾರ್ಥದ ಆಕಾಂಕ್ಷೆಯು ಸಹಜವಾಗಿ ಬರುವುದಿಲ್ಲ. ಆದರೆ 'ನೀಲಂ' ಎಂಬ ಪದವಿರುವ ಕಾರಣ 'ಕೀದೃಶಂ ಘಟಮ್' ಎಂಬುದಾಗಿ ಆಕಾಂಕ್ಷೆಯನ್ನು ನಾವೇ ತಂದುಕೊಳ್ಳಬೇಕು. ಆಗ 'ನೀಲಂ' ಎಂಬ ಪದಾರ್ಥಕ್ಕೆ ಅನ್ವಯವು

ಯುಕ್ತವಾಗುತ್ತದೆ. ಆದ್ದರಿಂದ ಇದನ್ನು ಉತ್ಥಾಪ್ಯ ಆಕಾಂಕ್ಷೆಯೆನ್ನುತ್ತಾರೆ. ಆದ್ದರಿಂದ ಸಹಜವಾಗಿ ಬರುವ ಆಕಾಂಕ್ಷೆಗಿಂತ ಅಸಹಜವಾಗಿ ಬರುವ ಆಕಾಂಕ್ಷೆಯು ನೀಚವಾಗಿದೆ ಎಂಬುದು ಇಲ್ಲಿಯ ಅಭಿಪ್ರಾಯ.

## ಸಸಂಬಂಧಿಪದಗಳು ಉತ್ಥಿತಾಕಾಂಕ್ಷೆಗೆ ಉದಾಹರಣೆ

**ನ್ಯಾಯದೀಪ– 'ಅಯಮೇತಿ ಪುತ್ರೋ ರಾಜ್ಞಃ, ಪುರುಷೋಽಪಸಾರ್ಯತಾಮ್' ಇತ್ಯಾದೌ ರಾಜಪದಾದೇಃ ಪುತ್ರಾದಿನೋತ್ಕಟಾಕಾಂಕ್ಷತ್ವಂ ಪುರುಷಪದಾದಿನಾ ಚ ನ ತಥೇತಿ ಏತತ್ಸಂಬಂಧಿಕತ್ವಾದಿನಾ ಯುಕ್ತಮಿತ್ಯರ್ಥಃ ।**

ಅನುವಾದ– 'ಅಯಮೇತಿ ಪುತ್ರೋ ರಾಜ್ಞಃ, ಪುರುಷೋ ಅಪಸಾರ್ಯತಾಮ್' ಇವೇ ಮೊದಲಾದ ಸ್ಥಳಗಳಲ್ಲಿ ಪುತ್ರ ಮೊದಲಾದ ಪದಗಳ ಜೊತೆಗೆ ಉತ್ಕಟ ಆಕಾಂಕ್ಷೆಯು ಇರುತ್ತದೆ. ಆದರೆ ಪುರುಷ ಪದದ ಜೊತೆ ಉತ್ಕಟಾಕಾಂಕ್ಷೆಯು ಇರುವುದಿಲ್ಲ. ಆದ್ದರಿಂದ ಆಕಾಂಕ್ಷೆಯಲ್ಲಿ ಉತ್ಕಟತ್ವ ಹಾಗೂ ಅನುತ್ಕಟತ್ವಗಳೆಂಬುದು ಅಭಿಪ್ರಾಯ.

ವಿವರಣೆ - ಸಸಂಬಂಧಿಯಾದ ಪದದಲ್ಲಿ ಉತ್ಕಟ ಆಕಾಂಕ್ಷೆಯಿದೆಯೆಂದೂ, ಸಸಂಬಂಧಿಯಲ್ಲದ ಪದದಲ್ಲಿ ಉತ್ಕಟ ಆಕಾಂಕ್ಷೆಯಿಲ್ಲವೆಂದೂ ಗ್ರಂಥದಲ್ಲಿ ಹೇಳಿದ್ದಾರೆ. ಇದಕ್ಕೆ ಉದಾಹರಣೆ ಹೀಗಿದೆ – 'ಅಯಮೇತಿ ಪುತ್ರೋ ರಾಜ್ಞಃ' ಎಂಬಲ್ಲಿ ರಾಜಪದಕ್ಕೆ ಸಹಜವಾಗಿ ಪುತ್ರಪದದ ಜೊತೆಗೆ ಅನ್ವಯಜ್ಞಾನ ಬರುವುದರಿಂದ ಉತ್ಕಟ ಆಕಾಂಕ್ಷೆಯೆಂದು ಕರೆಸಿಕೊಳ್ಳುತ್ತದೆ. ಇದೇ ರಾಜಪದವು 'ಪುತ್ರ' ಎಂಬ ಪದಾರ್ಥದಲ್ಲಿ ಮೊದಲೇ ಅನ್ವಯವನ್ನು ಹೊಂದಿರುವ ಕಾರಣ ಪುನಃ 'ಪುರುಷಃ' ಎಂಬ ಪದಾರ್ಥದಲ್ಲಿ ಅನ್ವಯವನ್ನು ಹೊಂದುವುದಿಲ್ಲ. ಆದ್ದರಿಂದ ಪುರುಷಪದಾರ್ಥದಲ್ಲಿ ಅನ್ವಯ ಹೊಂದಿದ ರಾಜಪದದಲ್ಲಿ ಉತ್ಕಟ-ಆಕಾಂಕ್ಷೆಯು ಕೂಡ ಇರುವುದಿಲ್ಲ.

ಕೆಲವು ಪದಗಳು ಸಸಂಬಂಧಿಯಾಗಿರುತ್ತವೆ. ಕೆಲವು ಪದಗಳು ವಿಸಂಬಂಧಿಯಾಗಿರುತ್ತವೆ. ಸಸಂಬಂಧಿಯಾದ ಪದಗಳಲ್ಲಿ ಉತ್ಥಿತ ಆಕಾಂಕ್ಷೆಯು ಇರುತ್ತದೆ. ಉದಾ - 'ಪುತ್ರಃ ಪಿತಾ ಪತ್ನೀ' ಇವೇ ಮೊದಲಾದ ಪದಗಳೆಲ್ಲವೂ ಸಸಂಬಂಧಿಯಾಗಿವೆ. ಕೇವಲ 'ಪುತ್ರಃ' ಎಂಬ ಪದವನ್ನಷ್ಟೇ ಕೇಳಿದರೆ ಯಾರ ಮಗ? ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಆದ್ದರಿಂದ ಇವುಗಳು ಉತ್ಥಿತಆಕಾಂಕ್ಷೆಯುಳ್ಳವುಗಳು ಎಂದು ಕರೆಸಿಕೊಳ್ಳುತ್ತವೆ.

'ದೇವದತ್ತಃ, ಚೈತ್ರಃ' ಇವೇ ಮೊದಲಾದವು ಸಸಂಬಂಧಿಯಲ್ಲದ ಪದಗಳು. ಏಕೆಂದರೆ 'ದೇವದತ್ತಃ' ಎಂಬ ಪದವನ್ನು ಕೇಳಿದಾಗ ಸಹಜವಾಗಿ ಯಾವುದೇ ಒಬ್ಬವ್ಯಕ್ತಿಯ ಸಂಬಂಧದ ಆಕಾಂಕ್ಷೆಯು ಹುಟ್ಟುವುದಿಲ್ಲ. ಆದ್ದರಿಂದ ಸಸಂಬಂಧಿಯಾದ ಪದಗಳು ಉತ್ಥಿತ ಆಕಾಂಕ್ಷೆಯೆಂದೂ, ಸಸಂಬಂಧಿಯಲ್ಲದ ಪದಗಳು ಉತ್ಥಾಪ್ಯ-ಆಕಾಂಕ್ಷೆಯೆಂದೂ ಹೇಳ-ಬಹುದೆಂಬುದು ಮಣಿಕಾರನ ಅಭಿಪ್ರಾಯ.

## ಜ್ಞಾತವಾದ ಆಕಾಂಕ್ಷೆಯೇ ಶಾಬ್ದಬೋಧಕಾರಣ

**ತರ್ಕತಾಂಡವ – ಜ್ಞಾತಾ ಚೇಯಂ ಹೇತುಃ । ಅನ್ಯಥಾ ನಿರಾಕಾಂಕ್ಷೇ ತದ್ ಭ್ರಮಾತ್ ಅನ್ವಯಧೀರ್ನ ಸ್ಯಾತ್ ।**

ಅನುವಾದ– ಈ ಆಕಾಂಕ್ಷೆಯು ಜ್ಞಾತವಾಗಿಯೇ ಶಾಬ್ದಬೋಧಕ್ಕೆ ಕಾರಣವಾಗುತ್ತದೆಂದು ಹೇಳಬೇಕು. ಇಲ್ಲದಿದ್ದರೆ ನಿರಾಕಾಂಕ್ಷವಾದ ಪದದಲ್ಲಿ ಆಕಾಂಕ್ಷೆಯ ಭ್ರಮದಿಂದ ಶಾಬ್ದಬೋಧವು ಬಾರದಿರ-ಬೇಕಾದೀತು!

ವಿವರಣೆ - ಯೋಗ್ಯತೆಯು ಸತ್ತಾಮಾತ್ರದಿಂದ ಕಾರಣವಾಗುತ್ತದೆ. ಆದರೆ ಆಕಾಂಕ್ಷಾ ಹಾಗೂ ಸನ್ನಿಧಿಗಳು ಜ್ಞಾತವಾಗಿ ಕಾರಣವಾಗುತ್ತವೆ. 'ಘಟ' ಎಂಬ ಪದವು 'ಆನಯ' ಎಂಬ ಪದವಿಲ್ಲದೇ ಸ್ವಾರ್ಥಾನ್ವಯಬೋಧವನ್ನು ಹುಟ್ಟಿಸುವುದಿಲ್ಲ ಎಂಬ ಪರಿಜ್ಞಾನವು ಜ್ಞಾತೃವಾದ ವ್ಯಕ್ತಿಗೆ ಇರಬೇಕು ಎಂಬುದು ಇದರ ಅಭಿಪ್ರಾಯ.

ಹೀಗೊಪ್ಪದಿದ್ದರೆ, 'ಕುಂಡಮಜಾಜಿನಂ ದಶ ದಾಡಿಮಾನಿ ಷಡಪೂಪಾಃ' ಎಂಬ ನಿರಾಕಾಂಕ್ಷವಾದ ಸ್ಥಳದಲ್ಲಿ ಒಬ್ಬನಿಗೆ ಸಾಕಾಂಕ್ಷತ್ವದ ಭ್ರಮೆ ಬರುತ್ತದೆ. ಭ್ರಮೆಯಿಂದ ಎಲ್ಲಿ ಕಾರ್ಯವು ಹುಟ್ಟುತ್ತದೋ ಅಲ್ಲಿ ಅದರ ಜ್ಞಾನವೇ ಕಾರಣವಾಗಿರುತ್ತದೆಂಬುದನ್ನು ಎಲ್ಲರೂ ಒಪ್ಪಿದ್ದಾರೆ.

ಆದ್ದರಿಂದ ಆಕಾಂಕ್ಷೆಯ ಜ್ಞಾನವನ್ನು ಇಲ್ಲಿ ಕಾರಣವನ್ನಾಗಿ ಒಪ್ಪಲೇಬೇಕು. ಇಲ್ಲದಿದ್ದರೆ ಆ ಭ್ರಮೆಯಿಂದ ಆ ಶಾಬ್ದಬೋಧವೇ ಅವನಿಗೆ ಬಾರದಿರಬೇಕಾದೀತು. ಆದ್ದರಿಂದ ಜ್ಞಾತ-ವಾದ ಆಕಾಂಕ್ಷೆಯೇ ಶಾಬ್ದಬೋಧದ ಜನಕವೆಂದು ಒಪ್ಪಬೇಕು.

# ಯೋಗ್ಯತೆಯಂತೆ ಆಕಾಂಕ್ಷೆಯು ಸ್ವರೂಪಸತ್ತಾಗಿ ಕಾರಣವಲ್ಲ

**ನ್ಯಾಯದೀಪ – ಅನ್ಯಥೇತಿ । ಸ್ವರೂಪಸತ್ತ್ಯಾಃ ಹೇತುತ್ವೇ 'ಘಟಃ ಕರ್ಮತ್ವಮ್' ಇತ್ಯಾದೌ ನಿರಾಕಾಂಕ್ಷೇ ಸಾಕಾಂಕ್ಷತ್ವಭ್ರಮಾತ್ ಕದಾಚಿದನ್ವಯಧೀರ್ನ ಸ್ಯಾತ್ ಇತ್ಯರ್ಥಃ । ಯದ್ವಾ 'ಅಹೋ ವಿಮಲಮ್' ಇತ್ಯಾದಿವಾಕ್ಯೇ ನದ್ಯಾಃ ಕಚ್ಛೇನ ಆಕಾಂಕ್ಷಾಭ್ರಮಾದ್ ಅನ್ವಯಧೀರ್ನ ಸ್ಯಾದಿತ್ಯರ್ಥಃ ।**

ಅನುವಾದ– ಆಕಾಂಕ್ಷೆಯು ಸ್ವರೂಪಸತ್ತಾದ ಮಾತ್ರಕ್ಕೆ ಶಾಬ್ದಬೋಧವನ್ನು ಕುರಿತು ಕಾರಣವಾಗುವುದಲ್ಲಿ 'ಘಟಃ ಕರ್ಮತ್ವಂ' ಇತ್ಯಾದಿಯಾದ ಆಕಾಂಕ್ಷಾರಹಿತವಾದ ಸ್ಥಳಗಳಲ್ಲಿ ಅತಿಪ್ರಸಂಗ ಬರುತ್ತದೆ. ಏಕೆಂದರೆ ಒಬ್ಬನಿಗೆ ಈ ಸ್ಥಳದಲ್ಲಿ ಸಾಕಾಂಕ್ಷತ್ವದ ಭ್ರಮೆ ಉಂಟಾಗುತ್ತದೆ. ಇದರಿಂದ ಅವನಿಗೆ ಶಾಬ್ದಬೋಧ ಬರುವುದು ಅನುಭವಸಿದ್ಧವಾದ ವಿಚಾರ. ಆಕಾಂಕ್ಷೆಯು ಸ್ವರೂಪತಃ ಸತ್ತಾಗಿದ್ದರೆ ಮಾತ್ರ ಶಾಬ್ದಬೋಧಕ್ಕೆ ಕಾರಣವೆಂದು ಹೇಳುವುದಾದಲ್ಲಿ ಇಂತಹ ಸ್ಥಳದಲ್ಲಿ ಸ್ವರೂಪತಃ ಆಕಾಂಕ್ಷೆಯು ಇಲ್ಲವಾದ ಕಾರಣ ಶಾಬ್ದಬೋಧವು ಬಾರದಿರಬೇಕಾದೀತು ಎಂದಭಿಪ್ರಾಯ. ಅಥವಾ 'ಅಹೋ ವಿಮಲಂ ಜಲಂ ನದ್ಯಾಃ' ಇತ್ಯಾದಿ ವಾಕ್ಯದಲ್ಲಿ ನದೀಪದಕ್ಕೆ ಕಚ್ಛಪದದಲ್ಲಿ ಆಕಾಂಕ್ಷೆ ಇದೆ ಎಂಬ ಭ್ರಮೆಯು ಬಂದು ಶಾಬ್ದಬೋಧವು ಬಾರದಿರಬೇಕಾದೀತು.

ವಿವರಣೆ - ಯೋಗ್ಯತೆಯು ಸ್ವರೂಪತಃ ಸತ್ತಾಗಿದ್ದರೆ ಸಾಕು ಶಾಬ್ದಬೋಧಕ್ಕೆ ಕಾರಣವಾಗುತ್ತದೆ. ಆದರೆ ಆಕಾಂಕ್ಷೆಯು ಹಾಗಲ್ಲ. ಜ್ಞಾತವಾಗಿದ್ದರೆ ಮಾತ್ರ ಶಾಬ್ದಬೋಧಕ್ಕೆ ಕಾರಣವಾಗುತ್ತದೆ. ಹೀಗೊಪ್ಪದಿದ್ದರೆ ಭ್ರಮೆಯಿಂದ ಕಾರ್ಯವಾಗದಿರುವ ಪ್ರಸಂಗವುಂಟಾಗುತ್ತದೆ. ಎಲ್ಲಿ ಭ್ರಮೆಯಿಂದ ಕಾರ್ಯವುಂಟಾಗುತ್ತದೋ ಆ ಸ್ಥಳದಲ್ಲಿ ಜ್ಞಾನವೇ ಕಾರಣವೆಂದು ಎಲ್ಲರೂ ಒಪ್ಪಿರುವ ವಿಚಾರ. ರಜ್ಜುಸರ್ಪವನ್ನು ನೋಡಿ ಭಯಗೊಂಡರೆ ಅಂತಹ ಸ್ಥಳದಲ್ಲಿ ರಜ್ಜುಸರ್ಪಜ್ಞಾನವು ಭಯಕ್ಕೆ ಕಾರಣ. ಅದರಂತೆ ಇಲ್ಲಿಯೂ ಕೂಡ ಆಕಾಂಕ್ಷಾಭ್ರಮೆಯಿಂದ ಶಾಬ್ದಬೋಧ ಬಂದಾಗ ಆಕಾಂಕ್ಷೆಯು ಇಲ್ಲಿ ಕಾರಣವಾಗುವುದಿಲ್ಲ. ಆಕಾಂಕ್ಷೆಯ ಜ್ಞಾನವನ್ನೇ ಕಾರಣವೆಂದು ಹೇಳಬೇಕಾಗುತ್ತದೆ. ಇಲ್ಲವಾದರೆ ಶಾಬ್ದಬೋಧವನ್ನು ಕೂಡಿಸುವುದೇ ಕಠಿಣವಾಗುತ್ತದೆ.

# ಗೋಷ್ಠಿಯ ವಿಚಾರಗಳು

## ಯೋಗ್ಯತೆ ಹಾಗೂ ಆಕಾಂಕ್ಷೆಗೆ ವೈಲಕ್ಷಣ್ಯಸಮರ್ಥನೆ

ಮಣಿಕಾರನು 'ಅಭಿಧಾನ ಅಪರ್ಯವಸಾನಂ ಆಕಾಂಕ್ಷಾ' ಎಂಬುದಾಗಿ ಆಕಾಂಕ್ಷೆಯ ಲಕ್ಷಣವನ್ನು ಹೇಳುತ್ತಾನೆ. ಹೀಗೆ ಹೇಳಿದರೆ ಸ್ವರೂಪಯೋಗ್ಯತೆ ಮತ್ತು ಆಕಾಂಕ್ಷಾ ಎರಡನ್ನೂ ಒಂದೇ ಎಂಬುದಾಗಿ ಒಪ್ಪಿದಂತಾಗುತ್ತದೆ. ಸ್ವರೂಪಯೋಗ್ಯತೆ ಎಂದರೆ 'ಸಹಕಾರಿವಿರಹ–ಕಾರ್ಯಾಭಾವಃ' ಎಂದರ್ಥ. ಈಗ ಆಕಾಂಕ್ಷೆಯನ್ನು ಕೂಡ ಹಾಗೆಯೇ ಹೇಳಿದಂತಾಗುತ್ತದೆ. 'ಅಭಿಧಾನ ಅಪರ್ಯವಸಾನಂ' ಎಂಬಲ್ಲಿ 'ಅಪರ್ಯವಸಾನಂ' ಎಂದರೆ ಯಾವ ಶಬ್ದಕ್ಕೆ ಶಬ್ದಾಂತರರೂಪವಾದ ಸಹಕಾರಿಯು ಇಲ್ಲದೇ ಅನ್ವಯಾನುಭಾವಕತ್ವವು ಇರುವುದಿಲ್ಲವೋ ಅಥವಾ ಅನ್ವಯಾನುಭವಪ್ರಾಗಭಾವವು ಇರುತ್ತದೋ ಅದೇ ಅಪರ್ಯವಸಾನ ಎಂದೆನಿಸುತ್ತದೆ ಎಂದು ಮಣಿಕಾರನು ವ್ಯಾಖ್ಯಾನ ಮಾಡುತ್ತಾನೆ. ಇದರ ಅಭಿಪ್ರಾಯ ಸಹಕಾರಿ ಇಲ್ಲದೇ ಕಾರ್ಯವು ಹುಟ್ಟುವುದಿಲ್ಲ ಎಂದಾಯಿತು. ಆಗ ಆಕಾಂಕ್ಷೆ ಮತ್ತು ಸ್ವರೂಪಯೋಗ್ಯತೆ ಎರಡನ್ನೂ ಒಂದೇ ಎಂದು ಹೇಳಿದಂತಾಗುತ್ತದೆ.

ದೇವದತ್ತನನ್ನು ಕುರಿತು ಯಜ್ಞದತ್ತನು ಪ್ರಶ್ನಿಸುತ್ತಾನೆ. 'ಈ ಕೆಲಸವನ್ನು ಮಾಡಲು ನಿನಗೆ ಯಾರು ಸಹಕಾರಿ?' ಎಂದು. ಅದಕ್ಕೆ ದೇವದತ್ತನು ಯಾರು ಸಹಕಾರಿಯಾಗಿ ಇಲ್ಲದಿದ್ದಾಗ ನನ್ನಿಂದ ಕಾರ್ಯವನ್ನು ಮಾಡಲು ಸಾಧ್ಯವಾಗುವುದಿಲ್ಲವೋ ಅದೇ ನನ್ನ ಸಹಕಾರಿ' ಎಂದು ಉತ್ತರಿಸಿದರೆ ಹೇಗಾಗುತ್ತದೋ ಅದರಂತೆ ಮಣಿಕಾರನು ಹೇಳಿದಂತಾಗುತ್ತದೆ. ಯಾವ ಸಹಕಾರಿಯು ಇಲ್ಲದಿದ್ದಾಗ ಕಾರ್ಯವು ಹುಟ್ಟುವುದೇ ಇಲ್ಲವೋ ಅದೇ ಸ್ವರೂಪಯೋಗ್ಯತೆ ಎನಿಸುತ್ತದೆ ಹೊರತು ಅದನ್ನು ಸಹಕಾರಿಯೆಂದು ಯಾರೂ ಹೇಳುವುದಿಲ್ಲ. ಹಾಗೇನಾದರೂ ಹೇಳಿದರೆ ಆತ್ಮಾಶ್ರಯದೋಷ ಬರುತ್ತದೆ.

ಪ್ರಶ್ನೆ – ಶಾಬ್ದಬೋಧಕ್ಕೆ ಆಕಾಂಕ್ಷೆಯು ಬೇಕು. ಆಕಾಂಕ್ಷೆಗೆ ಶಾಬ್ದಬೋಧವು ಬೇಕು ಎಂದಾಗಿದ್ದಲ್ಲಿ ಆತ್ಮಾಶ್ರಯವನ್ನು ಅಥವಾ ಅನ್ಯೋನ್ಯಾಶ್ರಯದೋಷವನ್ನು ಹೇಳಬಹುದಿತ್ತು. ಆದರೆ ಆಕಾಂಕ್ಷೆಗೆ ಶಾಬ್ದಬೋಧದ ಅವಶ್ಯಕತೆ ಇಲ್ಲವಲ್ಲ.

ಉತ್ತರ – ಶಾಬ್ದಬೋಧವನ್ನು ಕುರಿತು ಶಬ್ದವು ಕಾರಣವಾಗಿದೆ. ಶಾಬ್ದಬೋಧವು ಕಾರ್ಯವಾಗಿದೆ. ಆಕಾಂಕ್ಷೆಯು ಸಹಕಾರಿಯಾಗಿದೆ. ಸಹಕಾರಿ ಎಂದರೇನು ಎಂದು ನಾವು

ಪ್ರಶ್ನಿಸಿದಾಗ ಯಾವ ಸಹಕಾರಿ ಇಲ್ಲದಿದ್ದಾಗ ಕಾರ್ಯ ಆಗುವುದೇ ಇಲ್ಲವೋ ಅದು ಸಹಕಾರಿ ಎಂದು ನೀವು ಉತ್ತರಿಸುತ್ತಿದ್ದೀರಿ. ಹೀಗೆ ಹೇಳಿದಾಗ ಅನ್ಯೋನ್ಯಾಶ್ರಯವು ಸ್ಪಷ್ಟವಾಗಿ ಕಾಣಿಸುತ್ತಿದೆ ಎಂಬುದಷ್ಟೇ ನಮ್ಮ ಅಭಿಪ್ರಾಯ.

ಪ್ರಶ್ನೆ – ಘಟಪದವು ಆನಯ ಪದದ ಜೊತೆ ಸಂಸರ್ಗವನ್ನು ಹೊಂದಿರುವಿಕೆಯು ಆಕಾಂಕ್ಷೆ ಎನಿಸುತ್ತದೆ. ಅದರಿಂದ (ಆಕಾಂಕ್ಷಾದಿಂದ) ಬರುವುದು ಶಾಬ್ದಬೋಧ, ಹೀಗೆ ಇವರೆಡಕ್ಕೆ ವ್ಯತ್ಯಾಸವು ಸ್ಪಷ್ಟವಾಗಿ ಕಾಣಿಸುತ್ತಿದೆಯಲ್ಲವೇ?

ಉತ್ತರ – ಒಂದು ಶಾಬ್ದಬೋಧಕ್ಕೆ ಎರಡು ಕಾರಣಗಳಿದ್ದಾಗ ಪರಸ್ಪರವಾಗಿ ಎರಡನ್ನೂ ಕಾರಣವೆಂದಾಗಲೀ ಸಹಕಾರಿಯೆಂದಾಗಲೀ ಹೇಳಬಹುದು. 'ಘಟಮಾನಯ' ಎಂಬಲ್ಲಿ ಘಟ ಎಂಬುದು ಕಾರಣವಾಗಿದೆ. ಘಟ ಹಾಗೂ ಆನಯನಗಳಿಗೆ ಇರುವ ಸಂಸರ್ಗವು ಶಾಬ್ದಬೋಧ ಎನಿಸಿದೆ. ಘಟಪದದಿಂದ ಉಭಯಾನ್ವಯಬೋಧ ಬರಲು ಆನಯನವು ಸಹಕಾರಿಯಾಗಿದೆ.

ಪ್ರಶ್ನೆ – ಘಟ ಹಾಗೂ ಆನಯನ ಈ ಎರಡೂ ಪದಗಳನ್ನು ಒಟ್ಟಿಗೆ ಸಹಕಾರಿ ಎಂದು ಹೇಳಲು ಹೇಗೆ ಸಾಧ್ಯ ?

ಉತ್ತರ – ಆಪೇಕ್ಷಿಕವಾಗಿ ಹೇಳಬಹುದು. ಘಟಕ್ಕೆ ದಂಡವೂ ಕಾರಣ, ಚಕ್ರವೂ ಕಾರಣ. ದಂಡವನ್ನು ಕಾರಣವೆಂದು ಹೇಳಿದಾಗ ಚಕ್ರವು ಸಹಕಾರಿಯಾಗುತ್ತದೆ. ಚಕ್ರವನ್ನು ಕಾರಣವೆಂದಾಗ ದಂಡವು ಸಹಕಾರಿಯಾಗುತ್ತದೆ. ಆದರೆ 'ಘಟಮಾನಯ' ಎಂಬಲ್ಲಿ ಆನಯನಾನ್ವಿತಘಟದ ಶಾಬ್ದಬೋಧವು ಬಂದಾಗ ಘಟವು ಕಾರಣವಾಗಿದೆ. ಆನಯನವು ಸಹಕಾರಿಯಾಗಿದೆ. ಅಥವಾ ಆನಯನವನ್ನು ಕಾರಣ ಎಂದು ಹೇಳಿದಾಗ ಘಟವು ಸಹಕಾರಿಯಾಗುತ್ತದೆ.

ಪ್ರಶ್ನೆ – ಸ್ವರೂಪಯೋಗ್ಯತೆಗೂ ಆಕಾಂಕ್ಷೆಗೂ ಏನು ವ್ಯತ್ಯಾಸ?

ಉತ್ತರ – ಸ್ವರೂಪಯೋಗ್ಯತೆಯು ಕಾರ್ಯ ಹುಟ್ಟಿದ ಅನಂತರವೂ ಕೂಡ ವಸ್ತುವಿನಲ್ಲಿ ಇರುತ್ತದೆ. ಆದರೆ ಆಕಾಂಕ್ಷೆಯು ಪ್ರಾಗಭಾವರೂಪವಾಗಿರುವುದರಿಂದ ಶಾಬ್ದಬೋಧವು ಹುಟ್ಟುವ ಮೊದಲು ಮಾತ್ರ ಇರುತ್ತದೆ.

ಪ್ರಶ್ನೆ – ಆಕಾಂಕ್ಷೆಯು ಸ್ವರೂಪಯೋಗ್ಯತೆಗಿಂತ ಭಿನ್ನವೆಂದು ಒಪ್ಪೋಣ.ಆದರೆ ಸಹಕಾರಿಯೆಂದು ಹೇಳಲು ಹೇಗೆ ಸಾಧ್ಯ?ಏಕೆಂದರೆ ಮತ್ತೊಂದು ಸಹಕಾರಿ ಇಲ್ಲದಿದ್ದಾಗ ಕಾರ್ಯವು ಹುಟ್ಟುವುದಿಲ್ಲವೆಂಬುದೇ ಆಕಾಂಕ್ಷೆ ಎಂದು ಹೇಳಿದರೆ ಇದೂ ಕೂಡ ಸಹಕಾರಿ ಎಂದು ಹೇಳಿದಂತಾಯಿತಲ್ಲವೇ?

ಉತ್ತರ – ಆಕಾಂಕ್ಷೆಯು ಕೇವಲ ಸಹಕಾರಿಯಲ್ಲ. ಸಹಕಾರ್ಯಂತರವಿರಹಪ್ರಯುಕ್ತ-ಕಾರ್ಯಾಭಾವವು ಆಕಾಂಕ್ಷೆ ಎನಿಸುತ್ತದೆ. ಅದರ ಜ್ಞಾನವು ಸಹಕಾರಿ ಎನಿಸುತ್ತದೆ. ಆದ್ದರಿಂದ ಸ್ವರೂಪಯೋಗ್ಯತೆ ಹಾಗೂ ಆಕಾಂಕ್ಷೆರೂಪವಾದ ಸಹಕಾರಿ ಇವುಗಳು ಪರಸ್ಪರಭಿನ್ನವಾಗಿವೆ ಎಂದು ಸಿದ್ಧವಾಯಿತು.

ಆಕಾಂಕ್ಷೆಯನ್ನೇ ಸಹಕಾರಿ ಎಂದು ಹೇಳಿದಾಗ ಆತ್ಮಾಶ್ರಯಾದಿ ದೋಷಗಳಿಗೆ ಅವಕಾಶವಿರುವುದರಿಂದ ಸಹಕಾರಿ ಜ್ಞಾನವನ್ನು ಆಕಾಂಕ್ಷೆಯೆಂದು ಹೇಳಬೇಕು. ಆಗ ಸಹಕಾರಿ ಬೇರೆ, ಆಕಾಂಕ್ಷೆಯೇ ಬೇರೆ, ಯೋಗ್ಯತೆಯೇ ಬೇರೆ ಎಂದು ಹೇಳಿದಂತಾಯಿತು.

## ಸಮಭಿವ್ಯಾಹೃತವಾದ ಪದಾರ್ಥಜಿಜ್ಞಾಸೆಯೇ ಆಕಾಂಕ್ಷಾ

**ತರ್ಕತಾಂಡವ– ನ ತು ಸಮಭಿವ್ಯಾಹೃತಪದಾರ್ಥಜಿಜ್ಞಾಸಾ ಆಕಾಂಕ್ಷಾ । ಜ್ಞಾನೇ ಇಷ್ಟಸಾಧನತ್ವಾಜ್ಞಾನೇನ ಜ್ಞಾನೇಚ್ಛಾರಹಿತಸ್ಯಾಪಿ ಪುಂಸಃ ಶಾಬ್ದಬೋಧದರ್ಶನಾತ್ ।**

ಅನುವಾದ– 'ಸಮಭಿವ್ಯಾಹೃತಪದಾರ್ಥಜಿಜ್ಞಾಸಾ ಆಕಾಂಕ್ಷಾ' ಸಮಭಿವ್ಯಾಹೃತವಾದ ಪದಾರ್ಥವನ್ನು ತಿಳಿಯಲು ಬಯಸುವುದೇ ಆಕಾಂಕ್ಷಾ ಎಂಬುದಾಗಿ ಕೆಲವರು ಹೇಳುತ್ತಾರೆ. ಇದು ತಪ್ಪು. ಏಕೆಂದರೆ, ಜ್ಞಾನದಲ್ಲಿ ಇಷ್ಟಸಾಧನತ್ವವು ತಿಳಿಯದಿರುವುದರಿಂದ ಜ್ಞಾನೇಚ್ಛೆಯಿಲ್ಲದವನಿಗೂ ಕೂಡ ಶಾಬ್ದಬೋಧವು ಬರುವುದು ಕಂಡಿದೆ.

ವಿವರಣೆ- ಮಣಿಕಾರನು ತತ್ತ್ವವಾದಿಗಳ ಆಕಾಂಕ್ಷೆಯ ಲಕ್ಷಣವನ್ನು ಇಲ್ಲಿ ನಿರಾಕರಣೆ ಮಾಡಲು ಪ್ರಯತ್ನಿಸುತ್ತಿದ್ದಾನೆ. 'ಸಮಭಿವ್ಯಾಹೃತಪದಾರ್ಥಜಿಜ್ಞಾಸಾ ಆಕಾಂಕ್ಷಾ' ಎಂದು ಮತ್ತೊಂದು ಲಕ್ಷಣ. ಇದರ ಅಭಿಪ್ರಾಯ ಹೀಗೆ – ಘಟಂ ಎಂಬ ಪದವನ್ನು ಕೇಳಿದಾಗ ಸಾಮಾನ್ಯಾನ್ವಿತವಾದ ಜಿಜ್ಞಾಸೆಯು ನಮಗೆ ಮೂಡುತ್ತದೆ. ಇದನ್ನೇ ಆಕಾಂಕ್ಷೆ ಎಂದು

ಹೇಳುತ್ತೇವೆ. ಆದರೆ, ಇದು ಅಯುಕ್ತವಾಗಿದೆಯೆಂದು ಮಣಿಕಾರನ ಅಭಿಪ್ರಾಯ. ಲಕ್ಷಣದ ಸಮನ್ವಯಕ್ರಮ ಹೀಗಿದೆ. ಕೇವಲ ಆಕಾಂಕ್ಷೆಯೇ ಶಾಬ್ದಬೋಧಕ್ಕೆ ಕಾರಣವಲ್ಲ. ಜ್ಞಾತವಾದ ಆಕಾಂಕ್ಷೆಯೇ ಶಾಬ್ದಬೋಧಕ್ಕೆ ಕಾರಣವಾಗಿದೆ. ಆಗ ಜಿಜ್ಞಾಸೆ ಮಾಡಿದ ಪದಾರ್ಥದ ಜ್ಞಾನವು ಶಾಬ್ದಬೋಧಕ್ಕೆ ಕಾರಣ ಎಂದು ಹೇಳಿದಂತಾಯಿತು. ಜಿಜ್ಞಾಸೆ-ಯೆಂದರೆ ಜ್ಞಾನದ ಇಚ್ಛೆ ಎಂದರ್ಥ. ಜ್ಞಾನವು ಕ್ರಿಯಾರೂಪವಾಗಿದೆ. ಆದ್ದರಿಂದ ಕ್ರಿಯಾ-ಜಿಜ್ಞಾಸೆಯ ಜ್ಞಾನವು ಶಾಬ್ದಬೋಧಕ್ಕೆ ಕಾರಣ ಎಂದು ಸಮುದಾಯಾಭಿಪ್ರಾಯ. ಆದರೆ ಜ್ಞಾನದಲ್ಲಿ ಇಚ್ಛೆಯು ಬರಬೇಕಾದರೆ ಜ್ಞಾನದಲ್ಲಿ ಮೊದಲು ಇಷ್ಟಸಾಧನಜ್ಞಾನ. 'ಇದಂ ಮದಿಷ್ಟಸಾಧನಂ' ಇದು ನನ್ನ ಇಷ್ಟಾರ್ಥಕ್ಕೆ ಕಾರಣವಾಗುತ್ತದೆ ಎಂಬ ಜ್ಞಾನವು ಇರಬೇಕು. ಆದರೆ ಒಬ್ಬ ಅಲಸನಿಗೆ (ಸೋಮಾರಿಗೆ) ಜ್ಞಾನದಲ್ಲಿ ಇಷ್ಟಸಾಧನತಾಜ್ಞಾನವೇ ಬಂದಿಲ್ಲ. ಆದ್ದರಿಂದ ಅವನಿಗೆ ಜ್ಞಾನದಲ್ಲಿ ಇಚ್ಛೆಯು ಕೂಡ ಬರುವುದಿಲ್ಲ. ಆದರೂ ಸಹ ಅಂತಹ ವ್ಯಕ್ತಿಗೆ ಶಾಬ್ದಬೋಧವು ಬಂದಿರುವುದು ಕಂಡಿದೆ. ಆದರೆ ನಿಮ್ಮ ಪ್ರಕಾರ ಅವನಿಗೆ ಶಾಬ್ದಬೋಧವು ಬಾರದಿರಬೇಕು ಎಂದು ಮಣಿಕಾರನ ಅಭಿಪ್ರಾಯ.

## ಮಣಿಕಾರನ ಲಕ್ಷಣಾಂತರಕ್ಕೆ ವ್ಯತಿರೇಕವ್ಯಭಿಚಾರ

**ನ್ಯಾಯದೀಪ – ಪಕ್ಷಾಂತರಂ ನಿರಾಹ – ನನ್ವಿತಿ ॥ ಯತ್ಪದೋಚ್ಚಾರಣಾನಂತರಂ ಯತ್ಪದಾರ್ಥಜ್ಞಾನೇಚ್ಛಾ ಭವತಿ ತದ್ವಾಚಿನಾ ಪದೇನ ತತ್ಪದಂ ಸಾಕಾಂಕ್ಷಮ್ ಇತಿ ನ ಭವತಿ । ಜ್ಞಾನೇಚ್ಛಾ ಹಿ ಜಿಜ್ಞಾಸಾ । ಸಾ ಚ ಜ್ಞಾನವಿಷಯಿಣೀ ಜ್ಞಾಯಮಾನಜ್ಞಾನಸ್ಯ ಇಷ್ಟಸಾಧನತ್ವಜ್ಞಾನೇ ಸತಿ ಭವತಿ ನಾನ್ಯಥಾ । ತಥಾ ಚ ಕದಾಚಿತ್ ಶಬ್ದಜ್ಞಾನೇ ತದಿಷ್ಟಸಾಧನತಾವಬೋಧಹೀನಸ್ಯಾಪಿ ಶಾಬ್ದಬೋಧದರ್ಶನೇನ ವ್ಯತಿರೇಕವ್ಯಭಿ-ಚಾರಾತ್ ನೇಯಮಾಕಾಂಕ್ಷಾ ಶಾಬ್ದಬೋಧಹೇತುರಿತ್ಯರ್ಥಃ ।**

ಅನುವಾದ– ಮಣಿಕಾರನ ಮತ್ತೊಂದು ಪಕ್ಷವನ್ನು ನ ತು ಇತ್ಯಾದಿಯಾಗಿ ನಿರಾಕರಿಸುತ್ತಿದ್ದಾರೆ. 'ಯಾವ ಪದವನ್ನು ಉಚ್ಚಾರಣೆ ಮಾಡಿದಾಗ ಯಾವ ಅರ್ಥದ ಜ್ಞಾನೇಚ್ಛೆ ಹುಟ್ಟುತ್ತದೋ ತದ್ವಾಚಕವಾದ ಪದದಿಂದ ಮತ್ತೊಂದು ಪದವು ಆಕಾಂಕ್ಷೆಯುಳ್ಳದ್ದಾಗುತ್ತದೆ! ಇದು ಮಣಿಕಾರ ಮಾಡಿದ ಲಕ್ಷಣಾಂತರ. ಆದರೆ ಜ್ಞಾನೇಚ್ಛೆ ಎಂದರೆ ಜಿಜ್ಞಾಸೆ ಹೊರತು ಬೇರೇನೂ ಅಲ್ಲ. ಆ ಜಿಜ್ಞಾಸೆಯಾದರೋ ಜ್ಞಾನ-ವಿಷಯಕವಾಗಿದೆ. ಹುಟ್ಟುವ ಜ್ಞಾನವು ಇಷ್ಟಸಾಧನವಾಗಿದ್ದರೆ ಜಿಜ್ಞಾಸೆ ಬರುತ್ತದೆ. ಇಲ್ಲದಿದ್ದರೆ

ಬರುವುದಿಲ್ಲ. ಕೆಲವೊಮ್ಮೆ ಇಷ್ಟಸಾಧನವಾಗದಿದ್ದರೂ ಶಾಬ್ದಬೋಧವಂತೂ ಬರುವ ಅನುಭವವಿದೆ. ಆದ್ದರಿಂದ ಆಕಾಂಕ್ಷಾ ಎಂಬ ಕಾರಣವಿಲ್ಲದಿದ್ದರೂ ಶಾಬ್ದಬೋಧ ಎಂಬ ಕಾರ್ಯ ಹುಟ್ಟುವುದರಿಂದ ವ್ಯತಿರೇಕವ್ಯಭಿಚಾರ ಬರುತ್ತದೆ. ಹೀಗೆ ಮಣಿಕಾರನ ಲಕ್ಷಣಾಂತರವೂ ಅಯುಕ್ತವಾಗಿದೆ. ಇಂಥ ಆಕಾಂಕ್ಷೆಯು ಶಾಬ್ದಬೋಧಕ್ಕೆ ಹೇತುವಾಗುವುದಿಲ್ಲ.

## ಈ ಪಕ್ಷದಲ್ಲಿ ಆಕಾಂಕ್ಷಾಜ್ಞಾನಕ್ಕೆ ಕಾರಣತ್ವವನ್ನೂ ಹೇಳಲಾಗದು.

**ತರ್ಕತಾಂಡವ– ಕಿಂಚ ಅಸ್ಮಿನ್ ಪಕ್ಷೇ ಆಕಾಂಕ್ಷಾಜ್ಞಾನಂ ಹೇತುರ್ನ ಸ್ಯಾತ್ । ಜಿಜ್ಞಾಸಾಯಾ ಅಜ್ಞಾನೇಽಪಿ ಶಾಬ್ದಬೋಧದರ್ಶನಾತ್ ಇತಿ ॥**

ಅನುವಾದ– ಮತ್ತೊಂದು ದೋಷ. ಈ ಪಕ್ಷದಲ್ಲಿ ಆಕಾಂಕ್ಷಾಜ್ಞಾನವು ಶಾಬ್ದಬೋಧಕ್ಕೆ ಕಾರಣವೇ ಆಗದು. ಏಕೆಂದರೆ ಜಿಜ್ಞಾಸೆಯನ್ನು ತಿಳಿಯದಿದ್ದರೂ ಕೂಡ ಶಾಬ್ದಬೋಧವು ಬರುವುದು ಕಂಡಿದೆ.

ವಿವರಣೆ - ತತ್ವಚಿಂತಾಮಣಿಯಲ್ಲಿ 'ಅಭಿಧಾನಾಪರ್ಯವಸಾನಂ ಆಕಾಂಕ್ಷಾ' ಎಂಬಲ್ಲಿಂದ ಪ್ರಾರಂಭಿಸಿ 'ಶಾಬ್ದಬೋಧದರ್ಶನಾತ್' ಎಂಬಲ್ಲಿಯ ತನಕ ಇರುವ ವಿಚಾರವನ್ನು ಯಥಾವತ್ತಾಗಿ ಗ್ರಂಥಕಾರರು ಅನುವಾದ ಮಾಡಿ ಸಮಾಪ್ತಿ ಮಾಡುತ್ತಿದ್ದಾರೆ. 'ಕಿಂಚ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ- ಕೇವಲ ಆಕಾಂಕ್ಷೆಯೇ ಶಾಬ್ದಬೋಧಕ್ಕೆ ಕಾರಣವಲ್ಲ. ಆಕಾಂಕ್ಷೆಯ ಜ್ಞಾನವೇ ಶಾಬ್ದಬೋಧಕ್ಕೆ ಕಾರಣವೆಂದು ಒಪ್ಪಬೇಕು. ಆದರೆ ಇವರ ಮತದಲ್ಲಿ ಇದು ಕೂಡುವುದಿಲ್ಲ. ಏಕೆಂದರೆ ಜಿಜ್ಞಾಸೆ ಬಂದರೆ ಸಾಕು ಶಾಬ್ದಬೋಧ ಬರುವುದು ಎಂಬುದು ಅನುಭವ ಸಿದ್ಧ. ಆದರೆ ಜಿಜ್ಞಾಸೆ ಬಂದಿದೆ ಎಂಬ ಜ್ಞಾನವಿಲ್ಲದಿದ್ದರೂ ಶಾಬ್ದಬೋಧ ಬರುವುದು ಕಂಡಿದೆ. ಆದರೆ ಚಿಂತಾಮಣಿಕಾರರೀತ್ಯಾ (ನಿಮ್ಮ ಪ್ರಕಾರ) ಜಿಜ್ಞಾಸಾಜ್ಞಾನವು ಬರದಿದ್ದರೆ ಮಾತ್ರ ಶಾಬ್ದಬೋಧ ಬರಬೇಕು. ಲೋಕದಲ್ಲಿ ವಿಪರೀತವಾಗಿ ಕಂಡಿದೆ.

## ಮಣಿಕಾರನ ಆಕಾಂಕ್ಷೆಯ ಲಕ್ಷಣಕ್ಕೆ ಅವ್ಯಾಪ್ತಿದೋಷ

**ತರ್ಕತಾಂಡವ– ತದಪಿ ನ । ಗೌಣಲಾಕ್ಷಣಿಕಯೋರವ್ಯಾಪ್ತೇಃ । ನ ಹಿ ತ್ವತ್‌ಪಕ್ಷೇ ತಯೋರಿತರವಿರಹಪ್ರಯುಕ್ತಮ್ ಅನನುಭಾವಕತ್ವಮ್ । ಕಿಂತು ಸ್ವತ ಏವ । ಕಿಂಚ**

**'ಘೋಷಪದಮೇವ ಗಂಗಾಪದೇನ ಸಾಕಾಂಕ್ಷಂ , ಗಂಗಾಪದಂ ತು ನ ಘೋಷಪದೇನ' ಇತಿ ಸಂಭವತಿ ॥**

ಅನುವಾದ– 'ಅಭಿಧಾನ ಅಪರ್ಯವಸಾನಂ ಆಕಾಂಕ್ಷಾ' ಎಂಬ ಮಣಿಕಾರನ ಆಕಾಂಕ್ಷೆಯ ಲಕ್ಷಣವು ಕೂಡ ಅಯುಕ್ತವಾಗಿದೆ. ಈ ಲಕ್ಷಣಕ್ಕೆ ಗೌಣಪ್ರಯೋಗ ಹಾಗೂ ಲಾಕ್ಷಣಿಕಪ್ರಯೋಗದಲ್ಲಿ ಆಕಾಂಕ್ಷೆಯ ಲಕ್ಷಣ ಬರುತ್ತಿಲ್ಲವಾದ್ದರಿಂದ ಅವ್ಯಾಪ್ತಿದೋಷ ಬರುತ್ತದೆ. ಗೌಣಪ್ರಯೋಗ ಹಾಗೂ ಲಾಕ್ಷಣಿಕಪ್ರಯೋಗದಲ್ಲಿ ಇತರಪದವಿರಹಪ್ರಯುಕ್ತವಾಗಿ ಶಾಬ್ದಬೋಧದ ಅನನುಭಾವಕತ್ವವನ್ನು ತಾರ್ಕಿಕರಾದ ನಿಮ್ಮ ಪಕ್ಷದಲ್ಲಿ ಕೂಡ ಒಪ್ಪಿರುವುದಿಲ್ಲ. ಹೊರತಾಗಿ ಸ್ವಾಭಾವಿಕವಾಗಿಯೇ ಅನನುಭಾವಕತ್ವವನ್ನು ಒಪ್ಪಿರುತ್ತೀರಿ.

ಕೇವಲ 'ಘೋಷ'ಪದವು ಮಾತ್ರವೇ ಗಂಗಾಪದದಿಂದ ಆಕಾಂಕ್ಷೆಯನ್ನು ಹೊಂದಿದೆ; ಗಂಗಾಪದವು ಘೋಷಪದದಿಂದ ಆಕಾಂಕ್ಷೆಯನ್ನು ಹೊಂದಿರುವುದಿಲ್ಲ ಎಂದೂ ಹೇಳಲು ಸಾಧ್ಯವಿಲ್ಲ.

> ವಿವರಣೆ - 'ಸಿಂಹಶ್ಚೈತ್ರಃ' ಎಂಬ ಗೌಣಪ್ರಯೋಗದಲ್ಲಿ 'ಗಂಗಾಯಾಂ ಘೋಷಃ' ಎಂಬ ಲಾಕ್ಷಣಿಕ ಪ್ರಯೋಗದಲ್ಲಿ ಇತರಪದವಿರಹಪ್ರಯುಕ್ತವಾಗಿ ಸಿಂಹ ಹಾಗೂ ಗಂಗಾ ಎಂಬ ಪದಗಳು ಸ್ವಾರ್ಥಾನ್ವಯಾನುಭವಜನಕವಲ್ಲವೆಂದು ತಾರ್ಕಿಕರು ಕೂಡ ಒಪ್ಪಿರುವುದಿಲ್ಲ. ಸ್ವಾಭಾವಿಕವಾಗಿಯೇ ಅವುಗಳಿಗೆ ಸ್ವಾರ್ಥಾನ್ವಯಾನನುಭಾವಕತ್ವವು ಇರುತ್ತದೆ.

## ಗೌಣಲಾಕ್ಷಣಿಕಪ್ರಯೋಗಗಳಲ್ಲಿ ಸಹಜವಾಗಿಯೇ ಅನನುಭಾವಕತ್ವವಿದೆ

**ನ್ಯಾಯದೀಪ– ಗೌಣೇತಿ ॥ 'ಸಿಂಹಶ್ಚೈತ್ರಃ, ಗಂಗಾಯಾಂ ಘೋಷಃ' ಇತ್ಯನಯೋರಿತ್ಯರ್ಥಃ । ತತ್ರ ಮಣಿಕೃನ್ಮತೇ ಸಿಂಹಗಂಗಾಪದಯೋರನನುಭಾವಕತ್ವಂ ವ್ಯನಕ್ತಿ – ನ ಹಿ ತ್ವತ್ಪಕ್ಷ ಇತಿ ॥**

ಅನುವಾದ – 'ಗೌಣಲಾಕ್ಷಣಿಕಯೋಃ' ಎಂಬ ಪದಕ್ಕೆ 'ಸಿಂಹಶ್ಚೈತ್ರಃ' ಎಂಬ ಗೌಣಪ್ರಯೋಗದಲ್ಲಿ 'ಗಂಗಾಯಾಂ ಘೋಷಃ' ಎಂಬ ಲಾಕ್ಷಣಿಕಪ್ರಯೋಗದಲ್ಲಿ ಎಂದರ್ಥ. ಮಣಿಕಾರನ ಮತದಲ್ಲಿ ಗೌಣ

ಹಾಗೂ ಲಾಕ್ಷಣಿಕಪ್ರಯೋಗಗಳಲ್ಲಿ 'ಸಿಂಹ ಹಾಗೂ ಗಂಗಾ'ಪದಗಳಿಗೆ ಅನನುಭಾವಕತ್ವವನ್ನು ಒಪ್ಪಿರುವುದನ್ನು 'ನಹಿ ತ್ವತ್ಪಕ್ಷೇ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

ವಿವರಣೆ – ಅಭಿಧಾನಾಪರ್ಯವಸಾನಮಾಕಾಂಕ್ಷಾ ಎಂಬುದಾಗಿ ಮಣಿಕಾರ ಹೇಳಿದ ಆಕಾಂಕ್ಷೆಯ ಲಕ್ಷಣಕ್ಕೆ ಗೌಣಪ್ರಯೋಗ ಹಾಗೂ ಲಾಕ್ಷಣಿಕಪ್ರಯೋಗಗಳಲ್ಲಿ ಅವ್ಯಾಪ್ತಿ-ದೋಷ ಬರುತ್ತದೆ. 'ಸಿಂಹಶ್ಚೈತ್ರಃ' ಎಂಬ ಗೌಣಪ್ರಯೋಗದಲ್ಲಿ ಸಿಂಹ ಎಂಬ ಪದಕ್ಕೆ ಚೈತ್ರಪದವಿಲ್ಲದೇ ಸ್ವಾರ್ಥಾನ್ವಯಾನುಭಾವಕತ್ವವು ಕೂಡುವುದಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಅದರಂತೆ 'ಗಂಗಾಯಾಂ ಘೋಷಃ' ಎಂಬಲ್ಲಿಯೂ ಗಂಗಾಪದಕ್ಕೆ ಘೋಷ-ಪದವಿಲ್ಲದ ಸ್ವಾರ್ಥಾನ್ವಯಾನುಭಾವಕತ್ವವು ಕೂಡುವುದಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಎರಡೂ ಸ್ಥಳಗಳಲ್ಲಿ ಸ್ವಾಭಾವಿಕವಾಗಿ ಸ್ವಾರ್ಥಾನ್ವಯಾನನುಭಾವಕತ್ವವು ಇರುತ್ತದೆ. ಈ ವಿಷಯವನ್ನು ಮಣಿಕಾರನೇ ಒಪ್ಪುತ್ತಾನೆ ಎಂಬುದಾಗಿ 'ನಹಿ' ಇತ್ಯಾದಿ ಮುಂದಿನ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

## ಗ್ರಂಥಕಾರರ ನಿಶಿತಮತಿತ್ವಕ್ಕೊಂದು ದೃಷ್ಟಾಂತ

**ನ್ಯಾಯದೀಪ – 'ಯಸ್ಯ ಯೇನ' ಇತ್ಯಾದಿನೋಕ್ತಾರ್ಥನಿಷ್ಕರ್ಷಾನುವಾದಃ – ಇತರವಿರಹೇತ್ಯಾದಿ ॥ ಸ್ವತ ಏವೇತಿ ॥ 'ಸ್ವರೂಪಾಯೋಗ್ಯತ್ವಪ್ರಯುಕ್ತತ್ವಾದೇವ' ಇತ್ಯರ್ಥಃ ।**

'ಯಸ್ಯ ಯೇನ' ಇತ್ಯಾದಿಯಾಗಿ ಹೇಳಿದ ಆಕಾಂಕ್ಷೆಯ ಲಕ್ಷಣದ ನಿಷ್ಕರ್ಷಾನುವಾದವನ್ನು ಗ್ರಂಥಕಾರರು 'ಇತರವಿರಹಪ್ರಯುಕ್ತಂ ಅನನುಭಾವಕತ್ವಂ' ಎಂಬುದಾಗಿ ಹೇಳಿದ್ದಾರೆ. 'ಸ್ವತಃ ಏವ' ಎಂಬ ಪದಕ್ಕೆ ಸ್ವರೂಪಸ್ವಯೋಗ್ಯಪ್ರಯುಕ್ತವಾಗಿ ಎಂದರ್ಥ.

ವಿವರಣೆ – ತತ್ವಚಿಂತಾಮಣಿಯಲ್ಲಿ ಅಭಿಧಾನಾರ್ಪಯವಸಾನಮಾಕಾಂಕ್ಷಾ ಎಂದು ಹೇಳಿ ಅಲ್ಲಿರುವ ಅಪರ್ಯವಸಾನಪದಕ್ಕೆ 'ಯಸ್ಯ ಯೇನ ವಿನಾ ಸ್ವಾರ್ಥಾನ್ವಯಾನನುಭಾವ-ಕತ್ವಂ ತಸ್ಯ ತದೇವ ಅಪರ್ಯವಸಾನಂ' ಎಂಬುದಾಗಿ ಹೇಳಿ ಪುನಃ 'ಅನ್ವಯಾನನು-ಭಾವಕತ್ವ' ಪದಕ್ಕೆ 'ಅನ್ವಯಾನುಭವಪ್ರಾಗಭಾವಃ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಇಷ್ಟನ್ನೂ ಸಂಗ್ರಹಿಸಿ ಗ್ರಂಥಕಾರರು ಶ್ರೋತೃಗಳ ಅನುಕೂಲಕ್ಕಾಗಿ ಇತರವಿರಹ-

ಪ್ರಯುಕ್ತಮ್ ಅನನುಭಾವಕತ್ವಂ' ಎಂಬುದಾಗಿ ಸಂಕ್ಷೇಪವಾಗಿ ಹೇಳಿದ್ದಾರೆ. ಇಷ್ಟೆಲ್ಲಾ ಲಕ್ಷಣದ ಒಟ್ಟು ಅಭಿಪ್ರಾಯ – ಮತ್ತೊಂದು ಪದದ ಸಹಕಾರವಿಲ್ಲದೇ ಪದವು ಅರ್ಥಾನ್ವಯಬೋಧಕವಾಗುವುದಿಲ್ಲ ಎಂದು.

ಲಾಕ್ಷಣಿಕಸ್ಥಳದಲ್ಲಿ ಹಾಗೂ ಗೌಣಸ್ಥಳದಲ್ಲಿ ಸ್ವಾರ್ಥಾನ್ವಯಬೋಧಕತ್ವವು ಪದಗಳಿಗೆ ಇರುವುದಿಲ್ಲ. ಇದಕ್ಕೆ ಕಾರಣ ಇತರವಿರಹಪ್ರಯುಕ್ತವಾಗಿ ಅಲ್ಲ ಹೊರತು ಸ್ವರೂಪತಃ ಯೋಗ್ಯತೆ ಇಲ್ಲದ ಪ್ರಯುಕ್ತವಾಗಿ. ಮಣ್ಣಿನಲ್ಲಿ ಬೀಜವನ್ನು ನೆಟ್ಟಾಗ ನೀರು ಮೊದಲಾದವು ಇಲ್ಲದಿದ್ದರೆ ಆ ಬೀಜವು ಅಂಕುರಜನಕವಾಗುವುದಿಲ್ಲ. ಅಂಕುರಜನಕವಾಗದಿರಲು ಇಲ್ಲಿ ಸಹಕಾರಿವಿರಹವೇ ಕಾರಣವಾಗುತ್ತದೆ. ಆದರೆ ಅದೇ ಮಣ್ಣಿನಲ್ಲಿ ಕಲ್ಲನ್ನು ನೆಟ್ಟಾಗ, ಅದು ಅಂಕುರಜನಕವಾಗದಿರಲು ಸಹಕಾರಿವಿರಹ ಕಾರಣವಲ್ಲ; ಹೊರತು ಅದಕ್ಕೆ ಅಂಕುರಜನಕತ್ವವಿರುವುದಿಲ್ಲ. ಪ್ರಕೃತದಲ್ಲಿಯೂ ಗೌಣ ಹಾಗೂ ಲಾಕ್ಷಣಿಕಸ್ಥಳದಲ್ಲಿ ಶಾಬ್ದಬೋಧಜನಕತ್ವವು ಇಲ್ಲದಿರಲು ಸಹಕಾರಿವಿರಹ ಎಂಬುದು ಕಾರಣವಲ್ಲ. ಸ್ವರೂಪಯೋಗ್ಯತೆ ಇಲ್ಲದಿರುವುದೇ ಕಾರಣವಾಗಿದೆ.

## ಶಾಬ್ದಬೋಧಬಾರದಿರಲು ಪದಾಂತರವಿರಹವು ಕಾರಣವಲ್ಲ

**ನ್ಯಾಯದೀಪ– 'ಘಟಃ ಕರ್ಮತ್ವಮ್' ಇತ್ಯಾದೌ ಯಥಾ ಸ್ವರೂಪಾಯೋಗ್ಯತ್ವಪ್ರಯುಕ್ತಮೇವ ಅನನುಭಾವಕತ್ವಮ್, ನ ಪದಾಂತರವಿರಹಪ್ರಯುಕ್ತಂ ತಥಾ' ಇತಿ ಭಾವಃ ॥**

ಅನುವಾದ– 'ಘಟಃ ಕರ್ಮತ್ವಂ' ಇವೇ ಮೊದಲಾದ ಸ್ಥಳದಲ್ಲಿ ಹೇಗೆ ಸ್ವರೂಪಯೋಗ್ಯತೆ ಇಲ್ಲದ ಕಾರಣದಿಂದಲೇ ಶಾಬ್ದಬೋಧಜನಕತ್ವವು ಇರುವುದಿಲ್ಲ; ಹೊರತು ಪದಾಂತರವಿರಹಪ್ರಯುಕ್ತವಾಗಿ ಅಲ್ಲವೋ ಅದರಂತೆ ಇಲ್ಲಿಯೂ ತಿಳಿಯಬೇಕು.

ವಿವರಣೆ - 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬ ಸ್ಥಳದಲ್ಲಿ 'ಕರ್ಮತ್ವಂ' ಎಂಬ ಪದವು ಇಲ್ಲದ ಕಾರಣ 'ಘಟಃ' ಎಂಬ ಪದವು ಸ್ವಾರ್ಥಾನ್ವಯಬೋಧಕವಾಗುತ್ತಿಲ್ಲ ಎಂದಲ್ಲ; ಹೊರತಾಗಿ ಈ ಸ್ಥಳದಲ್ಲಿ 'ಘಟಃ' ಎಂಬ ಪದಕ್ಕೆ ಶಾಬ್ದಬೋಧವನ್ನು ಹುಟ್ಟಿಸುವ ಸ್ವರೂಪಯೋಗ್ಯತೆಯೇ ಇರುವುದಿಲ್ಲ. ಇದರಂತೆ 'ಕುಂಡಮಜಾಜಿನಂ ದಶ

ದಾಡಿಮಾನಿ ಷಡಪೂಪಾಃ' ಎಂಬಲ್ಲಿಯೂ ಸಹ ಸ್ವರೂಪಯೋಗ್ಯತೆ ಇಲ್ಲದ ಕಾರಣದಿಂದಲೇ ಶಾಬ್ದಬೋಧಜನಕತ್ವವಿರುವುದಿಲ್ಲವೆಂಬುದು ಅನುಭವಸಿದ್ಧವಾಗಿದೆ. ಈ ದೃಷ್ಟಾಂತದಂತೆ ಪ್ರಕೃತದಲ್ಲಿಯೂ ಕೂಡ ಸಿಂಹಶ್ಶೈತ್ರಃ' ಎಂಬ ಸ್ಥಳದಲ್ಲಾಗಲೀ, 'ಗಂಗಾಯಾಂ ಘೋಷಃ' ಎಂಬ ಸ್ಥಳದಲ್ಲಾಗಲೀ ಸ್ವರೂಪಯೋಗ್ಯತೆ ಇಲ್ಲವೆಂಬ ಕಾರಣದಿಂದಾಗಿಯೇ ಶಾಬ್ದಬೋಧ ಜನಕತ್ವ ಇರುವುದಿಲ್ಲವೆಂದು ತಿಳಿಯಬೇಕು.

## ಅನನುಭಾವಕ-ಅಜ್ಞಾಪಕ ಪದಗಳಲ್ಲಿ ಯಾವುದು ಸೂಕ್ತ?

**ತರ್ಕತಾಂಡವ – ನ ಚಾನನುಭಾವಕಪದಸ್ಥಾನೇಽಜ್ಞಾಪಕಪದಪ್ರಕ್ಷೇಪೇ ಅತಿವ್ಯಾಪ್ತಿರ್ನ ಇತಿ ಯುಕ್ತಮ್ । ಇತರಪದವಿರಹೇಽಪಿ ಪದಸ್ಯ ಸ್ಮಾರಕತ್ವೇನಾಜ್ಞಾಪಕತ್ವಸ್ಯೇತರಪದವಿರಹಾಪ್ರಯುಕ್ತತ್ವಾತ್ ।**

ಪ್ರಶ್ನೆ– ಆಕಾಂಕ್ಷೆಯ ಲಕ್ಷಣದಲ್ಲಿರುವ 'ಅನನುಭಾವಕತ್ವಂ' ಎಂಬ ಪದವನ್ನು 'ಅಜ್ಞಾಪಕತ್ವ' ಎಂಬ ಪದವನ್ನು ಪ್ರಕ್ಷೇಪ ಮಾಡಿದಾಗ ಅವ್ಯಾಪ್ತಿದೋಷವು ಪರಿಹಾರವಾಗುತ್ತದಲ್ಲವೇ?

ಉತ್ತರ– ಇದು ಅಯುಕ್ತ. ಇತರ ಪದವಿಲ್ಲದಿದ್ದರೂ ಪದವು ಸ್ಮಾರಕವಾಗಿರುವ ಕಾರಣ ಅಜ್ಞಾಪಕತ್ವವು ಇತರಪದವಿರಹಪ್ರಯುಕ್ತವಾಗಿರುವುದಿಲ್ಲ.

## ಅವ್ಯಾಪ್ತಿಹೇಳಬಹುದೇ?

**ನ್ಯಾಯದೀಪ – ಅಲಕ್ಷ್ಯತ್ವಾತ್ ನಾವ್ಯಾಪ್ತಿರ್ದೋಷಾಯ' ಇತ್ಯಾಶಂಕ್ಯ, ನಿರಾಹ – ನ ಚೇತಿ ॥ 'ಅನುಭವವಿರೋಧಾತ್' ಇತಿ ಭಾವಃ । 'ಅಜ್ಞಾಪಕಪದ' ಇತಿ ವಿಚ್ಛೇದಃ ।**

ಅನುವಾದ– ಗೌಣಪ್ರಯೋಗ ಹಾಗೂ ಲಾಕ್ಷಣಿಕಪ್ರಯೋಗಗಳು ಆಕಾಂಕ್ಷೆಗೆ ಉಚಿತವಾದ ಸ್ಥಳಗಳೇ ಅಲ್ಲ. ಅಲಕ್ಷ್ಯಗಳಾಗಿವೆ. ಆದ್ದರಿಂದ ಅವ್ಯಾಪ್ತಿದೋಷವನ್ನು ಹೇಗೆ ಹೇಳುವಿರಿ ಎಂದು ಆಶಂಕಿಸಿ 'ನ ಚ' ಇತ್ಯಾದಿ ಗ್ರಂಥದಿಂದ ಪರಿಹಾರ ಮಾಡುತ್ತಿದ್ದಾರೆ. 'ನ ಚ' ಇತ್ಯಾದಿ ವಾಕ್ಯಕ್ಕೆ ಅನುಭವವಿರೋಧವಿರು-

ವುದರಿಂದ ಎಂದಭಿಪ್ರಾಯ. ಇಲ್ಲಿ ಅನನುಭಾವಕಪದಸ್ಥಾನೇ ಎಂಬಲ್ಲಿ 'ಅಜ್ಞಾಪಕ ಪದಪ್ರಕ್ಷೇಪೇ' ಎಂಬುದಾಗಿ ಪದಚ್ಛೇದ ಮಾಡಬೇಕು ಹೊರತು 'ಜ್ಞಾಪಕಪದಪ್ರಕ್ಷೇಪೇ' ಎಂದು ಪದಚ್ಛೇದ ಮಾಡ-ಬಾರದು.

## ಅನ್ವಯಾಜ್ಞಾಪಕತ್ವವನ್ನು ವಿವಕ್ಷಿಸುವುದು ತಪ್ಪು

**ನ್ಯಾಯದೀಪ– ನ ಚ ಪದಸ್ಯ ಪದಾರ್ಥಸ್ಮಾರಕತ್ವೇಽಪಿ ಅನ್ವಯಾಜ್ಞಾಪಕತ್ವ-ಮಸ್ತ್ಯೇವ । ತಸ್ಯೈವ ಲಕ್ಷಣೇಽಭಿಮತತ್ವಾತ್ ಇತಿ ಯುಕ್ತಮ್ । ವಕ್ಷ್ಯಮಾಣ-ದಿಶಾಽನ್ವಿತಾಭಿಧಾನವಾದೇಽನ್ವಿತಸ್ವಾರ್ಥಸ್ಮಾರಕತ್ವಮಸ್ಯಾಪಿ ಸತ್ವಾತ್ ।**

ಅನುವಾದ– ಪದವು ಪದಾರ್ಥಸ್ಮಾರಕವಾಗಿದ್ದರೂ ಕೂಡ ಅನ್ವಯ ಅಜ್ಞಾಪಕವಾಗಬಹುದು. ಅನ್ವಯ ಅಜ್ಞಾಪಕತ್ವವು ಇತರಪದಾಧೀನವಾಗಿದೆ. ಇತರಪದ ಇದ್ದರೆ ಮಾತ್ರ ಅನ್ವಯಜ್ಞಾಪಕವಾಗುತ್ತದೆ. ಇತರಪದ ಇಲ್ಲದಿದ್ದರೆ ಅನ್ವಯಜ್ಞಾಪಕವಾಗುವುದಿಲ್ಲ. ಅನ್ವಯಅಜ್ಞಾಪಕತ್ವವನ್ನೇ ಲಕ್ಷಣದಲ್ಲಿ ವಿವಕ್ಷಿಸ-ಲಾಗಿದೆ.

ಇದು ಅಯುಕ್ತವಾಗಿದೆ. ಮುಂದೆ ಹೇಳುವಂತೆ ಅನ್ವಿತಾಭಿಧಾನವಾದದಲ್ಲಿ ಪದಗಳಿಗೆ ಅನ್ವಿತ-ಸ್ವಾರ್ಥಸ್ಮಾರಕತ್ವವನ್ನು ಕೂಡ ಇದೆ ಎಂದು ತಿಳಿಯಬೇಕು.

> ವಿವರಣೆ– ಪ್ರತಿಯೊಂದು ಪದಗಳೂ ಕೂಡ ಅನ್ವಯವಿಶಿಷ್ಟವಾದ ಸ್ವಾರ್ಥದಲ್ಲಿಯೇ ಶಕ್ತವಾಗಿರುತ್ತವೆ. 'ಗಾಂ' ಎಂಬ ಪದವನ್ನು ಕೇಳಿದಾಗ ಆನಯನಾನ್ವಿತವಾದ ಗೋವಿನ ಸ್ಮರಣೆ ಬಾರದಿರಬಹುದು. ಆದರೆ ಯೋಗ್ಯೇತರಾನ್ವಿತವಾದ ಗೋ ಎಂಬ ಸಾಮಾನ್ಯತಃ ಕ್ರಿಯಾನ್ವಯದ ಬೋಧವು ಬರುತ್ತದೆ. ಆದ್ದರಿಂದ ಇತರ ಪದ ಇಲ್ಲದಿದ್ದರೂ ಕೇವಲ ಗೋಪದಕ್ಕೆ ಇತರಾನ್ವಿತವಾದ ಸ್ಮಾರಕತ್ವವು ಇದ್ದೇ ಇರುತ್ತದೆ. 'ವಕ್ಷ್ಯಮಾಣದಿಶಾ' ಎಂಬ ವಾಕ್ಯಕ್ಕೆ ಇಷ್ಟು ಅಭಿಪ್ರಾಯ ತಿಳಿಯಬೇಕು.

## ಆಕಾಂಕ್ಷಾಲಕ್ಷಣಕ್ಕೆ ಅಸಂಭವದೋಷ

**ನ್ಯಾಯದೀಪ– ಪರಮತೇಽಪಿ ಜಾತ್ಯಾಕೃತ್ಯನ್ವಿತವ್ಯಕ್ತೇರೇವ ಪದಾರ್ಥತ್ವೇನ ಜಾತ್ಯಾದ್ಯನ್ವಯಸ್ಮಾರಕತ್ವಾಚ್ಚೇತಿ ತಾತ್ಪರ್ಯಮ್ ।**

ಅನುವಾದ– ಪರಮತದಲ್ಲಿಯೂ ಕೂಡ ಜಾತ್ಯಾಕೃತ್ಯನ್ವಿತವಾದ ವ್ಯಕ್ತಿಯನ್ನೇ ಪದಾರ್ಥವೆಂದು ಒಪ್ಪಿರುವುದರಿಂದ ಜಾತ್ಯಾದ್ಯನ್ವಯಸ್ಮಾರಕತ್ವ ಇರುವುದರಿಂದ ಅಸಂಭವದೋಷವು ಬರುತ್ತದೆ ಎಂದು ಒಟ್ಟು ತಾತ್ಪರ್ಯ.

ವಿವರಣೆ– ಪರಮತದವರೂ ಕೂಡ ಫಲಶಕ್ತಿವಾದದಲ್ಲಿ ಜಾತ್ಯಾಕೃತಿವಿಶಿಷ್ಟವಾದ ವ್ಯಕ್ತಿಯನ್ನೇ ಸಕಲಪದಗಳೂ ಪ್ರತಿಪಾದನೆ ಮಾಡುತ್ತವೆ. ಆನಯಪದವಿಲ್ಲದಿದ್ದರೂ ಕೂಡ 'ಗೋ' ಎಂಬ ಪದವು ಜಾತಿಯಿಂದ ಹಾಗೂ ಆಕೃತಿಯಿಂದ ಅನ್ವಿತವಾದ ವ್ಯಕ್ತಿಯನ್ನೇ ಹೇಳುತ್ತದೆ. ಆದ್ದರಿಂದ ಜಾತ್ಯಾಕೃತ್ಯನ್ವಿತವಾದ ಅರ್ಥದಲ್ಲಿ ಸ್ಮಾರಕವಾಗುವುದರಿಂದ ಅವ್ಯಾಪ್ತಿದೋಷವು ಬರುತ್ತದೆ.

ಒಟ್ಟು ಅಭಿಪ್ರಾಯ – 'ಅನನುಭಾವಕ' ಎಂಬ ಸ್ಥಾನದಲ್ಲಿ 'ಅಜ್ಞಾಪಕ' ಎಂದು ಹೇಳಿದಾಗ ವಿಕಲ್ಪವನ್ನು ಮಾಡುತ್ತೇವೆ. ಇತರಪದವಿರಹಪ್ರಯುಕ್ತವಾಗಿ ಅಜ್ಞಾಪಕತ್ವವನ್ನು ಹೇಳು-ತ್ತೀರೋ ಅಥವಾ, ಇತರಪದವಿರಹಪ್ರಯುಕ್ತವಾಗಿ ಅನ್ವಯಅಜ್ಞಾಪಕತ್ವವನ್ನು ಹೇಳು-ತ್ತೀರೋ? ಮೊದಲನೆಯ ಪಕ್ಷವನ್ನು ಒಪ್ಪಿದರೆ ಸರ್ವಪದಗಳಲ್ಲಿಯು ಕೂಡ ಅಸಂಭವ ಬರುತ್ತದೆ. ಏಕೆಂದರೆ ಯಾವುದೇ ಒಂದು ಪದವೂ ಕೂಡ ಜ್ಞಾಪಕವೇ ಆಗಿರುತ್ತದೆ ಹೊರತು ಇತರಪದವಿರಹಪ್ರಯುಕ್ತವಾಗಿ ಅಜ್ಞಾಪಕವಾಗಿರುವುದಿಲ್ಲ. ಆದ್ದರಿಂದ ಅಸಂಭವ-ದೋಷವು ಬರುತ್ತದೆ.

ಇನ್ನು ಇತರಪದವಿರಹಪ್ರಯುಕ್ತವಾಗಿ ಅನ್ವಯಜ್ಞಾಪಕತ್ವವೆಂಬ ಎರಡನೆಯ ಪಕ್ಷವನ್ನು ಒಪ್ಪಿದರೆ ಆಗ ನಮ್ಮ ಮತದ ಪ್ರಕಾರ ಇತರಪದ ಇಲ್ಲದಿದ್ದರೂ ಕೂಡ ಯೋಗ್ಯೇ-ತರಾನ್ವಿತವಾದ ಅರ್ಥಾಭಿಧಾಯಕವೇ ಆಗಿರುತ್ತದೆ. ಮತ್ತು ನಿಮ್ಮ ಮತದ ಪ್ರಕಾರವೂ ಕೂಡ ಜಾತ್ಯಾಕೃತ್ಯನ್ವಿತವಾದ ವ್ಯಕ್ತಿಯಬೋಧ ಬಂದೇ ಬರುತ್ತದೆಯಾದ್ದರಿಂದ ಅಸಂಭವ-ದೋಷ ಬರುತ್ತಿಲ್ಲ.

## ಪ್ರಾಗಭಾವವು ಅಸಾಧಾರಣಕಾರಣವಲ್ಲ

**ತರ್ಕತಾಂಡವ – ಕಿಂಚ ಪ್ರಾಗಭಾವಸ್ಯ ಸರ್ವಕಾರ್ಯಹೇತುತ್ವೇನ ಶಾಬ್ದಾಸಾಧಾರಣ್ಯಂ ನ ಸ್ಯಾತ್ ।**

ಅನುವಾದ– ಮತ್ತು ಪ್ರಾಗಭಾವವು ಸಕಲಕಾರ್ಯಕ್ಕೆ ಸಾಧಾರಣಕಾರಣವಾಗಿರುವುದರಿಂದ ಶಾಬ್ದಬೋಧಕ್ಕೆ ಅಸಾಧಾರಣಕಾರಣವೆಂದು ಹೇಳಲು ನಿಮ್ಮಿಂದ ಸಾಧ್ಯವಿಲ್ಲ.

ವಿವರಣೆ - ಯಾವುದೇ ಕಾರ್ಯ ಹುಟ್ಟುವ ಮೊದಲು ಪ್ರಾಗಭಾವ ಇರಲೇಬೇಕು. ಅದರಂತೆ ಶಾಬ್ದಬೋಧವೆಂಬ ಕಾರ್ಯವು ಹುಟ್ಟುವ ಮೊದಲು ಕೂಡ ಪ್ರಾಗಭಾವವು ಇರಲೇಬೇಕು. ಆದ್ದರಿಂದ ಪ್ರಾಗಭಾವವು ಸಾಧಾರಣಕಾರಣವಾಗುತ್ತದೆಯೇ ಹೊರತು ಅಸಾಧಾರಣಕಾರಣವಾಗುವುದಿಲ್ಲ.

## ಪಕ್ಷಧರಮಿಶ್ರನಿಂದ ಅವ್ಯಾಪ್ತಿಪರಿಹಾರ.

**ನ್ಯಾಯದೀಪ – ನನು - ಯದುಪಸ್ಥಾಪಿತಸ್ಯಾರ್ಥಸ್ಯ ಯತ್ಪದವ್ಯತಿರೇಕೇಣ ನಾನುಭವವಿಷಯಂ ತಸ್ಯ ತತ್ಸಾಕಾಂಕ್ಷತ್ವಮಿತಿ ಲಕ್ಷಣಾರ್ಥಃ । ಏವಂ 'ತೀರಾದೇರನುಭವವಿಷಯತ್ವಂ ನ ಘೋಷಾದಿಪದಂ ವಿನೇತಿ ಲಾಕ್ಷಣಿಕಾದೇರಪಿ ಸಾಕಾಂಕ್ಷತ್ವಮ್' ಇತಿ ಪಕ್ಷಧರಾದ್ಯುಕ್ತೇರ್ನಾವ್ಯಾಪ್ತಿರಿತ್ಯತೋ ದೋಷಾಂತರಮಾಹ - ಕಿಂಚೇತಿ ॥**

ಅನುವಾದ– ಆಕಾಂಕ್ಷೆಯ ಲಕ್ಷಣದ ನಿಷ್ಕರ್ಷ ಹೀಗಿದೆ - ಯಾವ ಪದದಿಂದ ಉಪಸ್ಥಾಪಿತವಾದ ಅರ್ಥಕ್ಕೆ ಯಾವ ಪದವಿಲ್ಲದೇ ಅನುಭವವಿಷಯತ್ವವು ಕೂಡುವುದಿಲ್ಲವೋ ಅದಕ್ಕೆ ಆ ಪದದಿಂದ ಆಕಾಂಕ್ಷೆಯು ಇರುತ್ತದೆ ಎಂದು. ತೀರಾದಿಗಳಿಗೆ ಅನುಭವವಿಷಯತ್ವವು ಘೋಷಾದಿಪದಗಳಿಲ್ಲದೇ ಕೂಡುವುದಿಲ್ಲ. ಆದ್ದರಿಂದ ಲಾಕ್ಷಣಿಕ ಹಾಗೂ ಗೌಣಪ್ರಯೋಗಗಳಲ್ಲಿ ಆಕಾಂಕ್ಷೆಯ ಲಕ್ಷಣವು ಸಮನ್ವಯವಾಗುವುದರಿಂದ ಅವ್ಯಾಪ್ತಿ ಬರುವುದಿಲ್ಲ. ಹೀಗೆ ಪಕ್ಷಧರಮಿಶ್ರನು ಹೇಳುತ್ತಾನೆ. ಅದಕ್ಕಾಗಿ ಗ್ರಂಥಕಾರರು ಕಿಂಚ ಎಂಬಿತ್ಯಾದಿಯಾಗಿ ಮತ್ತೊಂದು ದೋಷವನ್ನು ಹೇಳುತ್ತಿದ್ದಾರೆ.

## ಪಕ್ಷಧರನ ನಿರಾಕರಣೆ

**ನ್ಯಾಯದೀಪ – ತಟ್ಟೀಕಾರಾರೈರುಕ್ತಮಾಶಂಕ್ಯ ನಿರಾಹ – ನ ಚ ಶಬ್ದೇತ್ಯಾದಿನಾ ॥ ಸಹಕಾರಿಕತ್ವೇನೇತಿ ॥ ಶಾಬ್ದಬೋಧಸಹಕಾರಿತ್ವೇನ' ಇತ್ಯರ್ಥಃ ।**

ಅನುವಾದ– ತತ್ವಚಿಂತಾಮಣಿಯ ಟೀಕಾಕಾರರಿಂದ ಹೇಳಿದ್ದನ್ನು ಆಕ್ಷೇಪ ಮಾಡಿ 'ನ ಚ ಶಾಬ್ದ-

ಜ್ಞಾನ' ಎಂಬಿತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. 'ಸಹಕಾರಿತ್ವೇನ' ಎಂಬುದಕ್ಕೆ ಶಾಬ್ದಬೋಧಕ್ಕೆ ಸಹಕಾರಿಯಾಗಿರುವುದರಿಂದ ಎಂದರ್ಥ.

ವಿವರಣೆ - ಯದುಪಸ್ಥಾಪಿತಸ್ಯ = ಗೋ ಎಂಬ ಪದದಿಂದ ಉಪಸ್ಥಿತವಾದ; ಅರ್ಥಸ್ಯ = ಗೋ ಎಂಬ ಅರ್ಥಕ್ಕೆ, ಯತ್ಪದವ್ಯತಿರೇಕೇಣ = ಆನಯ ಎಂಬ ಪದವಿಲ್ಲದೇ, ಅನುಭವವಿಷಯತ್ವಂ = ಅನ್ವಯಾನುಭವವಿಷಯತ್ವವು, ನ = ಇರುವುದಿಲ್ಲ. ತಸ್ಯ = ಗೋ ಎಂಬ ಪದಕ್ಕೆ, ತತ್ಸಾಕಾಂಕ್ಷತ್ವಂ = ಆನಯ ಪದದ ಜೊತೆಗೆ ಆಕಾಂಕ್ಷೆಯು ಇರುತ್ತದೆ. ಹೀಗೆ ಆಕಾಂಕ್ಷೆಯ ಲಕ್ಷಣವನ್ನು ಪರಿಷ್ಕಾರ ಮಾಡಿದಾಗ 'ಸಿಂಹಶ್ಚೈತ್ರಃ' ಎಂಬ ಗೌಣಪ್ರಯೋಗದಲ್ಲಿ ಹಾಗೂ 'ಗಂಗಾಯಾಂ ಘೋಷಃ' ಎಂಬ ಲಾಕ್ಷಣಿಕಪ್ರಯೋಗದಲ್ಲಿ ಅವ್ಯಾಪ್ತಿದೋಷವಿಲ್ಲ. ಯದುಪಸ್ಥಾಪಿತಸ್ಯ = ಸಿಂಹ ಎಂಬ ಪದದಿಂದ ಉಪಸ್ಥಾಪಿತವಾದ ಅರ್ಥಕ್ಕೆ ಯತ್ಪದವ್ಯತಿರೇಕೇಣ = ಚೈತ್ರ ಎಂಬ ಪದವಿಲ್ಲದೇ ಅನುಭವವಿಷಯತ್ವವು ಇರುವುದಿಲ್ಲ. ಆದ್ದರಿಂದ ಚೈತ್ರಪದದ ಆಕಾಂಕ್ಷೆಯು ಸಿಂಹಪದಕ್ಕೆ ಇರುತ್ತದೆ. ಇದರಂತೆ 'ಗಂಗಾಯಾಂ ಘೋಷಃ' ಎಂಬಲ್ಲಿಯೂ ಕೂಡ ತಿಳಿಯಬೇಕು. ಹೀಗೆ ಆಕಾಂಕ್ಷೆಯ ಲಕ್ಷಣ ಶಾಬ್ದಬೋಧ ಬರುವ ಎಲ್ಲಾ ಕಡೆಗಳಲ್ಲಿಯೂ ಸಮನ್ವಯವಾಗುವುದರಿಂದ ಅವ್ಯಾಪ್ತಿದೋಷಕ್ಕೆ ಮತ್ತು ಅಸಂಭವದೋಷಕ್ಕೆ ಅವಕಾಶವಿಲ್ಲ ಎಂಬುದು ಪಕ್ಷಧರಮಿಶ್ರನ ಅಭಿಪ್ರಾಯ.

## ಗೋಷ್ಠಿಯ ವಿಚಾರ

ಆಕ್ಷೇಪ – ಅನಾದಿಕಾಲದಿಂದಲೂ ಆಯಾ ಕಾರ್ಯಗಳ ಪ್ರಾಗಭಾವ ಎಂಬ ಕಾರಣ ಇದ್ದೇ ಇರುತ್ತದೆ. ಆದರೂ ಕೂಡ ಘಟಾದಿಕಾರ್ಯಗಳು ಏಕೆ ಹುಟ್ಟುವುದಿಲ್ಲ ಎಂದರೆ ಇತರ ಸಹಕಾರಿಗಳು ಇರುವುದಿಲ್ಲ. ಇತರ ಸಹಕಾರಿಗಳಿದ್ದರೆ ಘಟಾದಿಕಾರ್ಯಗಳು ಹುಟ್ಟುತ್ತವೆ. ಪ್ರಾಗಭಾವವನ್ನು ಕಾರಣವೆಂದು ಹೇಳದಿದ್ದರೆ ಘಟ ಹುಟ್ಟಿದ ಮೇಲೆ ಪುನಃ ಅದೇ ಘಟ ಹುಟ್ಟಲಿ ಎಂಬ ಆಕ್ಷೇಪಕ್ಕೆ ಅವಕಾಶವಿರುತ್ತದೆ. ಆ ಕಾರಣಕ್ಕಾಗಿ, ಆದ್ದರಿಂದ ಪ್ರಾಗಭಾವವು ಕಾರಣವೆಂದು ಹೇಳಿದರೆ ಏನು ತಪ್ಪು.

ಪರಿಹಾರ – ಪ್ರಾಗಭಾವವು ಕಾರಣವೇ ಅಲ್ಲ ಎಂಬುದು ನಮ್ಮ ಅಭಿಪ್ರಾಯವಲ್ಲ. ಆದರೆ ತಾರ್ಕಿಕರು ಅಸಾಧಾರಣಕಾರಣವೆನ್ನುತ್ತಿದ್ದಾರೆ. ಯುಕ್ತಿಯೆಂಬ ಪ್ರಮಾಣದಿಂದ ಪ್ರಾಗಭಾವಕ್ಕೆ

ಕಾರಣತ್ವವಷ್ಟೇ ಸಿದ್ಧವಾಗಿದೆ ಹೊರತು ಅಸಾಧಾರಣಕಾರಣತ್ವವು ಸಿದ್ಧವಾಗಿರುವುದಿಲ್ಲ ಎಂಬುದಷ್ಟೇ ಗ್ರಂಥಕಾರರು ಸಮರ್ಥನೆ ಮಾಡುತ್ತಿರುವ ವಿಷಯ.

## ಪ್ರಾಗಭಾವವು ಇತರಪದವಿರಹಪ್ರಯುಕ್ತವಾಗಿ ಕಾರಣವೆಂದು ಆಕ್ಷೇಪ

**ತರ್ಕತಾಂಡವ – ನ ಚ ಶಾಬ್ದಾನುಭವೇಽನ್ವಯಾನುಭವಪ್ರಾಗಭಾವಸ್ಯ ಇತರಪದ-ವಿರಹಪ್ರಯುಕ್ತತ್ವೇನ ಹೇತುತ್ವಾದಸಾಧಾರಣ್ಯಮ್, ಅತ ಏವ 'ಯೇನ ವಿನಾ' ಇತಿ ವಿಶೇಷಿತಮಿತಿ ವಾಚ್ಯಮ್ ।**

ಅನುವಾದ– ಶಾಬ್ದಬೋಧಕ್ಕೆ ಅನ್ವಯಾನುಭವದ ಪ್ರಾಗಭಾವವೇ ಕಾರಣವಾಗಿದೆ. ಆದರೆ ಇದು ಪ್ರಾಗಭಾವತ್ವೇನ ಕಾರಣವಾಗಿಲ್ಲ. ಇತರಪದವಿರಹಪ್ರಯುಕ್ತವಾಗಿ ಕಾರಣವಾಗಿದೆ. ಆದ್ದರಿಂದಲೇ ಅಸಾಧಾರಣ್ಯವೂ ಕೂಡ ಇದಕ್ಕೆ ಇರುತ್ತದೆ. ಇದನ್ನು ತಿಳಿಸುವುದಕ್ಕಾಗಿ 'ಯೇನ ವಿನಾ' ಎಂಬುದಾಗಿ ಲಕ್ಷಣದಲ್ಲಿ ವಿಶೇಷಣವನ್ನು ನೀಡಲಾಗಿದೆ.

ವಿವರಣೆ - ಪ್ರಾಗಭಾವವೇ ಆಕಾಂಕ್ಷೆಯೆಂದು ಹೇಳಿದರೆ ಪ್ರಾಗಭಾವವು ಸಕಲಕಾರ್ಯಕ್ಕೆ ಸಾಧಾರಣಕಾರಣವಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ, ನಾವು ಹೇಳುತ್ತಿರುವ ಅನ್ವಯಾನುಭವದ ಪ್ರಾಗಭಾವವು ಇತರಪದವಿರಹಪ್ರಯುಕ್ತವಾಗಿ ಕಾರಣವಾಗಿದೆ. ಪ್ರಾಗಭಾವತ್ವೇನ ಅನ್ವಯಾನುಭವವು ಕಾರಣವೆಂದು ಹೇಳಿದ್ದಲ್ಲಿ ಸಾಧಾರಣಕಾರಣವಾಗುತ್ತಿತ್ತು.

'ಗಾಂ' ಎಂಬ ಪದವನ್ನಷ್ಟೇ ಕೇಳಿದಾಗ ಇತರಪದವಿರಹಪ್ರಯುಕ್ತತ್ವೇನ ಶಾಬ್ದಾನ್ವಯಬೋಧದ ಪ್ರಾಗಭಾವವು ಕಾರಣವಾಗಿದೆ. 'ಆನಯ'ಪದವನ್ನು ಕೇಳಿದ ಮೇಲೆ ಇತರಪದವಿರಹಪ್ರಯುಕ್ತತ್ವವು ಇಲ್ಲದ ಕಾರಣ ಆಕಾಂಕ್ಷೆಯು ಶಾಂತವಾಗುತ್ತದೆ. ಘಟಪಟಾದಿಗಳ ವಿಷಯದಲ್ಲಿ ಘಟಪ್ರಾಗಭಾವವು ಇತರಪದವಿರಹಪ್ರಯುಕ್ತವಾಗಿ ಕಾರಣವಾಗಿರುವುದಲ್ಲ; ಪ್ರಾಗಭಾವತ್ವೇನ ಕಾರಣವಾಗಿದೆ. ಆದ್ದರಿಂದ ಘಟಪ್ರಾಗಭಾವವು ಪಟಕ್ಕೆ, ಪಟಪ್ರಾಗಭಾವವು ಘಟಕ್ಕೆ ಕಾರಣವಾದಂತೆ ಇಲ್ಲಿ ಶಾಬ್ದಬೋಧಪ್ರಾಗಭಾವವು ಕಾರಣವಾಗಿರುವುದಿಲ್ಲ ಎಂಬ ವೈಲಕ್ಷಣ್ಯವನ್ನು ಹೇಳುತ್ತಿದ್ದೇವೆ. ಆದ್ದರಿಂದ ಸಾಧಾರಣಕಾರಣವೆಂದು ಹೇಗೆ ಹೇಳುವಿರಿ?

## ಪ್ರಾಗಭಾವವು ಪ್ರಾಗಭಾವತ್ವದಿಂದಲೇ ಕಾರಣವಾಗುತ್ತದೆ

**ತರ್ಕತಾಂಡವ – ಇತರಪದಾನಾಂ ಸಹಕಾರಿತ್ವೇನ ಶಾಬ್ದಬೋಧಪ್ರಾಗಭಾವಸ್ಯ ತದ್ವಿರಹಪ್ರಯುಕ್ತತ್ವೇಽಪಿ ಘಟಾದಾವಿವ ಶಾಬ್ದಾನುಭವೇಽಪಿ ಪ್ರಾಗಭಾವತ್ವೇನೈವ ಹೇತುತ್ವಾತ್ ।**

ಅನುವಾದ– ಇದು ತಪ್ಪು; ಬೇರೆ ಪದಗಳು ಸಹಕಾರಿಯಾಗಿರುವುದರಿಂದ ಶಾಬ್ದಬೋಧ-ಪ್ರಾಗಭಾವವು ಇತರಪದವಿರಹಪ್ರಯುಕ್ತವೆಂದು ಒಪ್ಪೋಣ. ಆದರೆ ಘಟಾದಿಗಳಲ್ಲಿ ಘಟಾದಿ-ಪ್ರಾಗಭಾವವು ಪ್ರಾಗಭಾವತ್ವೇನ ಹೇಗೆ ಕಾರಣವಾಗುತ್ತದೋ ಅದರಂತೆ ಶಾಬ್ದಾನುಭವದಲ್ಲಿಯೂ ಕೂಡ ಶಾಬ್ದಬೋಧಪ್ರಾಗಭಾವವು ಶಾಬ್ದಬೋಧತ್ವೇನ ಕಾರಣವಾಗುತ್ತದೆಂಬ ದೋಷ ಪರಿಹಾರ-ವಾಗಲಿಲ್ಲ.

ವಿವರಣೆ - 'ಗಾಮಾನಯ' ಎಂಬಲ್ಲಿ 'ಆನಯ' ಎಂಬ ಪದವು ಸಹಕಾರಿಯಾಗಿದೆ. ಆದ್ದ-ರಿಂದ ಶಾಬ್ದಬೋಧದ ಪ್ರಾಗಭಾವವು ಕೂಡ ಇತರಪದವಿರಹಪ್ರಯುಕ್ತವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ, ಯದ್ಧರ್ಮವಿಶಿಷ್ಟವಾಗಿ ಪ್ರಾಗಭಾವವು ಕಾರಣ-ವಾಗಿದೆ ಎಂಬ ಪ್ರಶ್ನೆಗೆ ಪ್ರಾಗಭಾವತ್ವಧರ್ಮಪುರಸ್ಸರವಾಗಿ ಕಾರಣವಾಗಿದೆ ಎಂಬುದನ್ನು ಒಪ್ಪಲೇ ಬೇಕು. ಘಟಪ್ರಾಗಭಾವವು ದಂಡಚಕ್ರಾದಿವಿರಹಪ್ರಯುಕ್ತತ್ವ ಎಂಬ ಧರ್ಮಪುರ-ಸ್ಸರವಾಗಿ ಕಾರಣವಾಗಿರುವುದಲ್ಲ. ಪ್ರಾಗಭಾವತ್ವರೂಪದಿಂದಲೇ ಕಾರಣವಾಗಿದೆ. ಅದರಂತೆ ಇಲ್ಲಿಯೂ ಕೂಡ ಶಾಬ್ದಬೋಧಪ್ರಾಗಭಾವವು ಶಾಬ್ದಬೋಧಪ್ರಾಗಭಾವತ್ವ-ವೆಂಬ ಧರ್ಮಪುರಸ್ಸರವಾಗಿ ಕಾರಣವಾಗುತ್ತದೆ.

## ಘಟಪ್ರಾಗಭಾವವು ಇತರವಿರಹಪ್ರಯುಕ್ತವಾಗಿ ಕಾರಣವೆಂದು ಯಾರೂ ಹೇಳುವುದಿಲ್ಲ

**ತರ್ಕತಾಂಡವ – ಅನ್ಯಥಾ ಘಟಪ್ರಾಗಭಾವೋಽಪಿ ಘಟೇ ದಂಡಾದಿವಿರಹ-ಪ್ರಯುಕ್ತತ್ವೇನ ಹೇತುಃ ಸ್ಯಾತ್ ।**

ಅನುವಾದ– ಪ್ರಾಗಭಾವವು ಕೇವಲ ಪ್ರಾಗಭಾವತ್ವೇನ ಕಾರಣವೆಂದು ಹೇಳುವುದಾದಲ್ಲಿ ಘಟಪ್ರಾಗಭಾವವು ಕೂಡ ದಂಡಚಕ್ರಾದಿವಿರಹಪ್ರಯುಕ್ತವಾಗಿಯೇ ಘಟಕ್ಕೆ ಕಾರಣವೆಂದು ಹೇಳಬೇಕಾದೀತು. (ಆದರೆ ಯಾರೂ ಕೂಡ ಹಾಗೆ ಹೇಳುವುದಿಲ್ಲ. ಆದ್ದರಿಂದ ಘಟಪ್ರಾಗ-ಭಾವವು ಘಟಪ್ರಾಗಭಾವತ್ವೇನ ಕಾರಣವಾಗುವಂತೆ ಶಾಬ್ದಬೋಧದ ಪ್ರಾಗಭಾವವು ಕೂಡ ಶಾಬ್ದಬೋಧಪ್ರಾಗಭಾವತ್ವೇನ ಕಾರಣವೆಂದು ಹೇಳಬೇಕು).

## ಪ್ರಾಗಭಾವಜ್ಞಾನವು ಅಸಾಧಾರಣಕಾರಣವಲ್ಲ.

**ತರ್ಕತಾಂಡವ – ನ ಚ 'ಶಾಬ್ದಜ್ಞಾನೇ ಪ್ರಾಗಭಾವಜ್ಞಾನಂ ಕಾರಣಮ್' ಇತ್ಯಸಾಧಾ-ರಣಮ್ । ತಜ್ಜ್ಞಾನಸ್ಯ ಕಾರಣತ್ವೇ ಮಾನಾಭಾವಾತ್ ।**

ಜಿಜ್ಞಾಸೆ– ಶಾಬ್ದಬೋಧಕ್ಕೆ ಪ್ರಾಗಭಾವವು ಅಸಾಧಾರಣಕಾರಣವೆನ್ನುವುದಿಲ್ಲ. ಪ್ರಾಗಭಾವ-ಜ್ಞಾನವು ಅಸಾಧಾರಣಕಾರಣವೆಂದು ಹೇಳುತ್ತೇವೆ?

ಸಮಾಧಾನ– ಪ್ರಾಗಭಾವಜ್ಞಾನವು ಅಸಾಧಾರಣಕಾರಣವೆನ್ನಲು ಯಾವುದೇ ಪ್ರಮಾಣವಿಲ್ಲ.

ವಿವರಣೆ - ಶಾಬ್ದಬೋಧಕ್ಕೆ ಆಕಾಂಕ್ಷೆಯು ಕಾರಣವಲ್ಲ. ಆಕಾಂಕ್ಷೆಯ ಜ್ಞಾನವು ಕಾರಣ-ವೆಂದು ಈ ಹಿಂದೆ ಹೇಳಿದ್ದಾಗಿದೆ. ಜ್ಞಾನವೆಂದರೆ ಪ್ರಾಗಭಾವಜ್ಞಾನ ಎಂದರ್ಥ. ಆದ್ದರಿಂದ ಸರ್ವಸಾಧಾರಣವಾದ ಕಾರಣವನ್ನು ಹೇಳಿದರೆ ಈಗ ಹೇಳಿದ ದೋಷ ಬರುವುದಿಲ್ಲ. ಘಟಪಟಾದಿಗಳಿಗೆ ಆಯಾ ವಸ್ತುಗಳ ಪ್ರಾಗಭಾವ ಕಾರಣವಾಗಿದೆ; ಹೊರತು ಆಯಾ ವಸ್ತುಪ್ರಾಗಭಾವಜ್ಞಾನವು ಕಾರಣವಾಗಿರುವುದಿಲ್ಲ. ಆದರೆ ಶಾಬ್ದಬೋಧವನ್ನು ಕುರಿತು ಕೇವಲ ಪ್ರಾಗಭಾವವು ಕಾರಣವಲ್ಲ; ಶಾಬ್ದಬೋಧಪ್ರಾಗಭಾವದ ಜ್ಞಾನವು ಕಾರಣ-ವಾಗಿದೆ. ಆದ್ದರಿಂದ ಅಸಾಧಾರಣ್ಯವನ್ನು ಹೇಳಿದಂತಾಗುತ್ತದಲ್ಲವೇ? ಎಂಬುದು ಆಕ್ಷೇಪ.

ಪ್ರಾಗಭಾವಜ್ಞಾನವು ಕಾರಣವೆಂದು ಯಾರಿಗೂ ಅನುಭವವಿಲ್ಲ. ಶಾಬ್ದಬೋಧ ಬರುವ ಮೊದಲು 'ನನಗೆ ಶಾಬ್ದಬೋಧದ ಪ್ರಾಗಭಾವ ಇದೆ' ಎಂಬ ಅರಿವು ಬಂದು ಅನಂತರ ಶಾಬ್ದಬೋಧ ಬರುವುದು ಎಲ್ಲಿಯೂ ಕಂಡಿಲ್ಲ.

## ಪ್ರಾಗಭಾವಜ್ಞಾನಕ್ಕೆ ಕಾರಣತ್ವವು ಅನುಭವವಿರುದ್ಧ

**ತರ್ಕತಾಂಡವ – ನ ಹಿ ಶಾಬ್ದಬೋಧಾತ್ ಪ್ರಾಕ್ 'ಮಮಾತ್ರಾನ್ವಯೇ ಜ್ಞಾನಂ ನ' ಇತಿ ಜ್ಞಾನಮನುಭವಸಿದ್ಧಮ್ । ಅನ್ಯಥಾ ಘಟೇಽಪಿ ಪ್ರಾಗಭಾವೋ ಜ್ಞಾತೋ ಹೇತುಃ ಸ್ಯಾತ್ ॥**

ಶಾಬ್ದಬೋಧ ಬರುವ ಮೊದಲು ನನಗೆ ಸ್ವಾರ್ಥಾನ್ವಯದಲ್ಲಿ ಜ್ಞಾನವು ಇರುವುದಿಲ್ಲ ಎಂಬ ಜ್ಞಾನವು ಅನುಭವ ಸಿದ್ಧವಾಗಿಲ್ಲ. ಹೀಗೊಪ್ಪದಿದ್ದರೆ ಘಟದಲ್ಲಿಯೂ ಕೂಡ ಪ್ರಾಗಭಾವವು ಜ್ಞಾತವಾಗಿಯೇ ಕಾರಣವೆಂದಾಗಬೇಕಾದೀತು.

## ಪ್ರಾಗಭಾವಕ್ಕೆ ಅಸಾಧಾರಣ್ಯಶಂಕಾ

**ತರ್ಕತಾಂಡವ – ಅಥ ಪ್ರಾಗಭಾವಃ ಪ್ರಾಗಭಾವತ್ವೇನ ನಾಕಾಂಕ್ಷಾ, ಕಿಂತು ಪ್ರಾಗ-ಭಾವಾತ್ಯಂತಾಭಾವಸಾಧಾರಣ್ಯೇನ ಇತರವಿರಹಪ್ರಯುಕ್ತಾನ್ವಯಾನುಭವಾಭಾವತ್ವೇನ ಇತಿ ಅಸಾಧಾರಣ್ಯಮ್ ।**

**ಘಟಾದೌ ಪ್ರಾಗಭಾವತ್ವೇನೈವ ಹೇತುತ್ವಾತ್ । ಅತ ಏವ ಅನ್ವಯಬೋಧದಶಾಯಾಂ ನಾತಿವ್ಯಾಪ್ತಿಃ । ತದಾ ಪ್ರಾಗಭಾವಾತ್ಯಂತಾಭಾವಯೋರಭಾವಾತ್ ।**

ಅನುವಾದ– ಘಟಾದಿಗಳಲ್ಲಿ ಅಭಾವವು ಪ್ರಾಗಭಾವತ್ವೇನ ರೂಪೇಣೈವ ಹೇತುವಾಗಿದೆ. ಆದ್ದರಿಂದಲೇ ಅನ್ವಯಬೋಧಸಮಯದಲ್ಲಿ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಏಕೆಂದರೆ, ಆಗ ಪ್ರಾಗಭಾವ ಹಾಗೂ ಅತ್ಯಂತಾಭಾವಗಳು ಇರುವುದಿಲ್ಲ.

> ವಿವರಣೆ - ಅನ್ವಯಬೋಧಸಮಯದಲ್ಲಿ ಪ್ರಾಗಭಾವವು ಅಭಾವತ್ವೇನ ರೂಪೇಣ ಕಾರಣವಾಗುತ್ತದೆ. ಆದರೆ ಘಟಾದಿಗಳ ಉತ್ಪತ್ತಿಗೆ ಪ್ರಾಗಭಾವವು ಅಭಾವತ್ವೇನ ರೂಪೇಣ ಹೇತುವಲ್ಲ. ಹೊರತು ಪ್ರಾಗಭಾವತ್ವೇನೈವ ರೂಪೇಣ ಹೇತುವಾಗುತ್ತದೆ. ಒಂದು ವೇಳೆ ಅಭಾವತ್ವವನ್ನೇ ಇಲ್ಲಿಯೂ ಕೂಡ ಕಾರಣತಾವಚ್ಛೇದಕಧರ್ಮ ಎಂದು ವಿವಕ್ಷಿಸುವು-

ದಾದಲ್ಲಿ ಅತ್ಯಂತಾಭಾವವೂ ಕೂಡ ಘಟಕ್ಕೆ ಹೇತುವೆಂದಾಗಬೇಕಾದೀತು. ಆದ್ದರಿಂದ ಪ್ರಾಗಭಾವತ್ವವನ್ನೇ ಕಾರಣತಾವಚ್ಛೇದಕವೆಂದು ಇಲ್ಲಿ ಒಪ್ಪಬೇಕು.

ಶಾಬ್ದಬೋಧಕ್ಕೆ ಅಭಾವತ್ವೇನ ರೂಪೇಣ ಅಭಾವವು ಕಾರಣವೆಂದು ಹೇಳಬೇಕು. ಹೀಗೆ ಹೇಳಿದಾಗ ಪ್ರಧ್ವಂಸಾಭಾವದಲ್ಲಿ ಅತಿವ್ಯಾಪ್ತಿ ಬರುತ್ತದಲ್ಲವೇ? ಎಂಬ ಆಶಂಕೆಗೆ ಮುಂದೆ ಉತ್ತರಿಸಲಾಗುತ್ತದೆ. ಹೀಗೆ ಹೇಳಿದಾಗ ಶಾಬ್ದಬೋಧದ ಅತ್ಯಂತಾಭಾವವನ್ನೂ ಕೂಡ ಕಾರಣವೆಂದು ಹೇಳಿದಂತಾಗುತ್ತದೆ. ಇದನ್ನು ಒಪ್ಪಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಅತ ಏವ ಅನ್ವಯಬೋಧದಶಾಯಾಂ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಶಾಬ್ದಬೋಧ ಹುಟ್ಟುವ ಮೊದಲು ಅದರ ಪ್ರಾಗಭಾವವಿರುವುದು ಸಿದ್ಧವಾಗಿದೆ. ಶಾಬ್ದಬೋಧ ಇರುವ ಸಂದರ್ಭದಲ್ಲಿ ಅದರ ಪ್ರಾಗಭಾವವೂ ಇರುವುದಿಲ್ಲ. ಅದರ ಅತ್ಯಂತಾಭಾವವೂ ಕೂಡ ಇರುವುದಿಲ್ಲ. ಈಗ ನಾವು ಪ್ರಾಗಭಾವ ಹಾಗೂ ಅತ್ಯಂತಾಭಾವ ಎರಡನ್ನೂ ಕೂಡ ಶಾಬ್ದಬೋಧಕ್ಕೆ ಕಾರಣವೆಂದು ಒಪ್ಪಿರುವಾಗ ಶಾಬ್ದಬೋಧದ ಸಮಯದಲ್ಲಿ ಪುನಃ ಮತ್ತೊಂದು ಶಾಬ್ದಬೋಧ ಹುಟ್ಟಲಿ ಎಂಬ ಅತಿವ್ಯಾಪ್ತಿದೋಷವು ಬರುವುದಿಲ್ಲ. ಮತ್ತೊಂದು ಪದದಿಂದ ಸಮಭಿವ್ಯಾಹಾರವಾದ ಮೇಲೆ ಆಕಾಂಕ್ಷೆಯು ಶಾಂತವಾಗುವುದರಿಂದ ಪುನಃ ಆ ವಾಕ್ಯದಲ್ಲಿ ಆಕಾಂಕ್ಷೆಯು ಇರುವುದಿಲ್ಲ. ಆದ್ದರಿಂದ ಇತರಪದವಿರಹಪ್ರಯುಕ್ತವಾದ ಶಾಬ್ದಬೋಧದ ಅತ್ಯಂತಾಭಾವ ಹಾಗೂ ಪ್ರಾಗಭಾವ ಇವೆರಡರಲ್ಲಿ ಸಾಧಾರಣವಾದ ಶಾಬ್ದಬೋಧದ ಅಭಾವ ಇರುವುದನ್ನು ಆಕಾಂಕ್ಷೆ ಎಂದು ಹೇಳುತ್ತೇವೆ. ಘಟಕ್ಕೆ ಘಟದ ಪ್ರಾಗಭಾವವು ಘಟಪ್ರಾಗಭಾವತ್ವರೂಪೇಣ ಹೇತುವಾದಂತೆ ಶಾಬ್ದಬೋಧಕ್ಕೆ ಶಾಬ್ದಬೋಧದ ಪ್ರಾಗಭಾವವು ಪ್ರಾಗಭಾವತ್ವೇನ ರೂಪೇಣ ಹೇತುವಾಗುವುದಿಲ್ಲ. ಆದ್ದರಿಂದ ಶಾಬ್ದಬೋಧಕ್ಕೆ ಪ್ರಾಗಭಾವ ಹಾಗೂ ಅತ್ಯಂತಾಭಾವ ಎರಡನ್ನೂ ಕೂಡ ಕಾರಣವೆಂದು ಹೇಳಬೇಕು.

## ಮೂರು ಅಭಾವಗಳಲ್ಲಿ ಅಭಾವತ್ವವು ಸಾಧಾರಣವಾಗಿದೆ

**ನ್ಯಾಯದೀಪ– ಪ್ರಕಾರಾಂತರೇಣ ಶಬ್ದಾಸಾಧಾರಣ್ಯಂ ಸಂಸರ್ಗಾವಗಮಪ್ರಾಗಭಾವಸ್ಯ ಶಂಕತೇ – ಅಥೇತಿ ।। 'ಪ್ರಾಗಭಾವಾತ್ಯಂತಾಭಾವ' ಇತ್ಯುಪಲಕ್ಷಣಮ್ । 'ಧ್ವಂಸ' ಇತ್ಯಪಿ ಧ್ಯೇಯಮ್ ।**

ಅನುವಾದ– ಮೂರನೆಯ ಪ್ರಕಾರದಿಂದ ಶಾಬ್ದಬೋಧದ ಪ್ರಾಗಭಾವಕ್ಕೆ ಅಸಾಧಾರಣ್ಯವನ್ನು 'ಅಥ' ಇತ್ಯಾದಿವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಪ್ರಾಗಭಾವಾತ್ಯಂತಾಭಾವ ಎಂಬುದು ಉಪಲಕ್ಷಣ-ವಾಗಿದೆ. ಧ್ವಂಸವನ್ನು ಕೂಡ ವಿವಕ್ಷಿಸಬೇಕು.

ವಿವರಣೆ - ಶಬ್ದ ಅಸಾಧಾರಣ್ಯವನ್ನು ಸಮರ್ಥಿಸಲು ಈ ಹಿಂದೆ ಎರಡು ಪ್ರಕಾರಗಳನ್ನು ಹೇಳಿದರು. ಈಗ ಮೂರನೆಯ ಪ್ರಕಾರವನ್ನು ಹೇಳಿ ದೋಷವನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ ಮಣಿಗ್ರಂಥಕಾರರು. ಪ್ರಾಗಭಾವ, ಪ್ರಧ್ವಂಸಾಭಾವ ಹಾಗೂ ಅತ್ಯಂತಾ-ಭಾವ ಎಂಬ ಮೂರು ಅಭಾವಗಳಲ್ಲಿ ಸಾಧಾರಣವಾದ ಅಭಾವತ್ವವನ್ನು ಕಾರಣತಾವ-ಚ್ಛೇದಕವೆಂದು ವಿವಕ್ಷಿಸಬೇಕು ಎಂದಭಿಪ್ರಾಯ.

## ಇತರವಿರಹಪ್ರಯುಕ್ತಾನ್ವಯಾನುಭವಾಭಾವತ್ವವು ಹೇತುತಾವಚ್ಛೇದಕ

**ನ್ಯಾಯದೀಪ –ಅತ ಏವ ಇತರವಿರಹಪ್ರಯುಕ್ತಾನ್ವಯಾನುಭವಾಭಾವತ್ವೇನ' ಇತಿ ಹೇತುತಾವಚ್ಛೇದಕೋಕ್ತಿಃ । ಅನ್ಯಥಾ 'ಅನ್ವಯಾನುಭವಾನಾದ್ಯಭಾವತ್ವೇನ' ಇತ್ಯೇವ ಹೇತುತಾವಚ್ಛೇದಕಮುಕ್ತ್ವಾ, ಇತರವಿರಹಪ್ರಯುಕ್ತೇತಿ ನ ಬ್ರೂಯಾತ್ । ತಸ್ಯ ಧ್ವಂಸದಶಾಯಾಮತಿವ್ಯಾಪ್ತಿವಾರಕತ್ವಾತ್ । ಅನ್ವಯಾನುಭವಸಂಸರ್ಗಾ-ಭಾವತ್ವೇನ ಹೇತುವಿವಕ್ಷಾಯಾಮೇವ ಇತರವಿರಹಪ್ರಯುಕ್ತೇತಿ ಸಾರ್ಥಕ್ಯಾತ್ ।**

ಅನುವಾದ– ಪ್ರಧ್ವಂಸಾಭಾವವನ್ನು ವಿವಕ್ಷಿಸಬೇಕಾದ್ದರಿಂದಲೇ ಇತರವಿರಹಪ್ರಯುಕ್ತ ಅನ್ವಯಾನು-ಭವಾಭಾವತ್ವವನ್ನು ಕಾರಣತಾವಚ್ಛೇದಕವೆಂದು ಹೇಳಲಾಗಿದೆ.

ಇಲ್ಲದಿದ್ದರೆ 'ಅನ್ವಯಾನುಭವಾನಾದ್ಯಭಾವತ್ವ'ವನ್ನೇ ಕಾರಣತಾವಚ್ಛೇದಕವನ್ನಾಗಿ ವಿವಕ್ಷಿಸಿ 'ಇತರವಿರಹಪ್ರಯುಕ್ತ' ಎಂಬ ವಿಶೇಷಣವನ್ನು ಹೇಳುವ ಅವಶ್ಯಕತೆ ಇಲ್ಲ. 'ಇತರವಿರಹಪ್ರಯುಕ್ತ' ಎಂಬ ವಿಶೇಷಣವನ್ನು ಹೇಳಿರುವುದು ಧ್ವಂಸದಶೆಯಲ್ಲಿ ಅತಿವ್ಯಾಪ್ತಿಯನ್ನು ಪರಿಹಾರ ಮಾಡುವುದಕ್ಕಾಗಿ.

ಆದ್ದರಿಂದ ಅನ್ವಯಾನುಭವಸಂಸರ್ಗಾಭಾವತ್ವವೆಂಬ ಕಾರಣತಾವಚ್ಛೇದಕವನ್ನು ವಿವಕ್ಷಿಸಿದಾಗಲೇ ಇತರವಿರಹಪ್ರಯುಕ್ತ ಎಂಬ ವಿಶೇಷಣವು ಸಾರ್ಥಕವಾಗುತ್ತದೆ.

## ಇತರಪದವಿರಹಪ್ರಯುಕ್ತ ಎಂಬುದರ ಕೃತ್ಯಚಿಂತನೆ

**ನ್ಯಾಯದೀಪ– ಧ್ವಂಸಸ್ಯಾಹೇತುತ್ವಾನ್ನ ತತ್ಸಾಧಾರಣ್ಯಂ ಚೇತ್, ಅತ್ಯಂತಾಭಾವಸಾಧಾರಣ್ಯಮಪಿ ನ ಸ್ಯಾತ್ । ಅತ ಏವ 'ನಾಪ್ಯನ್ವಯಬೋಧಧ್ವಂಸದಶಾಯಾಮ್' ಇತ್ಯಾದಿ ವಕ್ಷ್ಯತೀತಿ ಧ್ಯೇಯಮ್ ।**

ಅನುವಾದ– ಧ್ವಂಸವು ಶಾಬ್ದಬೋಧಕ್ಕೆ ಕಾರಣವಾಗಿರುವುದು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಪ್ರಧ್ವಂಸಾಭಾವಸಾಧಾರಣವಾದ ಅಭಾವವನ್ನು ಏಕೆ ವಿವಕ್ಷಿಸುತ್ತೀರಿ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಅತ್ಯಂತಾಭಾವಸಾಧಾರಣವಾದ ಅಭಾವತ್ವವನ್ನು ವಿವಕ್ಷಿಸುವುದೂ ಸಹ ತಪ್ಪಾಗುತ್ತದೆ. ಏಕೆಂದರೆ ಅತ್ಯಂತಾಭಾವವು ಶಾಬ್ದಬೋಧಕ್ಕೆ ಕಾರಣವಾಗಿರುವುದು ಕೂಡ ಎಲ್ಲಿಯೂ ಕಂಡಿಲ್ಲ. ಆದ್ದರಿಂದಲೇ 'ನಾಪಿ ಅನ್ವಯಬೋಧಧ್ವಂಸದಶಾಯಾಂ' ಇತ್ಯಾದಿಯಾಗಿ ಮುಂದೆ ಗ್ರಂಥಕಾರರು ಹೇಳುವವರಿದ್ದಾರೆ. ಇಷ್ಟು ಮಣಿಕಾರನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಯಬೇಕು.

## ಅಥವಾ ಅನ್ವಯಾನುಭವಾಭಾವತ್ವವೇ ಹೇತುತಾವಚ್ಛೇದಕ

**ನ್ಯಾಯದೀಪ– ಯದ್ವಾ 'ಉಭಯಸಾಧಾರಣ್ಯಮೇವ ಅಸ್ತು , ಅನ್ವಯಾನುಭವಾಭಾವತ್ವೇನೈವ ಹೇತುತಾ ಧ್ವಂಸೇತಿಪ್ರಸಕ್ತಾ' ಇತಿ, ತದ್ವಾರಣಾಯ 'ಇತರ' ಇತ್ಯಾದಿವಿಶೇಷಣೋಕ್ತಿಃ । ಘಟಾದೌ ತು ನೈವಮಿತ್ಯಾಹ – ಘಟಾದಾವಿತಿ ॥**

ಅನುವಾದ– ಅಥವಾ ಮತ್ತೊಂದು ಸಮಾಧಾನ ಹೀಗಿದೆ – ಅತ್ಯಂತಾಭಾವ ಹಾಗೂ ಪ್ರಾಗಭಾವಗಳಲ್ಲಿ ಸಾಧಾರಣವಾದ ಅನ್ವಯಾನುಭವಾಭಾವತ್ವವೇ ಹೇತುತಾವಚ್ಛೇದಕವಾಗಿದೆ. ಪ್ರಧ್ವಂಸಾಭಾವದಲ್ಲಿಯೂ ಈ ಹೇತುತಾವಚ್ಛೇದಕವು ಅನುಗತವಾಗಿದೆಯೆಂದು ಹೇಳುವ ಆವಶ್ಯಕತೆ ಇರುವುದಿಲ್ಲ.

ಹಾಗಾದರೆ ಪ್ರಧ್ವಂಸಾಭಾವದಲ್ಲಿ ಅತಿವ್ಯಾಪ್ತಿ ಬರುತ್ತದಲ್ಲವೇ? ಎಂದರೆ ಅದನ್ನು 'ಇತರಪದವಿರಹಪ್ರಯುಕ್ತ' ಎಂಬ ವಿಶೇಷಣದಿಂದಲೇ ಪರಿಹರಿಸಬಹುದು. ಘಟಾದಿಗಳಲ್ಲಿ ಹೀಗೆ ಹೇಳಲು ಸಾಧ್ಯವಿಲ್ಲದ ಕಾರಣ ಪ್ರಾಗಭಾವತ್ವವನ್ನೇ ಕಾರಣತಾವಚ್ಛೇದಕವೆಂದು ಒಪ್ಪಿ ಪ್ರಾಗಭಾವವನ್ನು ಕಾರಣವೆಂದು ಹೇಳಬೇಕು ಎಂಬುದನ್ನು 'ಘಟಾದೌ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

## ಘಟಾದಿಗಳಲ್ಲಿ ಪ್ರಾಗಭಾವತ್ವವೇ ಹೇತುತಾವಚ್ಛೇದಕ

**ನ್ಯಾಯದೀಪ – 'ತತ್ಪ್ರಾಗಭಾವಸ್ಯ' ಇತಿ ಯೋಜ್ಯಮ್ । 'ಅತ ಏವ' ಇತ್ಯುಕ್ತಂ ವ್ಯನಕ್ತಿ – ತದೇತಿ ॥**

ಅನುವಾದ– 'ಘಟಾದೌ' ಎಂಬಲ್ಲಿ 'ತತ್ಪ್ರಾಗಭಾವಸ್ಯ' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು. ಘಟಾದಿಗಳ ವಿಷಯದಲ್ಲಿ ಘಟಾದಿಗಳ ಪ್ರಾಗಭಾವಕ್ಕೆ ಘಟಾದಿಗಳ ಪ್ರಾಗಭಾವತ್ವವು ಕಾರಣತಾವಚ್ಛೇದಕವಾಗಿದೆಯೆಂದು ಅಭಿಪ್ರಾಯ. 'ಅತ ಏವ' ಎಂಬ ವಾಕ್ಯದಿಂದ ಹೇಳಿದ್ದನ್ನೇ 'ತದಾ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

## ಅನ್ವಯಬೋಧಧ್ವಂಸದೆಶೆಯಲ್ಲಿ ಅತಿವ್ಯಾಪ್ತಿ ಇಲ್ಲ

**ತರ್ಕತಾಂಡವ – ನಾಪ್ಯನ್ವಯಬೋಧಧ್ವಂಸದಶಾಯಾಮ್ । ತದಾ ಧ್ವಂಸಸ್ಯ ಸತ್ವೇಽಪಿ ತಸ್ಯ ಇತರವಿರಹಾಪ್ರಯುಕ್ತತ್ವಾತ್ ಇತಿ ಚೇನ್ನ ।**

ಅನುವಾದ– ಅನ್ವಯಬೋಧಧ್ವಂಸದಶೆಯಲ್ಲಿಯೂ ಸಹ ಅನ್ವಯಾನುಭವದ ಅಭಾವ ಇರುವುದರಿಂದ ಅತಿವ್ಯಾಪ್ತಿದೋಷವೆಂದು ಆಶಂಕಿಸಬಾರದು. ಆಗ ಧ್ವಂಸವಿದ್ದರೂ ಕೂಡ ಅದು ಇತರಪದವಿರಹಪ್ರಯುಕ್ತವಾಗಿರುವ ಧ್ವಂಸವಲ್ಲವಾದ್ದರಿಂದ ಅತಿವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಇಷ್ಟು ಮಣಿಕಾರನ ವಾದ. ಇದು ಸರಿಯಲ್ಲ.

ವಿವರಣೆ - ಶಾಬ್ದಬೋಧ ಬಂದ ಮೇಲೆ ಅದರ ಧ್ವಂಸವಾದ ಕ್ಷಣದಲ್ಲಿ ಪ್ರಧ್ವಂಸಾಭಾವವು ಕೂಡ ಅಭಾವವಾಗಿರುವುದರಿಂದ ಅನ್ವಯಾನುಭವಾಭಾವತ್ವವೆಂಬ ಕಾರಣತಾವ- ಚ್ಛೇದಕವು ಬರುತ್ತದಲ್ಲವೇ ಎಂಬ ಆಕ್ಷೇಪಕ್ಕೂ ಕೂಡ ಈಗ ಅವಕಾಶವಿಲ್ಲ. ಏಕೆಂದರೆ, ಶಾಬ್ದಬೋಧ ಧ್ವಂಸದಶೆಯಲ್ಲಿ ಪ್ರಧ್ವಂಸಾಭಾವವಿರಬಹುದು. ಆದರೆ ಅದು ಇತರಪದವಿರಹಪ್ರಯುಕ್ತವಾದ ಪ್ರಧ್ವಂಸವಲ್ಲ. ಆದ್ದರಿಂದ ಅತಿವ್ಯಾಪ್ತಿ-ದೋಷವಿಲ್ಲ.

**ನ್ಯಾಯದೀಪ – ಧ್ವಂಸದಶಾಯಾಮಿತಿ ॥ 'ಅತಿವ್ಯಾಪ್ತಿಃ' ಇತ್ಯನುಷಂಗಃ ।**

ಅನುವಾದ– 'ಧ್ವಂಸದಶಾಯಾಂ' ಎಂಬ ಪದದ ನಂತರ 'ಅತಿವ್ಯಾಪ್ತಿ' ಎಂಬ ಪದವನ್ನು ಅನುಷಂಗ ಮಾಡಿಕೊಳ್ಳಬೇಕು. ಆದ್ದರಿಂದ ಅನ್ವಯಬೋಧಧ್ವಂಸದಶೆಯಲ್ಲಿ ಅತಿವ್ಯಾಪ್ತಿ ಬರುವುದಿಲ್ಲ ಎಂಬರ್ಥ-ವನ್ನು ಹೇಳಿದಂತಾಗುತ್ತದೆ.

## ಗೋಷ್ಠಿಯ ವಿಚಾರಗಳು

1) ಶಾಬ್ದಬೋಧಕ್ಕೆ ಪ್ರಾಗಭಾವವು ಪ್ರಾಗಭಾವತ್ವವೆಂಬ ಧರ್ಮಪುರಸ್ಸರವಾಗಿ ಕಾರಣವಲ್ಲ. ಅಭಾವತ್ವ ಎಂಬ ಧರ್ಮಪುರಸ್ಸರವಾಗಿ ಕಾರಣವೆಂದು ಹೇಳಲಾಗಿದೆ. ಆದರೆ ಘಟವೆಂಬ ಕಾರ್ಯಕ್ಕೆ ಪ್ರಾಗಭಾಗವತ್ವೇನೈವ ರೂಪೇಣ ಕಾರಣವೆಂದು ಹೇಳಲಾಗಿದೆ. ಹೀಗೆ ವ್ಯತ್ಯಾಸ ಮಾಡಲು ಏನುಕಾರಣ? ಶಾಬ್ದಬೋಧಕ್ಕೆ ಪ್ರಾಗಭಾವವು ಅಭಾವತ್ವಾವಚ್ಛೇದೇನ ಕಾರಣವಾಗುವುದಾದರೆ ಘಟಕ್ಕೂ ಕೂಡ ಪ್ರಾಗಭಾವವು ಅಭಾವತ್ವಾವಚ್ಛೇದೇನೈವ ಕಾರಣವಾಗಲಿ. ಈ ವ್ಯತ್ಯಾಸ ಮಾಡಲು ಏನು ಕಾರಣ?

★ ಶಾಬ್ದಬೋಧಕ್ಕೆ ಪ್ರಾಗಭಾವ, ಅತ್ಯಂತಾಭಾವ ಹಾಗೂ ಪ್ರಧ್ವಂಸಾಭಾವಗಳನ್ನು ಕಾರಣವೆಂದು ವಿವಕ್ಷಿಸುವುದಾದರೆ ಅತ್ಯಂತಾಭಾವದಲ್ಲಿ ಇತರಪದವಿರಹಪ್ರಯುಕ್ತತ್ವವನ್ನು ಹೇಗೆ ಹೇಳುತ್ತಾರೆ? ಹೇಗೆ ಪ್ರಧ್ವಂಸಾಭಾವವು ಇತರಪದವಿರಹಪ್ರಯುಕ್ತವಾಗಿಲ್ಲವೋ ಅದರಂತೆ ಅತ್ಯಂತಾಭಾವವೂ ಕೂಡ ಇತರಪದವಿರಹಪ್ರಯುಕ್ತವಾಗಿರಲು ಸಾಧ್ಯವಿಲ್ಲ.

★ 'ಘಟಃ ಕರ್ಮತ್ವಂ, ಆನಯನಂ ಕೃತಿಃ' ಎಂಬಲ್ಲಿ ಅತಿವ್ಯಾಪ್ತಿದೋಷವನ್ನು ಪರಹರಿಸಲು ಇತರಪದವಿರಹಪ್ರಯುಕ್ತತ್ವವನ್ನು ಹೇಳಿದ್ದಾರೆ. ಈಗ ಧ್ವಂಸದಲ್ಲಿ ಇತರಪದವಿರಹಪ್ರಯುಕ್ತತ್ವ ಇಲ್ಲವೆಂದು ತಿಳಿಸುವುದಕ್ಕಾಗಿ ಈ ವಿಶೇಷಣವನ್ನು ನೀಡಲಾಗಿದೆಯೆಂದು ಹೇಳುತ್ತಿದ್ದಾರೆ. ಹೀಗೆ ವ್ಯತ್ಯಾಸ ಮಾಡಲು ಏನು ಕಾರಣ?

ಈ ಎಲ್ಲ ಪ್ರಶ್ನೆಗಳಿಗೆ ತಾರ್ಕಿಕರು ಸಮಂಜಸವಾಗಿ ಉತ್ತರವನ್ನು ನೀಡಬೇಕಾಗುತ್ತದೆ. ಉತ್ತರವಿಲ್ಲದ ಕಾರಣ ಅವರ ಆಕಾಂಕ್ಷೆಯ ಲಕ್ಷಣವೇ ಸ್ಥಾಪಿತವಾಗುವುದಿಲ್ಲ.

## ಸಾಧಾರಣ್ಯವನ್ನು ಹೇಗೆ ಹೇಳುತ್ತೀರಿ?

**ತರ್ಕತಾಂಡವ– ಅತ್ಯಂತಾಭಾವಸಾಧಾರಣೇನ ರೂಪೇಣ ಹೇತುತ್ವೇ ಸ್ವಾತ್ಯಂತಾ-ಭಾವಸ್ಯ ಸ್ವಂ ಪ್ರತಿ ಅಹೇತುತ್ವಾತ್ ।**

ಅನುವಾದ– ಮಣಿಕಾರನು ಮಾಡಿದ ಆಕಾಂಕ್ಷೆಯ ಪರಿಷ್ಕಾರ ಅಸಾಧುವಾಗಿದೆ. ಅದು ಹೀಗೆ - ಅತ್ಯಂತಾಭಾವಸಾಧಾರಣವಾಗಿ ಅಭಾವತ್ವವನ್ನು ಹೇತುವನ್ನಾಗಿ ಮಾಡಿದರೆ ತನಗೆ ಸ್ವಾತ್ಯಂತಾಭಾವವು ಕಾರಣವೆಂದು ಹೇಳುವುದು ಕೂಡುವುದಿಲ್ಲ.

ವಿವರಣೆ - ಶಾಬ್ದಬೋಧ ಅನುಭವಾಭಾವವು ಅಭಾವತ್ವೇನ ರೂಪೇಣ ಕಾರಣವಾಗಿದೆ. ಆ ಅಭಾವತ್ವವು ಪ್ರಾಗಭಾವ ಹಾಗೂ ಅತ್ಯಂತಾಭಾವಗಳಲ್ಲಿ ಸಾಧಾರಣವಾದ ಧರ್ಮ-ವಾಗಿದೆ ಎಂಬುದಾಗಿ ನೀವು ಹೇಳಿದಿರಿ. ಇದು ಅಯುಕ್ತವಾಗುತ್ತದೆ. ಏಕೆಂದರೆ, ಅಭಾವತ್ವವು ಅತ್ಯಂತಾಭಾವದಲ್ಲಿ ಸಾಧಾರಣವಾದ ಧರ್ಮವೆಂದು ಹೇಳಿದರೆ ಶಾಬ್ದಬೋಧದ ಅತ್ಯಂತಾಭಾವವು ಶಾಬ್ದಬೋಧಕ್ಕೆ ಕಾರಣ ಎಂದು ಹೇಳಿದಂತಾಯಿತು. 'ಮೇ ಮಾತಾ ವಂಧ್ಯಾ' ಎಂಬ ವಾಕ್ಯವು ಸ್ವವ್ಯಾಹತಿಯಿಂದ ದುಷ್ಟವಾಗಿದೆ.

ಮತ್ತು 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬಲ್ಲಿ ಅತ್ಯಂತಾಭಾವವು ಇತರಪದ-ವಿರಹಪ್ರಯುಕ್ತವಾಗಿರುವುದರಿಂದ ಯುಕ್ತವಾಗುತ್ತದೆಂದು ಹೇಳಲು ಕೂಡ ಸಾಧ್ಯವೇ ಇಲ್ಲ. ಏಕೆಂದರೆ ಈ ಹಿಂದೆ ಸ್ವರೂಪಯೋಗ್ಯತಾಭಾವಪ್ರಯುಕ್ತವಾಗಿಯೇ ಅತ್ಯಂತಾ-ಭಾವವನ್ನು ಹೇಳಬೇಕೆಂದು ಸಮರ್ಥಿಸಿದ್ದಾಗಿದೆ. ಆದ್ದರಿಂದ ಅಭಾವವು ಇತರಪದ-ವಿರಹಪ್ರಯುಕ್ತವಾಗಿದೆಯೆಂದು ಹೇಳುವುದು ಮತ್ತು ಅತ್ಯಂತಾಭಾವ ಸಾಧಾರಣ-ವಾಗಿದೆಯೆಂದು ಹೇಳುವುದು ವ್ಯಾಹತವಾಗುತ್ತದೆ.

ಕಾರಣತಾವಚ್ಛೇದಕ ಎಲ್ಲಿರುತ್ತದೋ ಅದೆಲ್ಲವೂ ಕಾರಣವೇ ಆಗುತ್ತದೆಂಬುದು ಎಲ್ಲರೂ ಒಪ್ಪಿರುವ ನಿಯಮ. ಈಗ ಕಾರಣತಾವಚ್ಛೇದಕವಾದ ಅಭಾವವು ಪ್ರಾಗಭಾವದಲ್ಲಿ ಹಾಗೂ ಅತ್ಯಂತಾಭಾವದಲ್ಲಿದೆಯೆಂದು ಸಾಧಾರಣ್ಯವನ್ನು ಹೇಳುತ್ತಿರುವಿರಿ. ಆಗ ಪ್ರಾಗ-ಭಾವದಂತೆ ಅತ್ಯಂತಾಭಾವವು ಕೂಡ ಕಾರಣವೆಂದಾಯಿತು. ಅತ್ಯಂತಾಭಾವಪ್ರತಿ-ಯೋಗಿಯು ತ್ರಿಕಾಲದಲ್ಲಿಯೂ ಅಸತ್ ಆಗಿರುವಾಗ ಅಂತಹ ಪ್ರತಿಯೋಗಿಗೆ ಅತ್ಯಂತಾ-ಭಾವವು ಕಾರಣವೆಂದು ಹೇಳುವುದು ತಪ್ಪಾಗುತ್ತದೆ.

ಮತ್ತು ಪ್ರಧ್ವಂಸಾಭಾವವು ಪ್ರತಿಯೋಗಿಗೆ ಕಾರಣವಲ್ಲವೆಂದು ಹೇಳುತ್ತೀರಿ. ಅದರಂತೆ ಅತ್ಯಂತಾಭಾವವು ಕೂಡ ಪ್ರತಿಯೋಗಿಗೆ ಕಾರಣವಲ್ಲವೆಂದು ಹೇಳಲೇಬೇಕು. ಮತ್ತು ಧ್ವಂಸವು ಇತರಪದವಿರಹಪ್ರಯುಕ್ತವಲ್ಲವೆಂದು ಹೇಳುತ್ತೀರಿ. ಅದರಂತೆ ಅತ್ಯಂತಾ-ಭಾವವೂ ಕೂಡ ಇತರಪದವಿರಹಪ್ರಯುಕ್ತವಲ್ಲವೆಂದು ಒಪ್ಪಲೇಬೇಕು. ಪ್ರಧ್ವಂಸಾಭಾವ

ಹಾಗೂ ಅತ್ಯಂತಾಭಾವಗಳು ಸಮಾನವಾಗಿರುವಾಗ ಇವೆರಡರಲ್ಲಿಯೇ ವೈಲಕ್ಷಣ್ಯವನ್ನು ಹೇಳುವುದು ಅಯುಕ್ತವಾಗುತ್ತದೆ.

## ಅತ್ಯಂತಾಭಾವಸಾಧಾರಣವಾದ ಅಭಾವವು ಹೇಗೆ ಹೇತು?

**ನ್ಯಾಯದೀಪ – ಅತ್ಯಂತಾಭಾವಸಾಧಾರಣ್ಯೇನ ಹೇತುತ್ವಂ ಕಿಂ ಸ್ವಾತ್ಯಂತಾಭಾವಸಾಧಾರಣ್ಯೇನ ವಿವಕ್ಷಿತಮ್, ಉತ ಶಾಬ್ದಾನುಭವಾಂತರಾತ್ಯಂತಾಭಾವಸಾಧಾರಣ್ಯೇನ ಇತಿ । ಆದ್ಯ ಆಹ – ಸ್ವಾತ್ಯಂತಾಭಾವಸ್ಯೇತಿ ॥**

ಅನುವಾದ– ಅಭಾವವು ಅತ್ಯಂತಾಭಾವಸಾಧಾರಣವಾಗಿ ಶಾಬ್ದಬೋಧಕ್ಕೆ ಕಾರಣವಾಗುತ್ತದೆಂದು ಹೇಳಿದಿರಿ. ನಿಮ್ಮ ಅಭಿಪ್ರಾಯವೇನು? ಸ್ವಾತ್ಯಂತಾಭಾವಸಾಧಾರಣ್ಯೇನ ಅಭಾವವು ಹೇತುವಾಗುತ್ತದೆಂದು ವಿವಕ್ಷಿಸುತ್ತೀರೋ ಅಥವಾ ಮತ್ತೊಂದು ಶಾಬ್ದಬೋಧಅನುಭಾವದ ಅತ್ಯಂತಾಭಾವಸಾಧಾರಣವಾಗಿ ಹೇತುವಾಗುತ್ತದೆಂದು ವಿವಕ್ಷಿಸುತ್ತೀರೋ. ಮೊದಲನೆಯ ಪಕ್ಷದಲ್ಲಿ ದೋಷವನ್ನು 'ಸ್ವಾತ್ಯಂತಾಭಾವಸ್ಯ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

## ಒಂದರ ಅಭಾವವು ಮತ್ತೊಂದಕ್ಕೆ ಹೇಗೆ ಕಾರಣವಾಗುತ್ತದೆ?

**ತರ್ಕತಾಂಡವ – ಶಾಬ್ದಾನುಭವಾಂತರಾಭಾವಃ ಶಾಬ್ದಾನುಭಾವಂ ಪ್ರತಿ, ತ್ವನ್ಮತೇऽನುಮಿತ್ಯಂತರಾಭಾವೋऽನುಮಿತಂ ಪ್ರತೀವ ಪ್ರತಿಬಂಧಕಾಭಾವತಯಾ ಹೇತುಃ ಸ್ಯಾತ್ ।**

ಅನುವಾದ– ಮತ್ತೊಂದು ಶಾಬ್ದಬೋಧದ ಅತ್ಯಂತಾಭಾವವು ಈ ಶಾಬ್ದಬೋಧವನ್ನು ಕುರಿತು ಕಾರಣವೆಂದು ಹೇಳುವುದು ಸರಿಯಲ್ಲ. ಹಾಗೆ ಹೇಳಿದರೆ ನಿಮ್ಮ ಮತದಲ್ಲಿ ಒಂದು ಅನುಮಿತಿಗೆ ಮತ್ತೊಂದು ಅನುಮಿತಿಯ ಅಭಾವವು ಪ್ರತಿಬಂಧಕಾಭಾವ ಮೂಲಕವಾಗಿ ಕಾರಣವೆಂದು ಹೇಳಿದಂತೆ ಇದೂ ಸಹ ಪ್ರತಿಬಂಧಕಾಭಾವಮೂಲಕವಾಗಿ ಕಾರಣವೆಂದು ಆಗಬೇಕಾದೀತು!

ವಿವರಣೆ - ಒಂದು ವಾಕ್ಯದಿಂದ ಶಾಬ್ದಬೋಧವು ಬಂದ ಮೇಲೆ ಅದೇ ವಾಕ್ಯದಿಂದ ಮತ್ತೊಂದು ಶಾಬ್ದಬೋಧವು ಬರುವುದಿಲ್ಲ. ಆದ್ದರಿಂದ ಮತ್ತೊಂದು ಶಾಬ್ದಬೋಧದ

ಅತ್ಯಂತಾಭಾವವು ಮೊದಲಿನ ಶಾಬ್ದಬೋಧಕ್ಕೆ ಕಾರಣವೆಂದು ಹೇಳಬೇಕು. ಆಗ ಮತ್ತೊಂದು ಶಾಬ್ದಬೋಧದ ಅತ್ಯಂತಾಭಾವವನ್ನು ಪ್ರತಿಬಂಧಕಾಭಾವಮೂಲಕವಾಗಿ ಹೇತುವೆಂದು ಹೇಳಿದಂತಾಗುತ್ತದೆ. ಉದಾ - ವ್ಯಾಪ್ತಿಪಕ್ಷಧರ್ಮತಾವಿಶಿಷ್ಟವಾದ ಲಿಂಗ ಜ್ಞಾನವು ಅನುಮಿತಿಗೆ ಕಾರಣವೆಂದು ನೀವು ಹೇಳುತ್ತೀರಿ. ಲಿಂಗವು ವ್ಯಾಪ್ತಿಹಾಗೂ ಪಕ್ಷಧರ್ಮತಾಗಳಿಂದ ವಿಶಿಷ್ಟವಾಗಿದೆ. ಪಕ್ಷಧರ್ಮತಾ ಬರಬೇಕೆಂದರೆ ಪಕ್ಷದಲ್ಲಿ ಪಕ್ಷತ್ವ-ವಿರಬೇಕು. ಅದಕ್ಕಾಗಿ ಸಂದಿಗ್ಧಸಾಧ್ಯಧರ್ಮವತ್ವವನ್ನು ಹೇಳಬೇಕು. ಸಾಧ್ಯದಲ್ಲಿ ಸಂದೇಹವೇ ಇಲ್ಲದಿದ್ದರೆ ಪಕ್ಷತ್ವವು ಬರುವುದಿಲ್ಲ. ಆದ್ದರಿಂದ ಪಕ್ಷಧರ್ಮತಾವು ಕೂಡ ಕೂಡು-ವುದಿಲ್ಲ. ಪಕ್ಷಧರ್ಮತಾವೇ ಇಲ್ಲದಿದ್ದರೆ ಲಿಂಗವು ಪಕ್ಷಧರ್ಮತ್ವದಿಂದ ವಿಶಿಷ್ಟವೂ ಆಗುವುದಿಲ್ಲ. ಆದ್ದರಿಂದ ಒಮ್ಮೆ ಅನುಮಿತಿ ಬಂದ ಮೇಲೆ ಮತ್ತೊಂದು ಅನುಮಿತಿಯ ಅತ್ಯಂತಾಭಾವವು ಮೊದಲಿನ ಅನುಮಿತಿಗೆ ಪ್ರತಿಬಂಧಕಾಭಾವಮೂಲಕವಾಗಿ ಕಾರಣ-ವಾಗುತ್ತದೆ. ಅದರಂತೆ ಮತ್ತೊಂದು ಶಾಬ್ದಬೋಧದ ಅತ್ಯಂತಾಭಾವವೂ ಸಹ ಮೊದಲಿನ ಶಾಬ್ದಬೋಧಕ್ಕೆ ಕಾರಣವಾಗುತ್ತದೆ. ಹೀಗೆ ನೀವು ಹೇಳಬೇಕು. ಆದರೆ ಈ ಪ್ರಕಾರ ಅಂಗೀಕರಿಸಲು ನಿಮ್ಮಿಂದ ಸಾಧ್ಯವಿಲ್ಲ.

**ನ್ಯಾಯದೀಪ – ಅಂತ್ಯೇ ಆಹ – ಶಾಬ್ದಾಂತರಾನುಭವೇತಿ ॥**

ಅನುವಾದ– ಎರಡನೆಯ ಪಕ್ಷದಲ್ಲಿ ದೋಷವನ್ನು 'ಶಾಬ್ದಾಂತರಾನುಭವ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

## ಪ್ರತಿಬಂಧಕಾಭಾವವು ಹೇತುವಾಗದು

**ತರ್ಕತಾಂಡವ – ಪ್ರತಿಬಂಧಕಾಭಾವಶ್ಚಾಜ್ಞಾತ ಏವ ಹೇತುಃ ಕಾರ್ಯಮಾತ್ರ-ಸಾಧಾರಣಶ್ಚೇತಿ ತ್ವದಂಗೀಕೃತಮಾಕಾಂಕ್ಷಾಜ್ಞಾನಸ್ಯ ಹೇತುತ್ವಮಸಾಧಾರಣ್ಯಂ ಚ ನ ಸ್ಯಾತ್ ।**

ಅನುವಾದ– ಪ್ರತಿಬಂಧಕಾಭಾವವನ್ನು ಹೇತುವೆಂದು ಹೇಳಲು ನಿಮ್ಮಿಂದ ಸಾಧ್ಯವಿಲ್ಲ. ಏಕೆಂದರೆ, ಪ್ರತಿಬಂಧಕಾಭಾವವು ಅಜ್ಞಾತವಾಗಿಯೇ ಎಲ್ಲೆಡೆಯೂ ಕಾರಣವಾಗುತ್ತದೆ. ಆದರೆ ನೀವು ಆಕಾಂಕ್ಷೆಯು ಶಾಬ್ದಬೋಧಕ್ಕೆ ಕಾರಣವಲ್ಲ. ಆಕಾಂಕ್ಷೆಯ ಜ್ಞಾನವು ಶಾಬ್ದಬೋಧಕ್ಕೆ

ಕಾರಣವೆಂದು ಹೇಳುತ್ತಿರುವಿರಿ. ಆಗ ಪ್ರತಿಬಂಧಕಾಭಾವವೆಂಬ ಆಕಾಂಕ್ಷೆಯ ಜ್ಞಾನವನ್ನು ಕಾರಣ-ವೆಂದು ಹೇಳಬೇಕಾಗುತ್ತದೆ. ಮತ್ತು ಪ್ರತಿಬಂಧಕಾಭಾವವು ಸಕಲಕಾರ್ಯಗಳಿಗೆ ಸಾಧಾರಣ-ಕಾರಣವಾಗಿದೆ. ಅಸಾಧಾರಣಕಾರಣವೆಂದು ಸಮರ್ಥಿಸಲು ಹೊರಟ ನೀವು ಪುನಃ ಕಾರ್ಯ-ಮಾತ್ರಸಾಧಾರಣವಾದದ್ದನ್ನೇ ಒಪ್ಪಿದಂತಾಯಿತು.

## ಪ್ರತಿಬಂಧಕಾಭಾವರೂಪದಿಂದ ಶಾಬ್ದಬೋಧಾಂತರವು ಹೇತು

**ನ್ಯಾಯದೀಪ – ಪ್ರತಿಬಂಧಕಾಭಾವತಯಾ ಇತಿ ॥ 'ಸಿದ್ಧಸಾಧನತಾ ಅನು-ಮಾನೇ ದೋಷಃ' ಇತಿ ಸಿದ್ಧೇರನುಮಿತಿಪ್ರತಿಬಂಧಕತ್ವಾತ್ ಸಿದ್ಧ್ಯಂತರಾಭಾವೋ-ಽನುಮಿತೌ ಯಥಾ ಪ್ರತಿಬಂಧಕಭಾವತಯಾ ಹೇತುಃ ಏವಮಪ್ರಾಪ್ತೇ ವಾಕ್ಯ-ಮರ್ಥವದಿತಿ ನ್ಯಾಯಾದನ್ವಯಗೋಚರಾನುಭವಾಂತರೇ ಸತಿ ಪುನಃ ಶಾಬ್ದಾನು-ಭವಸ್ಯ ಅನಪೇಕ್ಷಿತತ್ವೇನ ಅನುದಯಾತ್ ಅನುಭವಾಂತರಮ್ ಅನ್ವಯಾನುಭವೇ ಪ್ರತಿಬಂಧಕಮಿತಿ ತದಭಾವೋಽಪಿ ಪ್ರತಿಬಂಧಕಾಭಾವತ್ವೇನೈವ ಹೇತುಃ ಸ್ಯಾದಿತ್ಯರ್ಥಃ ।**

ಅನುವಾದ– ಸಿದ್ಧಸಾಧನತಾದೋಷವು ಅನುಮಾನದಲ್ಲಿ ದೋಷವಾಗಿದೆ. ವಿಷಯಸಿದ್ಧಿಯು ಅನು-ಮಿತಿಗೆ ಪ್ರತಿಬಂಧಕವಾಗಿರುವ ಕಾರಣ ಪದಾರ್ಥಸಿದ್ಧ್ಯಂತರ ಅಭಾವವು ಅನುಮಿತಿಯನ್ನು ಕುರಿತು ಪ್ರತಿಬಂಧಕಾಭಾವಪುರಸ್ಸರವಾಗಿ ಕಾರಣವಾಗಿದೆ ಎಂದು ನ್ಯಾಯಮತದಲ್ಲಿ ಅಂಗೀಕರಿಸಲಾಗಿದೆ. ಇದೇ ರೀತಿಯಾಗಿ 'ಅಪ್ರಾಪ್ತೇ ವಾಕ್ಯಮರ್ಥವತ್' ಎಂಬ ನ್ಯಾಯದಂತೆ ಶಾಬ್ದಬೋಧವಿದ್ದಾಗ ಪುನಃ ಮತ್ತೊಂದು ಶಾಬ್ದಾನುಭವದ ಅಪೇಕ್ಷೆ ಇರುವುದಿಲ್ಲ. ಆದ್ದರಿಂದ ಶಾಬ್ದಬೋಧವೂ ಸಹ ಪುನಃ ಹುಟ್ಟುವುದಿಲ್ಲ. ಆದ್ದರಿಂದ, ಮತ್ತೊಂದು ಶಾಬ್ದಬೋಧವು ಪ್ರಕೃತ ಶಾಬ್ದಬೋಧ ಹುಟ್ಟಲು ಪ್ರತಿ-ಬಂಧಕವೆಂದಾಯಿತು. ಇದರಿಂದ ಮತ್ತೊಂದು ಶಾಬ್ದಬೋಧದ ಅಭಾವವು ಈ ಶಾಬ್ದಬೋಧಕ್ಕೆ ಪ್ರತಿಬಂಧಕಾಭಾವಮೂಲಕವಾಗಿ ಹೇತುವೆಂದು ಹೇಳಿದಂತಾಯಿತು. ಹೀಗೆ 'ಪ್ರತಿಬಂಧಕಾಭಾವತಯಾ' ಎಂಬ ಗ್ರಂಥದ ವಾಕ್ಯಕ್ಕೆ ಇಷ್ಟು ಅಭಿಪ್ರಾಯ ತಿಳಿಯಬೇಕು.

**ನ್ಯಾಯದೀಪ – ತತಶ್ಚ ಕಿಮಿತ್ಯತ ಆಹ – ಪ್ರತಿಬಂಧಕಾಭಾವಶ್ಚೇತಿ ॥**

ಅನುವಾದ– ಹೀಗೆ ಹೇಳಿದ್ದರ ಉದ್ದೇಶವನ್ನು 'ಪ್ರತಿಬಂಧಕಾಭಾವಶ್ಚ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

## ಆಕಾಂಕ್ಷೆಯನ್ನು ನಿರೂಪಣೆ ಮಾಡಲು ಸಾಧ್ಯವಿಲ್ಲವೇ?

**ತರ್ಕತಾಂಡವ – ಕಿಂಚ ಸಕಲಪದೋಪಸ್ಥಿತಿದಶಾಯಾಂ ಶಾಬ್ದಬೋಧಾತ್ ಪೂರ್ವಂ ಪ್ರಾಗಭಾವಸ್ಯ ಇತರವಿರಹಾಪ್ರಯುಕ್ತತ್ವಾತ್ ಅವ್ಯಾಪ್ತಿಃ । ತಸ್ಮಾತ್ 'ಆಕಾಂಕ್ಷಾ ದುರ್ನಿರೂಪಾ' ಇತಿ ॥**

ಅನುವಾದ– ಮತ್ತು ಸಕಲಪದಗಳೂ ಉಪಸ್ಥಿತವಾದ ಮೇಲೆ ಶಾಬ್ದಬೋಧ ಬರುವ ಮೊದಲು ಯಾವ ಶಾಬ್ದಬೋಧದ ಪ್ರಾಗಭಾವ ಇರುತ್ತದೋ ಅದು ಇತರಪದವಿರಹಪ್ರಯುಕ್ತವಾಗಿಲ್ಲ. ಆದ್ದರಿಂದ ಅವ್ಯಾಪ್ತಿದೋಷ ಬರುತ್ತದೆ. ಆದ್ದರಿಂದ ಆಕಾಂಕ್ಷೆಯ ಲಕ್ಷಣವನ್ನು ಮಣಿಕಾರನಿಗೆ ಸಮರ್ಥನೆ ಮಾಡಲು ಸಾಧ್ಯವಾಗಲಿಲ್ಲ.

ವಿವರಣೆ– 'ಘಟಂ' ಎಂಬ ಪದವು ಉಪಸ್ಥಿತವಾದ ಮೇಲೆ 'ಆನಯ' ಎಂಬ ಪದವೂ ಕೂಡ ಉಪಸ್ಥಿತವಾಗುತ್ತದೆ. ಈ ಎರಡೂ ಪದಗಳು ಉಪಸ್ಥಿತವಾದ ಮರುಕ್ಷಣದಲ್ಲಿಯೇ ಶಾಬ್ದಬೋಧ ಬರುವುದಿಲ್ಲ. ಮಧ್ಯದಲ್ಲಿ ಶಕ್ತಿ ಸ್ಮರಣೆ ಹಾಗೂ ಪದಾರ್ಥಸ್ಮರಣೆಗಳು ಬರಬೇಕು. ಆ ಎರಡು ಕ್ಷಣಗಳಲ್ಲಿ ಮುಂದೆ ಬರುವ ಶಾಬ್ದಬೋಧದ ಪ್ರಾಗಭಾವವಿದೆ. ಈ ಪ್ರಾಗಭಾವವು ಇತರಪದವಿರಹಪ್ರಯುಕ್ತವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಶಾಬ್ದಬೋಧಕ್ಕೆ ಆವಶ್ಯಕವಾದ ಎಲ್ಲಾ ಪದಗಳು ಕೂಡ ಇರುತ್ತವೆ. ಆದ್ದರಿಂದ ಈ ಪ್ರಾಗಭಾವದಲ್ಲಿ 'ಇತರಪದವಿರಹಪ್ರಯುಕ್ತತ್ವ' ಇಲ್ಲದ ಕಾರಣ ಆಕಾಂಕ್ಷೆಯ ಲಕ್ಷಣಕ್ಕೆ ಅವ್ಯಾಪ್ತಿದೋಷವನ್ನು ಪರಿಹರಿಸಿಕೊಳ್ಳಲು ನಿಮ್ಮಿಂದ ಸಾಧ್ಯವೇ ಇಲ್ಲ. ಹೀಗೆ ಉದಯನನಿಗಾಗಲೀ ಮಣಿಕಾರನಿಗಾಗಲೀ ಆಕಾಂಕ್ಷೆಯ ಲಕ್ಷಣವನ್ನು ಇದಮಿತ್ಥಂ ಎಂದು ನಿರ್ಧರಿಸುವುದೇ ಕಷ್ಟವಾಗಿದೆ.

**ನ್ಯಾಯದೀಪ – ಪೂರ್ವಮಿತಿ ॥ 'ಸಂಕೇತಸ್ಮರಣಪದಾರ್ಥೋಪಸ್ಥಿತಿದಶಾಯಾಂ ಪದಾನಾಮುಪಸ್ಥಿತ್ಯಂತರಮ್' ಇತ್ಯರ್ಥಃ ।**

ಅನುವಾದ– 'ಪೂರ್ವಂ' ಎಂಬುದಕ್ಕೆ 'ಸಂಕೇತಸ್ಮರಣ ಹಾಗೂ ಪದಾರ್ಥೋಪಸ್ಥಿತಿಗಳ ದಶೆಯಲ್ಲಿ ಪದಗಳ ಉಪಸ್ಥಿತಿಯ ಅನಂತರ' ಎಂದರ್ಥ.

## ಗೋಷ್ಠಿಯ ವಿಚಾರಗಳು

## ಅತ್ಯಂತಾಭಾವವು ಯತ್ಕಿಂಚಿತ್ ವಿರಹಪ್ರಯುಕ್ತವಲ್ಲ

ಪ್ರಶ್ನೆ– ಪ್ರಾಗಭಾವವು ಯತ್ಕಿಂಚಿತ್‌ವಿರಹಪ್ರಯುಕ್ತವಾದ ಮೇಲೆ ಅತ್ಯಂತಾಭಾವವು ಸಹ ಯತ್ಕಿಂಚಿತ್ ವಿರಹಪ್ರಯುಕ್ತವಾಗುತ್ತದೆ. ಆದ್ದರಿಂದ ಇತರವಿರಹಪ್ರಯುಕ್ತತ್ವವು ಪ್ರಾಗಭಾವದಲ್ಲಿ ಬಂದಂತೆ ಅತ್ಯಂತಾಭಾವದಲ್ಲಿಯೂ ಬರುತ್ತದೆ. ಹೀಗೆ ಹೇಳಿದರೆ ಏನು ತಪ್ಪು?

ಉತ್ತರ – ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದ ಪದಾರ್ಥವು ಮೂರು ಕಾಲದಲ್ಲಿಯೂ ಕೂಡ ಅಸತ್ತಾಗಿರುತ್ತದೆ. 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬಲ್ಲಿ ಶಾಬ್ದಬೋಧದ ಅತ್ಯಂತಾಭಾವವಿದೆ. ಯಾವ ಕಾಲದಲ್ಲಿಯೂ ಶಾಬ್ದಬೋಧ ಹುಟ್ಟಲು ಸಾಧ್ಯವಿಲ್ಲ. ಇಲ್ಲಿರುವ ಶಾಬ್ದಬೋಧದ ಅತ್ಯಂತಾಭಾವವು ಇತರಪದವಿರಹಪ್ರಯುಕ್ತವೆಂದು ತಾರ್ಕಿಕರು ಹೇಳುವುದು ಅತ್ಯಂತವಿರುದ್ಧವಾದ ಮಾತು. ಶಶವಿಷಾಣವು ಯಾವುದೋ ಒಂದು ಕಾರಣದಿಂದ ಹುಟ್ಟಿರುವುದಿಲ್ಲ ಎಂದು ಹೇಳುವುದು ಹೇಗೆ ತಪ್ಪಾಗುತ್ತದೋ ಅದರಂತೆ ಶಾಬ್ದಬೋಧದ ಅತ್ಯಂತಾಭಾವವೂ ಕೂಡ ಇತರಪದವಿರಹಪ್ರಯುಕ್ತವಾಗಿ ಬಂದಿದೆ ಎಂದು ಹೇಳುವುದು ಕೂಡ ತಪ್ಪಾಗುತ್ತದೆ. ಹೀಗೊಪ್ಪದಿದ್ದರೆ ಶಶವಿಷಾಣದ ಉತ್ಪತ್ತಿಗೆ ಬೇಕಾದ ಧಾತುವಿನ ಅಭಾವದಿಂದ ಶಶವಿಷಾಣವು ಹುಟ್ಟಿರುವುದಿಲ್ಲ ಎಂದು ಹೇಳಬೇಕಾದೀತು.

## ಜ್ಞಾತಜ್ಞಾಪಕತ್ವವು ಪ್ರತ್ಯಕ್ಷದಲ್ಲಿ ಮಾತ್ರ ದೋಷವಲ್ಲ.

ಪ್ರಶ್ನೆ – ಜ್ಞಾತಜ್ಞಾಪಕತ್ವವು ಪ್ರತ್ಯಕ್ಷದಲ್ಲಿ ದೋಷವಲ್ಲ. ಅದರಂತೆ ಅನುಮಿತಿ ಹಾಗೂ ಶಾಬ್ದಬೋಧದಲ್ಲಿಯೂ ದೋಷವಾಗುವುದು ಹೇಗೆ?

ಉತ್ತರ – ಜ್ಞಾತಜ್ಞಾಪಕತ್ವವು ಪ್ರತ್ಯಕ್ಷದಲ್ಲಿ ದೋಷವಲ್ಲ. ಆದರೆ ಅನುಮಿತಿ, ಹಾಗೂ ಶಾಬ್ದಬೋಧದಲ್ಲಿ ದೋಷವಾಗುತ್ತದೆ. ಒಮ್ಮೆ 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿ ಹುಟ್ಟಿದ ಮೇಲೆ ಪುನಃ ಅದೇ ಅನುಮಿತಿ ಹುಟ್ಟುವುದಿಲ್ಲ. ಏಕೆಂದರೆ, ಅನುಮಿತಿಗೆ ಸಹಕಾರಿ–

ಯಾದ ಪಕ್ಷಧರ್ಮತ್ವಾದಿಗಳು ಇರುವುದಿಲ್ಲ. ಅದರಂತೆ ಶಾಬ್ದಬೋಧದಲ್ಲಿಯೂ ಕೂಡ 'ಘಟಮಾನಯ' ಎಂಬ ಪದದಿಂದ ಶಾಬ್ದಬೋಧ ಬಂದ ಮೇಲೆ ಪುನಃ ಅದೇ ಶಾಬ್ದ-ಬೋಧವು ಹುಟ್ಟುವುದಿಲ್ಲ.

## ಆಕಾಂಕ್ಷೆಯ ನಿಖರ ಲಕ್ಷಣಸ್ವರೂಪ

**ತರ್ಕತಾಂಡವ – ಉಚ್ಯತೇ – ಯಸ್ಯ ಪದಸ್ಯ ಯದನ್ವಯಾನನುಭಾವಕತ್ವಂ ಸಮಭಿ-ವ್ಯಾಹೃತಯತ್ಪದಗತಯದ್ರೂಪವಿರಹಪ್ರಯುಕ್ತಂ ತಸ್ಯ ಪದಸ್ಯ ತಸ್ಮಿನ್ ಅನ್ವಯೇ ತೇನ ಪದೇನ ಸಹ ತದ್ರೂಪಮ್ – ಆಕಾಂಕ್ಷಾ।**

ಅನುವಾದ– ಆಕಾಂಕ್ಷೆಯ ಯಥಾರ್ಥವಾದ ಪರಿಷ್ಕಾರವನ್ನು ಹೀಗೆ ಹೇಳಬೇಕು. ''ಯಸ್ಯ ಪದಸ್ಯ ಯದನ್ವಯಾನನುಭಾವಕತ್ವಂ ಸಮಭಿವ್ಯಾಹೃತಯತ್ಪದಗತಯದ್ರೂಪವಿರಹಪ್ರಯುಕ್ತಂ ತಸ್ಯ ಪದಸ್ಯ ತಸ್ಮಿನ್ನನ್ವಯೇ ತೇನ ಪದೇನ ಸಹ ತದ್ರೂಪಂ ಆಕಾಂಕ್ಷಾ''. 'ಘಟಮಾನಯ' ಎಂಬಲ್ಲಿ ಈ ಆಕಾಂಕ್ಷೆಯ ಲಕ್ಷಣದ ಸಮನ್ವಯವಾಗುತ್ತದೆ. ಯಸ್ಯ ಪದಸ್ಯ = ಘಟಂ ಎಂಬ ಪದಕ್ಕೆ, ಯದನ್ವಯಾನನುಭಾವಕತ್ವಂ = ಕ್ರಿಯಾಕಾರಕಭಾವವೆಂಬ ಅನ್ವಯದ ಅನುಭಾವಕತ್ವವು ಇರು-ವುದಿಲ್ಲ. ಇದು ಸಮಭಿವ್ಯಾಹೃತ ಯತ್‌ಪದಗತ = ಜೊತೆಯಲ್ಲಿರುವ 'ಆನಯ' ಎಂಬ ಪದ-ದಲ್ಲಿರುವ ಯದ್ರೂಪವಿರಹಪ್ರಯುಕ್ತಂ 'ಕ್ರಿಯಾತ್ವ' ಎಂಬ ಧರ್ಮದ ವಿರಹಪ್ರಯುಕ್ತವಾಗಿದೆ. ತಸ್ಯ ಪದಸ್ಯ = 'ಘಟಂ' ಎಂಬ ಪದಕ್ಕೆ, ತಸ್ಮಿನ್ ಅನ್ವಯೇ = ಕ್ರಿಯಾಕಾರಕಭಾವವೆಂಬ ಅನ್ವಯವಿಶೇಷದಲ್ಲಿ ತೇನ ಪದೇನ ಸಹ = 'ಆನಯ' ಎಂಬ ಪದದ ಜೊತೆ, ತದ್ರೂಪಂ = ಕ್ರಿಯಾಕಾರಕಭಾವವೆಂಬ ಧರ್ಮವು ಆಕಾಂಕ್ಷೆ ಎನಿಸುತ್ತದೆ.

ವಿವರಣೆ - ಆಕಾಂಕ್ಷೆಯ ಲಕ್ಷಣವನ್ನು ಗ್ರಂಥಕಾರರು ಪರಿಷ್ಕಾರ ಮಾಡಿ ಹೇಳುತ್ತಿದ್ದಾರೆ. ಇದು ಪ್ರಮಾಣಪದ್ಧತಿಯಲ್ಲಿ ಹೇಳಿದಂತೆ ಇರದಿದ್ದರೂಕೂಡ ಉದಯನನಿಗೆ ಹಾಗೂ ಮಣಿಕಾರನಿಗೆ ಬಂದಿರುವ ದೋಷಗಳು ಹೀಗೆ ಪರಿಷ್ಕಾರ ಮಾಡಿದರೆ ಬರುವುದಿಲ್ಲ ಎಂದು ತಿಳಿಸುವುದರಲ್ಲಿ ಸಾರ್ಥಕ್ಯವನ್ನು ಹೊಂದಿದೆ. ಆದ್ದರಿಂದ ಈ ಲಕ್ಷಣವು ಪ್ರೌಢಿವಾದದಿಂದ

ಹೇಳಿದ್ದಷ್ಟೇ ಎಂದು ತಿಳಿಯಬೇಕು. ಆದರೆ ಈ ಲಕ್ಷಣಕ್ಕೆ ಯಾವ ಪ್ರತಿವಾದಿಗೂ ಯಾವ ದೋಷವೂ ತೋರಿಸಲು ಸಾಧ್ಯವಿಲ್ಲ ಎಂಬುದನ್ನು ಗಮನಿಸಬೇಕು.

'ಘಟಂ' ಎಂಬ ಪದಕ್ಕೆ 'ಆನಯ'ಪದವು ಜೊತೆಯಲ್ಲಿದ್ದರೆ ಶಾಬ್ದಬೋಧಜನಕತ್ವವು ಬರುತ್ತದೆ. 'ಆನಯ' ಎಂಬ ಪದವು ಜೊತೆಯಲ್ಲಿಲ್ಲದಿದ್ದರೆ ಶಾಬ್ದಬೋಧ ಜನಕತ್ವವು ಬರುವುದಿಲ್ಲ. ಆದ್ದರಿಂದ 'ಘಟಂ' ಎಂಬ ಪದಕ್ಕೆ ಯದನ್ವಯಅನನುಭಾವಕತ್ವ ಕ್ರಿಯಾ-ಕಾರಕಭಾವವೆಂಬ ಅನ್ವಯದ ಅನನುಭಾವಕತ್ವವು ಇರುತ್ತದೆ. ಇಲ್ಲಿ ಯಶ್ಚಾಸೌ ಅನ್ವಯಶ್ಚ ಎಂದು ಸಮಾಸಮಾಡಬೇಕೇ ಹೊರತು 'ಯೇನ ಅನ್ವಯಃ' ಎಂದಾಗಲೀ 'ಯಸ್ಯ ಅನ್ವಯಃ' ಎಂದಾಗಲೀ ಸಮಾಸವನ್ನು ತಿಳಿಯಬಾರದು. ಕರ್ಮಧಾರಯಸಮಾಸವನ್ನು ಮಾಡಿದಾಗ ಮಾತ್ರ ಕ್ರಿಯಾಕಾರಕಭಾವವೆಂಬ ಅನ್ವಯವನ್ನು ವಿವಕ್ಷಿಸಲು ಸಾಧ್ಯವಾಗುತ್ತದೆ. ಈ ಕ್ರಿಯಾಕಾರಕಭಾವವೆಂಬ ಅನ್ವಯವಿಶೇಷದ ಅನನುಭಾವಕತ್ವಕ್ಕೆ ಪ್ರಯೋಜಕವಾದದ್ದು 'ಸಮಭಿವ್ಯಾಹೃತವಾದ ಯತ್ಪದಗತಯದ್ರೂಪವಿರಹ' ಎಂಬುದು. 'ಸಮಭಿ-ವ್ಯಾಹೃತ' ಎಂಬ ಪದಕ್ಕೆ ಉಚ್ಚಾರಣೆಯಿಂದಲೇ ಜೊತೆಯಲ್ಲಿರಬೇಕು ಎಂದರ್ಥವಲ್ಲ. ಅಭಿಪ್ರಾಯದಿಂದ ಅಥವಾ ಉಪಸ್ಥಿತಿಯಿಂದ ಜೊತೆಯಲ್ಲಿರಬೇಕು ಎಂದರ್ಥ. ಹೀಗೆ ಸಮಭಿವ್ಯಾಹೃತವಾದ 'ಯತ್ಪದ' ಎಂದರೆ ಆನಯ ಎಂಬ ಪದ. ಇದರಲ್ಲಿರುವ 'ಯದ್ರೂಪ' ಎಂದರೆ ಕ್ರಿಯಾಪದತ್ವ ಎಂಬ ಧರ್ಮ ಎಂದರ್ಥ. ರೂಪಪದದಿಂದ ಧರ್ಮವನ್ನೇ ವಿವಕ್ಷಿಸಬೇಕು. ಕೇವಲ 'ಆನಯ' ಎಂಬ ಪದದ ಜ್ಞಾನವಿದ್ದರೆ ಸಾಲದು. ಅದು ಕ್ರಿಯಾಪದ ಎಂಬ ಅರಿವೂ ಕೇಳುಗನಿಗೆ ಇರಬೇಕು. ಅದರಂತೆ ಆನಯ ಪದಕ್ಕೆ ಘಟಪದದ ಜೊತೆ ಅನ್ವಯ ಮಾಡುವಾಗ ಘಟಪದದಲ್ಲಿ ಕಾರಕಪದತ್ವ ಎಂಬ ಧರ್ಮವಿದೆ ಎಂಬ ಅರಿವೂ ಬೇಕು. ಹೀಗೆ ಆನಯ ಪದದಲ್ಲಿ ಕ್ರಿಯಾಪದದ ಜ್ಞಾನವಿಲ್ಲ-ದಿದ್ದರೆ ಎಂಬ ಧರ್ಮದ ವಿರಹಪ್ರಯುಕ್ತವಾಗಿ ಘಟ ಎಂಬ ಪದವು ಕ್ರಿಯಾಕಾರಕಭಾವದ ಅನ್ವಯಬೋಧವನ್ನು ಹುಟ್ಟಿಸುತ್ತಿಲ್ಲ. ಕ್ರಿಯಾಕಾರಕಭಾವಸಂಬಂಧಜ್ಞಾನವು ಬರ-ಬೇಕೆಂದರೆ ಆನಯಪದದಲ್ಲಿ ಕ್ರಿಯಾಪದತ್ವ ಎಂಬ ಧರ್ಮ ಹಾಗೂ ಘಟಪದದಲ್ಲಿ ಕಾರಕಪದತ್ವ ಎಂಬ ಧರ್ಮ ಅವಶ್ಯವಾಗಿ ಇರಲೇಬೇಕು. ಯಾವಾಗ ಈ ಎರಡು ಪದಗ-ಳಲ್ಲಿ ಇಂತಹ ಧರ್ಮಗಳ ಜ್ಞಾನವು ಬರುತ್ತದೋ ಆಗ ಕ್ರಿಯಾಕಾರಕಭಾವಾನ್ವಯ-ಬೋಧವು ಕೂಡಲೇ ಬರುತ್ತದೆ. ಶಾಬ್ದಬೋಧವು ಹುಟ್ಟುತ್ತದೆಂದರ್ಥ.

ಲಕ್ಷಣದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು. 'ಯಸ್ಯ ಪದಸ್ಯ' ಎಂಬುದಕ್ಕೆ ಉಪಸ್ಥಿತವಾದ ಯಾವ ಪದಕ್ಕೆ ಎಂದರ್ಥ. ಕೇವಲ ಪದ ಇದ್ದರೆ ಸಾಲದು; ಅದರ ಜ್ಞಾನವೂ ನಮಗಿರಬೇಕು. ಆದ್ದರಿಂದ ಜ್ಞಾತವಾದ ಯಾವ ಪದವಿದೆಯೋ ಅದರಲ್ಲಿ ಅನ್ವಯ ಅನುಭವದ ಪ್ರಾಗಭಾವ ಇರುತ್ತದೆ. 'ಯದನ್ವಯ' ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಕೆಲವೆಡೆ ಕ್ರಿಯಾಕಾರಕಭಾವವೆಂಬ ಅನ್ವಯ, ಇನ್ನು ಕೆಲವೆಡೆ ಸಂಬಂಧರೂಪವಾದ ಅನ್ವಯ; ಇನ್ನು ಕೆಲವೆಡೆ ಸ್ವಸ್ವಾಮಿಭಾವರೂಪವಾದ ಅನ್ವಯ ಹೀಗೆ ಒಂದೊಂದು ಕಡೆ ಒಂದೊಂದು ಅನ್ವಯಗಳನ್ನು ವಿವಕ್ಷಿಸಬೇಕು. ಅಂತಹ ಅನ್ವಯಗಳ ಅನುಭವದ ಪ್ರಾಗಭಾವವು ಪದದಲ್ಲಿರುತ್ತದೆಂದಭಿಪ್ರಾಯ. ಈ ಪ್ರಾಗಭಾವವು 'ಯತ್ಪ್ರಯುಕ್ತ' ಎಂಬ ಪ್ರಶ್ನೆಗೆ 'ಸಮಭಿವ್ಯಾಹೃತಯತ್ಪದಗತಯದ್ರೂಪವಿರಹಪ್ರಯುಕ್ತಂ' ಎಂಬುದರಿಂದ ಉತ್ತರಿಸಿದ್ದಾರೆ. ಉದಾ - ಘಟಮಾನಯ ಎಂಬಲ್ಲಿ ಘಟ ಎಂಬ ಪದಕ್ಕೆ ಕ್ರಿಯಾಕಾರಕಭಾವಾನ್ವಯ ಅನುಭವದ ಪ್ರಾಗಭಾವವು ಇರುತ್ತದೆ. ಇದು ಸಮಭಿವ್ಯಾಹೃತವಾದ ಆನಯ ಎಂಬ ಪದದಲ್ಲಿರುವ ಕ್ರಿಯಾತ್ವ ಎಂಬ ಧರ್ಮದ ವಿರಹಪ್ರಯುಕ್ತವಾಗಿರುತ್ತದೆ. ಇಲ್ಲಿ ಸಮಭಿವ್ಯಾಹೃತ ಎಂಬ ಪದಕ್ಕೆ ಜೊತೆಯಲ್ಲಿರಬೇಕು ಎಂದರ್ಥ. ಜೊತೆಯಲ್ಲಿರುವುದು ಶಬ್ದದ ಉಚ್ಚಾರಣೆಯಿಂದ ಅಥವಾ ಅಭಿಪ್ರಾಯದಿಂದ ಅಥವಾ ಬೇರೆ ಯಾವುದಾದರೂ ಉಪಾಯದಿಂದ ಉಪಸ್ಥಿತವಾಗಿರಬೇಕು ಎಂದರ್ಥ.

ನ್ಯಾಯದೀಪದಲ್ಲಿ ಹೇಳಿದಂತೆ ಸುಲಭವಾಗಿ ಹೀಗೆ ತಿಳಿಯಬಹುದು. – ಘಟ ಎಂಬ ಉಪಸ್ಥಿತವಾದ ಶಬ್ದಕ್ಕೆ ಅಭಿಮತವಾದ ಯಾವ ಕ್ರಿಯಾಕಾರಕಭಾವವೆಂಬ ಅನ್ವಯಾನುಭವವಾಗಬೇಕೋ ಅದು ಆಗದಿರಲು ಪ್ರಯೋಜಕವಾದದ್ದು ಆನಯ ಎಂಬ ಪದದ ಉಪಸ್ಥಿತಿಯ ವಿರಹ. ಇದಕ್ಕೆ ಪ್ರತಿಯೋಗಿಯಾದದ್ದು ಉಪಸ್ಥಿತಿ. ಕ್ರಿಯಾಪದತ್ವ ಧರ್ಮದ ಉಪಸ್ಥಿತಿ ಎಂದರ್ಥ. ಇದಕ್ಕೆ ವಿಷಯವಾದದ್ದು ಕ್ರಿಯಾಪದತ್ವ. ಈ ಧರ್ಮದಿಂದ ಕೂಡಿರುವುದು ಆನಯ ಎಂಬ ಪದ. ಇಂತಹ ಪದಾಂತರಸಮಭಿವ್ಯಾಹೃತತ್ವವೇ ಆಕಾಂಕ್ಷೆ ಎಂದು ಕರೆಸಿಕೊಳ್ಳುತ್ತದೆ. ಇನ್ನೂ ಸುಲಭವಾಗಿ ಹೇಳಬೇಕೆಂದರೆ ಆಕಾಂಕ್ಷಾಪದಕ್ಕೆ ಜಿಜ್ಞಾಸೆ ಎಂದರ್ಥ. ಜಿಜ್ಞಾಸೆ ಎಂದರೆ ಅನ್ವಯಬೋಧಕ್ಕೆ ಉಪಯುಕ್ತವಾದ ಪದನಿಷ್ಠವಾದ ಧರ್ಮವಿಶೇಷ ಎಂದರ್ಥ. ಇದನ್ನೇ ಇಲ್ಲಿ ವಿವರವಾಗಿ ಪರಿಷ್ಕರಿಸಿದ್ದಾರೆ.

# ಆಕಾಂಕ್ಷೆಯು ಚೇತನಧರ್ಮ - ಪ್ರಮಾಣಪದ್ಧತಿ

**ನ್ಯಾಯದೀಪ – ಪದ್ಧತೌ ''ಆಕಾಂಕ್ಷಾ ಜಿಜ್ಞಾಸಾ ಚೇತನಧರ್ಮಃ । ತದ್ವಿಷಯತ್ವಾತ್ ಪದಾರ್ಥಾಃ ಸಾಕಾಂಕ್ಷಾಃ । ತತ್ಪ್ರತಿಪಾದಕತ್ವಾತ್ ಪದಾನ್ಯಪಿ' ಇತಿ ಗ್ರಂಥೇನ 'ಜಿಜ್ಞಾಸಾವಿಷಯೀಭೂತಪದಾರ್ಥವಿಷಯಪ್ರತಿಪತ್ತಿಜನಕತ್ವಂ ಪದಾನಾಂ ಸಾಕಾಂಕ್ಷತ್ವಮ್' ಇತಿ ಯದುಕ್ತಂ ತತ್ರ 'ಜನಕತ್ವಂ ನ ಫಲೋಪಧಾನಮ್, ಕಿಂತು ಸ್ವರೂಪಯೋಗ್ಯತಾ ಏವ ಅಭಿಮತಾ' ಇತಿ ಭಾವೇನ ತತ್ರೋಕ್ತಂ ನಿಷ್ಕೃಷ್ಯ , ಅಗ್ರೇ ಸ್ವಾಭಿಮತಾಕಾಂಕ್ಷಲಕ್ಷಣಂ ವಿವಕ್ಷುರಾದೌ ತಾವತ್ ಪ್ರೌಢ್ಯಾ ಪದ್ಧತ್ಯುಕ್ತಲಕ್ಷಣಾವಿನಾಭೂತಂ ಲಕ್ಷಣಾಂತರಮಾಹ – ಯಸ್ಯ ಪದಸ್ಯೇತ್ಯಾದಿನಾ ॥**

ಅನುವಾದ– ಪ್ರಮಾಣಪದ್ಧತಿಯಲ್ಲಿ ಆಕಾಂಕ್ಷೆಯನ್ನು ನಿರೂಪಣೆ ಮಾಡುವಾಗ ಹೀಗೆ ಹೇಳಿದ್ದಾರೆ – 'ಆಕಾಂಕ್ಷಾ ಜಿಜ್ಞಾಸಾ ಚೇತನಧರ್ಮಃ । ತದ್ವಿಷಯತ್ವಾತ್ ಪದಾರ್ಥಾಃ ಸಾಕಾಂಕ್ಷಾಃ । ತತ್ಪ್ರತಿಪಾದಕತ್ವಾತ್ ಪದಾನ್ಯಪಿ' ಎಂದು. ಜಿಜ್ಞಾಸೆ ಎಂಬುದು ಚೇತನನಲ್ಲಿರುವ ಧರ್ಮ. ಜಿಜ್ಞಾಸೆಗೆ ವಿಷಯವಾದ ಪದಾರ್ಥಗಳು 'ಸಾಕಾಂಕ್ಷಾಃ' ಎನಿಸುತ್ತವೆ. ಅಂತಹ ಪದಾರ್ಥಗಳನ್ನು ಪ್ರತಿಪಾದನೆ ಮಾಡುವುದರಿಂದ ಪದಗಳೂ ಕೂಡ 'ಸಾಕಾಂಕ್ಷಾಃ' ಎನಿಸುತ್ತವೆ. ಇತ್ಯಾದಿ ಗ್ರಂಥದಿಂದ ಪದಗಳಿಗೆ ಜಿಜ್ಞಾಸಾವಿಷಯವಾದ ಪದಾರ್ಥವಿಷಯದ ಪ್ರತಿಪತ್ತಿಯ ಜನಕತ್ವವನ್ನು ಹೇಳಿ ಇದನ್ನೇ ಸಾಕಾಂಕ್ಷೆ ಎಂದು ತಿಳಿಸಿರುತ್ತಾರೆ. ಇಲ್ಲಿರುವ ಜನಕತ್ವವು ಫಲೋಪಧಾನರೂಪವಾದದ್ದಲ್ಲ. ಸ್ವರೂಪಯೋಗ್ಯತಾರೂಪವಾದದ್ದನ್ನೇ ವಿವಕ್ಷಿಸಬೇಕು. ಹೀಗೆ ಪ್ರಮಾಣಪದ್ಧತಿಯಲ್ಲಿ ಹೇಳಿದ್ದನ್ನೇ ಪರಿಷ್ಕಾರ ಮಾಡಿ ತಮಗೂ ಕೂಡ ಇದೇ ಸಮ್ಮತವಾದದ್ದೆಂದು ಗ್ರಂಥಕಾರರು ಮುಂದೆ ಸ್ಪಷ್ಟಪಡಿಸುತ್ತಾರೆ. ಈಗ ಪ್ರೌಢಿವಾದದಿಂದ ಪ್ರಮಾಣಪದ್ಧತಿಯಲ್ಲಿ ಹೇಳಿದ ಆಕಾಂಕ್ಷೆಯ ಲಕ್ಷಣದಿಂದ ಅವಿನಾಭೂತವಾದ(ವ್ಯಾಪ್ತವಾದ) ಮತ್ತೊಂದು ಲಕ್ಷಣವನ್ನು ''ಯಸ್ಯ ಪದಸ್ಯ'' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ.

ವಿವರಣೆ - ಆಕಾಂಕ್ಷೆಯು ಚೇತನನಲ್ಲಿರುವ ಧರ್ಮ ಹೊರತು ಶಬ್ದದಲ್ಲಿರುವ ಧರ್ಮವಲ್ಲ. ಜಿಜ್ಞಾಸೆಗೆ ವಿಷಯವಾದ ಪದಾರ್ಥವನ್ನು ಪ್ರತಿಪಾದನೆ ಮಾಡುವ ಪದಗಳಲ್ಲಿ ಆಕಾಂಕ್ಷೆ ಇದೆ ಎಂದು ಗೌಣವಾಗಿ ವ್ಯವಹರಿಸುತ್ತಾರೆ. ಆಕಾಂಕ್ಷೆಯು ಶಬ್ದದಲ್ಲಿರುವ ಧರ್ಮವೆಂದು ಹೇಳುವ ತಾರ್ಕಿಕರ ಅಭಿಪ್ರಾಯ ಅಸಾಧುವಾಗಿದೆಯೆಂದು ಇದರಿಂದ ಸ್ಪಷ್ಟವಾಗುತ್ತದೆ. ಈ ವಿಷಯವನ್ನು ಪ್ರಮಾಣಪದ್ಧತಿಗ್ರಂಥದಲ್ಲಿ ತಿಳಿಸಿದ್ದಾರೆ. ಆದ್ದರಿಂದ

ಜಿಜ್ಞಾಸಾವಿಷಯೀಭೂತಪದಾರ್ಥಪ್ರತಿಪತ್ತಿಜನಕತ್ವವು ಪದಗಳಲ್ಲಿರುವ ಆಕಾಂಕ್ಷೆ ಎಂದು ತಿಳಿಯಬೇಕು. ಇಲ್ಲಿರುವ ಜನಕತ್ವಂ ಎಂಬುದನ್ನು ಫಲೋಪಧಾನರೂಪವಾಗಿ ವಿವಕ್ಷಿಸ-ಬಾರದು.

ಪೂರ್ವಪದಸಂಜಾತಜಿಜ್ಞಾಸಾವಿಷಯೀಭೂತಪದಾರ್ಥವಿಷಯಪ್ರತಿಪತ್ತಿಜನಕತ್ವವು ಉತ್ತರಪದದಲ್ಲಿರಬೇಕೆಂದು ಪ್ರಮಾಣಪದ್ಧತಿಯಲ್ಲಿ ಹೇಳಿದ್ದಾರೆ. ಇಲ್ಲಿರುವ ಪ್ರತಿಪತ್ತಿ-ಜನಕತ್ವವು ನಿಯಮೇನ ಉತ್ತರಪದದಲ್ಲಿ ಇರಲೇಬೇಕೆಂದು ಆಗ್ರಹ ಮಾಡಬಾರದು. ಆ ಪ್ರತಿಪತ್ತಿಯನ್ನು ಹುಟ್ಟಿಸುವ ಯೋಗ್ಯತೆ ಇದ್ದರೆ ಸಾಕು. ಕೆಲವೊಮ್ಮೆ ಪ್ರತಿಪತ್ತಿ ಹುಟ್ಟಿಸುವ ಯೋಗ್ಯತೆ ಇದ್ದರೂ ಕೂಡ ಪ್ರತಿಪತ್ತಿ ಹುಟ್ಟದಿದ್ದರೆ ಅಂತಹ ಸಂದರ್ಭದಲ್ಲಿ ದೋಷವನ್ನು ಆರೋಪ ಮಾಡಬಾರದು. ಆದ್ದರಿಂದ ಪ್ರಮಾಣಪದ್ಧತಿಯಲ್ಲಿ ಹೇಳಿದ್ದನ್ನು ಸ್ವರೂಪ-ಯೋಗ್ಯತಾಭಿಪ್ರಾಯದಿಂದ ವಿವಕ್ಷಿಸಬೇಕೆಂದು ಗ್ರಂಥಕಾರರು ಮುಂದೆ ಸಮರ್ಥಿಸು-ವವರಿದ್ದಾರೆ. ಅದನ್ನು ಹೇಳುವ ಮೊದಲು ಪ್ರೌಢಿವಾದದಿಂದ, 'ಯಸ್ಯ ಪದಸ್ಯ' ಎಂಬು-ದಾಗಿ ಲಕ್ಷಣವನ್ನು ಹೇಳುತ್ತಿದ್ದಾರೆ.

ಇಲ್ಲಿ ಹೇಳಿದ ಆಕಾಂಕ್ಷೆಯ ಲಕ್ಷಣವು ಪ್ರಮಾಣಪದ್ಧತಿಯಲ್ಲಿ ಹೇಳಿರುವುದಲ್ಲ. ಉದಯನನನ್ನು ಹಾಗೂ ಮಣಿಕಾರನನ್ನು ಕುರಿತು ನೀವು ಇತರವಿರಹಪ್ರಯುಕ್ತವಾದ ಲಕ್ಷಣವನ್ನು ಹೇಳಬೇಕೆಂದು ಆಗ್ರಹಿಸುವುದಾದರೆ 'ತುಷ್ಯತು' ನ್ಯಾಯದಿಂದಷ್ಟೇ ಈ ಲಕ್ಷಣವನ್ನು ಹೇಳಿದ್ದಾರೆ. ಹೀಗೆ ಲಕ್ಷಣವನ್ನು ಹೇಳಿದಾಗ ಯಾವುದೇ ದೋಷ ಬರುವು-ದಿಲ್ಲವೆಂಬುದು ಗ್ರಂಥಕಾರರ ಅಭಿಪ್ರಾಯ. ಆದ್ದರಿಂದ ಇದು ಪ್ರೌಢಿವಾದದಿಂದ ಹೇಳಿದ ಲಕ್ಷಣವೆಂದು ತಿಳಿಯಬೇಕು.

## ಪದ್ಧತಿಗೆ ಅನುಸಾರಿಯಾಗಿ ವ್ಯಾಖ್ಯಾನಿಸಬೇಕು

**ನ್ಯಾಯದೀಪ – ಪದ್ಧತೌ 'ಪದಾನಿ' ಇತ್ಯುಕ್ತ್ವಾತ್ 'ಪದಸ್ಯ' ಇತಿ ಬಾಹುಲ್ಯಾ-ಭಿಪ್ರಾಯೇಣೋಕ್ತಮ್ । 'ಯಸ್ಯ ಶಬ್ದಸ್ಯ' ಇತ್ಯರ್ಥಃ ।**

ಅನುವಾದ– ಪ್ರಮಾಣಪದ್ಧತಿಯಲ್ಲಿ 'ಪದಾನಿ' ಎಂದು ಬಹುವಚನವನ್ನು ಪ್ರಯೋಗಿಸಿದ್ದಾರೆ. ಅದಕ್ಕನುಗುಣವಾಗಿ ಗ್ರಂಥಕಾರರು ಕೂಡ 'ಯಸ್ಯ ಪದಸ್ಯ' ಎಂಬುದಾಗಿ ಬಾಹುಲ್ಯಾಭಿಪ್ರಾಯದಿಂದ

ಪ್ರಯೋಗಿಸಿದ್ದಾರೆ. ಒಂದು ಪದಕ್ಕೆ ಇನ್ನೊಂದು ಪದದಿಂದ ಆಕಾಂಕ್ಷೆ ಇರಬಹುದು ಅಥವಾ ಹೆಚ್ಚಿನ ಪದಗಳಿಂದಲೂ ಆಕಾಂಕ್ಷೆ ಇರಬಹುದೆಂದು ಅಭಿಪ್ರಾಯ. 'ಯಸ್ಯ ಪದಸ್ಯ' ಎಂಬುದಕ್ಕೆ 'ಯಸ್ಯ ಶಬ್ದಸ್ಯ' ಎಂಬರ್ಥವನ್ನು ಹೇಳುವುದು ಹೆಚ್ಚು ಸ್ವರಸವಾಗಿದೆ.

## 'ಶಬ್ದ' ಎಂಬುದರ ಸ್ವಾರಸ್ಯ

**ನ್ಯಾಯದೀಪ – ತೇನ ಪ್ರಾತಿಪದಿಕಪ್ರತ್ಯಯೋರ್ಮಹಾವಾಕ್ಯಾವಾಂತರ-ವಾಕ್ಯಸ್ಯ ಚ ಗ್ರಹಃ । ತದಪಿ ತದುಪಸ್ಥಿತಿಪರಮ್ । 'ಯತ್ಪದ' ಇತ್ಯತ್ರಾಪಿ 'ಯಚ್ಛಬ್ದ' ಇತ್ಯರ್ಥಃ । 'ಯದ್ರೂಪ' ಇತ್ಯತ್ರ 'ಯದ್ರೂಪೋಪಸ್ಥಿತಿ' ಇತ್ಯಗ್ರೇ ವ್ಯಕ್ತಮ್ ।**

ಅನುವಾದ– 'ಶಬ್ದಸ್ಯ' ಎಂಬುದಾಗಿ ವ್ಯಾಖ್ಯಾನ ಮಾಡುವುದರಿಂದ ಪ್ರಾತಿಪದಿಕ ಹಾಗೂ ಪ್ರತ್ಯಯಗಳಿಗಿರುವ ಆಕಾಂಕ್ಷೆಯನ್ನು ಮತ್ತು ಮಹಾವಾಕ್ಯ ಹಾಗೂ ಅವಾಂತರವಾಕ್ಯಗಳಿಗಿರುವ ಆಕಾಂಕ್ಷೆಯನ್ನು ಕೂಡ ವಿವಕ್ಷಿಸಲು ಸಾಧ್ಯವಾಗುತ್ತದೆ. ಮತ್ತು ಆ ಶಬ್ದವನ್ನು ಉಪಸ್ಥಿತಿಪರವಾಗಿ ವಿವಕ್ಷಿಸಬೇಕು. 'ಯತ್ಪದ' ಎಂಬಲ್ಲಿಯೂ 'ಯಚ್ಛಬ್ದ' ಎಂದೇ ವಿವಕ್ಷಿಸಬೇಕು. 'ಯದ್ರೂಪ' ಎಂಬಲ್ಲಿ 'ಯದ್ರೂಪಉಪಸ್ಥಿತಿ' ಎಂಬುದಾಗಿ ಅರ್ಥವನ್ನು ವಿವಕ್ಷಿಸಬೇಕು ಎಂಬುದು ಮುಂದೆ ಸ್ಪಷ್ಟವಾಗುತ್ತದೆ.

ವಿವರಣೆ - ಪದ ಎಂಬುದರ ಬದಲು ಶಬ್ದ ಎಂದು ವಿವಕ್ಷಿಸಿದಾಗ ಪ್ರಾತಿಪದಿಕ ಹಾಗೂ ಪ್ರತ್ಯಯಗಳಿಗಿರುವ ಆಕಾಂಕ್ಷೆಯನ್ನು ಸಂಗ್ರಹಿಸಿದಂತಾಗುತ್ತದೆ. ಕೇವಲ ಒಂದು ಪದಕ್ಕೆ ಮತ್ತೊಂದು ಪದದಿಂದಷ್ಟೇ ಆಕಾಂಕ್ಷೆ ಇರುವುದಲ್ಲ; 'ಘಟಂ' ಎಂಬಲ್ಲಿ ಘಟ ಎಂಬ ಪದಕ್ಕೆ 'ಅಮ್' ಎಂಬ ಪ್ರತ್ಯಯಾರ್ಥದಿಂದಲೂ ಆಕಾಂಕ್ಷೆಯು ಇರುತ್ತದೆ. ಅಲ್ಲದೇ ಮಹಾವಾಕ್ಯ ಹಾಗೂ ಅವಾಂತರವಾಕ್ಯಗಳಿಗೂ ಆಕಾಂಕ್ಷೆ ಇರುತ್ತದೆ. ಅಷ್ಟೇ ಅಲ್ಲದೆ ಅವಾಂತರವಾಕ್ಯಗಳಲ್ಲಿ ಪರಸ್ಪರವಾಗಿ ಆಕಾಂಕ್ಷೆ ಇರುತ್ತದೆ. ಉದಾ - 'ಪರ್ವತಃ ವಹ್ನಿ-ಮಾನ್' ಎಂಬ ಅವಾಂತರವಾಕ್ಯಕ್ಕೂ 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬ ಒಂದು ಅವಾಂತರವಾಕ್ಯಕ್ಕೂ ಪರಸ್ಪರ ಆಕಾಂಕ್ಷೆ ಇರುತ್ತದೆ. ಇದರಂತೆ 'ಧೂಮಾತ್' ಎಂಬ ಅವಾಂತರವಾಕ್ಯಕ್ಕೂ 'ಯೋ ಯೋ ಧೂಮವಾನ್ ಸಃ ಸಃ ವಹ್ನಿಮಾನ್' ಎಂಬ

ಮತ್ತೊಂದು ಅವಾಂತರವಾಕ್ಯಕ್ಕೂ ಪರಸ್ಪರ ಆಕಾಂಕ್ಷೆ ಇದೆ. ಹೀಗೆ ಪಂಚಾವಯವಗಳಿಂದ ಘಟಿತವಾದ ಮಹಾವಾಕ್ಯಕ್ಕೂ ಆಕಾಂಕ್ಷೆ ಇರುತ್ತದೆಂದು ತಿಳಿಯಬೇಕು.

ಶಬ್ದತ್ವವು ವ್ಯಾಪಕಜಾತಿ ಆಗಿರುವುದರಿಂದ ಪ್ರಕೃತಿ, ಪ್ರತ್ಯಯ, ಪದ, ಪದಗಳ ಸಮುದಾಯ ಎಲ್ಲವನ್ನೂ ಕೂಡ ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ 'ಪದ' ಎಂಬುದರ ಬದಲು 'ಶಬ್ದ' ಎಂಬುದನ್ನು ವಿವಕ್ಷಿಸಿದರೆ ಹೆಚ್ಚು ಸ್ವರಸವಾಗುತ್ತದೆಂದಭಿಪ್ರಾಯ.

'ತದಪಿ ತದುಪಸ್ಥಿತಿಪರಂ' ಎಂದರೆ ವಿವಕ್ಷಿಸಿದ ಶಬ್ದವನ್ನು ಶಬ್ದಜ್ಞಾನಪರವಾಗಿ ಅರ್ಥೈಸಬೇಕು. 'ಯದ್ರೂಪ ಉಪಸ್ಥಿತಿ' ಎಂದು ಅರ್ಥೈಸಬೇಕು.

## ಆಕಾಂಕ್ಷಾಲಕ್ಷಣದ ಪರಿಷ್ಕಾರ

**ನ್ಯಾಯದೀಪ– ತಥಾ ಚ ಯಸ್ಯ ಶಬ್ದಸ್ಯೋಪಸ್ಥಿತಸ್ಯ ಯದನ್ವಯಾನನುಭಾವಕತ್ವಂ ಯಶ್ಚಾಸಾವನ್ವಯಶ್ಚ ಇತಿ ವಿಗ್ರಹಃ । 'ತಸ್ಮಿನ್ನನ್ವಯೇ' ಇತ್ಯಗ್ರೇ ಕಥನಾತ್ । ತಾದೃಶಾನ್ವಯಾನುಭಾವಕತ್ವಾಭಾವಃ । ಸ ಚ ಪ್ರಾಗಭಾವಃ ಉಚ್ಚಾರಣತೋ ವಾ ಅಭಿಪ್ರಾಯತೋ ವಾ ಸಹಸ್ಥಿತಯತ್ತದಸ್ಥಿತಯದ್ರೂಪೋಪಸ್ಥಿತಿವಿರಹಪ್ರಯುಕ್ತೋ ವಾ ಭವತಿ ತದ್ರೂಪಂ ಕ್ರಿಯಾಕಾರಕಪದತ್ವೈಕವಿಭಕ್ತಿಕತ್ವಾದಿಕಂ ತದ್ವತ್ತ್ವಮಿತ್ಯರ್ಥಃ ।**

ಅನುವಾದ– ಆದ್ದರಿಂದ ಗ್ರಂಥದಲ್ಲಿರುವ ಆಕಾಂಕ್ಷೆಯ ಲಕ್ಷಣವನ್ನು ಹೀಗೆ ಪರಿಷ್ಕಾರ ಮಾಡಿದಂತಾಯಿತು — ಉಪಸ್ಥಿತವಾದ ಯಾವ ಶಬ್ದಕ್ಕೆ ಯದನ್ವಯಾನುಭಾವಕತ್ವವು ಇರುವುದಿಲ್ಲವೋ ಎಂದರೆ ಶಾಬ್ದಬೋಧಾನುಭವದ ಪ್ರಾಗಭಾವವಿರುತ್ತದೋ ಎಂಬರ್ಥವನ್ನು ವಿವಕ್ಷಿಸಿದಂತಾಯಿತು. 'ಯದನ್ವಯಾನನುಭಾವಕತ್ವಂ' ಎಂಬಲ್ಲಿ 'ಯೇನ ಅನ್ವಯಃ' ಎಂದಾಗಲೀ 'ಯಸ್ಯ ಅನ್ವಯಃ' ಎಂದಾಗಲೀ ಸಮಾಸವನ್ನು ಮಾಡಬಾರದು. 'ಯಶ್ಚ ಅಸೌ ಅನ್ವಯಶ್ಚ' ಎಂಬುದಾಗಿ ಕರ್ಮಧಾರಯ ಸಮಾಸವನ್ನೇ ಮಾಡಬೇಕು. ಏಕೆಂದರೆ ಮುಂದೆ 'ತಸ್ಮಿನ್ನನ್ವಯೇ' ಎಂದು ಹೇಳುತ್ತಾರಾದ್ದರಿಂದ ಅದಕ್ಕನುಗುಣವಾಗಿ ಇಲ್ಲಿಯೂ 'ಯಶ್ಚಾಸಾವನ್ವಯಶ್ಚ' ಎಂಬುದಾಗಿ ಸಮಾಸ ಮಾಡಬೇಕು. ತಾದೃಶಾನ್ವಯಾನನುಭಾವಕತ್ವಾಭಾವವು ಎಂದರ್ಥ. 'ಯದನ್ವಯಾನನುಭಾವಕತ್ವ' ಎಂದರೆ ಅನುಭವ-

ಜನಕತ್ವಾಭಾವಃ ಎಂದರ್ಥ. ಉಚ್ಚಾರಣೆಯಿಂದ ಅಥವಾ ಅಭಿಪ್ರಾಯದಿಂದ ಸಹಸ್ಥಿತವಾದ ಯಾವ ಪದಾಂತರವಿದೆಯೋ ಅದರಲ್ಲಿರುವ ಕ್ರಿಯಾಪದತ್ವ ಅಥವಾ ಕಾರಕಪದತ್ವ ಮುಂತಾದ ಅದರ ಧರ್ಮಗಳು ತದ್‌ವಿರಹಪ್ರಯುಕ್ತವಾಗಿ ಅಲ್ಲಿ ಪ್ರಾಗಭಾವವು ಇರುತ್ತದೆ. 'ತದ್ರೂಪಂ' ಎಂದರೆ ಕ್ರಿಯಾಪದತ್ವ, ಕಾರಕಪದತ್ವ, ಏಕವಿಭಕ್ತಿಕತ್ವ ಮೊದಲಾದ ಧರ್ಮಪುರಸ್ಸರವಾಗಿ ಅನ್ವಯಾನನು-ಭಾವಕತ್ವವು ಇರುವುದೇ ಆಕಾಂಕ್ಷೆಯೆಂದು ಕರೆಸಿಕೊಳ್ಳುತ್ತದೆ.

ವಿವರಣೆ - 'ಘಟಂ' ಎಂಬ ಪದವನ್ನು ಕೇಳಿದ ಅನಂತರ 'ಆನಯ' ಎಂಬ ಪದವನ್ನು ಕೇಳಿದರೂ ಅದು ಕ್ರಿಯಾಪದ ಎಂಬ ಪರಿಜ್ಞಾನವಿಲ್ಲದಿದ್ದರೆ ಆನಯನಾನ್ವಯದ ಬೋಧವು ಬರುವುದಿಲ್ಲ. ಆದ್ದರಿಂದ ಇದು ಕ್ರಿಯಾಪದ, ಇದು ಕಾರಕಪದ ಎಂಬ ಅರಿವು ಇರಲೇಬೇಕು. ಉದಾ- 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬ ಸ್ಥಳದಲ್ಲಿ ಇದು ಕಾರಕಪದ ಇದು ಕ್ರಿಯಾಪದ ಎಂಬ ಅರಿವು ಇರುವುದಿಲ್ಲ. ಆದ್ದರಿಂದಲೇ ಶಾಬ್ದಬೋಧವು ಅಲ್ಲಿ ಹುಟ್ಟುವುದಿಲ್ಲ.

## ಸಾಕಾಂಕ್ಷಪದದ ನಿಷ್ಕೃಷ್ಟಲಕ್ಷಣ

**ನ್ಯಾಯದೀಪ – ಉಪಸ್ಥಿತಶಬ್ದಸ್ಯಾಭಿಮತಾನ್ವಯಾನನುಭಾವಕತ್ವಪ್ರಯೋಜಕ ವಿರಹಪ್ರತಿಯೋಗಿಜ್ಞಾನವಿಷಯೀಭೂತರೂಪವತ್ ಪದಾಂತರಸಮಭಿವ್ಯಾಹೃ-ತತ್ವಂ ಸಾಕಾಂಕ್ಷಮಿತಿ ಯಾವತ್ ।**

ಅನುವಾದ– ಉಪಸ್ಥಿತವಾದ ಶಬ್ದಕ್ಕೆ ಅಭಿಮತವಾದ ಯಾವ ಅನ್ವಯ ಅನನುಭಾವಕತ್ವ ಇದೆಯೋ ಅದಕ್ಕೆ ಪ್ರಯೋಜಕವಾದ ಯಾವ ವಿರಹವಿದೆಯೋ ಅದಕ್ಕೆ ಪ್ರತಿಯೋಗಿಯಾದ ಯಾವ ಜ್ಞಾನವಿದೆಯೋ ಆ ಜ್ಞಾನದಲ್ಲಿ ವಿಷಯೀಭೂತವಾದ ಯಾವ ರೂಪವಿದೆಯೋ ಆ ರೂಪವುಳ್ಳ ಪದಾಂತರಸಮಭಿ-ವ್ಯಾಹೃತವಾದದ್ದೇ ಸಾಕಾಂಕ್ಷತ್ವ ಎಂದು ಕರೆಸಿಕೊಳ್ಳುತ್ತದೆ.

ವಿವರಣೆ - 'ಉಪಸ್ಥಿತವಾದ ಶಬ್ದ' ಎಂದರೆ ಘಟಂ ಎಂಬ ಶಬ್ದ. ಈ ಶಬ್ದಕ್ಕೆ ಅಭಿಮತ-ವಾದ 'ಅನ್ವಯ' ಎಂದರೆ ಕ್ರಿಯಾಕಾರಕಭಾವದ ಅನ್ವಯ. ಈ ಅನ್ವಯದ ಅನುಭವವು ನಮಗೆ ಬಂದಿಲ್ಲ. ಏಕೆಂದರೆ, ಈ ಅನುಭವವು ಬಾರದಿರಲು ಪ್ರಯೋಜಕವಾದದ್ದು 'ಆನಯ'ಪದದ ವಿರಹ. ಇದಕ್ಕೆ ಪ್ರತಿಯೋಗಿಯಾದದ್ದು ಈ ಜ್ಞಾನದಲ್ಲಿ ವಿಷಯೀಭೂತ-

ವಾದದ್ದು ಕ್ರಿಯಾಪದತ್ವ ಎಂಬ ಧರ್ಮ. ಈ ಧರ್ಮವುಳ್ಳ ಪದಾಂತರ ಎಂದರೆ ಆನಯ ಎಂಬ ಪದ. ಇದರಿಂದ ಸಮಭಿವ್ಯಾಹೃತವಾದದ್ದು 'ಘಟಂ' ಎಂಬ ಪದ. ಸಮಭಿ-ವ್ಯಾಹೃತತ್ವ ಎಂಬುದು 'ಘಟಂ' ಎಂಬ ಪದದಲ್ಲಿದೆ. ಆದ್ದರಿಂದ 'ಘಟಂ' ಎಂಬ ಪದದಲ್ಲಿ ಸಾಕಾಂಕ್ಷತ್ವವು ಇರುತ್ತದೆಂದು ಸಮನ್ವಯವನ್ನು ತಿಳಿಯಬೇಕು.

## ಉಪಸ್ಥಿತಿಶಬ್ದಕ್ಕೆ ಅನ್ವಯಾರ್ಥ

**ನ್ಯಾಯದೀಪ – ಉಪಸ್ಥಿತಿಶಬ್ದಸ್ಯ ಅಭಿಮತಾನ್ವಯಾನುಭಾವಕತ್ವ-ಪ್ರಯೋಜಕರೂಪವದುಪಸ್ಥಿತಶಬ್ದಾಂತರಸಮಭಿವ್ಯಾಹೃತತ್ವಂ ತೇನ ಸಾಕಾಂಕ್ಷ-ತ್ವಮಿತ್ಯನ್ವಯಾರ್ಥಃ ।**

ಅನುವಾದ– ಉಪಸ್ಥಿತಿಶಬ್ದಕ್ಕೆ ಅಭಿಮತವಾದ ಅನ್ವಯಾನುಭಾವಕತ್ವಕ್ಕೆ ಪ್ರಯೋಜಕರೂಪವುಳ್ಳ ಉಪಸ್ಥಿತಶಬ್ದಾಂತರಸಮಭಿವ್ಯಾಹೃತತ್ವವುಳ್ಳ ಪದದಿಂದ ಆಕಾಂಕ್ಷೆ ಇರಬೇಕು ಎಂದು ಅನ್ವಯಾರ್ಥ ತಿಳಿಯಬೇಕು.

## ದೃಷ್ಟಾಂತದಲ್ಲಿ ಸಮನ್ವಯ

**ನ್ಯಾಯದೀಪ – ತದ್ಯಥಾ 'ಘಟಮಾನಯ' ಇತ್ಯತ್ರ ಯಸ್ಯ ಘಟಶಬ್ದಸ್ಯ ಯದನ್ವಯಾನನುಭಾವಕತ್ವಂ ಸಮಭಿವ್ಯಾಹೃತ 'ಆನಯ' ಇತಿ ಪದಗತಕ್ರಿಯಾ-ಪದತ್ವವಿರಹಪ್ರಯುಕ್ತಂ 'ಘಟಮಾನಯನಮ್' ಇತ್ಯಾದೌ ತಥಾ ದರ್ಶನಾತ್, ತಥಾ ಚ ತಸ್ಯ ಘಟಪದಸ್ಯ ತಸ್ಮಿನ್ ಆನಯನಾನ್ವಯೇ ತೇನ ಆನಯನಪದೇನ ಸಹ ತದ್ರೂಪಂ ಕ್ರಿಯಾಪದತ್ವರೂಪಮ್ ಆಕಾಂಕ್ಷಾ ।**

ಅನುವಾದ– ಉದಾ– 'ಘಟಮಾನಯ' ಎಂಬಲ್ಲಿ ಯಾವ ಘಟ ಎಂಬ ಶಬ್ದಕ್ಕೆ ಯಾವ ಒಂದು ಪದದ ಅನ್ವಯದ ಅನುಭಾವಕತ್ವ ಇಲ್ಲವೋ ಅದು ಸಮಭಿವ್ಯಾಹೃತವಾದ ಆನಯ ಎಂಬ ಪದದಲ್ಲಿರುವ ಕ್ರಿಯಾಪದತ್ವವಿರಹಪ್ರಯುಕ್ತವಾಗಿದೆ. ಉದಾ- 'ಘಟಂ ಆನಯನಂ' ಎಂದು ಹೇಳಿದರೆ ಆನಯನಂ ಎಂಬುದಿದ್ದರೂ ಅದು ಕ್ರಿಯಾಪದ ಎಂಬ ಅರಿವು ಇರುವುದಿಲ್ಲ. ಆದ್ದರಿಂದ ಆ ಘಟಪದಕ್ಕೆ ಆನಯನದ ಜೊತೆ ಅನ್ವಯ ಆಗಬೇಕಾದರೆ ಆನಯಪದದಿಂದ ಘಟಪದಕ್ಕೆ ಸಮಭಿವ್ಯಾಹಾರ ಇರಬೇಕು.

ಕಾರಕಪದತ್ವ ಎಂಬ ಧರ್ಮದ ಅನ್ವಯ ಕ್ರಿಯಾಪದಕ್ಕಿರಬೇಕು. ಕ್ರಿಯಾಪದತ್ವ ಎಂಬ ಧರ್ಮವುಳ್ಳದ್ದರ ಅನ್ವಯ ಕಾರಕಪದದಲ್ಲಿರಬೇಕು. ಇದೇ ಆಕಾಂಕ್ಷೆ ಎನಿಸಿಕೊಳ್ಳುತ್ತದೆ.

## ಕರ್ಮಕಾರಕಪದತ್ವವೇ ಆಕಾಂಕ್ಷಾ

**ನ್ಯಾಯದೀಪ– ತಥಾ 'ಆನಯ' ಇತಿ ಪದಸ್ಯ ಘಟಾನ್ವಯಾನನುಭಾವಕತ್ವಂ ಘಟಪದಗತಕರ್ಮಕಾರಕತ್ವವಿರಹಪ್ರಯುಕ್ತಮ್ । 'ಘಟಃ ಆನಯ' ಇತ್ಯಾದೌ ದರ್ಶನಾತ್ । ಏವಂ ಚ ತಸ್ಯ ಆನಯನಪದಸ್ಯ ಘಟಾನ್ವಯೇ ತೇನ ಘಟಪದೇನ ಸಹ ಕರ್ಮಕಾರಕಪದತ್ವಮೇವ ಆಕಾಂಕ್ಷಾ ಇತಿ ಧ್ಯೇಯಮ್ ।**

ಅದೇ ರೀತಿಯಾಗಿ ಆನಯ ಎಂದಷ್ಟೇ ಹೇಳಿದಾಗ ಘಟಾನ್ವಯಾನುಭಾವಕತ್ವವು ಇರುವುದಿಲ್ಲ. ಇಲ್ಲಿ ಕೇವಲ ಘಟಪದವಿರಹಪ್ರಯುಕ್ತವಾಗಿ ಅನ್ವಯಾನುಭಾವಕತ್ವ ಇರುವುದಿಲ್ಲ ಎಂದಲ್ಲ. ಘಟಪದ-ದಲ್ಲಿರುವ ಕರ್ಮಕಾರಕತ್ವಜ್ಞಾನವಿರಹಪ್ರಯುಕ್ತವಾಗಿ ಅನ್ವಯಾನನುಭಾವಕತ್ವವು ಇಲ್ಲ ಎಂದು ತಿಳಿಯಬೇಕು. ಏಕೆಂದರೆ ಘಟಃ ಆನಯ ಎಂದಷ್ಟೇ ಹೇಳಿದಾಗ ಆನಯ ಪದಕ್ಕೆ ಘಟಪದದ ಸಮಭಿವ್ಯಾಹಾರ ಇದ್ದರೂ ಕೂಡ ಕಾರಕಪದತ್ವ ಎಂಬ ಧರ್ಮಜ್ಞಾನವು ಇರುವುದಿಲ್ಲ. ಕ್ರಿಯಾಭಾವಾನ್ವಯವು ಬರಬೇಕೆಂದರೆ 'ಘಟಂ ಆನಯ' ಎಂದು ಹೇಳಬೇಕೇ ಹೊರತು 'ಘಟಃ ಆನಯ' ಎಂದು ಕರ್ತೃಕಾರಕವನ್ನು ಉಪಯೋಗಿಸಿದರೆ ಶಾಬ್ದಬೋಧವು ಬರುವುದಿಲ್ಲ. ಆದ್ದರಿಂದ ಆನಯ ಪದಕ್ಕೆ ಘಟಾನ್ವಯವನ್ನು ಹೇಳಬೇಕೆಂದರೆ ಆ ಘಟಪದದಲ್ಲಿರುವ ಕರ್ಮಕಾರಕಪದತ್ವವೇ ಜ್ಞಾತವಾಗಿ ಅವುಗಳು ಅನ್ವಯವನ್ನು ಹೊಂದಬೇಕು. ಆಗ ಮಾತ್ರ ಆಕಾಂಕ್ಷೆಯನ್ನು ಹೇಳಲು ಸಾಧ್ಯ.

## ದಲಕೃತ್ಯವಿಚಾರ

**ನ್ಯಾಯದೀಪ– ಅತ್ರ ಯಸ್ಯ ಶಬ್ದಸ್ಯ ಸಮಭಿವ್ಯಾಹೃತಯಚ್ಛಬ್ದವಿರಹ-ಪ್ರಯುಕ್ತಮ್ ಅನನುಭಾವಕತ್ವಮ್ ಇತ್ಯೇವೋಕ್ತೌ ಅಸಂಭವಃ ಸ್ಯಾತ್ । 'ಘಟ-ಮಾನಯನಮ್' ಇತ್ಯಾದೌ ಸತ್ಯಪಿ ಪದಾಂತರೇ ಅನ್ವಯಾಽನನುಭಾವಕತ್ವಸತ್ತ್ವೇನ ತಸ್ಯ ಪದಾಂತರವಿರಹಾಪ್ರಯುಕ್ತವತ್ । ಯತ್ಪದಗತಯದ್ರೂಪೇತ್ಯುಕ್ತಮ್ ।**

ಅನುವಾದ– ಆಕಾಂಕ್ಷೆಯ ಲಕ್ಷಣದಲ್ಲಿ 'ಯಸ್ಯ ಶಬ್ದಸ್ಯ ಸಮಭಿವ್ಯಾಹೃತಯಚ್ಛಬ್ದವಿರಹಪ್ರಯುಕ್ತ-

ಮನನುಭಾವಕತ್ವಂ' = 'ಯಾವ ಶಬ್ದಕ್ಕೆ ಸಮಭಿವ್ಯಾಹೃತವಾದ ಯಾವ ಶಬ್ದವಿರಹಪ್ರಯುಕ್ತವಾಗಿ ಶಾಬ್ದಬೋಧಜನಕತ್ವವು ಇರುವುದಿಲ್ಲವೋ' ಎಂದಷ್ಟೇ ಹೇಳಿದರೆ ಅಸಂಭವದೋಷ ಬರುತ್ತದೆ. 'ಘಟಂ ಆನಯನಂ' ಇತ್ಯಾದಿ ಸ್ಥಳದಲ್ಲಿ ಘಟಂ ಎಂಬ ಪದಕ್ಕೆ ಆನಯನರೂಪಪದಾಂತರದ ಸಮಭಿವ್ಯಾಹಾರ-ವಿದ್ದರೂ ಕೂಡ ಅನ್ವಯಾನುಭಾವಕತ್ವವು ಇರುವುದಿಲ್ಲ. ಇದು ಪದಾಂತರವಿರಹಪ್ರಯುಕ್ತವಾಗಲ್ಲ. ಆದ್ದರಿಂದ ಯಚ್ಛಬ್ದವಿರಹಪ್ರಯುಕ್ತವಾದ ಅನನುಭಾವಕತ್ವ ಎಂಬ ಆಕಾಂಕ್ಷೆಯ ಲಕ್ಷಣ ಬರುವುದಿಲ್ಲ-ವೆಂದು ಅಸಂಭವದೋಷ ಪ್ರಾಪ್ತವಾಗುತ್ತದೆ. ಇದಕ್ಕಾಗಿ 'ಯತ್ಪದಗತಯದ್ರೂಪ' ಇತ್ಯಾದಿಯಾಗಿ ಹೇಳಿದ್ದಾರೆ. ಕೇವಲ ಪದಾಂತರವಿರಹಪ್ರಯುಕ್ತವಾಗಿ ಶಾಬ್ದಬೋಧಜನಕತ್ವ ಇರುವುದಿಲ್ಲ ಎಂದಲ್ಲ; ಪದಾಂತರದಲ್ಲಿರುವ ಕ್ರಿಯಾಪದತ್ವ ಎಂಬ ಧರ್ಮದ ಅಜ್ಞಾನಮೂಲಕವಾಗಿ ಶಾಬ್ದಬೋಧಜನಕತ್ವವು ಬರುತ್ತಿಲ್ಲ. ಇದನ್ನು ತಿಳಿಸುವುದಕ್ಕಾಗಿ ಧರ್ಮವಾಚಕವಾದ ರೂಪ ಎಂಬ ಪದವನ್ನು ಲಕ್ಷಣದಲ್ಲಿ ಸೇರಿಸಬೇಕು.

## ಅವ್ಯಾಪ್ತಿಪರಿಹಾರಕ್ಕಾಗಿ ಸಮಭಿವ್ಯಾಹಾರಪದ

**ನ್ಯಾಯದೀಪ – 'ಘಟೋ ಭವತಿ' ಇತ್ಯತ್ರ ಅನುಚ್ಚಾರಿತೇನಾಪಿ ಸಮಾನ-ವಿಭಕ್ತಿಕೇನ 'ರಕ್ತಃ' ಇತಿ ಪದೇನ ಘಟಪದಸ್ಯ ನಿರಾಕಾಂಕ್ಷತ್ವೈವ ಇತಿ ಪಕ್ಷೇ ರಾಗಾ-ನ್ವಯಾನನುಭಾವಕತಾಪ್ರಯೋಜಕವಿರಹಪ್ರತಿಯೋಗಿತಾಜ್ಞಾನವಿಷಯರೂಪಸ್ಯ ಸಮಾನವಿಭಕ್ತಿಕತ್ವಸ್ಯ ಸತ್ತ್ವಾತ್ ಅತಿವ್ಯಾಪ್ತಿನಿರಾಸಾಯ 'ಸಮಭಿವ್ಯಾಹೃತೇ'ತ್ಯುಕ್ತಿಃ ।**

ಅನುವಾದ– 'ಘಟೋ ಭವತಿ' ಎಂಬಲ್ಲಿ ಉಚ್ಚಾರಮಾಡಲ್ಪಟ್ಟ ಘಟಪದಕ್ಕೂ ಉಚ್ಚಾರ ಮಾಡದೇ ಇರುವ ರಕ್ತಪದಕ್ಕೂ ಆಕಾಂಕ್ಷೆ ಇಲ್ಲ ಎಂಬ ಪಕ್ಷದಲ್ಲಿ ಆಕಾಂಕ್ಷೆಯ ಲಕ್ಷಣಕ್ಕೆ ಅತಿವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ. ವಾಸ್ತವಿಕವಾಗಿ ಇಲ್ಲಿ ಆಕಾಂಕ್ಷೆಯು ಇರುವುದಿಲ್ಲ. ಆದರೆ ಆಕಾಂಕ್ಷೆಯ ಲಕ್ಷಣ ಬರುತ್ತಿದೆ. ಏಕೆಂದರೆ, ಏತತ್ ಪದಕ್ಕೆ ತತ್ ಪದದ ಜೊತೆ ಯಾವ ಅನ್ವಯಾನುಭವ ಬರಬೇಕೋ ಆ ಅನ್ವಯಾನುಭವವು ಯಾವ ಶಬ್ದದ ಉಪಸ್ಥಿತಿ ಇಲ್ಲದಿದ್ದರೆ ಆಗುವುದಿಲ್ಲವೋ ಅದು ಆಕಾಂಕ್ಷೆ ಎಂದು ಹೇಳುವುದಾದರೆ ಈ ಆಕಾಂಕ್ಷೆಯ ಲಕ್ಷಣ ಪ್ರಕೃತದಲ್ಲಿ ಬರುತ್ತಿದೆ.

ರಕ್ತಪದವನ್ನು ಉಚ್ಚಾರ ಮಾಡದೇ ಇರುವ ಸಂದರ್ಭದಲ್ಲಿ ರಕ್ತ ಎಂಬ ಪದದ ಅರ್ಥವೆನಿಸಿದ ರಾಗದ ಅನ್ವಯಾನುಭವವು ಘಟದಲ್ಲಿ ಬರುವುದಿಲ್ಲ. ಈ ಅನ್ವಯಬೋಧದ ಅಭಾವಕ್ಕೆ

ಪ್ರಯೋಜಕವಾದದ್ದು ರಕ್ತ ಎಂಬ ಪದದ ಉಚ್ಚಾರಣೆ. ತದಭಾವಪ್ರಯುಕ್ತವಾಗಿ ಅದರ ಉಪಸ್ಥಿತಿ-ಯಾಗಲಿಲ್ಲ. ಆದ್ದರಿಂದ ಅಭೇದಾನ್ವಯಕ್ಕೆ ಪ್ರಯೋಜಕವಾದ ಸಮಾನವಿಭಕ್ತಿಕತ್ವವು ಉಪಸ್ಥಿತವಾಗಲಿಲ್ಲ. ಅಭೇದಾನ್ವಯಕ್ಕೆ ಅನುಕೂಲವಾದ ಸಮಾನವಿಭಕ್ತಿಕತ್ವ ಇಲ್ಲದ ಪ್ರಯುಕ್ತವಾಗಿ ಘಟಕ್ಕೆ ರಕ್ತಾ-ನ್ವಯಾಭೇದಾನುಭವವು ಆಗಲಿಲ್ಲ. ಅರ್ಥಾತ್ ರಾಗಾನ್ವಯವು ಘಟದಲ್ಲಿ ಆಗಲಿಲ್ಲ. ಆದ್ದರಿಂದ ಯಸ್ಯ ಪದಸ್ಯ ಎಂದರೆ ಘಟ ಎಂಬ ಪದಕ್ಕೆ ಯದನ್ವಯಾನನುಭಾವಕತ್ವಂ = ರಕ್ತಾಭೇದಾನ್ವಯಾನ-ನುಭಾವಕತ್ವವು; ಯತ್ಪದಗತ ಎಂದರೆ ರಕ್ತಪದದಲ್ಲಿರುವ ಧರ್ಮ ಎಂದರೆ ಸಮಾನವಿಭಕ್ತಿಕತ್ವ ಎಂಬ ಧರ್ಮ; ತದ್ವಿರಹಪ್ರಯುಕ್ತವಾಗಿ ಘಟ ಎಂಬ ಪದದಲ್ಲಿ ರಕ್ತಾಭೇದಾನ್ವಯಬೋಧವು ಬರುವುದಿಲ್ಲ. ಹೀಗೆ ಆಕಾಂಕ್ಷೆಯ ಲಕ್ಷಣವು ಬರುವುದರಿಂದ ಅತಿವ್ಯಾಪ್ತಿದೋಷವು ಬರುತ್ತದೆ.

ಈ ಅತಿವ್ಯಾಪ್ತಿದೋಷವನ್ನು ಪರಿಹರಿಸುವುದಕ್ಕಾಗಿ 'ಸಮಭಿವ್ಯಾಹೃತಯತ್ಪದಗತ' ಎಂಬುದಾಗಿ ಹೇಳಿದ್ದಾರೆ. 'ಸಮಭಿವ್ಯಾಹೃತ' ಎಂಬುದಕ್ಕೆ ಉಚ್ಚಾರಣದಲ್ಲಿ ಅಥವಾ ಅಭಿಪ್ರಾಯದಲ್ಲಿ ಯಾವುದರಿಂದ ಅನ್ವಯ ಹೇಳುತ್ತೇವೋ ತದ್ವಾಚಕವಾದ ಪದವು ವಿವಕ್ಷಿತವಾಗಿರಬೇಕು ಎಂದರ್ಥ. ರಕ್ತಪದವು ಸಮಭಿವ್ಯಾಹೃತ ಆಗದ ಕಾರಣ ಲಕ್ಷಣವು ಬರುವುದಿಲ್ಲ. ಆದ್ದರಿಂದ ಅತಿವ್ಯಾಪ್ತಿದೋಷಕ್ಕೆ ಅವಕಾಶ-ವಿಲ್ಲ.

> ವಿವರಣೆ - ಉತ್ಥಿತಾಕಾಂಕ್ಷೆ ಹಾಗೂ ಉತ್ಥಾಪ್ಯ ಆಕಾಂಕ್ಷೆ ಎಂಬುದಾಗಿ ಆಕಾಂಕ್ಷೆಯು ಎರಡು ವಿಧ; 'ಘಟೋ ಭವತಿ' ಎಂಬಲ್ಲಿ ಉತ್ಥಿತ ಆಕಾಂಕ್ಷೆ ಇರುತ್ತದೆ; 'ರಕ್ತೋ ಘಟೋ ಭವತಿ' ಎಂಬಲ್ಲಿ ಉತ್ಥಾಪ್ಯ ಆಕಾಂಕ್ಷೆ ಇರುತ್ತದೆ. ಇಲ್ಲಿಯೂ ಕೂಡ ಎರಡು ಮತವಿದೆ. ರಕ್ತಪದಕ್ಕೂ ಘಟಪದಕ್ಕೂ ಆಕಾಂಕ್ಷೆ ಇದೆಯೆಂದು ಒಂದು ಮತ; ಆಕಾಂಕ್ಷೆ ಇಲ್ಲವೆಂದು ಮತ್ತೊಂದು ಮತ. ಆಕಾಂಕ್ಷೆಇಲ್ಲವೆಂಬ ಮತದಲ್ಲಿ ಅನ್ವಯಬೋಧವು ಬಂದೇ ಬರುತ್ತದೆ. ಘಟವು ಇದೆ ಎಂದಷ್ಟೇ ವಾಕ್ಯಪ್ರಯೋಗ ಮಾಡಿದಾಗ ಆಕಾಂಕ್ಷೆಯು ಶಾಂತ-ವಾಗುತ್ತಿರುವಾಗ ರಕ್ತಪದದ ಜೊತೆ ಆಕಾಂಕ್ಷೆ ಇರುವುದಿಲ್ಲ. ಆದರೆ ಆಕಾಂಕ್ಷೆಯ ಲಕ್ಷಣ ಇಲ್ಲಿಯೂ ಬರುತ್ತಿದೆ.
>
> ಏಕೆಂದರೆ ರಕ್ತಪದಾರ್ಥಕ್ಕೂ ಘಟಪದಾರ್ಥಕ್ಕೂ ಅಭೇದಾನ್ವಯ ಇರುತ್ತದೆ. ಅಭೇದಾ-ನ್ವಯಕ್ಕೆ ಪ್ರಯೋಜಕವಾದ ಸಮಾನವಿಭಕ್ತಿಯು ಇಲ್ಲಿರುತ್ತದೆ. 'ಘಟೋ ಭವತಿ' ಎಂದಷ್ಟೇ ಹೇಳಿ ರಕ್ತಪದವನ್ನು ಉಚ್ಚಾರಣೆ ಮಾಡದಿದ್ದರೂ ಆಕಾಂಕ್ಷೆ ಇಲ್ಲದಿದ್ದರೂ

ಆಕಾಂಕ್ಷೆಯ ಲಕ್ಷಣ ಬರುತ್ತದೆ. ಏಕೆಂದರೆ ರಕ್ತಪದವನ್ನು ಉಚ್ಚಾರಣೆ ಮಾಡಿಲ್ಲ ಮತ್ತು ಅದರ ಉಪಸ್ಥಿತಿಯೂ ಕೂಡ ಬಂದಿರುವುದಿಲ್ಲ. ಆದ್ದರಿಂದ ಅಭೇದಾನ್ವಯದ ಅನುಭವವು ಕೂಡ ಬಂದಿರುವುದಿಲ್ಲ. ಪದದ ಉಪಸ್ಥಿತಿ ಇಲ್ಲದ ಕಾರಣ ಪದದಲ್ಲಿರುವ ಸಮಾನವಿಭಕ್ತಿಕತ್ವ ಎಂಬ ಧರ್ಮದ ಉಪಸ್ಥಿತಿಯೂ ಕೂಡ ಬಂದಿರುವುದಿಲ್ಲ. ಆದ್ದರಿಂದ 'ಘಟಃ' ಎಂಬ ಪದವು ರಕ್ತಪದಾರ್ಥದ ಜೊತೆ ಅಭೇದಾನ್ವಯಾನುಭವಕ ಆಗಲಿಲ್ಲ. ಹೀಗಿರುವಾಗ 'ಘಟೋ ಭವತಿ' ಎಂದು ಉಚ್ಚಾರ ಮಾಡಿದ ಮೇಲೆ ರಕ್ತಪದವನ್ನು ಉಚ್ಚಾರ ಮಾಡಿದ ಸಂದರ್ಭದಲ್ಲಿ ಅಭೇದಾನ್ವಯ ಬರುತ್ತದೆ. ಆಗ ಅಭೇದಾನ್ವಯದ ಬೋಧವು ಬರುತ್ತದೆ. ಇಂತಹ ಸಂದರ್ಭದಲ್ಲಿ ಆಕಾಂಕ್ಷೆಯ ಲಕ್ಷಣವು ಬರಬಾರದೆಂದು ತಿಳಿಸಲು ಸಮಭಿವ್ಯಾಹೃತಪದವನ್ನು ವಿವಕ್ಷಿಸಬೇಕು. ಮೊದಲು 'ರಕ್ತಃ' ಎಂಬ ಪದವನ್ನು ಉಚ್ಚಾರ ಮಾಡದೇ ಇರುವುದರಿಂದ ಘಟಪದವು ರಕ್ತಪದದಿಂದ ಸಮಭಿವ್ಯಾಹೃತವಾಗಿದೆ ಎಂದು ಹೇಳಲು ಸಾಧ್ಯವಿಲ್ಲ.

ರಕ್ತಪದ ಉಚ್ಚಾರಮಾಡದೇ ಇದ್ದರೂ ರಕ್ತಪದಕ್ಕೂ ಘಟಪದಕ್ಕೂ ಆಕಾಂಕ್ಷೆ ಇದೆ ಎಂಬುದು ಮತ್ತೊಂದು ಮತ. ಈ ಮತದ ಪ್ರಕಾರ ಲಕ್ಷಣ ಬರುವುದು ದೋಷವಲ್ಲ. ಅಂತಹ ಸಂದರ್ಭದಲ್ಲಿ ಸಮಭಿವ್ಯಾಹೃತ ಎಂಬ ವಿಶೇಷಣವು ಅನಾವಶ್ಯಕ.

## 'ಸಮಭಿವ್ಯಾಹೃತ'ಪದವು ಮತಾಂತರದಲ್ಲಿ ಬೇಡ

**ನ್ಯಾಯದೀಪ – 'ಸಾಕಾಂಕ್ಷತಾ ತಯೋರಪ್ಯಸ್ತಿ' ಇತಿ ಮತೇ ತು 'ಯತ್ಪದ-ಗತೇ'ತ್ಯಾದ್ಯೇವ । 'ಸಮಭಿವ್ಯಾಹೃತಪದಮನಾದೇಯಮ್' ಇತ್ಯಗ್ರೇ ವ್ಯಕ್ತಮ್ ।**

ಅನುವಾದ– ಉಚ್ಚಾರಣೆ ಮಾಡಿದ ಪದಕ್ಕೂ ಉಚ್ಚಾರಣೆ ಮಾಡದ ಪದಕ್ಕೂ ಆಕಾಂಕ್ಷೆಯು ಇದೆ ಎಂಬ ಪಕ್ಷದಲ್ಲಿ ಲಕ್ಷ್ಯದಲ್ಲಿ ಲಕ್ಷಣವು ಬರುವುದರಿಂದ ಸಮಭಿವ್ಯಾಹೃತ ಎಂಬ ಪದವು ಅನಾವಶ್ಯಕ ಆಗಿದೆ.

ಈ ಪಕ್ಷದಲ್ಲಿ 'ಯಸ್ಯ ಪದಸ್ಯ ಯದನ್ವಯಾನನುಭಾವಕತ್ವಂ ಯತ್ಪದಗತಯದ್ರೂಪವಿರಹ-ಪ್ರಯುಕ್ತಂ ತಸ್ಯ ಪದಸ್ಯ ತಸ್ಮಿನ್ನನ್ವಯೇ ತೇನ ಪದೇನ ಸಹ ತದ್ರೂಪಮಾಕಾಂಕ್ಷಾ' ಎಂದಷ್ಟೇ ಆಕಾಂಕ್ಷೆಯ ಲಕ್ಷಣ. ಈ ವಿಷಯವನ್ನು ಮುಂದೆ ಮತ್ತಷ್ಟು ಸ್ಪಷ್ಟಪಡಿಸಲಾಗುತ್ತದೆ.

## ನಿರಾಕಾಂಕ್ಷವಾದಾಗ ಅತಿವ್ಯಾಪ್ತಿ, ಸಾಕಾಂಕ್ಷಾವಾದಾಗ ಅವ್ಯಾಪ್ತಿ

**ನ್ಯಾಯದೀಪ – ಯದನ್ವಯಃ ಇತ್ಯುಕ್ತಿಸ್ತು 'ಘಟಃ ಕರ್ಮತ್ವಮ್, ಆನಯನಂ ಕೃತಿಃ' ಇತಿ ವಾಕ್ಯೇ ಕ್ರಿಯಾಕರ್ಮಭಾವಾನ್ವಯೇ ನಿರಾಕಾಂಕ್ಷೇऽಭೇದಾನ್ವಯೇ ಚ ಸಾಕಾಂಕ್ಷೇऽತಿವ್ಯಾಪ್ತ್ಯವ್ಯಾಪ್ತ್ಯೋರ್ನಿರಾಸಾಯ ಅಗ್ರೇ ವ್ಯಕ್ತಮ್ ।**

ಅನುವಾದ– 'ಘಟಃ ಕರ್ಮತ್ವಂ, ಆನಯನಂ ಕೃತಿಃ' ಎಂಬ ವಾಕ್ಯವು ಕ್ರಿಯಾಕರ್ಮಭಾವದ ಅನ್ವಯವನ್ನು ವಿವಕ್ಷಿಸಿದಾಗ ನಿರಾಕಾಂಕ್ಷವಾಗುತ್ತದೆ. ಅಭೇದಾನ್ವಯವನ್ನು ವಿವಕ್ಷಿಸಿದಾಗ ಸಾಕಾಂಕ್ಷವಾಗುತ್ತದೆ. ನಿರಾಕಾಂಕ್ಷವಾದಾಗ ಅತಿವ್ಯಾಪ್ತಿದೋಷವೂ, ಸಾಕಾಂಕ್ಷವಾದಾಗ ಅವ್ಯಾಪ್ತಿದೋಷವು ಬರುವುದರಿಂದ ಇದರ ಪರಿಹಾರಕ್ಕಾಗಿ 'ಯದನ್ವಯ' ಎಂಬ ವಿಶೇಷಣವನ್ನು ಲಕ್ಷಣದಲ್ಲಿ ಹೇಳಿದ್ದು ಸ್ಪಷ್ಟವಾಗಿದೆ.

ವಿವರಣೆ - 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬ ವಾಕ್ಯದಲ್ಲಿ ಯೋಗ್ಯತಾ ಇಲ್ಲ ಎಂಬುದು ಸತ್ಯ. ಆದರೆ ಸಮಾನವಿಭಕ್ತಿ ಇರುವುದರಿಂದ ಅಭೇದವನ್ನು ವಿವಕ್ಷಿಸಿದಾಗ ಆಕಾಂಕ್ಷೆಯನ್ನು ವಿವಕ್ಷಿಸಬಹುದು. ಅಭೇದಾನ್ವಯವನ್ನು ಬೋಧನೆ ಮಾಡುವ ಸಾಮರ್ಥ್ಯವಿರುವ ಕಾರಣ ಇದೂ ಕೂಡ ಸಾಕಾಂಕ್ಷವೇ ಆಗುತ್ತದೆ. ಆದರೆ ಕ್ರಿಯಾಕಾರಕ ಭಾವದ ಅನ್ವಯವನ್ನು ವಿವಕ್ಷಿಸಿದಾಗ ಆಕಾಂಕ್ಷೆಯು ಇರುವುದಿಲ್ಲ. 'ಘಟಕರ್ಮಕ ಆನಯನಂ' ಎಂಬ ಕ್ರಿಯಾಕಾರಕಭಾವಾನ್ವಯದಲ್ಲಿ ಈ ವಾಕ್ಯವು ಸಾಕಾಂಕ್ಷೆಯಾಗಿಲ್ಲ. ಈ ಪಕ್ಷದಲ್ಲಿ ಇದು ವಾಕ್ಯಾಭಾಸವೇ ಆಗುತ್ತದೆ. ಕ್ರಿಯಾಕಾರಕಭಾವಾನ್ವಯವನ್ನು ಈ ವಾಕ್ಯದಲ್ಲಿ ವಿವಕ್ಷಿಸಿದಾಗ ಅತಿವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ.

ಹೀಗೆ ಒಂದೇ ಸ್ಥಳದಲ್ಲಿ ವಿವಕ್ಷಾಭೇದದಿಂದ ಅತಿವ್ಯಾಪ್ತಿ ಹಾಗೂ ಅವ್ಯಾಪ್ತಿದೋಷವನ್ನು ಪರಿಹರಿಸುವುದಕ್ಕಾಗಿ ಗ್ರಂಥಕಾರರು 'ಯದನ್ವಯ' ಎಂಬ ವಿಶೇಷಣವನ್ನುನೀಡಿದ್ದಾರೆ. ಯಾವ ಶಬ್ದವು ಯಾವ ರೀತಿಯಾದ ಅನ್ವಯಬೋಧಕ್ಕೆ ಪ್ರಯೋಜಕವಾದ ಧರ್ಮವುಳ್ಳ ಪದಾಂತರದಿಂದ ಸಮಭಿವ್ಯಾಹೃತವಾಗಿರುತ್ತದೋ ಆ ಪದವು ಅದಕ್ಕೆ ಉಪಯುಕ್ತವಾದ ಅನ್ವಯವಿಶೇಷದಲ್ಲಿ ಸಾಕಾಂಕ್ಷವಾಗುತ್ತದೆ. ಇತರವಿಷಯದಲ್ಲಿ ಸಾಕಾಂಕ್ಷವಾಗುವ ಅವಶ್ಯಕತೆ ಇರುವುದಿಲ್ಲ.

## ಕ್ರಿಯಾಪದತ್ವ ಕಾರಕಪದತ್ವಗಳೇ ಆಕಾಂಕ್ಷೆಗಳು

**ತರ್ಕತಾಂಡವ– ತಚ್ಚ ರೂಪಂ ಕ್ರಿಯಾಕಾರಕಾಭಾವಾನ್ವಯೇ ಕ್ರಿಯಾಪದತ್ವಾದಿಕಮ್ । ಸಂಬಂಧರೂಪಾನ್ವಯೇ ಷಷ್ಠ್ಯಂತತ್ವಾದಿಕಮ್ ।**

ಅನುವಾದ– ಹೀಗೆ ಧರ್ಮವನ್ನೇ ಆಕಾಂಕ್ಷೆಯೆಂದು ಕರೆಯಬೇಕು. ಈ ಧರ್ಮವು ಕ್ರಿಯಾಕಾರಕ ಭಾವಾನ್ವಯದಲ್ಲಿ ಕ್ರಿಯಾಪದತ್ವವಾಗುತ್ತದೆ. ಸಂಬಂಧರೂಪವಾದ ಅನ್ವಯ ಮಾಡಬೇಕೆಂದರೆ ಷಷ್ಠ್ಯಂತತ್ವವಾಗುತ್ತದೆ.

ವಿವರಣೆ - ಉದಯನ ಹೇಳಿದಂತೆ ಅಥವಾ ಮಣಿಕಾರ ಹೇಳಿದಂತೆ ಅನ್ವಯಾನುಭವದ ಪ್ರಾಗಭಾವವು ಆಕಾಂಕ್ಷೆಯಲ್ಲ. ಆ ಪ್ರಾಗಭಾವವು ಯಾವ ಧರ್ಮಪ್ರಯುಕ್ತವಾಗಿದೆಯೋ ಆ ಧರ್ಮವನ್ನೇ ಆಕಾಂಕ್ಷೆಯೆಂದು ತಿಳಿಯಬೇಕು. ಕ್ರಿಯಾಕಾರಕಭಾವವೆಂಬ ಅನ್ವಯವನ್ನು ತಿಳಿಯಬೇಕಾದರೆ ಕ್ರಿಯಾಪದತ್ವ ಹಾಗೂ ಕಾರಕಪದತ್ವವೆಂಬ ಧರ್ಮಗಳು ಆಕಾಂಕ್ಷೆಯೆಂದು ಕರೆಸಿಕೊಳ್ಳುತ್ತವೆ.

'ರಾಜ್ಞಃ ಪುರುಷಃ' ಎಂಬಲ್ಲಿ ಕ್ರಿಯಾಕಾರಕಭಾವಾನ್ವಯವು ಬರುವುದಿಲ್ಲ. ಸ್ವಾಮಿಭೃತ್ಯಭಾವ ಎಂಬ ಸಂಬಂಧದ ಜ್ಞಾನವು ಬರುತ್ತದೆ. ಇದಕ್ಕೆ ಪ್ರಯೋಜಕವಾದದ್ದು ಷಷ್ಠ್ಯಂತತ್ವಾದಿಗಳು. ರಾಜಪದವು ಷಷ್ಠ್ಯಂತವಾಗಿರಬೇಕು. ಪುರುಷಪದವು ಷಷ್ಠ್ಯಂತಕ್ಕಿಂತ ಭಿನ್ನವಾಗಿರಬೇಕು. ಷಷ್ಠ್ಯೇತರವಿಭಕ್ತ್ಯಂತತ್ವ ಎಂದರ್ಥ. ಹೀಗೆ ಬೇರೆ ಧರ್ಮಗಳೂ ಸಹ ಆಕಾಂಕ್ಷೆ ಎಂದು ಕರೆಸಿಕೊಳ್ಳುತ್ತದೆ.

**ನ್ಯಾಯದೀಪ – ಕುತ್ರ ಕಿಂ ರೂಪಮ್? ಇತ್ಯತಃ ತದ್ದರ್ಶಯತಿ – ತಚ್ಚೇತಿ ॥ 'ಆದಿ'ಪದೇನ ಕಾರಕಪದತ್ವಗ್ರಹಃ । 'ರಾಜ್ಞಃ ಪುರುಷಃ' ಇತ್ಯಾದಾವಾಹ – ಸಂಬಂಧೇತಿ ॥ 'ಪ್ರಥಮಾಂತತ್ವಮ್' ಆದಿಪದಾರ್ಥಃ ।**

ಅನುವಾದ– ಆಕಾಂಕ್ಷೆಯಿಂದ ಅನ್ವಯಬೋಧ ಬರಲು ಎಲ್ಲಿ ಯಾವ ಧರ್ಮವು ಬೇಕು? ಎಂಬ ಪ್ರಶ್ನೆಗೆ ''ತಚ್ಚ'' ಎಂಬ ವಾಕ್ಯದಿಂದ ದೃಷ್ಟಾಂತಮೂಲಕವಾಗಿ ಸಮರ್ಥಿಸುತ್ತಿದ್ದಾರೆ. 'ಕ್ರಿಯಾಪದತ್ವಾದಿಕಂ' ಎಂಬಲ್ಲಿರುವ ಆದಿಪದದಿಂದ ಕಾರಕಪದತ್ವವನ್ನು ಸಂಗ್ರಹಿಸಬೇಕು. 'ರಾಜ್ಞಃ ಪುರುಷಃ' ಎಂಬ ಸ್ಥಳದಲ್ಲಿ

ಹೇಗೆ ವಿವಕ್ಷಿಸಬೇಕೆಂಬುದನ್ನು ಸಂಬಂಧರೂಪ ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. 'ರಾಜ್ಞಃ' ಎಂಬ ಪದವು ಷಷ್ಠ್ಯಂತವಾಗಿದೆ. ಮತ್ತೊಂದುಪದವು ಪ್ರಥಮಾಂತವಾಗಿದೆ. ಈ ಪ್ರಥಮಾಂತತ್ವವನ್ನು ಆದಿ-ಪದದ ಅರ್ಥವೆಂದು ತಿಳಿಯಬೇಕು.

ವಿವರಣೆ - 'ರಾಜ್ಞಃ ಪುರುಷಃ' ಎಂಬಲ್ಲಿ ಒಂದುಪದವು ಷಷ್ಠ್ಯಂತವಾಗಿ ಇರಬೇಕು. ಮತ್ತೊಂದು ಪದವು ಪ್ರಥಮಾಂತವಾಗಿರಬೇಕೆಂಬ ನಿಯಮವಿಲ್ಲ. ಷಷ್ಠಿವಿಭಕ್ತಿಗಿಂತ ಭಿನ್ನವಾದ ವಿಭಕ್ತಿ ಇರಬೇಕೆಂದಷ್ಟೇ ಅಭಿಪ್ರಾಯ.

## ಆಕಾಂಕ್ಷೆಯು ವೈವಕ್ಷಿಕ

**ತರ್ಕತಾಣ್ಡವಮ್– अभेदान्वये समानविभक्तिकत्वम् । प्रकृतिप्रत्यया-र्थयोरन्वये प्रकृतित्वादिकम् ।।**

ಅನುವಾದ– ಅಭೇದಾನ್ವಯದಲ್ಲಿ ಸಮಾನವಿಭಕ್ತಿಕತ್ವವು ಆಕಾಂಕ್ಷೆಯೆನಿಸುತ್ತದೆ. ಪ್ರಕೃತಿ ಮತ್ತು ಪ್ರತ್ಯಯಾರ್ಥಗಳ ಅನ್ವಯದಲ್ಲಿ ಪ್ರಕೃತಿತ್ವಾದಿಗಳು ಆಕಾಂಕ್ಷೆಯೆಂದು ಕರೆಸಿಕೊಳ್ಳುತ್ತವೆ.

ವಿವರಣೆ - 'ನೀಲಮ್ ಉತ್ಪಲಂ' ಎಂಬಲ್ಲಿ ನೀಲಪದಾರ್ಥಕ್ಕೂ ಉತ್ಪಲಪದಾರ್ಥಕ್ಕೂ ಅಭೇದಾನ್ವಯವಿದೆ. ಇದಕ್ಕೆ ಪ್ರಯೋಜಕವಾದದ್ದು ವಿರುದ್ಧವಿಭಕ್ತ್ಯಭಾವ. ನೀಲೋತ್ಪಲಂ ಎಂಬ ಸಮಾಸಸ್ಥಳದಲ್ಲಿಯೂ ಕೂಡ ಇದನ್ನೇ ಪ್ರಯೋಜಕಧರ್ಮವೆಂದು ತಿಳಿಯಬೇಕು ನೀಲಪದದ ಮುಂದೆ ವಿಭಕ್ತಿಯು ಲೋಪವಾಗಿದ್ದರೂ ಕೂಡ ಸ್ಮರಣೆಯಲ್ಲಿರುವುದರಿಂದ ಸಮಾನವಿಭಕ್ತಿಕತ್ವವು ಅಲ್ಲಿಯೂ ಇರುತ್ತದೆ.

ಪ್ರಕೃತ್ಯರ್ಥ ಹಾಗೂ ಪ್ರತ್ಯಯಾರ್ಥಗಳಿಗೂ ಅನ್ವಯಬೋಧವು ಆಗುತ್ತದೆ. ಇಂತಹ ಸಂದರ್ಭದಲ್ಲಿ ಪ್ರಕೃತಿತ್ವ ಹಾಗೂ ಪ್ರತ್ಯಯತ್ವಗಳನ್ನು ಆಕಾಂಕ್ಷೆ ಎಂದು ಕರೆಯಬೇಕು. 'ಘಟಂ' ಎಂಬಲ್ಲಿ ಘಟ ಎಂಬುದು ಪ್ರಕೃತಿಯಾಗಿದೆ. 'ಅಮ್' ಎಂಬುದು ಪ್ರತ್ಯಯ-ವಾಗಿದೆ. 'ಅಮ್' ಎಂಬ ಪ್ರತ್ಯಯಕ್ಕೆ ಕರ್ಮತ್ವ ಎಂದರ್ಥ. ಘಟ ಎಂಬ ಪ್ರಕೃತಿಗೆ ಘಟ ಎಂದರ್ಥ. ಇವುಗಳಿಗೆ ಆಧಾರಾಧೇಯಭಾವವೆಂಬ ಸಂಬಂಧವಿದೆ. ಇದರ ಜ್ಞಾನ ಬರ-ಬೇಕಾದರೆ ಘಟದಲ್ಲಿ ಪ್ರಕೃತಿತತ್ವವಿದೆ. ಅಮ್‌ಪದಾರ್ಥದಲ್ಲಿ ಪ್ರತ್ಯಯತ್ವವೆಂಬ ಧರ್ಮ-ವಿದೆ ಎಂಬ ಜ್ಞಾನ ಇರಬೇಕು.

## ಆಕಾಂಕ್ಷೆಯ ವೈವಿಧ್ಯಕ್ಕೆ ಉದಾಹರಣೆ

**ನ್ಯಾಯದೀಪ – 'ರಕ್ತೋ ಘಟಃ' ಇತ್ಯಾದಾವಾಹ – ಅಭೇದೇತಿ ॥ 'ಲಕ್ಷಣ-ವಾಕ್ಯೇ ಪದಗ್ರಹಣಂ ಶಬ್ದಪರಮ್' ಇತ್ಯುಪೇತ್ಯಾಹ – ಪ್ರಕೃತೀತಿ ॥ 'ಘಟಮ್' ಇತ್ಯಾದೌ ಘಟರೂಪಪ್ರಾತಿಪದಿಕಾರ್ಥದ್ವಿತೀಯಾವಿಭಕ್ತ್ಯರ್ಥಯೋರನ್ವಯ ಇತ್ಯರ್ಥಃ । 'ಆದಿ'ಪದೇನ ದ್ವಿತೀಯತ್ವಾದಿಗ್ರಹಃ ।**

ಅನುವಾದ– 'ರಕ್ತೋ ಘಟಃ' ಎಂಬಲ್ಲಿ ಹೇಗೆ ಅನ್ವಯವನ್ನು ತಿಳಿಯಬೇಕು ಎಂಬುದನ್ನು "ಅಭೇದ" ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಲಕ್ಷಣವಾಕ್ಯದಲ್ಲಿ 'ಯಸ್ಯ ಪದಸ್ಯ' ಎಂಬಲ್ಲಿ ಪದ ಎಂದು ಹೇಳಿದ್ದಾರೆ. ಇದಕ್ಕೆ ಶಬ್ದ ಎಂಬರ್ಥವನ್ನು ವಿವಕ್ಷಿಸಿ "ಪ್ರಕೃತಿಪ್ರತ್ಯಯಾರ್ಥಯೋಃ "ಎಂದು ಹೇಳಿರುತ್ತಾರೆ. 'ಘಟಂ' ಇತ್ಯಾದಿ ಸ್ಥಳದಲ್ಲಿ ಘಟವು ಪ್ರಾತಿಪದಿಕಾರ್ಥವಾಗಿದೆ. ದ್ವಿತೀಯಾವಿಭಕ್ತಿಗೆ ಕರ್ಮತ್ವ ಎಂದರ್ಥ. ಕರ್ಮತ್ವಕ್ಕೂ ಪ್ರಾತಿಪದಿಕಾರ್ಥಕ್ಕೂ ಆಧಾರಾಧೇಯಭಾವವನ್ನು ತಿಳಿಯಬೇಕು. ಈ ಆಧಾರಾಧೇಯಭಾವ ಎಂಬ ಸಂಬಂಧಕ್ಕೆ ಪ್ರಯೋಜಕವಾದದ್ದು ಪ್ರಾತಿಪದಿಕತ್ವ ಹಾಗೂ ಪ್ರತ್ಯಯತ್ವ ಎಂಬ ಧರ್ಮಗಳು. ಆದಿಪದದಿಂದ ದ್ವಿತೀಯತ್ವಾದಿಗಳನ್ನು ವಿವಕ್ಷಿಸಬೇಕು.

## ಕ್ರಿಯಾಪದವಿಲ್ಲದ ಕಾರಕಪದ ಬೋಧ ಹುಟ್ಟಿಸದು

**ತರ್ಕತಾಂಡವ – ಅತ ಏವ 'ಘಟಮಾನಯ' ಇತ್ಯತ್ರ 'ಆನಯ' ಇತಿ ಕ್ರಿಯಾಪದಂ ವಿನಾ 'ಘಟಮ್' ಇತಿ ದ್ವಿತೀಯಾಂತಂ ಕಾರಕಪದಂ ಕ್ರಿಯಾಕರ್ಮಭಾವಾನ್ವಯಾ-ನನುಭಾವಕಮಿತಿ ಕ್ರಿಯಾಕಾರಕಭಾವಾನ್ವಯೇ ತೇನ ಸಾಕಾಂಕ್ಷಮ್ ॥**

ಅನುವಾದ– ಹೀಗೆ ಆಕಾಂಕ್ಷೆಯ ಲಕ್ಷಣವನ್ನು ಪರಿಷ್ಕಾರ ಮಾಡಿರುವುದರಿಂದಲೇ 'ಘಟ-ಮಾನಯ' ಎಂಬಲ್ಲಿ ಆನಯ ಪದ ಉಚ್ಚರಿಸುವ ಮೊದಲು 'ಘಟಂ' ಎಂಬ ಪದದಲ್ಲಿ ಆಕಾಂಕ್ಷೆ ಇರುತ್ತದೆ. 'ಘಟಂ' ಎಂಬ ಪದವನ್ನು ಉಚ್ಚಾರ ಮಾಡಿದ ಮೇಲೆ ಆನಯ ಎಂಬ ಕ್ರಿಯಾಪದ ಇಲ್ಲದಿದ್ದಾಗ 'ಘಟಂ' ಎಂಬ ದ್ವಿತೀಯಾಂತವಾದ ಕಾರಕಪದವು ಕ್ರಿಯಾಕರ್ಮಭಾವವೆಂಬ ಅನ್ವಯಾನುಭವವನ್ನು ಹುಟ್ಟಿಸುವುದಿಲ್ಲ. ಇಲ್ಲಿ ಕ್ರಿಯಾಕರ್ಮಭಾವಾನ್ವಯದ ಪ್ರಾಗಭಾವವಿದೆ.

ಆದ್ದರಿಂದ ಕ್ರಿಯಾಕಾರಕಭಾವಾನ್ವಯದ ವಿಷಯದಲ್ಲಿ 'ಘಟಂ' ಎಂಬ ಪದವು 'ಆನಯ' ಎಂಬ ಪದದಿಂದ ಆಕಾಂಕ್ಷೆಯನ್ನು ಹೊಂದಿರುತ್ತದೆ.

## 'ಘಟಂ ಆನಯನಂ' ಎಂಬಲ್ಲಿ ಆಕಾಂಕ್ಷೆ ಇಲ್ಲ

**ನ್ಯಾಯದೀಪ – 'ಕ್ರಿಯಾಪದತ್ವಾದಿಕಂ ತದ್ರೂಪಮ್' ಇತ್ಯುಕ್ತಮ್; ತತ್-ಕಥಮ್? ಇತ್ಯತಃ ಕ್ವಚಿದ್ವ್ಯನಕ್ತಿ – ಅತ ಏವೇತಿ ॥ ಕ್ರಿಯಾಪದತ್ವಾದೇಃ ಇತರ-ಪದವಿರಹಪ್ರಯುಕ್ತಾನ್ವಯಾನನುಭಾವಕತಾಪ್ರಯೋಜಕತ್ವಾದೇವ ಇತ್ಯರ್ಥಃ । ಕ್ರಿಯಾಪದಂ ವಿನೇತಿ ॥ ಕ್ರಿಯಾಪದತ್ವಾಶ್ರಯಪದಂ ವಿನಾ ಆನಯನಮ್ ಇತ್ಯಾದಿಪದಪ್ರಯೋಗೇಽಪಿ ಇತ್ಯರ್ಥಃ ।**

ಅನುವಾದ– ಕ್ರಿಯಾಕಾರಕಭಾವವೆಂಬ ಅನ್ವಯವನ್ನು ತಿಳಿಯಲು ಕ್ರಿಯಾಪದತ್ವಾದಿಗಳು ಕಾರಣ-ವೆಂದು ಹೇಳಲಾಯಿತು. ಇದನ್ನು ದೃಷ್ಟಾಂತಪುರಸ್ಸರವಾಗಿ ''ಅತ ಏವ'' ಇತ್ಯಾದಿವಾಕ್ಯದಿಂದ ನಿರೂಪಣೆ ಮಾಡುತ್ತಿದ್ದಾರೆ. 'ಅತ ಏವ' ಎಂಬುದಕ್ಕೆ ಕ್ರಿಯಾಪದತ್ವ ಎಂದರೆ ಇತರಪದವಿರಹಕ್ಕೆ ಪ್ರಯೋಜಕವಾದ ಅನ್ವಯಾನುಭವವು ಬಾರದೇ ಇರಲು ಪ್ರಯೋಜಕವಾಗಿರುವುದರಿಂದಲೇ ಎಂದರ್ಥ. 'ಘಟಂ' ಎಂಬ ಪದದ ಅನಂತರ 'ಆನಯ' ಎಂದು ಹೇಳದೇ 'ಆನಯನಂ' ಎಂದು ಹೇಳಿದಾಗ ಕ್ರಿಯಾಪದತ್ವವು ಅಲ್ಲಿ ಇರುವುದಿಲ್ಲ. ಅಪೇಕ್ಷಿತವಾದ ಯಾವ ಕ್ರಿಯಾಪದವನ್ನು ಹೇಳಿದಾಗ ಆಕಾಂಕ್ಷೆಯು ಶಾಂತವಾಗುತ್ತದೋ ಅಂತಹ ಕ್ರಿಯಾಪದವು ಈ ಸ್ಥಳದಲ್ಲಿ ಇರುವುದಿಲ್ಲ. ಆದ್ದರಿಂದ 'ಘಟಂ ಆನಯನಂ' ಎಂಬಲ್ಲಿ ಆಕಾಂಕ್ಷೆಯು ಹುಟ್ಟುವುದಿಲ್ಲ. ಈ ರೀತಿಯಾಗಿ ಪದವನ್ನು ಪ್ರಯೋಗ ಮಾಡಿದರೂ ಕೂಡ ಎಂಬುದು 'ಕ್ರಿಯಾಪದಂ ವಿನಾ' ಎಂಬ ವಾಕ್ಯದ ಅಭಿಪ್ರಾಯ.

## 'ಯದನ್ವಯ' ವಿಶೇಷಕ್ಕೆ ಸಾರ್ಥಕ್ಯ

**ನ್ಯಾಯದೀಪ – ಕ್ರಿಯಾಕಾರಕಭಾವೇತಿ ॥ ಅಭೇದಾನ್ವಯೇ ತು ನಿರಾ-ಕಾಂಕ್ಷತ್ವಾತ್ ತದನುಭಾವಕತಾಪ್ರಯೋಜಕಸಮಾನವಿಭಕ್ತಿತ್ವಾಭಾವೇಽಪಿ ನ ಅವ್ಯಾಪ್ತಿಶಂಕಾ । ಅತ ಏವ ಲಕ್ಷಣೇ 'ಯದನ್ವಯ' ಇತ್ಯುಕ್ತಮಿತಿ ಭಾವಃ ॥**

ಅನುವಾದ– 'ಕ್ರಿಯಾಕಾರಕಭಾವಾನ್ವಯೇ' ಎಂಬ ಗ್ರಂಥದ ವಾಕ್ಯಕ್ಕೆ ಹೀಗೆ ಅಭಿಪ್ರಾಯ- 'ಘಟಃ ಆನಯನಂ' ಎಂಬಲ್ಲಿ ಅಭೇದಾನ್ವಯವನ್ನು ವಿವಕ್ಷಿಸಿದರೆ ಆಕಾಂಕ್ಷೆಯೇ ಇರುವುದಿಲ್ಲ. ಆದ್ದರಿಂದ ತದನುಭಾವಕತ್ವಕ್ಕೆ ಪ್ರಯೋಜಕವಾದ ಸಮಾನವಿಭಕ್ತಿಕತ್ವ ಇಲ್ಲದಿದ್ದರೂ ಕೂಡ ಅವ್ಯಾಪ್ತಿಯನ್ನು ಆಶಂಕಿಸಬಾರದು.

ಆದ್ದರಿಂದಲೇ ಲಕ್ಷಣದಲ್ಲಿ 'ಯದನ್ವಯ' ಎಂಬ ವಿಶೇಷಣವನ್ನು ನೀಡಿರುತ್ತಾರೆ.

## ಪ್ರಕೃತಿಪ್ರತ್ಯಯಗಳನ್ನು ಬಿಡಿಸಿ ಹೇಳಿದರೆ ಬೋಧ ಬರುವುದಿಲ್ಲ

**ತರ್ಕತಾಂಡವ – 'ಘಟಃ ಕರ್ಮತ್ವಮ್, ಆನಯನಂ ಕೃತಿಃ ಇಷ್ಟಸಾಧನತ್ವಮ್' ಇತ್ಯಾದೌ 'ಘಟಮಾನಯ' ಇತ್ಯನೇನ ಸಹೈಕಾರ್ಥ್ಯೇ ಸತ್ಯಪಿ ಕ್ರಿಯಾಕಾರಕ-ಪದತ್ವಾಭಾವಾನ್ನ ತದನ್ವಯೇ ಘಟ ಇತ್ಯಾದಿಪದಂ ಸಾಕಾಂಕ್ಷಮ್ ।**

ಅನುವಾದ– 'ಘಟಃ ಕರ್ಮತ್ವಂ ಆನಯನಂ ಕೃತಿಃ ಇಷ್ಟಸಾಧನತ್ವಮ್' ಇತ್ಯಾದಿ ಸ್ಥಳದಲ್ಲಿ 'ಘಟಮಾನಯ' ಎಂಬ ವಾಕ್ಯದಂತೆ ಏಕಾರ್ಥವನ್ನು ಹೊಂದಿದ್ದರೂ ಕೂಡ ಕ್ರಿಯಾಪದತ್ವ ಕಾರಕಪದತ್ವವಿಲ್ಲದ ಕಾರಣ ಕ್ರಿಯಾಕಾರಕ ಅನ್ವಯದ ವಿಷಯದಲ್ಲಿ ಘಟಂ ಎಂಬ ಪದವು ಆನಯ ಪದದಿಂದ ಆಕಾಂಕ್ಷೆಯನ್ನು ಹೊಂದಿರುವುದಿಲ್ಲ.

ವಿವರಣೆ - 'ಘಟಃ ಕರ್ಮತ್ವಂ ಆನಯನಂ ಕೃತಿಃ ಇಷ್ಟಸಾಧನತ್ವಂ' ಎಂಬಲ್ಲಿ 'ಘಟ-ಮಾನಯ' ಇತ್ಯಾದಿಗಳ ಪ್ರಕೃತಿಪ್ರತ್ಯಯಗಳನ್ನೇ ಬಿಡಿಸಿ ಬಿಡಿಸಿ ಹೇಳಲಾಗಿದೆ. ಆದ್ದರಿಂದ 'ಘಟಮಾನಯ' ಎಂಬ ವಾಕ್ಯದ ಜೊತೆ ಏಕಾರ್ಥವನ್ನು ಹೊಂದಿದೆ. ಆದರೆ ಆನಯ ಪದದಲ್ಲಿ ಕ್ರಿಯಾಪದತ್ವದ ಜ್ಞಾನವಿಲ್ಲ. 'ಘಟ' ಎಂಬ ಪದದಲ್ಲಿ ಕಾರಕಪದತ್ವದ ಜ್ಞಾನ-ವಿಲ್ಲ. ಆದ್ದರಿಂದ ಆನಯನಾನ್ವಿತಘಟಕರ್ಮಕಬೋಧವು ಇದರಿಂದ ಬರುವುದಿಲ್ಲ.

ಆದ್ದರಿಂದ 'ಘಟಮಾನಯ' ಎಂಬ ವಾಕ್ಯ ಕೇಳಿದಾಗ ಹೇಗೆ ಶಾಬ್ದಬೋಧವು ಬರು-ತ್ತದೋ ಅದರಂತೆ ಈ 'ಘಟಃ ಕರ್ಮತ್ವಂ' ಇತ್ಯಾದಿ ವಾಕ್ಯವನ್ನು ಕೇಳಿದಾಗ ಶಾಬ್ದ-ಬೋಧವು ಬರುವುದಿಲ್ಲ.

## ಲಕ್ಷಣಕ್ಕೆ ಅವ್ಯಾಪ್ತಿ ಬರುವುದಿಲ್ಲ

**ನ್ಯಾಯದೀಪ – ನನ್ವಥಾಪಿ ಉಕ್ತವಾಕ್ಯಸಮಾನಾರ್ಥಕವಾಕ್ಯಾಂತರೇ ಅವ್ಯಾಪ್ತಿ-ರೇವ । ತತ್ರೋಕ್ತಾನ್ವಯಾನುಭವಪ್ರಯೋಜಕಕ್ರಿಯಾಪದತ್ವಾದೇರಭಾವಾತ್ ಇತ್ಯತ ಆಹ – ಘಟ ಇತಿ ॥**

ಅನುವಾದ– ಆದರೂ ಕೂಡ 'ಘಟಮಾನಯ' ಎಂಬ ವಾಕ್ಯಕ್ಕೆ ಸಮಾನಾರ್ಥಕವಾದ 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬ ವಾಕ್ಯಂತರದಲ್ಲಿ ಆಕಾಂಕ್ಷೆಯ ಲಕ್ಷಣಕ್ಕೆ ಅವ್ಯಾಪ್ತಿದೋಷ ಬರುತ್ತದೆ. ಏಕೆಂದರೆ, 'ಘಟಂ ಆನಯ' ಎಂಬಲ್ಲಿ ಆಕಾಂಕ್ಷೆ ಇರುವುದರಿಂದ ಈ ವಾಕ್ಯವು ಅದಕ್ಕೆ ಸಮಾನಾ-ರ್ಥಕವಾಗಿರುವ ಕಾರಣ ಈ ವಾಕ್ಯದಲ್ಲಿಯೂ ಕೂಡ ಆಕಾಂಕ್ಷೆಯು ಇರುತ್ತದೆ. ಆದರೆ ಇಲ್ಲಿ ಕ್ರಿಯಾ-ಕಾರಕಭಾವಾನ್ವಯದ ಅನುಭವಕ್ಕೆ ಪ್ರಯೋಜಕವಾದ ಕ್ರಿಯಾಪದತ್ವಾದಿಗಳು ಇರುವುದಿಲ್ಲ. ಆದ್ದರಿಂದ ಆಕಾಂಕ್ಷೆಯ ಲಕ್ಷಣಕ್ಕೆ ಅವ್ಯಾಪ್ತಿದೋಷ ಬರುತ್ತದಲ್ಲವೇ ಎಂಬ ಪ್ರಶ್ನೆಗೆ **'ಘಟಃ'** ಇತ್ಯಾದಿವಾಕ್ಯವು ಉತ್ತರಿಸುತ್ತಿದೆ.

## 'ಘಟಃ ಕರ್ಮತ್ವಂ' ಎಂಬುದು ಲಕ್ಷವೇ ಅಲ್ಲ

**ನ್ಯಾಯದೀಪ –'ಆನಯ' ಇತ್ಯತ್ರ ಲುಪ್ತವಿಧಿಪ್ರತ್ಯಯಸ್ಯ ಆಖ್ಯಾತತ್ವೇನ ವಾಚ್ಯಾರ್ಥೋಕ್ತಿಃ ಕೃತಿರಿತಿ ವಿಧಿತ್ವೇನ ವಾಚ್ಯಾರ್ಥೋಕ್ತಿರಿಷ್ಟಸಾಧನತ್ವಮಿತಿ, ಇಷ್ಟಸಾಧನತ್ವಮೇವ ವಿಧ್ಯರ್ಥ ಇತಿ ವಿಧಿವಾದೇ ವಕ್ಷ್ಯಮಾಣತ್ವಾತ್ । ನ ತದನ್ವಯ ಇತಿ ॥ ತಥಾ ಚ 'ಅಲಕ್ಷ್ಯತ್ವಾನ್ನ ದೋಷಃ' ಇತಿ ಭಾವಃ ।**

ಅನುವಾದ– 'ಆನಯ' ಎಂಬಲ್ಲಿ ಲುಪ್ತವಾದ ತಿಪ್ಎಂಬ ವಿಧಿಲಿಙ್ಪ್ರತ್ಯಯವು ಆಖ್ಯಾತತ್ವ ಎಂಬ ಅವಚ್ಛೇದಕದಿಂದ ಕೃತಿ ಎಂಬುದನ್ನು ಪ್ರತಿಪಾದನೆ ಮಾಡುತ್ತದೆ. ವಿಧಿತ್ವ ಎಂಬ ಅವಚ್ಛೇದಕಧರ್ಮದಿಂದ ಇಷ್ಟಸಾಧನತ್ವವನ್ನು ಹೇಳುತ್ತದೆ. ಇದರಿಂದ ಇಷ್ಟಸಾಧನತ್ವವೇ ವಿಧ್ಯರ್ಥವೆಂದು ಸ್ಪಷ್ಟವಾಯಿತು. ಈ ಅರ್ಥವನ್ನು ಮುಂದೆ ವಿಧಿವಾದದಲ್ಲಿ ಇನ್ನೂ ಸ್ಪಷ್ಟಪಡಿಸುವವರಿದ್ದಾರೆ. ಆದ್ದರಿಂದ 'ಘಟಃ ಕರ್ಮತ್ವಂ' ಎಂಬ ಉದಾಹರಣೆಯು ಅಲಕ್ಷ್ಯವಾದ್ದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ.

ವಿಶೇಷವಿಚಾರ– 'ಘಟಃ ಕರ್ಮತ್ವಂ ಆನಯನಂ ಕೃತಿಃ ಇಷ್ಟಸಾಧನತ್ವಂ' ಎಂಬುದಾಗಿ

ಗ್ರಂಥದಲ್ಲಿ ಹೇಳಲು ಕಾರಣ ಹೀಗಿದೆ – 'ಆನಯ' ಎಂಬಲ್ಲಿ ತಿಪ್ ಎಂಬ ವಿಧಿಲಿಙ್ ಪ್ರತ್ಯಯವು ಲುಪ್ತವಾಗಿದೆ. ಆಖ್ಯಾತತ್ವ ಎಂಬ ಧರ್ಮಪುರಸ್ಸರವಾಗಿ ಇದೇ 'ತಿಪ್' ಎಂಬ ಪ್ರತ್ಯಯದ ವಾಚ್ಯಾರ್ಥಕೃತಿ ಎಂದು ವಿವಕ್ಷಿಸಬೇಕು. ಇದೇ ತಿಪ್‌ಪ್ರತ್ಯಯವು ವಿಧಿತ್ವ ಎಂಬ ಧರ್ಮಮೂಲಕವಾಗಿ ಇಷ್ಟಸಾಧನತ್ವ ಎಂಬರ್ಥವನ್ನು ಹೇಳುತ್ತದೆ. ಆದ್ದರಿಂದ ಇಷ್ಟಸಾಧನತ್ವವನ್ನೇ ವಿಧ್ಯರ್ಥವನ್ನಾಗಿ ವಿಧಿವಾದದಲ್ಲಿ ನಾವು ಸಮರ್ಥಿಸುತ್ತೇವೆ. ಆದ್ದರಿಂದ ಗ್ರಂಥಕಾರರು 'ಆನಯನಂ ಕೃತಿಃ ಇಷ್ಟಸಾಧನತ್ವಂ' ಎಂಬುದಾಗಿ 'ಕೃತಿಃ' ಎಂದು ಹೇಳಿದ ನಂತರ 'ಇಷ್ಟಸಾಧನತ್ವಂ' ಎಂದು ಉಲ್ಲೇಖಿಸಿದ್ದಾರೆ. ''ನ ತದನ್ವಯೇ'' ಎಂದು ಹೇಳಿರುವುದರಿಂದ 'ಘಟಃ ಕರ್ಮತ್ವಂ ಆನಯನಂ ಕೃತಿಃ ಇಷ್ಟಸಾಧನತ್ವಂ' ಎಂಬುದು ಅಲಕ್ಷ್ಯವಾಯಿತು; ಆದ್ದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲವೆಂದು ಅಭಿಪ್ರಾಯ.

ವಿವರಣೆ - 'ಆನಯ' ಎಂಬಲ್ಲಿ ತಿಙ್‌ಪ್ರತ್ಯಯವಿದೆ. ಆದರೆ ಲುಪ್ತವಾಗಿದೆ. ಣೀಞ್ ಧಾತುವಿಗೆ ತಿಪ್‌ಪ್ರತ್ಯಯ ಬಂದಾಗ 'ಸೇರ್ಹ್ಯ ಪಿಚ್ಚ' ಎಂಬ ಸೂತ್ರದಿಂದ ಹಿಭಾವವು ಬರುತ್ತದೆ. ಅನಂತರ 'ಅತೋ ಹೇ' ಎಂಬ ಸೂತ್ರದಿಂದ ಹೀಗೆ ಲೋಪವು ಬಂದರೆ ತಿಪ್ ಕಾಣಸುವುದೇ ಇಲ್ಲ. ಲುಪ್ತವಾಗಿರುವ ಈ ತಿಙ್‌ಪ್ರತ್ಯಯಕ್ಕೆ ಕೃತಿ ಮತ್ತು ಇಷ್ಟಸಾಧನತ್ವ ಎಂದು ಎರಡರ್ಥವಿದೆ. ತಿಙ್‌ತ್ವ ಎಂಬ ಧರ್ಮಮೂಲಕವಾಗಿ ವಿಧಿಯನ್ನು ಹೇಳುತ್ತದೆ. ವಿಧಿತ್ವೇನ ರೂಪೇಣ ಇಷ್ಟಸಾಧನತ್ವವನ್ನು ಹೇಳುತ್ತದೆ. 'ಗಚ್ಛತಿ' ಎಂಬಲ್ಲಿ ತಿಙ್ ಪ್ರತ್ಯಯವು 'ವರ್ತಮಾನ' ಎಂಬ ಕಾಲವನ್ನು ಹಾಗೂ 'ಕೃತಿ' ಎಂಬೆರಡರ್ಥವನ್ನು ಹೇಳುವಂತೆ ಇಲ್ಲಿಯೂ ಕೂಡ ತಿಳಿಯಬೇಕು. (ನಮ್ಮ ಮತದ ಪ್ರಕಾರ ಭಾವನಾ ಎಂಬುದು ಧಾತ್ವರ್ಥವನ್ನು ಹೇಳಬೇಕಿತ್ತು. ಅಂಗೀಕಾರವಾದದಿಂದ ಕೃತಿ ಎಂಬರ್ಥವನ್ನು ಇಲ್ಲಿ ಹೇಳಿರುತ್ತಾರೆ.)

## ವ್ಯತಿರೇಕಮುಖದಿಂದ ಸಮರ್ಥನೆ

**ನ್ಯಾಯದೀಪ– ಯದ್ವಾ 'ಕ್ರಿಯಾಪದತ್ವಾದಿಕಮ್ ಅಭಿಮತಾನ್ವಯಾನು-ಭಾವಕತಾಪ್ರಯೋಜಕಮ್' ಇತ್ಯನ್ವಯೇನೋಪಪಾದ್ಯ ವ್ಯತಿರೇಕಮುಖೇನೋ-ಪಪಾದಯತಿ – ಘಟ ಇತಿ ॥**

ಅನುವಾದ– ಅಥವಾ ಕ್ರಿಯಾಪದತ್ವಾದಿಗಳು ಅಭಿಮತವಾದ ಅನ್ವಯಾನುಭವಕ್ಕೆ ಪ್ರಯೋಜಕವಾಗಿವೆ ಎಂಬುದನ್ನು ಅನ್ವಯವ್ಯಾಪ್ತಿಮೂಲಕವಾಗಿ ಉಪಪಾದನೆ ಮಾಡಿದರು. ಈಗ ವ್ಯತಿರೇಕವ್ಯಾಪ್ತಿಮೂಲಕವಾಗಿ 'ಘಟಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

## 'ಘಟಃ ಕರ್ಮತ್ವಂ' ಎಂಬಲ್ಲಿಯೂ ಆಕಾಂಕ್ಷೆ ಹೇಳಬಹುದು

**ತರ್ಕತಾಂಡವ – ಅಭೇದಾನ್ವಯೇ ತು ಸಮಾನವಿಭಕ್ತಿಕತ್ವಾತ್ ಸಾಕಾಂಕ್ಷಮ್ ।**

ಅನುವಾದ– 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬಲ್ಲಿ ಅಭೇದಾನ್ವಯವನ್ನು ವಿವಕ್ಷಿಸುವುದಾದರೆ ಇಲ್ಲಿ ಸಮಾನವಿಭಕ್ತಿಕತ್ವರೂಪಧರ್ಮವು ಇರುವುದರಿಂದ ಆಕಾಂಕ್ಷೆ ಇರುತ್ತದೆ.

ವಿವರಣೆ - ಆನಯನಾನ್ವಿತಘಟನಿಷ್ಠಕರ್ಮತ್ವವು 'ಘಟಃ ಕರ್ಮತ್ವಂ ಆನಯನಂ ಕೃತಿಃ ಇಷ್ಟಸಾಧನತ್ವಮ್' ಎಂಬಲ್ಲಿ ಬರುವುದಿಲ್ಲ. ಆದರೆ ಈ ಎಲ್ಲಾ ಪದಗಳಲ್ಲಿ ಸಮಾನವಿಭಕ್ತಿಯು ಇರುವುದರಿಂದ ಅಭೇದಾನ್ವಯವನ್ನು ವಿವಕ್ಷಿಸುವುದಾದರೆ ಆಕಾಂಕ್ಷೆಯು ಇರುತ್ತದೆ. ಹೀಗೆ ಒಂದೇ ವಾಕ್ಯವು ವಿವಕ್ಷಾಭೇದದಿಂದ ಕೆಲವೊಮ್ಮೆ ಸಾಕಾಂಕ್ಷಿತವಾಗುತ್ತದೆ. ಕೆಲವೊಮ್ಮೆ ಸಾಕಾಂಕ್ಷಿತವಾಗುವುದಿಲ್ಲ.

## ಅವ್ಯಾಪ್ತಿಪರಿಹಾರ ಹೀಗೂ ಮಾಡಬಹುದು

**ನ್ಯಾಯದೀಪ – 'ಅನ್ವಯಾಂತರೇ ತು ಲಕ್ಷ್ಯತ್ವೇಽಪಿ ಪ್ರಯೋಜಕಮಪ್ಯಸ್ತಿ' ಇತಿ ನಾವ್ಯಾಪ್ತಿರಿತ್ಯಾಹ – ಅಭೇದೇತಿ ॥ ಏತೇನ 'ಯದನ್ವಯಃ' ಇತ್ಯುಕ್ತೇಃ ಕೃತ್ಯಂ ವಿವೃತಂ ಧ್ಯೇಯಮ್ ॥**

ಅನುವಾದ– 'ಘಟಃಕರ್ಮತ್ವಂ ಆನಯನಂ ಕೃತಿಃ' ಎಂಬ ವಾಕ್ಯದಲ್ಲಿ ಅಭೇದಾನ್ವಯವನ್ನು ವಿವಕ್ಷಿಸಿದರೆ ಅದು ಲಕ್ಷ್ಯವೇ ಆಗುವುದರಿಂದ ಶಾಬ್ದಬೋಧಕ್ಕೆ ಪ್ರಯೋಜಕವಾದ ಧರ್ಮವು ಇದ್ದೇ ಇರುತ್ತದೆ. ಆದ್ದರಿಂದ ಅವ್ಯಾಪ್ತಿದೋಷ ಅವಕಾಶವಿಲ್ಲವೆಂಬುದನ್ನು 'ಅಭೇದಾನ್ವಯೇ' ಎಂಬಿತ್ಯಾದಿಯಾಗಿ ಉಪಪಾದನೆ ಮಾಡುತ್ತಿದ್ದಾರೆ. ಹೀಗೆ ಹೇಳಿದ್ದರಿಂದ 'ಯದನ್ವಯಃ' ಎಂಬ ವಿಶೇಷಣಗಳಿಗೆ ಕೃತ್ಯವನ್ನು ವಿವರಿಸಿದಂತಾಯಿತು.

## 'ಗಿರಿರ್ಭುಕ್ತಮ್' ಎಂಬಲ್ಲಿ ಆಕಾಂಕ್ಷಾಕ್ರಮ

**ತರ್ಕತಾಂಡವ – 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಇತ್ಯತ್ರ 'ಭುಕ್ತಮ್' ಇತ್ಯಸ್ಯ ಕ್ರಿಯಾಪದಸ್ಯ ಆಸನ್ನೇನಾಪ್ಯಕಾರಕಗಿರಿಪದೇನ ನಾಕಾಂಕ್ಷಾ । ಕಿಂತು ಅನಾಸನ್ನೇನಾಪಿ ಕಾರಕೇಣ ದೇವದತ್ತೇನೇತಿ ಪದೇನೈವಾಕಾಂಕ್ಷಾ।**

ಅನುವಾದ– 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಎಂಬಲ್ಲಿ 'ಭುಕ್ತಂ' ಎಂಬ ಕ್ರಿಯಾಪದಕ್ಕೆ ಹತ್ತಿರವಿದ್ದರೂ ಕೂಡ ಕಾರಕವಿಭಕ್ತಿಯಲ್ಲದ ಕಾರಣ 'ಭುಕ್ತ'ಪದಕ್ಕೆ ಗಿರಿಪದದ ಜೊತೆಗೆ ಆಕಾಂಕ್ಷೆ ಇರುವುದಿಲ್ಲ ಹೊರತಾಗಿ ದೂರವಿದ್ದರೂ ಕೂಡ ಕಾರಕವಿಭಕ್ತಿತ್ವ ಇರುವುದರಿಂದ ದೇವದತ್ತ ಎಂಬ ಪದದ ಜೊತೆಗೇ ಭುಕ್ತಪದವು ಆಕಾಂಕ್ಷೆಯನ್ನು ಹೊಂದಿರುತ್ತದೆ.

ವಿವರಣೆ- ವಕ್ತೃವಿನ ವಿವಕ್ಷಾಧೀನವಾಗಿಯೇ ಆಕಾಂಕ್ಷೆಯನ್ನು ತಿಳಿಯಬೇಕೆನ್ನಲು ಮತ್ತೊಂದು ಉದಾಹರಣೆ. 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಎಂಬಲ್ಲಿ ಭುಕ್ತಂ ಎಂಬ ಪದದಲ್ಲಿ ಕ್ರಿಯಾಪದತ್ವವೆಂಬ ಧರ್ಮವಿದೆ. ಕೇನ ಭುಕ್ತಂ? ಎಂಬ ಆಕಾಂಕ್ಷೆಯು ಪ್ರಾಪ್ತವಾದರೆ 'ದೇವದತ್ತೇನ' ಎಂಬ ಪದವೇ ಆಕಾಂಕ್ಷೆಯನ್ನು ಶಾಂತಮಾಡುತ್ತದೆ ಹೊರತು ಗಿರಿಪದ-ವಾಗಲೀ, ಅಗ್ನಿಮತ್‌ಪದವಾಗಲೀ ಶಾಂತಮಾಡುವುದಿಲ್ಲ. ಆದ್ದರಿಂದ 'ಭುಕ್ತಂ' ಎಂಬ ಕ್ರಿಯಾಪದಕ್ಕೆ ಹತ್ತಿರವಿರುವ ಗಿರಿಪದದ ಜೊತೆಗೆ ಆಕಾಂಕ್ಷೆ ಇರುವುದಿಲ್ಲ. ವಾಸ್ತವಿಕವಾಗಿ ದೇವದತ್ತ ಎಂಬ ಪದವು ಹೇಗೆ ಕಾರಕಪದವಾಗಿದೆಯೋ ಅದರಂತೆ ಗಿರಿ ಪದವೂ ಕೂಡ ಕಾರಕವೇ ಆಗಿದೆ. ಆದರೆ ಭುಕ್ತಪದದ ಜೊತೆಗೆ ಇದು ಕಾರಕವಾಗಲಿ ಎಂಬ ವಿವಕ್ಷೆ ವಕ್ತೃವಿಗೆ ಇರುವುದಿಲ್ಲ. ಹೊರತಾಗಿ ದೇವದತ್ತಪದದಲ್ಲಿಯೇ ಕಾರಕವಿಭಕ್ತಿತ್ವವು ವಿವಕ್ಷಿತವಾಗಿದೆ. ಆದ್ದರಿಂದ ಭುಕ್ತಪದಕ್ಕೆ ದೇವದತ್ತಪದವು ದೂರದಲ್ಲಿದ್ದರೂ ಕೂಡ ಅದರ ಜೊತೆಗೇ ಭುಕ್ತಪದವು ಆಕಾಂಕ್ಷೆಯನ್ನು ಹೊಂದುತ್ತದೆ; ಹೊರತು ಗಿರಿಪದದ ಜೊತೆಗೆ ಆಕಾಂಕ್ಷೆಯನ್ನು ಹೊಂದುವುದಿಲ್ಲ.

## ಪ್ರಯೋಜಕಧರ್ಮವಿಲ್ಲದ್ದಲ್ಲಿ ಆಕಾಂಕ್ಷೆಯೂ ಇರುವುದಿಲ್ಲ

**ನ್ಯಾಯದೀಪ – ವಾಕ್ಯಾಂತರೇಽಪಿ ಅತಿವ್ಯಾಪ್ತ್ಯವ್ಯಾಪ್ತೀ ಆಶಂಕ್ಯ , ಯತ್ರ**

ಅನುವಾದ– ಅಥವಾ ಕ್ರಿಯಾಪದತ್ವಾದಿಗಳು ಅಭಿಮತವಾದ ಅನ್ವಯಾನುಭವಕ್ಕೆ ಪ್ರಯೋಜಕವಾಗಿವೆ ಎಂಬುದನ್ನು ಅನ್ವಯವ್ಯಾಪ್ತಿಮೂಲಕವಾಗಿ ಉಪಪಾದನೆ ಮಾಡಿದರು. ಈಗ ವ್ಯತಿರೇಕವ್ಯಾಪ್ತಿಮೂಲಕವಾಗಿ 'ಘಟಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

## 'ಘಟಃ ಕರ್ಮತ್ವಂ' ಎಂಬಲ್ಲಿಯೂ ಆಕಾಂಕ್ಷೆ ಹೇಳಬಹುದು

**ತರ್ಕತಾಂಡವ – ಅಭೇದಾನ್ವಯೇ ತು ಸಮಾನವಿಭಕ್ತಿಕತ್ವಾತ್ ಸಾಕಾಂಕ್ಷಮ್ ।**

ಅನುವಾದ– 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬಲ್ಲಿ ಅಭೇದಾನ್ವಯವನ್ನು ವಿವಕ್ಷಿಸುವುದಾದರೆ ಇಲ್ಲಿ ಸಮಾನವಿಭಕ್ತಿಕತ್ವರೂಪಧರ್ಮವು ಇರುವುದರಿಂದ ಆಕಾಂಕ್ಷೆ ಇರುತ್ತದೆ.

> ವಿವರಣೆ - ಆನಯನಾನ್ವಿತಘಟನಿಷ್ಠಕರ್ಮತ್ವವು 'ಘಟಃ ಕರ್ಮತ್ವಂ ಆನಯನಂ ಕೃತಿಃ ಇಷ್ಟಸಾಧನತ್ವಮ್' ಎಂಬಲ್ಲಿ ಬರುವುದಿಲ್ಲ. ಆದರೆ ಈ ಎಲ್ಲಾ ಪದಗಳಲ್ಲಿ ಸಮಾನವಿಭಕ್ತಿಯು ಇರುವುದರಿಂದ ಅಭೇದಾನ್ವಯವನ್ನು ವಿವಕ್ಷಿಸುವುದಾದರೆ ಆಕಾಂಕ್ಷೆಯು ಇರುತ್ತದೆ. ಹೀಗೆ ಒಂದೇ ವಾಕ್ಯವು ವಿವಕ್ಷಾಭೇದದಿಂದ ಕೆಲವೊಮ್ಮೆ ಸಾಕಾಂಕ್ಷಿತವಾಗುತ್ತದೆ. ಕೆಲವೊಮ್ಮೆ ಸಾಕಾಂಕ್ಷಿತವಾಗುವುದಿಲ್ಲ.

## ಅವ್ಯಾಪ್ತಿಪರಿಹಾರ ಹೀಗೂ ಮಾಡಬಹುದು

**ನ್ಯಾಯದೀಪ – 'ಅನ್ವಯಾಂತರೇ ತು ಲಕ್ಷ್ಯತ್ವೇಽಪಿ ಪ್ರಯೋಜಕಮಪ್ಯಸ್ತಿ' ಇತಿ ನಾವ್ಯಾಪ್ತಿರಿತ್ಯಾಹ – ಅಭೇದೇತಿ ॥ ಏತೇನ 'ಯದನ್ವಯಃ' ಇತ್ಯುಕ್ತೇಃ ಕೃತ್ಯಂ ವಿವೃತಂ ಧ್ಯೇಯಮ್ ॥**

ಅನುವಾದ– 'ಘಟಃಕರ್ಮತ್ವಂ ಆನಯನಂ ಕೃತಿಃ' ಎಂಬ ವಾಕ್ಯದಲ್ಲಿ ಅಭೇದಾನ್ವಯವನ್ನು ವಿವಕ್ಷಿಸಿದರೆ ಅದು ಲಕ್ಷ್ಯವೇ ಆಗುವುದರಿಂದ ಶಾಬ್ದಬೋಧಕ್ಕೆ ಪ್ರಯೋಜಕವಾದ ಧರ್ಮವು ಇದ್ದೇ ಇರುತ್ತದೆ. ಆದ್ದರಿಂದ ಅವ್ಯಾಪ್ತಿದೋಷ ಅವಕಾಶವಿಲ್ಲವೆಂಬುದನ್ನು 'ಅಭೇದಾನ್ವಯೇ' ಎಂಬಿತ್ಯಾದಿಯಾಗಿ ಉಪಪಾದನೆ ಮಾಡುತ್ತಿದ್ದಾರೆ. ಹೀಗೆ ಹೇಳಿದ್ದರಿಂದ 'ಯದನ್ವಯಃ' ಎಂಬ ವಿಶೇಷಣಗಳಿಗೆ ಕೃತ್ಯವನ್ನು ವಿವರಿಸಿದಂತಾಯಿತು.

## 'ಗಿರಿರ್ಭುಕ್ತಮ್' ಎಂಬಲ್ಲಿ ಆಕಾಂಕ್ಷಾಕ್ರಮ

**ತರ್ಕತಾಂಡವ – 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಇತ್ಯತ್ರ 'ಭುಕ್ತಮ್' ಇತ್ಯಸ್ಯ ಕ್ರಿಯಾಪದಸ್ಯ ಆಸನ್ನೇನಾಪ್ಯಕಾರಕಗಿರಿಪದೇನ ನಾಕಾಂಕ್ಷಾ । ಕಿಂತು ಅನಾಸನ್ನೇನಾಪಿ ಕಾರಕೇಣ ದೇವದತ್ತೇನೇತಿ ಪದೇನೈವಾಕಾಂಕ್ಷಾ।**

ಅನುವಾದ– 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಎಂಬಲ್ಲಿ 'ಭುಕ್ತಂ' ಎಂಬ ಕ್ರಿಯಾಪದಕ್ಕೆ ಹತ್ತಿರವಿದ್ದರೂ ಕೂಡ ಕಾರಕವಿಭಕ್ತಿಯಲ್ಲದ ಕಾರಣ 'ಭುಕ್ತ'ಪದಕ್ಕೆ ಗಿರಿಪದದ ಜೊತೆಗೆ ಆಕಾಂಕ್ಷೆ ಇರುವುದಿಲ್ಲ ಹೊರತಾಗಿ ದೂರವಿದ್ದರೂ ಕೂಡ ಕಾರಕವಿಭಕ್ತಿತ್ವ ಇರುವುದರಿಂದ ದೇವದತ್ತ ಎಂಬ ಪದದ ಜೊತೆಗೇ ಭುಕ್ತಪದವು ಆಕಾಂಕ್ಷೆಯನ್ನು ಹೊಂದಿರುತ್ತದೆ.

ವಿವರಣೆ- ವಕ್ತೃವಿನ ವಿವಕ್ಷಾಧೀನವಾಗಿಯೇ ಆಕಾಂಕ್ಷೆಯನ್ನು ತಿಳಿಯಬೇಕೆನ್ನಲು ಮತ್ತೊಂದು ಉದಾಹರಣೆ. 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಎಂಬಲ್ಲಿ ಭುಕ್ತಂ ಎಂಬ ಪದದಲ್ಲಿ ಕ್ರಿಯಾಪದತ್ವವೆಂಬ ಧರ್ಮವಿದೆ. ಕೇನ ಭುಕ್ತಂ? ಎಂಬ ಆಕಾಂಕ್ಷೆಯು ಪ್ರಾಪ್ತವಾದರೆ 'ದೇವದತ್ತೇನ' ಎಂಬ ಪದವೇ ಆಕಾಂಕ್ಷೆಯನ್ನು ಶಾಂತಮಾಡುತ್ತದೆ ಹೊರತು ಗಿರಿಪದವಾಗಲೀ, ಅಗ್ನಿಮತ್‌ಪದವಾಗಲೀ ಶಾಂತಮಾಡುವುದಿಲ್ಲ. ಆದ್ದರಿಂದ 'ಭುಕ್ತಂ' ಎಂಬ ಕ್ರಿಯಾಪದಕ್ಕೆ ಹತ್ತಿರವಿರುವ ಗಿರಿಪದದ ಜೊತೆಗೆ ಆಕಾಂಕ್ಷೆ ಇರುವುದಿಲ್ಲ. ವಾಸ್ತವಿಕವಾಗಿ ದೇವದತ್ತ ಎಂಬ ಪದವು ಹೇಗೆ ಕಾರಕಪದವಾಗಿದೆಯೋ ಅದರಂತೆ ಗಿರಿ ಪದವೂ ಕೂಡ ಕಾರಕವೇ ಆಗಿದೆ. ಆದರೆ ಭುಕ್ತಪದದ ಜೊತೆಗೆ ಇದು ಕಾರಕವಾಗಲಿ ಎಂಬ ವಿವಕ್ಷೆ ವಕ್ತೃವಿಗೆ ಇರುವುದಿಲ್ಲ. ಹೊರತಾಗಿ ದೇವದತ್ತಪದದಲ್ಲಿಯೇ ಕಾರಕವಿಭಕ್ತಿತ್ವವು ವಿವಕ್ಷಿತವಾಗಿದೆ. ಆದ್ದರಿಂದ ಭುಕ್ತಪದಕ್ಕೆ ದೇವದತ್ತಪದವು ದೂರದಲ್ಲಿದ್ದರೂ ಕೂಡ ಅದರ ಜೊತೆಗೇ ಭುಕ್ತಪದವು ಆಕಾಂಕ್ಷೆಯನ್ನು ಹೊಂದುತ್ತದೆ; ಹೊರತು ಗಿರಿಪದದ ಜೊತೆಗೆ ಆಕಾಂಕ್ಷೆಯನ್ನು ಹೊಂದುವುದಿಲ್ಲ.

## ಪ್ರಯೋಜಕಧರ್ಮವಿಲ್ಲದ್ದಲ್ಲಿ ಆಕಾಂಕ್ಷೆಯೂ ಇರುವುದಿಲ್ಲ

**ನ್ಯಾಯದೀಪ – ವಾಕ್ಯಾಂತರೇಽಪಿ ಅತಿವ್ಯಾಪ್ತ್ಯವ್ಯಾಪ್ತೀ ಆಶಂಕ್ಯ , ಯತ್ರ**

**ಉಕ್ತರೂಪಪ್ರಯೋಜಕಂ ತತ್ರಾಕಾಂಕ್ಷಾಸತ್ತ್ವೇನ ಲಕ್ಷ್ಯತ್ವಮ್, ಯತ್ರ ತನ್ನಾಸ್ತಿ ತತ್ರಾಕಾಂಕ್ಷಾऽಪಿ ನ, ಇತ್ಯಲಕ್ಷತ್ವಮ್; ಅತೋ ನ ದೋಷಃ ಇತ್ಯಾಹ – ಗಿರಿರಿತಿ ॥ ಕ್ರಿಯಾಪದಸ್ಯೇತಿ ॥ 'ಕ್ರಿಯಾವಾಚಿಸುಬಂತಪದಸ್ಯ' ಇತ್ಯರ್ಥಃ ।**

ಅನುವಾದ– ಬೇರೆ ವಾಕ್ಯಗಳಲ್ಲಿಯೂ ಕೂಡ ಅತಿವ್ಯಾಪ್ತಿ ಹಾಗೂ ಅವ್ಯಾಪ್ತಿ ದೋಷಗಳನ್ನು ಆಶಂಕಿಸಿ, ಎಲ್ಲಿ ಹಿಂದೆ ಹೇಳಿದ ಪ್ರಯೋಜಕಧರ್ಮಗಳಿರುತ್ತವೋ ಅಲ್ಲಿ ಆಕಾಂಕ್ಷೆಯು ಇರುವುದರಿಂದ ಲಕ್ಷ್ಯವೇ ಆಗುತ್ತದೆ. ಎಲ್ಲಿ ಉಕ್ತರೂಪವಾದ ಪ್ರಯೋಜಕವು ಇಲ್ಲದಿರುತ್ತದೋ ಅಲ್ಲಿ ಆಕಾಂಕ್ಷೆಯು ಇಲ್ಲದ ಕಾರಣ ಅಲ್ಲಿ ಲಕ್ಷಣ ಬಾರದಿದ್ದರೆ ದೋಷವಾಗುವುದಿಲ್ಲ. ಈ ವಿಷಯವನ್ನು 'ಗಿರಿರ್ಭುಕ್ತಮಾನ್' ಇತ್ಯಾದಿ ವಾಕ್ಯದಿಂದ ಸ್ಪಷ್ಟ ಪಡಿಸಿದ್ದಾರೆ. 'ಕ್ರಿಯಾಪದಸ್ಯ' ಎಂದರೆ ಕ್ರಿಯಾವಾಚಿಯಾದ ಸುಬಂತಪದ ಎಂದರ್ಥ.

## ಆಕಾಂಕ್ಷಾಲಕ್ಷಣದ ದಲಕೃತ್ಯಚಿಂತನೆ

**ತರ್ಕತಾಂಡವ– ಅತ್ರ ಚ ಪದಶಬ್ದೇನ ಶಬ್ದಮಾತ್ರಂ ವಿವಕ್ಷಿತಮ್ । ತೇನ ಪ್ರಕೃತಿ-ಪ್ರತ್ಯಯೋರನ್ಯೋन್ಯಂ ವಾಕ್ಯಯೋಶ್ಚಾನ್ಯೋನ್ಯಮಾಕಾಂಕ್ಷಾಯಾಂ ನಾವ್ಯಾಪ್ತಿಃ ।**

ಅನುವಾದ– ಆಕಾಂಕ್ಷೆಯ ಲಕ್ಷಣದಲ್ಲಿ 'ಯಸ್ಯ ಪದಸ್ಯ' ಎಂಬಲ್ಲಿ ಹಾಗೂ 'ಯತ್ಪದಗತ' ಎಂಬಲ್ಲಿ 'ಪದ' ಎಂದು ಹೇಳಲಾಗಿದೆ. ಇದಕ್ಕೆ 'ಶಬ್ದ' ಎಂಬರ್ಥವನ್ನು ವಿವಕ್ಷಿಸಬೇಕು. 'ಶಬ್ದ' ಎಂದು ವಿವಕ್ಷಿಸದೇ 'ಪದ' ಎಂದೇ ಹೇಳುವುದಾದರೆ ಪ್ರಕೃತಿ ಹಾಗೂ ಪ್ರತ್ಯಯಗಳಿಗೆ ಹಾಗೂ ಪರಸ್ಪರವಾಕ್ಯಗಳಿಗೆ ಆಕಾಂಕ್ಷೆಯೇ ಇಲ್ಲದೇ ಲಕ್ಷಣವೇ ಇಲ್ಲದೇ ಹೋಗಬೇಕಾದೀತು. ಈ ರೀತಿಯಾದ ಅವ್ಯಾಪ್ತಿದೋಷವನ್ನು ಪರಿಹಾರಮಾಡುವುದಕ್ಕಾಗಿ 'ಪದ' ಎಂಬುದಕ್ಕೆ 'ಶಬ್ದ' ಎಂದು ಅರ್ಥವನ್ನು ವಿವಕ್ಷಿಸಬೇಕು.

ವಿವರಣೆ - ಪ್ರಕೃತಿ ಹಾಗೂ ಪ್ರತ್ಯಯಗಳಿಗೆ ಪರಸ್ಪರವಾಗಿ ಆಕಾಂಕ್ಷೆ ಇದೆ. ಹಾಗೂ ಒಂದು ಅವಾಂತರವಾಕ್ಯದಿಂದ ಮತ್ತೊಂದು ಅವಾಂತರವಾಕ್ಯಕ್ಕೆ; ಹಾಗೂ ಅವಾಂತರ-ವಾಕ್ಯದಿಂದ ಮಹಾವಾಕ್ಯಕ್ಕೆ ಆಕಾಂಕ್ಷೆಯು ಇರುತ್ತದೆ. ಈ ಎರಡು ಸ್ಥಳಗಳಲ್ಲಿ ಪದಘಟಿತ-

ವಾದ ಆಕಾಂಕ್ಷೆಯ ಲಕ್ಷಣವು ಬರುವುದಿಲ್ಲ. ಏಕೆಂದರೆ ಪ್ರಕೃತಿ, ಪ್ರತ್ಯಯ, ಅವಾಂತರ-ವಾಕ್ಯ ಇವುಗಳನ್ನು ಪದ ಎಂದು ಯಾರೂ ಹೇಳುವುದಿಲ್ಲ. ಶಬ್ದ ಎಂದು ವಿವಕ್ಷಿಸಿದಾಗ ಇವೆಲ್ಲವೂ ಶಬ್ದವಾಗುವುದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ.

**ನ್ಯಾಯದೀಪ – ಅತ್ರ ಚೇತಿ ॥ 'ಲಕ್ಷಣವಾಕ್ಯೇ' ಇತ್ಯರ್ಥಃ । ಅನ್ಯೋನ್ಯಂ ವಾಕ್ಯಯೋರಿತಿ ॥ 'ಮಹಾವಾಕ್ಯಸ್ಥಯೋಃ' ಇತ್ಯರ್ಥಃ । ಏತೇನ 'ಯತ್ಪದ' ಇತಿ ಪದಶಬ್ದೋಽಪಿ ಶಬ್ದಪರಃ । 'ಯದ್ರೂಪ' ಇತ್ಯಪಿ ಯದ್ರೂಪೋಪಸ್ಥಿತಿಪರಮ್ ಇತಿ ಸೂಚಿತಮ್ ।**

ಅನುವಾದ– 'ಅತ್ರ ಚ' ಎಂದರೆ ಲಕ್ಷಣವಾಕ್ಯದಲ್ಲಿ ಎಂದರ್ಥ. 'ಅನ್ಯೋನ್ಯಂ ವಾಕ್ಯಯೋಃ' ಎಂಬುದಕ್ಕೆ ಮಹಾವಾಕ್ಯದಲ್ಲಿರುವ ಅವಾಂತರವಾಕ್ಯಗಳಿಗೆ ಎಂದರ್ಥ. 'ಪದ'ಶಬ್ದಕ್ಕೆ ಶಬ್ದ ಎಂಬರ್ಥವನ್ನು ವಿವಕ್ಷಿಸಿದ್ದರಿಂದ 'ಯತ್ಪದಂ' ಎಂಬಲ್ಲಿರುವ ಪದಶಬ್ದಕ್ಕೂ ಶಬ್ದಪರತ್ವವನ್ನು ಹೇಳಿದಂತಾಯಿತು. 'ಯದ್ರೂಪ' ಎಂಬುದಕ್ಕೂ ಕೂಡ ಯದ್ರೂಪ ಉಪಸ್ಥಿತಿ ಎಂಬರ್ಥವನ್ನು ಸೂಚಿಸಿದಂತಾಯಿತು.

## 'ಪದ' ಎಂದರೆ ಪದದ ಉಪಸ್ಥಿತಿ

**ತರ್ಕತಾಂಡವ – ಏವಂ 'ಪದ'ಶಬ್ದೇನ ತದುಪಸ್ಥಿತಿರೇವ ವಿವಕ್ಷಿತಾ । ತೇನ ಪದ-ಮಾತ್ರಸ್ಯ ಸ್ವತ ಏವಾನ್ವಯಾನನುಭಾವಕತ್ವೇನಾನುಭಾವಕತ್ವಸ್ಯ ಇತರವಿರಹ-ಪ್ರಯುಕ್ತತ್ವಾತ್ ಅಸಂಭವಃ ಇತಿ ಶಂಕಾನವಕಾಶಃ ।**

ಅನುವಾದ– ಇದೇ ರೀತಿಯಾಗಿ 'ಪದ' ಎಂಬ ಶಬ್ದದಿಂದ ಪದದ ಉಪಸ್ಥಿತಿಯನ್ನೇ ವಿವಕ್ಷಿಸ-ಬೇಕು. ಹೀಗೆ ವಿವಕ್ಷಿಸಿದಾಗ ಪದವು ಸ್ವಾಭಾವಿಕವಾಗಿ ಅನ್ವಯಾನನುಭಾವಕ ಆಗಿರುವುದರಿಂದ ಅನನುಭಾವಕತ್ವಕ್ಕೆ ಇತರವಿರಹಪ್ರಯುಕ್ತತ್ವವನ್ನು ಹೇಳಿದರೆ ಅಸಂಭವ ಬರುತ್ತದೆ ಎಂಬ ಆಶಂಕೆ-ಯನ್ನು ಪರಿಹರಿಸಿದಂತಾಯಿತು.

ವಿವರಣೆ - ಉಪಸ್ಥಿತವಾಗದ ಪದವನ್ನು ಲಕ್ಷಣದಲ್ಲಿ ವಿವಕ್ಷಿಸುವುದಾದರೆ ಅಸಂಭವ ದೋಷ ಬರುತ್ತದೆ. ಏಕೆಂದರೆ ಯಾವುದೇ ಒಂದು ಪದವು ಸಹಜವಾಗಿಯೇ ಶಾಬ್ದ-

ಬೋಧಕವಾಗಿರುವುದಿಲ್ಲ. ಆದ್ದರಿಂದ ಅನ್ವಯಾನನುಭಾವಕತ್ವವು ಸಹಜವಾಗಿಯೇ ಬರುತ್ತದೆ. ಹೀಗಿರುವಾಗ ಇತರವಿರಹಪ್ರಯುಕ್ತತ್ವವನ್ನು ಲಕ್ಷಣದಲ್ಲಿ ಹೇಳಿದ್ದು ತಪ್ಪಾಗುತ್ತದೆ. ಆದ್ದರಿಂದ ಪದ ಎಂಬುದಕ್ಕೆ ಪದದ ಉಪಸ್ಥಿತಿ ಎಂದು ವಿವಕ್ಷಿಸಬೇಕು. ಪದವು ಸಹಜವಾಗಿ ಅನ್ವಯಾನನುಭಾವಕವಾಗಿದ್ದರೂ ಪದದ ಉಪಸ್ಥಿತಿಯು ಸಹಜವಾಗಿ ಅನ್ವಯಾನನುಭಾವಕವಾಗಿರುವುದಿಲ್ಲ. ಆದ್ದರಿಂದ ಅಸಂಭವದೋಷಕ್ಕೆ ಅವಕಾಶವಿಲ್ಲ.

## ಲೌಕಿಕ-ವೈದಿಕವಾಕ್ಯಗಳಲ್ಲಿ ಸಮಭಿವ್ಯಾಹಾರ ಹೇಗೆ?

**ತರ್ಕತಾಂಡವ – 'ದ್ವಾರಮ್' ಇತ್ಯತ್ರ ದ್ವಾರಶಬ್ದಸ್ಯ 'ಪಿಧೇಹಿ'ಶಬ್ದೇನ ಸಹ, 'ವಿಶ್ವಜಿತಾ ಯಜೇತ' ಇತ್ಯತ್ರ 'ಯಜೇತ' ಇತ್ಯಸ್ಯ ಸ್ವರ್ಗಕಾಮಶಬ್ದೇನ ಸಹೋಚ್ಚಾರಣನಿಬಂಧನಸಮಭಿವ್ಯಾಹಾರಾಭಾವೇऽಪಿ ಮೌನಿಶ್ಲೋಕಾದಾವಿವಾಭಿಪ್ರಾಯಿಕಃ ಸಮಭಿವ್ಯಾಹಾರೋऽಸ್ತೀತಿ ನಾವ್ಯಾಪ್ತಿಃ।**

ಅನುವಾದ– 'ದ್ವಾರಂ' ಎಂಬಲ್ಲಿ ದ್ವಾರಶಬ್ದಕ್ಕೆ 'ಪಿಧೇಹಿ' ಎಂಬ ಶಬ್ದದಿಂದ, 'ವಿಶ್ವಜಿತಾ ಯಜೇತ' ಎಂಬಲ್ಲಿ 'ಯಜೇತ' ಎಂಬ ಪದಕ್ಕೆ 'ಸ್ವರ್ಗಕಾಮ'ಶಬ್ದದಿಂದ ಪದೋಚ್ಚಾರಣರೂಪವಾದ ಸಮಭಿವ್ಯಾಹಾರವು ಇಲ್ಲದಿದ್ದರೂ ಮೌನಿಶ್ಲೋಕಾದಿಗಳಲ್ಲಿ ಹೇಳುವಂತಹ ಆಭಿಪ್ರಾಯಿಕವಾದ ಸಮಭಿವ್ಯಾಹಾರ ಇರುವುದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿರುವುದಿಲ್ಲ.

ವಿವರಣೆ - ಸಮಭಿವ್ಯಾಹಾರವೆಂದರೆ ಸಹೋಚ್ಚಾರಣರೂಪವಾದದ್ದೆಂದು ವಿವಕ್ಷಿಸಬಾರದು. ವಕ್ತೃವಿನ ಅಭಿಪ್ರಾಯಕ್ಕೆ ಅನುಗುಣವಾದ ಸಮಭಿವ್ಯಾಹಾರವನ್ನೇ ವಿವಕ್ಷಿಸಬೇಕು. ಏಕೆಂದರೆ, 'ದ್ವಾರಂ' ಎಂದಷ್ಟೇ ಹೇಳಿ 'ಪಿಧೇಹಿ' ಎಂಬ ಪದವನ್ನು ಹೇಳದಿದ್ದಾಗಲೂ ಪ್ರಾಸಂಗಿಕವಾಗಿ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ. ಈ ಸಂದರ್ಭದಲ್ಲಿ 'ಪಿಧೇಹಿ' ಎಂಬ ಶಬ್ದೋಚ್ಚಾರಣೆಯು ಕಾಣಸುತ್ತಿಲ್ಲ. ಆದರೆ ವಕ್ತೃವಿನ ಅಭಿಪ್ರಾಯವು ಶ್ರೋತೃವಿಗೆ ಅರ್ಥವಾಗಿದೆ. ಇದರಂತೆ 'ವಿಶ್ವಜಿತಾ ಯಜೇತ' ಎಂಬಲ್ಲಿ 'ಸ್ವರ್ಗಕಾಮ' ಎಂಬ ಶಬ್ದವನ್ನು ಶ್ರುತಿಯು ಉಚ್ಚಾರಣೆ ಮಾಡಿಲ್ಲ. ಅರ್ಥಾತ್ ಸ್ವರ್ಗವೇ ಇದರ ಪ್ರಯೋಜನವೆಂದು ಸಿದ್ಧವಾಗುತ್ತದೆ. ಇಲ್ಲಿಯೂ ಕೂಡ ಸಹೋಚ್ಚಾರಣರೂಪವಾದ

ಸಮಭಿವ್ಯಾಹಾರ ಕಾಣಸದಿದ್ದರೂ ಆಭಿಪ್ರಾಯಿಕವಾದ ಸ್ವರ್ಗಕಾಮಶಬ್ದದ ಸಮಭಿ-ವ್ಯಾಹಾರ ಇರುತ್ತದೆ.

ಯಾವ ರೀತಿಯಾಗಿ ಮೌನಿಶ್ಲೋಕದಲ್ಲಿ ಉಚ್ಚಾರಣೆ ಮಾಡದಿದ್ದರೂ ಆಭಿಪ್ರಾಯಿಕವಾದ ಪದಗಳಿಂದ ಶಾಬ್ದಬೋಧ ಬರುವುದು ಕಂಡಿದೆಯೋ ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು.

## ಪದಾಂತರಸಮಭಿವ್ಯಾಹಾರ ಇಲ್ಲದೆಡೆ ಅವ್ಯಾಪ್ತಿಪರಿಹಾರ

**ನ್ಯಾಯದೀಪ – ಲೌಕಿಕವೈದಿಕವಾಕ್ಯಾಂತರೇಷು ಪದಾಂತರಸಮಭಿವ್ಯಾಹಾರ-ರಹಿತೇಷು ಸಾಕಾಂಕ್ಷೇಷ್ವವ್ಯಾಪ್ತಿಮಾಶಂಕ್ಯ ನಿರಾಹ – ದ್ವಾರಮಿತ್ಯತ್ರೇತಿ ॥**

ಅನುವಾದ– ಲೌಕಿಕವ್ಯವಹಾರ ಹಾಗೂ ವೈದಿಕವ್ಯವಹಾರಗಳಲ್ಲಿ ಪದಾಂತರಸಮಭಿವ್ಯಾಹಾರವು ಇರುವುದೇ ಇಲ್ಲ. ಆದರೂ ಕೂಡ ಆಕಾಂಕ್ಷೆಯು ಇರುತ್ತದೆ. ಇಂತಹ ಸ್ಥಳದಲ್ಲಿ ಅವ್ಯಾಪ್ತಿಯನ್ನು ಆಶಂಕಿಸಿ ಪರಿಹಾರ ಮಾಡಲು 'ದ್ವಾರಮ್' ಎಂಬಿತ್ಯಾದಿ ವಾಕ್ಯವು ಹೊರಟಿದೆ.

## 'ವಿಶ್ವಜಿತಾ ಯಜೇತ' ಎಂಬಲ್ಲಿ ಸ್ವರ್ಗಕಾಮಪದವು ಸ್ವತಃ ಸಿದ್ಧ

**ನ್ಯಾಯದೀಪ – ಸ್ವರ್ಗಕಾಮೇತಿ ॥ 'ಸಃ ಸ್ವರ್ಗಃ ಸರ್ವಾನ್ ಪ್ರತ್ಯವಿಶಿಷ್ಟತ್ವಾತ್' ಇತಿ ಚತುರ್ಥಾಧ್ಯಾಯತೃತೀಯಪಾದೀಯಸಪ್ತಮಾಧಿಕರಣೇ 'ವಿಶ್ವಜಿತಾ' ಇತ್ಯಾದೌ ಸ್ವರ್ಗಕಾಮಪದಾಧ್ಯಾಹಾರಸ್ಯ ಸಿದ್ಧತ್ವಾದಿತಿ ಭಾವಃ ।**

ಅನುವಾದ– 'ವಿಶ್ವಜಿತಾ ಯಜೇತ' ಎಂಬಲ್ಲಿ ಸ್ವರ್ಗಕಾಮನೆಗೋಸ್ಕರ ಎಂಬ ಪದವು ಇರುವುದಿಲ್ಲ. ಆದರೂ ಕೂಡ ಇದು ಆಭಿಪ್ರಾಯಿಕವಾಗಿ ಸಿದ್ಧವಾಗುತ್ತದೆ. ಏಕೆಂದರೆ ಈ ಸ್ವರ್ಗವು ಎಲ್ಲಾ ಸಾಧನೆಗಳಿಗೂ ಸಮಾನವಾದ ಫಲವಾಗಿದೆ.

ಹೀಗೆ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದ ಏಳನೆಯ ಅಧಿಕರಣದಲ್ಲಿ 'ವಿಶ್ವಜಿತಾ' ಎಂಬಲ್ಲಿ ಸ್ವರ್ಗಕಾಮಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸಾಧಿಸಲಾಗಿದೆ ಎಂದಭಿಪ್ರಾಯ.

## ಸಮಭಿವ್ಯಾಹಾರಪದದಿಂದ ಅತಿವ್ಯಾಪ್ತಿಪರಿಹಾರ

**ತರ್ಕತಾಂಡವ – 'ಘಟೋ ಭವತಿ' ಇತ್ಯತ್ರ ತು ಘಟಪದೇನ ಸಹ 'ರಕ್ತಃ' ಇತಿ ಪದಸ್ಯ ಸಮಾನವಿಭಕ್ತಿಕತ್ವೇಽಪಿ ಅಭಿಪ್ರಾಯಕೋಽಪಿ ಸಮಭಿವ್ಯಾಹಾರೋ ನಾಸ್ತೀತಿ ನಾತಿವ್ಯಾಪ್ತಿಃ ।**

ಅನುವಾದ– 'ಘಟೋ ಭವತಿ' ಎಂಬಲ್ಲಿ ಘಟಪದದ ಜೊತೆಗೆ 'ರಕ್ತಃ' ಎಂಬ ಪದವು ಸಮಾನವಿಭಕ್ತಿಕವಾಗಿದ್ದರೂ ಸಹ ಇವುಗಳಿಗೆ ಪ್ರಕೃತದಲ್ಲಿ ಆಭಿಪ್ರಾಯಿಕವಾದ ಸಮಭಿವ್ಯಾಹಾರ ಇಲ್ಲದ ಕಾರಣ ಅತಿವ್ಯಾಪ್ತಿದೋಷ ಬರುವುದಿಲ್ಲ.

ವಿವರಣೆ - 'ರಕ್ತಃ' ಎಂಬ ಪದವನ್ನು ಉಚ್ಚಾರಮಾಡದೇ 'ಘಟೋ ಭವತಿ' ಎಂದಷ್ಟೇ ಹೇಳಿದಾಗ ರಕ್ತಪದಕ್ಕೂ ಘಟಪದಕ್ಕೂ ಆಕಾಂಕ್ಷೆ ಇರುವುದಿಲ್ಲ ಎಂಬ ಪಕ್ಷವನ್ನು ವಿವಕ್ಷಿಸಿದಾಗ ಲಕ್ಷಣವು ಬರಬಾರದು. ಅಲಕ್ಷ್ಯದಲ್ಲಿ ಲಕ್ಷ್ಯವು ಬಂದರೆ ಅತಿವ್ಯಾಪ್ತಿ ದೋಷ ಬರುತ್ತದೆ. ಘಟ ಎಂಬ ಪದಕ್ಕೆ 'ರಕ್ತಃ' ಎಂಬ ಪದದ ಜೊತೆಗೆ ಸಮಾನವಿಭಕ್ತಿಕತ್ವ ಇದ್ದರೂ ಕೂಡ ಆಭಿಪ್ರಾಯಿಕವಾದ ಸಮಭಿವ್ಯಾಹಾರ ಇರುವುದಿಲ್ಲ. ಹೀಗೆ 'ಸಮಭಿ-ವ್ಯಾಹಾರ' ಎಂಬ ಪದದಿಂದ ಅತಿವ್ಯಾಪ್ತಿದೋಷವು ಪರಿಹಾರವಾಗುತ್ತದೆ.

**ನ್ಯಾಯದೀಪ – ಏವಂ ತರ್ಹಿ ಅತಿವ್ಯಾಪ್ತಿಃ ಇತ್ಯಾಶಂಕ್ಯ , ನಿರಾಹ – ಘಟ ಇತಿ ॥**

ಅನುವಾದ– ಹೀಗೆ ಹೇಳಿದಾಗ ಅತಿವ್ಯಾಪ್ತಿಯನ್ನು ಆಶಂಕಿಸಿ ಅದನ್ನು ನಿರಾಕರಣೆ ಮಾಡಲು 'ಘಟಃ' ಇತ್ಯಾದಿವಾಕ್ಯವು ಹೊರಟದೆ.

## 'ಸಮಾನವಿಭಕ್ತಿಕತ್ವ' ಶಬ್ದಾರ್ಥ

**ನ್ಯಾಯದೀಪ – ಸಮಾನೇತಿ ॥ ಅಭೇದಾನ್ವಯಾನುಭಾವಕತಾಪ್ರಯೋಜಕ-ರೂಪವತ್ತ್ವೇಽಪೀತ್ಯರ್ಥಃ । ಏತೇನ 'ಸಮಭಿವ್ಯಾಹೃತಾ' ಇತಿ ಪದಕೃತ್ಯಂ ವಿವೃತಂ ಧ್ಯೇಯಮ್ ।**

ಅನುವಾದ– 'ಸಮಾನವಿಭಕ್ತಿಕತ್ವೇಪಿ' ಎಂಬುದಕ್ಕೆ ಅಭೇದಾನ್ವಯದ ಶಾಬ್ದಬೋಧಕ್ಕೆ ಪ್ರಯೋಜಕವಾದ ಸಮಾನವಿಭಕ್ತಿಗಳಿದ್ದರೂ ಕೂಡ' ಎಂದರ್ಥ. ಇದರಿಂದ ಸಮಭಿವ್ಯಾಹೃತ ಎಂಬ ಪದದ ಕೃತ್ಯವನ್ನು ವಿವರಿಸಿದಂತಾಯಿತು.

## ಆಕಾಂಕ್ಷೆ ಇದ್ದಾಗ ಸಮಭಿವ್ಯಾಹಾರ ಹೇಳಬೇಕು

**ತರ್ಕತಾಂಡವ – ಯದ್ವಾ ತತ್ರ ರಕ್ತಪದೇನಾಕಾಂಕ್ಷಾ ಅಸ್ತ್ಯೇವ । ನಹಿ ಸಮಭಿವ್ಯಾಹಾರಾದ್ ಆಕಾಂಕ್ಷಾ । ಕಿಂತು ಸಾಕಾಂಕ್ಷಾಣಾಂ ಸಮಭಿವ್ಯಾಹಾರಃ । ತತ್ರ ಅನಾಕಾಂಕ್ಷತ್ವವ್ಯವಹಾರಸ್ತು ರಕ್ತಾನ್ವಯೇ ತಾತ್ಪರ್ಯಾಭಾವಾತ್ ।**

ಅನುವಾದ– ಅಥವಾ 'ಘಟೋ ಭವತಿ' ಎಂಬಲ್ಲಿಯೂ ರಕ್ತಪದದ ಜೊತೆ ಆಕಾಂಕ್ಷೆಯು ಇದ್ದೇ ಇರುತ್ತದೆ. ಇಲ್ಲಿ ಸಮಭಿವ್ಯಾಹಾರರೂಪ ಕಾರಣದಿಂದ ಆಕಾಂಕ್ಷೆಯನ್ನು ಹೇಳುವುದಿಲ್ಲ. ಮತ್ತೇನೆಂದರೆ, ಆಕಾಂಕ್ಷೆಯು ಇದ್ದಾಗ ಸಮಭಿವ್ಯಾಹಾರವನ್ನು ಹೇಳಬೇಕು.

ಹಾಗಾದರೆ ಶಾಸ್ತ್ರದಲ್ಲಿ ಅನಾಕಾಂಕ್ಷತ್ವವ್ಯವಹಾರ ಹೇಗೆ ಸೂಕ್ತ? ಎಂದರೆ, ವಕ್ತೃವಿಗೆ ರಕ್ತಾನ್ವಯದಲ್ಲಿ ತಾತ್ಪರ್ಯವಿಲ್ಲ. ಆದ್ದರಿಂದ ವ್ಯವಹಾರ ಕೂಡಿಸಲು ಬರುತ್ತದೆ.

ವಿವರಣೆ - ಉಚ್ಚಾರಿತವಾದ ಘಟಪದಕ್ಕೂ ಅನುಚ್ಚಾರಿತವಾದ ರಕ್ತಪದಕ್ಕೂ ಆಕಾಂಕ್ಷೆಯು ಇದ್ದೇ ಇರುತ್ತದೆ. ಹಾಗಾದರೆ ಉಚ್ಚಾರಣನಿಬಂಧನರೂಪವಾದ ಸಮಭಿವ್ಯಾಹಾರವಾಗಲೀ ಆಭಿಪ್ರಾಯಿಕವಾದ ಸಮಭಿವ್ಯಾಹಾರವಾಗಲೀ ಇರುವುದಿಲ್ಲವಲ್ಲ. ಸಮಭಿವ್ಯಾಹಾರವಿಲ್ಲದೇ ಇದ್ದಾಗ ಆಕಾಂಕ್ಷೆಯನ್ನು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಾರದು. ಆಕಾಂಕ್ಷೆ ಇದ್ದಾಗ ಸಮಭಿವ್ಯಾಹಾರವನ್ನು ಹೇಳಲೇಬೇಕು ಹೊರತು ಸಮಭಿವ್ಯಾಹಾರವಿಲ್ಲದ ಕಾರಣ ಆಕಾಂಕ್ಷೆ ಇಲ್ಲವೆಂದು ಹೇಳಬಾರದು. ಹಾಗಾದರೆ ಘಟೋ ಭವತಿ ಎಂಬಲ್ಲಿ ರಕ್ತಪದದ ಜೊತೆ ಆಕಾಂಕ್ಷೆ ಇಲ್ಲವೆಂಬ ವ್ಯವಹಾರ ಏಕೆ ಇದೆ? ಎಂಬ ಪ್ರಶ್ನೆಗೆ 'ವಕ್ತೃವಿಗೆ ರಕ್ತಾನ್ವಯದಲ್ಲಿ ತಾತ್ಪರ್ಯವಿಲ್ಲದ್ದರಿಂದ' ಎಂದು ಉತ್ತರಿಸಬೇಕು.

## ಸಮಭಿವ್ಯಾಹಾರ ಇದ್ದಮಾತ್ರಕ್ಕೆ ಆಕಾಂಕ್ಷೆ ಇರಬೇಕಾಗಿಲ್ಲ

**ನ್ಯಾಯದೀಪ – ಸಮಭಿವ್ಯಾಹಾರಾಭಾವೇ ಕಥಮಾಕಾಂಕ್ಷಾ? ಇತ್ಯತ ಆಹ – ನ ಹೀತಿ ॥ ತಥಾತ್ವೇ ದ್ವಾರಮ್ ಇತ್ಯಾದಾವಾಕಾಂಕ್ಷಾಭಾವಪ್ರಸಂಗಾದಿತಿ ಭಾವಃ । ಸಾಕಾಂಕ್ಷಾಣಾಮಿತಿ ॥ ಅತ ಏವ ದ್ವಾರಮಿತ್ಯಾದಾವಧ್ಯಾಹಾರ ಇತಿ ಭಾವಃ ।**

ಅನುವಾದ– ಸಮಭಿವ್ಯಾಹಾರ ಇಲ್ಲದಿದ್ದರೆ ಹೇಗೆ ಆಕಾಂಕ್ಷೆಯು ಬರುತ್ತದೆ? ಎಂಬ ಪ್ರಶ್ನೆಗೆ 'ನ ಹಿ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಹೀಗೆ ಒಪ್ಪದಿದ್ದರೆ 'ದ್ವಾರಂ' ಎಂಬಲ್ಲಿಯೂ ಕೂಡ ಆಕಾಂಕ್ಷೆ ಇಲ್ಲವೆಂದು ಹೇಳಬೇಕಾದೀತು. ಆಕಾಂಕ್ಷೆಯಿರುವ ಸ್ಥಳದಲ್ಲಿ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾದ್ದರಿಂದ 'ದ್ವಾರಂ' ಎಂಬಲ್ಲಿಯೂ ಕೂಡ 'ಪಿಧೇಹಿ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂಬುದು 'ಸಾಕಾಂಕ್ಷಾಣಾಂ' ಎಂಬ ವಾಕ್ಯದ ಅಭಿಪ್ರಾಯ.

**ನ್ಯಾಯದೀಪ – ತತ್ರೇತಿ ॥ 'ರಕ್ತಪದೇ' ಇತ್ಯರ್ಥಃ । ಅನ್ವಯೇನ = ಅನ್ವಿತತ್ವೇನ ।**

ಅನುವಾದ– 'ತತ್ರ' ಎಂಬುದಕ್ಕೆ ರಕ್ತಪದದಲ್ಲಿ ಎಂದರ್ಥ. 'ಅನ್ವಯೇನ' ಎಂಬುದಕ್ಕೆ ಅನ್ವಿತತ್ವೇನ ಎಂದರ್ಥ.

## ಘಟಶಬ್ದಕ್ಕೆ ರಕ್ತಪದದ ಜೊತೆಗೆ ಉತ್ಥಿತ-ಆಕಾಂಕ್ಷಾ

**ತರ್ಕತಾಂಡವ – ಭವನಕ್ರಿಯಾನ್ವಯೇನ ಘಟಪದಸ್ಯ ರಕ್ತಪದೇ ಉತ್ಥಿತಾಕಾಂಕ್ಷಾಭಾವಾಚ್ಚ ।**

ಅನುವಾದ– 'ಘಟೋ ಭವತಿ' ಎಂಬಲ್ಲಿ ಘಟಪದಕ್ಕೆ ಭವನಕ್ರಿಯೆಯ ಜೊತೆ ಅನ್ವಯ ಆಗಿರುವುದರಿಂದ ಪುನಃ ರಕ್ತಪದದ ಜೊತೆಗೆ ಉತ್ಥಿತಆಕಾಂಕ್ಷೆ ಇರುವುದಿಲ್ಲ.

ಆದ್ದರಿಂದ ಇಲ್ಲಿ ಆಹಿತವಾದ ಆಕಾಂಕ್ಷೆಯನ್ನು ವಿವಕ್ಷಿಸಬೇಕು.

## ಉತ್ಥಿತ-ಆಕಾಂಕ್ಷಾ ಶಬ್ದಾರ್ಥ

**ನ್ಯಾಯದೀಪ – ಉತ್ಥಿತೇತಿ ।। ಸ್ವಾರಸಿಕೇತ್ಯರ್ಥಃ । ಆಕಾಂಕ್ಷಾರೂಪಹೇತೌ ಸತಿ ಕುತೋ ನಾನ್ವಯಧೀರಿತ್ಯತ ಆಹ - ಪಟಸ್ಯೇತಿ ।।**

ಅನುವಾದ– ಉತ್ಥಿತ ಎಂಬ ಪದಕ್ಕೆ ಸ್ವಾರಸಿಕ ಎಂದರ್ಥ. ಆಕಾಂಕ್ಷಾರೂಪವಾದ ಹೇತು ಇದ್ದಾಗ ಏಕೆ ಅನ್ವಯಜ್ಞಾನ ಬರುವುದಿಲ್ಲ? ಎಂಬ ಪ್ರಶ್ನೆಗೆ 'ಪಟಸ್ಯ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

## ಈ ಪಕ್ಷದಲ್ಲಿ ಸಮಭಿವ್ಯಾಹಾರಪದವು ಅನಪೇಕ್ಷಿತವೇ ಆಗಿದೆ

**ತರ್ಕತಾಂಡವ – ಘಟಸ್ಯ ರಕ್ತಾಭೇದಾಪ್ರತೀತಿಸ್ತು ರಕ್ತಪದಾನುಪಸ್ಥಿತೇಃ । ಅಸ್ಮಿಂಶ್ಚ ಪಕ್ಷೇ ಆಕಾಂಕ್ಷಾಲಕ್ಷಣೇ ಸಮಭಿವ್ಯಾಹೃತವಿಶೇಷಣಮನಪೇಕ್ಷಿತಮೇವ ।**

ಅನುವಾದ– ಹಾಗಾದರೆ ಘಟಕ್ಕೆ ರಕ್ತದಿಂದ ಅಭೇದಪ್ರತೀತಿಯು ಏಕೆ ಬರುತ್ತಿಲ್ಲ? ಎಂದರೆ ರಕ್ತಪದವು ಅನುಪಸ್ಥಿತವಾಗಿಲ್ಲದ್ದರಿಂದ ಎಂದು ಉತ್ತರ.

ಈ ಪಕ್ಷದಲ್ಲಿ ಆಕಾಂಕ್ಷಾಲಕ್ಷಣದಲ್ಲಿ ಸಮಭಿವ್ಯಾಹಾರ ಎಂಬ ವಿಶೇಷಣ ಅನಪೇಕ್ಷಿತವಾಗಿದೆ.

**ನ್ಯಾಯದೀಪ – ಅಸ್ಮಿಂಶ್ಚ ಪಕ್ಷ ಇತಿ ।। 'ರಕ್ತಪದೇऽಸ್ಯಾಕಾಂಕ್ಷೇತಿ ಪಕ್ಷೇ' ಇತ್ಯರ್ಥಃ । ತಸ್ಯಾಪಿ ಲಕ್ಷ್ಯತ್ವೇನಾತಿವ್ಯಾಪ್ತೇರಭಾವಾತ್ ।**

**ಏವಂ ದ್ವಾರಮಿತ್ಯಾದಾವವ್ಯಾಪ್ತಿಶಂಕಾ ನಾಸ್ತೀತಿ ಭಾವಃ ।**

ಅನುವಾದ– 'ಅಸ್ಮಿಂಶ್ಚ ಪಕ್ಷೇ' ಎಂದರೆ ರಕ್ತಪದದಲ್ಲಿ ಆಕಾಂಕ್ಷೆ ಇದೆ ಎಂಬ ಪಕ್ಷದಲ್ಲಿ ಎಂದರ್ಥ. ಆಗ ಇದೂ ಕೂಡ ಲಕ್ಷ್ಯವೇ ಆಗುವುದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲ.

ಇದೇ ರೀತಿಯಾಗಿ ದ್ವಾರಂ ಎಂಬಲ್ಲಿಯೂ ಕೂಡ ಅವ್ಯಾಪ್ತಿಶಂಕೆಯನ್ನು ಪರಿಹರಿಸಿಕೊಳ್ಳಬೇಕು.

## ಪ್ರಾಗಭಾವರೂಪಲಕ್ಷಣಕ್ಕೂ ಹಾಗೂ ಸ್ವರೂಪಯೋಗ್ಯತಾರೂಪಲಕ್ಷಣಕ್ಕೂ ಇರುವ ವ್ಯತ್ಯಾಸವೇನು?

**ತರ್ಕತಾಂಡವ – ನನ್ವೇವಮಿತರಪದವಿರಹಪ್ರಯುಕ್ತಾನನುಭಾವಕತಾಪ್ರಯೋಜಕರೂಪವತ್ತ್ವಾತ್ಮಿಕಾ ಸ್ವರೂಪಯೋಗ್ಯತಾ ಆಕಾಂಕ್ಷೇತಿ ಪರ್ಯವಸಿತಮ್ । ಸಾ ಚ ಜನಿತಫಲೇಽಪ್ಯಸ್ತೀತಿ ತತ್ರಾತಿವ್ಯಾಪ್ತಿಃ ಸ್ಯಾತ್ । ಪ್ರಾಗಭಾವಪಕ್ಷೇ ತು ನಾಯಂ ದೋಷ ಇತಿ ಚೇನ್ನ । ಇಷ್ಟಾಪತ್ತೇಃ । ಜನಿತಫಲೇಽನಾಕಾಂಕ್ಷತ್ವವ್ಯವಹಾರಸ್ತು ವಿರಕ್ತಂ ಪ್ರತಿ ವಾಣಿಜ್ಯೋಪದೇಶ ಇವ ಶ್ರೋತುರನ್ವಯಬೋಧಾಂತರಸ್ಯಾನಪೇಕ್ಷಿಕತ್ವಾತ್ । ನ ತು ಪದಸ್ಯ ನಿರಾಕಾಂಕ್ಷತ್ವಾತ್ । ನ ಚ ಲಾಕ್ಷಣಿಕಾದಾವವ್ಯಾಪ್ತಿಃ । ಮನ್ಮತೇ ಲಾಕ್ಷಣಿಕಗೌಣಯೋರ**

**ನ್ಯಾಯದೀಪ – 'ಇತರಪದವಿರಹಪ್ರಯುಕ್ತಾನುಭವಪ್ರಾಗಭಾವ ಆಕಾಂಕ್ಷಾ' ಇತಿ ಮಣ್ಯುಕ್ತಲಕ್ಷಣಾಭಿಮಾನೀ ಶಂಕತೇ – ನನ್ವೇವಮಿತಿ ॥ ಪದಾಂತರಸ್ಯ ಪದಾಂತರವಿರಹಪ್ರಯುಕ್ತಾನನುಭಾವಕತಾಯಾಃ ಪದಾಂತರೇ ಕ್ರಿಯಾಪದತ್ವಾದಿ-ಲಕ್ಷಣಪ್ರಯೋಜಕರೂಪಂ ಯತ್ ತದ್ವತ್ತ್ವಾತ್ತ್ಮಿಕೇತ್ಯರ್ಥಃ । ಜನಿತಾನ್ವಯಾನು-ಭವೇಽಪಿ ವಾಕ್ಯೇಽಸ್ತಿಕ್ರಿಯಾಪದತ್ವಾದೇಸ್ತದಾಽಪ್ಯನಪಾಯಾದಿತಿ ಭಾವಃ । ಅನ-ಪೇಕ್ಷಿತತ್ವಾದಿತಿ । ಏತೇನ 'ಜನಿತಾನ್ವಯಬೋಧೇನಾಪಿ ದ್ವಿತೀಯಾನ್ವಯಬೋಧ-ಜನನಾಪತ್ತೇರಿ'ತಿ ರುಚಿದತ್ತಾದ್ಯುಕ್ತಂ ನಿರಸ್ತಮ್ । ಅನಪೇಕ್ಷಾಯಾ ಏವ ಪ್ರತಿಬಂಧಕತ್ವಾತ್, ಅಪೇಕ್ಷಾಯಾಂ ತು ಇಷ್ಟಾಪತ್ತಿರಿತಿ ॥**

**ಮಣಿಕೃನ್ಮತೇಽಭಿಹಿತದೋಷೋ ನಾತ್ರಾಸ್ತೀತ್ಯಾಹ – ನಚೇತಿ ॥ ಮನ್ಮತ ಇತಿ ॥ ತತ್ರೋಕ್ತದೋಷಸ್ತು ಗೌಣಲಕ್ಷಣಾವೃತ್ತಿವಿಚಾರೇ ನಿರಸಿಷ್ಯತ ಇತಿ ಭಾವಃ ॥**

ಇತರಪದವಿರಹಪ್ರಯುಕ್ತ ಅನುಭವಪ್ರಾಗಭಾವಃ ಆಕಾಂಕ್ಷಾ ಎಂಬುದಾಗಿ ಮಣಿಕಾರನು ಹೇಳಿದ ಆಕಾಂಕ್ಷಾಲಕ್ಷಣವಿಷಯದಲ್ಲಿ ಅಭಿಮಾನ ಮಾಡುವವನು ನನ್ವೇವಂ ಇತ್ಯಾದಿಯಾಗಿ ಆಶಂಕಿಸುತ್ತಿದ್ದಾನೆ. ಒಂದು ಪದದಲ್ಲಿ ಮತ್ತೊಂದು ಪದದ ವಿರಹಪ್ರಯುಕ್ತವಾದ ಅನನುಭಾವಕತ್ವವಿರುತ್ತದೆ. ಇದಕ್ಕೆ ಪ್ರಯೋಜಕವಾದದ್ದು ಪದಾಂತರದಲ್ಲಿರುವ ಕ್ರಿಯಾಪದತ್ವಾದಿಗಳು. ಇಂತಹ ಧರ್ಮವನ್ನು ಹೊಂದಿರು-ವುದೇ ಆಕಾಂಕ್ಷಾ ಲಕ್ಷಣ ಎಂಬುದು ಅಭಿಪ್ರಾಯ.

ಜನಿತಾನ್ವಯವಾಕ್ಯದಲ್ಲಿ ಕ್ರಿಯಾಪದತ್ವಾದಿ ಆಕಾಂಕ್ಷಾಲಕ್ಷಣವು ಇರುವುದರಿಂದ ಅತಿವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆಂದು ಅಭಿಪ್ರಾಯ.

ಅನಪೇಕ್ಷಿತತ್ವಾತ್ ಎಂದು ಗ್ರಂಥದಲ್ಲಿ ಹೇಳಿರುವುದರಿಂದ ರುಚಿದತ್ತನ ವಾಕ್ಯವನ್ನು ನಿರಾಕರಣೆ ಮಾಡಿದಂತಾಯಿತು. ರುಚಿದತ್ತನ ವಾಕ್ಯ ಹೀಗಿದೆ – ''ಜನಿತಾನ್ವಯಬೋಧೇನಾಪಿ ದ್ವಿತೀಯಾನ್ವಯ-ಬೋಧಜನನಾಪತ್ತೇಃ' ಜನಿತಾನ್ವಯಬೋಧವುಳ್ಳ ವಾಕ್ಯದಿಂದ ಎರಡನೆಯ ಶಾಬ್ದಬೋಧವು ಬರಬೇಕಾದೀತು ಎಂದು. ಏಕೆಂದರೆ, ಜನಿತಾನ್ವಯವಾಕ್ಯದಲ್ಲಿ ಪುನಃ ಶಾಬ್ದಬೋಧ ಬಾರದಿರಲು ಅನಪೇಕ್ಷತ್ವವೇ ಪ್ರತಿಬಂಧಕ ಹೊರತು ಬೇರೆನೂ ಅಲ್ಲ. ಅಪೇಕ್ಷೆ ಇದ್ದರೆ ಪುನಃ ಅದೇ ವಾಕ್ಯದಿಂದ ಶಾಬ್ದಬೋಧ ಬರುವುದು ನಮಗೆ ಇಷ್ಟವೇ ಆಗಿದೆ.

ಪುನಃ ಮಣಿಕಾರನ ಮತದಲ್ಲಿ ಹೇಳಲ್ಪಟ್ಟ ದೋಷವು ಗೌಣಲಾಕ್ಷಣಿಕಪ್ರಯೋಗಗಳಲ್ಲಿ ಕೂಡ ಬರುವುದಿಲ್ಲವೆಂದು ನ ಚ ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಏಕೆಂದರೆ ಗೌಣಪ್ರಯೋಗ ಹಾಗೂ ಲಾಕ್ಷಣಿಕ ಪ್ರಯೋಗಗಳಲ್ಲಿಯೂ ಶಾಬ್ದಬೋಧಜನಕತ್ವವನ್ನು ನಾವು ಒಪ್ಪಿರುತ್ತೇವೆ. ಇದಕ್ಕೆ ಹೇಳಲ್ಪಟ್ಟ ದೋಷಗಳನ್ನು ಗೌಣಲಕ್ಷಣವೃತ್ತಿವಿಚಾರದಲ್ಲಿ ಮುಂದೆ ನಿರಾಕರಣೆ ಮಾಡುವವರಿದ್ದೇವೆ.

## ಆಕಾಂಕ್ಷೆಯು ಕಾರಣತ್ವವಾಯಿತು ಕಾರಣವಾಗಲಿಲ್ಲವೆಂದು ಆಕ್ಷೇಪ

**ತರ್ಕತಾಂಡವ – ನನ್ವಥಾಪಿ ಸ್ವರೂಪಯೋಗ್ಯತಾ ಕಾರಣತೈವ, ನ ತು ಕಾರಣಮ್ । ತಥಾಚಾಕಾಂಕ್ಷಾಯಾಃ ಶಾಬ್ದಬೋಧಹೇತುತ್ವಂ ನ ಸ್ಯಾದಿತಿ ಚೇನ್ನ ।**

ಅನುವಾದ– ಆದರೂ ಸಹ ಸ್ವರೂಪಯೋಗ್ಯತೆಯು ಕಾರಣತಾರೂಪವಾಗುತ್ತದೆ. ಕಾರಣರೂಪ ಆಗುವುದಿಲ್ಲ. ಆದ್ದರಿಂದ ಆಕಾಂಕ್ಷೆಗೆ ಶಾಬ್ದಬೋಧಹೇತುತ್ವವೇ ಇಲ್ಲವೆಂದಾಯಿತು. ಹೀಗೆ ಆಕ್ಷೇಪ ಮಾಡಬಾರದು.

> ವಿಶೇಷವಿಚಾರ - ಸ್ವರೂಪಯೋಗ್ಯತೆಯು ಕಾರಣತಾರೂಪವಾಗಿದೆ ಹೊರತು ಕಾರಣರೂಪವಲ್ಲ ಎಂಬುದರ ಅಭಿಪ್ರಾಯ ಹೀಗಿದೆ. ಅಗ್ನಿಯು ದಾಹಕ್ಕೆ ಕಾರಣವಾಗಿದೆ. ದಾಹಕಾರಣತ್ವ ಎಂಬುದು ಅಗ್ನಿಯಲ್ಲಿದೆ. ಇದು ಶಕ್ತಿರೂಪ ಎಂದು ತಾರ್ಕಿಕರು ಹೇಳುತ್ತಾರೆ. ಇದರಂತೆ ಕಾರಣದಲ್ಲಿ ಸ್ವರೂಪಯೋಗ್ಯತೆ ಇದೆ. ಆಗ ಅದು ಕಾರಣತಾರೂಪವಾಗುತ್ತದೆ. ಕಾರಣವೆಂದು ಹೇಳಲುಸಾಧ್ಯವಿಲ್ಲ. ಆಕಾಂಕ್ಷೆಯು ಶಾಬ್ದಬೋಧಕ್ಕೆ ಕಾರಣವೆಂದು ಲೋಕದಲ್ಲಿ ಎಲ್ಲರೂ ಹೇಳುತ್ತಾರೆ. ನೀವು ಆಕಾಂಕ್ಷೆಯು ಕಾರಣತ್ವರೂಪವೆಂದು ಹೇಳುತ್ತಿದ್ದೀರಿ. ಇದನ್ನು ಕೂಡಿಸಲು ಹೇಗೆ ಸಾಧ್ಯ? ಎಂದು ಆಕ್ಷೇಪ ಮಾಡುತ್ತಿದ್ದಾನೆ.

**ನ್ಯಾಯದೀಪ – ನನ್ವಥಾಪೀತಿ ॥ 'ಜನಿತಫಲೇಽತಿವ್ಯಾಪ್ತೇರದೋಷತ್ವೇಽಪಿ' ಇತ್ಯರ್ಥಃ । 'ಅತ ಏವ' ಇತ್ಯೇತದ್ ವ್ಯನಕ್ತಿ – ಉಕ್ತಯೋಗ್ಯತೇತ್ಯಾದಿ ॥**

ಅನುವಾದ– ''ನನ್ವಥಾಪಿ'' ಎಂದರೆ ಜನಿತಫಲದಲ್ಲಿ ಅತಿವ್ಯಾಪ್ತಿಯು ದೋಷವಾಗದಿದ್ದರೂ ಕೂಡ

ಎಂದರ್ಥ. 'ಅತ ಏವ' ಎಂಬ ಪದದ ವ್ಯಾಖ್ಯಾನವನ್ನು ಸ್ವತಃ ಗ್ರಂಥಕಾರರೇ 'ಉಕ್ತಯೋಗ್ಯತಾಜ್ಞಾನಸ್ಯ ಶಾಬ್ದಬೋಧ ಏವ' ಎಂಬುದಾಗಿ ಹೇಳಿದ್ದಾರೆ.

## ಆಕಾಂಕ್ಷಾ ಕಾರಣವೇ ಅಲ್ಲವೆಂದು ಪರಿಹಾರ

**ತರ್ಕತಾಂಡವ – ಉಕ್ತಾಕಾಂಕ್ಷಾಜ್ಞಾನಸ್ಯೈವ ಹೇತುತ್ವೇನೇಷ್ಟಾಪತ್ತೇಃ । ಅತ ಏವೋಕ್ತ-ಯೋಗ್ಯತಾಜ್ಞಾನಸ್ಯ ಶಾಬ್ದಬೋಧ ಏವ ಹೇತುತ್ವಾದೇವಾಸಾಧಾರಣ್ಯಮ್ ।**

ಅನುವಾದ– ಹಿಂದೆ ಹೇಳಿದಂತೆ ಆಕಾಂಕ್ಷಾಜ್ಞಾನವೇ ಶಾಬ್ದಬೋಧಕ್ಕೆ ಕಾರಣವಾಗಿರುವುದರಿಂದ ನಮಗೆ ಇಷ್ಟಾಪತ್ತಿಯೇ ಆಗಿದೆ. ಆದ್ದರಿಂದಲೇ ಉಕ್ತಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಕಾರಣ-ವೆಂದು ಒಪ್ಪಿರುವುದರಿಂದಲೇ ಆಕಾಂಕ್ಷೆಗೆ ಅಸಾಧಾರಣ್ಯವು ಯುಕ್ತವಾಗುತ್ತದೆ.

ವಿವರಣೆ - ಆಕಾಂಕ್ಷೆಯನ್ನು ಸ್ವರೂಪಯೋಗ್ಯತಾರೂಪವೆಂದು ಹೇಳಿದರೆ ಕಾರಣತಾ-ರೂಪವಾಯಿತು. ಆಕಾಂಕ್ಷೆಯು ಕಾರಣವಾಗಲಿಲ್ಲ ಎಂಬ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಏಕೆಂದರೆ ಆಕಾಂಕ್ಷೆಯು ಶಾಬ್ದಬೋಧಕ್ಕೆ ಕಾರಣವೆಂದು ನಾವು ಹೇಳುವುದೇ ಇಲ್ಲ. ಆಕಾಂಕ್ಷಾಜ್ಞಾನ ಮಾತ್ರ ಶಾಬ್ದಬೋಧಕ್ಕೆ ಕಾರಣವೆಂದು ಹೇಳುತ್ತೇವೆ. ಆದ್ದರಿಂದ ನಿಮ್ಮ ಆಕ್ಷೇಪ ನಮಗೆ ಇಷ್ಟವೇ ಆಗಿದೆ. ಆದ್ದರಿಂದ ಸ್ವರೂಪಯೋಗ್ಯತೆಯ ಜ್ಞಾನವು ಕಾರಣ-ವಾಗಿರುವುದರಿಂದ ಅಸಾಧಾರಣ್ಯವು ಕೂಡ ಯುಕ್ತವಾಗುತ್ತದೆ. ಇಲ್ಲದಿದ್ದರೆ ಯೋಗ್ಯತೆಯು ಎಲ್ಲೆಡೆಯೂ ಸಾಧಾರಣವಾಗಿರುವುದರಿಂದ ಅಸಾಧಾರಣ್ಯವು ಬರುತ್ತಿರಲಿಲ್ಲ.

## ಆಕಾಂಕ್ಷಾಜ್ಞಾನವೇ ಶಾಬ್ದಬೋಧಕ್ಕೆ ಕಾರಣವೆನ್ನಲು ಏನು ಪ್ರಮಾಣ?

**ತರ್ಕತಾಂಡವ – ನ ಹಿ ಘಟಾದೌ ಕಾರಣತಾಜ್ಞಾನಂ ಹೇತುಃ । ನಚ ಶಾಬ್ದಬೋಧೇಽಪಿ ತಜ್ಜ್ಞಾನಸ್ಯ ಹೇತುತ್ವೇ ಮಾನಾಭಾವಃ ।**

ಅನುವಾದ– ಘಟಾದಿಗಳಲ್ಲಿ ಕಾರಣತಾಜ್ಞಾನವು ಕಾರಣವಾಗಿದ್ದು ಕಂಡಿಲ್ಲ. ಅದರಂತೆ ಶಾಬ್ದಬೋಧದಲ್ಲಿಯೂ ಆಕಾಂಕ್ಷಾ ಜ್ಞಾನವು ಕಾರಣವೆಂದು ಹೇಳಲು ಯಾವುದೇ ಪ್ರಮಾಣವಿಲ್ಲ.

ವಿಶೇಷವಿಚಾರ - ಹಿಂದೆ ಮಣಿಕಾರನು ಶಾಬ್ದಬೋಧಕ್ಕೆ ಪ್ರಾಗಭಾವವನ್ನು ಕಾರಣವೆಂದು ಹೇಳಿದ್ದನು. ಆಗ ಅಸಾಧಾರಣ್ಯ ಬರುವುದಿಲ್ಲವೆಂದು ಗ್ರಂಥಕಾರರು ದೋಷ ಹೇಳಿದ್ದಕ್ಕೆ ಮಣಿಕಾರನು ಪ್ರಾಗಭಾವಜ್ಞಾನವು ಕಾರಣವೆಂದು ಸಮರ್ಥಿಸಿದ್ದನು. ಪ್ರಾಗಭಾವಜ್ಞಾನವು ಕಾರಣವೆನ್ನಲು ಯಾವುದೇ ಪ್ರಮಾಣವಿಲ್ಲವೆಂದು ಆಗ ಗ್ರಂಥಕಾರರು ಆಕ್ಷೇಪ ಮಾಡಿದ್ದರು. ಈಗ ಅದೇ ದೋಷ ನಿಮಗೆ ಬರುತ್ತದೆಂದು ಪೂರ್ವಪಕ್ಷಕಾರರು ಆಕ್ಷೇಪ ಮಾಡುತ್ತಿದ್ದಾರೆ. ನಾವು ಪ್ರಾಗಭಾವಜ್ಞಾನವನ್ನು ಕಾರಣವೆಂದಾಗ ಯಾವುದೇ ಪ್ರಮಾಣ-ವಿಲ್ಲವೆಂದು ಆಕ್ಷೇಪ ಮಾಡುವ ನಿಮಗೂ ಕೂಡ ಆಕಾಂಕ್ಷಾಜ್ಞಾನವು ಕಾರಣವಾಗಿದೆ-ಯೆನ್ನಲು ಯಾವುದೇ ಪ್ರಮಾಣವಿಲ್ಲ.

**ನ್ಯಾಯದೀಪ – ನಹೀತಿ ।। ಯೇನಾಸಾಧಾರಣ್ಯಂ ನ ಸ್ಯಾದಿತಿ ಭಾವಃ ।**

ಅನುವಾದ– ಘಟಾದಿಗಳಲ್ಲಿ ಕಾರಣತಾಜ್ಞಾನವು ಹೇತುವಾಗಿರುವುದು ಕಂಡಿಲ್ಲ. ಹಾಗೆ ಕಂಡಿದ್ದಲ್ಲಿ ಅಸಾಧಾರಣ್ಯವು ಬರುತ್ತಿರಲಿಲ್ಲ ಎಂದಭಿಪ್ರಾಯ.

## ಪುನಃಪುನಃ ಶಾಬ್ದಬೋಧ ಬರಲಿ ಎಂಬ ಆಕ್ಷೇಪಕ್ಕೆ ಉತ್ತರ

**ನ್ಯಾಯದೀಪ – ಯತ್ತು 'ಆಕಾಂಕ್ಷಾಜ್ಞಾನಸ್ಯ ಹೇತುತ್ವೇ ಜನಿತಫಲೇಽಪಿ ವಾಕ್ಯೇ ಪರೇಣ ಇತರವಿರಹಪ್ರಯುಕ್ತಾನನುಭಾವಕತಾಪ್ರಯೋಜಕರೂಪವದಿತಿ ಶಬ್ದ ಉದ್ಭಾವಿತೇಽನ್ವಯಬೋಧಾಪತ್ತಿಃ' ಇತಿ । ತನ್ನ । ಪ್ರಾಚೀನಾನ್ವಯ-ಬೋಧಸ್ಯೈವ ಪ್ರತಿಬಂಧಕತ್ವಾಚ್ಛ್ರೋತುರನಪೇಕ್ಷಿತತ್ವಾಚ್ಚೇತಿ ।।**

ಅನುವಾದ– ಆಕ್ಷೇಪ – 'ಆಕಾಂಕ್ಷಾಜ್ಞಾನವು ಹೇತುವೆಂದು ಹೇಳಿದರೆ ಈ ಮೊದಲಿಗೇ ಅನ್ವಯಬೋಧ ಬಂದಿರುವ ವಾಕ್ಯದಲ್ಲಿ ಪುನಃ ಇತರವಿರಹಪ್ರಯುಕ್ತಅನನುಭಾವಕತಾಪ್ರಯೋಜಕ-ರೂಪವತ್ ಎಂಬ ಶಬ್ದವನ್ನು ಪ್ರಯೋಗಿಸಿದರೆ ಪುನಃ ಅನ್ವಯಬೋಧ ಬರಬೇಕಾದೀತು'

ಪರಿಹಾರ– ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಹಿಂದೆ ಬಂದಿರುವ ಅನ್ವಯಬೋಧವೇ ಮತ್ತೊಮ್ಮೆ ಅನ್ವಯಬೋಧ ಬರಲು ಪ್ರತಿಬಂಧಕವಾಗಿದೆ. ಹಾಗೂ ಪುನಃ ಅನ್ವಯಬೋಧವು ಶ್ರೋತೃವಿಗೆ ಅನಪೇಕ್ಷಿತವಾಗಿದೆ.

ವಿವರಣೆ -ಆಕಾಂಕ್ಷಾಜ್ಞಾನವನ್ನೇ ಹೇತುವೆಂದು ಹೇಳಿದರೆ ಒಬ್ಬ 'ಘಟಮಾನಯ' ಎಂಬ ವಾಕ್ಯವನ್ನು ಹೇಳಿ ಅನಂತರ 'ಇತರವಿರಹಪ್ರಯುಕ್ತಅನನುಭಾವಕತಾಪ್ರಯೋಜಕರೂಪವತ್' ಎಂದು ಹೇಳುತ್ತಾನೆ. ಹೀಗೆ ಹೇಳಿದಾಗ ಆಕಾಂಕ್ಷಾಜ್ಞಾನ ಪುನಃ ಬರುತ್ತದೆ. ಆದ್ದರಿಂದ ಒಮ್ಮೆ 'ಘಟಮಾನಯ' ಎಂಬುದರಿಂದ ಶಾಬ್ದಬೋಧ ಬಂದಮೇಲೆ ಪುನಃ ಶಾಬ್ದಬೋಧ ಬರಲಿ ಎಂಬುದು ಆಕ್ಷೇಪದ ಅಭಿಪ್ರಾಯ.

ಇದಕ್ಕೆ ಎರಡು ಬಗೆಯಲ್ಲಿ ಉತ್ತರಿಸಿದ್ದಾರೆ. ಪೂರ್ವಪಕ್ಷಕಾರರ ಪ್ರಕಾರ ಹಿಂದೆ ಬಂದಿರುವ ಅನ್ವಯಬೋಧವೇ ಶಾಬ್ದಬೋಧಾಂತರಕ್ಕೆ ಪ್ರತಿಬಂಧಕವಾಗಿದೆ ಎಂದು. ನಮ್ಮ ಪ್ರಕಾರ ಶ್ರೋತೃವಿಗೆ ಅನಪೇಕ್ಷಿತವಾದ್ದರಿಂದ ಮತ್ತೊಮ್ಮೆ ಶಾಬ್ದಬೋಧ ಬರುವುದಿಲ್ಲ.

## ಆಕಾಂಕ್ಷಾಜ್ಞಾನವಿಲ್ಲದಿದ್ದರೆ ಶಾಬ್ದಬೋಧವು ವಿಲಂಬವಾಗುತ್ತದೆ

**ನ್ಯಾಯದೀಪ – ಮಾನಾಭಾವ ಇತಿ ॥ ಶಕ್ತಿಸ್ಮರಣೇ ಸತಿ ತಜ್ಜ್ಞಾನಾಭಾವೇನ ಅನ್ವಯಬೋಧವಿಲಂಬಾಭಾವಾದಿತಿ ಶಂಕಿತುರ್ಭಾವಃ । ತದಭಾವೇಽಸ್ತ್ಯನ್ವಯಬೋಧವಿಲಂಬ ಇತ್ಯಾಹ – ಪದಶಕ್ತೀತಿ ॥**

ಅನುವಾದ– ಶಕ್ತಿಸ್ಮರಣೆ ಇದ್ದಾಗ ಆಕಾಂಕ್ಷಾಜ್ಞಾನ ಇಲ್ಲ ಎಂಬ ಕಾರಣದಿಂದ ಅನ್ವಯಬೋಧದಲ್ಲಿ ವಿಲಂಬವಾಗಿರುವುದು ಕಂಡಿಲ್ಲವಲ್ಲ ಎಂಬುದು ಆಶಂಕೆ ಮಾಡುವವನ ಅಭಿಪ್ರಾಯ. ಆಕಾಂಕ್ಷಾಜ್ಞಾನ ಇಲ್ಲದಿದ್ದರೆ ಅನ್ವಯಬೋಧ ವಿಲಂಬವಾಗುತ್ತದೆ ಎಂಬುದು ಸಮಾಧಾನ ಮಾಡುವವರ ಅಭಿಪ್ರಾಯ. ಇದನ್ನು ಪದಶಕ್ತಿ ಎಂಬ ವಾಕ್ಯದಿಂದ ವಿವರಣೆ ಕೊಡುತ್ತಿದ್ದಾರೆ.

ವಿವರಣೆ - 'ತತ್ಸತ್ತ್ವೇ ತತ್ಸತ್ತ್ವಂ ತದಭಾವೇ ತದಭಾವಃ' ಎಂಬ ಅನ್ವಯವ್ಯತಿರೇಕಗಳಿದ್ದರೆ ಮಾತ್ರ ಕಾರಣತ್ವವು ಯುಕ್ತವಾಗುತ್ತದೆ. 'ಆಕಾಂಕ್ಷಾಜ್ಞಾನವಿದ್ದರೆ ಮಾತ್ರ ಶಾಬ್ದಬೋಧ ಬರುತ್ತದೆ. ಇಲ್ಲದಿದ್ದರೆ ಇಲ್ಲ' ಎಂದು ಅನ್ವಯವ್ಯತಿರೇಕವನ್ನು ತೋರಿಸಲು ಸಾಧ್ಯವಿಲ್ಲ ಎಂಬ ಆಕ್ಷೇಪಕ್ಕೆ 'ಪದಶಕ್ತಿ' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಾರೆ.

ಪದಗಳಿಗೆ ಶಕ್ತಿಜ್ಞಾನವಿದ್ದರೂ ಕೂಡ ಕ್ರಿಯಾಪದವಿಲ್ಲದೇ ಕಾರಕಪದವು ಅನ್ವಯಬೋಧ ಜನಕವಾಗುವುದಿಲ್ಲ ಎಂಬ ವ್ಯುತ್ಪತ್ತಿ ಬರುವುದಿಲ್ಲ. ಆದ್ದರಿಂದ ಅನ್ವಯವ್ಯತಿರೇಕವು ಆಕಾಂಕ್ಷಾಜ್ಞಾನದಲ್ಲಿ ಯುಕ್ತವಾಗುತ್ತದೆಂದು ಉತ್ತರದ ಅಭಿಪ್ರಾಯ.

## ಆಕಾಂಕ್ಷಾಜ್ಞಾನವೇ ಶಾಬ್ದಬೋಧಕ್ಕೆ ಕಾರಣ ಎನ್ನಲು ಜಯದೇವನ ಸಮ್ಮತಿ

**ನ್ಯಾಯದೀಪ – ಉಕ್ತಂ ಚ ಜಯದೇವೇನಾಪಿ 'ಆಕಾಂಕ್ಷಾಹೇತುತ್ವೇ ಮಾನಾಭಾವೇನ ತಜ್ಜ್ಞಾನಂ ಕಾರಣಮ್' ಇತಿ ॥**

ಅನುವಾದ– ಜಯದೇವನೂ ಕೂಡ 'ಆಕಾಂಕ್ಷಾಹೇತುತ್ವೇ ಮಾನಾಭಾವೇನ ತಜ್ಜ್ಞಾನಂ ಕಾರಣಂ' 'ಶಾಬ್ದಬೋಧಕ್ಕೆ ಆಕಾಂಕ್ಷೆಯು ಕಾರಣವೆನ್ನಲು ಯಾವುದೇ ಪ್ರಮಾಣವಿಲ್ಲ. ಆದ್ದರಿಂದ ಆಕಾಂಕ್ಷಾಜ್ಞಾನವು ಶಾಬ್ದಬೋಧಕ್ಕೆ ಕಾರಣವಾಗುತ್ತದೆ' ಎಂದು ಹೇಳಿದ್ದಾನೆ.

## ವಾಕ್ಯವ್ಯುತ್ಪತ್ತಿ ಇರುವವನಿಗಷ್ಟೇ ವಾಕ್ಯಾರ್ಥಬೋಧ ಬರುವುದೇ ಪ್ರಮಾಣ

**ತರ್ಕತಾಂಡವ – ಪದಶಕ್ತಿಗ್ರಹರೂಪಪದವ್ಯುತ್ಪತ್ತೌ ಸತ್ಯಾಮಪಿ ಕ್ರಿಯಾಪದಂ ವಿನಾ ಕಾರಕಪದಂ ನಾನ್ವಯಬೋಧಕಮಿತಿ ಸಾಮಾನ್ಯಜ್ಞಾನರೂಪವಾಕ್ಯವ್ಯುತ್ಪತ್ತಿಂ ವಿನಾ ವಾಕ್ಯಾರ್ಥಬೋಧಾಭಾವಾತ್ । ಅನ್ಯಥಾ ವಾಕ್ಯಂ ವಾಕ್ಯಾವ್ಯುತ್ಪನ್ನಸ್ಯಾಪ್ಯನ್ವಯಬೋಧಕಂ ಸ್ಯಾತ್ ॥**

ಅನುವಾದ– 'ಪದಶಕ್ತಿಜ್ಞಾನವೆಂಬ ಪದಗಳ ವ್ಯುತ್ಪತ್ತಿ ಇದ್ದರೂ ಕೂಡ ಕ್ರಿಯಾಪದವಿಲ್ಲದೇ ಕಾರಕಪದವು ಅನ್ವಯಬೋಧಕವಾಗುವುದಿಲ್ಲ' ಎಂಬ ಸಾಮಾನ್ಯಜ್ಞಾನರೂಪವಾದ ವಾಕ್ಯವ್ಯುತ್ಪತ್ತಿ ಇಲ್ಲದೇ ವಾಕ್ಯಾರ್ಥವು ಬರುವುದಿಲ್ಲ. ಹೀಗೊಪ್ಪದಿದ್ದರೆ ವಾಕ್ಯದ ವ್ಯುತ್ಪತ್ತಿ ಇಲ್ಲದವನಿಗೂ ವಾಕ್ಯದಿಂದ ಅನ್ವಯಬೋಧ ಆಗಬೇಕಾದೀತು!!

> ವಿವರಣೆ - ಒಬ್ಬನಿಗೆ ಯಾವ ಪದಗಳಿಗೆ ಯಾವ ಅರ್ಥದಲ್ಲಿ ಶಕ್ತಿ ಇದೆ ಎಂದು ವ್ಯುತ್ಪತ್ತಿ ಇದೆ. ಆದರೆ ವಾಕ್ಯವ್ಯುತ್ಪತ್ತಿ ಇರುವುದಿಲ್ಲ. ಕ್ರಿಯಾಪದವು ಕಾರಕಪದವಿಲ್ಲದೇ ಅನ್ವಯಬೋಧಕವಾಗುವುದಿಲ್ಲ ಎಂಬ ವಾಕ್ಯದ ವ್ಯುತ್ಪತ್ತಿಯೇ ಇಲ್ಲದ ಇಂತಹ ವ್ಯಕ್ತಿಗೆ ವಾಕ್ಯಾರ್ಥಬೋಧವು ಬರುವುದಿಲ್ಲ. ಆದ್ದರಿಂದ ವಾಕ್ಯಾರ್ಥಬೋಧ ಬರಬೇಕೆಂದರೆ ಸ್ವರೂಪಯೋಗ್ಯತಾರೂಪವಾದ ಆಕಾಂಕ್ಷಾಜ್ಞಾನವನ್ನು ಕಾರಣವೆಂದು ಒಪ್ಪಲೇಬೇಕು. ಆಕಾಂಕ್ಷಾ-

ಜ್ಞಾನವೆಂದರೆ, ಕಾರಕಪದವಿಲ್ಲದೇ ಅನ್ವಯಬೋಧವಾಗುವುದಿಲ್ಲವೆಂಬ, ಕ್ರಿಯಾಪದತ್ವ-ಕಾರಕಪದತ್ವ ಮೊದಲಾದವುಗಳ ಜ್ಞಾನ ಎಂದರ್ಥ.

## ರುಚಿದತ್ತನ ನಿರಾಕರಣೆ

**ನ್ಯಾಯದೀಪ– ಏತೇನ 'ನ ಹಿ ತಸ್ಯಾಪಿ ಜ್ಞಾನಂ ಹೇತುರಿತಿ ಶಕ್ಯತೇ ವಕ್ತುಮ್ । ತತ್ರ ಮಾನಾಭಾವಾತ್' ಇತಿ ರುಚಿದತ್ತೋಕ್ತಂ ನಿರಸ್ತಂ ಧ್ಯೇಯಮ್ । ವಾಕ್ಯಾವ್ಯುತ್ಪನ್ನಸ್ಯೇತಿ ॥ 'ಉಕ್ತರೂಪವಾಕ್ಯವ್ಯುತ್ಪತ್ತಿಹೀನಸ್ಯಾಪಿ' ಇತ್ಯರ್ಥಃ ।**

ಅನುವಾದ– ಹೀಗೆ ಹೇಳಿದ್ದರಿಂದ 'ನ ಹಿ ತಸ್ಯಾಪಿ ಜ್ಞಾನಂ ಹೇತುರಿತಿ ಶಕ್ಯತೇ ವಕ್ತುಮ್। ತತ್ರ ಮಾನಾಭಾವಾತ್' 'ಆಕಾಂಕ್ಷಾಜ್ಞಾನವು ಶಾಬ್ದಬೋಧಕ್ಕೆ ಕಾರಣವೆಂದು ಹೇಳಲು ಯಾವುದೇ ಪ್ರಮಾಣ-ವಿಲ್ಲ' ಎಂಬುದಾಗಿ ರುಚಿದತ್ತನು ಆಕ್ಷೇಪ ಮಾಡಿದ್ದಾನೆ. ಅದನ್ನು ನಿರಾಕರಣೆ ಮಾಡಿದಂತಾಯಿತು. 'ವಾಕ್ಯಾವ್ಯುತ್ಪನ್ನಸ್ಯ' ಎಂಬುದಕ್ಕೆ 'ಕ್ರಿಯಾಪದವಿಲ್ಲದೇ ಕಾರಕಪದವು ಅನ್ವಯಬೋಧಕವಾಗುವುದಿಲ್ಲ' ಎಂಬ ವ್ಯುತ್ಪತ್ತಿಹೀನನಿಗೂ ಕೂಡ ಎಂದರ್ಥ.

ವಿಶೇಷವಿಚಾರ - ಕಾರಕಪದವು ಕ್ರಿಯಾಪದವಿಲ್ಲದೇ ಅನ್ವಯಬೋಧಜನಕ ಆಗುವುದಿಲ್ಲ ಎಂಬ ಸಾಮಾನ್ಯ ವ್ಯುತ್ಪತ್ತಿಯು ಇರಬೇಕು. ಇಷ್ಟೇ ಸಾಲದು; ಆ ವಾಕ್ಯದಲ್ಲಿ ಇರುವ ಪದಗಳಲ್ಲಿ ಕ್ರಿಯಾತ್ವ, ಕಾರಕತ್ವ ಮೊದಲಾದ ಧರ್ಮಗಳ ಜ್ಞಾನವೂ ಕೂಡ ಇರಬೇಕು ಎಂಬಂಶವನ್ನು ಗಮನಿಸಬೇಕು.

## ಗೋಷ್ಠಿಯವಿಚಾರಗಳು

ಆಶಂಕೆ – ತಾರ್ಕಿಕರು ಆಕಾಂಕ್ಷಾಜ್ಞಾನವನ್ನು ಕಾರಣವೆನ್ನುತ್ತಾರೆ. ನೀವೂ ಕೂಡ ಆಕಾಂಕ್ಷಾ ಜ್ಞಾನವನ್ನು ಕಾರಣವೆನ್ನುತ್ತಿರುವಿರಿ. ಶಾಬ್ದಬೋಧ ಬಂದ ಮೇಲೆ ಆಕಾಂಕ್ಷಾಜ್ಞಾನ ಶಾಂತವಾಗುತ್ತದೆಂದು ಇಬ್ಬರಲ್ಲಿಯೂ ಸಮಾನ. ಹೀಗಿರುವಾಗ ತಾರ್ಕಿಕರಿಗೂ ತತ್ತ್ವವಾದಿ-ಗಳಿಗೂ ಏನು ವ್ಯತ್ಯಾಸ.

ಸಮಾಧಾನ – ವ್ಯತ್ಯಾಸವಿದೆ. ಶಾಬ್ದಬೋಧ ಬರುವ ಮೊದಲು ಮಾತ್ರ ಆಕಾಂಕ್ಷೆ

ಇರುತ್ತದೆಂದು ತಾರ್ಕಿಕರು ಹೇಳುತ್ತಾರೆ. ನಾವು ಶಾಬ್ದಬೋಧ ಬಂದ ಅನಂತರದಲ್ಲಿಯೂ ಆಕಾಂಕ್ಷೆ ಇರುತ್ತದೆಂದು ಹೇಳುತ್ತೇವೆ.

ಆಶಂಕೆ – ಇದು ಹೇಗೆ ಸಾಧ್ಯ ?

ಸಮಾಧಾನ – ಆಕಾಂಕ್ಷೆ ಎಂದರೆ ಸ್ವರೂಪಯೋಗ್ಯತಾ ಎಂದರ್ಥ. ಶಾಬ್ದಬೋಧ ಬಂದ ಮೇಲೂ ಸಹ ಶಬ್ದಗಳಲ್ಲಿ ಸ್ವರೂಪಯೋಗ್ಯತೆ ಇರುವುದರಿಂದ ಆಕಾಂಕ್ಷೆ ಇಲ್ಲವೆಂದು ಹೇಳಲು ಸಾಧ್ಯವಿಲ್ಲ.

ಆಶಂಕೆ – 'ಘಟಮಾನಯ' ಎಂಬ ವಾಕ್ಯವನ್ನು ಕೇಳಿದ ಅನಂತರ ಶ್ರೋತೃವಿಗೆ ಶಾಬ್ದಬೋಧ ಹುಟ್ಟುತ್ತದೆ. ಇದರಿಂದ ಅವನ ಆಕಾಂಕ್ಷೆಯು ಶಾಂತವಾದ ಮೇಲೆ ಪುನಃ ಅದೇ ವಿಷಯದಲ್ಲಿ ಆಕಾಂಕ್ಷೆ ಹುಟ್ಟಲು ಹೇಗೆ ಸಾಧ್ಯ ? ಹಾಗಾದರೆ ಪುನಃ ಪುನಃ ಆಕಾಂಕ್ಷೆಯು ಹುಟ್ಟಿ ಪುನಃ ಪುನಃ ಶಾಬ್ದಬೋಧ ಬರಬೇಕಾದೀತಲ್ಲವೇ?

ಸಮಾಧಾನ – ಏಕೆ ಹುಟ್ಟಬಾರದು? ನಮಗೆ ಆಸಕ್ತಿ ಇರುವ ವಿಷಯದಲ್ಲಿ ಒಂದೇ ವಾಕ್ಯದಿಂದ ಅನೇಕಬಾರಿ ಶಾಬ್ದಬೋಧ ಹುಟ್ಟುವುದು ಅನುಭವಸಿದ್ಧವಾಗಿದೆ. ಆದ್ದರಿಂದ ವಾಕ್ಯವು ಒಮ್ಮೆ ಶಾಬ್ದಬೋಧ ಹುಟ್ಟಿಸಿದ ಮೇಲೆ ಅದೇ ವಾಕ್ಯವು ಪುನಃ ಶಾಬ್ದಬೋಧ ಹುಟ್ಟಿಸಬಾರದೆಂಬ ನಿಯಮ ಮಾಡಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ಅನುಭವವಿರೋಧ ಬರುತ್ತದೆ. ಶ್ರೋತೃವಿಗೆ ಆಸಕ್ತಿ ಇಲ್ಲದಿದ್ದರೆ ಮೊದಲನೆಯ ಬಾರಿ ಕೂಡ ಶಾಬ್ದಬೋಧ ಬರುವುದಿಲ್ಲ. ಆದ್ದರಿಂದ ಆಕಾಂಕ್ಷೆಯನ್ನು ಸ್ವರೂಪಯೋಗ್ಯತೆಯಿಂದೇ ಹೇಳಬೇಕು.

ಆಕ್ಷೇಪ – ಆಕಾಂಕ್ಷೆ ಎಂದರೆ ಚೇತನಧರ್ಮವೆಂದು ಹಿಂದೆ ಹೇಳಿದಿರಿ. ಆದರೆ ಪದಗಳು ಆಕಾಂಕ್ಷೆಯನ್ನು ಶಾಂತಮಾಡುತ್ತವೆಂದು ಉತ್ತರಿಸುತ್ತೀರಿ. ಇದು ಪರಸ್ಪರವಿರುದ್ಧವಲ್ಲವೇ?

ಸಮಾಧಾನ – ಹೌದು ಆಕಾಂಕ್ಷೆಯು ಚೇತನಧರ್ಮವೇ ಆಗಿದ್ದರೂ ಆಕಾಂಕ್ಷೆಗೆ ವಿಷಯ–ವಾದ ಪದಾರ್ಥಪ್ರತಿಪಾದಕವಾದ್ದರಿಂದ ಪದಗಳಲ್ಲಿಯೂ ಆಕಾಂಕ್ಷೆ ಬರುತ್ತದೆ. ಇದು ಸಾಮರ್ಥ್ಯರೂಪವಾದ್ದರಿಂದ ಸ್ವರೂಪಯೋಗ್ಯತೆಯೆಂದು ಹೇಳುತ್ತೇವೆ.

ಆಶಂಕೆ – ಆಕಾಂಕ್ಷೆಯೆಂದರೆ ಸ್ವರೂಪಯೋಗ್ಯತೆ. ಇದು 'ಕಾರಣತಾ' ಆಗುತ್ತದೆ; ಹೊರತು ಕಾರಣವಲ್ಲ. ಆಕಾಂಕ್ಷಾಜ್ಞಾನವು ಶಾಬ್ದಬೋಧಕ್ಕೆ ಕಾರಣ ಎಂದು ಹೇಳುತ್ತಿದ್ದೀರಿ. ಹಾಗಾದರೆ

ಅನುಮಿತಿಗೆ ಧೂಮಜ್ಞಾನವು ಕಾರಣ; ಅದಕ್ಕೆ ವಿಷಯವಾದದ್ದು ಕಾರಣತಾ ಎಂದು ಹೇಳಬೇಕಾದೀತು?

ಸಮಾಧಾನ – ಎಲ್ಲೆಡೆಯೂ ಸ್ವರೂಪಯೋಗ್ಯತೆ ಇದ್ದರೆ ಮಾತ್ರ ಕಾರ್ಯ ಹುಟ್ಟಲು ಸಾಧ್ಯ . ಆದರೆ ಸ್ವರೂಪಯೋಗ್ಯತೆಯು ಕಾರ್ಯಭೇದದಿಂದ ತಾನು ಭಿನ್ನವಾಗುತ್ತದೆ. ಅನುಮಿತಿಗೆ ಧೂಮಜ್ಞಾನವು ಕಾರಣ. ಅಗ್ನಿಜ್ಞಾನಜನಕತ್ವವು ಧೂಮದಲ್ಲಿದೆ. ಇದಕ್ಕೆ ವ್ಯಾಪ್ತಿ ,ಪಕ್ಷ ಧರ್ಮತಾಗಳು ಅವಶ್ಯವಾಗಿ ಬೇಕು. ಇದನ್ನೇ ನಾವು ಸಾಮರ್ಥ್ಯವೆಂದು ಕರೆಯುತ್ತಿದ್ದೇವೆ. ಅನುಮಿತಿ ಹುಟ್ಟಲು ವ್ಯಾಪ್ತಿ , ಪಕ್ಷಧರ್ಮತಾಗಳೆಂಬ ಸ್ವರೂಪಯೋಗ್ಯತೆಯು ಇರಬೇಕೆಂದು ಉತ್ತರಿಸುತ್ತೇವೆ. ಪ್ರಕೃತ ಶಾಬ್ದಬೋಧ ಹುಟ್ಟಲು ಆಕಾಂಕ್ಷೆಯೆಂಬ ಸ್ವರೂಪಯೋಗ್ಯತೆಯು ಬೇಕು.

ಆಶಂಕೆ – ಹೀಗೆ ಸ್ವರೂಪಯೋಗ್ಯತೆಯು ಎಲ್ಲೆಡೆ ಇರುವುದಾದರೆ ಅಸಾಧಾರಣ್ಯವನ್ನು ಹೇಗೆ ಹೇಳುತ್ತೀರಿ?

ಸಮಾಧಾನ – ಸ್ವರೂಪಯೋಗ್ಯತೆಯು ಶಬ್ದದಲ್ಲಿ ಮಾತ್ರ ಇರಬೇಕೆಂದಲ್ಲ. ಎಲ್ಲೆಡೆಯೂ ಇರಬಾರದೆಂದಷ್ಟೇ ಅಸಾಧಾರಣ್ಯದ ಅಭಿಪ್ರಾಯ.

ಪ್ರಶ್ನೆ– ಹಾಗಾದರೆ ಆಕಾಂಕ್ಷೆ ಇಲ್ಲದ ಪ್ರಯುಕ್ತವಾಗಿ ಶಾಬ್ದಬೋಧವು ಬರುವುದಿಲ್ಲವೆಂಬ ಪ್ರಸಂಗವೇ ಇಲ್ಲದಂತಾಯಿತು. ಯಾವುದಾದರೊಂದು ಸ್ಥಳದಲ್ಲಿ ಶಾಬ್ದಬೋಧ ಬಾರದಿದ್ದರೆ ಅಲ್ಲಿ ಆಯಾ ಪದವನ್ನು ಅಧ್ಯಾಹಾರ ಮಾಡಿಕೊಂಡೇ ಕೂಡಿಸಬಹುದೆಂದಾಯಿತು!

ಉತ್ತರ – ಹಾಗಲ್ಲ. ಆಕಾಂಕ್ಷೆಯನ್ನು ಶಾಂತಮಾಡುವ ಶಬ್ದಗಳನ್ನು ಉಚ್ಚಾರಣೆ ಮಾಡದಿದ್ದರೆ ಅಲ್ಲಿ ಪದಗಳ ಉಪಸ್ಥಿತಿಯೂ ಕೂಡ ಆಗುವುದಿಲ್ಲ. ಆಗ ಶಾಬ್ದಬೋಧವೂ ಬರುವುದಿಲ್ಲ ಎಂದಭಿಪ್ರಾಯ. ಹಾಗೂ ಶಾಬ್ದಬೋಧ ಬರುವ ಸ್ಥಳದಲ್ಲಿ ಆಕಾಂಕ್ಷೆ ಇದ್ದೇ ಇರುತ್ತದೆ ಎಂಬುದು ನಮ್ಮ ಅಭಿಪ್ರಾಯ. ಆದ್ದರಿಂದ ಆಕಾಂಕ್ಷೆ ಇದ್ದ ಮಾತ್ರದಿಂದಲೇ ಶಾಬ್ದಬೋಧ ಬರಲಿ ಎಂದು ಹೇಳಬಾರದು.

ಪ್ರಶ್ನೆ – ವಕ್ತೃವಿಗೆ ಅಭಿಪ್ರಾಯವಿಲ್ಲದಿದ್ದಲ್ಲಿ ಆಕಾಂಕ್ಷೆಯೇ ಇರುವುದಿಲ್ಲ. ಆಗ ಶಾಬ್ದಬೋಧವು ಬರುವುದಿಲ್ಲವೇ?

ಉತ್ತರ – ಯಾವಾಗ ವಕ್ತೃವಿಗೆ ಅಭಿಪ್ರಾಯವಿರುವುದಿಲ್ಲವೋ ಆಗ ಶ್ರೋತೃವಿಗೆ ಶಬ್ದದ ಉಪಸ್ಥಿತಿಯು ಆಗುವುದಿಲ್ಲ. ಅದರಿಂದ ಶಾಬ್ದಬೋಧವು ಕೂಡ ಬರುವುದಿಲ್ಲ.

ಪ್ರಶ್ನೆ – ಆಕಾಂಕ್ಷಾವಿರಹಪ್ರಯುಕ್ತವಾಗಿ ಶಾಬ್ದಬೋಧದ ಅಭಾವಕ್ಕೆ ಎಲ್ಲಿ ದೃಷ್ಟಾಂತ ಕಂಡಿದೆ?

ಉತ್ತರ – 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬಲ್ಲಿ ಪದಗಳಿಗೆ ಪರಸ್ಪರ ಆಕಾಂಕ್ಷೆ ಇರುವುದಿಲ್ಲ. ಆದ್ದರಿಂದ ಶಾಬ್ದಬೋಧವು ಕೂಡ ಇಲ್ಲಿ ಹುಟ್ಟುವುದಿಲ್ಲ. ಆದ್ದರಿಂದ ಉಚ್ಚಾರಿತವಾದ ಪದಗಳಲ್ಲಿ ಆಕಾಂಕ್ಷಾವಿರಹಪ್ರಯುಕ್ತವಾಗಿ ಶಾಬ್ದಬೋಧವು ಬರುವುದಿಲ್ಲ-ವೆಂದು ತಿಳಿಯಬೇಕು.

ಪ್ರಶ್ನೆ – ಆಕಾಂಕ್ಷಾವಿರಹಪ್ರಯುಕ್ತವಾದ ಶಾಬ್ದಬೋಧವು ಎಷ್ಟುವಿಧ?

ಉತ್ತರ – ಎರಡು ವಿಧ. (1) ಶಬ್ದಗಳನ್ನು ಉಚ್ಚಾರ ಮಾಡದಿದ್ದರೆ ಪದಗಳ ಉಪಸ್ಥಿತಿಯೇ ಆಗುವುದಿಲ್ಲವಾದ್ದರಿಂದ ಶಾಬ್ದಬೋಧ ಬರುವುದಿಲ್ಲ. ಇಲ್ಲಿರುವ ಶಾಬ್ದಬೋಧದ ಅಭಾವವು ಉಚ್ಚಾರಣಾಭಾವದ ಪ್ರಯುಕ್ತವಾಗಿ ಆಗುತ್ತದೆ.

2. ಇನ್ನು ಕೆಲವೆಡೆ ಪದಗಳ ಉಚ್ಚಾರಣೆ ಇದ್ದರೂ ಕೂಡ ಅವುಗಳಿಂದ ಕ್ರಿಯಾಕಾರಕಭಾವ ಮೊದಲಾದ ಸಂಬಂಧಗಳು ತಿಳಿಯುವುದಿಲ್ಲ. ಇದರ ಪ್ರಯುಕ್ತವಾಗಿಯೂ ಕೂಡ ಆಕಾಂಕ್ಷೆಯು ಇರುವುದಿಲ್ಲ. ಇದಕ್ಕೆ 'ಘಟಃ ಕರ್ಮತ್ವಂ' ಎಂಬುದು ದೃಷ್ಟಾಂತವಾಗಿದೆ.

* * * *

## ಆಕಾಂಕ್ಷೆಯ ಲಕ್ಷಣಕ್ಕೆ ಅತಿವ್ಯಾಪ್ತಿಯ ಆಶಂಕೆ

**ತರ್ಕತಾಂಡವ – ನನ್ವೇವಂ ಚೇತ್, 'ಅಯಮೇತಿ ಪುತ್ರೋ ರಾಜ್ಞಃ ಪುರುಷೋಽ-ಪಸಾರ್ಯತಾಮ್' ಇತ್ಯತ್ರ, ರಾಜಪದೇ ಪುತ್ರಪುರುಷಪದಗತರೂಪವಿರಹಪ್ರಯುಕ್ತ-ತತ್ತದನ್ವಯಾನನುಭಾವಕತ್ವರೂಪಾಕಾಂಕ್ಷಾಯಾಃ ಸತ್ವಾದುಭಯಾನ್ವಯಧೀಃ ಸ್ಯಾದಿತಿ ಚೇನ್ನ ।**

ಅನುವಾದ– ಆಕಾಂಕ್ಷೆಯ ಲಕ್ಷಣವನ್ನು ಹೀಗೆ ಪರಿಷ್ಕರಿಸುವುದಾದರೆ 'ಅಯಮೇತಿ ಪುತ್ರೋ ರಾಜ್ಞಃ ಪುರುಷೋಽಪಸಾರ್ಯತಾಮ್' ಎಂಬೀ ವಾಕ್ಯದಲ್ಲಿರುವ ರಾಜಪದದಲ್ಲಿ ಪುತ್ರಪದ ಹಾಗೂ ಪುರುಷಪದದಲ್ಲಿರುವ ಧರ್ಮವಿರಹಪ್ರಯುಕ್ತವಾದ ಅನ್ವಯಾನನುಭಾವಕತ್ವವೆಂಬ ಆಕಾಂಕ್ಷೆಯ ಲಕ್ಷಣ ಬರುತ್ತದೆ. ಆದ್ದರಿಂದ ಪುತ್ರಪದಕ್ಕೆ ಎರಡರ ಜೊತೆಗೂ ಒಟ್ಟಿಗೆ ಅನ್ವಯ ಬರಬೇಕಾದೀತು!!

ವಿವರಣೆ - 'ಇತರಪದವಿರಹಪ್ರಯುಕ್ತ ಅನನುಭಾವಕತಾಪ್ರಯೋಜಕರೂಪವತ್ವಂ' ಎಂಬ ಆಕಾಂಕ್ಷೆಯ ಲಕ್ಷಣಕ್ಕೆ ಪೂರ್ವಪಕ್ಷಿಯು ಅತಿಪ್ರಸಂಗವನ್ನು ಆಕ್ಷೇಪ ಮಾಡುತ್ತಿದ್ದಾನೆ. 'ಅಯಮೇತಿ ಪುತ್ರೋ ರಾಜ್ಞಃ ಪುರುಷೋಽಪಸಾರ್ಯತಾಮ್' 'ರಾಜಪುತ್ರನು ಆಗಮಿಸುತ್ತಿದ್ದಾನೆ. ಪುರುಷನು ದಾರಿಬಿಡಲಿ' ಎಂಬುದು ಈ ವಾಕ್ಯದ ಅರ್ಥ. ಈ ವಾಕ್ಯದಲ್ಲಿ 'ರಾಜ್ಞಃ' ಎಂಬ ಷಷ್ಠಿವಿಭಕ್ತ್ಯಂತವಾದ ಪದವಿದೆ. ಇದಕ್ಕೆ ಪುತ್ರಪದದಲ್ಲಿಯೇ ಅನ್ವಯ ಹೊರತು ಪುರುಷಪದದಲ್ಲಿ ಅನ್ವಯ ಇಲ್ಲ ಎನ್ನುವುದು ಸಿದ್ಧವಾದ ವಿಚಾರ. ಆದರೆ ರಾಜಪದಕ್ಕೆ ಪುತ್ರನಲ್ಲಿ ಅನ್ವಯವಿದ್ದಂತೆ ಪುರುಷನಲ್ಲಿಯೂ ಕೂಡ ಅನ್ವಯವಾಗಲಿ ಎಂದು ಈಗ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿದ್ದಾನೆ.

ಇತರಪದ ಎಂದರೆ ಪುತ್ರಪದ ಹೇಗಾಗುತ್ತದೋ ಅದರಂತೆ ಪುರುಷಪದವು ಕೂಡ ಆಗುತ್ತದೆ. ತತ್ಪ್ರಯುಕ್ತವಾದ ಅನನುಭಾವಕತ್ವಕ್ಕೆ ಪ್ರಯೋಜಕವಾದ ಧರ್ಮವು ರಾಜಪದದಲ್ಲಿ ಬರುತ್ತದೆ. ರಾಜಪದವು ಷಷ್ಠೀ ವಿಭಕ್ತಿಯಲ್ಲಿದೆ. ಷಷ್ಠ್ಯೇತರವಿಭಕ್ತ್ಯಂತತ್ವವು ಪುತ್ರ ಹಾಗೂ ಪುರುಷಪದದಲ್ಲಿ ಸಮಾನವಾಗಿದೆ. ಆದ್ದರಿಂದ 'ಷಷ್ಠ್ಯೇತರವಿಭಕ್ತ್ಯಂತತ್ವ' ಎಂಬ ಧರ್ಮವು ಪುತ್ರ ಹಾಗೂ ಪುರುಷಪದದಲ್ಲಿ ಸಮಾನವಾಗಿರುವುದರಿಂದ ಪುರುಷ ಪದದಿಂದ ಹಾಗೂ ರಾಜಪದದಿಂದ ಅನ್ವಯಜ್ಞಾನವು ಬರಬೇಕಾದೀತು! ಎಂಬುದು ಆಕ್ಷೇಪದ ಅಭಿಪ್ರಾಯ.

## ರಾಜಪದಕ್ಕೆ ಪುತ್ರಪದದಿಂದ ಹಾಗೂ ಪುರುಷಪದದಿಂದ ಒಟ್ಟಿಗೇ ಅನ್ವಯಬೋಧ ಬರಲಿ

**ನ್ಯಾಯದೀಪ– ಉಕ್ತಲಕ್ಷಣಸ್ಯ ವಾಕ್ಯಾಂತರೇಽತಿವ್ಯಾಪ್ತಿಮಾಶಂಕತೇ –**

**ನನ್ವೇವಮಿತಿ ॥ ಇತರಪದವಿರಹಪ್ರಯುಕ್ತಾನನುಭಾವಕತಾಪ್ರಯೋಜಕರೂಪ-ವತ್ವಮ್ ಆಕಾಂಕ್ಷಾ ಚೇತ್, ಇತ್ಯರ್ಥಃ । ಪುತ್ರಪುರುಷಪದಗತೇತಿ ॥ ಪ್ರಥಮಾ-ವಿಭಕ್ತ್ಯಂತತ್ವಲಕ್ಷಣಧರ್ಮೇತ್ಯರ್ಥಃ । ರೂಪಶಬ್ದೋ ಧರ್ಮಪರ್ಯಾಯಃ । ಉಭಯೇತಿ ॥ ನಾಸ್ತಿ ಚ ಪುರುಷಪದೇನಾಕಾಂಕ್ಷಾ । ಅತಸ್ತತ್ರೋಕ್ತಲಕ್ಷಣಮ್ ಅತಿವ್ಯಾಪ್ತಮಿತಿ ಭಾವಃ ।**

ಅನುವಾದ– ಅತಿವ್ಯಾಪ್ತಿದೋಷವನ್ನು ಹಿಂದೆ ನಾವು ಹೇಳಿದ ಆಕಾಂಕ್ಷೆಯ ಲಕ್ಷಣಕ್ಕೆ ಮತ್ತೊಂದು ವಾಕ್ಯದಲ್ಲಿ 'ನನ್ವೇವಂ' ಇತ್ಯಾದಿಯಾಗಿ ಆಶಂಕಿಸುತ್ತಿದ್ದಾರೆ. 'ಏವಂ ಚೇತ್' ಎಂಬುದಕ್ಕೆ 'ಇತರಪದ-ವಿರಹಪ್ರಯುಕ್ತಾನನುಭಾವಕತಾಪ್ರಯೋಜಕರೂಪವತ್ವವು ಆಕಾಂಕ್ಷೆಯ ಲಕ್ಷಣವಾಗುವುದಾದರೆ' ಎಂದ-ರ್ಥ.

'ಪುತ್ರಪುರುಷಪದಗತ' ಎಂಬುದಕ್ಕೆ 'ಪ್ರಥಮಾವಿಭಕ್ತ್ಯಂತತ್ವ ಎಂಬ ಲಕ್ಷಣಧರ್ಮವುಳ್ಳ' ಎಂದರ್ಥ. ರೂಪಶಬ್ದಕ್ಕೆ ಧರ್ಮ ಎಂದರ್ಥ.

ರಾಜಪದಕ್ಕೆ ಪುರುಷಪದದಿಂದ ಆಕಾಂಕ್ಷೆ ಇರುವುದೇ ಇಲ್ಲ; ಕೇವಲ ಪುತ್ರಪದದ ಜೊತೆಗೆ ಆಕಾಂಕ್ಷೆ ಇರುತ್ತದೆ. ಆದರೆ ಈಗ ನಿಮ್ಮ ಆಕಾಂಕ್ಷೆಯ ಲಕ್ಷಣವು ಪುರುಷಪದದಲ್ಲಿಯೂ ಬರುವುದರಿಂದ ಅತಿವ್ಯಾಪ್ತಿದೋಷ ಪ್ರಾಪ್ತವಾಗುತ್ತದೆಂದು ಅಭಿಪ್ರಾಯ.

## ನಿಮ್ಮ ಆಕ್ಷೇಪ ನಮಗೆ ಇಷ್ಟಾಪತ್ತಿ

**ತರ್ಕತಾಂಡವ – ಉಭಯತ್ರ ಆಕಾಂಕ್ಷಾಯಾಃ ಸತ್ವೇಽಪಿ ಪುತ್ರಾನ್ವಯ ಏವ ತಾತ್ಪರ್ಯಗ್ರಹೇ ಪುರುಷಾನ್ವಯಬೋಧಾಭಾವಸಂಭವಾತ್ । ಉಭಯತ್ರ ತಾತ್ಪರ್ಯಗ್ರಹೇ ಚೇಷ್ಟಾಪತ್ತೇಃ ॥**

ಅನುವಾದ– ರಾಜಪದಕ್ಕೆ ಪುತ್ರಪದದ ಜೊತೆ ಹಾಗೂ ಪುರುಷಪದದ ಜೊತೆಗೆ ಆಕಾಂಕ್ಷೆಯು ಇದ್ದರೂ ಕೂಡ ಪುತ್ರಪದದ ಜೊತೆಗೆ ಮಾತ್ರ ಅನ್ವಯಬೋಧವು ಬರುತ್ತದೆ. ಏಕೆಂದರೆ, ವಕ್ತೃವಿನ ಅಭಿಪ್ರಾಯ 'ರಾಜಪದಕ್ಕೆ ಪುತ್ರಪದದ ಜೊತೆಗೆ ಅನ್ವಯಬರಲಿ' ಎಂದೇ ಇರುತ್ತದೆ.

ಆದ್ದರಿಂದ ಪುರುಷಪದದ ಜೊತೆಗೆ ಅನ್ವಯಬೋಧ ಬರಲು ಸಾಧ್ಯವಿಲ್ಲ. ಒಂದು ವೇಳೆ ವಕ್ತೃವಿಗೆ ಎರಡರ ಜೊತೆಗೂ ಅನ್ವಯಬೋಧ ಬರಲಿ ಎಂಬ ತಾತ್ಪರ್ಯಗ್ರಹವಿದ್ದರೆ ನಮಗೆ ಇಷ್ಟಾಪತ್ತಿಯೇ ಆಗಿದೆ.

> ವಿವರಣೆ - ಪೂರ್ವಪಕ್ಷಿಯ ಅತಿಪ್ರಸಂಗದ ಆಕ್ಷೇಪಕ್ಕೆ ಇಷ್ಟಾಪತ್ತಿಯೆಂಬುದೇ ನಮ್ಮ ಉತ್ತರ. ಹಾಗಿದ್ದರೆ ರಾಜಪದಕ್ಕೆ ಎರಡರ ಜೊತೆ ಅನ್ವಯವು ಏಕೆ ಉಂಟಾಗುತ್ತಿಲ್ಲ? ಎಂಬುದಕ್ಕೆ ಕಾರಣವಿದೆ. ಈ ವಾಕ್ಯವನ್ನು ಪ್ರಯೋಗ ಮಾಡುವವನಿಗೆ ಪುತ್ರಪದದ ಜೊತೆ ಮಾತ್ರ ಅನ್ವಯಬೋಧ ಬರಲಿ ಎಂಬ ಅಭಿಪ್ರಾಯವಿರುತ್ತದೆ. ಇದನ್ನು ತಿಳಿದುಕೊಂಡಿರುವ ಶ್ರೋತೃವಾದವನು ಪುರುಷಪದದ ಜೊತೆ ಅನ್ವಯಬೋಧವನ್ನು ತಂದುಕೊಳ್ಳುವುದಿಲ್ಲ. ಒಂದು ವೇಳೆ ಹೇಳುವವನ ಅಭಿಪ್ರಾಯ ಎರಡರ ಜೊತೆಗೂ ಅನ್ವಯವಾಗಲಿ ಎಂದಿರುವುದಾದರೆ ಆಗ ಕೇಳುವವನಿಗೆ ಎರಡು ಪದಗಳ ಜೊತೆಗೂ ಅನ್ವಯಬೋಧವು ಬಂದೇ ಬರುತ್ತದೆ. ಹೀಗಿರುವಾಗ ಅತಿಪ್ರಸಂಗದೋಷವನ್ನು ಆಕ್ಷೇಪ ಮಾಡುವುದು ಸಾಧುವಲ್ಲ.

## ಅತಿಪ್ರಸಂಗ ತೋರಿಸಿದ ಸ್ಥಳ ಲಕ್ಷ್ಯವೇ ಆಗಿದೆ

**ನ್ಯಾಯದೀಪ– ಲಕ್ಷ್ಯತ್ವಮುಪೇತ್ಯ ಸಮಾಧಿಮಾಹ – ಉಭಯತ್ರೇತಿ ॥ ತಾತ್ಪರ್ಯಗ್ರಹಸ್ಯ ಶಾಬ್ದಬೋಧೇ ಹೇತುತ್ವಾದನ್ಯತ್ರ ತದಭಾವಾದೇವ ಅನ್ವಯಬೋಧಾಭಾವೋ ನ ತ್ವಾಕಾಂಕ್ಷಾವಿರಹಾತ್, ಯೇನಾತಿವ್ಯಾಪ್ತಿಃ ಸ್ಯಾದಿತಿ ಭಾವಃ ।**

ಅನುವಾದ– ಅತಿಪ್ರಸಂಗಕ್ಕೆ ವಿಷಯವಾದ 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬ ಸ್ಥಳವು ಲಕ್ಷ್ಯವೇ ಆಗಿದೆ ಎಂದು ಒಪ್ಪಿ ಸಮಾಧಾನವನ್ನು 'ಉಭಯತ್ರ' ಎಂಬುದಾಗಿ ಹೇಳುತ್ತಿದ್ದಾರೆ.

''ಶಾಬ್ದಬೋಧಕ್ಕೆ ತಾತ್ಪರ್ಯಗ್ರಹವು ಕಾರಣವಾಗಿದೆ. ಬೇರೆಡೆ ತಾತ್ಪರ್ಯಗ್ರಹ ಇಲ್ಲದ ಕಾರಣ ಅನ್ವಯಬೋಧ ಹುಟ್ಟುವುದಿಲ್ಲ; ಹೊರತು ಆಕಾಂಕ್ಷೆ ಇಲ್ಲ ಎಂಬ ಕಾರಣದಿಂದಲ್ಲ. ಹಾಗಾಗಿದ್ದಲ್ಲಿ ಅತಿವ್ಯಾಪ್ತಿಗೆ ಅವಕಾಶವಿರುತ್ತಿತ್ತು '' ಎಂದಭಿಪ್ರಾಯ.

## 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬಲ್ಲಿಯೂ ಹೀಗೆಯೇ ಹೇಳಬೇಕು

**ತರ್ಕತಾಂಡವ– ಅತ ಏವ ತತ್ರಾವೃತ್ತಿಃ ಕಲ್ಪ್ಯತೇ । 'ಅಹೋ ವಿಮಲಂ ಜಲಂ ನದ್ಯಾಃ, ಕಚ್ಛೇ ಮಹಿಷಶ್ಚರತಿ' ಇತ್ಯತ್ರ ಯೇನ ಪುಂಸಾ 'ನದ್ಯಾಃ' ಇತ್ಯಾದಿಕಮೇವ ಶ್ರುತಂ ತಂ ಪ್ರತಿ ನದೀಪದಂ ಜಲಪದಾಶ್ರವಣೇನ ಕಚ್ಛ ಏವ ಸಾಕಾಂಕ್ಷಮ್ ।**

ಅನುವಾದ– ಆದ್ದರಿಂದಲೇ 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬಲ್ಲಿ 'ರಾಜ್ಞಃ ಪುತ್ರಃ' ಎಂದು 'ರಾಜ್ಞಃ ಪುರುಷಃ' ಎಂದು ಆವೃತ್ತಿಯನ್ನು ಕಲ್ಪನೆ ಮಾಡುತ್ತೇವೆ.

'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬಲ್ಲಿ ಯಾವ ಪುರುಷನಿಂದ 'ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂದಷ್ಟೇ ಕೇಳಲ್ಪಟ್ಟಿದೆಯೋ ಅವನಿಗೆ ನದೀಪದಕ್ಕೆ ಕಚ್ಛದಲ್ಲಷ್ಟೇ ಆಕಾಂಕ್ಷೆಯು ಹುಟ್ಟುತ್ತದೆ. ಜಲಪದವು ಕೇಳದ ಕಾರಣ ಅವನಿಗೆ ಆಕಾಂಕ್ಷೆ ಹುಟ್ಟುವುದಿಲ್ಲ.

ವಿವರಣೆ - 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬಲ್ಲಿ 'ರಾಜ್ಞಃ' ಎಂಬ ಷಷ್ಠ್ಯಂತವಾದ ಪದಕ್ಕೆ ಷಷ್ಠೀರಹಿತವಿಭಕ್ತ್ಯಂತತ್ವವುಳ್ಳ ಪುತ್ರಪದದ ಜೊತೆ ಆಕಾಂಕ್ಷೆ ಇದ್ದಂತೆ ಪುರುಷಪದದ ಜೊತೆಯೂ ಕೂಡ ಆಕಾಂಕ್ಷೆ ಇರುತ್ತದೆ. ಒಂದು ವೇಳೆ ವಕ್ತೃವಿಗೆ ಎರಡು ಪದಗಳ ಜೊತೆಯೂ ಅನ್ವಯ ಬರಲಿ ಎಂಬ ವಿವಕ್ಷೆ ಇದ್ದರೆ ಆಗ ಪದದ ಆವೃತ್ತಿಯನ್ನು ಅಲ್ಲಿಯೂ ಕಲ್ಪನೆ ಮಾಡುತ್ತೇವೆ. 'ಅಯಮೇತಿ ರಾಜ್ಞಃ ಪುತ್ರಃ' 'ರಾಜ್ಞಃ ಪುರುಷಃ ಅಪಸಾರ್ಯತಾಮ್' ಎಂದು ಎರಡು ವಾಕ್ಯಗಳು ಇಲ್ಲಿ ಆಗುತ್ತವೆ. ಹೀಗೆ ಹೇಳಿದಾಗ ಯಾವ ದೋಷಕ್ಕೂ ಅವಕಾಶವಿಲ್ಲ.

ಇದರಂತೆ 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬಲ್ಲಿಯೂ ತಿಳಿಯಬೇಕು. ಹಿಂದೆ ತತ್ತ್ವಚಿಂತಾಮಣಿಕಾರನು ಈ ವಾಕ್ಯದ ಅನ್ವಯದ ವಿಷಯದಲ್ಲಿ ಅನೇಕ ಗೊಂದಲಗಳನ್ನು ಹೊಂದಿದ್ದನು. ಇಲ್ಲಿಯೂ ಕೂಡ ಸ್ಪಷ್ಟವಾದ ವಿಷಯವನ್ನು ಹೀಗೆ ತಿಳಿಯಬೇಕು – 'ನದೀಪದಕ್ಕೆ ಕಚ್ಛಪದದ ಜೊತೆ ಮಾತ್ರ ಅನ್ವಯವಿರಲಿ' ಎಂಬುದಾಗಿ ವಕ್ತೃವಿಗೆ ತಾತ್ಪರ್ಯವಿದ್ದರೆ ಅದಕ್ಕನುಗುಣವಾಗಿ ಶ್ರೋತೃವೂ ಕೂಡ

ಹಾಗೆಯೇ ತಿಳಿಯುತ್ತಾನೆ. ಒಂದು ವೇಳೆ ವಕ್ತೃವಿಗೆ 'ಜಲದ ಜೊತೆಗೆ ಹಾಗೂ ಕಚ್ಛದ ಜೊತೆ ಅನ್ವಯಬೋಧವನ್ನು ಹುಟ್ಟಿಸಲಿ' ಎಂಬ ವಿವಕ್ಷೆ ಇದ್ದರೆ ಆಗ ಶ್ರೋತೃವಿಗೂ ಎರಡರ ಜೊತೆಯೇ ಅನ್ವಯಬೋಧ ಹುಟ್ಟುತ್ತದೆ. ಆದ್ದರಿಂದ ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬುದಕ್ಕೂ 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬುದಕ್ಕೂ ಯಾವುದೇ ವ್ಯತ್ಯಾಸವಿಲ್ಲ.

ಹೀಗೆಯೇ ಒಪ್ಪಬೇಕು. ಏಕೆಂದರೆ 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬ ವಾಕ್ಯವನ್ನು ಪ್ರಯೋಗಿಸಿದಾಗ ಕೇಳುವವನಿಗೆ 'ಅಹೋ ವಿಮಲಂ ಜಲಂ' ಎಂಬ ಮೂರು ಪದಗಳು ಕೇಳಿಸಲೇ ಇಲ್ಲ. ಕೇವಲ 'ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂದಷ್ಟೇ ಕೇಳಿಸುತ್ತದೆ. ಈ ಸಂದರ್ಭದಲ್ಲಿ ನದೀಪದಕ್ಕೆ ಜಲಪದದ ಜೊತೆ ಆಕಾಂಕ್ಷೆಯನ್ನು ಹೇಳಲು ಸಾಧ್ಯವಿಲ್ಲದ ಕಾರಣ ಕಚ್ಛದಲ್ಲಿ ಮಾತ್ರ ಆಕಾಂಕ್ಷೆಯನ್ನು ಹೇಳಬೇಕು. ಉಪಸ್ಥಿತವಾದ ಇತರಪದ ಎಂದರೆ ಜಲಪದವನ್ನು ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಜಲಪದವು ಉಪಸ್ಥಿತವೇ ಆಗಿಲ್ಲ. ಆದ್ದರಿಂದ ಕಚ್ಛಪದವನ್ನೇ ವಿವಕ್ಷಿಸಬೇಕು. ತತ್ಪ್ರಯುಕ್ತವಾದ ಅನ್ವಯಾನಾನುಭಾವಕತ್ವವು ಪ್ರಯೋಜಕತ್ವವಾದ ರೂಪವಾಗಿದೆ. ಇದು ಕಚ್ಛಪದದಲ್ಲಷ್ಟೇ ಇರುವುದರಿಂದ ಆಕಾಂಕ್ಷೆಯ ಲಕ್ಷಣ ಕಚ್ಛಪದದಲ್ಲಿ ಮಾತ್ರ ಬರುತ್ತದೆ.

## ನಮ್ಮ ಆಕಾಂಕ್ಷೆಯ ಲಕ್ಷಣಕ್ಕೆ ಅವ್ಯಾಪ್ತಿದೋಷವು ಕೂಡ ಬರುವುದಿಲ್ಲ

**ನ್ಯಾಯದೀಪ – ಆವೃತ್ತಿರಿತಿ ॥ 'ರಾಜಪದಸ್ಯ' ಇತ್ಯರ್ಥಃ । ಕಚ್ಛ ಏವೇತಿ ॥ ಏವಂಚ ಜಲಸ್ಯಾಶ್ರವಣೇನಾನುಪಸ್ಥಿತೇಸ್ತತ್ರ ಷಷ್ಠ್ಯಂತಾನ್ವಯಪ್ರಯೋಜಕೋಪಸ್ಥಿತಿವಿಷಯರೂಪವತ್ತ್ವಾಭಾವಾತ್ ಪ್ರಥಮಾಂತೇನಾಪಿ ಜಲಪದೇನ ನಿರಾಕಾಂಕ್ಷತ್ವೈವೇತಿ ನ ತತ್ರಾವ್ಯಾಪ್ತಿರ್ದೋಷಾಯ । ಉಪಸ್ಥಿತೌ ತು ತತ್ರಾಕಾಂಕ್ಷಾಸತ್ತ್ವೇಽಪಿ ತಾತ್ಪರ್ಯಾಗ್ರಹಾದನ್ವಯಬೋಧಾಭಾವಃ । ತತ್ರಾಪಿ ತಾತ್ಪರ್ಯಗ್ರಹೇ ತೂಭಯತ್ರಾನ್ವಯಬೋಧೋ ನದೀಪದಾವೃತ್ತಿಶ್ಚ ಪೂರ್ವವದಿಷ್ಟೈವೇತಿ ಭಾವಃ ।**

ಅನುವಾದ– 'ಆವೃತ್ತಿಃ' ಎಂದರೆ ರಾಜಪದದ ಆವೃತ್ತಿ ಇದೆ ಎಂದರ್ಥ.

'ಕಚ್ಛ ಏವ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ – 'ಅಹೋ ವಿಮಲಂ ಜಲಂ' ಎಂಬಲ್ಲಿರುವ

ಜಲಪದವು ಕೇಳಿಸದ ಕಾರಣ ಅನುಪಸ್ಥಿತವಾಗಿದೆ. ಆದ್ದರಿಂದ ಷಷ್ಠ್ಯಂತವಾದ ನದೀಪದದ ಜೊತೆ ಅನ್ವಯಪ್ರಯೋಜಕವಾದ ಉಪಸ್ಥಿತಿವಿಷಯರೂಪವತ್ತ್ವವು ಜಲಪದದಲ್ಲಿ ಇರುವುದಿಲ್ಲ. ಪ್ರಥಮಾಂತ-ವಾದ ಜಲಪದದಿಂದ ನಿರಾಕಾಂಕ್ಷತ್ವವೇ ಇರುವುದರಿಂದ ಇಲ್ಲಿಯೂ ಕೂಡ ಅವ್ಯಾಪ್ತಿದೋಷಕ್ಕೆ ಅವ-ಕಾಶವಿಲ್ಲ.

ಒಂದು ವೇಳೆ ಜಲಪದವು ಉಪಸ್ಥಿತವಾಗುವುದಾದರೆ ಅಲ್ಲಿ ನದೀಪದಕ್ಕೆ ವಕ್ತೃವಿನ ತಾತ್ಪರ್ಯವಿಲ್ಲದ ಕಾರಣ ಆಕಾಂಕ್ಷೆಯು ಇದ್ದರೂ ಕೂಡ ಅನ್ವಯಬೋಧವು ಹುಟ್ಟುವುದಿಲ್ಲ. ಒಂದು ವೇಳೆ ವಕ್ತೃವಿಗೆ ತಾತ್ಪರ್ಯಗ್ರಹ ಇರುವುದಾದರೆ ಕಚ್ಛಪದಾರ್ಥದ ಜೊತೆ ಅನ್ವಯಬೋಧ ಹುಟ್ಟುವಂತೆ ಜಲ-ಪದಾರ್ಥದ ಜೊತೆಗೂ ಅನ್ವಯಬೋಧ ಹುಟ್ಟುತ್ತದೆ. ಆಗ ನದೀಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. ಹೀಗೆ ಇಲ್ಲಿಯೂ ಕೂಡ ಹಿಂದಿನಂತೆ ಇಷ್ಟಾಪತ್ತಿಯ ಮೂಲಕವೇ ದೋಷವನ್ನು ಪರಿಹರಿಸುತ್ತೇವೆ.

ವಿಶೇಷವಿಚಾರ - 'ಇತರಪದವಿರಹಪ್ರಯುಕ್ತಅನನುಭಾವಕತಾಪ್ರಯೋಜಕರೂಪವತ್ತ್ವಂ' ಎಂಬ ನಾವು ಹೇಳಿದ ಆಕಾಂಕ್ಷೆಯ ಲಕ್ಷಣಕ್ಕೆ 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬಲ್ಲಿ ಅತಿವ್ಯಾಪ್ತಿದೋಷವನ್ನು ಪರಿಹರಿಸಲಾಯಿತು. ಈಗ ಪೂರ್ವಪಕ್ಷಿಯು ಅವ್ಯಾಪ್ತಿದೋಷವನ್ನು ಆಕ್ಷೇಪ ಮಾಡುತ್ತಿದ್ದಾನೆ.

ಆಕ್ಷೇಪ– 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬಲ್ಲಿ ನಿಮ್ಮ ಆಕಾಂಕ್ಷೆಯ ಲಕ್ಷಣಕ್ಕೆ ಅವ್ಯಾಪ್ತಿ ದೋಷವು ಬರುತ್ತದೆ. ಅದು ಹೀಗೆ – ಒಬ್ಬ 'ಅಹೋ ವಿಮಲಂ ಜಲಂ' ಎಂದು ಕೇಳಿಸಿಕೊಳ್ಳಲೇ ಇಲ್ಲ. 'ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂದಷ್ಟೇ ಕೇಳಿಸಿಕೊಳ್ಳುತ್ತಾನೆ. ಹೀಗಿರುವಾಗ ಜಲಪದದ ಉಪಸ್ಥಿತಿಯೇ ಶ್ರೋತೃವಿಗೆ ಬರುವುದಿಲ್ಲ. ಆದ್ದರಿಂದ ಉಪಸ್ಥಿತವಾದ ಜಲಪದದ ವಿರಹಪ್ರಯುಕ್ತವಾದ ಅನನುಭಾವ-ಕತ್ವಕ್ಕೆ ಪ್ರಯೋಜಕವಾದ ಉಪಸ್ಥಿತಿವಿಷಯರೂಪವತ್ತ್ವ ಎಂಬ ಆಕಾಂಕ್ಷೆಯ ಲಕ್ಷಣವು 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬಲ್ಲಿ ಬರುವುದೇ ಇಲ್ಲ. ಆದ್ದರಿಂದ ಅವ್ಯಾಪ್ತಿದೋಷ ಬರುತ್ತದಲ್ಲವೇ?

ಸಮಾಧಾನ– ಈ ಆಕ್ಷೇಪಕ್ಕೂ ಕೂಡ ಈಗಾಗಲೇ ಉತ್ತರಿಸಿದಂತಾಯಿತು. ಏಕೆಂದರೆ, ಪ್ರಥಮಾಂತವಾದ ಜಲಪದದ ಜೊತೆ ನದೀಪದಕ್ಕೆ ಆಕಾಂಕ್ಷೆಯೇ ಇಲ್ಲದ ಕಾರಣ ಅವ್ಯಾಪ್ತಿದೋಷವನ್ನು ಆಕ್ಷೇಪ ಮಾಡಬಾರದು. ಕೇವಲ ಕಚ್ಛಪದದ ಜೊತೆ ಮಾತ್ರ ಆಕಾಂಕ್ಷೆಯನ್ನು ಹೇಳಬೇಕು.

ಅಥವಾ ಜಲಪದದಲ್ಲಿಯೂ ಆಕಾಂಕ್ಷೆ ಇದೆ ಎಂದು ಹೇಳುವುದಾದರೆ ವಕ್ತೃವಾದವನಿಗೆ ತಾತ್ಪರ್ಯಗ್ರಹ ಇಲ್ಲದ ಕಾರಣ ಶ್ರೋತೃವಿಗೂ ಕೂಡ ಅನ್ವಯಬೋಧ ಬರುವುದಿಲ್ಲ.

ಅಥವಾ ವಕ್ತೃವಾದವನಿಗೆ 'ಕಚ್ಛಪದಾರ್ಥದಲ್ಲಿ ಹಾಗೂ ಜಲಪದಾರ್ಥದಲ್ಲಿ ಅನ್ವಯ-ಬೋಧ ಹುಟ್ಟಲಿ' ಎಂಬ ಅಭಿಪ್ರಾಯವಿದ್ದರೆ ಕೇಳುವವನಿಗೂ ಕೂಡ ವಕ್ತೃವಿನ ಅಭಿ-ಪ್ರಾಯ ತಿಳಿದು ಎರಡು ಸ್ಥಳದಲ್ಲಿಯೂ ಅನ್ವಯಬೋಧವು ಹುಟ್ಟುತ್ತದೆ. ಈ ಸಂದರ್ಭ-ದಲ್ಲಿ 'ನದ್ಯಾಃ ಜಲಂ' 'ನದ್ಯಾಃ ಕಚ್ಛೇ' ಎಂಬುದಾಗಿ ನದೀಪದವನ್ನು ಮತ್ತೊಮ್ಮೆ ಆವೃತ್ತಿಮಾಡಿಕೊಳ್ಳಬೇಕು. ಹೀಗೆ ವಕ್ತೃವಿನ ಅಭಿಪ್ರಾಯಕ್ಕನುಗುಣವಾಗಿ ಉಭಯಾ-ನ್ವಯಬೋಧ ಬರುವುದು ನಮಗೆ ಎಲ್ಲೆಡೆಯೂ ಇಷ್ಟವೇ ಆಗುತ್ತದೆ.

## ಗೋಷ್ಠಿಯ ವಿಚಾರಗಳು

ಆಕ್ಷೇಪ – 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬಲ್ಲಿ ಆಕಾಂಕ್ಷಾವಿರಹಪ್ರಯುಕ್ತವಾಗಿ ಪುರುಷಪದಾರ್ಥದ ಜೊತೆಗೆ ರಾಜಪದಾರ್ಥಕ್ಕೆ ಅನ್ವಯಬೋಧವು ಬರುತ್ತಿಲ್ಲ ಎಂಬುದಾಗಿ ಹೇಳಬಾರದು – ಎಂದು ಸಮರ್ಥನೆ ಮಾಡಿದಿರಿ ಮತ್ತು ಆ ಅನ್ವಯದಲ್ಲಿ ತಾತ್ಪರ್ಯವನ್ನು ಗ್ರಹಣ ಮಾಡಿಲ್ಲ; ಆದ್ದರಿಂದ ಅನ್ವಯಬೋಧ ಬರುತ್ತಿಲ್ಲ ಎಂಬುದನ್ನು ಕೂಡ ಹೇಗೆ ನಿಶ್ಚಯ ಮಾಡುತ್ತೀರಿ?

ಸಮಾಧಾನ – ಅನೇಕ ಅನ್ವಯಗಳುಳ್ಳ ಅಥವಾ ಅನೇಕ ಅರ್ಥಗಳುಳ್ಳ ವಾಕ್ಯವನ್ನು ಕೇಳಿದಾಗ ವಕ್ತೃವಿನ ತಾತ್ಪರ್ಯವನ್ನು ಪರ್ಯಾಲೋಚನೆ ಮಾಡಿಯೇ ಶಾಬ್ದಬೋಧವನ್ನು ತಂದುಕೊಳ್ಳಬೇಕು. ಲೋಕದಲ್ಲಿ ಹೀಗೆಯೇ ಕಂಡಿದೆ.

ಆಕ್ಷೇಪ – ಹಾಗಾದರೆ ಪ್ರತೀತವಾದ ಅನ್ವಯಕ್ಕೆ ಪ್ರಮಾಣವಿರೋಧವಿಲ್ಲದಿರುವುದು ಯೋಗ್ಯತೆ ಎಂದು ಕರೆಸಿಕೊಳ್ಳುತ್ತದೆ. ಯೋಗ್ಯತೆ ಇದ್ದರೆ ಮಾತ್ರ ಅನ್ವಯವು ತಿಳಿಯುತ್ತದೆ. ಅನ್ವಯವು ತಿಳಿದರೆ ಮಾತ್ರ ಈ ಅನ್ವಯದಲ್ಲಿ ಪ್ರಮಾಣವಿರೋಧವಿಲ್ಲವೆಂಬ ಯೋಗ್ಯತೆಯು ತಿಳಿಯುತ್ತದೆ. ಒಂದು ವಾಕ್ಯದಲ್ಲಿ 'ಆ ವಾಕ್ಯದಿಂದ ಪ್ರತೀತವಾದ ಅನ್ವಯದಲ್ಲಿ ಯಾವುದೇ ಪ್ರಮಾಣವಿರೋಧವಿಲ್ಲ' ಎಂಬುದಾಗಿ ಯೋಗ್ಯತಾನಿಶ್ಚಯವಾದ ಮೇಲೆ ಅನ್ವಯವು ನಿಶ್ಚಯವಾಗುತ್ತದೆ. ಆದ್ದರಿಂದ ಮೊದಲು ಯೋಗ್ಯತೆ ನಿಶ್ಚಯವಾಗಬೇಕೋ ಅಥವಾ

ಅನ್ವಯ ನಿಶ್ಚಯವಾಗಬೇಕೋ ಎಂಬ ಗೊಂದಲ ಬರುವುದರಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಅದರಂತೆ ಪ್ರಕೃತದಲ್ಲಿಯೂ ಕೂಡ ವಕ್ತೃವಿನ ತಾತ್ಪರ್ಯಜ್ಞಾನ ತಿಳಿಯಬೇಕೆಂದರೆ ಮೊದಲು ಶಾಬ್ದಬೋಧ ಬಂದಿರಬೇಕು, ಶಾಬ್ದಬೋಧ ಬರಬೇಕೆಂದರೆ, ವಕ್ತೃತಾತ್ಪರ್ಯ ಘಟಿತವಾದ ಆಕಾಂಕ್ಷೆಯನ್ನು ತಿಳಿದಿರಬೇಕು. ಆದ್ದರಿಂದ ಆಕಾಂಕ್ಷೆಯು ಮೊದಲಿರಬೇಕೋ ಶಾಬ್ದಬೋಧವು ಮೊದಲಿರಬೇಕೋ ಎಂಬ ಗೊಂದಲ ಬರುವುದರಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದಲ್ಲವೇ?

ಸಮಾಧಾನ – 'ಪ್ರತೀತವಾದ ಅನ್ವಯದಲ್ಲಿ ಪ್ರಮಾಣವಿರೋಧವಿಲ್ಲ' ಎಂದು ನಿಶ್ಚಯವಾದ ಮೇಲೆ ಅಪ್ರಾಮಾಣ್ಯಶಂಕೆಯು ಪರಿಹಾರವಾಗಿ ಪ್ರಾಮಾಣ್ಯವು ನಿಶ್ಚಯವಾಗುತ್ತದೆಂದು ಹೇಳುತ್ತೇವೆ. ಆದ್ದರಿಂದ ಶಾಬ್ದಬೋಧಕ್ಕೆ ಯೋಗ್ಯತಾಜ್ಞಾನವು ಕಾರಣವೆಂದು ನಾವು ಹೇಳುವುದೇ ಇಲ್ಲ.

ಒಂದು ವಾಕ್ಯದಲ್ಲಿ ಅನೇಕಾನ್ವಯಗಳು ಅಥವಾ ಅನೇಕಾರ್ಥಗಳು ತೋರಿದಾಗ ಉಪ-ಕ್ರಮಾದಿಗಳ ಅಧೀನವಾಗಿ ಆಯಾ ಪದಾರ್ಥಗಳಿಗೆ ಅನ್ವಯಬೋಧವು ನಿಶ್ಚಯ-ವಾಗುತ್ತದೆ. ಉದಾ – 'ಶ್ವೇತೋ ಧಾವತಿ' ಎಂಬ ವಾಕ್ಯವನ್ನು ಕೇಳಿದಾಗ 'ಶ್ವ ಇತಃ ಧಾವತಿ' 'ನಾಯಿ ಇಲ್ಲಿಂದ ಹೋಗುತ್ತಿದೆ' ಮತ್ತು 'ಶ್ವೇತೋ ಧಾವತಿ' 'ಬೆಳ್ಳಗಿರುವ ಕುದುರೆಯು (ವ್ಯಕ್ತಿಯು) ಓಡಿಹೋಗುತ್ತಿದೆ(ದ್ದಾನೆ)' ಎಂಬ ಎರಡರ್ಥವು ಪ್ರತೀತವಾಗುತ್ತದೆ. 'ಶ್ವೇತೋ ಧಾವತಿ' ಎಂಬ ವಾಕ್ಯವನ್ನು ಕೇಳಿದಾಗ ಪ್ರಾರಂಭದಲ್ಲಿ ಎರಡೂ ಅರ್ಥಗಳು ಕೂಡ ಭಾಸವಾಗುತ್ತವೆ. ಅನಂತರ ವಕ್ತೃವಿನ ತಾತ್ಪರ್ಯವನ್ನು ನಿಶ್ಚಯಮಾಡಿ ಉಪಕ್ರಮಾದಿಗಳ ಬಲದಿಂದ ತಾತ್ಪರ್ಯ ನಿಶ್ಚಯವಾಗುತ್ತದೆ. ಪುನಃ ಪದಾರ್ಥಗಳ ಅನ್ವಯವನ್ನು ನಿಶ್ಚಯ ಮಾಡಿಕೊಂಡು ಶಾಬ್ದಬೋಧವು ಹುಟ್ಟುತ್ತದೆ. ಇದರಂತೆ 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾರ್ಯತಾಮ್' ಎಂಬ ವಾಕ್ಯವನ್ನು ಕೇಳಿದಾಗ ಮೊದಲು ರಾಜಪದಕ್ಕೆ ಎರಡು ಕಡೆಯೂ ಅನ್ವಯಬೋಧ ಹುಟ್ಟುತ್ತದೆ. ಅನಂತರ ಹೇಳುವವನಿಗೆ ಎಲ್ಲಿ ಅನ್ವಯವಾಗಬೇಕೆಂಬ ಅಭಿಪ್ರಾಯವಿರುತ್ತದೆಂದು ವಿಚಾರ ಮಾಡಿ ಪುತ್ರಪದಾರ್ಥದಲ್ಲಿಯೇ ಅನ್ವಯವನ್ನು ತಿಳಿಯುತ್ತಾನೆ.

ಪ್ರಶ್ನೆ – ಹಾಗಾದರೆ ಆಕಾಂಕ್ಷೆಯಿಂದ ಶಾಬ್ದಬೋಧ ಬರುವ ಕ್ರಮವನ್ನು ಸ್ಪಷ್ಟವಾಗಿ ಹೇಳಿರಿ.

ಉತ್ತರ – ಮೊದಲು ವಾಕ್ಯವನ್ನು ಕೇಳಿದಾಗ ಸಮ್ಮುಗ್ಧವಾಗಿ ಶಾಬ್ದಬೋಧವು ಹುಟ್ಟುತ್ತದೆ. ಅನಂತರ ತಾತ್ಪರ್ಯ ನಿಶ್ಚಯವಾಗುತ್ತದೆ. ಅನಂತರ ವಕ್ತೃವಿಗೆ ಅಭಿಪ್ರೇತವಾದ ಅನ್ವಯ-ಬೋಧವು ನಿಶ್ಚಯಾತ್ಮಕವಾಗಿ ಹುಟ್ಟುತ್ತದೆ. ಒಂಗು ವೇಳೆ ಒಂದೇ ಪದಕ್ಕೆ ಎರಡು ವಾಕ್ಯಗಳಲ್ಲಿ ವಕ್ತೃತಾತ್ಪರ್ಯವು ನಿಶ್ಚಯವಾದರೆ ಎರಡು ಬಗೆಯ ಶಾಬ್ದಬೋಧವು ಕೂಡ ಹುಟ್ಟುತ್ತದೆ.

## ಸಿದ್ಧಾಂತದ ಆಕಾಂಕ್ಷಾಲಕ್ಷಣದಲ್ಲಿ ಏನು ವೈಶಿಷ್ಟ್ಯ?

**ತರ್ಕತಾಂಡವ – ನನ್ವೇವಮುದಯನಾದಿಮತೇ ತ್ವದುಕ್ತರೂಪಗ್ರಹವಿರಹಪ್ರಯುಕ್ತಃ ಶಾಬ್ದಾನುಭವಪ್ರಾಗಭಾವ ಆಕಾಂಕ್ಷಾ । ತ್ವನ್ಮತೇ ತು ಪ್ರಾಗಭಾವಪ್ರಯೋಜಕವಿರಹ-ಪ್ರತಿಯೋಗಿಗ್ರಹವಿಷಯೀಭೂತಂ ರೂಪಮಾಕಾಂಕ್ಷಾ । ತತಃ ಕೋಽತ್ರ ವಿಶೇಷಃ? ಇತಿ ಚೇತ್,**

ಅನುವಾದ– ಉದಯನ ಮೊದಲಾದ ತಾರ್ಕಿಕರ ಮತದಲ್ಲಿ ತ್ವದುಕ್ತವಾದ ಕ್ರಿಯಾಪದತ್ವ ಕಾರಕಪದತ್ವ ಮೊದಲಾದ ಧರ್ಮಗಳ ವಿರಹಪ್ರಯುಕ್ತವಾಗಿ ಯಾವ ಶಾಬ್ದಾನುಭವದ ಪ್ರಾಗ-ಭಾವವು ಬರುತ್ತದೋ ಅದನ್ನು ಆಕಾಂಕ್ಷೆಯೆಂದು ಕರೆಯಲಾಗುತ್ತದೆ. ನಿಮ್ಮ ಮತದಲ್ಲಾದರೋ ಪ್ರಾಗಭಾವಕ್ಕೆ ಪ್ರಯೋಜಕವಾದ ಯಾವ ವಿರಹವಿದೆಯೋ ಅದಕ್ಕೆ ಪ್ರತಿಯೋಗಿಯಾದ ಯಾವ ಉಪಸ್ಥಿತಿಯಿದೆಯೋ ಅದಕ್ಕೆ ವಿಷಯೀಭೂತವಾದ ಧರ್ಮವನ್ನು ಆಕಾಂಕ್ಷಾ ಎಂದು ಕರೆಯಲಾಗಿದೆ. ಆದ್ದರಿಂದ ಉದಯನಾದಿಗಳು ಹೇಳಿದ ಆಕಾಂಕ್ಷಾಲಕ್ಷಣಕ್ಕೂ ನೀವು ಪರಿಷ್ಕರಿಸಿದ ಆಕಾಂಕ್ಷಾಲಕ್ಷಣಕ್ಕೂ ಯಾವುದೇ ವ್ಯತ್ಯಾಸ ಕಾಣಿಸುತ್ತಿಲ್ಲವಲ್ಲ?

## ತಾರ್ಕಿಕರ ಲಕ್ಷಣದಲ್ಲಿ ಮೂರು ದೋಷಗಳಿವೆ

**ತರ್ಕತಾಂಡವ – ಇಯಾನೇವ ವಿಶೇಷಃ । ತ್ವನ್ಮತೇ ಆಕಾಂಕ್ಷಾ ಶ್ರೋತೃಗತಾ ಸ್ಯಾತ್, 'ಪ್ರಾಗಭಾವಜ್ಞಾನಂ ಶಾಬ್ದಬೋಧಜನಕಮ್' ಇತ್ಯಸ್ಯೋಕ್ತರೀತ್ಯಾ ದುರ್ಘಟತ್ವಾತ್ ಶಾಬ್ದಬೋಧಂ ಪ್ರತ್ಯಾಕಾಂಕ್ಷಾಜ್ಞಾನಸ್ಯ ಹೇತುತ್ವಂ ನ ಸ್ಯಾತ್, ಜನಿತಫಲವಾಕ್ಯಸ್ಥಪದೇ**

**ವಿರಕ್ತಂ ವಾಣಿಜ್ಯೋಪದೇಶ ಇವ ಸಾಕಾಂಕ್ಷತ್ವೇ ಸತ್ಯಪಿ ಪುರುಷಸ್ಯಾನಪೇಕ್ಷಾಮಾತ್ರೇಣ ಶಬ್ದಸ್ಯಾಕಾಂಕ್ಷಾಪಲಾಪಶ್ಚ ಸ್ಯಾದಿತಿ ದೋಷತ್ರಯಮ್ ।**

ಅನುವಾದ– ಇಷ್ಟು ವ್ಯತ್ಯಾಸವಿದೆ. ತಾರ್ಕಿಕರಾದ ನಿಮ್ಮ ಮತದಲ್ಲಿ (೧) ಆಕಾಂಕ್ಷೆಯು ಶ್ರೋತೃ -ಗತವಾಗಬೇಕಾಗುತ್ತದೆ. (೨) ಪ್ರಾಗಭಾವಜ್ಞಾನವು ಶಾಬ್ದಬೋಧಕ್ಕೆ ಜನಕವಾಗುತ್ತದೆ ಎಂದು ಒಪ್ಪಬೇಕಾಗುತ್ತದೆ. ಇದು ದುರ್ಘಟವಾದ್ದರಿಂದ ಶಾಬ್ದಬೋಧಕ್ಕೆ ಆಕಾಂಕ್ಷಾ ಜ್ಞಾನವು ಹೇತುವೆಂದೇ ಹೇಳಲು ಸಾಧ್ಯವಾಗುವುದಿಲ್ಲ. (೩) ಜನಿತಫಲವಾಕ್ಯದಲ್ಲಿ ಯಾವ ಪದಗಳಿವೆಯೋ ವಿರಕ್ತನನ್ನು ಕುರಿತು ವಾಣಿಜ್ಯೋಪದೇಶ ಮಾಡಿದಂತೆ ಸಾಕಾಂಕ್ಷತ್ವವಿದ್ದರೂ ಕೂಡ ಪುರುಷನಿಗೆ ಅಪೇಕ್ಷೆ ಇಲ್ಲ-ವೆಂಬ ಕಾರಣದಿಂದ ಆಕಾಂಕ್ಷೆಯನ್ನೇ ಅಪಲಾಪ ಮಾಡಬೇಕಾಗುತ್ತದೆ. ಹೀಗೆ ತಾರ್ಕಿಕರಿಗೆ ಮೂರು ದೋಷಗಳು ಪ್ರಾಪ್ತವಾಗುತ್ತವೆ.

> ವಿವರಣೆ – 'ನಿಮ್ಮ ಮತದಲ್ಲಿ ಮೂರು ದೋಷಗಳಿವೆ. ನಮ್ಮ ಮತದಲ್ಲಿ ಆ ಮೂರು ದೋಷಗಳೂ ಕೂಡ ಇರುವುದಿಲ್ಲ' ಎಂಬುದೇ ಇರುವ ವ್ಯತ್ಯಾಸ.
> ತಾರ್ಕಿಕರಾದ ನೀವು ಶಾಬ್ದಾನುಭವದ ಪ್ರಾಗಭಾವವನ್ನು ಪ್ರತಿಯೋಗಿ ಎಲ್ಲಿರುತ್ತದೋ ಅಲ್ಲೇ ಪ್ರಾಗಭಾವ ಹಾಗೂ ಧ್ವಂಸಗಳು ಇರುತ್ತವಾದ್ದರಿಂದ ಶಾಬ್ದಬೋಧವೆಂಬ ಪ್ರತಿಯೋಗಿಯು ಶ್ರೋತೃವಿನಲ್ಲಿರುವುದರಿಂದ ಶಾಬ್ದಾನುಭವದ ಪ್ರಾಗಭಾವವು ಕೂಡ ಶ್ರೋತೃವಿನಲ್ಲೇ ಬರುತ್ತದೆ. ಆದ್ದರಿಂದ, ಆಕಾಂಕ್ಷೆಯು ಶಬ್ದಗತವಾಗಲಿಲ್ಲ.
> ನಮ್ಮ ಮತದಲ್ಲಿ ಉಪಸ್ಥಿತಿಗೆ ವಿಷಯಭೂತವಾದ ಧರ್ಮವನ್ನು ಆಕಾಂಕ್ಷೆ ಎಂದು ಹೇಳಿರುವುದರಿಂದ, ಕ್ರಿಯಾಪದತ್ವ ಕಾರಕಪದತ್ವ ಮೊದಲಾದ ಧರ್ಮಗಳೆಲ್ಲವೂ ಶಬ್ದದಲ್ಲಿ ಬರುತ್ತದೆ. ಹೊರತು ಶ್ರೋತೃವಿನಲ್ಲಿ ಬರುವುದಿಲ್ಲ
>
> ಆಕಾಂಕ್ಷಾಯೋಗ್ಯತಾದಿಗಳು ಶಬ್ದದಲ್ಲಿ ಬರಬೇಕೇ ಹೊರತು ಶ್ರೋತೃವಿನಲ್ಲಿ ಬರಬಾರದು. ಆದ್ದರಿಂದ ತಾರ್ಕಿಕರಿಗೆ ಆಕಾಂಕ್ಷಾಲಕ್ಷಣವನ್ನು ಶಬ್ದದಲ್ಲಿ ಸಮನ್ವಯ ಮಾಡಿದಂತಾ-ಗುವುದಿಲ್ಲ. ಇದು ಮೊದಲನೆಯ ದೋಷ.
>
> ಪ್ರಾಗಭಾವವನ್ನು ಆಕಾಂಕ್ಷೆಯೆಂದು ಹೇಳುವುದಾದರೆ ಪ್ರಾಗಭಾವವು ಶಾಬ್ದಬೋಧಕ್ಕೆ ಕಾರಣವೆಂದು ಹೇಳಿದಂತಾಯಿತು. ಇದು ಸರ್ವಸಾಧಾರಣವಾಗುತ್ತದಲ್ಲವೇ? ಎಂಬ

ಪ್ರಶ್ನೆಗೆ ತಾರ್ಕಿಕರಾದ ನೀವು ಪ್ರಾಗಭಾವವು ಆಕಾಂಕ್ಷೆಯಲ್ಲ; ಪ್ರಾಗಭಾವಜ್ಞಾನವು ಆಕಾಂಕ್ಷೆಯೆಂದು ಉತ್ತರಿಸಬೇಕು. ಆಗ ಶಾಬ್ದಜ್ಞಾನಕ್ಕೆ ಆಕಾಂಕ್ಷಾಜ್ಞಾನವು ಕಾರಣವೆಂದು ಹೇಳಿದಂತಾಯಿತು. ಇದಕ್ಕೆ ಪ್ರಮಾಣವಿಲ್ಲವೆಂಬುದಾಗಿ ಈ ಹಿಂದೆಯೇ ಸಮರ್ಥಿಸಿದ್ದೇವೆ. ಏಕೆಂದರೆ ಯಾರೊಬ್ಬರಿಗೂ ಇಲ್ಲಿಯ ತನಕ ನನಗೆ ಶಾಬ್ದಬೋಧ ಇರಲಿಲ್ಲ ಎಂಬ ಜ್ಞಾನವಿದ್ದರೆ ಮಾತ್ರ ಶಾಬ್ದಬೋಧ ಬರುತ್ತದೆ ಎಂಬ ಅನುಭವ ಇಲ್ಲ. ಆದ್ದರಿಂದ, ಶಾಬ್ದಬೋಧಾನುಭವದ ಪ್ರಾಗಭಾವಜ್ಞಾನವು ಶಾಬ್ದಬೋಧಕ್ಕೆ ಕಾರಣ ಎಂಬುದು ತಾರ್ಕಿಕರಿಗೆ ದುರ್ಘಟವಾಗಿದೆ.

ನಮ್ಮ ಮತದಲ್ಲಿ ಈ ದೋಷವು ಬರುವುದಿಲ್ಲ. ಏಕೆಂದರೆ ಕ್ರಿಯಾಪದವಿಲ್ಲದೇ ಕಾರಕಪದದಿಂದ ಅನ್ವಯಬೋಧ ಬರುವುದಿಲ್ಲ; ಕಾರಕಪದವಿಲ್ಲದೇ ಕ್ರಿಯಾಪದದಿಂದ ಅನ್ವಯಬೋಧವು ಬರುವುದಿಲ್ಲವೆಂದು ಹೇಳುವ ಅಭಿಪ್ರಾಯದಲ್ಲಿ ಪ್ರಾಗಭಾವಕ್ಕೆ ಪ್ರಯೋಜಕವಾದ ಯಾವ ವಿರಹವಿದೆಯೋ ಅದಕ್ಕೆ ಪ್ರತಿಯೋಗಿಯಾದ ಉಪಸ್ಥಿತಿಗೆ ವಿಷಯಭೂತವಾದ ಧರ್ಮವನ್ನು ಆಕಾಂಕ್ಷೆ ಎಂದು ಹೇಳಿರುತ್ತೇವೆ. ವಾಕ್ಯವ್ಯುತ್ಪತ್ತಿ ಇಲ್ಲದೇ ಇದ್ದಾಗ ಶಾಬ್ದಬೋಧ ಬರುವುದಿಲ್ಲ. ವಾಕ್ಯವ್ಯುತ್ಪತ್ತಿ ಇದ್ದಾಗ ಶಾಬ್ದಬೋಧವು ಬರುತ್ತದೆ ಎಂದು ನಾವು ಹೇಳಿರುವುದರಿಂದ ಆಕಾಂಕ್ಷಾಜ್ಞಾನವು ಶಾಬ್ದಬೋಧಕ್ಕೆ ಕಾರಣವಾಗುತ್ತದೆ ಎಂಬುದು ನಮಗೆ ಸುಘಟವಾಗಿದೆ. ಏಕೆಂದರೆ ಕ್ರಿಯಾಪದತ್ವಾದಿ ಧರ್ಮಗಳೆಂಬ ಜ್ಞಾನವು ಶಾಬ್ದಬೋಧಕ್ಕೆ ಕಾರಣವೆಂದು ಸುಲಭವಾಗಿ ಹೇಳಬಹುದು.

ತಾರ್ಕಿಕರಿಗೆ ಮೂರನೆಯ ದೋಷ. ಜನಿತಫಲವಾಕ್ಯದಲ್ಲಿ ಆಕಾಂಕ್ಷೆಯನ್ನು ಉಪಪಾದನೆ ಮಾಡಲು ಅವರಿಗೆ ಸಾಧ್ಯವೇ ಇಲ್ಲ. ಏಕೆಂದರೆ ಒಮ್ಮೆ ಶಾಬ್ದಬೋಧವು ಬಂದ ಮೇಲೆ ಪುನಃ ಅದರ ಪ್ರಾಗಭಾವವು ಇರುವುದಿಲ್ಲ. ಆದ್ದರಿಂದ ಆಕಾಂಕ್ಷಾ ಇದ್ದರೂ ಕೂಡ ಪುರುಷನಿಗೆ ಶಾಬ್ದಬೋಧದ ಅಪೇಕ್ಷೆ ಇಲ್ಲದ ಕಾರಣದಿಂದ ಆಕಾಂಕ್ಷೆಯನ್ನು ಕೂಡ ಅಪಲಾಪ ಮಾಡಬೇಕಾಗುತ್ತದೆ.

ನಮ್ಮ ಮತದಲ್ಲಿ ಈ ದೋಷವಿಲ್ಲ. ಏಕೆಂದರೆ ಪ್ರಾಗಭಾವಕ್ಕೆ ಪ್ರಯೋಜಕವಾದ ಕ್ರಿಯಾಪದತ್ವಾದಿ ಧರ್ಮಗಳನ್ನೇ ಆಕಾಂಕ್ಷೆ ಎಂದು ಹೇಳುತ್ತಿದ್ದೇವೆ. ಜನಿತಫಲವಾಕ್ಯದಲ್ಲಿಯೂ ಕೂಡ ಕ್ರಿಯಾಪದತ್ವ ಕಾರಕಪದತ್ವ ಮೊದಲಾದ ಧರ್ಮಗಳು ಇರುವುದರಿಂದ ಜನಿತಫಲವಾಕ್ಯದಲ್ಲಿಯೂ ಶಾಬ್ದಬೋಧ ಬರಬಹುದು.

ಹೀಗೆ ತಾರ್ಕಿಕರಿಗೆ ಪ್ರಧಾನವಾಗಿ ಮೂರು ದೋಷಗಳೂ ಬರುತ್ತವೆ. ನಮ್ಮ ಮತದಲ್ಲಿ ಈ ಮೂರು ದೋಷಗಳು ಬರುವುದಿಲ್ಲ. ಶಬ್ದದಲ್ಲಿ ಮಾತ್ರ ವ್ಯತ್ಯಾಸ ಅರ್ಥದಲ್ಲಿ ಇಲ್ಲ ಎಂಬ ವಾದದಲ್ಲಿ ಹುರುಳೇ ಇಲ್ಲ.

## ನಮ್ಮ ಮತದಲ್ಲಿ ಆ ಮೂರೂ ದೋಷಗಳು ಇರುವುದಿಲ್ಲ

**ತರ್ಕತಾಂಡವ – ಮನ್ಮತೇ ತು ಆಕಾಂಕ್ಷಾ ಆಸತ್ತಿವಚ್ಛಬ್ದಗತೈವ, ತಜ್ಜ್ಞಾನಸ್ಯ ಜನಕತ್ವಂ ಚ ಸುಘಟಮ್, ಜನಿತಫಲೇಪ್ಯಾಕಾಂಕ್ಷಾನಪಲಾಪಶ್ಚೇತಿ ದೋಷತ್ರಯಂ ನೇತಿ ।**

ಅನುವಾದ– ನಮ್ಮ ಮತದಲ್ಲಿ ಕ್ರಿಯಾಪದತ್ವಾದಿಗಳನ್ನೇ ಆಕಾಂಕ್ಷೆ ಎಂದು ಹೇಳಿದ್ದರಿಂದ ಆಕಾಂಕ್ಷೆಯು ಆಸತ್ತಿಯಂತೆ ಶಬ್ದಗತವಾದ ಧರ್ಮವಾಗುತ್ತದೆ. ಆದ್ದರಿಂದ ಶ್ರೋತೃಗತವಾಗಲಿ ಎಂಬ ದೋಷಕ್ಕೆ ಅವಕಾಶವಿಲ್ಲ.

ಮತ್ತು ಆಕಾಂಕ್ಷಾಜ್ಞಾನವು ಶಾಬ್ದಬೋಧಕ್ಕೆ ಜನಕವಾಗುತ್ತದೆ ಎಂದೂ ಕೂಡ ಸುಲಭವಾಗಿ ಹೇಳಬಹುದು. ಆದ್ದರಿಂದ ತಾರ್ಕಿಕರಿಗೆ ಇರುವ ದೌರ್ಘಟ್ಯ ನಮ್ಮ ಮತದಲ್ಲಿಲ್ಲ.

ಜನಿತಫಲವಾಕ್ಯದಲ್ಲಿಯೂ ಆಕಾಂಕ್ಷೆಯನ್ನು ಅಪಲಾಪಮಾಡುವ ಸಂದರ್ಭವು ಕೂಡ ಇಲ್ಲ. ಏಕೆಂದರೆ ಕ್ರಿಯಾಪದತ್ವಾದಿ ಧರ್ಮಗಳು ಇರುತ್ತವೆ. ಆದ್ದರಿಂದ ಮೂರೂ ದೋಷಗಳೂ ನಮ್ಮ ಮತದಲ್ಲಿ ಬರುವುದಿಲ್ಲ.

## ಟೀಕೆಯಲ್ಲಿ ಹೇಳಿದ ಆಕಾಂಕ್ಷಾಲಕ್ಷಣದಿಂದ ಅವಿನಾಭೂತವಾಗಿದೆ.

**ತರ್ಕತಾಂಡವ – ಇದಂ ಚಾಕಾಂಕ್ಷಾಲಕ್ಷಣಂ ಟೀಕೋಕ್ತಜಿಜ್ಞಾಸಾವಿಷಯಪ್ರತಿಪಾದ-ಕತ್ವರೂಪಲಕ್ಷಣಾವಿನಾಭೂತಮ್ ।**

ಅನುವಾದ– ಈ ಆಕಾಂಕ್ಷಾಲಕ್ಷಣವು ಟೀಕೆಯಲ್ಲಿ ಹೇಳಿದ ಜಿಜ್ಞಾಸಾವಿಷಯಪ್ರತಿಪಾದಕತ್ವ-ರೂಪ = 'ಜಿಜ್ಞಾಸೆಗೆ ವಿಷಯವಾದದ್ದರ ಪ್ರತಿಪಾದಕರೂಪವಾಗಿದೆ' ಎಂಬ ಲಕ್ಷಣದಿಂದ ಅವಿನಾ-ಭೂತವಾಗಿದೆ ಎಂದು ತಿಳಿಯಬೇಕು.

## ಆಕಾಂಕ್ಷಾಲಕ್ಷಣ ಇರುವುದೆಲ್ಲಾ ಲಕ್ಷ್ಯವೇ ಆಗಿದೆ

**ನ್ಯಾಯದೀಪ– ಏವಂ ಸರ್ವತ್ರ ಲಕ್ಷ್ಯೇऽಲಕ್ಷ್ಯೇ ಚ ಸ್ವೋಕ್ತಾಕಾಂಕ್ಷಾ-ಲಕ್ಷಣಸ್ಯ ಭಾವಾಭಾವೌ ಉಪಪಾದ್ಯ , ಇದಾನೀಂ ಪರೋಕ್ತಲಕ್ಷಣಾತ್ ಸ್ವೋಕ್ತ-ಲಕ್ಷಣಸ್ಯಾತಿಶಯಂ ಶಂಕಾಪೂರ್ವಂ ವ್ಯನಕ್ತಿ – ನನ್ವಿತಿ ।।**

ಅನುವಾದ– ಇಲ್ಲಿಯ ತನಕ ತಾವು ಪರಿಷ್ಕರಿಸಿದ ಆಕಾಂಕ್ಷಾಲಕ್ಷಣವು ಎಲ್ಲೆಲ್ಲಿ ಇದೆಯೋ ಅದೆಲ್ಲವೂ ಲಕ್ಷ್ಯವಾಗಿದೆ; ಎಲ್ಲೆಲ್ಲಿ ಲಕ್ಷಣವು ಇಲ್ಲವೋ ಅದೆಲ್ಲವೂ ಅಲಕ್ಷ್ಯವಾಗಿದೆ ಎಂಬುದನ್ನು ಗ್ರಂಥಕಾರರು ಉಪಪಾದನೆ ಮಾಡಿದರು. ಈಗ ತಾರ್ಕಿಕರು ಹೇಳುವ ಆಕಾಂಕ್ಷಾಲಕ್ಷಣದಿಂದ ತಾವು ಪರಿಷ್ಕರಿಸಿದ ಆಕಾಂಕ್ಷಾಲಕ್ಷಣದಲ್ಲಿ ಇರುವ ವೈಶಿಷ್ಟ್ಯವನ್ನು ಸಮರ್ಥಿಸುತ್ತಿದ್ದಾರೆ. ಅದನ್ನು ಮನದಟ್ಟುಮಾಡಲು ಆಶಂಕಿಸಿ, ಉತ್ತರಿಸುತ್ತಿದ್ದಾರೆ ನನು ಇತ್ಯಾದಿ ಗ್ರಂಥದಿಂದ.

ವಿವರಣೆ : ಉದಯನ ಮಣಿಕಾರ ಮೊದಲಾದವರು ಪರಿಷ್ಕರಿಸಿದ ಆಕಾಂಕ್ಷಾಲಕ್ಷಣವು ಅಯುಕ್ತವಾಗಿದೆ. ತಾವು ಸಮರ್ಥಿಸಿದ ಆಕಾಂಕ್ಷಾಲಕ್ಷಣವು ನಿರ್ದುಷ್ಟವಾಗಿದೆ ಎಂಬುದಾಗಿ ಗ್ರಂಥಕಾರರು ಉಪಪಾದನೆ ಮಾಡಿದರು. ಆದರೆ ತಾರ್ಕಿಕರು ಹೇಳಿದ ಆಕಾಂಕ್ಷಾಲಕ್ಷಣಕ್ಕೂ ಆಕಾಂಕ್ಷಾಲಕ್ಷಣಕ್ಕೂ ಶಬ್ದದಲ್ಲಷ್ಟೇ ವ್ಯತ್ಯಾಸ ಹೊರತು ಅರ್ಥದಲ್ಲಲ್ಲ ಎಂಬುದಾಗಿ ಪ್ರಕೃತ ಆಕ್ಷೇಪಿಸಲಾಗಿದೆ. ತಾರ್ಕಿಕರು ತ್ವದುಕ್ತವಾದ ಕ್ರಿಯಾಪದತ್ವ ಕಾರಕಪದತ್ವ ಮೊದಲಾದ ಯಾವ ಧರ್ಮಗಳಿವೆಯೋ ತದ್ವಿರಹಪ್ರಯುಕ್ತವಾದ ಶಾಬ್ದಾನುಭವದ ಪ್ರಾಗಭಾವವನ್ನು ಆಕಾಂಕ್ಷಾ ಎನ್ನುತ್ತಾರೆ. ಅದನ್ನೇ ಸಿದ್ಧಾಂತಿಗಳಾದ ನೀವು ವಿಪರೀತವಾಗಿ ಪ್ರಾಗಭಾವಕ್ಕೆ ಪ್ರಯೋಜಕವಾದ ಯಾವ ವಿರಹವಿದೆಯೋ ಅದಕ್ಕೆ ಪ್ರತಿಯೋಗಿಯಾದ ಉಪಸ್ಥಿತಿಗೆ ವಿಷಯಭೂತವಾದ ಕ್ರಿಯಾಪದತ್ವ ಕಾರಕಪದತ್ವ ಮೊದಲಾದ ಯಾವ ಧರ್ಮಗಳಿ-ವೆಯೋ ಇದನ್ನು ಆಕಾಂಕ್ಷೆಯೆಂದು ಹೇಳುತ್ತಿದ್ದೀರಿ. 'ಇವನು ಅಳಿಯ ಅಲ್ಲ; ಮಗಳ ಗಂಡ' ಎಂದು ಹೇಳಿದಂತೆ ಪದಗಳಲ್ಲಿ ಮಾತ್ರ ವ್ಯತ್ಯಾಸಕಾಣಿಸುತ್ತಿದೆ ಹೊರತು ಅರ್ಥದಲ್ಲಿ ಯಾವುದೇ ವ್ಯತ್ಯಾಸ ಕಾಣಿಸುತ್ತಿಲ್ಲ ಎಂಬುದು ಇಲ್ಲಿರುವ ಆಕ್ಷೇಪದ ಅಭಿಪ್ರಾಯ. ಈ ಆಕ್ಷೇಪಕ್ಕೆ ಗ್ರಂಥಕಾರರು ಉತ್ತರಿಸುವವರಾಗಿ ಇಯಾನೇವ ವಿಶೇಷಃ ಇತ್ಯಾದಿಯಾಗಿ ತಾರ್ಕಿಕರು ಪರಿಷ್ಕರಿಸಿದ ಆಕಾಂಕ್ಷಾಲಕ್ಷಣಕ್ಕೂ ತಾವು ಪರಿಷ್ಕರಿಸಿದ ಆಕಾಂಕ್ಷಾಲಕ್ಷಣಕ್ಕೂ ಇರುವ ಮುಖ್ಯವ್ಯತ್ಯಾಸವನ್ನು ಸ್ಪಷ್ಟವಾಗಿ ತೋರಿಸುತ್ತಿದ್ದಾರೆ.

## ಸಿದ್ಧಾಂತದ ಆಕಾಂಕ್ಷಾಲಕ್ಷಣದ ವಿವರಣೆ

**ನ್ಯಾಯದೀಪ – ಪ್ರಾಗಭಾವೇತಿ ॥ ಅನ್ವಯಾನುಭವಪ್ರಾಗಭಾವೇ ಪ್ರಯೋಜಕೀಭೂತೋ ಯೋ ವಿರಹಃ ತತ್ಪ್ರತಿಯೋಗೀ ಯೋ ಗ್ರಹಃ ಜ್ಞಾನಂ ತದ್ವಿಷಯೀಭೂತಂ ರೂಪಮಿತ್ಯರ್ಥಃ । ಯದ್ರೂಪವಿರಹೇತಿ ಲಕ್ಷಣವಾಕ್ಯೇ ಯದ್ರೂಪವಿರಹಶಬ್ದೇನ ಯದ್ರೂಪೋಪಸ್ಥಿತಿವಿರಹಸ್ಯಾಭಿಮತತ್ವಾದಿತಿ ಭಾವಃ ।**

ಅನುವಾದ– 'ಪ್ರಾಗಭಾವಪ್ರಯೋಜಕವಿರಹಪ್ರತಿಯೋಗಿಗ್ರಹವಿಷಯೀಭೂತಂ ರೂಪಮಾಕಾಂಕ್ಷಾ' ಎಂಬ ಗ್ರಂಥದಲ್ಲಿರುವ ಲಕ್ಷಣದ ಅಭಿಪ್ರಾಯ ಹೀಗಿದೆ - ಅನ್ವಯಾನುಭವದ ಪ್ರಾಗಭಾವದಲ್ಲಿ ಪ್ರಯೋಜಕವಾದ ಯಾವ ವಿರಹವಿದೆಯೋ ಅದಕ್ಕೆ ಪ್ರತಿಯೋಗಿಯಾದ ಯಾವ ಉಪಸ್ಥಿತಿ ಇದೆಯೋ ಅದಕ್ಕೆ ವಿಷಯೀಭೂತವಾದ ಕ್ರಿಯಾಪದತ್ವ ಕಾರಕಪದತ್ವ ಮೊದಲಾದ ಧರ್ಮಗಳು ಎಂದರ್ಥ.

ಏಕೆಂದರೆ 'ಯಸ್ಯ ಪದಸ್ಯ ಯದನ್ವಯಾನನುಭಾವಕತ್ವಂ ಸಮಭಿ- ವ್ಯಾಹೃತಯತ್ಪದಗತಯದ್ರೂಪವಿರಹಪ್ರಯುಕ್ತಂ ತಸ್ಯ ಪದಸ್ಯ ತಸ್ಮಿನ್ ಅನ್ವಯೇ ತೇನ ಪದೇನ ಸಹ ತದ್ರೂಪಮ್ ಆಕಾಂಕ್ಷಾ' ಎಂಬ ಆಕಾಂಕ್ಷೆಯ ಲಕ್ಷಣದಲ್ಲಿ ಯದ್ರೂಪವಿರಹ ಎಂಬ ಶಬ್ದದಿಂದ ಯಾವ ಧರ್ಮದ ಉಪಸ್ಥಿತಿಯ ಇಲ್ಲದಿರುವಿಕೆಯ ಎಂಬ ಅರ್ಥವನ್ನು ಹೇಳಲಾಗಿದೆ.

## ತಾರ್ಕಿಕರಿಗಿರುವ ಮೂರು ದೋಷಗಳು

**ನ್ಯಾಯದೀಪ – ಶ್ರೋತ್ರಗತೇತಿ ॥ ಅತ ಏವೋದಯನಲಕ್ಷಣೇ 'ಶ್ರೋತರಿ' ಇತ್ಯುಕ್ತಿರಿತಿ ಭಾವಃ । ಉಕ್ತರೀತ್ಯೇತಿ ॥ 'ತಜ್ಜ್ಞಾನಸ್ಯ ಕಾರಣತ್ವೇ ಮಾನಾಭಾವಾತ್' ಇತ್ಯಾದಿನೋಕ್ತರೀತ್ಯಾ ಇತ್ಯರ್ಥಃ । ಆಕಾಂಕ್ಷೇತಿ ॥ 'ಶಬ್ದಗತೈವ' ಇತ್ಯನ್ವಯಃ । ಸುಘಟಮಿತಿ ॥ 'ಪ್ರಾಗುಕ್ತವಾಕ್ಯವ್ಯುತ್ಪತ್ತಿರೂಪಪ್ರಮಾಣಾಭಾವಾತ್' ಇತಿ ಭಾವಃ ॥**

ಅನುವಾದ– ಉದಯನನು ಲಕ್ಷಣವನ್ನು ಹೇಳುವಾಗ ಶ್ರೋತರಿ ಎಂದು ಹೇಳಿದ್ದಾನೆ. ಆದ್ದರಿಂದಲೇ ಆಕಾಂಕ್ಷೆಯು ಶ್ರೋತೃಗತವಾಯಿತೆಂಬುದನ್ನು ಉದಯನನು ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾನೆ ಎಂಬುದನ್ನು ಶ್ರೋತೃಗತ ಎಂಬುದರಿಂದ ಗ್ರಂಥಕಾರರು ತಿಳಿಸಿದ್ದಾರೆ.

"ಉಕ್ತರೀತ್ಯಾ" ಹಿಂದೆ ಹೇಳಿದಂತೆ ದುರ್ಘಟವಾಗಿದೆಯೆಂದು ಗ್ರಂಥದಲ್ಲಿ ಹೇಳಿದ್ದಾರೆ. ಏಕೆಂದರೆ ಪ್ರಾಗಭಾವಜ್ಞಾನಕ್ಕೆ ಶಾಬ್ದಬೋಧ ಕಾರಣತ್ವವನ್ನು ಹೇಳಲು ಯಾವುದೇ ಪ್ರಮಾಣವಿಲ್ಲ ಎಂದು ಈ ಹಿಂದೆಯೇ ಸಮರ್ಥಿಸಲಾಗಿದೆ.

'ಮನ್ಮತೇ ತು ಆಕಾಂಕ್ಷಾ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ನಮ್ಮ ಮತದಲ್ಲಿ ಆಕಾಂಕ್ಷೆಯು ಶಬ್ದ-ಗತವೇ ಆಗಿದೆ ಎಂಬುದಾಗಿ ಅನ್ವಯವನ್ನು ತಿಳಿಯಬೇಕು.

ಆಕಾಂಕ್ಷಾಜ್ಞಾನವು ಶಾಬ್ದಬೋಧಕ್ಕೆ ಜನಕವಾಗಿರುವುದು ನಮ್ಮ ಮತದಲ್ಲಿ ಸುಘಟವಾಗಿದೆಯೆಂದು ಗ್ರಂಥದಲ್ಲಿ ಹೇಳಿದ್ದಾರೆ. ಏಕೆಂದರೆ ವಾಕ್ಯವ್ಯುತ್ಪತ್ತಿಯಿದ್ದಲ್ಲಿ ಮಾತ್ರ ಶಾಬ್ದಬೋಧವು ಬರುವ ಕಾರಣ ವಾಕ್ಯವ್ಯುತ್ಪತ್ತಿಯೇ ಇಲ್ಲಿ ಪ್ರಮಾಣವಾಗಿದೆಯೆಂದು ತಿಳಿಯಬೇಕು.

## ಟೀಕೋಕ್ತ ಎಂಬ ಪದಕ್ಕೆ ಸುಂದರವ್ಯಾಖ್ಯಾನ

**ನ್ಯಾಯದೀಪ – ನನ್ವಿದಂ ಮೂಲಗ್ರಂಥೇ ನೋಪಲಭ್ಯತ ಇತ್ಯತ ಆಹ – ಇದಂ ಚೇತಿ ॥ ಟೀಕೋಕ್ತೇತಿ ॥ 'ಟೀಕಾಕೃತಾ ಪದ್ಧತೌ ಉಕ್ತಾ' ಇತ್ಯರ್ಥಃ । 'ಪ್ರಮಾಣ-ಲಕ್ಷಣಟೀಕಾಯಾಮುಕ್ತಾ' ಇತಿ ವಾಽರ್ಥಃ । ತದುಕ್ತೇರಪಿ ಪದ್ಧತ್ಯುಕ್ತ್ಯೈಕಾರ್ಥ-ತ್ವಾತ್ ।**

ಅನುವಾದ– ಗ್ರಂಥಕಾರರು ಹೇಳಿದ ಈ ಆಕಾಂಕ್ಷಾ ಲಕ್ಷಣವು ಮೂಲಗ್ರಂಥದಲ್ಲಿ ಎಲ್ಲೂ ಕಾಣಿಸುತ್ತಿಲ್ಲ. ಆದ್ದರಿಂದ ಇದು ಸ್ವಕಪೋಲಕಲ್ಪಿತವಲ್ಲವೇ? ಎಂಬ ಶಂಕೆಗೆ ಇದಂ ಚ ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಈ ಆಕಾಂಕ್ಷಾಲಕ್ಷಣವು ಟೀಕೆಯಲ್ಲಿ ಹೇಳಿದ ಆಕಾಂಕ್ಷಾಲಕ್ಷಣದಿಂದ ಅವಿನಾ-ಭೂತವಾಗಿದೆ ಆದ್ದರಿಂದ ಮೂಲಗ್ರಂಥದಲ್ಲಿ ಇಲ್ಲವೆಂದು ಹೇಳಲಾಗದು ಎಂದು ಇದರ ಅಭಿಪ್ರಾಯ.

ಗ್ರಂಥದಲ್ಲಿ ಟೀಕೋಕ್ತಾ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಟೀಕೆಯಲ್ಲಿ ಹೇಳಿದ ಲಕ್ಷಣವೆಂದು ಆಪಾತತಃ ಕಾಣಿಸುತ್ತದೆ. ಆದರೆ ಪ್ರಮಾಣಪದ್ಧತಿಯು ಸ್ವತಂತ್ರಗ್ರಂಥವಾದ್ದರಿಂದ ಟೀಕಾಗ್ರಂಥವೇ ಅಲ್ಲ. ಆದ್ದರಿಂದ ಟೀಕೋಕ್ತ ಎಂದರೆ ಟೀಕಾಕಾರರಿಂದ ಪ್ರಮಾಣಪದ್ಧತಿಯಲ್ಲಿ ಹೇಳಲ್ಪಟ್ಟ ಎಂದರ್ಥ ಎಂದು ತಿಳಿಯಬೇಕು. ಅಥವಾ ಪ್ರಮಾಣಲಕ್ಷಣಟೀಕೆಯಲ್ಲಿ ಹೇಳಿರುವ ಎಂಬರ್ಥವನ್ನೂ ತಿಳಿಯಬಹುದು.

ಪ್ರಮಾಣಪದ್ಧತಿಯಲ್ಲಿ ಹೇಳಿದ ಲಕ್ಷಣವು ಪ್ರಮಾಣಲಕ್ಷಣಟೀಕೆಯಲ್ಲಿ ಹೇಳಿದ ಲಕ್ಷಣಕ್ಕೆ ಅನುಗುಣವಾಗಿಯೇ ಇರುತ್ತದೆ. ಆದ್ದರಿಂದ ಟೀಕೋಕ್ತ ಎಂಬ ಪದಪ್ರಯೋಗವು ಸಾಧುವಾಗಿದೆ.

## ಗ್ರಂಥಕಾರರು ಹೇಳಿದ ಆಕಾಂಕ್ಷಾಲಕ್ಷಣದಲ್ಲಿ ಕೆಲವು ದೋಷಗಳಿವೆಯೇ?

**ನ್ಯಾಯದೀಪ– ನನು ಲಕ್ಷಣೇ ಯಸ್ಯಾನನುಭಾವಕತ್ವಂ ಯದ್ರೂಪವಿರಹಪ್ರಯುಕ್ತಮ್ ಇತಿ ನಞ್‌ದ್ವಯಪ್ರವೇಶಾದ್ ಗೌರವಮ್ । 'ಯಸ್ಯಾನುಭಾವಕತ್ವಂ ಯತ್ಪದಗತಯದ್ರೂಪಪ್ರಯುಕ್ತಮ್' ಇತ್ಯೇವೋಕ್ತೌ ಲಾಘವಮ್ ।**

ಅನುವಾದ– ಲಕ್ಷಣದಲ್ಲಿ 'ಯಸ್ಯ ಅನನುಭಾವಕತ್ವ ತದ್ರೂಪವಿರಹಪ್ರಯುಕ್ತಂ' ಎಂಬಲ್ಲಿ ಎರಡು ಕಡೆ ನಞ್ ಬರುವುದರಿಂದ ಗೌರವವಿದೆ; ಇದಕ್ಕಿಂತ 'ಯಸ್ಯ ಅನನುಭಾವಕತ್ವಂ ಯತ್ಪದಗತಯದ್ರೂಪವಿರಹಪ್ರಯುಕ್ತಂ' ಎಂದೇ ಹೇಳಿದಾಗ ಲಾಘವವಿದೆ.

ವಿವರಣೆ - 'ವಸ್ತುತಸ್ತು' ಎಂಬ ವಾಕ್ಯವನ್ನು ನೋಡಿದಾಗ 'ಇಲ್ಲಿಯ ತನಕ ಹೇಳಿದ್ದು ತಮಗೆ ಸಮ್ಮತವಾದದ್ದಲ್ಲ; ಮತ್ತು ಕೆಲವು ದೋಷಗಳಿರುವುದರಿಂದ ಮುಂದೆ ತಮಗೆ ಸಮ್ಮತವಾದ ಲಕ್ಷಣವನ್ನು ಹೇಳುತ್ತಾರೆಂದು ಅರ್ಥ ತೋರುತ್ತದೆ. ಪ್ರಕೃತ 'ವಸ್ತುತಸ್ತು' ಎಂಬ ಗ್ರಂಥಕಾರರ ಈ ವಾಕ್ಯವನ್ನು ನೋಡಿದಾಗಲೂ ಈ ಭ್ರಾಂತಿಯು ಬರುತ್ತದೆ. ಅದು ಹೀಗಿದೆ -

ಗ್ರಂಥಕಾರರು ಹೇಳಿದ ಆಕಾಂಕ್ಷೆಯ ಲಕ್ಷಣದಲ್ಲಿ ಅನೇಕ ದೋಷಗಳಿರುವುದರಿಂದ ಪ್ರಮಾಣಪದ್ಧತಿಯಲ್ಲಿ ಹೇಳಿದ ಲಕ್ಷಣವೇ ಸಾಧುವಾಗಿದೆ. ಏಕೆಂದರೆ ಗ್ರಂಥಕಾರರು ಆಕಾಂಕ್ಷೆಯ ಪರಿಷ್ಕಾರವನ್ನು ಹೀಗೆ ಮಾಡಿದರು- 'ಯಸ್ಯ ಪದಸ್ಯ ಯದನ್ವಯಾನನುಭಾವಕತ್ವಂ ಯತ್ಪದಗತಯದ್ರೂಪವಿರಹಪ್ರಯುಕ್ತಂ ತಸ್ಯ ಪದಸ್ಯ ತಸ್ಮಿನ್ನನ್ವಯೇ ತೇನ ಪದೇನ ಸಹ ತದ್ರೂಪಮಾಕಾಂಕ್ಷಾ' ಎಂದು.

ಈ ಲಕ್ಷಣದಲ್ಲಿ 'ಯದನ್ವಯಾನನುಭಾವಕತ್ವಂ' ಎಂಬಲ್ಲಿ ಒಮ್ಮೆ ನಞ್‌ಪ್ರಯೋಗ ಮಾಡಿ ಪುನಃ ಯದ್ರೂಪವಿರಹಪ್ರಯುಕ್ತ ಎಂಬಲ್ಲಿ ಮತ್ತೊಮ್ಮೆ ನಞ್‌ಪ್ರಯೋಗ ಮಾಡಿದ್ದಾರೆ. ಹೀಗೆ ಎರಡು ಬಾರಿ ನಞ್‌ಪ್ರಯೋಗ ಮಾಡಿ ಲಕ್ಷಣವನ್ನು ಹೇಳುವ ಬದಲು 'ಯಸ್ಯಾನುಭಾವಕತ್ವಂ ಯತ್ಪದಗತಯದ್ರೂಪಪ್ರಯುಕ್ತಂ' ಎಂದು ನಞ್ ಸೇರಿಸದೇ ಲಕ್ಷಣ-

ಮಾಡುವುದು ಲಘುಭೂತವಾಗಿದೆ. ಯಸ್ಯ = ಘಟಪದಸ್ಯ ,ಅನುಭಾವಕತ್ವಂ = ಅನುಭವಜನಕತ್ವಂ , ಯತ್ತದಗತಯದ್ರೂಪಪ್ರಯುಕ್ತಂ = ಆನಯಪದಗತಕ್ರಿಯಾಪದತ್ವರೂಪಧರ್ಮಪ್ರಯುಕ್ತಂ ಎಂದು ಲಕ್ಷಣಸಮನ್ವಯವನ್ನು ಮಾಡುವುದು ಬಹು ಸುಲಭವಾಗಿದೆ.

## ಪ್ರಾಗಭಾವಕ್ಕೆ ವಿರಹಪ್ರಯುಕ್ತತ್ವ ಹೇಳಲು ಹೇಗೆ ಸಾಧ್ಯ ?

**ನ್ಯಾಯದೀಪ – ಕಿಂಚ ಅನ್ವಯಾನುಭವಪ್ರಾಗಭಾವಸ್ಯ ವಿರಹಪ್ರಯುಕ್ತತ್ವಂ ಚ ದುರ್ವಚಮ್ । ಅನಾದೇರ್ಜನ್ಯತ್ವಾಯೋಗಾತ್ । ತದ್‌ವ್ಯಾಪ್ತತ್ವಸ್ಯಾಪಿ ಭಿನ್ನಾಧಿಕರಣತಯಾ ದೈಶಿಕಸ್ಯಾಯೋಗಾತ್ । ಕಾಲಿಕಸ್ಯ ಚ ಸಂಕೇತಸ್ಮೃತಿದಶಾಯಾಂ ಸತ್ಯಪಿ ಇತರಪದೇಽನುಭವಪ್ರಾಗಭಾವಸಂಭವೇನ ವ್ಯಭಿಚಾರಾತ್ ।**

ಅನುವಾದ– ಅನ್ವಯಾನುಭವಪ್ರಾಗಭಾವಕ್ಕೆ ವಿರಹಪ್ರಯುಕ್ತತ್ವವನ್ನು ಹೇಳುವುದು ಬಹಳ ಕಠಿನ. ಏಕೆಂದರೆ ಅನಾದಿಯಾದ ಪ್ರಾಗಭಾವಕ್ಕೆ ಜನ್ಯತ್ವರೂಪವಾದ ವಿರಹಪ್ರಯುಕ್ತವು ಯುಕ್ತವಾಗುವುದಿಲ್ಲ. ವ್ಯಾಪ್ಯತ್ವರೂಪವಾದ ವಿರಹಪ್ರಯುಕ್ತತ್ವವು ಭಿನ್ನಾಧಿಕರಣವಾಗಿರುವುದರಿಂದ ದೈಶಿಕವಾಗಿ ಅಯುಕ್ತವಾಗುತ್ತದೆ. ಕಾಲಿಕವಾಗಿ ಶಕ್ತಿಸ್ಮರಣೆಯ ದಶೆಯಲ್ಲಿ ಇತರಪದವಿದ್ದರೂ ಕೂಡ ಅನುಭವಪ್ರಾಗಭಾವವು ಇರುವುದರಿಂದ ವ್ಯಭಿಚಾರದೋಷವು ಪ್ರಾಪ್ತವಾಗುತ್ತದೆ.

ವಿಶೇಷವಿಚಾರ - ಪ್ರಶ್ನೆ – ಆಕಾಂಕ್ಷೆಯ ಲಕ್ಷಣದಲ್ಲಿ 'ಯಸ್ಯ ಪದಸ್ಯ ಯದನ್ವಯಾನನುಭಾವಕತ್ವಂ' ಎಂಬಲ್ಲಿ ಅನುಭಾವಕತ್ವ ಎಂಬ ಪದಕ್ಕೆ 'ಅನ್ವಯಅನುಭವಪ್ರಾಗಭಾವಃ' ಎಂಬರ್ಥವನ್ನು ಹೇಳಲಾಗಿದೆ. ಇದು ಯತ್ಪ್ರಯುಕ್ತವಾಗಿದೆ? ಎಂಬ ಪ್ರಶ್ನೆಗೆ ಹತ್ತಿರದ ಪದದಲ್ಲಿರುವ ಧರ್ಮದ ವಿರಹಪ್ರಯುಕ್ತವಾಗಿದೆ ಎಂದು ಉತ್ತರಿಸಲಾಗಿದೆ. ಆದರೆ ಪ್ರಾಗಭಾವವು ಮತ್ತೊಂದು ಧರ್ಮದ ಪ್ರಯುಕ್ತವಾಗಲು ಹೇಗೆ ಸಾಧ್ಯ ?

ಉತ್ತರ– ಈ ಆಕ್ಷೇಪದಲ್ಲಿರುವ ಪ್ರಯುಕ್ತತ್ವ ಎಂಬುದಕ್ಕೆ ಏನರ್ಥ? ಜನ್ಯತ್ವ ಎಂದರ್ಥವೋ ವ್ಯಾಪ್ಯತ್ವ ಎಂದರ್ಥವೋ? ಘಟವು ಕುಲಾಲಪ್ರಯುಕ್ತವಾಗಿದೆ ಎಂದು ಹೇಳಿದಾಗ ಕುಲಾಲನಿಂದ ಜನ್ಯವಾಗಿದೆ ಎಂದರ್ಥ. ಅದರಂತೆ ಪ್ರಾಗಭಾವವು ಇತರಪದವಿರಹಪ್ರಯುಕ್ತವಾಗಿದೆ ಎಂದರೆ ಇತರ ಪದದಲ್ಲಿರುವ ಧರ್ಮದಿಂದ ಜನ್ಯವಾಗಿದೆ

ಎಂಬರ್ಥವನ್ನು ಹೇಳಬೇಕು. ಘಟಪದದಲ್ಲಿ ಆನಯಪದದಲ್ಲಿರುವ ಕ್ರಿಯಾಪದತ್ವ ಎಂಬ ಧರ್ಮದ ವಿರಹದಿಂದ ಪ್ರಾಗಭಾವವು ಹುಟ್ಟಿದೆ ಎಂದು ಹೇಳಲು ಹೇಗೆ ಸಾಧ್ಯ ? ಪ್ರಾಗ-ಭಾವವು ಅನಾದಿಯಾಗಿರುವುದರಿಂದ ಯಾವುದರಿಂದಲೂ ಕೂಡ ಹುಟ್ಟಲು ಸಾಧ್ಯವಿಲ್ಲ.

ಪ್ರಾಗಭಾವವು ಇನ್ನೊಂದು ಪದದಲ್ಲಿರುವ ಧರ್ಮದ ವಿರಹಪ್ರಯುಕ್ತವಾಗಿದೆ ಎಂದರೆ ವ್ಯಾಪ್ಯವಾಗಿದೆ ಎಂಬರ್ಥವನ್ನು .ವಿವಕ್ಷಿಸಬೇಕು. 'ಯತ್ರ ಸಮಭಿವ್ಯಾಹೃತಕ್ರಿಯಾಪದಗತ-ಧರ್ಮವಿರಹಃ ತತ್ರ ಅನ್ವಯಾನುಭವಪ್ರಾಗಭಾವಃ' ಎಂಬ ವ್ಯಾಪ್ತಿಯನ್ನು ನೀವು ಹೇಳ-ಬೇಕು. ಹೀಗೆ ದೈಶಿಕವ್ಯಾಪ್ತಿಯನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅನ್ವಯಾನುಭವದ ಪ್ರಾಗಭಾವವು ಶಾಬ್ದಬೋಧ ಬರುತ್ತಿರುವ ವ್ಯಕ್ತಿಯಲ್ಲಿ ಇದೆ. ಆದರೆ ರೂಪವಿರುವುದು ಕ್ರಿಯಾಪದದಲ್ಲಿ. ಆದ್ದರಿಂದ ಅನ್ವಯಾನುಭವಪ್ರಾಗಭಾವವು ಶ್ರೋತೃವಿನಲ್ಲಿದೆ. ರೂಪ-ವಿರಹವು ಪದದಲ್ಲಿದೆ. ಹೀಗೆ ವೈಯ್ಯಧಿಕರಣ್ಯವಿರುವುದರಿಂದ ದೈಶಿಕವ್ಯಾಪ್ತಿಯನ್ನು ಹೇಳಲು ಸಾಧ್ಯವಿಲ್ಲ.

'ಯದಾ ಅನ್ವಯಾನುಭವಪ್ರಾಗಭಾವಃ ತದಾ ರೂಪವಿರಹಃ' ಎಂದು ಕಾಲಿಕವ್ಯಾಪ್ತಿಯನ್ನು ಹೇಳಬೇಕು. ಕೆಲವೊಮ್ಮೆ ಪದಗಳನ್ನು ಕೇಳಿದಾಗ ಶಕ್ತಿಸ್ಮರಣೆಯೇ ಬರುವುದಿಲ್ಲ. ಅಂತಹ ಸಂದರ್ಭದಲ್ಲಿ ಅನ್ವಯಾನುಭವಪ್ರಾಗಭಾವವಿದೆ. ಆದರೆ 'ರೂಪವಿರಹ' ಇರುವುದಿಲ್ಲ. ಏಕೆಂದರೆ ಪದಗಳಲ್ಲಿ ಕ್ರಿಯಾಪದತ್ವ ಮೊದಲಾದ ರೂಪಗಳೇ ಇದೆ. ಆದ್ದರಿಂದ ಕಾಲಿಕವ್ಯಾಪ್ತಿಯನ್ನು ಹೇಳಲು ಸಾಧ್ಯವಿಲ್ಲ. ಹೀಗೆ ವ್ಯಭಿಚಾರದೋಷವು ಬರುವುದರಿಂದ ಗ್ರಂಥಕಾರರು ಹೇಳಿದ ಆಕಾಂಕ್ಷೆಯ ಲಕ್ಷಣವು ಅಸಾಧುವಾಗಿದೆ.

## ಪ್ರಮಾಣಪದ್ಧತಿಯಲ್ಲಿ ಆಕಾಂಕ್ಷಾಲಕ್ಷಣ

**ತರ್ಕತಾಂಡವ– ವಸ್ತುತಸ್ತು ಯತ್ಪದಪ್ರಯೋಜ್ಯಜಿಜ್ಞಾಸಾವಿಷಯತ್ವಯೋಗ್ಯಜ್ಞಾನ-ಜನಕತ್ವಾವಚ್ಛೇದಕರೂಪವತ್ತ್ವಂ ಯಸ್ಯ ಸಹ ತಸ್ಯ ತದ್ರೂಪಮೇವಾಕಾಂಕ್ಷಾ।**

ಅನುವಾದ– ವಸ್ತುತಸ್ತು 'ಯತ್ಪದಪ್ರಯೋಜ್ಯಜಿಜ್ಞಾಸಾವಿಷಯತ್ವಯೋಗ್ಯಜ್ಞಾನಜನಕತ್ವಾವ-ಚ್ಛೇದಕರೂಪವತ್ತ್ವಂ ಯಸ್ಯ ತೇನ ಸಹ ತಸ್ಯ ತದ್ರೂಪಂ' ಎಂಬುದು ಆಕಾಂಕ್ಷೆಯ ಲಕ್ಷಣ. ಯಾವ ಪದದಿಂದ ಪ್ರಯೋಜ್ಯವಾದ ಜಿಜ್ಞಾಸೆಯಿದೆಯೋ ಇದರ ವಿಷಯತ್ವಕ್ಕೆ ಯೋಗ್ಯವಾದ ಯಾವ

ಜ್ಞಾನವೋ ಅದರ ಜನಕತ್ವಾವಚ್ಛೇದಕರೂಪವತ್ವವು ಯಾವ ಪದಕ್ಕಿರುತ್ತದೋ ಆ ಪದಕ್ಕೆ ಆ ಪದದಿಂದ ಆಕಾಂಕ್ಷೆಯನ್ನು ತಿಳಿಯಬೇಕು.

ವಿವರಣೆ - ಕಾರಕಪದವನ್ನು ಕೇಳಿದಾಗ ಸಾಮಾನ್ಯವಾಗಿ ಯೋಗ್ಯೇತರಾನ್ವಿತದ ಜ್ಞಾನವು ಬರುತ್ತದೆ. ಅನಂತರ ವಿಶೇಷಜಿಜ್ಞಾಸೆಯು ಹುಟ್ಟುತ್ತದೆ. ಉದಾ - 'ಘಟಂ' ಎಂದು ಘಟಪದವನ್ನು ಕೇಳಿದಾಗ 'ಈ ಪದವು ಇನ್ನೊಂದರಿಂದ ಅನ್ವಿತವಾಗಿದೆ' ಎಂಬ ಜ್ಞಾನವು ಮೊದಲು ಬರುತ್ತದೆ. ಅನಂತರ ಕ್ರಿಯಾವಿಶೇಷದ ಜ್ಞಾನದ ಇಚ್ಛೆಯು ಹುಟ್ಟುತ್ತದೆ. ಈ ಕ್ರಿಯಾವಿಶೇಷಜ್ಞಾನಕ್ಕೆ ಜನಕವಾದದ್ದು 'ಆನಯ' ಎಂಬ ಪದ. ಕ್ರಿಯಾವಿಶೇಷಜ್ಞಾನವನ್ನು ಹುಟ್ಟಿಸಲು ಯೋಗ್ಯವಾದ ಧರ್ಮ 'ಆನಯ'ಪದದಲ್ಲಿದೆ ಎಂದಭಿಪ್ರಾಯ. ಇದು ಯಾವ ಯಾವ ಪದಕ್ಕೆ ಯಾವ ಯಾವ ಪದದಿಂದ ಇರುತ್ತದೋ ಅದನ್ನೇ ಆಕಾಂಕ್ಷೆ ಎಂದು ಕರೆಯುತ್ತಿದ್ದೇವೆ.

## ಟೀಕಾರಾಯರು ಹೇಳಿದ ಆಕಾಂಕ್ಷಾಲಕ್ಷಣದ ನಿರ್ದುಷ್ಟತೆ, ವ್ಯಾಖ್ಯಾನ

**ನ್ಯಾಯದೀಪ – ಕಿಂಚೈವಂ ಸತಿ ಟೀಕಾಕೃದುಕ್ತಲಕ್ಷಣಮಸಮಂಜಸಮ್ ಇತ್ಯಪಿ ಧೀರ್ಮಂದಾನಾಂ ಪ್ರಾಪ್ನೋತೀತ್ಯತ ಆಹ – ವಸ್ತುತಸ್ತ್ವಿತಿ ॥**

ಅನುವಾದ– ಮತ್ತು 'ಟೀಕಾಕಾರರು ಹೇಳಿದ ಆಕಾಂಕ್ಷಾಲಕ್ಷಣವು ಅಸಮಂಜಸವಾಗಿದೆ' ಎಂಬ ಬುದ್ಧಿಯು ಕೂಡ ಮಂದರಿಗೆ ಪ್ರಾಪ್ತವಾಗುತ್ತದೆ. ಈ ಆಕ್ಷೇಪವನ್ನು ''ವಸ್ತುತಸ್ತು'' ಇತ್ಯಾದಿಯಾಗಿ ಪರಿಹರಿಸುತ್ತಿದ್ದಾರೆ.

ವಿವರಣೆ - ಮೇಲೆ ಹೇಳಿದಂತೆ ಗ್ರಂಥಕಾರರ ಲಕ್ಷಣದಲ್ಲಿಯೇ ದೋಷವು ಭಾಸವಾಗುತ್ತದೆ. ಅಥವಾ ಟೀಕಾಕಾರರು ಹೇಳಿದ ಲಕ್ಷಣತ್ವದಲ್ಲಿಯೇ ಅಸಾಧುತ್ವವು ಪ್ರಾಪ್ತವಾಗುತ್ತದೆ. ಇದರ ಪರಿಹಾರವನ್ನು ಕೂಡ 'ವಸ್ತುತಸ್ತು' ಇತ್ಯಾದಿಯಿಂದಲೇ ಪರಿಹಾರ ಮಾಡುತ್ತಾರೆ.

**ನ್ಯಾಯದೀಪ – ಯತ್ಪದಪ್ರಯೋಜ್ಯೇತಿ ॥ 'ಯಚ್ಛಬ್ದೋಪಸ್ಥಿತಿಜನ್ಯಾ' ಇತ್ಯರ್ಥಃ । 'ಪದೇ'ತಿ ಶಬ್ದಪರಂ ಸತ್ತದುಪಸ್ಥಿತಿಪರಮಿತಿ ಪ್ರಾಗೇವೋಕ್ತತ್ವಾತ್ । ಅನ್ಯಥಾ ಪೂರ್ವೋಕ್ತದೋಷಾಪತ್ತಿಃ । ಜಿಜ್ಞಾಸಾ ಜ್ಞಾನವಿಷಯಕೇಚ್ಛಾ । ತದ್ವಿಷ-**

**ಯತ್ತ್ವಯೋಗ್ಯಂ ಜ್ಞಾನಂ ತಜ್ಜನಕತಾವಚ್ಛೇದಕಂ ರೂಪಂ ಕ್ರಿಯಾಪದತ್ವಾದಿಕಂ ಪೂರ್ವೋಕ್ತಮೇವ ಧ್ಯೇಯಮ್ ॥**

ಅನುವಾದ– 'ಯತ್ಪದಪ್ರಯೋಜ್ಯ' ಎಂಬುದಕ್ಕೆ ಯಾವ ಶಬ್ದದ ಉಪಸ್ಥಿತಿಯಿಂದ ಜನ್ಯವಾದದ್ದು ಎಂದರ್ಥ. 'ಪದ' ಎಂಬುದಕ್ಕೆ ಶಬ್ದ ಎಂಬರ್ಥವನ್ನು ವಿವಕ್ಷಿಸಿ ಅದರ ಉಪಸ್ಥಿತಿಪರವಾಗಿ ವ್ಯಾಖ್ಯಾನ ಮಾಡಬೇಕೆಂದು ಈ ಹಿಂದೆಯೇ ಹೇಳಿದ್ದಾಗಿದೆ. ಇಲ್ಲದಿದ್ದರೆ ಪ್ರಕೃತಿ,ಪ್ರತ್ಯಯಗಳಲ್ಲಿ ಆಕಾಂಕ್ಷೆ ಇಲ್ಲ-ವೆಂದಾಗಬೇಕಾದೀತು. 'ಜಿಜ್ಞಾಸಾ' ಎಂಬ ಪದಕ್ಕೆ ಜ್ಞಾನವಿಷಯಕವಾದ ಇಚ್ಛೆ ಎಂದರ್ಥ. ಈ ಇಚ್ಛೆಯ ವಿಷಯತ್ವಕ್ಕೆ ಯೋಗ್ಯವಾದದ್ದು ಜ್ಞಾನ. ಅದಕ್ಕೆ ಜನಕತಾವಚ್ಛೇದಕತ್ವವಾದ ಧರ್ಮ ಎಂದರೆ ಕ್ರಿಯಾ-ಪದತ್ವಾದಿಗಳು. ಇದನ್ನು ಈ ಹಿಂದೆ ಹೇಳಿದಂತೆ ವಿವಕ್ಷಿಸಬೇಕು.

## ಲಕ್ಷ್ಯದಲ್ಲಿ ಲಕ್ಷಣಸಮನ್ವಯ

**ತರ್ಕತಾಂಡವ – ಭವತಿ ಹಿ 'ಘಟಮಾನಯ' ಇತ್ಯತ್ರ ಘಟಮಿತಿ ಕಾರಕಪದ-ಪ್ರಯೋಜ್ಯಾ ಯಾ ಜಿಜ್ಞಾಸಾ ತಸ್ಯ ವಿಷಯತ್ವಯೋಗ್ಯಂ ಯತ್ಕ್ರಿಯಾಜ್ಞಾನಂ ತಜ್ಜನಕಂ ಯದಾನಯೇತಿ ಕ್ರಿಯಾಪದಂ ತನ್ನಿಷ್ಠಜನಕತಾವಚ್ಛೇದಕಂ ಕ್ರಿಯಾಪದತ್ವಮಾಕಾಂಕ್ಷಾ।**

ಅನುವಾದ– 'ಘಟಮಾನಯ' ಎಂಬಲ್ಲಿ ಈ ಆಕಾಂಕ್ಷೆಯ ಲಕ್ಷಣವು ಸಮನ್ವಯವಾಗುತ್ತದೆ. ಅದು ಹೀಗೆ -

'ಯತ್ಪದ' ಎಂದರೆ ಘಟಂ ಎಂಬ ಕಾರಕಪದ. ಇದರಿಂದ ಪ್ರಯೋಜ್ಯವಾದ ಜಿಜ್ಞಾಸಾ ಎಂದರೆ ಕ್ರಿಯಾವಿಶೇಷಾನ್ವಯವನ್ನು ತಿಳಿಯಬೇಕು ಎಂಬ ಜ್ಞಾನದ ಇಚ್ಛೆ. ಇದರ ವಿಷಯತ್ವಕ್ಕೆ ಯೋಗ್ಯವಾದ ಯಾವ ಕ್ರಿಯಾಜ್ಞಾನ ಎಂದರೆ ಆನಯ ಎಂಬ ಕ್ರಿಯಾಜ್ಞಾನ. ಇದಕ್ಕೆ ಜನಕವಾದದ್ದು 'ಆನಯ' ಎಂಬ ಕ್ರಿಯಾಪದ. ತನ್ನಿಷ್ಠವಾದ ಜನಕತಾವಚ್ಛೇದಕ ಎಂದರೆ ಕ್ರಿಯಾಪದತ್ವ . ಇದನ್ನೇ ಆಕಾಂಕ್ಷೆ ಎಂದು ಕರೆಯುತ್ತೇವೆ.

ಈ ಕ್ರಿಯಾಪದತ್ವವು 'ಯಸ್ಯ' ಯಾವ ಆನಯ ಎಂಬ ಪದಕ್ಕಿದೆಯೋ, 'ತೇನ ಸಹ' ಘಟಪದದಿಂದ 'ತಸ್ಯ' ಆನಯ ಎಂಬ ಪದಕ್ಕೆ ತದ್ರೂಪಮೇವ ಕ್ರಿಯಾಪದತ್ವರೂಪಮೇವ ಆಕಾಂಕ್ಷೆ ಎಂದು ಕರೆಸಿಕೊಳ್ಳುತ್ತದೆ.

ವಿವರಣೆ - 'ಆನಯ ಘಟಂ' ಎಂಬಲ್ಲಿಯೂ ಈ ಲಕ್ಷಣದ ಸಮನ್ವಯವನ್ನು ತಿಳಿಯ-ಬೇಕು. 'ಆನಯ ಘಟಂ' ಎಂಬಲ್ಲಿ 'ಯತ್ತದ' ಎಂದರೆ 'ಆನಯ' ಎಂಬ ಪದ. ಇದರಿಂದ ಪ್ರಯೋಜ್ಯವಾದ ಜಿಜ್ಞಾಸಾ ಎಂದರೆ ಕರ್ಮಕಾರಕದಿಂದ ಅನ್ವಯವನ್ನು ತಿಳಿಯಬೇಕೆಂಬ ಜ್ಞಾನದ ಇಚ್ಛೆ. ಇದರ ವಿಷಯತ್ವಕ್ಕೆ ಯೋಗ್ಯವಾದ ಜ್ಞಾನ ಎಂದರೆ ಘಟದ ಜ್ಞಾನ. ಈ ಜ್ಞಾನಕ್ಕೆ ಜನಕವಾದದ್ದು ಘಟ ಎಂಬ ಪದ. ಜನಕತಾವಚ್ಛೇದಕವಾದದ್ದು ಘಟಪದತ್ವ. ಜನಕತಾವಚ್ಛೇದಕರೂಪವತ್ವವು ಘಟ ಎಂಬ ಪದದಲ್ಲಿದೆ. ತೇನ ಸಹ = ಆನಯ ಎಂಬ ಪದದಿಂದ, ತಸ್ಯ = ಘಟ ಎಂಬ ಪದಕ್ಕೆ, ತದ್ರೂಪಮೇವ = ಘಟಪದತ್ವ ಎಂಬುದೇ ಆಕಾಂಕ್ಷೆ ಎಂದು ಕರೆಸಿಕೊಳ್ಳುತ್ತದೆ.

**ನ್ಯಾಯದೀಪ – ಲಕ್ಷಣಾರ್ಥಂ ವಿವೃಣ್ವನ್ನೇವ ಲಕ್ಷ್ಯನಿಷ್ಠತಯಾ ದರ್ಶಯತಿ – ಭವತಿ ಹೀತಿ ॥**

ಅನುವಾದ– ಲಕ್ಷಣದ ಅರ್ಥವನ್ನು ತಾವೇ ವಿವರಿಸುತ್ತಾ ಲಕ್ಷ್ಯದಲ್ಲಿ ಲಕ್ಷಣವನ್ನು ಸಮರ್ಥನೆ ಮಾಡುತ್ತಿದ್ದಾರೆ ''ಭವತಿ ಹಿ'' ಇತ್ಯಾದಿಯಾಗಿ.

## ಲಕ್ಷಣಕ್ಕೆ ಅವ್ಯಾಪ್ತಿಪರಿಹಾರ

**ತರ್ಕತಾಂಡವ– ಇಯಂ ಚ ಜಿಜ್ಞಾಸಾಯೋಗ್ಯತಾಽಜಿಜ್ಞಾಸಿತೇಽಪ್ಯಸ್ತಿ ಇತಿ ನ ಅವ್ಯಾಪ್ತಿಃ ।**

ಅನುವಾದ– ಈ ಜಿಜ್ಞಾಸಾಯೋಗ್ಯತ್ವವು ಅಜಿಜ್ಞಾಸಿತವಾದದ್ದರಲ್ಲೂ ಇರುವುದರಿಂದ ಅವ್ಯಾಪ್ತಿ-ದೋಷಕ್ಕೆ ಅವಕಾಶವಿಲ್ಲ.

ವಿವರಣೆ - ಯತ್ತದಪ್ರಯೋಜ್ಯವಾದ ಜಿಜ್ಞಾಸೆಗೆ ವಿಷಯವಾಗಬೇಕೆಂದು ಹೇಳಲಿಲ್ಲ. ಜಿಜ್ಞಾಸಾವಿಷಯತ್ವಕ್ಕೆ ಯೋಗ್ಯವಾಗಿರಬೇಕೆಂದು ಹೇಳಿದ್ದೇವೆ. ಇದರಿಂದ ಅಜಿಜ್ಞಾಸಿತವಾದ ಜನಿತಫಲದಲ್ಲಿ ಅವ್ಯಾಪ್ತಿದೋಷವು ಬರುವುದಿಲ್ಲ. ಏಕೆಂದರೆ ಅದರಲ್ಲಿ ಜಿಜ್ಞಾಸಾ-ವಿಷಯತ್ವ ಇಲ್ಲದಿದ್ದರೂ ಜಿಜ್ಞಾಸಾವಿಷಯತ್ವಕ್ಕೆ ಯೋಗ್ಯವಾಗಿದೆ.

## ಆಕಾಂಕ್ಷಾಜ್ಞಾನವು ಕಾರಣವಾದ್ದರಿಂದ ಅಸಾಧಾರಣ್ಯ ಬರುತ್ತದೆ

**ನ್ಯಾಯದೀಪ – ಇಯಂ ಚೇತಿ ॥ ಇಯಂ ಚ ಜಿಜ್ಞಾಸಾಂ ಪ್ರತಿ ಯೋಗ್ಯತಾ ಅಜಿಜ್ಞಾಸಿತೇ ಜನಿತಫಲೇ ಜಿಜ್ಞಾಸಾಪೂರ್ವಭಾವಿನ್ಯಪಿ ವಾಕ್ಯ ಇತ್ಯರ್ಥಃ । ತಸ್ಮಾ-ದವ್ಯಾಪ್ತಿಶೂನ್ಯತ್ವಾದಿತ್ಯರ್ಥಃ । ನ ಚ ಸ್ವರೂಪಯೋಗ್ಯತಾಯಾ ಆಕಾಂಕ್ಷತ್ವೇ ಶಾಬ್ದಬೋಧಸಾಧಾರಣ್ಯಂ ನ ಸ್ಯಾದಿತಿ ಶಂಕ್ಯಮ್ । ಉಕ್ತರೂಪಾಕಾಂಕ್ಷಾಜ್ಞಾನ-ಸ್ಯೈವ ಹೇತುತ್ವಾದಿತ್ಯುಪಪಾದಿತತ್ವಾದಿತಿ ಭಾವಃ ।**

ಅನುವಾದ– 'ಇಯಂ ಚ ಜಿಜ್ಞಾಸಾಯೋಗ್ಯತಾ' ಎಂಬುದಕ್ಕೆ 'ಈ ಜಿಜ್ಞಾಸೆಯನ್ನು ಕುರಿತು ಯೋಗ್ಯತಾ' ಎಂದರ್ಥ. ಇದು ಅಜಿಜ್ಞಾಸಿತವಾದ ಜನಿತಫಲವಾಕ್ಯದಲ್ಲಿ ಜಿಜ್ಞಾಸಾಪೂರ್ವಭಾವಿಯಾದ ವಾಕ್ಯದಲ್ಲಿಯೂ ಇರುತ್ತದೆಂದು ತಿಳಿಯಬೇಕು. ಆದ್ದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ ಎಂದರ್ಥ.

ಸ್ವರೂಪಯೋಗ್ಯತ್ವವನ್ನೇ ಆಕಾಂಕ್ಷೆ ಎಂದು ಹೇಳುವುದಾದರೆ ಶಾಬ್ದಬೋಧಅಸಾಧಾರಣ್ಯವನ್ನು ಹೇಗೆ ಹೇಳಿದಂತಾಯಿತು ಎಂದು ಆಶಂಕಿಸಬಾರದು. ಹಿಂದೆ ಹೇಳಿದಂತೆ ಆಕಾಂಕ್ಷಾಜ್ಞಾನವೇ ಕಾರಣವೆಂದು ಉಪಪಾದನೆ ಮಾಡಿದ್ದರಿಂದ ಅಸಾಧಾರಣ್ಯವು ಯುಕ್ತವಾಗುತ್ತದೆಂದು ಅಭಿಪ್ರಾಯ.

## ಪ್ರಮಾಣಪದ್ಧತಿಯಲ್ಲಿ ಆಕಾಂಕ್ಷಾ

**ತರ್ಕತಾಂಡವ – ತಸ್ಮಾತ್ ಸ್ವರೂಪಯೋಗ್ಯತೈವಾಕಾಂಕ್ಷಾ । ಅತ ಏವ ಪದ್ಧತೌ ''ಆಕಾಂಕ್ಷಾ ಜಿಜ್ಞಾಸಾ ಚೇತನಧರ್ಮಃ । ತದ್ವಿಷಯತ್ವಾತ್ ಪದಾರ್ಥಾಃ ಸಾಕಾಂಕ್ಷಾಃ । ತತ್ಪ್ರತಿಪಾದಕತ್ವಾತ್ ಪದಾನ್ಯಪಿ'' ಇತ್ಯತ್ರ ಪ್ರತಿಪಾದಕಶಬ್ದೇನ ಜಿಜ್ಞಾಸಾವಿಷಯ-ಜ್ಞಾನಜನಕತಾವಚ್ಛೇದಕರೂಪವತ್ತ್ವಾತ್ಮಿಕಾ ಜಿಜ್ಞಾಸಿತಾರ್ಥಪ್ರತಿಪಾದನಯೋಗ್ಯತಾ ಏವ ಆಕಾಂಕ್ಷಾ ಇತ್ಯುಕ್ತಮ್ । ನ ತು ಫಲೋಪಾಧಾನಮ್ । ಅನ್ವಯಬೋಧಾತ್ ಪ್ರಾಗಾಕಾಂಕ್ಷಾಭಾವಪ್ರಸಂಗಾತ್ ॥**

ಅನುವಾದ– ಆದ್ದರಿಂದ ಸ್ವರೂಪಯೋಗ್ಯತೆಯನ್ನೇ ಆಕಾಂಕ್ಷೆಯೆಂದು ತಿಳಿಯಬೇಕು. ಆದ್ದರಿಂದಲೇ ಪ್ರಮಾಣಪದ್ಧತಿಯಲ್ಲಿ ಹೀಗೆ ಹೇಳಿದ್ದಾರೆ. ''ಆಕಾಂಕ್ಷಾ ಜಿಜ್ಞಾಸಾ ಚೇತನಧರ್ಮಃ ।

ತದ್ವಿಷಯತ್ವಾತ್ ಪದಾರ್ಥಾಃ ಸಾಕಾಂಕ್ಷಾಃ । ತತ್ಪ್ರತಿಪಾದಕತ್ವಾತ್ ಪದಾನ್ಯಪಿ'' 'ಆಕಾಂಕ್ಷೆ ಎಂದರೆ ಜಿಜ್ಞಾಸೆ; ಇದು ಚೇತನನ ಧರ್ಮ. ಜಿಜ್ಞಾಸೆಗೆ ವಿಷಯವಾಗಿರುವುದರಿಂದ ಪದಾರ್ಥಗಳನ್ನು ಸಾಕಾಂಕ್ಷಾ ಎಂದು ಕರೆಯುತ್ತಾರೆ. ಈ ಪದಾರ್ಥಗಳನ್ನು ಪ್ರತಿಪಾದನೆ ಮಾಡುವುದರಿಂದ ಪದಗಳು ಕೂಡ ಸಾಕಾಂಕ್ಷೆಯುಳ್ಳವುಗಳು ಎಂದು ಕರೆಯುತ್ತಾರೆ' ಎಂದು ಹೇಳಿ ಈ ಪ್ರಕರಣದಲ್ಲಿ ಪ್ರತಿಪಾದಕಶಬ್ದದಿಂದ ಜಿಜ್ಞಾಸಾವಿಷಯವಾದ ಜ್ಞಾನಕ್ಕೆ ಜನಕತಾವಚ್ಛೇದಕವಾದ ಧರ್ಮವುಳ್ಳ ಜಿಜ್ಞಾಸಿತವಾದ ಅರ್ಥಪ್ರತಿಪಾದನಯೋಗ್ಯತಾವೇ ಆಕಾಂಕ್ಷೆ ಎಂದು ಕರೆಸಿಕೊಳ್ಳುತ್ತದೆ' ಎಂದು ವಿವರಿಸಲಾಗಿದೆ. ಹೀಗೆ ಸ್ವರೂಪಯೋಗ್ಯತೆಯನ್ನೇ ಆಕಾಂಕ್ಷೆಯೆಂದು ತಿಳಿಯಬೇಕು. ಹೊರತು ಫಲೋಪಧಾನವನ್ನು ಆಕಾಂಕ್ಷೆಯೆಂದು ತಿಳಿಯಬಾರದು. ಫಲೋಪಧಾನವೇ ಆಕಾಂಕ್ಷೆ ಎನ್ನುವುದಾದರೆ ಅನ್ವಯಬೋಧ ಬರುವ ಮೊದಲು ಆಕಾಂಕ್ಷೆಯಿಲ್ಲವೆಂದಾಗಬೇಕಾದೀತು.

**ನ್ಯಾಯದೀಪ – ಅತ ಏವೇತಿ ॥ ಉಕ್ತರೂಪಸ್ವರೂಪಯೋಗ್ಯತಾಯಾ ಆಕಾಂಕ್ಷಾತ್ವಾದೇವೇತ್ಯರ್ಥಃ । ಜಿಜ್ಞಾಸಾವಿಷಯಜ್ಞಾನೇತಿ ॥ 'ಇಚ್ಛಾವಿಷಯಜ್ಞಾನೇ'ತ್ಯರ್ಥಃ । ಇಚ್ಛಾವಿಷಯೇತಿ ॥ ಇಚ್ಛಾವಿಷಯೋತ್ಪಾದಕಸ್ಯೈವೇತ್ಯರ್ಥಃ । ಟೀಕಾಯಾಮಿತಿ ॥ ಪ್ರಮಾಣಲಕ್ಷಣಟೀಕಾಯಾಮಿತ್ಯರ್ಥಃ ।**

॥ಇತ್ಯಾಕಾಂಕ್ಷಾನಿರೂಪಣಮ್ ॥

ಅನುವಾದ– 'ಅತ ಏವ' ಎಂಬ ಪದಕ್ಕೆ ಹಿಂದೆ ಹೇಳಿದಂತೆ ಸ್ವರೂಪಯೋಗ್ಯತೆಯೇ ಆಕಾಂಕ್ಷೆ ಆಗಿರುವುದರಿಂದಲೇ ಎಂದರ್ಥ. 'ಜಿಜ್ಞಾಸಾವಿಷಯಜ್ಞಾನ' ಎಂಬುದಕ್ಕೆ ಇಚ್ಛಾವಿಷಯಜ್ಞಾನ ಎಂದರ್ಥ. 'ಇಚ್ಛಾವಿಷಯ' ಎಂದರೆ ಇಚ್ಛಾವಿಷಯೋತ್ಪಾದಕವಾದದ್ದು ಎಂದರ್ಥ. 'ಟೀಕಾಯಾಂ' ಎಂದರೆ ಪ್ರಮಾಣಲಕ್ಷಣಟೀಕಾದಲ್ಲಿ ಎಂದರ್ಥ.

## ಪ್ರಮಾಣಲಕ್ಷಣಟೀಕೆಯಲ್ಲಿ ಆಕಾಂಕ್ಷೆಯ ಲಕ್ಷಣ

**ತರ್ಕತಾಂಡವ – ಪ್ರಮಾಣಲಕ್ಷಣಟೀಕಾಯಾಮಪಿ 'ಪೂರ್ವಪದಜನಿತಾಕಾಂಕ್ಷಾಪೂರಕಮ್' ಇತ್ಯತ್ರ 'ಪೂರಕಶಬ್ದೇನಾಸ್ಮದುಕ್ತಾ ಜಿಜ್ಞಾಸಾವಿಷಯತ್ವಯೋಗ್ಯಜ್ಞಾನಜನಕತಾವಚ್ಛೇದಕರೂಪವತ್ತ್ವಾತ್ಮಿಕಾ ಜಿಜ್ಞಾಸಾಪೂರಕತೈವಾಂಕ್ಷಾ' ಇತ್ಯುಕ್ತಮ್ ।**

**ಭವತಿ ಹಿ ಜಿಜ್ಞಾಸಾವಿಷಯಜ್ಞಾನಜನಕೋ ಜಿಜ್ಞಾಸಾಪೂರಕಃ । ಇಚ್ಛಾವಿಷಯ-ಸಾಧಕಸ್ಯೈವ ಲೋಕೇ ಇಚ್ಛಾಪೂರಕತ್ವೇನ ವ್ಯವಹಾರಾತ್ ।**

ಅನುವಾದ– ಪ್ರಮಾಣಲಕ್ಷಣಟೀಕೆಯಲ್ಲಿಯೂ ಕೂಡ ಹೀಗೆ ಹೇಳಿದ್ದಾರೆ. 'ಪೂರ್ವಪದ ಜನಿತಾಕಾಂಕ್ಷಾ ಪೂರಕತ್ವಂ' ಎಂಬಲ್ಲಿ ಪೂರಕಶಬ್ದಕ್ಕೆ ವ್ಯಾಖ್ಯಾನ ಮಾಡುವಾಗ ನಾವು ಹೇಳುವಂತೆ ಆಕಾಂಕ್ಷೆಯನ್ನು ತಿಳಿಸಿದ್ದಾರೆ. 'ಜಿಜ್ಞಾಸಾವಿಷಯತ್ವಯೋಗ್ಯಜ್ಞಾನಜನಕತಾವಚ್ಛೇದಕರೂಪವತ್ತ್ವಾತ್ಮಿಕಾ ಜಿಜ್ಞಾಸಾಪೂರಕತೈವ ಆಕಾಂಕ್ಷಾ' 'ಜಿಜ್ಞಾಸಾವಿಷಯತ್ವಕ್ಕೆ ಯೋಗ್ಯವಾದ ಜ್ಞಾನಜನಕತಾವಚ್ಛೇದಕವಾದ ಯಾವ ಧರ್ಮವಿದೆಯೋ ಅದೇ ಜಿಜ್ಞಾಸಾಪೂರಕವಾದ ಆಕಾಂಕ್ಷೆ ಎಂದು ಕರೆಸಿಕೊಳ್ಳುತ್ತದೆ ಎಂದು.

ಜಿಜ್ಞಾಸಾವಿಷಯವಾದ ಜ್ಞಾನಕ್ಕೆ ಜನಕವಾದ ಪದಾರ್ಥವು ಜಿಜ್ಞಾಸೆಗೆ ಪೂರಕವಾಗುವುದಾಗಿ ಲೋಕದಲ್ಲಿ ಕಂಡಿದೆ. ಇಚ್ಛಾವಿಷಯಸಾಧಕವಾದದ್ದೇ ಇಚ್ಛಾಪೂರಕವಾದದ್ದೆಂಬ ವ್ಯವಹಾರ ಲೋಕದಲ್ಲಿರುವಂತೆ.

## ಆಕಾಂಕ್ಷೆ ಇರುವ ಹಾಗೂ ಆಕಾಂಕ್ಷೆ ಇಲ್ಲದಿರುವ ಸ್ಥಳಗಳು ಯಾವವು?

**ತರ್ಕತಾಂಡವ – ಯತ್ತು ಟೀಕಾಯಾಂ ವಿರಕ್ತಂ ಪ್ರತಿ ವಾಣಿಜ್ಯೋಪದೇಶೇ ನೈರಾಕಾಂಕ್ಷ್ಯಮುಕ್ತಮ್, ತದನ್ವಯಬೋಧೋಪಯೋಗಿಸಾಕಾಂಕ್ಷತ್ವೇ ಸತ್ಯಪಿ ಶ್ರೋತೃರನಪೇಕ್ಷಿತತ್ವಮಾತ್ರೇಣ । ಅತ ಏವ ಟೀಕಾಯಾಮನ್ವಯಬೋಧೋಪಯೋಗ್ಯಾಕಾಂಕ್ಷಾಭಾವೇ 'ಗೌರಶ್ವಃ ಪುರುಷೋ ಹಸ್ತೀ' ಇತ್ಯಾದಿಕಮೇವೋದಾಹೃತಮ್ ।**

॥ ಇತ್ಯಾಕಾಂಕ್ಷಾನಿರೂಪಣಮ್ ॥

ಅನುವಾದ– ಟೀಕೆಯಲ್ಲಿ ವಿರಕ್ತನನ್ನು ಕುರಿತು ಮಾಡುವ ವಾಣಿಜ್ಯೋಪದೇಶಕ್ಕೆ ನೈರಾಕಾಂಕ್ಷ್ಯವನ್ನು ಹೇಳಿದ್ದಾರೆ. ಹೀಗೆ ಹೇಳಿರುವುದು ಆ ವಾಕ್ಯದಲ್ಲಿ ಅನ್ವಯಬೋಧಕ್ಕೆ ಉಪಯುಕ್ತ-

ವಾದ ಸಾಕಾಂಕ್ಷತ್ವ ಇದ್ದರೂ ಕೂಡ ಶ್ರೋತೃವಿಗೆ ಅಪೇಕ್ಷೆಯಿಲ್ಲದಿರುವುದರಿಂದ ಮಾತ್ರ . ಹೊರತು ಪದಗಳಲ್ಲಿ ನೈರಾಕಾಂಕ್ಷ್ಯ ಇದೆ ಎಂಬ ಅಭಿಪ್ರಾಯದಿಂದಲ್ಲ. ಆದ್ದರಿಂದ ಹಿಂದೆ ಗ್ರಂಥಕಾರರು ಹೇಳಿದ್ದಕ್ಕೆ ವಿರೋಧ ಬರುವುದಿಲ್ಲ. ವಾಣಿಜ್ಯೋಪದೇಶ ಇರುವ ವಾಕ್ಯಗಳಲ್ಲಿ ಇರುವ ನೈರಾ-ಕಾಂಕ್ಷ್ಯ ಎಂದರೆ ಅನಪೇಕ್ಷಿತರೂಪವಾದದ್ದು ಹೊರತು ಆಕಾಂಕ್ಷಾಭಾವರೂಪವಾದದ್ದಲ್ಲ. ಆದ್ದ-ರಿಂದ ಟೀಕೆಯಲ್ಲಿ ಅನ್ವಯಬೋಧಕ್ಕೆ ಉಪಯೋಗಿಯಾದ ಆಕಾಂಕ್ಷೆ ಇಲ್ಲದಿರುವ ಸ್ಥಳವನ್ನು ಉದಾಹರಿಸುವಾಗ 'ಗೌರಶ್ವಃ ಪುರುಷೋ ಹಸ್ತೀ' ಇತ್ಯಾದಿವಾಕ್ಯವನ್ನೇ ಉದಾಹರಿಸಿದ್ದಾರೆ ಹೊರತು ವಿರಕ್ತನಿಗೆ ವಾಣಿಜ್ಯೋಪದೇಶವಾಕ್ಯವನ್ನು ಉದಾಹರಿಸಿರುವುದಿಲ್ಲ.

## ಗೋಷ್ಠಿಯ ವಿಚಾರಗಳು

ಆಕ್ಷೇಪ – ಜನಿತಫಲದಲ್ಲಿ ಆಕಾಂಕ್ಷೆಯ ಲಕ್ಷಣ ಬರುತ್ತದೆಂದು ತತ್ವವಾದಿಗಳಿಗೂ ಕೂಡ ಹೇಳಲು ಸಾಧ್ಯವಿಲ್ಲ. ಏಕೆಂದರೆ ಒಮ್ಮೆ ಶಾಬ್ದಬೋಧ ಬಂದ ಮೇಲೆ ಪ್ರಾಗಭಾವ ಪ್ರಯೋಜಕವಾದ ಧರ್ಮವು ನಾಶವಾಗುತ್ತದಲ್ಲವೇ?

ಸಮಾಧಾನ – ನಾವು ಧರ್ಮವು ಪ್ರಾಗಭಾವಪ್ರಯೋಜಕವಾಗಬೇಕೆಂದು ಹೇಳೇ ಇಲ್ಲ. ಹೊರತಾಗಿ ಪ್ರಾಗಭಾವಪ್ರಯೋಜಕವಾದ ವಿರಹಪ್ರತಿಯೋಗಿಜ್ಞಾನಕ್ಕೆ ವಿಷಯೀಭೂತ-ವಾಗಿರುವ ಧರ್ಮವು ಇರಬೇಕೆಂದು ಹೇಳುತ್ತಿದ್ದೇವೆ. ಈ ಧರ್ಮದ ಉಪಸ್ಥಿತಿಯು ಅನ್ವಯಾನುಭವವಾದ ಅನಂತರವೂ ಕೂಡ ಇರುತ್ತದೆ. ಕ್ರಿಯಾಪದ, ಕಾರಕಪದಗಳಿಗೆ ಅನ್ವಯಾನುಭವ ಹುಟ್ಟಿಸುವ ಸಾಮರ್ಥ್ಯ ಒಮ್ಮೆ ಹುಟ್ಟಿಸಿದ ಮೇಲೂ ಇರುತ್ತದೆ. ಅದು ನಾಶವಾಗುವುದಿಲ್ಲ.

ಆಕ್ಷೇಪ – ಒಮ್ಮೆ ಅನ್ವಯಬೋಧವು ಬಂದ ಮೇಲೆ ಪುನಃಅದರ ಅಪೇಕ್ಷೆ ಇಲ್ಲದ ಕಾರಣ ಶಬ್ದದಲ್ಲಿ ಸಾಮರ್ಥ್ಯ ಹೇಗೆ ಇರುತ್ತದೆ?

ಸಮಾಧಾನ – ಅಗ್ನಿಯಲ್ಲಿ ಸುಡುವ ಸಾಮರ್ಥ್ಯ ನಿರಂತರವಾಗಿರುತ್ತದೆ. ಸುಡಲ್ಪಡುವ ವಸ್ತುಗಳನ್ನು ಅಗ್ನಿಯಲ್ಲಿ ಹಾಕಲಿಲ್ಲ ಎಂದ ಮಾತ್ರಕ್ಕೆ ಅಗ್ನಿಯಲ್ಲಿ ಸಾಮರ್ಥ್ಯವೇ ಇಲ್ಲ ಎನ್ನಬಾರದು. ಅದರಂತೆ ಪ್ರಕೃತದಲ್ಲಿಯೂ ಕ್ರಿಯಾಪದ, ಕಾರಕಪದಗಳಿಗೆ ಅನ್ವಯಾನುಭವ

ಹುಟ್ಟಿಸುವ ಸಾಮರ್ಥ್ಯ ಅನ್ವಯಬೋಧ ಹುಟ್ಟಿದ ಅನಂತರವೂ ಇದ್ದೇ ಇರುತ್ತದೆ. ಆ ಸಾಮರ್ಥ್ಯವು ಎಂದೂ ಕೂಡ ನಾಶವಾಗುವುದಿಲ್ಲ.

ತರ್ಕತಾಂಡವದ್ವಿತೀಯಪರಿಚ್ಛೇದದಲ್ಲಿ
ಆಕಾಂಕ್ಷಾಪ್ರಕರಣದ ಕನ್ನಡಾನುವಾದವು ಮುಗಿಯಿತು

* * *

## ನೆನೆಪಿಡಿ

* ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಂ ಎಂಬುದು ವಾಕ್ಯದ ಲಕ್ಷಣ.

* 'ನಿರ್ದೋಷಃ ಶಬ್ದಃ ಆಗಮಃ' ಅಥವಾ 'ಅದುಷ್ಟವಾಕ್ಯಂ' ಎಂಬುದು ಆಗಮಪ್ರಮಾಣದ ಲಕ್ಷಣ.

* 'ಗುಡೋ ಮಧುರಃ' ಎಂಬಲ್ಲಿ ವಾಕ್ಯದ ಲಕ್ಷಣವಿದೆ. ಆದರೆ ಆಗಮದ ಲಕ್ಷಣವಿಲ್ಲ. ಆದ್ದರಿಂದ ಜ್ಞಾತಜ್ಞಾಪಕವಾದ ವಾಕ್ಯ-ಗಳನ್ನು ನಾವು ಪ್ರಮಾಣವೆಂದು ಒಪ್ಪಿಲ್ಲ.

* ಪ್ರಮಾಣಲಕ್ಷಣಗ್ರಂಥದಲ್ಲಿ 'ನಿರ್ದೋಷಃ ಶಬ್ದಃ ಆಗಮಃ' ಎಂದಿದ್ದಾರೆ. ಬ್ರಹ್ಮತರ್ಕದಲ್ಲಿ 'ಅದುಷ್ಟವಾಕ್ಯಂ ಆಗಮಃ' ಎಂದಿ-ದ್ದಾರೆ. ಇವೆರಡರಲ್ಲಿ ಮೊದಲನೆಯದ್ದನ್ನು ನೆನೆಪಿಟ್ಟುಕೊಂಡರೆ ಸಾಕು. ಎರಡನೆಯದ್ದು ಬುದ್ಧಿಯ ಸೌಕರ್ಯಕ್ಕೋಸ್ಕರ ಮಾತ್ರ.

* 'ಗುಡೋ ಮಧುರಃ' ಎಂಬ ವಾಕ್ಯವು ಯಥಾರ್ಥವಾದ ವಾಕ್ಯವಾಗಿದೆ. ಆದರೆ ಇದು ಆಗಮರೂಪವಾದ ಪ್ರಮಾಣ-ವಾಗುವುದಿಲ್ಲ.

* 'ರಾಜಪುರುಷಃ' ಇತ್ಯಾದಿ ಸಮಾಸಸ್ಥಳದಲ್ಲಿ ಪದತ್ವ-ವ್ಯವಹಾರವನ್ನು ಮಾಡಬಹುದೆಂದು ನಮ್ಮಲ್ಲೇ ಕೆಲವರು ಅಭಿಪ್ರಾಯ ಪಡುತ್ತಾರೆ. ಇನ್ನು ಕೆಲವರು ಪದತ್ವವ್ಯವಹಾರ

ಮಾಡಬಾರದು ಎನ್ನುತ್ತಾರೆ. ವಿವಕ್ಷಾಭೇದದಿಂದ ಈ ಎರಡು ಪಕ್ಷಗಳಲ್ಲಿ ವಿರೋಧವಿರುವುದಿಲ್ಲ.

* ವಾಕ್ಯದಲ್ಲಿರುವ ಪದಗಳು ತಮ್ಮಲ್ಲಿಯೇ ಪರಸ್ಪರವಾಗಿ ಆಕಾಂಕ್ಷೆಯನ್ನು ಹೊಂದಿರಬೇಕು. ಬೇರೆ ಪದದ ಆಕಾಂಕ್ಷೆಯನ್ನು ಹೊಂದಿರಬಾರದು. ಗಂಡಹೆಂಡಂದಿರು ಪರಸ್ಪರವಾಗಿ ಪರ-ಸ್ಪರವಾಗಿ ತಮ್ಮಲ್ಲಿಯೇ ಆಕಾಂಕ್ಷೆಯನ್ನು ಹೊಂದಿರಬೇಕು. ಬೇರೆಯವರಲ್ಲಿ ಆಕಾಂಕ್ಷೆಯನ್ನು ಹೊಂದಿರಬಾರದು.

* ಅವಿನಾಭಾವವನ್ನು ಆಕಾಂಕ್ಷೆ ಎಂದು ಹೇಳಿದರೆ 'ಘಟ-ಮಾನಯ' ಎಂಬಲ್ಲಿ ಅವ್ಯಾಪ್ತಿ ವಾಕ್ಯಾಭಾಸದಲ್ಲಿ ಅತಿವ್ಯಾಪ್ತಿ.

* ಮಣಿಕಾರನು 'ನೀಲಂ ಸರೋಜಂ' ಎಂಬಲ್ಲಿ ಅವ್ಯಾಪ್ತಿದೋಷವನ್ನು ಹೇಳಿದ್ದಾನೆ. ಆದರೆ ಏತನ್ನೈಲ್ಯಕ್ಕೂ ಏತತ್ಸರೋಜಕ್ಕೂ ಅವಿನಾಭಾವವು ಇದ್ದೇ ಇರುತ್ತದೆ. ಆದ್ದರಿಂದ ಗ್ರಂಥಕಾರರು 'ಘಟಮಾನಯ' ಎಂಬಲ್ಲಿ ಅವ್ಯಾಪ್ತಿ ದೋಷವನ್ನು ಹೇಳಿದ್ದಾರೆ. ಈ ಸೂಕ್ಷ್ಮವನ್ನು ಗಮನಿಸಬೇಕು.

* ಶ್ರೋತರಿ ತದುಚ್ಚಾರಣಜನ್ಯಸಂಸರ್ಗಾವಗಮಪ್ರಾಗ-ಭಾವಃ ಆಕಾಂಕ್ಷಾ' ಎಂಬುದು ಉದಯನನು ಹೇಳಿದ ಆಕಾಂಕ್ಷೆಯ ಲಕ್ಷಣ. ತಾತ್ಪರ್ಯಭ್ರಮಸ್ಥಳದಲ್ಲಿ ಇದಕ್ಕೆ ಅತಿವ್ಯಾಪ್ತಿದೋಷ-ವಿದೆ.

* 'ತಾತ್ಪರ್ಯವಿಷಯೀಭೂತಸಂಸರ್ಗಾವಗಮಪ್ರಾಗಭಾವಃ ಆಕಾಂಕ್ಷಾ' ಎಂಬುದು ಉದಯನಗ್ರಂಥದ ವ್ಯಾಖ್ಯಾನಕಾರರು ಹೇಳಿದ ಲಕ್ಷಣ. ಇದಕ್ಕೆ ಅಸಂಭವದೋಷ ಬರುತ್ತದೆ.

* ಮಣಿಕಾರ ಹೇಳಿದ ಆಕಾಂಕ್ಷೆಯ ಲಕ್ಷಣಕ್ಕೆ ಅವ್ಯಾಪ್ತಿ ಹಾಗೂ ಅಸಂಭವ ದೋಷಗಳಿವೆ.

* ಪ್ರಾಗಭಾವಘಟಿತವಾದ ಆಕಾಂಕ್ಷೆಯ ಲಕ್ಷಣದಲ್ಲಿ ಅಸಾಧಾರಣ್ಯವಿಲ್ಲ.

* ಪ್ರಾಗಭಾವವು ಇತರಪದವಿರಹಪ್ರಯುಕ್ತವಾಗಿ ಕಾರಣ-ವೆಂಬ ತಾರ್ಕಿಕರ ಚಿಂತನೆ ಹಾಗೂ ಪ್ರಾಗಭಾವಜ್ಞಾನವು ಅಸಾಧಾರಣಕಾರಣವೆಂಬ ತಾರ್ಕಿಕರ ಚಿಂತನೆ ಅತ್ಯಂತ ಹಾಸ್ಯಾಸ್ಪದ.

* ಮುಖ್ಯವೃತ್ತಿಯುಳ್ಳ ವಾಕ್ಯದಿಂದ ಶಾಬ್ದಬೋಧ ಬರುವಂತೆ ಅಮುಖ್ಯವೃತ್ತಿಯುಳ್ಳ ಗೌಣಪ್ರಯೋಗ ಹಾಗೂ ಲಾಕ್ಷಣಿಕ-ಪ್ರಯೋಗಗಳಿಂದಲೂಕೂಡ ಶಾಬ್ದಬೋಧ ಬರುತ್ತದೆ.

* ಮುಖ್ಯವೃತ್ತಿಯ ಹಾಗೂ ಅಮುಖ್ಯವೃತ್ತಿಯ ಪ್ರಭೇದ-ಗಳಿರುವ ಎಲ್ಲಾ ವಾಕ್ಯಗಳಲ್ಲಿಯೂ ಕೂಡ ಆಕಾಂಕ್ಷೆಯ ಲಕ್ಷಣ ಸಮನ್ವಯವಾಗಲೇ ಬೇಕು. ಆದರೆ ತಾರ್ಕಿಕರ ಪ್ರಕಾರ ಇದು ಸಾಧ್ಯವಾಗುತ್ತಿಲ್ಲ.

* ಕಾರ್ಯೋತ್ಪತ್ತಿಗೆ ಪ್ರಾಗಭಾವ ಅಸಾಧಾರಣಕಾರಣ-ವೆಂದು ಜಗತ್ತಿನಲ್ಲಿ ಯಾರೂ ಹೇಳುವುದಿಲ್ಲ.

* ಪ್ರಾಗಭಾವಘಟಿತವಾದ ಆಕಾಂಕ್ಷೆಯು ಶಾಬ್ದಬೋಧಕ್ಕೆ ಸಾಧಾರಣಕಾರಣವಾಗುತ್ತದೆ ಹೊರತು ಅಸಾಧಾರಣಕಾರಣ-ವಾಗುವುದಿಲ್ಲ.

* ಅನಾದಿಕಾಲದಿಂದ ಘಟಪ್ರಾಗಭಾವವಿದ್ದರೂ ಕೂಡ ಸಹಕಾರಿಗಳು ಸೇರಿದಾಗಷ್ಟೇ ಘಟವು ಉತ್ಪನ್ನವಾಗುತ್ತದೆ.

* ಘಟ ಹುಟ್ಟಿದ ಮೇಲೆ ಪುನಃ ಅದೇ ಘಟ ಹುಟ್ಟಲಿ' ಎಂಬ ಆಕ್ಷೇಪದ ಪರಿಹಾರಕ್ಕಾಗಿ ಪ್ರಾಗಭಾವವನ್ನು ಕಾರಣವೆಂದು ಒಪ್ಪಲೇ ಬೇಕು. ಆದರೆ ಅಸಾಧಾರಣಕಾರಣವೆಂದು ಒಪ್ಪ-ಬಾರದು.

* ಕಾರ್ಯ ಹುಟ್ಟುವ ಮೊದಲು ಅದರ ಪ್ರಾಗಭಾವವಿದ್ದರೆ ಸಾಕು. ಅದರ ಜ್ಞಾನ ಅನಾವಶ್ಯಕ. ತಾರ್ಕಿಕರು ಅದರ ಜ್ಞಾನವು ಕಾರಣವೆನ್ನುತ್ತಿರುವುದು ಹಾಸ್ಯಾಸ್ಪದ.

* ಆಕಾಂಕ್ಷೆಗೆ ಅಸಾಧಾರಣ್ಯವನ್ನು ಸಮರ್ಥನೆ ಮಾಡುವು-ದಕ್ಕಾಗಿ ಪ್ರಾಗಭಾವದಲ್ಲಿ ಅಭಾವತ್ವವನ್ನು ಕಾರಣತಾವ-ಚ್ಛೇದಕವೆಂದು ಹೇಳುತ್ತಿದ್ದಾರೆ. ಮತ್ತು ಘಟಕ್ಕೆ ಪ್ರಾಗಭಾವವು ಕಾರಣವೆಂದಾಗ ಪ್ರಾಗಭಾವತ್ವವೇ ಕಾರಣತಾವಚ್ಛೇದಕವೆಂದು ಹೇಳುತ್ತಿದ್ದಾರೆ.

* ಶಾಬ್ದಬೋಧದಶೆಯಲ್ಲಿ ಆಕಾಂಕ್ಷೆ ಇಲ್ಲವೆಂದು ತಿಳಿಸುವುದಕ್ಕಾಗಿ ಪ್ರಾಗಭಾವ ಹಾಗೂ ಅತ್ಯಂತಾಭಾವಗಳನ್ನು ಕಾರಣವೆಂದಿದ್ದಾರೆ.

* ಶಾಬ್ದಬೋಧಧ್ವಂಸದಶೆಯಲ್ಲಿ ಅತಿವ್ಯಾಪ್ತಿ ಬರಬಾರದೆಂದು ತಿಳಿಸಲು ಇತರಪದವಿರಹಪ್ರಯುಕ್ತ ಎಂಬ ವಿಶೇಷಣವನ್ನು ನೀಡಿದ್ದಾರೆ.

* ಪ್ರಾಗಭಾವವು ಇತರಪದವಿರಹಪ್ರಯುಕ್ತವೆಂದು ಹೇಳಲು ಸಾಧ್ಯ. ಆದರೆ ಅತ್ಯಂತಾಭಾವವು ಇತರಪದವಿರಹಪ್ರಯುಕ್ತವಾಗುತ್ತದೆ ಎಂದು ಹೇಳಲು ಸಾಧ್ಯವೇ ಇಲ್ಲ.

* 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿ ಬಂದ ಮೇಲೆ ಪುನಃ ಅದೇ ಅನುಮಿತಿ ಹುಟ್ಟುವುದಿಲ್ಲ. ಅದರಂತೆ 'ಘಟಮಾನಯ' ಎಂಬ ವಾಕ್ಯದಿಂದ ಶಾಬ್ದಬೋಧ ಬಂದ ಮೇಲೆ ಅದೇ ಶಾಬ್ದಬೋಧ ಪುನಃ ಹುಟ್ಟುವುದಿಲ್ಲ.

* ಯಾವುದೇ ಕಾರ್ಯ ಹುಟ್ಟಬೇಕಾದರೆ ಪ್ರತಿಬಂಧಕ ಇರಬಾರದು ಆದರೆ ಪ್ರತಿಬಂಧಕಾಭಾವದ ಜ್ಞಾನ ಅನಾವಶ್ಯಕ.

* ಆಕಾಂಕ್ಷೆಯನ್ನು ಪ್ರತಿಬಂಧಕಾಭಾವವೆಂದು ತಾರ್ಕಿಕರು ಹೇಳಿ ಆಕಾಂಕ್ಷೆಯ ಜ್ಞಾನ ಶಾಬ್ದಬೋಧಕ್ಕೆ ಕಾರಣವೆಂದರೆ ಪ್ರತಿಬಂಧಕಾಭಾವದ ಜ್ಞಾನವು ಕಾರಣವೆಂದು ಹೇಳಿದಂತಾಗುತ್ತದೆ. ಇದು ತಪ್ಪು.

* ಪ್ರಾಗಭಾವವನ್ನು ಶಾಬ್ದಬೋಧಕ್ಕೆ ಕಾರಣವೆಂದು ಹೇಳಿದಾಗ ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳಿದಂತಾಗುವುದಿಲ್ಲ. ಆದರೆ ಅತ್ಯಂತಾಭಾವವನ್ನು ಕಾರಣವೆಂದಾಗ ಪ್ರತಿಬಂಧಕಾಭಾವವನ್ನು ಕಾರಣವೆಂದಂತಾಗುತ್ತದೆ.

* 'ಘಟಮಾನಯ' ಎಂಬಲ್ಲಿ ಎರಡು ಪದಗಳನ್ನು ಕೇಳಿದ ಕೂಡಲೇ ಶಾಬ್ದಬೋಧ ಬರುವುದಿಲ್ಲ. ಮಧ್ಯದಲ್ಲಿ ಶಕ್ತಿಸ್ಮರಣೆ ಹಾಗೂ ಪದಾರ್ಥಸ್ಮರಣೆಗಳು ಇರುತ್ತದೆ.

* ಆಕಾಂಕ್ಷೆ ಎಂದರೆ ಜಿಜ್ಞಾಸಾ. ಇದು ಚೇತನನ ಧರ್ಮ. ಜಿಜ್ಞಾಸೆಗೆ ವಿಷಯವಾದ ಪದಾರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಪದಗಳಲ್ಲಿ ಆಕಾಂಕ್ಷೆ ಬರುತ್ತದೆ.

* ಒಂದೇ ವಾಕ್ಯದಲ್ಲಿ ಅನೇಕ ಅನ್ವಯಗಳಿರುತ್ತವೆ. ಅದಕ್ಕನುಗುಣವಾಗಿ ಆಕಾಂಕ್ಷೆಯು ಕೂಡ ಅನೇಕವಾಗಿರುತ್ತದೆ.

* ತಾರ್ಕಿಕರು ಹೇಳುವಂತೆ ಆಕಾಂಕ್ಷೆಯು ಪ್ರಾಗಭಾವರೂಪವಲ್ಲ; ಶಬ್ದದಲ್ಲಿರುವ ಧರ್ಮ.

* ಕ್ರಿಯಾಪದತ್ವ, ಕಾರಕಪದತ್ವ ಮೊದಲಾದ ಧರ್ಮಗಳು ವಕ್ತೃವಿವಕ್ಷಾಧೀನವಾಗಿ ಎಲ್ಲೆಲ್ಲಿ ಇರುತ್ತದೋ ಅಲ್ಲಿ ಎಲ್ಲ ಸ್ಥಳಗಳಲ್ಲೂ ಆಕಾಂಕ್ಷೆ ಇರುತ್ತದೆ.

* ಶಾಬ್ದಬೋಧಕ್ಕೆ ಆಕಾಂಕ್ಷೆ ಬೇಕೇ ಬೇಕು. ಆಕಾಂಕ್ಷೆ ಇದ್ದ ಮಾತ್ರಕ್ಕೆ ಶಾಬ್ದಬೋಧ ಬರಲೇಬೇಕೆಂಬ ನಿಯಮವಿಲ್ಲ.

* ಘಟ ಹುಟ್ಟಬೇಕೆಂದರೆ ದಂಡ-ಚಕ್ರಾದಿಸಾಮಗ್ರಿಗಳು ಬೇಕೇ ಬೇಕು. ದಂಡಚಕ್ರಾದಿಗಳಿದ್ದ ಮಾತ್ರಕ್ಕೆ ಘಟ ಹುಟ್ಟಲೇ-ಬೇಕೆಂಬ ನಿಯಮವಿಲ್ಲ. ಸಕಲ ಸಾಮಗ್ರಿಗಳು ಇದ್ದಾಗ ಮಾತ್ರ ಘಟ ಹುಟ್ಟುವಂತೆ ಸಕಲ ಸಾಮಗ್ರಿಗಳೂ ಇದ್ದಾಗ ಮಾತ್ರ ಶಾಬ್ದಬೋಧ ಹುಟ್ಟುತ್ತದೆ. ಆಕಾಂಕ್ಷೆಯು ಶಾಬ್ದಬೋಧ ಹುಟ್ಟಲು ಏಕದೇಶಸಾಮಗ್ರಿ ಮಾತ್ರ. ಆದ್ದರಿಂದ ಆಕಾಂಕ್ಷೆ ಇದ್ದಮಾತ್ರಕ್ಕೆ ಶಾಬ್ದಬೋಧ ಹುಟ್ಟುವುದಿಲ್ಲ.

* ಒಮ್ಮೆ ಶಾಬ್ದಬೋಧ ಬಂದ ಮೇಲೆ ಪುನಃ ಅದೇ ಶಬ್ದದಿಂದ ಮತ್ತೊಮ್ಮೆ ಶಾಬ್ದಬೋಧ ಬರಬಾರದೆಂಬ ನಿಯಮವಿಲ್ಲ. ನಮಗೆ ಇಷ್ಟವಾದ ಶಬ್ದಗಳನ್ನು ಪುನಃ ಪುನಃ ಕೇಳಿ ಶಾಬ್ದಬೋಧವನ್ನು ತಂದುಕೊಳ್ಳುತ್ತಲೇ ಇರುತ್ತೇವೆ.

* ಶಾಬ್ದಬೋಧಕ್ಕೆ ಆಕಾಂಕ್ಷಾ ಎಂಬುದು ಕಾರಣವಲ್ಲ; ಹೊರತು ಆಕಾಂಕ್ಷಾವನ್ನು ಕಾರಣತಾ ಎಂದು ಕರೆಯಬೇಕು. ಆಕಾಂಕ್ಷಾಜ್ಞಾನವನ್ನು ಕಾರಣ ಎನ್ನಬೇಕು.

* ಕಾರ್ಯ ಹುಟ್ಟಬೇಕೆಂದರೆ ಸ್ವರೂಪಯೋಗ್ಯತೆ ಇರ-ಬೇಕು. ಶಾಬ್ದಬೋಧವಿಷಯದಲ್ಲಿ ಹಾಗಲ್ಲ. ಸ್ವರೂಪ-

ಯೋಗ್ಯತೆ ಎನಿಸಿದ ಆಕಾಂಕ್ಷೆಯ ಜೊತೆ ಆಕಾಂಕ್ಷಾಜ್ಞಾನವೂ ಕೂಡ ಇರಬೇಕು.

* ಸ್ವರೂಪಯೋಗ್ಯತೆ ಎಂದರೆ 'ಸಹಕಾರಿವಿರಹಪ್ರಯುಕ್ತ-ಕಾರ್ಯಾಭಾವಃ' ಎಂದರ್ಥ. ಇಲ್ಲಿ ಹೇಳುತ್ತಿರುವ ಸ್ವರೂಪ-ಯೋಗ್ಯತೆಯೇ ಬೇರೆ. ಶಾಬ್ದಬೋಧಕ್ಕೆ ಕಾರಣವಾದ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿಗಳಲ್ಲಿ ಒಂದಾದ ಯೋಗ್ಯತೆ-ಯೇ ಬೇರೆ ಎಂಬುದನ್ನು ಗಮನಿಸಬೇಕು.

* ನಾವು ಹೇಳುವ ಆಕಾಂಕ್ಷೆಯು ಸ್ವರೂಪಯೋಗ್ಯತಾ-ರೂಪವಾದದ್ದು.

* ಈ ಸ್ವರೂಪಯೋಗ್ಯತೆಯ ಕಾರಣವು ಭಿನ್ನಭಿನ್ನವಾದಂತೆ ಸ್ವತಃ ತಾನೂ ಭಿನ್ನಭಿನ್ನವಾಗುತ್ತದೆ. ಉದಾ ದಂಡದಲ್ಲಿ ದಾರ್ಢ್ಯ, ಅಗ್ನಿಯಲ್ಲಿ ಉಷ್ಣಸ್ಪರ್ಶವತ್ತ್ವ, ಅನುಮಾನದಲ್ಲಿ ವ್ಯಾಪ್ತಿ, ಪಕ್ಷಧರ್ಮತಾ ಹೀಗೆ ಸ್ವರೂಪಯೋಗ್ಯತೆಯು ಒಂದೊಂದು ಕಡೆ ಒಂದೊಂದು ವಿಧವಾಗಿದೆ. ಪ್ರಕೃತ ಶಬ್ದದಲ್ಲಿ ಸ್ವರೂಪಯೋಗ್ಯತೆಯು ಆಕಾಂಕ್ಷಾರೂಪವಾಗಿದೆ.

* ಆಕಾಂಕ್ಷೆಯು ಶಾಬ್ದಬೋಧಕ್ಕೆ ಕಾರಣವಲ್ಲ. ಆಕಾಂಕ್ಷೆಯ ಜ್ಞಾನವೇ ಶಾಬ್ದಬೋಧಕ್ಕೆ ಕಾರಣ ಎಂಬುದನ್ನು ಜಯದೇವನು ಕೂಡ ಒಪ್ಪಿದ್ದಾನೆ.

* ಪದಗಳಿಗೆ ವ್ಯುತ್ಪತ್ತಿ ಇದ್ದರೆ ಸಾಲದು, ವಾಕ್ಯದ ವ್ಯುತ್ಪತ್ತಿ ಇರಬೇಕು. ಅಷ್ಟೇ ಸಾಲದು ಇದು ಕ್ರಿಯಾಪದ ಇದು ಕಾರಕಪದ ಎಂಬ ಆಕಾಂಕ್ಷಾಜ್ಞಾನವು ಕೂಡ ಇರಬೇಕು. ಆಗ ಶಾಬ್ದ-ಬೋಧವು ಬರುತ್ತದೆ.

* ಅನೇಕಾರ್ಥಕವಾದ ಹಾಗೂ ಅನೇಕಾನ್ವಯವುಳ್ಳ ವಾಕ್ಯ-ದಲ್ಲಿ ಮೊದಲು ಸಮ್ಮುಗ್ಧವಾದ ಶಾಬ್ದಬೋಧ, ಅನಂತರ ತಾತ್ಪರ್ಯನಿಶ್ಚಯ; ಅನಂತರ ನಿಶ್ಚಯಾತ್ಮಕವಾದ ಶಾಬ್ದಬೋಧ.

* 'ಅಯಮೇತಿ ಪುತ್ರೋ ರಾಜ್ಞಃ ಪುರುಷೋ ಅಪಸಾ-ರ್ಯತಾಮ್' ಎಂಬಲ್ಲಿ ರಾಜಪದಕ್ಕೆ ಪುತ್ರಪದದ ಜೊತೆ ಆಕಾಂಕ್ಷೆ ಇರುವಂತೆ ಪುರುಷಪದದಲ್ಲಿಯೂ ಆಕಾಂಕ್ಷೆ ಇದೆ ಎಂದು ಹೇಳಿದರೆ ತಪ್ಪಿಲ್ಲ.

* 'ಅಹೋ ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಶ್ಚರತಿ' ಎಂಬಲ್ಲಿ ನದೀಪದಕ್ಕೆ ಜಲಪದದ ಜೊತೆ ಆಕಾಂಕ್ಷೆ ಇರುವಂತೆ ಕಚ್ಛಪದದ ಜೊತೆಗೂ ಆಕಾಂಕ್ಷೆ ಹೇಳಿದರೆ ತಪ್ಪಿಲ್ಲ.

* ಅನೇಕಾನ್ವಯವುಳ್ಳ ವಾಕ್ಯದಲ್ಲಿ ಪದಗಳನ್ನು ಆವೃತ್ತಿ-ಮಾಡಿಕೊಂಡು ಅನ್ವಯವನ್ನು ತಿಳಿಯಬೇಕು.

* 'ಶ್ವೇತೋ ಧಾವತಿ' ಎಂಬ ವಾಕ್ಯದಿಂದ 'ಶ್ವಾ ಇತೋ ಧಾವತಿ' ಎಂದೂ; ಹಾಗೂ 'ಶ್ವೇತೋ ಧಾವತಿ' ಎಂದೂ ಎರಡು ಬಗೆಯಲ್ಲಿ ಅನ್ವಯಬೋಧ ಬರುವುದು ತಪ್ಪಲ್ಲ.

* ತಾರ್ಕಿಕರ ಆಕಾಂಕ್ಷಾಲಕ್ಷಣದ ಪರಿಷ್ಕಾರ – ರೂಪಗ್ರಹ-ವಿರಹಪ್ರಯುಕ್ತಶಾಬ್ದಾನುಭವಪ್ರಾಗಭಾವಃ.

* ನಮ್ಮ ಸಿದ್ಧಾಂತದ ಆಕಾಂಕ್ಷಾಲಕ್ಷಣದ ಪರಿಷ್ಕಾರ - ಪ್ರಾಗ-ಭಾವಪ್ರಯೋಜಕವಿರಹಪ್ರತಿಯೋಗಿಗ್ರಹವಿಷಯೀಭೂತಂ ರೂಪಂ'.

* ತಾರ್ಕಿಕರ ಆಕಾಂಕ್ಷಾಲಕ್ಷಣಕ್ಕೆ ಒಟ್ಟು ಮೂರು ದೋಷ (1) ಆಕಾಂಕ್ಷೆಯು ಶ್ರೋತೃವಿನಲ್ಲಿ ಬರುತ್ತದೆ ಪದದಲ್ಲಿ ಬರು-ವುದಿಲ್ಲ. (2) ಪ್ರಾಗಭಾವಜ್ಞಾನವು ಶಾಬ್ದಬೋಧಕ್ಕೆ ಜನಕ-ವೆಂಬುದು ಅನುಭವವಿರುದ್ಧ. (3) ಜನಿತಫಲವಾಕ್ಯದಲ್ಲಿ-ರುವ ಪದಗಳಲ್ಲಿ ಆಕಾಂಕ್ಷೆಯ ಲಕ್ಷಣ ಬರುವುದಿಲ್ಲ.

* 'ಜಿಜ್ಞಾಸಾವಿಷಯಪ್ರತಿಪಾದಕತ್ವ' ಇತ್ಯಾದಿಯಾಗಿ ಪ್ರಮಾಣಪದ್ಧತಿಯಲ್ಲಿ ಹೇಳಿದ ಆಕಾಂಕ್ಷೆಯ ಲಕ್ಷಣ ಎಲ್ಲಿರು-ತ್ತದೋ ಅಲ್ಲಿಯೇ 'ಪ್ರಾಗಭಾವಪ್ರಯೋಜಕವಿರಹಪ್ರತಿ-ಯೋಗಿಗ್ರಹವಿಷಯೀಭೂತರೂಪವತ್ವಂ' ಎಂಬ ಗ್ರಂಥಕಾರರು ಹೇಳಿದ ಲಕ್ಷಣವೂ ಇದ್ದೇ ಇರುತ್ತದೆ.

* * * * * * *

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ

# ಆಸತ್ತಿ ಪ್ರಕರಣ

## ಸಾರಾಮೃತ

ಪೀಠಿಕೆ -ಶಾಬ್ದಬೋಧಜ್ಞಾನಕ್ಕೆ ಕಾರಣವಾದವುಗಳಲ್ಲಿ ಆಕಾಂಕ್ಷೆಯ ಅನಂತರ ಪ್ರಸಕ್ತವಾಗುವುದು ಯೋಗ್ಯತೆ ಹಾಗೂ ಸನ್ನಿಧಿಗಳು. ಇವುಗಳಲ್ಲಿ ಮೊದಲು ಸನ್ನಿಧಿಯ ವಿಚಾರವನ್ನು ಈಪ್ರಕರಣದಲ್ಲಿ ಮಾಡಲಾಗಿದೆ. ಸನ್ನಿಧಿ ಹಾಗೂ ಆಸತ್ತಿ ಎರಡೂ ಸಹ ಪರ್ಯಾಯಪದಗಳು. ಶಬ್ದಪ್ರಯೋಗ ಮಾಡಿದಾಗ ಶ್ರೋತೃವಿಗೆ ಶಾಬ್ದ-ಬೋಧವು ಬರಬೇಕಾದರೆ ಆ ವಾಕ್ಯದಲ್ಲಿ ಇರುವ ಶಬ್ದಗಳ ಮಧ್ಯದಲ್ಲಿ ಕಾಲವ್ಯವಧಾನ ಇರಬಾರದು ಹಾಗೂ ದೇಶವ್ಯವಧಾನ ಇರಬಾರದು, ಯಾವುದೋ ಕಾಲದಲ್ಲಿ ಒಂದು ಶಬ್ದವನ್ನು ಉಚ್ಚಾರಣೆ ಮಾಡಿ ಮತ್ತೆ ಕೆಲವು ಕಾಲ ಬಿಟ್ಟು ಮತ್ತೊಂದು ಶಬ್ದವನ್ನು ಉಚ್ಚಾರಣೆ ಮಾಡಿದರೆ ಕೇಳುಗನಿಗೆ ಅರ್ಥವಾಗುವುದಿಲ್ಲ. ಆದ್ದರಿಂದ ಕೇಳುವ ವ್ಯಕ್ತಿಗೆ ಅರ್ಥವಾಗುವಂತೆ ನಾವು ವಾಕ್ಯಪ್ರಯೋಗ ಮಾಡಬೇಕು. ಇಂತಹ ವಾಕ್ಯದಲ್ಲಿ ಇರುವ ಶಬ್ದಗಳ ಸನ್ನಿಧಾನದ ಲಕ್ಷಣದ ಬಗ್ಗೆ ಈ ಪ್ರಕರಣದಲ್ಲಿ ವಿಚಾರ ಮಾಡಲಾಗಿದೆ.

ಮಣಿಕಾರ ತನ್ನ ಗ್ರಂಥದಲ್ಲಿ ಆಸತ್ತಿಯನ್ನು ವಿವರಿಸುವಾಗ ಅದರ ಲಕ್ಷಣವನ್ನು ಹೀಗೆ ಹೇಳುತ್ತಾನೆ - 'ಆಸತ್ತಿಃ ಅವ್ಯವಧಾನೇನ ಅನ್ವಯಪ್ರತಿಯೋಗ್ಯುಪಸ್ಥಿತಿಃ ಸಾ ಚ ಸ್ಮೃತಿಃ ನಾನುಭವಃ' ಎಂಬುದಾಗಿ ಮೂಲದಲ್ಲಿ 'ಅವ್ಯವ-ಧಾನೇನ ಪದಾರ್ಥಸ್ಮೃತಿಃ' ಎಂದು ಹೇಳಲಾಗಿದೆ. ಇದು ಮಣಿಗ್ರಂಥದ ಅಭಿಪ್ರಾಯ..

ಮಣಿಕಾರ ಆಸತ್ತಿಯ ಲಕ್ಷಣವನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ. ಆಸತ್ತಿ ಎಂದರೆ ಶಬ್ದಪ್ರಯೋಗ ಮಾಡಿದಾಗ ಯಾವ ವ್ಯವಧಾನವೂ ಇಲ್ಲದೆ ಅನ್ವಯಪ್ರತಿಯೋಗಿಯ ಉಪಸ್ಥಿತಿಯು ಬರುತ್ತದೆ.ಇದರ ಸ್ಮರಣೆಯೇ ಹೊರತು ಅನುಭವವಲ್ಲ ಎಂಬುದು ಅವನ ಸಿದ್ಧಾಂತ.

ನೈಯಾಯಿಕರು ಪದಶ್ರವಣಕ್ಕೂ ಶಾಸ್ತ್ರಾಭ್ಯಾಸಜ್ಞಾನಕ್ಕೂ ಮಧ್ಯದಲ್ಲಿ ಪದಾರ್ಥಸ್ಮರಣೆಯನ್ನು ಒಪ್ಪುತ್ತಾರೆ. ದ್ವೈತಿಗಳು ಶಬ್ದಶ್ರವಣಕ್ಕೂ ಮತ್ತು ಶಾಸ್ತ್ರಾರ್ಥಬೋಧಕ್ಕೂ ಮಧ್ಯದಲ್ಲಿ ಪ್ರತ್ಯೇಕವಾದ ಪದಾರ್ಥಸ್ಮರಣೆಯನ್ನು ಹೇಳುವುದಿಲ್ಲ. ಶಬ್ದಗಳಿಗೆ ಪದಾರ್ಥಜ್ಞಾಪನದಲ್ಲಿ ಶಕ್ತಿಯನ್ನು ಹೇಳಿ ಶಕ್ತಿಪ್ರತೀತಿಯಿಂದ ಶಾಬ್ದಬೋಧದ ಜ್ಞಾನ ಬರುತ್ತದೆ ಎಂದು ಅಂಗೀಕರಿಸುತ್ತಾರೆ.

ಪದಾರ್ಥದ ಉಪಸ್ಥಿತಿಯು ಬರುವುದು ಹೇಗೆ ? ಎಂದರೆ ವಕ್ತೃವು ಪದಪ್ರಯೋಗ ಮಾಡಿದಾಗ ಅದರಿಂದ ಅನ್ವಯಬೋಧ ಬರುವ ಮಧ್ಯದಲ್ಲಿ ವ್ಯವಧಾನ ಇರಬಾರದು. ಈ ಕಾರಣಕ್ಕಾಗಿ 'ಅವ್ಯವಧಾನೇನ' ಎಂಬ ಶಬ್ದ

ಮಣಿಕಾರನ ಗ್ರಂಥದಲ್ಲಿ ಪ್ರಯುಕ್ತವಾಗಿದೆ. ಶಬ್ದದಿಂದ ಪದಾರ್ಥದ ಉಪಸ್ಥಿತಿ ಬರುವ ಪದ್ಯದಲ್ಲಿ ಶಬ್ದಗಳನ್ನು ಕಾಲವ್ಯವಧಾನ ಇಲ್ಲದೆ ಉಚ್ಚಾರಣೆ ಮಾಡಿರಬೇಕು. ಕಾಲವ್ಯವಧಾನ ಇದ್ದ ಪಕ್ಷದಲ್ಲಿ ಆ ಶಬ್ದಗಳಿಂದ ಅನ್ವಯದ ಉಪಸ್ಥಿತಿ ಬರುವುದಿಲ್ಲ.

ಉದಾಹರಣೆ -'ಗಾಂ' ಎಂಬ ಪದವನ್ನು ಹೇಳಿ ಒಂದು ಗಂಟೆಯ ನಂತರ 'ಆನಯ' ಎಂಬ ಶಬ್ದವನ್ನು ಪ್ರಯೋಗ ಮಾಡಿದರೆ ಗೋಶಬ್ದಕ್ಕೂ ಆನಯನಕ್ರಿಯೆಗೂ ಅನ್ವಯವೇ ತಿಳಿಯುವುದಿಲ್ಲ. ಹೀಗೆ ಪ್ರಹರೇ ಪ್ರಹರೇ (ಗಂಟೆ ಗಂಟೆಗೆ) ಉಚ್ಚಾರಣೆ ಮಾಡತಕ್ಕ ವಾಕ್ಯಗಳಲ್ಲಿ ವ್ಯವಧಾನ ಇರುವ ಕಾರಣ ಇಂತಹ ವಾಕ್ಯದಿಂದ ಅನ್ವಯಬೋಧ ಬರುವುದಿಲ್ಲ. ಕಾಲವ್ಯವಧಾನವಿಲ್ಲದೇ ಶಬ್ದಪ್ರಯೋಗದ ಅನಂತರ ಬರುವ ಅನ್ವಯಪ್ರತಿಯೋಗಿಯ ಉಪಸ್ಥಿತಿಯೇ ಆಸತ್ತಿ. ಈ ಆಸತ್ತಿಯು ಪದಾರ್ಥಗಳ ಸ್ಮರಣರೂಪವಾದದ್ದು. ಹೊರತು, ಇದು ಪ್ರತ್ಯೇಕವಾಗಿ ಅನುಭವವಲ್ಲ. ಇದು ಮಣಿಕಾರನ ಸಿದ್ಧಾಂತ.

ಹಿಂದಿನ ಲಕ್ಷಣಕ್ಕೂ ಈ ಲಕ್ಷಣಕ್ಕೂ ಇರುವ ವ್ಯತ್ಯಾಸ ಹೀಗಿದೆ -
ಮಣಿಕಾರನ ಪಕ್ಷದಲ್ಲಿ ಅವ್ಯವಹಿತವಾದ ಪದಾರ್ಥದ ಉಪಸ್ಥಿತಿಯನ್ನು 'ಆಸತ್ತಿ' ಎಂದು ಹೇಳಲಾಗಿದೆ. ಈ ಪಕ್ಷದಲ್ಲಿ ಪದಗಳ ಉಪಸ್ಥಿತಿ ಎಂಬ ಶಬ್ದವನ್ನು ಪ್ರಯೋಗ ಮಾಡಲಾಗಿದೆ. ಎರಡು ಲಕ್ಷಣದಲ್ಲೂ ಸಹ ದೋಷ ಸಮಾನವಾದದ್ದೇ. ಶಬ್ದಗಳು ಮಾತ್ರ ವ್ಯತ್ಯಾಸವಾಗಿದೆ.

ತರ್ಕತಾಂಡವದಲ್ಲಿ ಅವ್ಯವಧಾನೇನ ಪದಾರ್ಥಸ್ಮೃತಿಯ ಲಕ್ಷಣವನ್ನು ನಿರಾಕರಣೆ ಮಾಡುವಾಗ 'ಪದಾರ್ಥ-ಸ್ಮೃತೇಃ ಸತ್ತ್ವಾತ್ ಶ್ರುತಿಜ್ಞಾನವಿಲಂಬೇನ' ಎಂಬ ವಾಕ್ಯವನ್ನು ಪ್ರಯೋಗ ಮಾಡಿದ್ದಾರೆ. ಇಲ್ಲಿ ಪದಾರ್ಥಸ್ಮೃತಿ ಎನ್ನುವ ಸ್ಥಳದಲ್ಲಿ 'ಪದೋಪಸ್ಥಿತೌ ಸತ್ಯಾಮ್' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಎರಡನೆಯ ಪಕ್ಷಕ್ಕೆ ದೋಷವನ್ನು ಹೇಳುವಾಗ ನಾವು ಪದದ ಜ್ಞಾನ ಬಂದರೂ ಸಹ ಶಾಬ್ದಬೋಧ ವಿಳಂಬವಾಗುವುದು ಕಂಡಿಲ್ಲವಾದ್ದರಿಂದ ಆಸತ್ತಿಜ್ಞಾನವು ಹೇತುವಾಗುವುದಿಲ್ಲ ಎಂಬುದಾಗಿ ವಿಷಯವನ್ನು ನಿರೂಪಣೆ ಮಾಡ-ಲಾಗಿದೆ.

ಪ್ರಶ್ನೆ - ಪದೋಪಸ್ಥಿತಿಯು ಜ್ಞಾನರೂಪವೋ, ಸ್ಮರಣರೂಪವೋ?

ಉತ್ತರ - 'ಪದೋಪಸ್ಥಿತಿ' ಎಂದರೆ ಪದಗಳ ಜ್ಞಾನ. ಪದಗಳ ಜ್ಞಾನವು ಸ್ಮರಣೆಯಾಗಲು ಸಾಧ್ಯವಿಲ್ಲ. ಆದ್ದರಿಂದ 'ಪದೋಪಸ್ಥಿತಿ' ಬಂದಾಗ ಪದಗಳ ಜ್ಞಾನ ಬಂದಾಗ ಆ ಜ್ಞಾನದಿಂದ ಶಾಬ್ದಬೋಧ ಉಂಟಾಗುವ ಸಮಯದಲ್ಲಿ ಮಧ್ಯೆ ವಿಳಂಬ ಆಗುವುದು ಲೋಕದಲ್ಲಿ ಎಲ್ಲೂ ಸಹ ಕಂಡಿಲ್ಲ. ಆದ್ದರಿಂದ ಪದಾರ್ಥಸ್ಮೃತಿಯನ್ನು ಕಾರಣ ಎಂದು ಹೇಳಿದರೂ ಪದೋಪಸ್ಥಿತಿಯನ್ನು ಶಾಬ್ದಬೋಧಕ್ಕೆ ಕಾರಣ ಎಂದು ಹೇಳಿದರೂ ಯಾವುದನ್ನು ಕಾರಣ

ಎಂದು ಹೇಳಿದ್ದಾರೋ ಆ ಕಾರಣವಾದದ್ದು ಅವ್ಯವಹಿತ ಪೂರ್ವದಲ್ಲಿ ನಿಯಮೇನ ಇರಬೇಕಾದ್ದರಿಂದ ಈ ಕಾರಣವಾದ ಪದೋಪಸ್ಥಿತಿ ಅಥವಾ ಪದಾರ್ಥಸ್ಮೃತಿಗಳು ಅನಾಸನ್ನ ಹಾಗೂ ಆಸನ್ನ ಶಬ್ದಗಳಲ್ಲಿ ಇಲ್ಲವಾದ್ದರಿಂದ ಅಲ್ಲಿ ಅವ್ಯಾಪ್ತಿ ಬರುತ್ತದೆ.

ಪ್ರಶ್ನೆ - ಒಂದು ವಾಕ್ಯದಲ್ಲಿ ಅನೇಕ ವಿಶೇಷಣಗಳಿದ್ದು ವಿಶೇಷ್ಯ ಒಂದೇ ಇದ್ದಾಗ ವಿಶೇಷಣವಿಶಿಷ್ಟವ್ಯಕ್ತಿಗೆ ಅನ್ವಯವನ್ನು ಹೇಳಿದರೆ ಉಳಿದ ವಿಶೇಷಣಗಳಿಗೆ ಪರಸ್ಪರವಾಗಿ ಅನ್ವಯ ಆಗಬೇಕೆಂಬುದು ಯಾರ ಸಿದ್ಧಾಂತ?

ಉತ್ತರ - ವಿಶೇಷಣಗಳು ಅನೇಕ ಇದ್ದಾಗ ವಿಶೇಷ್ಯ ಒಂದೇ ಇದ್ದರೂ ಆ ವಿಶೇಷ್ಯಕ್ಕೆ ವಿಶೇಷಣಗಳ ಅನ್ವಯವನ್ನು ಪ್ರತ್ಯೇಕವಾಗಿ ಹೇಳಿದರೆ ವಿಶೇಷಣಗಳಿಗೂ ಪರಸ್ಪರ ಅನ್ವಯ ಬರಬೇಕಾಗುತ್ತದೆಂಬುದು ನೈಯಾಯಿಕರ ಸಿದ್ಧಾಂತ.

ಈ ವಿವರಣೆಗಳೆಲ್ಲವೂ ಸಹ ನೈಯಾಯಿಕರ ಸಿದ್ಧಾಂತವನ್ನು ಅಂಗೀಕರಿಸಿ ಪೂರ್ವಪಕ್ಷಪ್ರಕರಣದಲ್ಲಿ ಬಂದಿರ-ತಕ್ಕಂತಹದ್ದು. ಸಮೂಹಾಲಂಬನಸ್ಮೃತಿಯು ಸಹ ನೈಯಾಯಿಕರ ಸಿದ್ಧಾಂತವನ್ನು ಅಂಗೀಕಾರ ಮಾಡಿ ಅದರಂತೆ ಆಕ್ಷೇಪ ಮಾಡಲಾಗಿದೆ. ನಮ್ಮ ಸಿದ್ಧಾಂತದಂತೆ ಪದಾರ್ಥಸ್ಮೃತಿಯೇ ಇಲ್ಲ ಈಶ್ವರನ ಸಂಕೇತದಿಂದಲೇ ಅಲ್ಲಿ ಶಾಬ್ದಬೋಧದ ಪದಾರ್ಥಸ್ಮೃತಿಯನ್ನು ಪ್ರತ್ಯೇಕವಾಗಿ ಅಂಗೀಕಾರ ಮಾಡುವುದಿಲ್ಲ. ಪದಾರ್ಥಸ್ಮೃತಿ ಪ್ರತ್ಯೇಕ-ವಾಗಿ ಇಲ್ಲದ ಕಾರಣ ತಾವತ್ಪದಾರ್ಥಗೋಚರವಾದ = ಬಹುಪದಾರ್ಥವಿಷಯಕವಾದ ಏಕಸ್ಮೃತಿ= ಸಮೂಹಾಲಂಬನ ರೂಪವಾದ ಒಂದು ಸ್ಮೃತಿಯನ್ನು ನಮ್ಮ ಸಿದ್ಧಾಂತದಲ್ಲಿ ಅಂಗೀಕಾರ ಮಾಡಿಲ್ಲ

ವಕ್ತೃವು ಶಬ್ದ ಪ್ರಯೋಗ ಮಾಡಿದಾಗ ಕೇಳುವ ವ್ಯಕ್ತಿಗೆ ಆ ಶಬ್ದಗಳಿಂದ ಅನ್ವಯಬೋಧವು ಬರಬೇಕು. ಅನ್ವಯಬೋಧಕ್ಕೆ ವಿರೋಧಿಯಾದದ್ದು ವ್ಯವಹಿತವಾಗಿ ಉಚ್ಚಾರಣೆ ಮಾಡುವುದು. ಇದು ಇಲ್ಲದಿದ್ದರೆ ಶಾಬ್ದಬೋಧಕ್ಕೆ ಅನುಕೂಲವಾದ ವಕ್ತೃವ್ಯಾಪಾರವು ಇರುತ್ತದೆ. ಇದನ್ನೇ ಆಸತ್ತಿ ಎಂದು ಕರೆಯಲಾಗಿದೆ.

ವಕ್ತೃವ್ಯಾಪಾರ ಎಂದರೆ ಮಾತನಾಡುವುದು ಎಂದಷ್ಟೇ ಅರ್ಥವಲ್ಲ. ಲಿಪಿಯಿಂದಲೂ ಕೂಡ ತನ್ನ ಅಭಿ-ಪ್ರಾಯವನ್ನು ಎದುರಿನಲ್ಲಿರುವ ವ್ಯಕ್ತಿಗೆ ತಿಳಿಸುತ್ತಾನೆ. ಇದರಿಂದಲೂ ಕೂಡ ಶಾಬ್ದಬೋಧವು ಬರುವುದು ಅನುಭವಸಿದ್ಧವಾಗಿದೆ.

ಮತ್ತು ವಕ್ತೃವು ಯಾವುದೋ ಒಂದು ಪ್ರಯೋಜನದಿಂದ ದೂರಾನ್ವಯದ ವಾಕ್ಯವನ್ನು ಪ್ರಯೋಗ ಮಾಡುತ್ತಾನೆ. ಆಗಲೂ ಕೂಡ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ.

ಇದರಂತೆ ಶಬ್ದಪ್ರಯೋಗವು ವ್ಯವಹಿತವಾಗಿದ್ದರೂ ಪ್ರಯೋಕ್ತೃವಿನ ತಾತ್ಪರ್ಯವು ಆ ಶಬ್ದಗಳ ವ್ಯವಧಾನದಲ್ಲಿ ಅಭಿಪ್ರೇತವಾಗಿರುವುದಿಲ್ಲ. ಇಂಥ ಸ್ಥಳಗಳಲ್ಲಿ ಆಸತ್ತಿಯ ಲಕ್ಷಣಕ್ಕೆ ಅವ್ಯಾಪ್ತಿದೋಷವು ಬರಬಾರದೆಂದು

ಮಣಿಕಾರನ ಗ್ರಂಥದಲ್ಲಿ ಪ್ರಯುಕ್ತವಾಗಿದೆ. ಶಬ್ದದಿಂದ ಪದಾರ್ಥದ ಉಪಸ್ಥಿತಿ ಬರುವ ಪದ್ಯದಲ್ಲಿ ಶಬ್ದಗಳನ್ನು ಕಾಲವ್ಯವಧಾನ ಇಲ್ಲದೆ ಉಚ್ಚಾರಣೆ ಮಾಡಿರಬೇಕು. ಕಾಲವ್ಯವಧಾನ ಇದ್ದ ಪಕ್ಷದಲ್ಲಿ ಆ ಶಬ್ದಗಳಿಂದ ಅನ್ವಯದ ಉಪಸ್ಥಿತಿ ಬರುವುದಿಲ್ಲ.

ಉದಾಹರಣೆ -'ಗಾಂ' ಎಂಬ ಪದವನ್ನು ಹೇಳಿ ಒಂದು ಗಂಟೆಯ ನಂತರ 'ಆನಯ' ಎಂಬ ಶಬ್ದವನ್ನು ಪ್ರಯೋಗ ಮಾಡಿದರೆ ಗೋಶಬ್ದಕ್ಕೂ ಆನಯನಕ್ರಿಯೆಗೂ ಅನ್ವಯವೇ ತಿಳಿಯುವುದಿಲ್ಲ. ಹೀಗೆ ಪ್ರಹರೇ ಪ್ರಹರೇ (ಗಂಟೆ ಗಂಟೆಗೆ) ಉಚ್ಚಾರಣೆ ಮಾಡತಕ್ಕ ವಾಕ್ಯಗಳಲ್ಲಿ ವ್ಯವಧಾನ ಇರುವ ಕಾರಣ ಇಂತಹ ವಾಕ್ಯದಿಂದ ಅನ್ವಯಬೋಧ ಬರುವುದಿಲ್ಲ. ಕಾಲವ್ಯವಧಾನವಿಲ್ಲದೇ ಶಬ್ದಪ್ರಯೋಗದ ಅನಂತರ ಬರುವ ಅನ್ವಯಪ್ರತಿಯೋಗಿಯ ಉಪಸ್ಥಿತಿಯೇ ಆಸತ್ತಿ. ಈ ಆಸತ್ತಿಯು ಪದಾರ್ಥಗಳ ಸ್ಮರಣರೂಪವಾದದ್ದು. ಹೊರತು, ಇದು ಪ್ರತ್ಯೇಕವಾಗಿ ಅನುಭವವಲ್ಲ. ಇದು ಮಣಿಕಾರನ ಸಿದ್ಧಾಂತ.

ಹಿಂದಿನ ಲಕ್ಷಣಕ್ಕೂ ಈ ಲಕ್ಷಣಕ್ಕೂ ಇರುವ ವ್ಯತ್ಯಾಸ ಹೀಗಿದೆ -
ಮಣಿಕಾರನ ಪಕ್ಷದಲ್ಲಿ ಅವ್ಯವಹಿತವಾದ ಪದಾರ್ಥದ ಉಪಸ್ಥಿತಿಯನ್ನು 'ಆಸತ್ತಿ' ಎಂದು ಹೇಳಲಾಗಿದೆ. ಈ ಪಕ್ಷದಲ್ಲಿ ಪದಗಳ ಉಪಸ್ಥಿತಿ ಎಂಬ ಶಬ್ದವನ್ನು ಪ್ರಯೋಗ ಮಾಡಲಾಗಿದೆ. ಎರಡು ಲಕ್ಷಣದಲ್ಲೂ ಸಹ ದೋಷ ಸಮಾನವಾದದ್ದೇ. ಶಬ್ದಗಳು ಮಾತ್ರ ವ್ಯತ್ಯಾಸವಾಗಿದೆ.

ತರ್ಕತಾಂಡವದಲ್ಲಿ ಅವ್ಯವಧಾನೇನ ಪದಾರ್ಥಸ್ಮೃತಿಯ ಲಕ್ಷಣವನ್ನು ನಿರಾಕರಣೆ ಮಾಡುವಾಗ 'ಪದಾರ್ಥ-ಸ್ಮೃತೇಃ ಸತ್ತ್ವಾತ್ ಶ್ರುತಿಜ್ಞಾನವಿಲಂಬೇನ' ಎಂಬ ವಾಕ್ಯವನ್ನು ಪ್ರಯೋಗ ಮಾಡಿದ್ದಾರೆ. ಇಲ್ಲಿ ಪದಾರ್ಥಸ್ಮೃತಿ ಎನ್ನುವ ಸ್ಥಳದಲ್ಲಿ 'ಪದೋಪಸ್ಥಿತೌ ಸತ್ಯಾಮ್' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಎರಡನೆಯ ಪಕ್ಷಕ್ಕೆ ದೋಷವನ್ನು ಹೇಳುವಾಗ ನಾವು ಪದದ ಜ್ಞಾನ ಬಂದರೂ ಸಹ ಶಾಬ್ದಬೋಧ ವಿಳಂಬವಾಗುವುದು ಕಂಡಿಲ್ಲವಾದ್ದರಿಂದ ಆಸತ್ತಿಜ್ಞಾನವು ಹೇತುವಾಗುವುದಿಲ್ಲ ಎಂಬುದಾಗಿ ವಿಷಯವನ್ನು ನಿರೂಪಣೆ ಮಾಡ-ಲಾಗಿದೆ.

ಪ್ರಶ್ನೆ - ಪದೋಪಸ್ಥಿತಿಯು ಜ್ಞಾನರೂಪವೋ, ಸ್ಮರಣರೂಪವೋ?

ಉತ್ತರ - 'ಪದೋಪಸ್ಥಿತಿ' ಎಂದರೆ ಪದಗಳ ಜ್ಞಾನ. ಪದಗಳ ಜ್ಞಾನವು ಸ್ಮರಣೆಯಾಗಲು ಸಾಧ್ಯವಿಲ್ಲ. ಆದ್ದರಿಂದ 'ಪದೋಪಸ್ಥಿತಿ' ಬಂದಾಗ ಪದಗಳ ಜ್ಞಾನ ಬಂದಾಗ ಆ ಜ್ಞಾನದಿಂದ ಶಾಬ್ದಬೋಧ ಉಂಟಾಗುವ ಸಮಯದಲ್ಲಿ ಮಧ್ಯೆ ವಿಳಂಬ ಆಗುವುದು ಲೋಕದಲ್ಲಿ ಎಲ್ಲೂ ಸಹ ಕಂಡಿಲ್ಲ. ಆದ್ದರಿಂದ ಪದಾರ್ಥಸ್ಮೃತಿಯನ್ನು ಕಾರಣ ಎಂದು ಹೇಳಿದರೂ ಪದೋಪಸ್ಥಿತಿಯನ್ನು ಶಾಬ್ದಬೋಧಕ್ಕೆ ಕಾರಣ ಎಂದು ಹೇಳಿದರೂ ಯಾವುದನ್ನು ಕಾರಣ

ಎಂದು ಹೇಳಿದ್ದಾರೋ ಆ ಕಾರಣವಾದದ್ದು ಅವ್ಯವಹಿತ ಪೂರ್ವದಲ್ಲಿ ನಿಯಮೇನ ಇರಬೇಕಾದ್ದರಿಂದ ಈ ಕಾರಣವಾದ ಪದೋಪಸ್ಥಿತಿ ಅಥವಾ ಪದಾರ್ಥಸ್ಮೃತಿಗಳು ಅನಾಸನ್ನ ಹಾಗೂ ಆಸನ್ನ ಶಬ್ದಗಳಲ್ಲಿ ಇಲ್ಲವಾದ್ದರಿಂದ ಅಲ್ಲಿ ಅವ್ಯಾಪ್ತಿ ಬರುತ್ತದೆ.

ಪ್ರಶ್ನೆ - ಒಂದು ವಾಕ್ಯದಲ್ಲಿ ಅನೇಕ ವಿಶೇಷಣಗಳಿದ್ದು ವಿಶೇಷ್ಯ ಒಂದೇ ಇದ್ದಾಗ ವಿಶೇಷಣವಿಶಿಷ್ಟವ್ಯಕ್ತಿಗೆ ಅನ್ವಯವನ್ನು ಹೇಳಿದರೆ ಉಳಿದ ವಿಶೇಷಣಗಳಿಗೆ ಪರಸ್ಪರವಾಗಿ ಅನ್ವಯ ಆಗಬೇಕೆಂಬುದು ಯಾರ ಸಿದ್ಧಾಂತ?

ಉತ್ತರ - ವಿಶೇಷಣಗಳು ಅನೇಕ ಇದ್ದಾಗ ವಿಶೇಷ್ಯ ಒಂದೇ ಇದ್ದರೂ ಆ ವಿಶೇಷ್ಯಕ್ಕೆ ವಿಶೇಷಣಗಳ ಅನ್ವಯವನ್ನು ಪ್ರತ್ಯೇಕವಾಗಿ ಹೇಳಿದರೆ ವಿಶೇಷಣಗಳಿಗೂ ಪರಸ್ಪರ ಅನ್ವಯ ಬರಬೇಕಾಗುತ್ತದೆಂಬುದು ನೈಯಾಯಿಕರ ಸಿದ್ಧಾಂತ.

ಈ ವಿವರಣೆಗಳೆಲ್ಲವೂ ಸಹ ನೈಯಾಯಿಕರ ಸಿದ್ಧಾಂತವನ್ನು ಅಂಗೀಕರಿಸಿ ಪೂರ್ವಪಕ್ಷಪ್ರಕರಣದಲ್ಲಿ ಬಂದಿರತಕ್ಕಂತಹದ್ದು. ಸಮೂಹಾಲಂಬನಸ್ಮೃತಿಯು ಸಹ ನೈಯಾಯಿಕರ ಸಿದ್ಧಾಂತವನ್ನು ಅಂಗೀಕಾರ ಮಾಡಿ ಅದರಂತೆ ಆಕ್ಷೇಪ ಮಾಡಲಾಗಿದೆ. ನಮ್ಮ ಸಿದ್ಧಾಂತದಂತೆ ಪದಾರ್ಥಸ್ಮೃತಿಯೇ ಇಲ್ಲ ಈಶ್ವರನ ಸಂಕೇತದಿಂದಲೇ ಅಲ್ಲಿ ಶಾಬ್ದಬೋಧದ ಪದಾರ್ಥಸ್ಮೃತಿಯನ್ನು ಪ್ರತ್ಯೇಕವಾಗಿ ಅಂಗೀಕಾರ ಮಾಡುವುದಿಲ್ಲ. ಪದಾರ್ಥಸ್ಮೃತಿ ಪ್ರತ್ಯೇಕವಾಗಿ ಇಲ್ಲದ ಕಾರಣ ತಾವತ್ಪದಾರ್ಥಗೋಚರವಾದ = ಬಹುಪದಾರ್ಥವಿಷಯಕವಾದ ಏಕಸ್ಮೃತಿ= ಸಮೂಹಾಲಂಬನ ರೂಪವಾದ ಒಂದು ಸ್ಮೃತಿಯನ್ನು ನಮ್ಮ ಸಿದ್ಧಾಂತದಲ್ಲಿ ಅಂಗೀಕಾರ ಮಾಡಿಲ್ಲ

ವಕ್ತೃವು ಶಬ್ದ ಪ್ರಯೋಗ ಮಾಡಿದಾಗ ಕೇಳುವ ವ್ಯಕ್ತಿಗೆ ಆ ಶಬ್ದಗಳಿಂದ ಅನ್ವಯಬೋಧವು ಬರಬೇಕು. ಅನ್ವಯಬೋಧಕ್ಕೆ ವಿರೋಧಿಯಾದದ್ದು ವ್ಯವಹಿತವಾಗಿ ಉಚ್ಚಾರಣೆ ಮಾಡುವುದು. ಇದು ಇಲ್ಲದಿದ್ದರೆ ಶಾಬ್ದಬೋಧಕ್ಕೆ ಅನುಕೂಲವಾದ ವಕ್ತೃವ್ಯಾಪಾರವು ಇರುತ್ತದೆ. ಇದನ್ನೇ ಆಸತ್ತಿ ಎಂದು ಕರೆಯಲಾಗಿದೆ.

ವಕ್ತೃವ್ಯಾಪಾರ ಎಂದರೆ ಮಾತನಾಡುವುದು ಎಂದಷ್ಟೇ ಅರ್ಥವಲ್ಲ. ಲಿಪಿಯಿಂದಲೂ ಕೂಡ ತನ್ನ ಅಭಿಪ್ರಾಯವನ್ನು ಎದುರಿನಲ್ಲಿರುವ ವ್ಯಕ್ತಿಗೆ ತಿಳಿಸುತ್ತಾನೆ. ಇದರಿಂದಲೂ ಕೂಡ ಶಾಬ್ದಬೋಧವು ಬರುವುದು ಅನುಭವಸಿದ್ಧವಾಗಿದೆ.

ಮತ್ತು ವಕ್ತೃವು ಯಾವುದೋ ಒಂದು ಪ್ರಯೋಜನದಿಂದ ದೂರಾನ್ವಯದ ವಾಕ್ಯವನ್ನು ಪ್ರಯೋಗ ಮಾಡುತ್ತಾನೆ. ಆಗಲೂ ಕೂಡ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ.

ಇದರಂತೆ ಶಬ್ದಪ್ರಯೋಗವು ವ್ಯವಹಿತವಾಗಿದ್ದರೂ ಪ್ರಯೋಕ್ತೃವಿನ ತಾತ್ಪರ್ಯವು ಆ ಶಬ್ದಗಳ ವ್ಯವಧಾನದಲ್ಲಿ ಅಭಿಪ್ರೇತವಾಗಿರುವುದಿಲ್ಲ. ಇಂಥ ಸ್ಥಳಗಳಲ್ಲಿ ಆಸತ್ತಿಯ ಲಕ್ಷಣಕ್ಕೆ ಅವ್ಯಾಪ್ತಿದೋಷವು ಬರಬಾರದೆಂದು

ನಿಷ್ಫಲವಾದ ಹಾಗೂ ಅನ್ವಯಬೋಧವಿರೋಧಿಯಾದ ವ್ಯವಧಾನವು ವಕ್ತೃವ್ಯಾಪಾರದಲ್ಲಿ ಇರಬಾರದು ಎಂದು ಲಕ್ಷಣವನ್ನು ಪರಿಷ್ಕರಿಸಲಾಗಿದೆ.

ಸಪ್ರಯೋಜನಕವಾದ ವ್ಯವಧಾನವು ಆಸತ್ತಿಗೆ ವಿರೋಧಿಯಾಗುವುದಿಲ್ಲ. ಇದರಂತೆ ಶಬ್ದಪ್ರಯೋಗದಲ್ಲಿ ವ್ಯವಹಿತವಾದ ಶಬ್ದಗಳಿದ್ದರೂ ವಕ್ತೃವಿನ ತಾತ್ಪರ್ಯಕ್ಕೆ ಶಾಬ್ದವ್ಯವಧಾನವು ಅನಭಿಪ್ರೇತವಾದ್ದರಿಂದ ವ್ಯವಹಿತಾನ್ವಯ ಸ್ಥಳದಲ್ಲೂ ಸಹ ಆಸತ್ತಿಯು ಇರುತ್ತದೆ.

'ಅವ್ಯಧಾನೇನ ಪದಾರ್ಥಸ್ಮೃತಿಃ' ಎಂಬ ಮಣಿಕಾರ ಹೇಳಿದ ಆಸತ್ತಿಲಕ್ಷಣಕ್ಕೆ ಅಸಂಭವದೋಷವು ಬರುತ್ತದೆ. ನಮಗೆ ಪದಾರ್ಥಸ್ಮರಣೆ ಬಂದು ತದ್ವಿಷಯಕವಾದ ಜ್ಞಾನವು ವಿಲಂಬವಾಗಿ ಬರುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಅವ್ಯವಧಾನೇನ ಪದಾರ್ಥಸ್ಮೃತಿ ಇದ್ದರೆ ಮಾತ್ರ ಶಾಬ್ದಬೋಧ ಬರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಆಸತ್ತಿಜ್ಞಾನವು ಶಾಬ್ದಬೋಧಕ್ಕೆ ಕಾರಣವಾಗುತ್ತದೆಂಬ ತಾರ್ಕಿಕರ ಲಕ್ಷಣಕ್ಕೆ ಅನುಭವವಿರೋಧ ಬರುವುದರಿಂದ ಅಸಂಭವದೋಷವಿದೆ. ಇಲ್ಲಿ ಆಸತ್ತಿಯು ಇದ್ದ ಮಾತ್ರದಿಂದ ಶಾಬ್ದಬೋಧಕ್ಕೆ ಕಾರಣವಾಗು-ವುದಾದರೆ ಆಸತ್ತಿಭ್ರಮೆಯೇ ಬರದೇ ಇರಬೇಕಾದೀತು.

ಪಕ್ಷಧರಮಿಶ್ರನು 'ಅವ್ಯವಹಿತತ್ವೇನ ಪದತಾತ್ಪರ್ಯಂ ಆಸತ್ತಿಃ' ಎಂಬುದಾಗಿ ಆಸತ್ತಿಯ ಲಕ್ಷಣವನ್ನು ಪರಿಹರಿಸುವ ಮೂಲಕ ಹಿಂದಿನ ದೋಷಗಳನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ಅವ್ಯವಹಿತ-ವಾಗಿ ಪದತಾತ್ಪರ್ಯದ ಅರಿವಿಲ್ಲದ ಗಿಳಿಯ ಮಾತಿನಲ್ಲಿ ಈ ಆಸತ್ತಿಯಲಕ್ಷಣ ಬಾರದ ಕಾರಣ ಅವ್ಯಾಪ್ತಿ ಇವನಿಗೂ ತಪ್ಪಿದ್ದಲ್ಲ. ಮತ್ತು ಅವ್ಯವಹಿತವಾಗಿ ತಾತ್ಪರ್ಯವನ್ನು ವಿವಕ್ಷಿಸಿ, ವ್ಯವಹಿತವಾಗಿ ಶಬ್ದಗಳನ್ನು ಪ್ರಯೋಗಿಸುವ ವಾದಿಗೆ ಅಪಾರ್ಥಕ ಎಂಬ ನಿಗ್ರಹಸ್ಥಾನವನ್ನು ಹೇಳುವುದು ನಿಮ್ಮ ಪ್ರಕಾರ ತಪ್ಪಾಗುತ್ತದೆ.

ಮಣಿಕಾರ ಹೇಳಿದ ಆಸತ್ತಿಯ ಲಕ್ಷಣಕ್ಕೆ ಅತಿವ್ಯಾಪ್ತಿದೋಷ, ಅಸಂಭವದೋಷಗಳಷ್ಟೇ ಅಲ್ಲ ಅವ್ಯಾಪ್ತಿ-ದೋಷವೂ ಕೂಡ ಇರುತ್ತದೆ - ಅನೇಕ ವಿಶೇಷಣಗಳಿದ್ದು ಒಂದೇ ವಿಶೇಷ್ಯವಿರುವ 'ದಂಡೀ ಕುಂಡಲೀ ಚೈತ್ರಃ' ಇತ್ಯಾದಿ ಸ್ಥಳಗಳಲ್ಲಿ ಅವ್ಯಾಪ್ತಿದೋಷವು ಬರುತ್ತದೆ. ಕುಂಡಲೀ ಎಂಬ ಪದವು ಚೈತ್ರಪದದಿಂದ ಆಸನ್ನವಾಗಿದೆ. ದಂಡೀ ಎಂಬ ಪದವು ಚೈತ್ರಪದದಿಂದ ಅನಾಸನ್ನವಾಗಿದೆ ಎಂಬ ವ್ಯತ್ಯಾಸವನ್ನು ನಾವು ಕಾಣುತ್ತಿದ್ದೇವೆ. ಪದಾರ್ಥಸ್ಮೃತಿಯನ್ನೇ ಆಸತ್ತಿ ಎಂದು ಹೇಳುವುದಾದರೆ ಇಲ್ಲಿಯೂ ಕೂಡ ಸಮೂಹಾಲಂಬನಾತ್ಮಕವಾದ ಒಂದೇ ಸ್ಮೃತಿಯನ್ನು ಹೇಳಬೇಕು. ಆಗ ದಂಡೀ ಎಂಬ ಪದವು ಚೈತ್ರಪದದಿಂದ ಅನಾಸನ್ನವಾಗಿದೆ. ಕುಂಡಲೀ ಪದವು ಚೈತ್ರಪದದಿಂದ ಆಸನ್ನವಾಗಿದೆ ಎಂಬ ವಿಭಾಗವನ್ನೇ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಸಕಲಪದಗಳ ಆಸತ್ತಿಯು ಸಮೂಹಾಲಂಬನಾತ್ಮಕಸ್ಮೃತಿಯಲ್ಲಿ ಏಕಕಾಲದಲ್ಲಿ ಇರುತ್ತದೆ. ಆಸತ್ತಿಯಿರುವ ಸಮಯದಲ್ಲಿ ಅನಾಸನ್ನವಾದ ಪದಗಳು ಇವೆ ಎಂದು ಹೇಳಲು ಮಣಿಕಾರನಿಗೆ ಸಾಧ್ಯವಾಗುತ್ತಿಲ್ಲ. ಆದರೆ

ಲೋಕದಲ್ಲಿ ಕೆಲವು ಆಸನ್ನಪದಗಳಿವೆ, ಕೆಲವು ಅನಾಸ್ಸಪದಗಳಿವೆ ಎಂಬ ವಿಭಾಗವು ಪ್ರಸಿದ್ಧವಾಗಿದೆ. ಇದಕ್ಕನುಗುಣವಾಗಿಯೂ ಕೂಡ ಶಾಸ್ತ್ರದಲ್ಲಿ ವ್ಯವಹಾರವನ್ನು ಮಾಡಬೇಕು. ಇದನ್ನು ಬಿಟ್ಟು ಲೋಕ-ವಿರುದ್ಧವಾಗಿ 'ಅವ್ಯಧಾನೇನ ಅನ್ವಯಪ್ರತಿಯೋಗಿಕೋಪಸ್ಥಿತಿಃ' ಎಂದು ಹೇಳಿದರೆ ಅವ್ಯಾಪ್ತಿದೋಷ ಪ್ರಾಪ್ತವಾಗುತ್ತದೆ.

ಮತ್ತು ದೂರಾನ್ವಯವಿರುವ ಶ್ಲೋಕದಲ್ಲಿ 'ಅವ್ಯವಧಾನೇನ ಪದಾರ್ಥಸ್ಮೃತಿಃ' ಎಂಬ ಆಸತ್ತಿಯ ಲಕ್ಷಣವನ್ನು ಹೇಳಲು ಸಾಧ್ಯವೇ ಆಗುವುದಿಲ್ಲ. ಆದ್ದರಿಂದ ಸಂಸ್ಕೃತದ ಶ್ಲೋಕಗಳೆಲ್ಲವೂ ಆಸತ್ತಿಯಿಲ್ಲದ ಶ್ಲೋಕಾಭಾಸ-ವೆಂದಾಗಬೇಕಾಗುತ್ತದೆ. ಅಷ್ಟೇ ಅಲ್ಲದೇ ಕುಲಕ ಶ್ಲೋಕದಲ್ಲಿ ಒಂದು ಕ್ರಿಯಾಪದವು ಅನೇಕ ಶ್ಲೋಕಗಳ ಅನಂತರ ಬರುವುದೇ ಕಾವ್ಯದ ಲಕ್ಷಣ. ಇಲ್ಲಿಯೂ ಕೂಡ ಅವ್ಯವಧಾನೇನ ಪದಾರ್ಥಸ್ಮೃತಿ ಎಂಬ ಆಸತ್ತಿ-ಯಿಲ್ಲದ ಕಾರಣ ಅವ್ಯಾಪ್ತಿದೋಷವಿದೆ.

'ಅವ್ಯವಹಿತ ಪದೋಪಸ್ಥಿತಿಃ ಆಸತ್ತಿಃ' ಎಂಬುದು ತಾರ್ಕಿಕರು ಹೇಳಿದ ಮತ್ತೊಂದು ಪಕ್ಷ. ಈ ಪಕ್ಷದಲ್ಲಿಯೂ ಕೂಡ ಶ್ಲೋಕದಲ್ಲಿ ಹಾಗೂ ಕುಲಕಶ್ಲೋಕಗಳಲ್ಲಿ ವ್ಯವಹಿತವಾದ ಪದಗಳು ಕಾಣಿಸುತ್ತಿರುವುದರಿಂದ ಆಸತ್ತಿಯಿಲ್ಲದೇ ಇರಬೇಕಾದೀತು ಎಂಬ ಆಕ್ಷೇಪವನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ವ್ಯವಧಾನವಿಲ್ಲವೆಂದು ಹೇಳಲು ಉಚ್ಚಾರಣೆ ಮತ್ತು ಲಿಪಿ ಇವುಗಳನ್ನೇ ಕಾರಣವನ್ನಾಗಿ ಹೇಳಬೇಕು. ಲಿಪಿಯಲ್ಲಿ ವ್ಯವಧಾನವಿದ್ದರೂ ಕೂಡ ಶಾಬ್ದಬೋಧ ಬರುವುದಿಲ್ಲ. ಉಚ್ಚಾರಣೆಯಲ್ಲಿ ವ್ಯವಧಾನವಿದ್ದರೂ ಕೂಡ ಶಾಬ್ದಬೋಧ ಬರುವುದಿಲ್ಲ. ಇದು ಲೋಕಸಿದ್ಧವಾದ ವಿಷಯ. ಆದರೆ ಯಾವ ಸ್ಥಳದಲ್ಲಿ ವ್ಯವಹಿತವಾದ ಲಿಪಿ ಹಾಗೂ ಉಚ್ಚಾರಣೆಗಳಿದ್ದರೂ ಕೂಡ ಯೋಜನೆಯ ಮೂಲಕ ಅನ್ವಯವನ್ನು ತಿಳಿದುಕೊಂಡಿದ್ದಾನೋ, ಅಂತಹ ಸ್ಥಳದಲ್ಲಿ ವ್ಯವಧಾನವಿದ್ದರೂ ಕೂಡ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ. ಇಂತಹ ಆಸತ್ತಿಯ ಲಕ್ಷಣವು ಬರಲೇಬೇಕು. ಆದರೆ ಪದಗಳ ವ್ಯವಧಾನವಿರಬಾರದೆಂದು ನೀವು ಆಸತ್ತಿಯ ಲಕ್ಷಣವನ್ನು ಹೇಳಿದರೆ ಇಂತಹ ಸ್ಥಳದಲ್ಲಿ ಅವ್ಯಾಪ್ತಿದೋಷವು ಬರುತ್ತದೆ.

ಮತ್ತು 'ಗಿರಿರ್ಭುಕ್ತಂ ಅಗ್ನಿಮಾನ್ ದೇವದತ್ತೇನ' ಇತ್ಯಾದಿ ಆಸತ್ತಿಯಿಲ್ಲದ ವಾಕ್ಯದಲ್ಲಿ ಅವ್ಯವಹಿತತ್ವೇನ ಪದತಾತ್ಪರ್ಯವು ಇರುವುದರಿಂದ ಅತಿವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ತಾರ್ಕಿಕರಿಗೆ ಆಸತ್ತಿಯ ಲಕ್ಷಣವನ್ನು ನಿರೂಪಣೆ ಮಾಡಲು ಸಾಧ್ಯವಾಗುತ್ತಿಲ್ಲ.

ತಾರ್ಕಿಕರು ಒಟ್ಟು ಐದು ರೀತಿಯ ಆಸತ್ತಿಯ ಲಕ್ಷಣಗಳನ್ನು ಹೇಳಿದರು - 1) ಅವ್ಯವಧಾನೇನ ಪದಾರ್ಥಸ್ಮೃತಿಃ, 2) ಅನ್ವಯಪ್ರತಿಯೋಗಿಪದಾರ್ಥೋಪಸ್ಥಿತಿಃ ಆಸತ್ತಿಃ, 3) ಅವ್ಯವಹಿತಪದೋಪಸ್ಥಿತಿಃ ಆಸತ್ತಿಃ, 4) ಪದ ಅವ್ಯವಧಾನಂ ಆಸತ್ತಿಃ, 5) ಅವ್ಯವಹಿತತ್ವೇನ ಪದತಾತ್ಪರ್ಯಂ ಆಸತ್ತಿಃ ಎಂದು.

ಈ ಐದು ಬಗೆಯ ಲಕ್ಷಣಗಳಿಗೂ ಅವ್ಯಾಪ್ತಿ, ಅತಿವ್ಯಾಪ್ತಿ ಹಾಗೂ ಅಸಂಭವದೋಷಗಳಿವೆ ಎಂಬುದನ್ನು ಗ್ರಂಥಕಾರರು ಸುಸ್ಪಷ್ಟವಾಗಿ ಸಮರ್ಥಿಸಿದ್ದಾರೆ.

'ಪದೋಪಸ್ಥಿತ್ಯನುಕೂಲ ವಕ್ತೃವ್ಯಾಪಾರೇ ನಿಷ್ಫಲಸ್ಯ ಅನ್ವಯಬೋಧವಿರೋಧಿವ್ಯವಧಾನಸ್ಯ ಅಭಾವಃ ಆಸತ್ತಿಃ' ಪದದ ಉಪಸ್ಥಿತಿಗೆ ಅನುಕೂಲವಾದ ವಕ್ತೃವಿನ ವ್ಯಾಪಾರದಲ್ಲಿ ನಿಷ್ಫಲವಾದ ಅನ್ವಯಬೋಧಕ್ಕೆ ವಿರೋಧಿಯಾದ ವ್ಯವಧಾನ ಇಲ್ಲದಿರುವುದೇ ಆಸತ್ತಿ ಎಂಬುದು ಪರಿಷ್ಕೃತವಾದ ಸಿದ್ಧಾಂತ ಲಕ್ಷಣ.

ಪ್ರಮಾಣಪದ್ಧತಿಯಲ್ಲಿ 'ಅವಿಲಂಬೇನ ಉಚ್ಚರಿತತ್ವಂ ಆಸತ್ತಿಃ' ಎಂದು ಹೇಳಿದ್ದಾರೆ. ಇದು ಪ್ರಮಾಣಪದ್ಧತಿಯಲ್ಲಿ ಹೇಳಿದ ಆಸತ್ತಿಲಕ್ಷಣದ ಪರಿಷ್ಕಾರವೇ ಆಗಿರುತ್ತದೆ. ನ್ಯಾಯದೀಪಕಾರರು 'ನಿಷ್ಫಲಾನ್ವಯಬೋಧವಿರೋಧಿ ವ್ಯವಹಾರಶೂನ್ಯಶಬ್ದೋಪಸ್ಥಿತ್ಯನುಕೂಲವಕ್ತೃವ್ಯಾಪಾರವಿಷಯತಾ ಆಸತ್ತಿಃ' ನಿಷ್ಫಲವಾದ ಅನ್ವಯಬೋಧಕ್ಕೆ ವಿರೋಧಿಯಾದ, ವ್ಯವಧಾನ ಇಲ್ಲದಿರುವ ಶಬ್ದದ ಉಪಸ್ಥಿತಿಗೆ ಅನುಕೂಲವಾದ ವಕ್ತೃವ್ಯಾಪಾರಕ್ಕೆ ಯಾವುದು ವಿಷಯವೋ, ಅದೇ ಆಸತ್ತಿ ಎಂದು ಹೇಳಿದ್ದಾರೆ.

ವಕ್ತೃವ್ಯಾಪಾರವು ಲಿಪಿ, ಉಚ್ಚಾರಣೆ ಹಾಗೂ ತಾತ್ಪರ್ಯ ಈ ಮೂರರಲ್ಲಿಯೂ ಸಾಧಾರಣವಾಗಿರುವುದರಿಂದ ಮೌನಿಶ್ಲೋಕಾದಿಗಳಲ್ಲಿ ಅವ್ಯಾಪ್ತಿದೋಷವು ಬರುವುದಿಲ್ಲ. ಮತ್ತು ವ್ಯವಹಿತಾನ್ವಯ ಸ್ಥಳವಾದ 'ಗಿರಿರ್ಭುಕ್ತಂ ಅಗ್ನಿಮಾನ್ ದೇವದತ್ತೇನ' ಎಂಬ ವಾಕ್ಯದಲ್ಲಿ ಗಿರಿ ಶಬ್ದ ಹಾಗೂ ಭುಕ್ತ ಶಬ್ದಗಳ ನಡುವೆ ಅನ್ವಯಬೋಧಕ್ಕೆ ವಿರೋಧಿಯಾದ ಉಪಸ್ಥಿತಿಯು ಇಲ್ಲದೇ ಇರುವುದರಿಂದ ಈ ಎರಡು ಶಬ್ದಗಳಿಗೆ ಆಸತ್ತಿಯು ಬರಬೇಕಾದೀತೆಂಬ ಆಕ್ಷೇಪಕ್ಕೆ ಅವಕಾಶವೇ ಇಲ್ಲ. ಇದು ನಮಗೆ ಇಷ್ಟಾಪತ್ತಿಯೇ ಆಗಿದೆ. ಎರಡು ಶಬ್ದಗಳಿಗೆ ಅನ್ವಯಬೋಧವು ಬರದೇ ಇರುವುದು ಆಕಾಂಕ್ಷಾ ಇಲ್ಲದಿರುವುದರಿಂದ ಎಂದೇ ಉಚ್ಚರಿಸುತ್ತೇವೆ.

ಮತ್ತು ದೂರಾನ್ವಯವಿರುವ ಶ್ಲೋಕಗಳಲ್ಲಿ ಅವ್ಯಾಪ್ತಿದೋಷಕ್ಕೂ ಅವಕಾಶವಿಲ್ಲ. ಛಂದಸ್ಸಿನ ಅನುಕೂಲಕ್ಕಾಗಿ ಮತ್ತು ಅಲಂಕಾರದ ಉದ್ದೇಶಕ್ಕಾಗಿ ಹಾಗೇ ದೂರಾನ್ವಯವು ಮಾಡಲ್ಪಡುತ್ತದೆಂದು ಶ್ರವಣ ಮಾಡುವ ವ್ಯಕ್ತಿ, ಆ ಶಬ್ದಗಳು ವ್ಯವಹಿತವಾಗಿದ್ದರೂ ಅವ್ಯವಹಿತವಾಗಿಯೇ ಯೋಜನೆ ಮಾಡಿಕೊಳ್ಳುತ್ತಾನೆ. ಆದ್ದರಿಂದ ಅಲ್ಲಿಯೂ ಒಂದು ಶಬ್ದಕ್ಕೆ ಮತ್ತೊಂದು ಶಬ್ದದಿಂದ ಆಸತ್ತಿಯಿರುವುದರಿಂದ ಆಸತ್ತಿಯಿಲ್ಲವೆಂಬ ಆಕ್ಷೇಪವು ಬರುವುದಿಲ್ಲ. ಶಬ್ದಗಳಲ್ಲಿರುವ ಆಸತ್ತಿಯು ವಕ್ತೃವಿನ ವ್ಯಾಪಾರದ ಅಧೀನವಾಗಿದೆ ಎಂದು ತಿಳಿಯಬೇಕು.

ಅಪೌರುಷೇಯವಾದ ವೇದದಲ್ಲಿ ಪುರುಷಾಭಿಪ್ರಾಯವೇ ಇಲ್ಲದೇ ಇರುವುದರಿಂದ ವಕ್ತೃವ್ಯಾಪಾರದಲ್ಲಿ ವ್ಯವಧಾನವಿರಬಾರದೆಂಬ ಆಸತ್ತಿಯ ಲಕ್ಷಣವನ್ನು ಹೇಗೆ ಹೇಳುತ್ತೀರಿ ? ಎಂಬ ಆಕ್ಷೇಪವನ್ನು ತಾರ್ಕಿಕರು ಮಾಡಬಹುದು. ಆದರೆ ಅಪೌರುಷೇಯವಾದ ವೇದವಾಕ್ಯಗಳಲ್ಲಿಯೂ ಈಶ್ವರಾಭಿಪ್ರಾಯವಿರುವುದರಿಂದ ಆಸತ್ತಿಯ ಲಕ್ಷಣಕ್ಕೆ ಅವ್ಯಾಪ್ತಿದೋಷವು ಸರ್ವಥಾ ಬರುವುದಿಲ್ಲ. ಮೀಮಾಂಸಕರೂ ಕೂಡ ಅನಾದಿಯಾದ

ಸಂಸಾರದಲ್ಲಿ ವೇದಾರ್ಥವನ್ನು ತಿಳಿದ ಅಧ್ಯಾಪಕನ ಅಭಿಪ್ರಾಯವನ್ನು ಒಪ್ಪಿರುತ್ತಾರೆ. ಮೀಮಾಂಸಕರು ನಿರೀಶ್ವರವಾದಿಗಳಾಗಿದ್ದರೂ ಯಾವ ಅಧ್ಯಾಪಕರು ವೇದದ ಅರ್ಥವನ್ನು ತಿಳಿದು ಉಚ್ಚಾರ ಮಾಡುತ್ತಾರೋ, ಅಂತಹ ವಕ್ತೃವಿನ ವ್ಯಾಪಾರವನ್ನು ವೇದದಲ್ಲಿ ಹೇಳಬಹುದಾದ್ದರಿಂದ ನಿರೀಶ್ವರವಾದಿಗಳ ಪ್ರಕಾರವೂ ನಮ್ಮ ಆಸತ್ತಿಯ ಲಕ್ಷಣಕ್ಕೆ ಅವ್ಯಾಪ್ತಿದೋಷವು ಪ್ರಾಪ್ತವಾಗುವುದಿಲ್ಲ.

ಆಸತ್ತಿಯ ಲಕ್ಷಣದಲ್ಲಿ ನಿಷ್ಫಲ ಎಂಬ ವಿಶೇಷಣವನ್ನು ನೀಡಿರುವುದರಿಂದ ಆಸತ್ತಿಯಿಲ್ಲದ 'ಗಿರಿರ್ಭುಕ್ತಂ' ಇತ್ಯಾದಿ ವಾಕ್ಯದಲ್ಲಿ ಅತಿವ್ಯಾಪ್ತಿಯು ಬರುವುದಿಲ್ಲ. ಏಕೆಂದರೆ ಅಂತಹ ಸ್ಥಳದಲ್ಲಿರುವ ವ್ಯವಧಾನವು ನಿಷ್ಫಲವಾಗಿದೆ. ಆದ್ದರಿಂದಲೇ ವ್ಯವಹಿತವಾಗಿ ತಾತ್ಪರ್ಯವನ್ನು ಹೊಂದಿರುವ ವಾದಿವಾಕ್ಯದಲ್ಲಿ ಅತಿವ್ಯಾಪ್ತಿಯು ಪ್ರಾಪ್ತವಾಗು-ವುದಿಲ್ಲ. ವಾದಿಯು ಅನಾಪ್ತನಾಗಿರುವುದರಿಂದ ಅಲ್ಲಿ ಅವನ ಅಭಿಪ್ರಾಯವನ್ನು ಕಲ್ಪನೆ ಮಾಡುವುದು ಕಷ್ಟವಾಗುತ್ತದೆ. ಏಕೆಂದರೆ ತಾತ್ಪರ್ಯ ಉಪಸ್ಥಿತಿಯು ವಾದಿವಾಕ್ಯದಲ್ಲಿ ಇರುವುದಿಲ್ಲ.

ಕೆಲವರು ದೂರಾನ್ವಯವಿರುವ ಪದ್ಯಗಳಲ್ಲಿ ಆಸತ್ತಿಯು ಇರುವುದೇ ಇಲ್ಲ. ಆದ್ದರಿಂದ ಇಲ್ಲಿ ಆಸತ್ತಿಯ ಲಕ್ಷಣವನ್ನು ಸಮನ್ವಯ ಮಾಡಬೇಕಾಗಿಲ್ಲವೆಂದು ವಾದಿಸುತ್ತಾರೆ. ಹಾಗಾದರೆ ಅಲ್ಲಿಯೂ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ ಎಂದು ಪ್ರಶ್ನಿಸಿದರೆ ಆ ಶ್ಲೋಕಗಳಿಂದ ಅನ್ವಯಬೋಧವು ಬರುತ್ತಿಲ್ಲ. ವ್ಯವಹಿತಪದಗಳನ್ನು ಅವ್ಯವಹಿತವಾಗಿ ಯೋಜನೆ ಮಾಡಿಕೊಂಡಾಗ ಬೇರೆ ವಾಕ್ಯವಾಗುತ್ತದೆ. ಅಂಥ ವಾಕ್ಯಾಂತರದಿಂದ ಶಾಬ್ದಬೋಧ ಬರುತ್ತಿದೆ ಎಂದು ಹೇಳುತ್ತಾರೆ. ಅಂದರೆ ಇವರ ಪಕ್ಷದಲ್ಲಿ ಕಲ್ಪನಾಗೌರವ-ದೋಷವಿರುವುದರಿಂದ ಅನುಭವವಿರೋಧಿಯೇ ಅಸ್ವಾರಸ್ಯಕ್ಕೆ ಕಾರಣವಾಗಿದೆ.

ಇಂತಹ ಆಸತ್ತಿಯು ಜ್ಞಾತಾವಾಗಿಯೇ ಶಾಬ್ದಬೋಧಕ್ಕೆ ಕಾರಣವಾಗುತ್ತದೆ. ಏಕೆಂದರೆ ಆಸತ್ತಿಯ ಭ್ರಮದಿಂದ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ. 'ನೀಲಃ ಘಟಃ ಅಸ್ತಿ' ಎಂಬ ಪ್ರಯೋಗದಲ್ಲಿ ನೀಲಪದಕ್ಕೂ, ಘಟಪದಕ್ಕೂ ವ್ಯವಧಾನವಿರುವುದಿಲ್ಲ. ಇಂಥ ಸ್ಥಳದಲ್ಲಿ ನೀಲಾಭಿನ್ನವಾದ ಘಟವಿದೆಯೆಂಬ ಶಾಬ್ದಬೋಧವು ಬರುತ್ತದೆ. ಆದರೆ ನೀಲಪದ ಹಾಗೂ ಘಟಪದಗಳ ಮಧ್ಯದಲ್ಲಿ ಬೇರೆ ಯಾವುದಾದರು ಪದವನ್ನು ಉಚ್ಚಾರ ಮಾಡಬೇಕೋ? ಆವೃತ್ತಿಮಾಡಬೇಕೋ? ಅಧ್ಯಾಹಾರ ಮಾಡಬೇಕೋ? ಇತ್ಯಾದಿಯಾಗಿ ಸಂದೇಹ ಪ್ರಾಪ್ತವಾದಾಗ ಶಾಬ್ದಬೋಧವು ಹುಟ್ಟುವುದಿಲ್ಲ. ಆದ್ದರಿಂದ ಶಾಬ್ದಬೋಧ ಬಾರದೇ ಇರಲು ಮುಖ್ಯವಾಗಿ ಎರಡು ಕಾರಣಗಳು - 1. ಸಂದೇಹ, 2. ವ್ಯವಧಾನ. ಆಸತ್ತಿಯು ಇದ್ದ ಮಾತ್ರಕ್ಕೆ ಶಾಬ್ದಬೋಧಕ್ಕೆ ಕಾರಣ-ವಾಗುತ್ತದೆ ಹೊರತು, ಜ್ಞಾತವಾಗಿ ಕಾರಣವಲ್ಲ. ಏಕೆಂದರೆ ಈ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲವೆಂಬ ರುಚಿದತ್ತನ ವಾದದಲ್ಲಿ ಹುರುಳಿಲ್ಲ.

ಆದ್ದರಿಂದ ಪ್ರಮಾಣಪದ್ಧತಿಯಲ್ಲಿ ಹಾಗೂ ಪ್ರಮಾಣಲಕ್ಷಣಟೀಕೆಯಲ್ಲಿ 'ಸನ್ನಿಧಿಃ ಅವಿಲಂಬೇನ ಉಚ್ಚರಿತತ್ವಂ' ಎಂದು ಹೇಳಿರುತ್ತಾರೆ. ಇಲ್ಲಿರುವ 'ಅವಿಲಂಬ' ಎಂಬ ಶಬ್ದಕ್ಕೆ ನಾವು ಹೇಳಿದ ವ್ಯವಧಾನವಿರಬಾರದೆಂದರ್ಥ. ಹಾಗೂ 'ಉಚ್ಚಾರಣ' ಎಂಬ ಶಬ್ದದಿಂದ ವಕ್ತೃವ್ಯಾಪಾರವನ್ನು ವಿವಕ್ಷಿಸಿರುತ್ತಾರೆ. ಆದ್ದರಿಂದ ಈ ಲಕ್ಷಣವು ಅತ್ಯಂತ ನಿರ್ದಿಷ್ಟವಾಗಿದೆ. ಮತ್ತು ತಾರ್ಕಿಕರು ಹೇಳುವ ಲಕ್ಷಣವು ಎಲ್ಲಾ ಬಗೆಯ ದೋಷಗಳಿಂದ ಯುಕ್ತವಾಗಿದೆ.

ಇಲ್ಲಿಗೆ ಆಸತ್ತಿಪ್ರಕರಣದ ಸಾರಾಮೃತವು ಸಮಾಪ್ತವಾಯಿತು

* * * * * *

# तर्कताण्डवम्
# द्वितीयः परिच्छेदः

## ।। अथासत्तिप्रकरणम् ।।

**तर्कताण्डवम्- ननु सन्निधानापरपर्यायासत्तिर्न तावन्मण्युक्तरीत्या अव्यवधानेन पदार्थस्मृतिः । वाक्ये पदार्थस्मृतिरेव नेति वक्ष्यमाणत्वात् ।**

न्यायदीपः- प्रमाणपद्धतावाकाङ्क्षायोग्यतासन्निधिमन्ति पदानि वाक्यमित्युक्तेः सन्निधिनिरूपणं विना आसत्तिनिरूपणमयुक्तमित्यत आह - **सन्निधानापरपर्यायेति** ।।

यद्यपि साक्षादाकाङ्क्षायोग्यतेति निर्देशक्रमेण योग्यतैवाकाङ्क्षोक्त्यनन्तरं निरूपणीया । तथाप्यासत्तिनिरूपणस्याल्पत्वात् सूचीकटाहन्यायेनासत्तेः पूर्वमुक्तिरित्येके ।।

वस्तुतस्तु शाब्दप्रमायामाकाङ्क्षासत्ती एव हेतू न पुनर्योग्यतापीति तयोरेव पूर्वमुक्तिर्युक्ता । अत एव पद्धतावासत्तिस्वरूपोक्त्यनन्तरमेव योग्यता । अतस्तत्क्रममनुसृत्यात्र निरूपणमिति । क्वचिदाकाङ्क्षासन्निधियोग्यतावतां पदानां समूहो वाक्यमिति पद्धत्यनुरोधेन पूर्वनिर्देशात् तथैवास्त्विति यथान्यास एव क्रमः ।।

आसत्तिश्चाव्यवधानेनान्वयप्रतियोग्युपस्थितिः । सा च स्मृतिर्नानुभव इति मण्युक्तं निष्कृष्यानुवदति – **अव्यवधानेन पदार्थस्मृतिरिति** ।। अन्वयविरोधिव्यवधानाभावेनेत्यर्थः ।।

**पदार्थेति** ।। सङ्केतस्मरणवाक्यार्थबोधयोर्मध्ये पदार्थस्मृतिरेव नास्ति कुतोऽव्यवधानत्वं तस्या इत्यर्थः ।।

**वक्ष्यमाणत्वात्** ।। अन्विताभिधानोक्तिवाद इत्यर्थः ।।

**तर्कताण्डवम्- अनासन्ने आसत्तिभ्रमेणान्वयबोधस्थले त्वत्पक्षे पदार्थोपस्थितेर्विशेषणज्ञानत्वेन शाब्दबोधहेतुत्वात् हेतोश्चाव्यवहितत्वनियमेनासत्तेरेव सत्वेनासत्तिभ्रमानुपपत्तेश्च ।**

न्यायदीपः- पक्षधराद्यूहितदोषमाह –**अनासन्नेति** ।। सप्तम्यन्तानामासत्तेरेव सत्वेनेत्यन्वयः । **आसत्तिभ्रमेणेति** ।। अन्वयविरोधिव्यवधानेपि तदभावभ्रमेणेत्यर्थः ।

'गिरिर्भुक्तमग्निमान् देवदत्तेन' इत्यादौ व्यवहितपदोपेततया आसत्तिहीनवाक्ये पदानामव्यवहितत्वभ्रान्त्या पदार्थानामुपस्थितौ 'गिरिरग्निमान् देवदत्तेन भुक्तम्' इत्यन्ववयबोधदर्शनात् तत्र स्थले पदार्थस्मृतेर्व्यवहितत्वस्यावश्यकत्वात् तत्रातिव्याप्तिरिति भावः ।।

**विशेषणज्ञानत्वेनेत्युपलक्षणम्** । पदार्थस्मृतित्वेन हेतुत्वेप्येष दोषः सम एव ।

**तर्कताण्डवम्- पदार्थस्मृतौ सत्यां स्मृतिविषयकज्ञानविलम्बेन शाब्दबोधविलम्बादर्शनेनासत्तिज्ञानस्य हेतुत्वानुपपत्तेश्च । न चेयं स्वरूपसत्येव हेतुः । तद्भ्रमेण शाब्दभ्रमायोगात् ।।**

न्यायदीपः- असम्भवं चास्य(स्ति) लक्षणस्याह – **पदार्थस्मृताविति** ।। **न चेयमिति** ।। आसत्तिरित्यर्थः । अपसिद्धान्ते सत्यपि दोषान्तरमाह – **तद्भ्रमेणेति** ।।

यत्तु अन्वयप्रतियोग्युपस्थितिरासत्तिरन्वयबोधाङ्गं, सा च स्वरूपसती भानाभावात्।

अनुमितौ पक्षसाध्यप्रत्यवत् तद्भ्रमेण शाब्दभ्रमोऽसिद्ध एव । तात्पर्यभ्रमेण योग्यताभ्रमेण वा तदुपपत्तेरिति; तन्न । विशेषणज्ञानत्वेन हेतुत्वोक्तौ शाब्दे साधारण्याभावात् पदार्थस्मृतित्वेन हेतुत्वे च वाक्ये पदार्थस्मृतिरेव नेत्यसम्भवदोषात्,

**तर्कताण्डवम्- किञ्च नानाविशेषणकैकविशेष्यकबोधस्थले विशेषणानामन्योन्यमन्वयायोग्यतया अन्वितान्वयासम्भवेन समूहालम्बना एकैव पदार्थस्मृतिर्वक्तव्या । तथाच तत्र वाक्ये किञ्चित् केनचिद् आसन्नमनासन्नं च केनचिदिति कथं विभागः ।।**

न्यायदीपः- अतिव्याप्त्यसम्भवावुक्त्वाव्याप्तिं चाह– **किञ्चेति ।। नानाविशेषणकेति ।।** दण्डी कुण्डली चैत्र इत्यादौ चैत्रपदेन कुण्डली पदमासन्नं, दण्डीपदमनासन्नमिति विभागोऽस्ति । स न स्यात् ।

पदार्थस्मृतेरेवासत्तित्वे तावत् पदार्थगोचरैकस्मृतेरेव तत्र वाच्यत्वात् क्रमेणोपस्थितौ हि पूर्वस्मृतविशेषेणान्वयानन्तरं चरमस्मृतविशेषणान्वयः स्यात् । न चैवं युक्तम् । विशेषणविशिष्टे विशेषणान्तरान्वये विशेषणयोरप्यन्वयापत्या तदसम्भवात् । विशेष्येणासन्नं विशेषणं स्वासन्नेन विशेषणेन स्वयमन्वितं सत् पश्चात् विशेषेणान्वेतीत्यस्यापि विशेषणयोरप्यन्वयायोगेनासम्भवादित्यर्थः ।।

**तर्कताण्डवम्- किञ्च पद्ये कुलकादौ चातिव्यवहितत्वात् कथमासत्तिः ।**

न्यायदीपः- स्थलान्तरेप्यव्याप्तिमाह – **किञ्च पद्य इति ।।**

**'श्रियःपतिः श्रीमति शासितुं जगज्जगन्निवासो वसुदेवसद्मनि ।**

**वसन्ददर्शावतरन्तमम्बरात्'................. ।।**

इत्यादिश्लोके क्रियाकारकपदानामतिव्यवहितत्वात्तत्र त्वदुक्ताव्यवहितपदार्थस्मृतेरयोगात् ।।

'ततः सपत्नापनयस्मरणानुशयस्फुरा' इत्यादि माघस्थेष्वष्टसु श्लोकेष्वतिव्यवहितत्वात् तत्राव्याप्तिरिति भावः ।

तर्कताण्डवम्- **नाप्यव्यवहितपदोपस्थितिरासत्तिः । व्यवहितपदोपस्थितिक-पद्यादावव्याप्तेः। उक्तरीत्यासत्तिज्ञानस्यहेतुत्वानुपपत्तेश्च ।।**

**नापि पदाव्यवधानमासत्तिः । अव्यवधानं हि पदे लिप्युच्चारणादि-निबन्धनमेव वाच्यम् ।**

न्यायदीपः- पक्षान्तराण्यपि निराह- **नाप्यव्यवहितेति** ।। अव्यवहितपदानामुपस्थितिरित्यर्थः । सा किं स्वरूपसती हेतुरुत ज्ञाता । आद्य आह - **व्यवहितेति** ।। अन्त्य आह - **उक्तरीत्या** इति ।। पदार्थस्मृतावित्यादिनोक्तरीत्येत्यर्थः ।।

तर्कताण्डवम् – **तथाच व्यवहितोच्चारिते लिखिते योजनयाप्यन्वय-बोधो न स्यात् । व्यवधानस्य दृष्टत्वेन योजनयाप्यव्यवधान-बोधाभावाच्च ।।**

न्यायदीपः- पदार्थस्मृतिपदस्थाने पदोपस्थितौ सत्यामिति ज्ञेयम् । लिप्युच्चारणादीत्यादि-

पदेन विरोधिपदानुच्चारणग्रहः । **व्यवहितेति** ।। 'गिरिर्भुक्तमग्निमान् देवदत्तेन' इत्यादावि पदावत्यर्थः **लिप्यनुमितेति** ।। यत्र लिपिदृष्ट्या पदस्यानुमानं तादृशस्थल इत्यर्थः । तथाच तत्राव्याप्तिरिति भावः ।।

**तर्कताण्डवम् – नाप्यव्यवहितत्वेन पदतात्पर्यमासत्तिः । अतात्पर्यक-शुकादिवाक्याव्याप्तेः । अव्यवहिततात्पर्यकं व्यवहितमुच्चारयतो वादिनोऽनासन्नाभिधानरूपार्थकनिग्रहानुपपत्तेश्च ।**

**न्यायदीपः**-वस्तुतोऽव्यवहितत्वेन पदतात्पर्यमासत्तिरिति पर्यवसितेति पक्षधरनिर्धारितपक्षं निराह - **नाप्यव्यवहितत्वेनेति** ।।

व्यवहितपद्ये कुलकादौ च पदानां व्यवधानेनोच्चारणे लेखनेपि चाव्यवहितत्वेन वक्तृतात्पर्यगोचरत्वात् तेषां तत्र नाव्याप्तिरिति भावः ।

**शुकादीति** ।। न च तत्राप्यस्तीश्वरतात्पर्यमिति वाच्यम् । तथासत्यासत्तिभ्रमस्थले तदादायासत्तिसत्वसम्भवे तद्भ्रमानुपपत्तेः ।

दोषान्तरं चाह - **अव्यवहितेति** ।। **अपार्थकमिति** ।। अनन्वितवाचकपदादिप्रयोगोऽपा-र्थकमित्यपार्थकनिग्रहस्थानलक्षणादिति भावः ।।

**तर्कताण्डवम् – 'गिरिर्भुक्तमग्निमान् देवदत्तेन' इत्यनासन्नोदाहरणेऽति-व्याप्तेश्च । तत्राप्यव्यवहिततात्पर्यकत्वसम्भवात् । तस्मादासत्ति-र्दुर्निरूपेति ।।**

**न्यायदीपः** - ननु सर्वथैवानन्वितवाचकपदप्रयोगोऽपार्थकम् । 'कुण्डमजाजिनं दश दाडिमानि

षडपूपाः' इत्यादौ योजनयाप्यन्वयहीनस्थले एव तत् । न तु योजनयाप्यन्वयस्थलेपीति चेत् । तत्राप्यस्तीत्यादिपदान्तरतात्पर्यकत्वसम्भवात् ।

दोषान्तरं चाह - **गिरिरिति ।।**

यदप्यव्यवहितपदार्थोपस्थित्यनुकूलो व्यापार आसत्तिः, स चैकपदानन्तरमपरपदेन तात्पर्यमुच्चारणं वेति पक्षधराभिमतं पक्षान्तरं तदप्यनेनैव निरस्तम् । शुकादिवाक्यादावव्याप्तेः । गिरिरित्यादिवाक्येऽतिव्याप्तेः । वाक्ये पदार्थोपस्थितेरेवाभावस्य वक्ष्यमाणत्वादिति भावेनोपसंहरति - **तस्मादिति ।।**

**तर्कताण्डवम् – उच्यते । पदोपस्थित्यनुकूलवक्तृव्यापारे निष्फलस्यान्वयबोधविरोधिव्यवधानस्याभाव आसत्तिः ।।**

न्यायदीपः-सन्निधिरविलम्बेनोच्चरितत्वमिति पद्धत्याद्युक्तं हृदि कृत्वा आह - **पदेति ।।** पदग्रहणं शब्दमात्रपरम् । तेन प्रकृतिप्रत्यययोरवान्तरवाक्ययोश्चासत्तौ नाव्याप्तिः । पदयोः पदानां चोपस्थितेरनुकूलो यो व्यापारः लिपिः उच्चारणं तात्पर्यं वा तस्मिन्नित्यर्थः । निष्फलान्वयबोधविरोधिव्यवधानशून्यः शब्दोपस्थित्यनुकूलवक्तृव्यापारविषयतासत्तिरित्यर्थः ।

**तर्कताण्डवम् – वक्तृव्यापारत्वं च लिप्युच्चारणाभिप्रायसाधारणमिति न मौनिश्लोकादाव्याप्तिः ।।**

न्यायदीपः- उच्चारणमात्रं वक्तृव्यापारश्चेन्मौनिश्लोकादावव्याप्तिरित्यत आह - **वक्तृिति ।।**

**तर्कताण्डवम् – न च गिरिर्भुक्तमित्यनयोर्मध्ये विरोध्युपस्थित्यभावादेव तयोरासत्तिः स्यादिति वाच्यम् । इष्टापत्तेः । अन्वयाबोधस्त्वाकाङ्क्षाविरहात् ।।**

**न्यायदीपः**-विशिष्टस्यापि लक्षणस्यातिव्याप्तिमाशङ्क्य लक्ष्यत्वोपगमेन समाधिमाह - **न च गिरिरिति** ।

तथात्वे स्यादन्वयबोध इत्यत आह - **अन्वयाबोधस्त्विति** ।।

**तर्कताण्डवम्** – **नापि पद्यकुलकादावव्याप्तिः । तत्रापि मया छन्दोनुरोधायालङ्काररसविशेषयोराधानाय च व्यवधाने कृतेपि श्रोत्रैवं योजयिष्यतीत्यभिप्रायस्य सत्वात् ।**

**न्यायदीपः**- निष्फलस्येति विशेषणमव्याप्तिनिरासायेति भावेनाह - **नापि पद्येति** ।।

**छन्द इति** ।। 'वागर्थाविव संपृक्तौ पार्वतीपरमेश्वरौ वन्दे' इत्युक्ते अनुष्टप्सञ्ज्ञकछन्दो भज्येत अतो व्यवधानम् । एवमन्यत्रापि ।।

**अलङ्कारेति** ।। कुलकालङ्कारेत्यर्थः । **रसेति** ।। श्रृङ्गारवीरकरुणादिरसेषु मध्ये श्रृङ्गारादिरसविशेषलाभायेत्यर्थः । तथाच तत्र निष्फलव्यवधानाभावान्नाव्याप्तिरिति भावः ।।

**तर्कताण्डवम्** – **अपौरुषेयेऽपि वेदेऽस्माकमुक्त ईश्वराभिप्रायोऽस्त्येव ।**

**न्यायदीपः**- वेदवाक्येऽव्याप्तिस्तर्हि स्यादित्यत आह - **अपौरुषेयेति** ।। **उक्त इति** ।। श्रोता एवं योजयिष्यतीत्येवंरूपाभिप्रायोऽस्माकं मते अस्त्येवेत्यर्थः । सेश्वरवादित्वादिति भावः ।।

**तर्कताण्डवम्** – **मीमांसकानामप्यनादौ संसारेऽर्थाभिज्ञाध्यापकस्योक्ताभिप्रायोऽस्त्येव । व्यवधानस्य त्वदृष्टविशेषः फलम् ।।**

**न्यायदीपः**- ननु वेदेऽलङ्कारविशेषरसविशेषयोराधानाभावात्

'सप्तार्धा गर्भा भुवनस्य रेतो विष्णोस्तिष्ठन्ति प्रदिशा विधर्मणि ।'

इत्यादौ निष्फलमेव व्यवधानमिति तत्राव्याप्तिरित्यत आह - **व्यवधानस्य त्विति** ।।

अनादितो व्यवधानेनैव सन्निवेशितपदावल्या तथैवाध्यापनजपाद्यनुष्ठानेऽदृष्टमन्यथा नार्थ इति शुभाशुभप्राप्तिपरिहाररूपादृष्टमेव फलमित्यर्थः ।

**तर्कताण्डवम् – नाप्यनासन्नोदाहरणेऽतिव्याप्तिः । तत्र व्यवधानस्य निष्फलत्वात् ।**

**न्यायदीपः**-निष्फलस्येत्युक्त्या 'गिरिर्भुक्तमग्निमान् देवदत्तेन' इत्यादावतिव्याप्तिश्च निरस्तेत्यत आह - **नाप्यनासन्नेति** ।।

**तर्कताण्डवम् – अत एवाव्यवहिततात्पर्यके वादिवाक्ये नातिव्याप्तिः । श्रुतस्य व्यवहितत्वात् । आभिप्रायकस्य च वादिनोऽनाप्तत्वेनाभिप्रायकल्पनाविरहादेवानुपस्थितेः ।।**

**न्यायदीपः**-अव्यवहिततात्पर्यकमित्यादिनोक्तदोषः स्वपक्षे नेत्याह - **अत एवेति** । -तमेव हेतुं व्यनक्ति -**श्रुतस्येति** ।।

**तर्कताण्डवम् – केचित्तु श्लोककुलकादावासत्त्यभावात् न श्लोकादिकं बोधकम् । किन्तु तदुन्नीतं वाक्यान्तरमेव इत्याहुः ।।**

**न्यायदीपः**- **केचित्त्विति** ।। कल्पनागौरवमस्मिन् पक्षे अस्वारस्यबीजं ध्येयम् ।

**तर्कताण्डवम्** – **इयं चासत्तिर्ज्ञातैव शाब्दधीहेतुः । आसत्तिभ्रमेण शाब्दभ्रमात् । नीलो घटोऽस्ति' इत्यादौ नीलघटपदयोर्मध्येऽनुषङ्ग-पदान्तरोच्चारणावृत्त्यध्याहारादिसन्देहे निश्चये वा वाक्यार्थाबोधाच्च ।।**

**न्यायदीपः**- आसत्तिभ्रमेण शब्दभ्रमे विप्रतिपन्नं प्रत्याह - **नील इति** ।।

अनुषङ्गश्च पदान्तरोच्चारणं चावृत्तिश्चाध्याहारश्चेत्येवमादिसन्देहे नीलघटपदार्थान्वयबोधा-भावेन स्वरूपसदासत्या न हेतुत्वम्, किन्तु ज्ञाताया एव । अन्यथा तादृशस्थलेप्यन्वयबोधः स्यादेव । स्वरूपसत्यास्तस्यास्तत्र सत्वादित्यर्थः ।।

एतेनासत्तिः स्वरूपसती हेतुः, न तु ज्ञाता, मानाभावादिति रुचिदत्तेनोक्तं निरस्तम् ।

**आवृत्तिरस्तिपदस्य** । नीलोऽस्ति घटोऽस्तीति नीलो भवति घटोस्तीति क्रियान्तराध्याहार इत्यादि ध्येयम् ।।

**तर्कताण्डवम्** – **पद्धतौ प्रमाणलक्षणटीकायां च सन्निधिरविलम्बेनो-च्चारितत्वमित्यत्राविलम्बशब्देनास्मदुक्तव्यवधानाभावः उच्चारणशब्देन च वक्तृव्यापारमात्रं विवक्षितमिति ज्ञेयम् ।।**

**न्यायदीपः**- उक्तलक्षणं मूलरूढं दर्शयति– **पद्धताविति** ।। **अस्मदुक्तेति** ।। निष्फलस्ये-त्यादिनास्मदुक्तेत्यर्थः । **वक्तृव्यापारमात्रमिति** ।। लिप्युच्चारणाभिप्रायसाधारणमित्यर्थः ।।

।। इत्यासत्तिनिरूपणम् ।।

# ತರ್ಕತಾಂಡವ ದ್ವಿತೀಯಃ ಪರಿಚ್ಛೇದಃ
# ಆಸತ್ತಿಪ್ರಕರಣ

## ಅವ್ಯವಧಾನೇನ ಪದಾರ್ಥಸ್ಮರಣೆಯು ಆಸತ್ತಿ ಎನಿಸದು

**ತರ್ಕತಾಂಡವ – ನನು ಸನ್ನಿಧಾನಾಪರಪರ್ಯಾಯಾಸತ್ತಿರ್ನ ತಾವನ್ಮಣ್ಯುಕ್ತರೀತ್ಯಾ ಅವ್ಯವಧಾನೇನ ಪದಾರ್ಥಸ್ಮೃತಿಃ । 'ವಾಕ್ಯೇ ಪದಾರ್ಥಸ್ಮೃತಿರೇವ ನ' ಇತಿ ವಕ್ಷ್ಯ-ಮಾಣತ್ವಾತ್ ।**

ಅನುವಾದ - ಸನ್ನಿಧಾನಕ್ಕೆ ಮತ್ತೊಂದು ಪರ್ಯಾಯವಾದ ಆಸತ್ತಿಯ ಲಕ್ಷಣವು ಮಣಿ-ಗ್ರಂಥದಲ್ಲಿ ಹೇಳಿದಂತೆ 'ಅವ್ಯವಧಾನೇನ ಪದಾರ್ಥಸ್ಮೃತಿಃ' ಎಂಬುದಾಗಿ ಅಲ್ಲ. ವಾಕ್ಯದಲ್ಲಿ ಪದಾರ್ಥಸ್ಮೃತಿಯೇ ಇಲ್ಲ ಎಂದು ಮುಂದೆ ಹೇಳುತ್ತೇವೆ.

## ಸನ್ನಿಧಿ ಎಂದರೆ ಆಸಕ್ತಿಯೆ

**ನ್ಯಾಯದೀಪಃ – ಪ್ರಮಾಣಪದ್ಧತೌ 'ಆಕಾಂಕ್ಷಾಯೋಗ್ಯತಾಸನ್ನಿಧಿಮಂತಿ ಪದಾನಿ ವಾಕ್ಯಮ್' ಇತ್ಯುಕ್ತೇಃ ಸನ್ನಿಧಿನಿರೂಪಣಂ ವಿನಾ ಆಸತ್ತಿನಿರೂಪಣಮ್ ಅಯುಕ್ತಮ್, ಇತ್ಯತ ಆಹ – ಸನ್ನಿಧಾನಾಪರಪರ್ಯಾಯೇತಿ ॥**

ಅನುವಾದ - ಪ್ರಮಾಣಪದ್ಧತಿಯಲ್ಲಿ'ಆಕಾಂಕ್ಷಾ-ಯೋಗ್ಯತಾ-ಸನ್ನಿಧಿಮಂತಿ ಪದಾನಿ ವಾಕ್ಯಮ್' ಎಂದು ಹೇಳಿದ್ದಾರೆ. ಆದ್ದರಿಂದ ಸನ್ನಿಧಿಯನ್ನು ನಿರೂಪಣೆ ಮಾಡದೇ ಆಸತ್ತಿಯನ್ನು ನಿರೂಪಣೆ ಮಾಡುವುದು ಯುಕ್ತವಲ್ಲವೆಂಬ ಪ್ರಶ್ನೆಗೆ ಉತ್ತರವಾಗಿ 'ಸನ್ನಿಧಾನಾಪರಪರ್ಯಾಯ' ಎಂಬ ವಾಕ್ಯ ಹೊರಟಿದೆ.

ವಿವರಣೆ - ಪ್ರಶ್ನೆ - ಪ್ರಮಾಣಪದ್ಧತಿಯ ಮೂಲದಲ್ಲಿ ಈ ಪ್ರಕರಣವನ್ನು ನಿರೂಪಿಸುವಾಗ 'ಆಕಾಂಕ್ಷಾ-ಯೋಗ್ಯತಾ-ಸನ್ನಿಧಿಮಂತಿ ಪದಾನಿ ವಾಕ್ಯಮ್' ಎಂದು ಪ್ರಯೋಗ ಮಾಡಿ-

ದ್ದಾರೆ. ಮೊದಲು ಆಕಾಂಕ್ಷೆಯನ್ನು ಹೇಳಿ ಅನಂತರ ಯೋಗ್ಯತಾ ಮತ್ತು ಸನ್ನಿಧಿಗಳನ್ನು ನಿರೂಪಿಸಲಾಗಿದೆ. ಆದ್ದರಿಂದ ಆಸತ್ತಿಯನ್ನು ನಿರೂಪಣೆ ಮಾಡುವ ಮೊದಲು ಸನ್ನಿಧಿಯನ್ನು ನಿರೂಪಣೆ ಮಾಡುವುದು ಯುಕ್ತವಲ್ಲವೇ?

ಉತ್ತರ - ಆಸತ್ತಿ ಹಾಗೂ ಸನ್ನಿಧಿ ಇವೆರಡೂ ಸಹ ಪರ್ಯಾಯಪದಗಳು. ಎರಡು ಶಬ್ದಗಳ ಅರ್ಥವು ಒಂದೇ ಆಗಿದೆ. ಆದ್ದರಿಂದ ಆಸತ್ತಿ ನಿರೂಪಣೆಯನ್ನು ಮಾಡಿದರೆ ಅದು ಕಡೆಯಲ್ಲಿ ಸನ್ನಿಧಿನಿರೂಪಣೆಯಲ್ಲೇ ಪರ್ಯವಸಾನವಾಗುತ್ತದೆ.

## ಆಕಾಂಕ್ಷೆಯ ಅನಂತರ ಯೋಗ್ಯತೆಯನ್ನೇಕೆ ಹೇಳಿಲ್ಲ?

**ನ್ಯಾಯದೀಪ – ''ಯದ್ಯಪಿ ಸಾಕ್ಷಾದ್ 'ಆಕಾಂಕ್ಷಾಯೋಗ್ಯತಾ' ಇತಿ ನಿರ್ದೇಶಕ್ರಮೇಣ ಯೋಗ್ಯತೈವ ಆಕಾಂಕ್ಷೋಕ್ತ್ಯನಂತರಂ ನಿರೂಪಣೀಯಾ । ತಥಾऽಪಿ ಆಸತ್ತಿನಿರೂಪಣಸ್ಯ ಅಲ್ಪತ್ವಾತ್ ಸೂಚೀಕಟಾಹನ್ಯಾಯೇನ ಆಸತ್ತೇಃ ಪೂರ್ವಮುಕ್ತಿಃ'' ಇತ್ಯೇಕೇ ।**

ಅನುವಾದ - ಯದ್ಯಪಿ 'ಆಕಾಂಕ್ಷಾ-ಯೋಗ್ಯತಾ-ಸನ್ನಿಧಿಮಂತಿ ಪದಾನಿ' ಎಂಬ ವಾಕ್ಯನಿರ್ದೇಶಾನುಸಾರವಾಗಿ ಆಕಾಂಕ್ಷೆಯ ನಿರೂಪಣೆಯ ಅನಂತರವೇ ಆಸತ್ತಿಯನ್ನು ನಿರೂಪಣೆ ಮಾಡಬೇಕು.ಆದರೂ ಸಹ ಆಸತ್ತಿ ನಿರೂಪಣೆಯು ಅಲ್ಪವಾದ್ದರಿಂದ ಸೂಚೀಕಟಾಹನ್ಯಾಯದಿಂದ ಆಸತ್ತಿಯನ್ನು ಮೊದಲು ನಿರೂಪಿಸಲಾಗಿದೆ ಎಂದು ಕೆಲವರ ಅಭಿಪ್ರಾಯ.

ವಿವರಣೆ - ಪ್ರಶ್ನೆ - ಪ್ರಮಾಣಪದ್ಧತಿಯಲ್ಲಿ 'ಆಕಾಂಕ್ಷಾ-ಯೋಗ್ಯತಾ ಸನ್ನಿಧಿಮಂತಿ ಪದಾನಿ ವಾಕ್ಯಮ್' ಎಂದು ಹೇಳಿದ್ದಾರೆ. ಈ ವಾಕ್ಯದಲ್ಲಿ ಆಕಾಂಕ್ಷೆಯ ಅನಂತರ ಯೋಗ್ಯತಾಶಬ್ದವು ಇದೆ. ಈ ಹಿಂದೆ ಆಕಾಂಕ್ಷೆಯ ನಿರೂಪಣೆ ಮುಗಿದಿದೆ. ಈಗ ಪ್ರಸಕ್ತವಾಗುವುದು ಯೋಗ್ಯತಾನಿರೂಪಣೆ. ಆದರೆ ಇಲ್ಲಿ ವ್ಯವಹಿತವಾದ ಆಸತ್ತಿಯನ್ನು ನಿರೂಪಿಸುತ್ತಿದ್ದಾರೆ. ಈ ಕ್ರಮವನ್ನು ಏಕೆ ಅನುಸರಿಸಲಾಗಿದೆ?

ಉತ್ತರ - ಆಕಾಂಕ್ಷಾ-ಯೋಗ್ಯತಾ-ಸನ್ನಿಧಿ ಇವುಗಳಲ್ಲಿ ಯೋಗ್ಯತಾಪ್ರಕರಣವು ವಿಸ್ತಾರವಾಗಿದೆ. ಆಸತ್ತಿ= ಸನ್ನಿಧಿಪ್ರಕರಣವು ಯೋಗ್ಯತಾಪ್ರಕರಣಕ್ಕಿಂತ ಅಲ್ಪವಾಗಿದೆ. ಆದ್ದರಿಂದ

ಸೂಚೀಕಟಾಹನ್ಯಾಯವನ್ನು ಅನುಸರಿಸಿ ಸಣ್ಣದಾದ ಸನ್ನಿಧಿಯನ್ನು ಯೋಗ್ಯತಾನಿರೂಪಣೆ-
ಗಿಂತ ಮುಂಚೆ ಮಾಡಲಾಗಿದೆ.

## ಶಾಬ್ದಬೋಧಕ್ಕೆ ಯೋಗ್ಯತೆ ಬೇಡವೇ?

**ನ್ಯಾಯದೀಪ– ವಸ್ತುತಸ್ತು ಶಾಬ್ದಪ್ರಮಾಯಾಮ್ ಆಕಾಂಕ್ಷಾಸತ್ತೀ ಏವ ಹೇತೂ ನ ಪುನರ್ಯೋಗ್ಯತಾऽಪಿ ಇತಿ ತಯೋರೇವ ಪೂರ್ವಮುಕ್ತಿರ್ಯುಕ್ತಾ । ಅತ ಏವ ಪದ್ಧತೌ ಆಸತ್ತಿಸ್ವರೂಪೋಕ್ತ್ಯನಂತರಮೇವ ಯೋಗ್ಯತಾ । ಅತಃ ತತ್ಕ್ರಮಮನುಸೃತ್ಯ ಅತ್ರ ನಿರೂಪಣಮ್ – ಇತಿ । ಕ್ವಚಿದ್ 'ಆಕಾಂಕ್ಷಾಸನ್ನಿಧಿ ಯೋಗ್ಯತಾವತಾಂ ಪದಾನಾಂ ಸಮೂಹೋ ವಾಕ್ಯಮ್' ಇತಿ ಪದ್ಧತ್ಯನುರೋಧೇನ ಪೂರ್ವನಿರ್ದೇಶಾತ್ ತಥೈವಾಸ್ತು ಇತಿ ಯಥಾನ್ಯಾಸ ಏವ ಕ್ರಮಃ ।**

ಅನುವಾದ - ವಾಸ್ತವಿಕವಾಗಿ ಶಾಬ್ದಪ್ರಮಾಕ್ಕೆ ಆಕಾಂಕ್ಷಾ ಮತ್ತು ಆಸತ್ತಿಗಳೇ ಕಾರಣವಾಗಿವೆ. ಯೋಗ್ಯತೆಯು ಅಲ್ಲ ಎಂಬ ಕಾರಣದಿಂದ ಆಕಾಂಕ್ಷಾ ಮತ್ತು ಆಸತ್ತಿಗಳನ್ನೇ ಮೊದಲು ಹೇಳಿದ್ದು ಸೂಕ್ತವಾಗಿದೆ. ಆದ್ದರಿಂದಲೇ ಪದ್ಧತಿಯಲ್ಲಿ ಆಸತ್ತಿಯ ಸ್ವರೂಪವನ್ನು ಹೇಳಿದ ನಂತರವೇ ಯೋಗ್ಯತೆಯನ್ನು ನಿರೂಪಿಸಲಾಗಿದೆ. ಆದ್ದರಿಂದ ಇಲ್ಲಿ ಪ್ರಮಾಣಪದ್ಧತಿಗೆ ಅನುಗುಣವಾಗಿ ಆಕಾಂಕ್ಷೆಯ ಅನಂತರ ಆಸತ್ತಿಯನ್ನೇ ನಿರೂಪಣೆ ಮಾಡಬೇಕು. ಕೆಲವೆಡೆ ಆಕಾಂಕ್ಷಾ, ಸನ್ನಿಧಿ, ಯೋಗ್ಯತೆವುಳ್ಳ ಪದಗಳ ಸಮೂಹವನ್ನೇ ವಾಕ್ಯವೆಂಬ ಪ್ರಮಾಣಪದ್ಧತಿಯ ಮಾತಿಗೆ ಅನುಗುಣವಾಗಿ ಮೊದಲು ನಿರ್ದೇಶ ಮಾಡಿದ ಕ್ರಮದಂತೆ ವಿವಕ್ಷಿಸಲಾಗಿದೆ. ಆದ್ದರಿಂದ ಈ ಕ್ರಮ ಯಥಾಯೋಗ್ಯವಾಗಿದೆ.

## ಮಣಿಗ್ರಂಥದಲ್ಲಿ ಹೇಳಿದ ಆಸತ್ತಿಯ ಲಕ್ಷಣ

**ನ್ಯಾಯದೀಪ – 'ಆಸತ್ತಿಶ್ಚ ಅವ್ಯವಧಾನೇನಾನ್ವಯಪ್ರತಿಯೋಗ್ಯುಪಸ್ಥಿತಿಃ । ಸಾ ಚ ಸ್ಮೃತಿಃ ನಾನುಭವಃ' ಇತಿ ಮಣ್ಯುಕ್ತಂ ನಿಷ್ಕೃಷ್ಯಾನುವದತಿ – ಅವ್ಯವಧಾನೇನ ಪದಾರ್ಥಸ್ಮೃತಿರಿತಿ ॥ 'ಅನ್ವಯವಿರೋಧಿವ್ಯವಧಾನಾಭಾವೇನ' ಇತ್ಯರ್ಥಃ ।**

ಅನುವಾದ - 'ಆಸತ್ತಿ' ಎಂದರೆ 'ಅವ್ಯವಧಾನೇನ ಅನ್ವಯಪ್ರತಿಯೋಗ್ಯುಪಸ್ಥಿತಿಃ'. ಇದು ಸ್ಮೃತಿ-

ರೂಪವಾದದ್ದು, ಅನುಭವರೂಪವಲ್ಲ' ಎಂಬ ಮಣಿಗ್ರಂಥದಲ್ಲಿ ಹೇಳಿದ ಲಕ್ಷಣವನ್ನು ನಿಷ್ಕರ್ಷ ಮಾಡಿ 'ಅವ್ಯವಧಾನೇನ ಪದಾರ್ಥಸ್ಮೃತಿಃ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಅವ್ಯವಧಾನೇನ' ಎಂಬ ಶಬ್ದಕ್ಕೆ 'ಅನ್ವಯವಿರೋಧಿಯಾದ ವ್ಯವಧಾನವಿಲ್ಲದೇ' ಎಂದರ್ಥ

## ಪದಾರ್ಥಸ್ಮೃತಿಯಲ್ಲಿ ಅವ್ಯವಧಾನದ ಅಪೇಕ್ಷೆ ಏಕೆ ?

**ನ್ಯಾಯದೀಪ– ಪದಾರ್ಥೇತಿ ॥ ಸಂಕೇತಸ್ಮರಣವಾಕ್ಯಾರ್ಥಬೋಧಯೋ-ರ್ಮಧ್ಯೇ ಪದಾರ್ಥಸ್ಮೃತಿರೇವ ನಾಸ್ತಿ , ಕುತೋಽವ್ಯವಧಾನತ್ವಂ ತಸ್ಯಾ ಇತ್ಯರ್ಥಃ।**

ಅನುವಾದ - ಸಂಕೇತಸ್ಮರಣ ಮತ್ತು ವಾಕ್ಯಾರ್ಥ ಬೋಧಗಳ ಮಧ್ಯದಲ್ಲಿ ಪದಾರ್ಥಸ್ಮೃತಿಯೇ ಇಲ್ಲ. ಪ್ರತ್ಯೇಕವಾಗಿ ಪದಾರ್ಥಸ್ಮೃತಿಯು ಇಲ್ಲದಿರುವಾಗ ಆ ಪದಾರ್ಥಸ್ಮೃತಿಯು ಅವ್ಯವಧಾನವಾಗಿ-ರಬೇಕು ಎಂಬುದನ್ನು ಏಕೆ ಹೇಳಬೇಕು?

**ನ್ಯಾಯದೀಪ – ವಕ್ಷ್ಯಮಾಣತ್ವಾತ್ । 'ಅನ್ವಿತಾಭಿಧಾನೋಕ್ತಿವಾದೇ' ಇತ್ಯರ್ಥಃ।**

ಅನುವಾದ - 'ವಕ್ಷ್ಯಮಾಣತ್ವಾತ್' ಎಂದರೆ ಮುಂದೆ ಅನ್ವಿತಾಭಿಧಾನವಾದದಲ್ಲಿ ಪದಾರ್ಥ-ಸ್ಮೃತಿಯು ಬೇಡ ಎಂದು ವಿವರಿಸುತ್ತೇವೆ ಎಂದರ್ಥ.

ವಿವರಣೆ: ಒಂದು ಶಬ್ದದಿಂದ ಅರ್ಥಜ್ಞಾನ ಬರುವ ಮಧ್ಯದಲ್ಲಿ ಸಂಕೇತ ಎಂದರೆ 'ಅಸ್ಯ ಶಬ್ದಸ್ಯ ಅಯಂ ಅರ್ಥಃ ಇತಿ ಈಶ್ವರೇಚ್ಛಾ' 'ಈ ಶಬ್ದಕ್ಕೆ ಈ ಪದಾರ್ಥದಲ್ಲಿ ತಾತ್ಪರ್ಯ-ವಿದೆ ಎಂಬ ಈಶ್ವರನ ಇಚ್ಛೆ' ಇದೇ ಸಂಕೇತ. ಇಂತಹ ಸಂಕೇತ ಬಂದು ಇದಾದ ನಂತರ ವಾಕ್ಯಾರ್ಥಜ್ಞಾನ ಬರುತ್ತದೆಂಬುದು ನಮ್ಮ ಸಿದ್ಧಾಂತ. ಮಣಿಕಾರನ ಮತದಂತೆ ಮೊದಲು ಶಬ್ದಶ್ರವಣ, ಶಬ್ದಶ್ರವಣದಿಂದ ಪದಾರ್ಥದ ಸ್ಮೃತಿ ಬಂದು ಆ ಪದಾರ್ಥಸ್ಮೃತಿಯಿಂದ ವಾಕ್ಯಾರ್ಥ ಬರುತ್ತದೆ. ಹೀಗೆ ಶಬ್ದಶ್ರವಣಕ್ಕೂ ವಾಕ್ಯಾರ್ಥಕ್ಕೂ ಮಧ್ಯದಲ್ಲಿ ಪ್ರತ್ಯೇಕವಾಗಿ ಪದಾರ್ಥದ ಸ್ಮರಣೆಯನ್ನು ಹೇಳುತ್ತಾನೆ. ಆದರೆ ನಮ್ಮ ಸಿದ್ಧಾಂತದಂತೆ ಸಂಕೇತವನ್ನು ಹೇಳಿದಾಗ ಅಲ್ಲಿ ವಾಚ್ಯವಾಚಕಭಾವದಿಂದ ಪದಾರ್ಥದ ಉಪಸ್ಥಿತಿಯು ಆಗುತ್ತದೆ. ಶಬ್ದ ಶ್ರವಣ, ಸಂಕೇತ, ಪದಾರ್ಥಸ್ಮೃತಿ, ವಾಕ್ಯಾರ್ಥಜ್ಞಾನ ಈ ನಾಲ್ಕನ್ನು ಹೇಳುವುದು ಮಣಿಕಾರನ ಸಿದ್ಧಾಂತ.

ನಮ್ಮ ಸಿದ್ಧಾಂತದ ಪ್ರಕಾರ ಹೀಗೆ ತಿಳಿಯಬೇಕು - ಶಬ್ದಶ್ರವಣ, ಸಂಕೇತ, ವಾಕ್ಯಾರ್ಥ-ಬೋಧ ಈ ಕ್ರಮದಲ್ಲಿ ಶಾಬ್ದಬೋಧವು ಬರುತ್ತದೆ. ಸಂಕೇತದಿಂದ ಪದಾರ್ಥದ ಉಪ-ಸ್ಥಿತಿಯು ಬರುತ್ತದೆ. ಅಭಿಪ್ರಾಯವೇನೆಂದರೆ - ಈ ಶಬ್ದಕ್ಕೆ ಈ ಅರ್ಥದಲ್ಲಿ ತಾತ್ಪರ್ಯವಿದೆ ಎಂದು ತಿಳಿದಾಗ ಆ ಶಬ್ದದಿಂದ ಪದಾರ್ಥದ ಸ್ಮರಣೆಯು ಬರುತ್ತದೆ.

ಶಾಬ್ದಬೋಧ ಬರುವ ಮೊದಲು ಸಂಕೇತ. ಈ ಸಂಕೇತದ ನಂತರ ಪ್ರತ್ಯೇಕವಾಗಿ ಪದಾರ್ಥಸ್ಮರಣೆಯು ಬರುತ್ತದೆ. ಪದಾರ್ಥಸ್ಮರಣೆಯ ನಂತರ ವಾಕ್ಯಾರ್ಥದ ಜ್ಞಾನವು ಬರುತ್ತದೆ. ಆದರೆ ಹೀಗೆ ಒಪ್ಪಿದಾಗ ಗೌರವದೋಷವು ಪ್ರಾಪ್ತವಾಗುತ್ತದೆ. ಸಂಕೇತವನ್ನು ಮಾಡಿದಾಗಲೇ ಮನಸ್ಸಿನಲ್ಲಿ ಪದಾರ್ಥಸ್ಮರಣೆಯು ಉಂಟಾಗುವುದರಿಂದ ಪದಾರ್ಥ-ಸ್ಮರಣೆಯನ್ನು ಪ್ರತ್ಯೇಕವಾಗಿ ಒಪ್ಪದೇ ಸಂಕೇತಸ್ಮರಣೆಯನ್ನು ಒಪ್ಪಿ ಇದರಿಂದ ವಾಕ್ಯಾರ್ಥ ಬೋಧವು ಬರುತ್ತದೆ ಎಂದು ಹೇಳುವುದೇ ಸಾಧುವಾಗಿದೆ.

ಹೀಗೆ ಅಂಗೀಕಾರ ಮಾಡಿದಲ್ಲಿ ಲಾಘವವಿದೆ. ಆದ್ದರಿಂದ ಪ್ರತ್ಯೇಕವಾಗಿ ಪದಾರ್ಥಸ್ಮೃತಿ-ಯನ್ನು ಅಂಗೀಕಾರ ಮಾಡುವುದು ಯೋಗ್ಯವಲ್ಲ ಎಂಬುದು ಗ್ರಂಥಕಾರರ ಆಶಯ.

## ಆಸತ್ತಿಭ್ರಮೆಯೇ ಅನುಪಪನ್ನವಾಗುತ್ತದೆ

**ತರ್ಕತಾಂಡವ– ಅನಾಸನ್ನೇ ಆಸತ್ತಿಭ್ರಮೇಣ ಅನ್ವಯಬೋಧಸ್ಥಳೇ ತ್ವತ್ಪಕ್ಷೇ ಪದಾರ್ಥೋಪಸ್ಥಿತೇಃ ವಿಶೇಷಣಜ್ಞಾನತ್ವೇನ ಶಾಬ್ದಬೋಧಹೇತುತ್ವಾತ್ । ಹೇತೋಶ್ಚ ಅವ್ಯವಹಿತತ್ವನಿಯಮೇನ ಆಸತ್ತೇರೇವ ಸತ್ತ್ವೇನ ಆಸತ್ತಿಭ್ರಮಾನುಪಪತ್ತೇಶ್ಚ ।**

ಅನುವಾದ - ಆಸತ್ತಿ ಇಲ್ಲದೇ ಇರುವ ಸ್ಥಳದಲ್ಲಿ ಮತ್ತು ಆಸತ್ತಿ ರಹಿತವಾದ ವಾಕ್ಯದಲ್ಲಿ ಆಸತ್ತಿ ಇದೆ ಎಂಬ ಭ್ರಮದಿಂದ ಅನ್ವಯಬೋಧ ಬರುವ ಸ್ಥಳದಲ್ಲಿ ನಿನ್ನ ಪಕ್ಷದಂತೆ ಆಸತ್ತಿ-ಭ್ರಮೆಯನ್ನು ಹೇಳಲು ಸಾಧ್ಯವಿಲ್ಲ. ಪದಾರ್ಥೋಪಸ್ಥಿತಿಯು ವಿಶೇಷಣಜ್ಞಾನತ್ವೇನ ಕಾರಣ ಎಂದು ಹೇಳುವುದರಿಂದ, ಹೇತುವು ಅವ್ಯವಹಿತಪೂರ್ವವೃತ್ತಿಯಾಗಿರಬೇಕು ಎಂಬ ನಿಯಮ-

ವಿರುವುದರಿಂದ ಈ ಸ್ಥಳಗಳಲ್ಲಿ ಆಸತ್ತಿಯೇ ಇರುವುದರಿಂದ ಆಸತ್ತಿಭ್ರಮೆಯನ್ನು ಕೂಡಿಸಲು ಸಾಧ್ಯವಿಲ್ಲ.

## ಆಸತ್ತಿಲಕ್ಷಣಕ್ಕೆ ಪಕ್ಷಧರನು ಊಹೆ ಮಾಡಿದ ದೋಷ

**ನ್ಯಾಯದೀಪ – ಪಕ್ಷಧರಾದ್ಯೂಹಿತದೋಷಮಾಹ – ಅನಾಸನ್ನೇತಿ ॥**
**ಸಪ್ತಮ್ಯಂತಾನಾಮ್ ಆಸತ್ತೇರೇವ ಸತ್ತ್ವೇನ ಇತ್ಯನ್ವಯಃ । ಆಸತ್ತಿಭ್ರಮೇಣೇತಿ ॥**
**'ಅನ್ವಯವಿರೋಧಿವ್ಯವಧಾನೇಽಪಿ ತದಭಾವಭ್ರಮೇಣ' ಇತ್ಯರ್ಥಃ ।**

ಅನುವಾದ - ಪಕ್ಷಧರಾದಿಗಳಿಂದ ಊಹೆ ಮಾಡಲ್ಪಟ್ಟ ದೋಷವನ್ನು 'ಅನಾಸನ್ನೇ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಸಪ್ತಮೀವಿಭಕ್ತ್ಯಂತವಾದ 'ಅನಾಸನ್ನೇ' 'ಆಸತ್ತಿಭ್ರಮೇಣ ಅನ್ವಯಬೋಧಸ್ಥಳೇ' ಮುಂತಾದ ಶಬ್ದಗಳಿಗೆ ಅದೇ ವಾಕ್ಯದಲ್ಲಿ ಮುಂದೆ ಬರುವ 'ಆಸತ್ತೇರೇವ ಸತ್ತ್ವೇನ' ಎಂಬಲ್ಲಿ ಅನ್ವಯವನ್ನು ಮಾಡಿಕೊಳ್ಳಬೇಕು. 'ಆಸತ್ತಿಭ್ರಮೇಣ' ಎಂದರೆ ಅನ್ವಯವಿರೋಧಿಯಾದ ವ್ಯವಧಾನ ಇದ್ದರೂ ಸಹ ಅನ್ವಯವಿರೋಧಿವ್ಯವಧಾನ ಇಲ್ಲವೆಂಬ ಭ್ರಮದಿಂದ ಎಂದರ್ಥ.

> ವಿವರಣೆ - ಮಣಿಕಾರ ತನ್ನ ಗ್ರಂಥದಲ್ಲಿ ಆಸತ್ತಿಶಬ್ದವನ್ನು ವಿವರಿಸುವಾಗ ಅದರ ಲಕ್ಷಣವನ್ನು ಹೀಗೆ ಹೇಳುತ್ತಾನೆ. 'ಆಸತ್ತಿಃ ಅವ್ಯವಧಾನೇನ ಅನ್ವಯಪ್ರತಿಯೋಗ್ಯುಪಸ್ಥಿತಿಃ ಸಾ ಚ ಸ್ಮೃತಿಃ ನಾನುಭವಃ' ಎಂಬುದಾಗಿ. ಈ ಲಕ್ಷಣವನ್ನು ನಿರಾಕರಣೆ ಮಾಡಿ 'ಅವ್ಯವಧಾನೇನ ಪದಾರ್ಥಸ್ಮೃತಿಃ' ಎಂಬುದಾಗಿ ಅನುವಾದ ಮಾಡುತ್ತಾರೆ.
>
> ಮೂಲದಲ್ಲಿ 'ಅವ್ಯವಧಾನೇನ ಪದಾರ್ಥಸ್ಮೃತಿಃ' ಎಂದು ಹೇಳಲಾಗಿದೆ. ಇದು ಮಣಿಕಾರನ ಗ್ರಂಥದ ಅಭಿಪ್ರಾಯದ ಅನುವಾದ.
>
> ಮಣಿಕಾರ ಆಸತ್ತಿಯ ಲಕ್ಷಣವನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ. ಆಸತ್ತಿ ಎಂದರೆ ಶಬ್ದಪ್ರಯೋಗ ಮಾಡಿದಾಗ ಯಾವ ವ್ಯವಧಾನವೂ ಇಲ್ಲದೆ ಅನ್ವಯ ಪ್ರತಿಯೋಗಿಯ ಉಪಸ್ಥಿತಿಯು ಬರುತ್ತದೆ. ಇದು ಸ್ಮರಣೆಯೇ ಹೊರತು ಅನುಭವವೇ ಅಲ್ಲ ಎಂಬುದು ಅವನ ಸಿದ್ಧಾಂತ.

ನೈಯಾಯಿಕರು ಪದಶ್ರವಣಕ್ಕೂ ಶಾಸ್ತ್ರಾಭ್ಯಾಸಜ್ಞಾನಕ್ಕೂ ಮಧ್ಯದಲ್ಲಿ ಪದಾರ್ಥಸ್ಮರಣೆ-ಯನ್ನು ಒಪ್ಪುತ್ತಾರೆ. ದ್ವೈತಿಗಳಾದ ನಾವು ಶಬ್ದಶ್ರವಣಕ್ಕೂ ಮತ್ತು ಶಾಸ್ತ್ರಾರ್ಥಬೋಧಕ್ಕೂ ಮಧ್ಯದಲ್ಲಿ ಪ್ರತ್ಯೇಕವಾದ ಪದಾರ್ಥ ಸ್ಮರಣೆಯನ್ನು ಹೇಳುವುದಿಲ್ಲ. ಶಬ್ದಗಳಿಗೆ ಪದಾರ್ಥ ಜ್ಞಾಪನದಲ್ಲಿ ಶಕ್ತಿಯನ್ನು ಹೇಳಿ ಶಕ್ತಿಪ್ರತೀತಿಯಿಂದ ಶಾಬ್ದಬೋಧ ಬರುತ್ತದೆಂದು ಅಂಗೀ-ಕರಿಸುತ್ತೇವೆ.

ಪದಾರ್ಥದ ಉಪಸ್ಥಿತಿಯು ಬರುವುದು ಹೇಗೆ ? ಎಂದರೆ ವಕ್ತೃವು ಪದಪ್ರಯೋಗ ಮಾಡಿದಾಗ ಅದರಿಂದ ಅನ್ವಯಬೋಧ ಬರುವ ಮಧ್ಯದಲ್ಲಿ ವ್ಯವಧಾನ ಇರಬಾರದು. ಈ ಕಾರಣಕ್ಕಾಗಿ 'ಅವ್ಯವಧಾನೇನ' ಎಂಬ ಶಬ್ದವನ್ನು ಮಣಿಕಾರನ ಗ್ರಂಥದಲ್ಲಿ ಪ್ರಯೋಗಿಸಲಾಗಿದೆ. ಶಬ್ದದಿಂದ ಪದಾರ್ಥದ ಉಪಸ್ಥಿತಿ ಬರುವಾಗ ಶಬ್ದಗಳನ್ನು ಕಾಲವ್ಯವಧಾನ ಇಲ್ಲದೆ ಉಚ್ಚಾರಣೆ ಮಾಡಿರಬೇಕು. ಕಾಲವ್ಯವಧಾನ ಇದ್ದ ಪಕ್ಷದಲ್ಲಿ ಆ ಶಬ್ದಗಳಿಂದ ಅನ್ವಯದ ಉಪಸ್ಥಿತಿಯು ಬರುವುದಿಲ್ಲ.

ಉದಾಹರಣೆ - 'ಗಾಂ' ಎಂಬ ಪದವನ್ನು ಹೇಳಿ ಒಂದು ಗಂಟೆಯ ನಂತರ 'ಆನಯ' ಎಂಬ ಶಬ್ದವನ್ನು ಪ್ರಯೋಗ ಮಾಡಿದರೆ 'ಗೋ' ಶಬ್ದಕ್ಕೂ ಆನಯನಕ್ರಿಯೆಗೂ ಅನ್ವಯವೇ ಸಿಗುವುದಿಲ್ಲ. ಹೀಗೆ ಗಂಟೆ ಗಂಟೆಗೆ ಒಮ್ಮೆ ಉಚ್ಚಾರಣೆ ಮಾಡತಕ್ಕ ವಾಕ್ಯ-ಗಳಲ್ಲಿ ವ್ಯವಧಾನ ಇರುವ ಕಾರಣ ಇಂತಹ ವಾಕ್ಯದಿಂದ ಅನ್ವಯಬೋಧ ಬರುವುದಿಲ್ಲ. ಕಾಲವ್ಯವಧಾನವಿಲ್ಲದೇ ಶಬ್ದಪ್ರಯೋಗದ ಅನಂತರ ಬರುವ ಅನ್ವಯಪ್ರತಿಯೋಗಿಯ ಉಪಸ್ಥಿತಿಯೇ ಆಸತ್ತಿ. ಈ ಆಸತ್ತಿಯು ಪದಾರ್ಥಗಳ ಸ್ಮರಣರೂಪವಾದದ್ದು ಹೊರತು, ಇದು ಪ್ರತ್ಯೇಕವಾಗಿ ಅನುಭವವಲ್ಲ. ಇದು ಮಣಿಕಾರನ ಸಿದ್ಧಾಂತ. ಈ ಸಿದ್ಧಾಂತವನ್ನು ಸಂಪೂರ್ಣವಾಗಿ ವಿವರಿಸಿ ಆ ವಾಕ್ಯಗಳನ್ನು ಸಂಗ್ರಹಿಸಿ ಗ್ರಂಥಕಾರರು 'ಅವ್ಯವಧಾನೇನ ಪದಾರ್ಥಸ್ಮೃತಿಃ' ಎಂದು ನಿರೂಪಿಸಿದ್ದಾರೆ.

## ತಾರ್ಕಿಕರ ಲಕ್ಷಣಕ್ಕೆ ಅತಿವ್ಯಾಪ್ತಿ

**ನ್ಯಾಯದೀಪ – 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಇತ್ಯಾದೌ ವ್ಯವ-ಹಿತಪದೋಪೇತತಯಾ ಆಸತ್ತಿಹೀನವಾಕ್ಯೇ ಪದಾನಾಮ್ ಅವ್ಯವಹಿತತ್ವಭ್ರಾಂತ್ಯಾ**

**ಪದಾರ್ಥಾನಾಮುಪಸ್ಥಿತೌ 'ಗಿರಿರಗ್ನಿಮಾನ್ ದೇವದತ್ತೇನ ಭುಕ್ತಮ್' ಇತ್ಯನ್ವಯ-ಬೋಧದರ್ಶನಾತ್ ತತ್ರ ಸ್ಥಳೇ ಪದಾರ್ಥೇ ಸ್ಮೃತೇರ್ವ್ಯವಹಿತತ್ವಸ್ಯ ಆವಶ್ಯಕತ್ವಾತ್ ತತ್ರ ಅತಿವ್ಯಾಪ್ತಿರಿತಿ ಭಾವಃ ।**

ಅನುವಾದ - ವ್ಯವಹಿತವಾದ ಪದಗಳಿಂದ ಕೂಡಿದ 'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತೇನ' ಮುಂತಾದ ಆಸತ್ತಿರಹಿತವಾದ ಸ್ಥಳಗಳಲ್ಲಿ 'ಪದಗಳಿಗೆ ವ್ಯವಧಾನ ಇಲ್ಲ' ಎಂಬ ಭ್ರಾಂತಿಯಿಂದ ಪದಾರ್ಥದ ಉಪಸ್ಥಿತಿ ಬರುತ್ತದೆ. ಆಗ 'ಗಿರಿಃ ಅಗ್ನಿಮಾನ್' 'ದೇವದತ್ತೇನ ಭುಕ್ತಂ' ಎಂಬುದಾಗಿ ಅಲ್ಲಿ ಅನ್ವಯಬೋಧವು ಬರುವುದು ಕಂಡಿದೆ. ಇಂತಹ ಆಸತ್ತಿಶೂನ್ಯಸ್ಥಳದಲ್ಲಿ ಪದಾರ್ಥಸ್ಮೃತಿಯು ವ್ಯವಹಿತ-ವಾಗಿರುವುದರಿಂದ ಇಲ್ಲಿ ಅತಿವ್ಯಾಪ್ತಿ ಬರುತ್ತದೆ ಎಂದು ಅಭಿಪ್ರಾಯ.

**ನ್ಯಾಯದೀಪ – 'ವಿಶೇಷಣಜ್ಞಾನತ್ವೇನ' ಇತ್ಯುಪಲಕ್ಷಣಮ್ । ಪದಾರ್ಥ-ಸ್ಮೃತಿತ್ವೇನ ಹೇತುತ್ವೇಽಪಿ ಏಷ ದೋಷಃ ಸಮ ಏವ ।**

ಅನುವಾದ - 'ವಿಶೇಣಜ್ಞಾನತ್ವೇನ' ಎಂಬುದು ಉಪಲಕ್ಷಣ. 'ಪದಾರ್ಥಸ್ಮೃತಿತ್ವೇನ ಕಾರಣ' ಎಂಬ ಪಕ್ಷದಲ್ಲೂ ಸಹ ಈ ದೋಷವು ಸಮಾನವಾಗಿದೆ.

## ಆಸತ್ತಿಯು ಬೋಧಕ್ಕೆ ಕಾರಣವಾಗದೇ ಇರಬೇಕಾದೀತು

**ತರ್ಕತಾಂಡವ – ಪದಾರ್ಥಸ್ಮೃತೌ ಸತ್ಯಾಂ ಸ್ಮೃತಿವಿಷಯಕಜ್ಞಾನವಿಲಂಬೇನ ಶಾಬ್ದ-ಬೋಧವಿಲಂಬಾದರ್ಶನೇನ ಆಸತ್ತಿಜ್ಞಾನಸ್ಯ ಹೇತುತ್ವಾನುಪಪತ್ತೇಶ್ಚ । ನ ಚೇಯಂ ಸ್ವರೂಪಸತ್ಯೇವ ಹೇತುಃ । ತದ್‌ಭ್ರಮೇಣ ಶಾಬ್ದಭ್ರಮಾಯೋಗಾತ್ ।**

ಅನುವಾದ- ಪದಾರ್ಥದ ಸ್ಮರಣೆಯು ಬಂದಾಗ ಸ್ಮರಣವಿಷಯಕವಾದ ಜ್ಞಾನವು ವಿಲಂಬವಾಗಿ ಬಂದು ಅದರಿಂದ ಶಾಬ್ದಬೋಧವು ವಿಲಂಬವಾಗಿ ಬರುತ್ತದೆಂಬುದಾಗಿ ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಆಸತ್ತಿಜ್ಞಾನವು ಶಾಬ್ದಬೋಧಕ್ಕೆ ಕಾರಣವಾಗುವುದಿಲ್ಲ.

ಆಸತ್ತಿಯು ಇದ್ದಮಾತ್ರದಿಂದಲೇ ಶಾಬ್ದಬೋಧಕ್ಕೆ ಕಾರಣವಾಗುವುದಿಲ್ಲ. ಹೀಗೆ ಹೇಳಿದರೆ ಆಸತ್ತಿ-ಭ್ರಮದಿಂದ ಶಾಬ್ದಬೋಧಭ್ರಮೆಯೇ ಬಾರದೇ ಹೋಗಬೇಕಾದೀತು.

## ತಾರ್ಕಿರ ಲಕ್ಷಣಕ್ಕೆ ಅಸಂಭವದೋಷ

**ನ್ಯಾಯದೀಪ – ಅಸಂಭವಂ ಚಾಸ್ಯ(ಸ್ತಿ) ಲಕ್ಷಣಸ್ಯಾಹ – ಪದಾರ್ಥಸ್ಮೃತೌ ಇತಿ ॥ ನ ಚೇಯಮಿತಿ ॥ 'ಆಸತ್ತಿಃ' ಇತ್ಯರ್ಥಃ । ಅಪಸಿದ್ಧಾಂತೇ ಸತ್ಯಪಿ ದೋಷಾಂತರಮಾಹ – ತದ್‌ಭ್ರಮೇಣೇತಿ ॥**

ಅನುವಾದ - ಆಸತ್ತಿಲಕ್ಷಣಕ್ಕೆ ಅಸಂಭವದೋಷವನ್ನೂ ಸಹ 'ಪದಾರ್ಥಸ್ಮೃತೌ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ನಚೇಯಂ' ಎಂಬಲ್ಲಿ 'ಇಯಂ' ಎಂದರೆ ಆಸತ್ತಿ ಎಂದರ್ಥ. ಅಪಸಿದ್ಧಾಂತರೂಪವಾದ ಒಂದು ದೋಷ ಇದ್ದರೂ ಸಹ ಮತ್ತೊಂದು ದೋಷವನ್ನು 'ತದ್-ಭ್ರಮೇಣ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

ವಿವರಣೆ - ಪ್ರಶ್ನೆ - ಪದಾರ್ಥಸ್ಮೃತಿ ಬಂದರೆ ಶಾಬ್ದಬೋಧ ಬರುತ್ತದೆ. ಪದಾರ್ಥಸ್ಮೃತಿ ಇಲ್ಲವೆಂದರೆ ಶಾಬ್ದಬೋಧ ಬರುವುದಿಲ್ಲ. ಹೀಗೆ ಅನ್ವಯವ್ಯತಿರೇಕಗಳಿಂದ ಪದಾರ್ಥ-ಸ್ಮೃತಿಗೂ ಶಾಬ್ದಬೋಧಕ್ಕೂ ಕಾರ್ಯಕಾರಣಭಾವ ತಿಳಿಯುತ್ತದೆ. ಹೀಗಿದ್ದಾಗ ಪದಾರ್ಥ-ಸ್ಮೃತಿಯನ್ನು ಶಾಬ್ದಬೋಧಕ್ಕೆ ಕಾರಣ ಅಲ್ಲ ಅಂತ ಹೇಳುವುದು ಹೇಗೆ?

ಉತ್ತರ - ದ್ವೈತಸಿದ್ಧಾಂತದಂತೆ ಪದಾರ್ಥಸ್ಮೃತಿಯು ಬಂದಾಗ ಅಲ್ಲಿ ಸ್ಮರಣೆಗೆ ಸಂಬಂಧ-ಪಟ್ಟ ಜ್ಞಾನವು ಬರುತ್ತದೆಯಾದ್ದರಿಂದ, ಅನಂತರ ಶಾಬ್ದಬೋಧವು ಬರದೇ ಇರುವುದಕ್ಕೆ ಕಾರಣವೇ ಇಲ್ಲ. ಆದ್ದರಿಂದ ಪದಾರ್ಥಸ್ಮೃತಿ ಬಂದು ಶಾಬ್ದಬೋಧ ಬರುವುದಿಲ್ಲ ಎಂಬು-ದಾಗಿ ಹೇಳಿದರೆ ಅಲ್ಲಿ ಆ ಸಂಬಂಧಜ್ಞಾನವೇ ಹೇತುವೆಂಬುದಾಗಿ ಹೇಳಲು ಸಾಧ್ಯವೇ ಆಗುವುದಿಲ್ಲ.

ಮಣಿಕಾರನ ಮತದಂತೆ ಪದಾರ್ಥಸ್ಮೃತಿ ಬಂದರೂ ಸಹ ಆಸತ್ತಿಭ್ರಮ ಇರುವುದರಿಂದ ಆಸತ್ತಿಭ್ರಮದಿಂದ ಅನ್ವಯಬೋಧ ಬರುವುದಿಲ್ಲ ಎಂದು ಹೇಳಿದರೆ ಅಸಂಭವರೂಪ ದೋಷ ಬರುತ್ತದೆ.

ಏಕೆಂದರೆ ಸ್ಮೃತಿಯು ಬರುತ್ತದೆ. ಸ್ಮರಣೆ ಬಂದರೂ ಶಾಬ್ದಬೋಧ ಬರುವುದಿಲ್ಲ. ಹೀಗೆ ಹೇಳಿದಾಗ ಒಂದು ಕಡೆ ಸ್ಮರಣೆಗೂ ಶಾಬ್ದಬೋಧಕ್ಕೂ ಕಾರ್ಯಕಾರಣಭಾವವನ್ನು ಹೇಳುವುದು. ಆಸತ್ತಿಭ್ರಮ ಸ್ಥಳವನ್ನು ಹೇಳಿ ಅಲ್ಲಿ ಕಾರ್ಯಕಾರಣಭ್ರಮವನ್ನು ನಿರಾಕರಣೆ ಮಾಡುವುದು. ಹೀಗೆ ಹೇಳಿದಾಗ ಅವರ ಮತದಂತೆ ದೋಷ ಬರುತ್ತದೆ.

ಆದ್ದರಿಂದ ದ್ವೈತಸಿದ್ಧಾಂತದಂತೆ ಸ್ಮೃತಿ ಹಾಗೂ ಶಾಬ್ದಬೋಧ ಇವುಗಳಿಗೆ ಕಾರ್ಯ-ಕಾರಣಭಾವವು ಇದೆ. ಅಲ್ಲಿಯೇ ಆಸತ್ತಿಯೂ ಇದೆ. ಇಬ್ಬರ ಮತದಲ್ಲೂ ಆಸತ್ತಿಭ್ರಮ-ವನ್ನು ಅಂಗೀಕಾರ ಮಾಡಿದರೂ ಸಹ ಎಲ್ಲಿ ಆಸತ್ತಿಭ್ರಮ ಇದೆ ಎಂದು ಮಣಿಕಾರನ ಅಭಿಪ್ರಾಯವಿದೆಯೋ ಅಂತಹ ಸ್ಥಳದಲ್ಲೂ ಆಸತ್ತಿಜ್ಞಾನವು ನಮ್ಮ ಮತದಂತೆ ಇದೆ ಆದ್ದರಿಂದ ಆಸತ್ತಿಭ್ರಮ ಇರುವ ಸ್ಥಳವೇ ಇಲ್ಲ. ಆದ್ದರಿಂದ 'ಅವ್ಯವಧಾನೇನ ಪದಾರ್ಥ-ಸ್ಮೃತಿಃ' ಎಂಬ ಈ ಲಕ್ಷಣಕ್ಕೆ ಯಾವ ದೃಷ್ಟಾಂತವನ್ನು ಸಹ ತೋರಿಸಲು ಸಾಧ್ಯವಿಲ್ಲ. ಆದ್ದರಿಂದ ಈ ಲಕ್ಷಣವು ಅಸಂಭವಿ ಆಗುತ್ತದೆ. ಇದರ ಜೊತೆಗೆ ಅಪಸಿದ್ಧಾಂತವನ್ನು ಅಂಗೀಕಾರ ಮಾಡಿದರೂ ಸಹ ಮತ್ತೊಂದು ದೋಷ ಬರುತ್ತದೆ.

ಅಸಂಭವ ಮತ್ತು ಅತಿವ್ಯಾಪ್ತಿ ದೋಷಗಳನ್ನು ಪರಿಹಾರ ಮಾಡುವುದಕ್ಕೋಸ್ಕರ ಮಣಿಕಾರ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿಗಳಲ್ಲಿ ಸನ್ನಿಧಿಯನ್ನು ಬಿಟ್ಟು ಕೇವಲ ಆಕಾಂಕ್ಷಾ ಹಾಗೂ ಯೋಗ್ಯತಾ ಈ ಎರಡೇ ಶಾಬ್ದಬೋಧಕ್ಕೆ ಕಾರಣ ಎಂದು ಹೇಳುತ್ತಾನೆ. ಆಸತ್ತಿಯು ಸ್ವರೂಪಸತ್ ಆಗಿ ಕಾರಣವಾಗುತ್ತದೆ. ಆಸತ್ತಿಯು ಸ್ವರೂಪತಃ ಇದ್ದರೆ ಸಾಕು. ಅದರ ಜ್ಞಾನವು ಬರಬೇಕಾಗಿಲ್ಲ. ಆದ್ದರಿಂದ ಈ ಹಿಂದೆ ಹೇಳಿದ ದೋಷಗಳು ಬರುವು-ದಿಲ್ಲ ಎಂದು ಅಭಿಪ್ರಾಯಪಡುತ್ತಾನೆ.

ಈ ಪಕ್ಷವು ಸರಿಯಲ್ಲ. ಏಕೆಂದರೆ ಸ್ವರೂಪಸತ್ತಾಗಿ ಈ ಆಸತ್ತಿಯು ಕಾರಣ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಆಸತ್ತಿಭ್ರಮದಿಂದ ಶಾಬ್ದಭ್ರಮ ಬರುವ ಸಂದರ್ಭವೇ ಇಲ್ಲ. ನೈಯಾಯಿಕರು ಆಸತ್ತಿಭ್ರಮವನ್ನು ಅಂಗೀಕಾರ ಮಾಡಿರುವ ಕಾರಣದಿಂದಲೇ ಆಸತ್ತಿಭ್ರಮದಿಂದ ಶಾಬ್ದಭ್ರಮ ಬರುತ್ತದೆಂಬುದಾಗಿ ಹೇಳುತ್ತಾರೆ. ಈ ಕಾರಣದಿಂದಲೇ ಈ ಪಕ್ಷವನ್ನು ನಿರಾಕರಣೆ ಮಾಡಿರುತ್ತಾರೆ.

## ಆಸತ್ತಿಯ ಜ್ಞಾನ ಅನಾವಶ್ಯಕ

**ನ್ಯಾಯದೀಪ – ಯತ್ತು 'ಅನ್ವಯಪ್ರತಿಯೋಗ್ಯುಪಸ್ಥಿತಿರಾಸತ್ತಿಃ ಅನ್ವಯ-ಬೋಧಾಂಗಂ, ಸಾ ಚ ಸ್ವರೂಪಸತೀ ಭಾನಾಭಾವಾತ್ ।**

ಅನುವಾದ - ಅನ್ವಯಪ್ರತಿಯೋಗಿಯ ಉಪಸ್ಥಿತಿಯೇ ಆಸತ್ತಿ. ಅನ್ವಯಬೋಧಕ್ಕೆ ಇದೇ ಕಾರಣ. ಸ್ವರೂಪಸತ್ತಾದ ಆಸತ್ತಿಯೇ ಕಾರಣ ಹೊರತು ಜ್ಞಾತವಾದ ಆಸತ್ತಿಯು ಕಾರಣ ಎಂಬ ವಿಷಯದಲ್ಲಿ ಪ್ರಮಾಣವು ಇಲ್ಲ.

## ಅಸತ್ತಿಭ್ರಮೆಯು ಶಾಬ್ದಭ್ರಮೆಗೆ ಕಾರಣವೋ, ಅಲ್ಲವೋ?

**ನ್ಯಾಯದೀಪ – ಅನುಮಿತೌ ಪಕ್ಷಸಾಧ್ಯಪ್ರತ್ಯಯವತ್ ತದ್‌ಭ್ರಮೇಣ ಶಾಬ್ದ-ಬೋಧೋಽಸಿದ್ಧ ಏವ । ತಾತ್ಪರ್ಯಭ್ರಮೇಣ ಯೋಗ್ಯತಾಭ್ರಮೇಣ ವಾ ತದುಪಪತ್ತೇಃ'' ಇತಿ, ತನ್ನ । ವಿಶೇಷಣಜ್ಞಾನತ್ವೇನ ಹೇತುತ್ವೋಕ್ತೌ ಶಾಬ್ದ-ಸಾಧಾರಣ್ಯಾಭಾವಾತ್ ಪದಾರ್ಥಸ್ಮೃತಿತ್ವೇನ ಹೇತುತ್ವೇ ಚ ವಾಕ್ಯೇ ಪದಾರ್ಥ-ಸ್ಮೃತಿರೇವ ನ ಇತ್ಯಸಂಭವದೋಷಾತ್ ।**

ವಿವರಣೆ - ಪ್ರಶ್ನೆ - ತಾತ್ಪರ್ಯಭ್ರಮ ಅಥವಾ ಯೋಗ್ಯತಾಭ್ರಮಗಳನ್ನು ಬಿಟ್ಟು ಬೇರೆ ರೀತಿಯಾಗಿ ಶಾಬ್ದಭ್ರಮ ಬರಲು ಸಾಧ್ಯವಿಲ್ಲವೇ?

ಉತ್ತರ - ತಾತ್ಪರ್ಯಭ್ರಮ ಹಾಗೂ ಯೋಗ್ಯತಾಭ್ರಮೆಗಳೇ ಶಾಬ್ದಬೋಧಭ್ರಮಕ್ಕೆ ಕಾರಣ ಹೊರತು ಆಸತ್ತಿಭ್ರಮವು ಕಾರಣವಲ್ಲ. ಆಸತ್ತಿಭ್ರಮವು ಕಾರಣ ಎಂದು ಹೇಳಿ-ದರೆ ಆಸತ್ತಿಭ್ರಮ ಇಲ್ಲದ ಸ್ಥಳದಲ್ಲೂ ಆಸತ್ತಿ ಇರುವ ಕಾರಣ ಭ್ರಮವಶಾತ್ ಆಸತ್ತಿಯೇ ಅಲ್ಲಿ ಕಾರಣ ಎಂದು ನಿಶ್ಚಯವಾಗುವುದರಿಂದ ಅಲ್ಲಿ ಆಸತ್ತಿಭ್ರಮದಿಂದ ಶಾಬ್ದಭ್ರಮ ಎಂಬುದನ್ನು ಹೇಳಿದಾಗ ಆಸತ್ತಿಯನ್ನೇ ಅಂಗೀಕಾರ ಮಾಡಿದಂತೆ ಆಗುತ್ತದೆ. ಆದ್ದರಿಂದ ಆಸತ್ತಿಜ್ಞಾನವು ಶಾಬ್ದಬೋಧಕ್ಕೆ ಕಾರಣ. ಆಸತ್ತಿಭ್ರಮದಿಂದ ಶಾಬ್ದಬೋಧಭ್ರಮ ಬರುವು-ದಿಲ್ಲ. ಒಂದು ವೇಳೆ ಶಾಬ್ದಭ್ರಮ ಬರುವುದಾದರೆ ಅದಕ್ಕೆ ಕಾರಣ ತಾತ್ಪರ್ಯಭ್ರಮ ಹಾಗೂ ಯೋಗ್ಯತಾಭ್ರಮಗಳೇ ಹೊರತು ಬೇರೆ ಯಾವ ಭ್ರಮಗಳೂ ಅಲ್ಲ.

ಪ್ರಶ್ನೆ - ಆಸತ್ತಿಭ್ರಮವನ್ನು ರುಚಿದತ್ತನು ಒಪ್ಪಿರುವನೋ? ಇಲ್ಲವೇ?

ಉತ್ತರ - ರುಚಿದತ್ತನ ಮತದಲ್ಲಿ ಆಸತ್ತಿಭ್ರಮವೇ ಇಲ್ಲ. ಆಸತ್ತಿಯು ಜ್ಞಾತೈಕಸತ್ ಎಂಬುದು ಅವನ ಸಿದ್ಧಾಂತ. ಆದ್ದರಿಂದ ಜ್ಞಾತವಾದ ಅಸತ್ತಿಯಲ್ಲಿ ಭ್ರಮವನ್ನು ಹೇಳಲು ಸಾಧ್ಯವಿಲ್ಲ.

ಪ್ರಶ್ನೆ - ದ್ವೈತಮತದಂತೆ ತಾತ್ಪರ್ಯಭ್ರಮ ಅಥವಾ ಯೋಗ್ಯತಾಭ್ರಮಗಳು ಶಾಬ್ದ-ಬೋಧಭ್ರಮಕ್ಕೆ ಕಾರಣವೇ?

ಉತ್ತರ - ಈ ವಿಷಯವನ್ನು ಸ್ಪಷ್ಟವಾಗಿ ಈ ಗ್ರಂಥದಲ್ಲಿ ನಿರಾಕರಣೆ ಮಾಡಿಲ್ಲ. ತಾತ್ಪರ್ಯಭ್ರಮ ಅಥವಾ ಯೋಗ್ಯತಾಭ್ರಮಗಳು ಶಾಬ್ದಬೋಧಭ್ರಮಕ್ಕೆ ಕಾರಣ ಹೌದೋ ಅಲ್ಲವೋ? ಎನ್ನುವ ವಿಷಯದಲ್ಲಿ ತರ್ಕತಾಂಡವದಲ್ಲಿ ಸ್ಪಷ್ಟವಾದ ನಿರೂಪಣೆ ಇಲ್ಲ. ರುಚಿದತ್ತನ ಸಿದ್ಧಾಂತದಂತೆ ಶಾಬ್ದಭ್ರಮಕ್ಕೆ ತಾತ್ಪರ್ಯಭ್ರಮವು ಕಾರಣ ಎಂದು ಉಪಪಾದನೆ ಮಾಡಿದಾಗ ಅದನ್ನು ನಿರಾಕರಣೆ ಮಾಡುವ ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ- ವಿಶೇಷಜ್ಞಾನತ್ವೇನ ಕಾರಣವೋ? ಅಥವಾ ಪದಾರ್ಥಸ್ಮೃತಿತ್ವೇನ ಕಾರಣ-ವೋ? ಎಂದು ವಿಕಲ್ಪ ಮಾಡಿಕೊಂಡು ಆ ಪಕ್ಷಗಳಲ್ಲಿ ಅಸಾಧಾರಣವಾದ ಕಾರಣವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ವಿಶೇಷಜ್ಞಾನತ್ವೇನ ಕಾರಣ ಎಂದು ಹೇಳಲು ಸಾಧ್ಯವಿಲ್ಲ ಎಂದು ಅಸಂಭವದೋಷವನ್ನು ಹೇಳಿದ್ದಾರೆ. ಇದರಂತೆ ಪದಾರ್ಥಸ್ಮೃತಿ-ಯನ್ನೇ ರುಚಿತದತ್ತನು ಅಂಗೀಕಾರ ಮಾಡಿಲ್ಲವಾದ್ದರಿಂದ ಆಸತ್ತಿಯು ಜ್ಞಾತವಾಗಿ ಪದಾರ್ಥಸ್ಮೃತಿತ್ವೇನ ಕಾರಣ ಎಂಬುದಾಗಿ ಅವನ ಸಿದ್ಧಾಂತದಂತೆ ನಿರೂಪಣೆ ಮಾಡಲು ಸಾಧ್ಯವಿಲ್ಲ. ಹೀಗೆ ಆಸತ್ತಿಯು ಕಾರಣ ಹೌದೋ, ಅಲ್ಲವೋ ? ಅನ್ನುವ ಪಕ್ಷಕ್ಕೆ ದೋಷವನ್ನು ಈ ಸಂದರ್ಭದಲ್ಲಿ ಗ್ರಂಥಕಾರರು ನಿರೂಪಣೆ ಮಾಡಿದ್ದಾರೆ. ತಾತ್ಪರ್ಯಭ್ರಮವಾಗಲಿ, ಯೋಗ್ಯತಾಭ್ರಮವಾಗಲೀ ಶಾಬ್ದಭ್ರಮಕ್ಕೆ ಕಾರಣ ಅಥವಾ ಕಾರಣ ಅಲ್ಲ ಅನ್ನುವ ವಿಷಯವನ್ನು ಸ್ಪಷ್ಟವಾಗಿ, ಉಪಪಾದನೆ ಮಾಡಿರುವುದಿಲ್ಲ.

ಪ್ರಶ್ನೆ - ಆಸತ್ತಿ ಎಂದರೆ ಪದಾರ್ಥ ಸ್ಮೃತಿರೂಪವಾದದ್ದು, ಈ ಪದಾರ್ಥಸ್ಮೃತಿಯು ಭ್ರಮಾ ಅಥವಾ ಪ್ರಮಾ ರೂಪವಾಗಿರಬೇಕು ಎಂಬ ನಿಯಮವಿದೆಯೇ?

ಉತ್ತರ - ಪದಾರ್ಥಸ್ಮೃತಿಯು ಭ್ರಮಾರೂಪವಾಗಿರಬೇಕು ಅಥವಾ ಪ್ರಮಾರೂಪವಾಗಿರಬೇಕು ಎಂಬ ಯಾವ ನಿಯಮವೂ ಇಲ್ಲ. ಅದು ಭ್ರಮಾರೂಪವಾದರೂ ಅಥವಾ ಪ್ರಮಾರೂಪವಾದರೂ ಸಹ ಅನ್ವಯಬೋಧಕ್ಕೆ ಅಂಗ ಅನ್ನುವ ಅಂಶದಲ್ಲಿ ತಾತ್ಪರ್ಯವೇ ಹೊರತು ಪ್ರಮಾವೋ, ಭ್ರಮೆಯೋ ಅನ್ನುವ ಅಂಶದಲ್ಲಿ ಚರ್ಚೆಯಿಲ್ಲ.

## ಅತಿವ್ಯಾಪ್ತಿ ಅಸಂಭವಗಳ ಜೊತೆ ಅವ್ಯಾಪ್ತಿಯೂ ಇದೆ

**ತರ್ಕತಾಂಡವ – ಕಿಂಚ ನಾನಾವಿಶೇಷಣಕೈಕವಿಶೇಷ್ಯಕಬೋಧಸ್ಥಳೇ ವಿಶೇಷಣಾನಾಮ್ ಅನ್ಯೋನ್ಯಮನ್ವಯಯೋಗ್ಯತಯಾ ಅನ್ವಿತಾನ್ವಯಾಸಂಭವೇನ ಸಮೂಹಾಲಂಬನಾ ಏಕೈವ ಪದಾರ್ಥಸ್ಮೃತಿರ್ವಕ್ತವ್ಯಾ । ತಥಾ ಚ ತತ್ರ ವಾಕ್ಯೇ ಕಿಂಚಿತ್ ಕೇನಚಿತ್ ಆಸನ್ನಮನಾಸನ್ನಂ ಚ ಕೇನಚಿದಿತಿ ಕಥಂ ವಿಭಾಗಃ ।**

ಅನುವಾದ - ಮತ್ತು ವಿಶೇಷಣಗಳು ಅನೇಕ ಇದ್ದು ವಿಶೇಷ್ಯವು ಒಂದೇ ಇರುವ ವಾಕ್ಯದಿಂದ ಬೋಧಬರುವ ಸ್ಥಳದಲ್ಲಿ ವಿಶೇಷಣಗಳಿಗೆ ಪರಸ್ಪರವಾಗಿ ಅನ್ವಯಯೋಗ್ಯತೆಯು ಇಲ್ಲದಿರುವುದರಿಂದ ವಿಶೇಷಣಾನ್ವಿತವಾದ ಅನ್ವಯವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅಲ್ಲಿ ಸಮೂಹಾಲಂಬನಾತ್ಮಕವಾದ ಒಂದೇ ಪದಾರ್ಥಸ್ಮೃತಿಯನ್ನು ಹೇಳಬೇಕು. ಆದ್ದರಿಂದ ಆ ಸ್ಥಳದಲ್ಲಿ ಒಂದು ಶಬ್ದವು ಮತ್ತೊಂದರಿಂದ ಆಸನ್ನವಾಗಿದೆ, ಮತ್ತೊಂದರಿಂದ ಅನಾಸನ್ನವಾಗಿದೆ ಎಂಬ ವಿಭಾಗವು ಹೇಗೆ ಕೂಡುತ್ತದೆ?

## ಅವ್ಯಾಪ್ತಿದೋಷದ ಸಮರ್ಥನೆ

**ನ್ಯಾಯದೀಪ – ಅತಿವ್ಯಾಪ್ತ್ಯಸಂಭವೌ ಉಕ್ತ್ವಾ, ಅವ್ಯಾಪ್ತಿಂ ಚಾಹ – ಕಿಂಚೇತಿ ॥ ನಾನಾವಿಶೇಷಣಕೇತಿ ॥ 'ದಂಡೀ ಕುಂಡಲೀ ಚೈತ್ರಃ' ಇತ್ಯಾದೌ ಚೈತ್ರಪದೇನ ಕುಂಡಲೀಪದಮಾಸನ್ನಂ, ದಂಡೀಪದಮನಾಸನ್ನಮ್ ಇತಿ ವಿಭಾಗಃ ಅಸ್ತಿ । ಸ ನ ಸ್ಯಾತ್ ।**

ಅನುವಾದ - ಈ ಹಿಂದೆ ಆಸತ್ತಿಯ ಲಕ್ಷಣಕ್ಕೆ ಅತಿವ್ಯಾಪ್ತಿದೋಷ ಹಾಗೂ ಅಸಂಭವ ರೂಪವಾದ ದೋಷಗಳನ್ನು ಹೇಳಿ ಈಗ 'ಕಿಂಚ' ಎಂಬ ವಾಕ್ಯದಿಂದ ಅವ್ಯಾಪ್ತಿರೂಪವಾದ ದೋಷವನ್ನು ಗ್ರಂಥ-ಕಾರರು ಹೇಳುತ್ತಿದ್ದಾರೆ. 'ದಂಡೀ ಕುಂಡಲೀ ಚೈತ್ರಃ' ಇತ್ಯಾದಿ ಸ್ಥಳಗಳಲ್ಲಿ ಚೈತ್ರಪದದಿಂದ ಕುಂಡಲೀ-ಪದವು ಆಸನ್ನವಾಗಿದೆ, ದಂಡೀಪದವು ಅನಾಸನ್ನವಾಗಿದೆ ಎಂಬ ವಿಭಾಗವು ಇದೆ. ಈ ವಿಭಾಗವು ಇಲ್ಲದೇ ಹೋಗಬೇಕಾದೀತು.

## ಆಸತ್ತಿ ಎಂದರೆ ಪದಾರ್ಥಸ್ಮೃತಿ ಅಲ್ಲ

**ನ್ಯಾಯದೀಪ– ಪದಾರ್ಥಸ್ಮೃತೇರೇವ ಆಸತ್ತಿತ್ವೇ ತಾವತ್ ಪದಾರ್ಥ-ಗೋಚರೈಕಸ್ಮೃತೇರೇವ ತತ್ರ ವಾಚ್ಯತ್ವಾತ್ ಕ್ರಮೇಣೋಪಸ್ಥಿತೌ ಹಿ ಪೂರ್ವ-ಸ್ಮೃತವಿಶೇಷೇಣಾನ್ವಯಾನಂತರಂ ಚರಮಸ್ಮೃತವಿಶೇಷಣಾನ್ವಯಃ ಸ್ಯಾತ್ । ನ ಚೈವಂ ಯುಕ್ತಮ್ । ವಿಶೇಷಣವಿಶಿಷ್ಟೇ ವಿಶೇಷಣಾಂತರಾನ್ವಯೇ ವಿಶೇಷಣ-ಯೋರಪಿ ಅನ್ವಯಾಪತ್ತ್ಯಾ ತದಸಂಭವಾತ್ । 'ವಿಶೇಷ್ಯೇಣ ಆಸನ್ನಂ ವಿಶೇಷಣಂ ಸ್ವಾಸನ್ನೇನ ವಿಶೇಷಣೇನ ಸ್ವಯಮನ್ವಿತಂ ಸತ್ ಪಶ್ಚಾದ್ ವಿಶೇಷೇಣಾನ್ವೇತಿ' ಇತ್ಯಸ್ಯಾಪಿ ವಿಶೇಷಣಯೋರಪಿ ಅನ್ವಯಾಯೋಗೇನ ಅಸಂಭವಾತ್ ಇತ್ಯರ್ಥಃ ।**

ಅನುವಾದ - ಪದಾರ್ಥಸ್ಮೃತಿಯನ್ನೇ ಆಸತ್ತಿ ಎಂದು ಹೇಳಿದರೆ ಎಲ್ಲಾ ಪದಾರ್ಥಗಳನ್ನು ವಿಷಯೀ-ಕರಿಸುವ ಒಂದೇ ಸ್ಮೃತಿಯನ್ನೇ ಆ ಸ್ಥಳದಲ್ಲಿ ಹೇಳಬೇಕು. ಪದಾರ್ಥಗಳಿಗೆ ಕ್ರಮೇಣ ಉಪಸ್ಥಿತಿಯನ್ನು ಹೇಳಿದಲ್ಲಿ ಮೊದಲು ಸ್ಮರಣೆಗೆ ಬಂದ ವಿಶೇಷಣದ ಅನ್ವಯ ಬಂದ ಅನಂತರದಲ್ಲಿ ಸ್ಮರಣೆಗೆ ಬಂದ ವಿಶೇಷಣದ ಅನ್ವಯವು ಬರಬೇಕಾಗುತ್ತದೆ. ಈ ಪಕ್ಷವು ಯುಕ್ತವಲ್ಲ. ವಿಶೇಷಣವಿಶಿಷ್ಟವಾದ್ದರಲ್ಲಿ ಮತ್ತೊಂದು ವಿಶೇಷಣದ ಅನ್ವಯವನ್ನು ಹೇಳಿದರೆ ವಿಶೇಷಣಗಳಿಗೂ ಪರಸ್ಪರವಾಗಿ ಅನ್ವಯವನ್ನು ಹೇಳಬೇಕಾದ್ದರಿಂದ ವಿಶೇಷಣಾನ್ವಯವನ್ನು ಹೇಳಬಾರದು. ವಿಶೇಷ್ಯದಿಂದ ಸಂಬದ್ಧವಾದ ವಿಶೇಷಣವು ತನ್ನಿಂದ ಸಂಬಂಧ ಹೊಂದಿದ ವಿಶೇಷಣದ ಜೊತೆಗೆ ಮೊದಲು ಅನ್ವಯವನ್ನು ಹೊಂದಿ ಅನಂತರ ವಿಶೇಷಣದೊಟ್ಟಿಗೆ ಅನ್ವಯವನ್ನು ಹೊಂದುತ್ತದೆಂಬ ಪಕ್ಷದಲ್ಲೂ ವಿಶೇಷಣಗಳಿಗೆ ಪರಸ್ಪರ ಅನ್ವಯವನ್ನು ಹೇಳಲು ಬರುವುದಿಲ್ಲ.

ವಿವರಣೆ - 'ನಾನಾವಿಶೇಷಣಕ ಏಕವಿಶೇಷ್ಯಕ - ಬೋಧಸ್ಥಲೇ' ಎಂದು ಮೂಲದಲ್ಲಿ ಇದೆ. ಇಲ್ಲಿ ನಾನಾವಿಶೇಷಣಕ ಅನ್ನುವ ಶಬ್ದದ ಅಭಿಪ್ರಾಯ ಹೀಗಿದೆ - 'ದಂಡೀ, ಕುಂಡಲೀ ಚೈತ್ರಃ' ಇವುಗಳಲ್ಲಿ ಒಂದು ವಾಕ್ಯವಿದೆ. ಈ ವಾಕ್ಯದಲ್ಲಿ ದಂಡವಿಶಿಷ್ಟ-ನಾದಂತಹ ಹಾಗೂ ಕುಂಡಲವಿಶಿಷ್ಟನಾದಂತಹ ಚೈತ್ರನಿಗೆ ಸಂಬಂಧವು ತೋರುತ್ತಿದೆ. ಈ ವಾಕ್ಯದಲ್ಲಿ ದಂಡ ಪದಕ್ಕೂ, ಚೈತ್ರ ಪದಕ್ಕೂ ಆಸತ್ತಿ ಇಲ್ಲ. ಕುಂಡಲಪದಕ್ಕೂ ಚೈತ್ರ-ಪದಕ್ಕೂ ಆಸತ್ತಿ ಇದೆ

ಆಸತ್ತಿ ಎನ್ನುವ ಶಬ್ದಕ್ಕೆ 'ಅವ್ಯವಧಾನೇನ ಪದಾರ್ಥಸ್ಮೃತಿ' ಎಂಬರ್ಥವನ್ನು ಹೇಳಿದರೆ ಈ ವಿಭಾಗವನ್ನು ಮಾಡಲು ಬರುವುದಿಲ್ಲ. ಏಕೆಂದರೆ ಪದಾರ್ಥದ ಸ್ಮರಣೆಯೇ ಆಸತ್ತಿ ಎನಿಸಿದೆ. 'ದಂಡೀ' ಎಂದು ಹೇಳಿದಾಗ ದಂಡ ಪದಾರ್ಥದ ಸ್ಮರಣೆ ಬಂದಿದೆ. 'ಕುಂಡಲೀ' ಎಂದು ಹೇಳಿದಾಗ ಕುಂಡಲ ಪದಾರ್ಥದ ಸ್ಮರಣೆ ಬಂದಿದೆ. ಈ ಸ್ಮರಣೆಗಳು ಏಕಕಾಲದಲ್ಲಿ ಇಲ್ಲ. ದಂಡವಿಶಿಷ್ಟನಾದಂತಹ ಕುಂಡಲವಿಶಿಷ್ಟನಾದಂತಹ ಚೈತ್ರನ ಸ್ಮರಣೆ ಚೈತ್ರ ಪದದಿಂದ ಬರುವಾಗ ಹಿಂದಿನ ದಂಡ ಮತ್ತು ಕುಂಡಲ ಪದಾರ್ಥಗಳ ಸ್ಮರಣೆ ಇರುವುದಿಲ್ಲ. ಈ ಪದಾರ್ಥಗಳ ಸ್ಮರಣೆ ಏಕಕಾಲಕ್ಕೆ ಬರುವುದಾದರೆ ಆಗ ಎಲ್ಲಾ ಪದಾರ್ಥಗಳನ್ನು ವಿಷಯೀಕರಿಸತಕ್ಕ ಒಂದು ಸ್ಮೃತಿಯನ್ನು ಹೇಳಬೇಕು. ಇಂತಹ ಸ್ಮೃತಿಗೆ ಸಮೂಹಾಲಂಬನಸ್ಮೃತಿ ಎಂಬುದಾಗಿ ಶಾಸ್ತ್ರದಲ್ಲಿ ವ್ಯವಹಾರ ಇದೆ. ಏಕಕಾಲದಲ್ಲಿ ಎಲ್ಲಾ ಪದಾರ್ಥಗಳ ಸ್ಮೃತಿಯನ್ನು ಈ ಸಮೂಹಾಲಂಬನಸ್ಮೃತಿಯ ಮುಖಾಂತರವೇ ಹೇಳ-ಬೇಕು.

ಒಂದು ವೇಳೆ ಪದಾರ್ಥಗಳ ವ್ಯವಧಾನ ಇರಬಾರದು ಎಂದು ಅಂಗೀಕರಿಸಿದರೆ ಆಗ ಸಮೂಹಾಲಂಬನಸ್ಮೃತಿಯೇ ಕೂಡುವುದಿಲ್ಲ. ಆದ್ದರಿಂದ 'ದಂಡೀ, ಕುಂಡಲೀ, ಚೈತ್ರಃ' ಇತ್ಯಾದಿ ವಾಕ್ಯಗಳನ್ನು ಪ್ರಯೋಗ ಮಾಡಿದಾಗ ದಂಡವಿಶಿಷ್ಟನಾದ ಕುಂಡಲವಿಶಿಷ್ಟನಾದ ಚೈತ್ರನ ಜ್ಞಾನವು ಬರುವುದು ಸಮೂಹಾಲಂಬನಾತ್ಮಕಸ್ಮೃತಿಯಿಂದ ಎಂದು ಅಂಗೀಕಾರ ಮಾಡಬೇಕು.

ಶಂಕಾ - ಸಮೂಹಾಲಂಬನಸ್ಮೃತಿಯನ್ನು ಅಂಗೀಕಾರ ಮಾಡುವುದಿಲ್ಲ. ಕ್ರಮೇಣ

ಪದಾರ್ಥಗಳ ಸ್ಮೃತಿ ಬರುತ್ತದೆ. ಹೀಗೆ ಹೇಳಿದಾಗ ಸಕಲ ಪದಾರ್ಥಗಳ ಸ್ಮೃತಿಯು ಏಕಕಾಲದಲ್ಲಿ ಬರುತ್ತದಲ್ಲವೇ ?

ಉತ್ತರ - ಈ ವಾದವು ಸರಿಯಲ್ಲ. ಕ್ರಮವಾಗಿ ಬರುವ ಸ್ಮೃತಿಗಳಲ್ಲಿ ಆಗುವ ಸಮಸ್ಯೆ ಹೀಗಿದೆ - "ದಂಡೀ ಕುಂಡಲೀ ಚೈತ್ರಃ' ಎಂಬುದಾಗಿ 'ದಂಡೀ' ಎಂಬ ಶಬ್ದವನ್ನು ಪ್ರಯೋಗ ಮಾಡಿದಾಗ ದಂಡದ ಸ್ಮರಣೆ ಬಂದಿದೆ. ದಂಡ ಎಂಬ ಒಂದು ವಿಶೇಷಣದ ಅನ್ವಯ ಚೈತ್ರನಲ್ಲಿ ಬರುತ್ತದೆ. ಅನಂತರ 'ಕುಂಡಲೀ' ಎಂಬ ಶಬ್ದವನ್ನು ಪ್ರಯೋಗ ಮಾಡಿದಾಗ ಆ ಕುಂಡಲದ ಅನ್ವಯ ಚೈತ್ರನಲ್ಲಿ ಬರುತ್ತದೆ. ಪೂರ್ವದಲ್ಲಿ ಯಾವ ವಿಶೇಷಣದ ಸ್ಮರಣೆ ಬಂದಿದೆಯೋ ಅದರ ಅನ್ವಯ ಚೈತ್ರನಿಗೆ ಬಂದ ಅನಂತರದಲ್ಲಿ ಪ್ರಯೋಗ ಮಾಡಿದ ಕುಂಡಲ ಮುಂತಾದ ವಿಶೇಷಣಗಳ ಅನ್ವಯವನ್ನು ಚೈತ್ರನಿಗೆ ಹೇಳಬೇಕು. ಆದರೆ ಕ್ರಮವಾಗಿ ಉಪಸ್ಥಿತವಾದ ಒಂದು ವಿಶೇಷಣದ ಅನ್ವಯದ ನಂತರ ಮತ್ತೊಂದು ವಿಶೇಷಣದ ಅನ್ವಯನ್ನು ಹೇಳುವ ಕ್ರಮ ಶಾಸ್ತ್ರದಲ್ಲಿ ಅಂಗೀಕಾರ ಮಾಡಿರುವುದಿಲ್ಲ.

ಶಾಸ್ತ್ರದಲ್ಲಿ ಒಂದು ವಿಶೇಷಣದಿಂದ ವಿಶಿಷ್ಟವಾದಂತಹ ವಿಶೇಷ್ಯಕ್ಕೆ ಮತ್ತೊಂದು ವಿಶೇಷಣದಿಂದ ಅನ್ವಯವನ್ನು ಹೇಳುವುದಾದರೆ, ಆಗ ಪರಸ್ಪರವಾಗಿ ಆ ಎರಡು ವಿಶೇಷಣಗಳಿಗೂ ಸಹ ಅನ್ವಯವನ್ನು ಅಂಗೀಕಾರ ಮಾಡಬೇಕು ಎಂಬ ನಿಯಮ ಇದೆ. ಪ್ರಕೃತ ದಂಡವಿಶಿಷ್ಟನಾದಂತಹ ಚೈತ್ರನಿಗೆ ದಂಡರೂಪವಾದ ವಿಶೇಷಣದಿಂದ ಕೂಡಿದ ಚೈತ್ರನಿಗೆ ಕುಂಡಲರೂಪವಾದ ವಿಶೇಷಣದ ಅನ್ವಯವನ್ನು ಮಾಡುವುದಾದರೆ ಆಗ ದಂಡವಿಶಿಷ್ಟಚೈತ್ರನಿಗೆ ಕುಂಡಲರೂಪವಾದ ವಿಶೇಷಣದಿಂದ ಅನ್ವಯವನ್ನು ಹೇಳಿದಂತಾಗುತ್ತದೆ.

ವಿಶೇಷಣವಿಶಿಷ್ಟನಾದಂತಹ ಚೈತ್ರನಿಗೆ ವಿಶೇಷಣಾಂತರದಿಂದ ಅನ್ವಯವನ್ನು ಹೇಳಿದಾಗ ಅಲ್ಲಿ 'ದಂಡ' ಮತ್ತು 'ಕುಂಡಲ' ಈ ಎರಡು ವಿಶೇಷಣಗಳಿಗೆ ಪರಸ್ಪರವಾಗಿ ಅನ್ವಯವನ್ನು ಹೇಳಬೇಕಾಗುತ್ತದೆ. ಆದರೆ ಹೀಗೆ ಪರಸ್ಪರವಾಗಿ ಅನ್ವಯವನ್ನು ಹೇಳು- ವುದು ಸಾಧ್ಯವಿಲ್ಲ. ದಂಡಕ್ಕೂ, ಕುಂಡಲಕ್ಕೂ ಯಾವುದೇ ರೀತಿಯ ಸಂಬಂಧವಿಲ್ಲ. ಆದ್ದರಿಂದ

ದಂಡದ ಉಪಸ್ಥಿತಿ ಮೊದಲು ಬಂದು. ಅನಂತರ ಕುಂಡಲದ ಉಪಸ್ಥಿತಿಯು ಬಂದು ಅನಂತರ ಕಟಕದ ಉಪಸ್ಥಿತಿ ಬರುತ್ತದೆ. ಹೀಗೆ ಅನೇಕ ವಿಶೇಷಣಗಳಿದ್ದಾಗ ಶಾಬ್ದ-ಬೋಧ ಬರುವ ಕ್ರಮವನ್ನು ತಿಳಿಯಬೇಕು.

'ದಂಡೀ ಕುಂಡಲೀ ಚೈತ್ರಃ' .ಈ ವಾಕ್ಯದಲ್ಲಿ ಕ್ರಮೇಣ ಉಪಸ್ಥಿತಿಯನ್ನು ಹೇಳಿದರೆ ಆಗ ಮತ್ತೊಂದು ಸಮಸ್ಯೆ ಎದುರಾಗುತ್ತದೆ - 'ವಿಶೇಷ್ಯೇಣ ಆಸನ್ನಂ ವಿಶೇಷಣಂ, ಸ್ವಯಂ ಅನ್ವಿತಂ ಪಶ್ಚಾತ್ ವಿಶೇಷ್ಯೇಣ ಅನ್ವೇತಿ' ಎಂಬುದಾಗಿ ಒಂದು ವಾದವಿದೆ. ಇದರ ಅಭಿಪ್ರಾಯ ಹೀಗಿದೆ - ಅನೇಕ ವಿಶೇಷಣಗಳು ಇದ್ದು ವಿಶೇಷ್ಯ ಒಂದೇ ಇದ್ದಾಗ, ಆ ವಿಶೇಷ್ಯದಲ್ಲಿ ಒಂದು ವಿಶೇಷಣವು ಮಾತ್ರ ಆಸನ್ನವಾಗಿರುತ್ತದೆ. ಉಳಿದ ವಿಶೇಷಣಗಳು ಅನಾಸನ್ನವಾಗಿರುತ್ತವೆ. ಇಂತಹ ಸಂದರ್ಭದಲ್ಲಿ ಯಾವ ವಿಶೇಷಣವು ವಿಶೇಷ್ಯದ ಹತ್ತಿರವಿದೆಯೋ ಅಂತಹ ವಿಶೇಷ್ಯವು ಆಸನ್ನವಾದಂತಹ ವಿಶೇಷಣವು ತಾನು ವಿಶೇಷಣದ ಜೊತೆಗೆ ಮೊದಲು ಅನ್ವಯವನ್ನು ಹೊಂದಿ, ಅನಂತರ ಉಳಿದ ವಿಶೇಷಣಗಳ ಜೊತೆ ಅನ್ವಯವನ್ನು ಹೊಂದುತ್ತದೆ.

ಉದಾಹರಣೆ - 'ದಂಡೀ, ಕುಂಡಲೀ, ಚೈತ್ರಃ' ಈ ವಾಕ್ಯದಲ್ಲಿ ಕುಂಡಲ ಎಂಬ ವಿಶೇಷಣವು ಚೈತ್ರ ಎಂಬ ವಿಶೇಷ್ಯದಿಂದ ಆಸನ್ನವಾಗಿದೆ. ಆದ್ದರಿಂದ ಚೈತ್ರ ಶಬ್ದದ ಜೊತೆ ಕುಂಡಲ ಶಬ್ದವು ಮೊದಲು ಅನ್ವಯವನ್ನು ಹೊಂದುತ್ತದೆ. ಕುಂಡಲವಿಶಿಷ್ಟನಾದಂತಹ ಚೈತ್ರನು 'ದಂಡೀ' ಎಂಬ ವಿಶೇಷಣದ ಜೊತೆ ಅನ್ವಯವನ್ನು ಹೊಂದುತ್ತಾನೆ. ಆಗ ಕುಂಡಲವಿಶಿಷ್ಟನಾದ ಚೈತ್ರನು ದಂಡವಿಶಿಷ್ಟನಾಗಿದ್ದಾನೆ ಎಂಬ ಶಾಬ್ದಬೋಧವು ಬರುತ್ತದೆ. ಇಲ್ಲಿ ಲಕ್ಷಣಸಮನ್ವಯ ಹೀಗಿದೆ - 'ವಿಶೇಷ್ಯೇಣ' ಎಂದರೆ ಚೈತ್ರ ಎಂಬ ವಿಶೇಷ್ಯದಿಂದ ಆಸನ್ನಂ ವಿಶೇಷಣಂ = ಹತ್ತಿರವಿರುವ ಕುಂಡಲೀ ಎಂಬ ವಿಶೇಷಣವು, ಸ್ವಾಸನ್ನೇನ ವಿಶೇಷಣೇನ = ಕುಂಡಲ ಎಂಬ ವಿಶೇಷಣದಿಂದ, ಸ್ವಯಂ = ಸ್ವತಃ, ಅನ್ವಿತಂ ಸತ್ = ಅನ್ವಯವನ್ನು ಹೊಂದಿ, ಪಶ್ಚಾತ್ = ಅನಂತರ, ವಿಶೇಷ್ಯೇಣ = ದಂಡ ಎಂಬ ವಿಶೇಷ್ಯ-ದಿಂದ, ಅನ್ವೇತಿ = ಕುಂಡಲ ಎಂಬ ವಿಶೇಷಣವು ಅನ್ವಯವನ್ನು ಹೊಂದುತ್ತದೆ ಎಂದರೆ ಕುಂಡಲ ಎಂಬ ವಿಶೇಷ್ಯವಿಶಿಷ್ಟವಾದ ಚೈತ್ರಶಬ್ದದಿಂದ ಆಸನ್ನವಾದ 'ದಂಡೀ' ಎಂಬ ವಿಶೇಷಣವು ಅನ್ವಯವನ್ನು ಹೊಂದುತ್ತದೆಂದಭಿಪ್ರಾಯ.

ಹೀಗೆ ಹೇಳಿದಾಗ ಸಮೂಹಾಲಂಬನಸ್ಮೃತಿಯನ್ನು ಅಂಗೀಕಾರ ಮಾಡಬೇಕಾಗಿಲ್ಲ. ಪದಾರ್ಥದ ಉಪಸ್ಥಿತಿಯು ಅವ್ಯವಹಿತಪೂರ್ವದಲ್ಲೇ ಇದೆ. ಪದಾರ್ಥಗಳ ವ್ಯವಧಾನ ಇರುವುದಿಲ್ಲ. ಉದಾಹರಣೆ - 'ಕುಂಡಲೀ ಚೈತ್ರಃ' ಎಂದು ಹೇಳಿದಾಗ ಕುಂಡಲ-ವಿಶಿಷ್ಟನಾದ ಚೈತ್ರನ ಉಪಸ್ಥಿತಿಯು ಬಂದಿದೆ. ಕುಂಡಲಶಬ್ದ ಹಾಗೂ ಚೈತ್ರಶಬ್ದಗಳ ಉಪಸ್ಥಿತಿಯೂ ಕೂಡ ಒಟ್ಟಿಗೆ ಬಂದು ಕುಂಡಲವಿಶಿಷ್ಟನಾದ ಚೈತ್ರನ ಜ್ಞಾನವು ಹುಟ್ಟಿದೆ. ಈ ಜ್ಞಾನ ಇರುವ ಸಮಯದಲ್ಲಿ 'ದಂಡೀ' ಎಂಬ ಶಬ್ದವನ್ನು ಪ್ರಯೋಗ ಮಾಡಿದಾಗ ದಂಡದ ಸ್ಮರಣೆಯೂ ಬರುತ್ತದೆ. ಏಕಕಾಲದಲ್ಲಿ ವ್ಯವಧಾನ ಇಲ್ಲದೇ, ದಂಡದ ಉಪಸ್ಥಿತಿ ಬರುವ ಸಮಯದಲ್ಲಿ ಕುಂಡಲವಿಶಿಷ್ಟನಾದ ಚೈತ್ರನ ಸ್ಮರಣೆಯು ಬಂದಿರುವ ಕಾರಣ. ಅವ್ಯವಧಾನೇನ ಪದಾರ್ಥದ ಸ್ಮೃತಿಯು ಬಂದಂತಾಯಿತು. ಸ್ಮೃತಿಗೆ ಯೋಗ್ಯವಾದ ಪದಾರ್ಥದ ಉಪಸ್ಥಿತಿಯು ಇರುವುದರಿಂದ ಆಸತ್ತಿಯು ಇರುತ್ತದೆ. ಆದ್ದರಿಂದ ಸಮೂಹಾಲಂಬನಾತ್ಮಕವಾದ ಸ್ಮೃತಿಯನ್ನು ಒಪ್ಪಬೇಕಾಗಿಲ್ಲ ಅಲ್ಲವೇ ?

ವಿಶೇಷಣಗಳಿಗೆ ಪರಸ್ಪರ ಅನ್ವಯವು ಇಲ್ಲದೇ ಇರುವ ಕಾರಣದಿಂದ ಎಲ್ಲಾ ವಿಶೇಷಣಗಳ ಅರ್ಥದ ಉಪಸ್ಥಿತಿಯು ಶಾಬ್ದಬೋಧ ಬರುವ ಕ್ಷಣದಲ್ಲಿ ಇರುವುದಿಲ್ಲ. ಆದ್ದರಿಂದ ಅನೇಕ ವಿಶೇಷಣಗಳಿದ್ದು, ಒಂದೇ ವಿಶೇಷ್ಯದಿಂದ ಕೂಡಿರುವ ವಾಕ್ಯದಲ್ಲಿ ಶಾಬ್ದ-ಬೋಧವು ಬರಬೇಕೆಂದರೆ ಸಮೂಹಾಲಂಬನಾತ್ಮಕವಾದ ಸ್ಮೃತಿಯನ್ನು ಅಂಗೀಕಾರ ಮಾಡಬೇಕು.

ಸಮೂಹಾಲಂಬನಾತ್ಮಕವಾದ ಸ್ಮೃತಿಯನ್ನು ಅಂಗೀಕಾರ ಮಾಡಿದಾಗ ಸಕಲ ಪದಾರ್ಥ-ಗಳನ್ನು ವಿಷಯೀಕರಿಸುವ ಏಕಸ್ಮೃತಿಯಲ್ಲಿ ಸಕಲಪದಾರ್ಥಗಳ ಸ್ಮರಣೆಯೂ ಕೂಡ ಏಕಕಾಲದಲ್ಲಿ ಇರುತ್ತದೆ. ಆಗ ಅವ್ಯವಧಾನೇನ ಪದಾರ್ಥದ ಉಪಸ್ಥಿತಿಯನ್ನು ಹೇಳಲು ಸಾಧ್ಯವೇ ಆಗುವುದಿಲ್ಲ. ಒಂದು ಪದವೂ ಮತ್ತೊಂದು ಪದದಿಂದ ಆಸನ್ನವಾಗಿರುತ್ತದೆ. ಮತ್ತೊಂದು ಪದದಿಂದ ಅನಾಸನ್ನವಾಗಿರುತ್ತದೆ. ಅನಾಸನ್ನವಾದ ಪದಗಳು, ಆಸನ್ನವಾದ ಪದಗಳಿಗಿಂತ ಭಿನ್ನವಾಗಿವೆ ಎಂಬ ವಿಭಾಗವನ್ನು ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಸಕಲ ಪದಾರ್ಥಗಳ ಆಸತ್ತಿಯು ಆ ಸ್ಮೃತಿಯಲ್ಲಿ ಏಕಕಾಲದಲ್ಲಿ ಇರುತ್ತವೆ. ಆಸತ್ತಿ ಇದ್ದಾಗ ಅನಾಸನ್ನವಾದ ಪದಗಳು ಕೆಲವಿವೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಲೋಕದಲ್ಲಿ ಆಸನ್ನಪದಗಳು ಹಾಗೂ ಅನಾಸನ್ನಪದಗಳು ಎಂಬ ವಿಭಾಗವು

ಪ್ರಚುರವಾಗಿದೆ. ಇದಕ್ಕನುಗುಣವಾಗಿ ಶಾಸ್ತ್ರದಲ್ಲಿಯೂ ವ್ಯವಹರಿಸಬೇಕು. ಆದರೆ ಲೋಕ-ವಿರುದ್ಧವಾಗಿ 'ಅವ್ಯವಧಾನೇನ ಅನ್ವಯಪ್ರತಿಯೋಗ್ಯುಪಸ್ಥಿತಿಃ' ಎಂಬ ಆಸತ್ತಿಯ ಲಕ್ಷಣ-ವನ್ನು ಹೇಳಿದರೆ ಅವ್ಯಾಪ್ತಿದೋಷವು ಬರುತ್ತದೆಂಬುದು ಗ್ರಂಥಕಾರರ ಅಭಿಪ್ರಾಯವಾಗಿದೆ.

## ಗೋಷ್ಠೀ ವಿಚಾರ

ವಿಶಿಷ್ಟವಾದದ್ದು ಅತಿರಿಕ್ತಪದಾರ್ಥ ಎಂಬ ವಿಷಯವನ್ನು ಮಂದಾರಮಂಜರಿಯಲ್ಲಿ ಗ್ರಂಥಕಾರರು ವಿವರಿಸಿದ್ದಾರೆ. ಅದರ ಬಗ್ಗೆ ಕೆಲವು ವಿಷಯಗಳ ಸಂಗ್ರಹ ಹೀಗಿದೆ – ಪೂರ್ವ ಪಕ್ಷದಲ್ಲಿ ವಿಶೇಷಣ ಮತ್ತು ವಿಶೇಷ್ಯ ಹಾಗೂ ಇವುಗಳ ಸಂಬಂಧವೇ ವಿಶಿಷ್ಟವಾದ ಪದಾರ್ಥ. ಇವುಗಳಿಗಿಂತ ಭಿನ್ನವಾದ ಪ್ರತ್ಯೇಕವಾದ ವಿಶಿಷ್ಟ ಪದಾರ್ಥ ಇಲ್ಲ ಎಂದು ಹೇಳುತ್ತಿದ್ದಾರೆ. ಹೀಗೆ ಹೇಳಿದಾಗ ಸಹಜವಾಗಿ ಪ್ರಶ್ನೆ ಬರುತ್ತದೆ – ವಿಶೇಷಣ, ವಿಶೇಷ್ಯ ಹಾಗೂ ತತ್ಸಂಬಂಧರೂಪವಾದ ವಿಶಿಷ್ಟವು ನಿತ್ಯವೋ, ಅನಿತ್ಯವೋ? ನಿತ್ಯವಾದ ಪಕ್ಷದಲ್ಲಿ ಎಲ್ಲಾ ಸಮಯದಲ್ಲೂ ವಿಶಿಷ್ಟ ಪದಾರ್ಥದ ಉಪಲಬ್ಧಿ ಬರಬೇಕಾಗುತ್ತದೆ. ವಿಶೇಷಣ ಮತ್ತು ವಿಶೇಷ್ಯಗಳ ಸಂಬಂಧವು ವಿಶಿಷ್ಟಪದಾರ್ಥಕ್ಕೆ ಅಭಿವ್ಯಂಜಕವಾಗಿದೆ. ಆದ್ದರಿಂದ ಯಾವಾಗಲೂ ಅದು ಉಪಲಬ್ಧವಾಗುವುದಿಲ್ಲ ಎನ್ನುವ ಪಕ್ಷದಲ್ಲಿ ಹೀಗೆ ಪ್ರಶ್ನೆ ಬರುತ್ತದೆ.

ವಿಶೇಷಣ ವಿಶೇಷ್ಯಗಳ ಸಂಬಂಧವು ಇದ್ದಮಾತ್ರಕ್ಕೆ ಅಭಿವ್ಯಂಜಕವೋ ಅಥವಾ ಜ್ಞಾತವಾದಾಗ ಅಭಿವ್ಯಂಜಕವೋ? ಇದ್ದಮಾತ್ರಕ್ಕೆ ಅಭಿವ್ಯಂಜಕವಾಗುವುದಾದರೆ ವಿಶಿಷ್ಟ ಪದಾರ್ಥದ ಜ್ಞಾನವೇ ಬರುವುದಿಲ್ಲ. ವಿಶೇಷಣ ಅಥವಾ ವಿಶೇಷ್ಯ ಹಾಗೂ ಅವುಗಳ ಸಂಬಂಧದ ಜ್ಞಾನ ಇಲ್ಲದಿದ್ದರೂ ವಿಶಿಷ್ಟ ಪದಾರ್ಥದ ಬೋಧವು ಬರಬೇಕಾಗುತ್ತದೆ.

ಇನ್ನು ಜ್ಞಾತವಾದ ಸಂಬಂಧವು ಅಭಿವ್ಯಂಜಕವೆಂದು ಒಪ್ಪಬೇಕು. ಆದರೆ ವಿಶಿಷ್ಟವ್ಯವಹಾರಕ್ಕೆ ವಿಶೇಷಣ ವಿಶೇಷ್ಯಗಳ ಜ್ಞಾನವೇ ಕಾರಣವಾಗುವುದರಿಂದ ಪ್ರತ್ಯೇಕವಾಗಿ ಈ ಜ್ಞಾನದಿಂದ ಬರುವ ಮತ್ತೊಂದು ವಿಶಿಷ್ಟವಿಷಯಕ ಜ್ಞಾನವನ್ನು ಅಂಗೀಕಾರ ಮಾಡಿ ಅದರಿಂದ ವಿಶಿಷ್ಟಜ್ಞಾನವನ್ನು ಹಾಗೂ ಅದರ ವ್ಯವಹಾರವನ್ನು ಕಲ್ಪನೆ ಮಾಡಿದರೆ ಕಲ್ಪನಾಗೌರವ-ದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ವಿಶಿಷ್ಟವಾದ ಪದಾರ್ಥವು ನಿತ್ಯವಾಗಿದೆ ಎಂಬ ಪ್ರಥಮ ಪಕ್ಷವು ಅಯುಕ್ತವಾಯಿತು.

ವಿಶಿಷ್ಟಪದಾರ್ಥವು ಅನಿತ್ಯ ಎನ್ನುವ ಎರಡನೆಯ ಪಕ್ಷವೂ ಸರಿಯಲ್ಲ. ಈ ಪಕ್ಷದಲ್ಲಿ ಸಮವಾಯಿ ಎಂಬುದನ್ನು ಉಪಪಾದನೆ ಮಾಡಲು ಬರುವುದಿಲ್ಲ. ಏಕೆಂದರೆ ವಿಶೇಷಣ ಮತ್ತು ವಿಶೇಷ್ಯಗಳಿಗಿಂತ ಪ್ರತ್ಯೇಕವಾದ ಸಮವಾಯಿಕಾರಣವನ್ನು ಏಕೆ ಅಂಗೀಕಾರ ಮಾಡಬೇಕು? ಮತ್ತು ಪ್ರತ್ಯೇಕವಾಗಿ ಉಪಾದಾನಕಾರಣತ್ವವನ್ನೂ ಕೂಡ ಹೇಗೆ ಹೇಳು–ವಿರಿ ? ಒಂದು ಪದಾರ್ಥಕ್ಕೆ ಪ್ರತ್ಯೇಕವಾದ ಉಪದಾನತ್ವ ಹೇಳುವುದು ಎಲ್ಲಿಯೂ ಕಂಡಿಲ್ಲ. ಇನ್ನು ವಿಶೇಷಣ ಹಾಗೂ ವಿಶೇಷ್ಯಗಳು ಒಟ್ಟಾಗಿ ಸೇರಿ ವಿಶಿಷ್ಟಬುದ್ಧಿಯನ್ನು ಕುರಿತು ಉಪಾದಾನಕಾರಣವಾಗುತ್ತವೆಂಬ ವಾದವು ಸರಿಯಲ್ಲ.

ಉದಾಹರಣೆ – 'ರೂಪೀ ಘಟಃ' ಎಂಬ ವಾಕ್ಯವಿದೆ. ಈ ವಾಕ್ಯದಲ್ಲಿ ರೂಪವಿಶಿಷ್ಟವಾದ ಘಟ ಎಂಬ ಶಾಬ್ದಬೋಧವು ಬರುತ್ತದೆ. ಈ ಶಾಬ್ದಬೋಧವನ್ನು ಕುರಿತು ಮಿಲಿತವಾದ ರೂಪ ಹಾಗೂ ಘಟಗಳು ಕಾರಣ ಎಂದು ಅಂಗೀಕರಿಸಬೇಕು. ಆಗ ರೂಪಾರಬ್ಧವಾದ ಮತ್ತು ಘಟಾರಬ್ಧವಾದ ವಿಶಿಷ್ಟಬುದ್ಧಿ 'ರೂಪೀ ಘಟಃ' ಎಂಬ ವಾಕ್ಯದ ಅಭಿಪ್ರಾಯವಾಗುತ್ತದೆ. ಆದರೆ ಈ ರೀತಿಯಾಗಿ ಗುಣವು ಪದಾರ್ಥಕ್ಕೆ ಸಮವಾಯಿಕಾರಣವಾಗುವುದು ಲೋಕದಲ್ಲಿ ಕಂಡಿಲ್ಲ. ಹಾಗೂ ಸಾಂಕರ್ಯದೋಷವೂ ಕೂಡ ಬರುತ್ತದೆ.

ಅದು ಹೀಗೆ – ದ್ರವ್ಯಾರಬ್ಧವಾದ ಪದಾರ್ಥವು ದ್ರವ್ಯತ್ವದಲ್ಲಿದೆ. ಗುಣಾರಬ್ಧವಾದ ಪದಾರ್ಥವು ಗುಣತ್ವದಲ್ಲಿದೆ. ದ್ರವ್ಯತ್ವವನ್ನು ಬಿಟ್ಟು ಗುಣತ್ವವು ಗುಣದಲ್ಲಿದೆ. ಗುಣತ್ವವನ್ನು ಬಿಟ್ಟು ದ್ರವ್ಯತ್ವವು ದ್ರವ್ಯದಲ್ಲಿದೆ. ದ್ರವ್ಯ ಮತ್ತು ಗುಣಗಳಿಂದ ಆರಬ್ಧವಾದ ವಿಶಿಷ್ಟಪದಾರ್ಥವು ದ್ರವ್ಯ ಗುಣ ಉಭಯರೂಪವಾಗಬೇಕು. ಆಗ 'ದ್ರವ್ಯತ್ವಂ ವಿಹಾಯ ಗುಣತ್ವಂ ಗುಣೇ, ಗುಣತ್ವಂ ವಿಹಾಯ ದ್ರವ್ಯತ್ವಂ ದ್ರವ್ಯೇ, ತದುಭಯೋಃ ಸಮಾವೇಶಃ ದ್ರವ್ಯಗುಣಾರಬ್ಧೇ' ಎಂಬುದಾಗಿ ದ್ರವ್ಯತ್ವ ಗುಣತ್ವಗಳಿಗೆ ಸಾಂಕರ್ಯವನ್ನು ಒಪ್ಪಬೇಕಾಗುತ್ತದೆ.

ಎಷ್ಟು ವಿಶೇಷಣಗಳು ಒಂದು ವಾಕ್ಯದಲ್ಲಿ ಇವೆಯೋ ಅಷ್ಟು ವಿಶಿಷ್ಟಪದಾರ್ಥಗಳನ್ನು ಅಂಗೀಕಾರ ಮಾಡಿದರೆ. ಆ ಎಲ್ಲಾ ವಿಶಿಷ್ಟಪದಾರ್ಥಗಳು ಒಂದೇ ವಿಶೇಷ್ಯದಲ್ಲಿವೆ ಎಂದು ಹೇಳಬೇಕಾಗುತ್ತದೆ. ಹೀಗೆ ಒಪ್ಪಿದಾಗ ಅನೇಕ ಮೂರ್ತಪದಾರ್ಥಗಳಿಗೆ ಸಾಮಾನಾ–ಧಿಕರಣ್ಯವನ್ನೂ ಕೂಡ ಒಪ್ಪಿದಂತಾಗುತ್ತದೆ. ಆದ್ದರಿಂದ ಒಂದು ವಿಶೇಷಣ ಅಥವಾ ವಿಶೇಷ್ಯಗಳ ಸಂಬಂಧವನ್ನೇ ವಿಶಿಷ್ಟಪದಾರ್ಥ ಎನ್ನಬೇಕು.

ವಿಶಿಷ್ಟವು ಪ್ರತ್ಯೇಕ ಪದಾರ್ಥವೆಂಬುದನ್ನು ಹೀಗೆ ತಿಳಿಯಬೇಕು – 'ದಂಡೀ ದೇವದತ್ತಃ' ಎಂಬಲ್ಲಿ ದಂಡವಿಶಿಷ್ಟನಾದ ದೇವದತ್ತನೆಂಬ ಶಾಬ್ದಬೋಧ ಬರುತ್ತದೆ. 'ದಂಡೀ' ಎಂಬ ವಿಶಿಷ್ಟವ್ಯವಹಾರಕ್ಕೆ ಒಂದು ನಿಮಿತ್ತವನ್ನು ಒಪ್ಪಬೇಕು. ಇಲ್ಲದಿದ್ದರೆ ವ್ಯವಹಾರವೇ ಕೂಡು-ವುದಿಲ್ಲ.

ಉದಾಹರಣೆ – ಘಟದ ಜ್ಞಾನವಿಲ್ಲದೆ ಘಟದ ವ್ಯವಹಾರ ಮಾಡಲು ಸಾಧ್ಯವಿಲ್ಲ. ಇದರಂತೆ ವಿಶಿಷ್ಟದ ಜ್ಞಾನವಿಲ್ಲದೆ ವಿಶಿಷ್ಟದ ವ್ಯವಹಾರವೂ ಕೂಡ ಸಾಧ್ಯವಾಗುವುದಿಲ್ಲ. ಯಾವುದು ವಿಶಿಷ್ಟಜ್ಞಾನಕ್ಕೆ ಕಾರಣವೋ, ಅದನ್ನು ಕೂಡ ವಿಶಿಷ್ಟ ಎಂದೇ ವ್ಯವಹಾರ ಮಾಡಬೇಕು. ಬೇರೆ ಮತ್ತೊಂದು ಪದಾರ್ಥವನ್ನು ಕಾರಣವೆಂದು ಹೇಳಲು ಸಾಧ್ಯವಿಲ್ಲ. ಅದು ಹೀಗೆ –

'ದಂಡೀ ಕುಂಡಲೀ ದೇವದತ್ತಃ' ಎಂಬ ವಿಶಿಷ್ಟಪ್ರತೀತಿಯಲ್ಲಿ ವಿಷಯವಾದದ್ದು ಯಾವುದು.

1. ವಿಶೇಷಣ ಮತ್ತು ವಿಶೇಷ್ಯಗಳೋ ?

2. ಅಗೃಹೀತ-ಅಸಂಸರ್ಗಕವಾದ ವಿಶೇಷಣ ಹಾಗೂ ವಿಶೇಷ್ಯಗಳೋ ?

3. ವಿಶೇಷಣ-ವಿಶೇಷ್ಯ ಇವುಗಳ ಸಂಬಂಧವೋ ?

4. ಅದಂಡಿವ್ಯಾವೃತವಾದ ಕೇವಲ ದೇವದತ್ತನ ಸ್ವರೂಪವೋ ?

1. ವಿಶೇಷಣ ಹಾಗೂ ವಿಶೇಷ್ಯಗಳು ವಿಶಿಷ್ಟವ್ಯವಹಾರಕ್ಕೆ ವಿಷಯ ಎಂಬ ಪ್ರಥಮ ಪಕ್ಷದಲ್ಲಿ ವಿಶೇಷಣ ಹಾಗೂ ವಿಶೇಷ್ಯಗಳು ಪ್ರತ್ಯೇಕವಾಗಿ ವಿಷಯವೋ ? ಅಥವಾ ಮಿಲಿತವಾಗಿ ವಿಷಯವೋ ? ಪ್ರತ್ಯೇಕವಾಗಿ ವಿಷಯವೆಂದು ಒಪ್ಪಿದರೆ ದಂಡ ಹಾಗೂ ದೇವದತ್ತ ಎಂಬ ಒಂದೊಂದೇ ಪದಾರ್ಥದ ಜ್ಞಾನ ಬಂದಾಗಲೂ ವಿಶಿಷ್ಟಪ್ರತೀತಿಯು ಬರಬೇಕಾಗುತ್ತದೆ.

ಮಿಲಿತವಾದ ವಿಶೇಷಣ ವಿಶೇಷ್ಯಗಳು ಕಾರಣವೆಂದು ಹೇಳಿದರೆ, ಆಗ 'ಇಮೌ ದಂಡದೇವದತ್ತೌ' ಎಂದು ಸಮೂಹಾಲಂಬನಾತ್ಮಕವಾದ ಜ್ಞಾನದಲ್ಲಿ ಮಿಲಿತವಾಗಿ ದಂಡ ಹಾಗೂ ದೇವದತ್ತರು ವಿಷಯವಾಗಿರುವುದರಿಂದ, ಇದನ್ನೂ ಕೂಡ ವಿಶಿಷ್ಟವ್ಯವಹಾರವೆಂದು ಹೇಳಬೇಕಾಗುತ್ತದೆ. ಇಷ್ಟಾಪತ್ತಿ ಎಂದರೆ ಸಮೂಹಾಲಂಬನಾತ್ಮಕವಾದ ಜ್ಞಾನವೇ ಇಲ್ಲವೆಂದಾಗುತ್ತದೆ.

ಅಗೃಹೀತ ಅಸಂಸರ್ಗಕವಾದ ವಿಶೇಷಣ ಹಾಗೂ ವಿಶೇಷ್ಯಗಳು ವಿಶಿಷ್ಟವ್ಯವಹಾರಕ್ಕೆ ಕಾರಣ ಎಂಬ ಎರಡನೆಯ ಪಕ್ಷವೂ ಕೂಡ ಅಸಾಧುವಾಗಿದೆ. ಈ ಪಕ್ಷದಲ್ಲಿಯೂ ಕೂಡ ಹಿಂದೆ ಹೇಳಿದಂತೆ ಸಮೂಹಾಲಂಬನಾತ್ಮಕವಾದ ಜ್ಞಾನವನ್ನೂ ಕೂಡ ವಿಶಿಷ್ಟ ವ್ಯವಹಾರವೆಂದು ಒಪ್ಪಬೇಕಾಗುವ ಪರಿಸ್ಥಿತಿ ಇದೆ. ಏಕೆಂದರೆ ಅಗೃಹೀತವಾದ ಅಸಂಸರ್ಗ ಎಂದರೆ ಸಂಬಂಧದ ಗ್ರಹಣವು ವಿಶೇಷಣ ಹಾಗೂ ವಿಶೇಷ್ಯಗಳಿಗೆ ಆಗಿಲ್ಲ ಎಂದರ್ಥ. ಸಮೂಹಾಲಂಬನಾ-ತ್ಮಕಜ್ಞಾನದಲ್ಲಿ ಅನೇಕ ವಿಶೇಷಣಗಳು ಪ್ರಸ್ತಕವಾಗಿವೆ. ಅವುಗಳ ಸಂಬಂಧದ ಗ್ರಹಣ ಮಾತ್ರ ಆಗಿರುವುದಿಲ್ಲ. ಇಂತಹ ಸ್ಥಳದಲ್ಲಿ ಅಗೃಹೀತ-ಅಸಂಸರ್ಗಕವಾದ ವಿಶೇಷಣ ವಿಶೇಷ್ಯಗಳು ಇರುವುದರಿಂದ ಸಮೂಹಾಲಂಬನಾತ್ಮಕ ಜ್ಞಾನಗಳೂ ಕೂಡ ವಿಶಿಷ್ಟ ಜ್ಞಾನಕ್ಕೆ ಕಾರಣ-ವೆಂದಾಗುತ್ತದೆ. ಆದ್ದರಿಂದ ಅಗೃಹೀತಸಂಸರ್ಗಕವಾದ ವಿಶೇಷಣ ವಿಶೇಷ್ಯಗಳು ವಿಶಿಷ್ಟಜ್ಞಾನಕ್ಕೆ ಕಾರಣ ಎಂಬ ಪಕ್ಷವು ಅಸಾಧುವಾಗಿದೆ.

ಅಭಿಪ್ರಾಯ ಹೀಗಿದೆ – ದಂಡ, ದೇವದತ್ತ, ತತ್ಸಂಬಂಧಗಳು ಸಮೂಹಾಲಂಬನಜ್ಞಾನದಲ್ಲಿ ವಿಷಯವಾಗಿವೆ. ವಿಶೇಷಣ, ವಿಶೇಷ್ಯ ಮತ್ತು ತತ್ಸಂಬಂಧಗಳು ವಿಶಿಷ್ಟಜ್ಞಾನಕ್ಕೆ ಕಾರಣ ಎನ್ನುವ ಪಕ್ಷದಲ್ಲಿ ಸಮೂಹಾಲಂಬನ ಜ್ಞಾನಕ್ಕೂ ವಿಶಿಷ್ಟಜ್ಞಾನಕ್ಕೂ ವ್ಯತ್ಯಾಸವೇ ಇಲ್ಲದೇ ಹೋಗಬೇಕಾಗುತ್ತದೆ. ವಿಶಿಷ್ಟ ಜ್ಞಾನಕ್ಕೆ ವಿಷಯವಾದದ್ದು ವಿಶೇಷಣ, ವಿಶೇಷ್ಯ ಹಾಗೂ ಅವೆರಡರ ಸಂಬಂಧಗಳು. ದಂಡದೇವದತ್ತ ಮತ್ತು ದಂಡ ದೇವದತ್ತರ ಸಂಬಂಧ. ಇವುಗಳೇ ಸಮೂಹಾಲಂಬನಜ್ಞಾನದಲ್ಲಿ ವಿಷಯವಾದವುಗಳು. ವಿಶಿಷ್ಟ ಜ್ಞಾನದಲ್ಲೂ ಇವೇ ವಿಷಯ. ಹೀಗೆ ಸಮೂಹಾಲಂಬನಜ್ಞಾನಕ್ಕೂ ವಿಶಿಷ್ಟ ಜ್ಞಾನಕ್ಕೂ ವಿಷಯದಲ್ಲಿ ವ್ಯತ್ಯಾಸವೇ ಇರುವುದಿಲ್ಲ. ಆದ್ದರಿಂದ ಸಮೂಹಾಲಂಬನಜ್ಞಾನ ಮತ್ತು ವಿಶಿಷ್ಟಜ್ಞಾನಗಳನ್ನು ಪ್ರತ್ಯೇಕವಾಗಿ ಲೋಕದಲ್ಲಿ ವ್ಯವಹಾರ ಮಾಡಲು ಸಾಧ್ಯವಿಲ್ಲದೇ ಹೋಗಬೇಕಾಗುತ್ತದೆ.

ಅದಂಡಿವ್ಯಾವೃತ್ತವಾದ ದೇವದತ್ತಸ್ವರೂಪವು ವಿಶಿಷ್ಟ ಜ್ಞಾನಕ್ಕೆ ಕಾರಣ ಎಂಬ ನಾಲ್ಕನೆಯ ಪಕ್ಷವು ಸರಿಯಲ್ಲ. 'ದಂಡೀ ದೇವದತ್ತಃ' ಎಂಬ ವಿಶಿಷ್ಟ ಜ್ಞಾನದಲ್ಲಿ ಅದಂಡಿಯ ವ್ಯಾವೃತ್ತಿಯು ತೋರುತ್ತದೋ ಇಲ್ಲವೋ ? ತೋರುವುದಿಲ್ಲ ಎಂದರೆ ಆಗ 'ದಂಡೀ ದೇವದತ್ತಃ' ಎಂಬ ಜ್ಞಾನಕ್ಕೂ ಮತ್ತು 'ಅಯಂ ದೇವದತ್ತಃ' ಎಂಬ ಜ್ಞಾನಕ್ಕೂ ವ್ಯತ್ಯಾಸ ಇಲ್ಲ ಎಂದಾಗ-ಬೇಕಾದೀತು.

1. 'ದಂಡೀ ದೇವದತ್ತಃ' ಎಂಬ ಜ್ಞಾನಕ್ಕೆ ವಿಷಯವಾದದ್ದು ದಂಡವಿಶಿಷ್ಟನಾದ ದೇವದತ್ತ.
2. 'ಅಯಂ ದೇವದತ್ತಃ' ಎಂಬ ಜ್ಞಾನಕ್ಕೆ ವಿಷಯವಾದದ್ದು ಕೇವಲ ದೇವದತ್ತ.

'ದಂಡೀ' ಎಂಬ ವಿಶೇಷಣವನ್ನು ನೀಡಿದಾಗ ದಂಡರಹಿತನಾದ ಪುರುಷನ ಬೇಧವು ತೋರುವುದಿಲ್ಲ ಎಂದಲ್ಲಿ ಈ ಎರಡು ಜ್ಞಾನಗಳಿಗೆ ಭೇದವನ್ನೇ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಎರಡು ಜ್ಞಾನಗಳಿಗೆ ವಿಷಯಭೇದವನ್ನು ಉಪಪಾದನೆ ಮಾಡಬೇಕು. ಅದು ಹೀಗೆ –

ವಿಷಯಭೇದವು ಸ್ವರೂಪತಃ ತೋರುತ್ತದೋ ಅಥವಾ ದೇವದತ್ತಾದಿವಿಶಿಷ್ಟಾಕಾರದಿಂದ ತೋರುತ್ತದೋ ? ಮೊದಲನೆಯ ಪಕ್ಷ ತಪ್ಪು. ಏಕೆಂದರೆ ಭೇದವು ಎರಡು ಪದಾರ್ಥ-ಗಳಲ್ಲಿರುವ ಧರ್ಮ. ಆದ್ದರಿಂದ ಒಂದು ಪದಾರ್ಥದಲ್ಲಿ ಭೇದವನ್ನು ಹೇಳಲು ಸಾಧ್ಯವಿಲ್ಲ. ಇನ್ನು ವಿಶಿಷ್ಟಾಕಾರದಿಂದ ಭೇದವು ಪ್ರತೀತವಾಗುತ್ತದೆಂಬ ಎರಡನೆಯ ಪಕ್ಷವನ್ನು ಒಪ್ಪಬೇಕು. ಆಗ ದಂಡವೈಶಿಷ್ಟ್ಯವು ಅದಂಡೀವ್ಯಾವೃತ್ತಿಯ ಸ್ವರೂಪವೋ, ಅಥವಾ ಅವ್ಯಾವೃತ್ತಿಯ ವ್ಯಾವೃತ್ತಿಯೋ, ಅಥವಾ ಪದಾರ್ಥಾಂತರವೋ ? ಎಂಬ ಪ್ರಶ್ನೆಗಳು ಎದುರಾಗುತ್ತವೆ. ಅವ್ಯಾವೃತ್ತಿಯ ವ್ಯಾವೃತ್ತಿ ಎಂಬ ಎರಡನೆಯ ಪಕ್ಷದಲ್ಲಿ ವಿಶಿಷ್ಟ ಎಂಬ ಪದಾರ್ಥವನ್ನು ಪುನಃ ಒಪ್ಪಿದಂತಾಗುತ್ತದೆ.

ಯಾವುದರ ಭೇದದ ಜ್ಞಾನವು ಮತ್ತೊಂದರಲ್ಲಿ ತಿಳಿದಿಲ್ಲವೋ ಅಂತಹ ಭೇದವನ್ನು ಅದು ತಿಳಿಸುತ್ತದೆಂಬುದು ಇದರ ಅಭಿಪ್ರಾಯ. ಹೀಗೆ ಒಪ್ಪಿದಾಗ ವಿಶಿಷ್ಟಜ್ಞಾನವನ್ನು ಪ್ರತ್ಯೇಕವಾಗಿ ಅಂಗೀಕಾರ ಮಾಡಿದಂತಾಗುವುದರಿಂದ, 'ದಂಡೀ ದೇವದತ್ತಃ' ಎಂಬ ಪ್ರತೀತಿಯಲ್ಲಿ ದಂಡ ವಿಶಿಷ್ಟನಾದ ದೇವದತ್ತನ ಜ್ಞಾನವು ಬೇರೆ ವಾಕ್ಯದಿಂದ ತೋರುವುದಿಲ್ಲ ಎಂದು ಹೇಳಿದಂತಾಯಿತು. ಇನ್ನು ದಂಡವೈಶಿಷ್ಟವು ಅದಂಡೀವ್ಯಾವೃತ್ತಿ ಎಂದು ಹೇಳುವುದಾದರೆ ಆಗ ಆ ವಿಶಿಷ್ಟ ಜ್ಞಾನದಲ್ಲಿ ವ್ಯಾವೃತ್ತಿಯು ತೋರುತ್ತದೋ, ಇಲ್ಲವೋ? ಎಂಬ ಪ್ರಶ್ನೆ ಬರುತ್ತದೆ. ಈ ಪ್ರಶ್ನೆಗೆ ಉತ್ತರಿಸಿದರೆ ಅಲ್ಲೂ ಪುನಃ ಇದೇ ಪ್ರಶ್ನೆ ಪ್ರಾಪ್ತವಾಗುವುದರಿಂದ ಅನವಸ್ಥಾ-ದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ವಿಶಿಷ್ಟ ಜ್ಞಾನಕ್ಕೆ ವಿಷಯವಾದ ಪ್ರತ್ಯೇಕವಾದ ವಿಶಿಷ್ಟ ಎಂಬ ಪದಾರ್ಥವನ್ನು ಒಪ್ಪಲೇಬೇಕು.

## ಪ್ರಥಮಲಕ್ಷಣಕ್ಕೆ ಮತ್ತೊಂದು ದೋಷ

**ತರ್ಕತಾಂಡವ – ಕಿಂಚ ಪದ್ಯೇ ಕುಲಕಾದೌ ಚ ಅತಿವ್ಯವಹಿತತತ್ವಾತ್ ಕಥಮಾಸತ್ತಿಃ?**

ಅನುವಾದ - ಮತ್ತು ಶ್ಲೋಕದಲ್ಲಿ ಹಾಗೂ ಕುಲಕಶ್ಲೋಕಗಳಲ್ಲಿ ಬಹಳ ವ್ಯವಹಿತವಾಗಿ ಪದಗಳ ಅನ್ವಯವಿರುವುದರಿಂದ ಆಸತ್ತಿಯನ್ನು ಹೇಳಲು ಹೇಗೆ ಸಾಧ್ಯವಾಗುತ್ತದೆ?

ವಿವರಣೆ - ಪ್ರತಿಯೊಂದು ಶ್ಲೋಕಗಳಲ್ಲಿ ಕ್ರಿಯಾ-ಕಾರಕಪದಗಳು ಪರಸ್ಪರವಾಗಿ ಆಸತ್ತಿ-ಯನ್ನು ಹೊಂದಿರುವುದಿಲ್ಲ. ಕ್ರಿಯಾವಿಭಕ್ತಿ ಒಂದು ಕಡೆ ಇದ್ದರೆ, ಕಾರಕ ವಿಭಕ್ತಿಯು ಮತ್ತೊಂದು ಕಡೆ ಇರುತ್ತದೆ. ಅವ್ಯವದಾನೇನ ಪದಾರ್ಥಸ್ಮೃತಿಯನ್ನೇ ಆಸತ್ತಿಲಕ್ಷಣ-ವೆಂದು ನೀವು ಹೇಳಿದರೆ ಶ್ಲೋಕದಲ್ಲಿರುವ ಕ್ರಿಯಾಕಾರಕ ಪದಗಳಿಂದ ಅವ್ಯವಧಾನೇನ ಪದಾರ್ಥಸ್ಮೃತಿಯು ಇರುವುದಿಲ್ಲ. ಆದ್ದರಿಂದ ಆಸತ್ತಿಯ ಲಕ್ಷಣವು ಬಾರದ ಕಾರಣ ಅವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ.

ಇದರಂತೆ ಕುಲಕಶ್ಲೋಕದಲ್ಲಿಯೂ ಸಹ ಅವ್ಯಾಪ್ತಿದೋಷವು ಬರುತ್ತದೆ. ಏಕೆಂದರೆ ಕೇವಲ ಶಬ್ದಾಲಂಕಾರಕ್ಕೋಸ್ಕರ ಕುಲಕಶ್ಲೋಕಗಳನ್ನು ರಚನೆ ಮಾಡಲಾಗುತ್ತದೆ. ಅನೇಕ ಶ್ಲೋಕಗಳ ಅನಂತರ ಕ್ರಿಯಾಪದದ ಅನ್ವಯವನ್ನು ಈ ಸಂದರ್ಭದಲ್ಲಿ ಹೇಳುತ್ತಾರೆ. ಕರ್ತೃವಿನಲ್ಲಿ ಹಾಗೂ ಕರ್ಮದಲ್ಲಿ ಅನೇಕ ವಿಶೇಷಣಗಳನ್ನು ಹೇಳುವುದೇ ಈ ಕುಲಕ-ಶ್ಲೋಕದ ಸ್ವಾರಸ್ಯ. ಇಂಥ ಕುಲಕಶ್ಲೋಕಗಳಲ್ಲಿ 'ಅವ್ಯವಧಾನೇನ ಪದಾರ್ಥಸ್ಮೃತಿಃ' ಎಂಬ ಆಸತ್ತಿಯ ಲಕ್ಷಣವು ಇಲ್ಲದ ಕಾರಣ, ಇವೆಲ್ಲವೂ ಶ್ಲೋಕಾಭಾಸವೆಂದಾಗ-ಬೇಕಾಗುತ್ತದೆ.

## ದೂರಾನ್ವಯವಿರುವ ಶ್ಲೋಕದಲ್ಲಿ ಅವ್ಯಾಪ್ತಿದೋಷ

**ನ್ಯಾಯದೀಪ – ಸ್ಥಳಾಂತರೇಽಪಿ ಅವ್ಯಾಪ್ತಿಮಾಹ – ಕಿಂಚ ಪದ್ಯ ಇತಿ ॥**

**'ಶ್ರಿಯಃ ಪತಿಃ ಶ್ರೀಮತಿ ಶಾಸಿತುಂ ಜಗಜ್ಜಗನ್ನಿವಾಸೋ ವಸುದೇವಸದ್ಮನಿ ವಸನ್ ದದರ್ಶಾವತರಂತಮಂಬರಾತ್ ...'**

**ಇತ್ಯಾದಿಶ್ಲೋಕೇ ಕ್ರಿಯಾಕಾರಕಪದಾನಾಮ್ ಅತಿವ್ಯವಹಿತತ್ವಾತ್ ತತ್ರ ತ್ವದುಕ್ತಾವ್ಯವಹಿತಪದಾರ್ಥಸ್ಮೃತೇಃ ಅಯೋಗಾತ್ ।**

ಅನುವಾದ - ಮತ್ತೊಂದು ಸ್ಥಳದಲ್ಲಿ ಅವ್ಯಾಪ್ತಿದೋಷವನ್ನು 'ಕಿಂಚ ಪದ್ಯೇ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

'ಶ್ರಿಯಃಪತಿಃ ಶ್ರೀಮತಿ ಶಾಸಿತುಂ ಜಗಜ್ಜಗನ್ನಿವಾಸೋ ವಸುದೇವಸದ್ಮನಿ ।
ವಸನ್ ದದರ್ಶಾವತರಂತಮಂಬರಾತ್................ ॥

ಇವೇ ಮೊದಲಾದ ಶ್ಲೋಕಗಳಲ್ಲಿ ಕ್ರಿಯಾಕಾರಕಪದಗಳಿಗೆ ಬಹಳ ವ್ಯವಧಾನ ಇರುವುದರಿಂದ ಅಲ್ಲಿ ನೀನು ಹೇಳುವ ಅವ್ಯವಹಿತಪದಾರ್ಥಸ್ಮೃತಿಯೇ ಕೂಡುವುದಿಲ್ಲ.

ಆದ್ದರಿಂದ ಅವ್ಯಾಪ್ತಿದೋಷವು ಬರುತ್ತದೆ.

## ಮಾಘಕವಿಯ ಕಾವ್ಯದಲ್ಲಿಯೂ ಅವ್ಯಾಪ್ತಿದೋಷ

**ನ್ಯಾಯದೀಪ – 'ತತಃ ಸಪತ್ನಾಪನಯಸ್ಮರಣಾನುಶಯಸ್ಫುರಾ ।' ಇತ್ಯಾದಿ ಮಾಘಸ್ಥೇಷು ಅಷ್ಟಸು ಶ್ಲೋಕೇಷು ಅತಿವ್ಯವಹಿತತ್ವಾತ್ ತತ್ರ ಅವ್ಯಾಪ್ತಿರಿತಿ ಭಾವಃ ॥**

ಅನುವಾದ - 'ತತಃ ಸಪತ್ನಾಪನಯಸ್ಮರಣಾನುಶಯಸ್ಫುರಾ' ಮುಂತಾದ ಮಾಘಕಾವ್ಯದಲ್ಲಿರುವ ಎಂಟು ಶ್ಲೋಕಗಳಲ್ಲಿ ಅತಿವ್ಯವಧಾನವಿರುವುದರಿಂದ ಅವ್ಯಾಪ್ತಿದೋಷವು ಬರುತ್ತದೆಂದು ಅಭಿಪ್ರಾಯ.

ವಿವರಣೆ - 'ಶ್ರಿಯಪತಿಃ ಶ್ರೀಮತಿ ಶಾಸಿತುಂ ಜಗಜ್ಜಗನ್ನಿವಾಸಃ ವಸುದೇವಸದ್ಮನಿ । ವಸನ್ ದದರ್ಶಾವತರಂತಮಂಬರಾತ್' ಎಂಬ ಬಲರಾಮನ ಅವತಾರದ ಶ್ಲೋಕವು ಪ್ರಸಿದ್ಧ-ವಾಗಿದೆ. ಈ ಶ್ಲೋಕದಲ್ಲಿ ಅನ್ವಯಕ್ರಮ ಹೀಗಿದೆ - 'ಶ್ರಿಯಃಪತಿಃ ಜಗಜ್ಜಗನ್ನಿವಾಸಃ ಜಗತ್ ಶಾಸಿತುಂ ಅಂಬರಾತ್ ಅವತರಂತಂ ದದರ್ಶ' 'ಲಕ್ಷ್ಮೀಪತಿಯಾದ ಜಗತ್ತಿಗೆ ಆಶ್ರಯನಾದ ನಾರಾಯಣನು ಜಗತ್ತನ್ನು ರಕ್ಷಿಸುವುದಕ್ಕೋಸ್ಕರ ಆಕಾಶದಿಂದ ಅವತರಿಸತಕ್ಕ ಬಲರಾಮ-ನನ್ನು ನೋಡಿದನು' ಎಂಬುದು ಇದರ ಅಭಿಪ್ರಾಯ.

'ಶ್ರಿಯಃಪತಿಃ ದದರ್ಶ' ಎಂಬುದಾಗಿ ಅನ್ವಯಕ್ರಮವನ್ನು ತಿಳಿಯಬೇಕು. ಈ ಶ್ಲೋಕದಲ್ಲಿ ಕ್ರಿಯಾಪದವಾಗಲಿ, ಕಾರಕಪದವಾಗಲಿ ಆ ಕ್ರಮದಲ್ಲಿ ಎಂದರೆ ಅನ್ವಯಬೋಧ ಯಾವ ಕ್ರಮದಲ್ಲಿ ಬರುತ್ತದೋ ಆ ಕ್ರಮದಲ್ಲಿ ಪ್ರಯುಕ್ತವಾಗಿಲ್ಲ. ಆದ್ದರಿಂದ ಈ ಕ್ರಿಯಾಕಾರಕ-ಪದಗಳು ಅತ್ಯಂತ ವ್ಯವಧಾನವನ್ನು ಹೊಂದಿದೆ. ಆದ್ದರಿಂದ ಈ ಶ್ಲೋಕದಲ್ಲಿ ಆಸತ್ತಿಯು ಬರುವುದಿಲ್ಲ. ಆದ್ದರಿಂದ ಅವ್ಯವಹಿತವಾದ ಪದಾರ್ಥಸ್ಮೃತಿಯನ್ನು ಆಸತ್ತಿಯ ಲಕ್ಷಣ ಎಂದು ಹೇಳಲು ಸಾಧ್ಯವಿಲ್ಲ.

ವಿಶೇಷ ವಿಚಾರ - ಈ 'ಶ್ರಿಯಃಪತಿಃ' ಮುಂತಾದ ಶ್ಲೋಕಗಳನ್ನು ದೃಷ್ಟಾಂತವನ್ನಾಗಿ ಕೊಡುವುದರ ಉದ್ದೇಶ ಹೀಗಿದೆ - ಮಾಧ್ವಕಾವ್ಯಗಳನ್ನು ದೃಷ್ಟಾಂತ ಕೊಟ್ಟರೆ ನೀವು ಉದಾಹರಿಸಿದ ಶ್ಲೋಕದಲ್ಲಿ ಕಾವ್ಯದೋಷವಿದೆ. ಆದ್ದರಿಂದ ಅದು ದೃಷ್ಟಾಂತವೇ ಅಲ್ಲವೆಂದು ಪ್ರತಿವಾದಿಯು ಆಕ್ಷೇಪ ಮಾಡಬಹುದು. ಆದ್ದರಿಂದ ಪರಕೀಯರನ್ನು ಕುರಿತು 'ಪರನ್ಯಾಯೈಶ್ಚ ದೂಷಣಂ' ಎಂಬ ಅನುವ್ಯಾಖ್ಯಾನದ ಮಾತಿನಂತೆ ಅವರ ನ್ಯಾಯ-ದಿಂದಲೇ ಅವರಿಗೆ ದೋಷವನ್ನು ಹೇಳುವ ಉದ್ದೇಶದಿಂದ ನೀವು ಹೇಳಿದ ಲಕ್ಷಣಗಳು ನಿಮ್ಮ ಕಾವ್ಯದಲ್ಲಿ ಇಲ್ಲ ಎಂದು ಸೂಚಿಸುವುದಕ್ಕೋಸ್ಕರ 'ಶ್ರಿಯಃಪತಿಃ' ಮುಂತಾದ ಪರಕಾವ್ಯಗಳಲ್ಲಿರುವ ಶ್ಲೋಕಗಳನ್ನು ಇಲ್ಲಿ ದೃಷ್ಟಾಂತವನ್ನಾಗಿ ನೀಡಿದ್ದಾರೆ.

ಇದರಂತೆ ಮಾಘಕಾವ್ಯದಲ್ಲಿ 'ತತಃ ಸಪತ್ನಾಪನಯಸ್ಮರಣಾನುಶಯ ಸ್ಫುರಾ' ಎಂದು ಪ್ರಾರಂಭವಾಗಿ ಎಂಟು ಶ್ಲೋಕಗಳು ಒಟ್ಟಿಗೆ ಅನ್ವಯವನ್ನು ಹೊಂದಿವೆ. ಇಲ್ಲಿ ಎಂಟನೆಯ ಶ್ಲೋಕದಲ್ಲಿರುವ ಕ್ರಿಯಾಪದದ ಜೊತೆಗೆ ಪ್ರತಿಯೊಂದು ಶ್ಲೋಕಗಳಿಗೂ ಸಹ ಅನ್ವಯವನ್ನು ಹೇಳಬೇಕು. ಇಂಥ ಕುಲಕ ಶ್ಲೋಕಗಳಲ್ಲಿ ಅನೇಕ ಶ್ಲೋಕಗಳ ವ್ಯವಧಾನವಿರುತ್ತದೆ. ಆದ್ದರಿಂದ ಅದು ಕುಲಕಾಭಾಸ ಎಂದಾಗಬೇಕಾಗುತ್ತದೆ.

ನ್ಯಾಯದೀಪದಲ್ಲಿ 'ಮಾಘಸ್ಥೇಷು' ಎಂಬ ಶಬ್ದ ಇದೆ. 'ಮಾಘಸ್ಥ' ಎಂದರೆ ಮಾಘಕವಿ ರಚನೆ ಮಾಡಿದ ಮಾಘನ ಕಾವ್ಯದಲ್ಲಿರುವ ಶ್ಲೋಕಗಳು ಎಂದರ್ಥ. ಕವಿಯಿಂದ ರಚಿತವಾದ ಕಾವ್ಯವನ್ನು ಸಹ ಕವಿಯ ಹೆಸರಿನಿಂದಲೇ ಉಲ್ಲೇಖ ಮಾಡುವ ಕ್ರಮವಿದೆ. ಆದ್ದರಿಂದ 'ಮಾಘಸ್ಥ' ಎಂಬ ಶಬ್ದಕ್ಕೆ ಮಾಘಕವಿರಚಿತವಾದ 'ಶಿಶುಪಾಲವಧ' ಎಂಬ ಕಾವ್ಯದಲ್ಲಿರುವ ಎಂಬುದಾಗಿ ಅರ್ಥೈಸಿಕೊಳ್ಳಬೇಕು.

## 'ಅವ್ಯವಹಿತಪದೋಪಸ್ಥಿತಿ' ಎಂಬ ಆಸತ್ತಿಯ ಲಕ್ಷಣ ತಪ್ಪು

**ತರ್ಕತಾಂಡವ– ನಾಪಿ ಅವ್ಯವಹಿತಪದೋಪಸ್ಥಿತಿರಾಸತ್ತಿಃ । ವ್ಯವಹಿತಪದೋ-ಪಸ್ಥಿತಿಕಪದ್ಯಾದೌ ಅವ್ಯಾಪ್ತೇಃ । ಉಕ್ತರೀತ್ಯಾ ಆಸತ್ತಿಜ್ಞಾನಸ್ಯ ಹೇತುತ್ವಾನುಪಪತ್ತೇಶ್ಚ ।**

ಅನುವಾದ - 'ಅವ್ಯವಹಿತಪದೋಪಸ್ಥಿತಿ' ಎಂಬುದು ಸಹ ಆಸತ್ತಿಯ ಲಕ್ಷಣ ಅಲ್ಲ. ಏಕೆಂದರೆ ವ್ಯವಹಿತಪದೋಪಸ್ಥಿತಿ ಇರುವ ಪದ್ಯಾದಿಗಳಲ್ಲಿ ಅವ್ಯಾಪ್ತಿಯು ಬರುತ್ತದೆ. ಹಾಗೂ ಹಿಂದೆ ಹೇಳಿ-ದಂತೆ ಆಸತ್ತಿಜ್ಞಾನವು ಹೇತು ಎಂದಾಗಲೂ ಕೂಡ ಸಾಧ್ಯವಿಲ್ಲ.

## ಪದಾವ್ಯವಧಾನ ಎಂಬುದೂ ಸಹ ಆಸತ್ತಿ ಲಕ್ಷಣವಲ್ಲ

**ತರ್ಕತಾಂಡವ – ನಾಪಿ 'ಪದಾವ್ಯವಧಾನಮ್ ಆಸತ್ತಿಃ' । ಅವ್ಯವಧಾನಂ ಹಿ ಪದೇ ಲಿಪ್ಯುಚ್ಚಾರಣಾದಿನಿಬಂಧನಮೇವ ವಾಚ್ಯಮ್ ।**

ಅನುವಾದ - ಪದದ ಅವ್ಯವಧಾನವನ್ನು ಆಸತ್ತಿ ಎಂಬುದಾಗಿ ಹೇಳಲು ಸಾಧ್ಯವಿಲ್ಲ. ಅವ್ಯವ-ಧಾನವನ್ನು ಪದದಲ್ಲಿ ಲಿಪಿಯ ಉಚ್ಚಾರಣೆ ಮುಂತಾದವುಗಳ ಕಾರಣದಿಂದಲೇ ಹೇಳಬೇಕು.

ವಿವರಣೆ - ಈ ಪಕ್ಷದಲ್ಲಿ ವ್ಯವಹಿತವಾದ ಉಚ್ಚಾರಣೆ ಮಾಡಿದ ವಾಕ್ಯದಲ್ಲಿ ಅಥವಾ ಲಿಖಿತವಾದ ವಾಕ್ಯದಲ್ಲಿ ಯೋಜನೆಯನ್ನು ಮಾಡಿಕೊಂಡರೂ ಸಹ ಅನ್ವಯಬೋಧ ಬರದೇ ಇರಬೇಕಾದೀತು. ವ್ಯವಧಾನವು ಕಂಡಿರುವುದರಿಂದ ಯೋಜನೆ ಮಾಡಿಕೊಂಡರೂ ಅವ್ಯವಧಾನಬೋಧವು ಬರದೆ ಇರಬೇಕಾದೀತು. ಮತ್ತು ಲಿಪಿಯಿಂದ ಅನ್ವಿತವಾದ ಸ್ಥಳದಲ್ಲಿ ಪದವೇ ಇಲ್ಲವಾದ್ದರಿಂದ ಅಲ್ಲಿ ಪದದ ವ್ಯವಧಾನವೇ ಇರುವುದಿಲ್ಲ. ಆದ್ದರಿಂದ ಅಲ್ಲಿ ಆಸತ್ತಿ ಇಲ್ಲದೇ ಇರಬೇಕಾದೀತು.

## ಇತರ ತಾರ್ಕಿಕರ ಪಕ್ಷಗಳ ನಿರಾಕರಣೆ

**ನ್ಯಾಯದೀಪ – ಪಕ್ಷಾಂತರಾಣ್ಯಪಿ ನಿರಾಹ – ನಾಪಿ ಅವ್ಯವಹಿತೇತಿ ॥**

**'ಅವ್ಯವಹಿತಪದಾನಾಮ್ ಉಪಸ್ಥಿತಿಃ' ಇತ್ಯರ್ಥಃ । ಸಾ ಕಿಂ ಸ್ವರೂಪಸತೀ ಹೇತುಃ, ಉತ ಜ್ಞಾತಾ? ಆದ್ಯೇ ಆಹ – ವ್ಯವಹಿತೇತಿ ॥ ಅಂತ್ಯೇ ಆಹ – ಉಕ್ತರೀತ್ಯೇತಿ ॥ 'ಪದಾರ್ಥಸ್ಮೃತೌ ಇತ್ಯಾದಿನೋಕ್ತರೀತ್ಯಾ' ಇತ್ಯರ್ಥಃ ।**

ಅನುವಾದ - ಹಿಂದೆ ಪಕ್ಷಧರ, ರುಚಿದತ್ತ ಇವರುಗಳು ಹೇಳಿದ ಆಸತ್ತಿಯ ಲಕ್ಷಣಗಳನ್ನು ನಿರಾಕರಿಸಿ, ಇತರರ ಆಸತ್ತಿಯ ಲಕ್ಷಣಗಳನ್ನು 'ನಾಪ್ಯವ್ಯವಹಿತ' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ನಿರಾಕರಿಸುತ್ತಿದ್ದಾರೆ. ಅವ್ಯವಹಿತಪದಗಳ ಉಪಸ್ಥಿತಿ ಎಂಬುದು ಇದರರ್ಥ. ಅವ್ಯವಹಿತಪದೋಪಸ್ಥಿತಿಯು ಸ್ವರೂಪಸತ್ತಾಗಿ ಕಾರಣವೋ, ಅಥವಾ ಜ್ಞಾತವಾಗಿ ಕಾರಣವೋ ? ಮೊದಲನೆಯ ಪಕ್ಷದಲ್ಲಿ ದೋಷವನ್ನು 'ವ್ಯವಹಿತ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಎರಡನೆಯ ಪಕ್ಷಕ್ಕೆ ದೋಷವನ್ನು 'ಉಕ್ತರೀತ್ಯಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಪದಾರ್ಥಸ್ಮೃತೌ' ಮುಂತಾದ ವಾಕ್ಯದಿಂದ ಹೇಳಿದಂತೆ ಎಂದರ್ಥ.

## ಇತರರಿಗೂ ಅವ್ಯಾಪ್ತಿ ತಪ್ಪಿದ್ದಲ್ಲ

**ತರ್ಕತಾಂಡವ – ತಥಾ ಚ ವ್ಯವಹಿತೋಚ್ಚಾರಿತೇ ಲಿಖಿತೇ ವಾ ಯೋಜನಯಾಪಿ ಅನ್ವಯಬೋಧೋ ನ ಸ್ಯಾತ್ । ವ್ಯವಧಾನಸ್ಯ ದೃಷ್ಟತ್ವೇನ ಯೋಜನಯಾಪಿ ಅವ್ಯವಧಾನಬೋಧಾಸಂಭವಾತ್ । ಲಿಪ್ಯನುಮಿತೇ ಪದಸ್ಯೈವ ಅಭಾವೇನ ತತ್ರ ಪದಾವ್ಯವಧಾನಾಭಾವಾಚ್ಚ ।**

ಅನುವಾದ - ಆದ್ದರಿಂದ ವ್ಯವಹಿತವಾಗಿ ಉಚ್ಚರಿತವಾದ ವಾಕ್ಯದಲ್ಲಿ ಹಾಗೂ ಲಿಖಿತವಾದ ವಾಕ್ಯದಲ್ಲಿ ಯೋಜನಾ ಮಾಡಿಕೊಂಡರೂ ಅನ್ವಯಬೋಧವು ಬರದೇ ಇರಬೇಕಾದೀತು. ವ್ಯವಧಾನವು ಕಂಡಿದೆಯಾದ್ದರಿಂದ ಯೋಜನಾ ಮಾಡಿಕೊಂಡರೂ ಸಹ ಅನ್ವಯಬೋಧವು ಬರುವುದಿಲ್ಲ.

> ವಿವರಣೆ - ಹಿಂದೆ ಪಕ್ಷಧರ ರುಚಿದತ್ತ ಇವರುಗಳು ಹೇಳಿದ ಆಸತ್ತಿಯ ಲಕ್ಷಣಗಳನ್ನು ನಿರಾಕರಿಸಿ ಈಗ ಬೇರೆಯವರ ಆಸತ್ತಿಯ ಲಕ್ಷಣಗಳನ್ನು ಗ್ರಂಥಕಾರರು ನಿರಾಕರಿಸುತ್ತಿದ್ದಾರೆ.

'ಅವ್ಯವಹಿತಪದೋಪಸ್ಥಿತಿ' ಎಂದರೆ ಉಪಸ್ಥಿತಿಯು ಅವ್ಯವಹಿತವಾಗಿರಬೇಕು ಎಂದು ಅರ್ಥ ಅಲ್ಲ. 'ಅವ್ಯವಹಿತವಾದ ಪದಗಳ ಉಪಸ್ಥಿತಿ' ಎಂದರ್ಥ. ವ್ಯವಧಾನ ಇಲ್ಲದೆ ಇರುವ ಉಪಸ್ಥಿತಿಯನ್ನೇ ಆಸತ್ತಿ ಎಂದು ಹೇಳಬಾರದು. ಏಕೆಂದರೆ ಈ ಉಪಸ್ಥಿತಿಯು ಸ್ವರೂಪ-ಸತ್ತಾಗಿ ಅಥವಾ ಜ್ಞಾತವಾಗಿ ಶಾಬ್ದಬೋಧಕ್ಕೆ ಕಾರಣವೆನ್ನಬೇಕು. ವ್ಯವಹಿತವಾಗಿರತಕ್ಕ ಪದೋಪಸ್ಥಿತಿ ಇರುವ ಪದ್ಯದಲ್ಲಿ ಆಸತ್ತಿ ಇದ್ದರೂ ಸಹ ನೀವು ಹೇಳುವ ಅವ್ಯವಹಿತ-ಪದೋಪಸ್ಥಿತಿ ಎಂಬ ಲಕ್ಷಣ ಬರುವುದಿಲ್ಲವಾದ್ದರಿಂದ ಅಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಅವ್ಯವಹಿತಪದೋಪಸ್ಥಿತಿ ಎಂಬುದು ಸ್ವರೂಪಸತ್ತಾಗಿ ಶಾಬ್ದಬೋಧಕ್ಕೆ ಕಾರಣ ಎಂದು ಹೇಳಲು ಸಾಧ್ಯವಿಲ್ಲ.

ಮತ್ತು ಆ ಆಸತ್ತಿಯು ಸ್ವರೂಪಸತ್ತಾದರೆ ಮಾತ್ರ ಸಾಲದು. ಜ್ಞಾತವಾದಂತಹ ಆಸತ್ತಿಯು ಶಾಬ್ದಬೋಧಕ್ಕೆ ಕಾರಣ ಎಂದು ಹೇಳಿದಾಗ ಹಿಂದೆ ನಾವು ಹೇಳಿದಂತೆ ಆಸತ್ತಿಜ್ಞಾನವು ವಿಶೇಷಣಜ್ಞಾನತ್ವೇನ ಕಾರಣವೋ ಅಥವಾ ಪದೋಪಸ್ಥಿತ್ವೇನ ಕಾರಣವೋ? ಎಂಬ ಪ್ರಶ್ನೆ ಮಾಡಿದಾಗ ವಿಶೇಷಣಜ್ಞಾನತ್ವೇನ ಕಾರಣ ಎಂದು ಹೇಳಿದರೆ ಅಸಾಧಾರಣವಾದ ಕಾರಣ-ವನ್ನು ಹೇಳಿದಂತಾಗುವುದಿಲ್ಲ. ಪದೋಪಸ್ಥಿತತ್ವೇನ ಎಂದು ಹೇಳಿದರೆ ಆಗ ಪದಾರ್ಥ-ಸ್ಮೃತಿಯನ್ನು ಅಂಗೀಕಾರ ಮಾಡಿಲ್ಲವಾದ್ದರಿಂದ ಅಲ್ಲಿಯೂ ಅವ್ಯಾಪ್ತಿದೋಷ ಬರುತ್ತದೆ.

## 'ಪದಾವ್ಯವಧಾನಂ ಆಸತ್ತಿಃ' ಎಂಬ ಲಕ್ಷಣವೂ ತಪ್ಪು

**ನ್ಯಾಯದೀಪ – ಪದಾರ್ಥಸ್ಮೃತಿಪದಸ್ಥಾನೇ 'ಪದೋಪಸ್ಥಿತೌ ಸತ್ಯಾಮ್' ಇತಿ ಜ್ಞೇಯಮ್ । 'ಲಿಪ್ಯುಚ್ಚಾರಣಾದಿಃ' ಇತ್ಯಾದಿಪದೇನ ವಿರೋಧಿಪದಾನುಚ್ಚಾರಣ-ಗ್ರಹಃ । ವ್ಯವಹಿತೇತಿ ॥ 'ಗಿರಿರ್ಭುಕ್ತಮ್ ಅಗ್ನಿಮಾನ್ ದೇವದತ್ತೇನ' ಇತ್ಯಾದೌ, ಇತ್ಯರ್ಥಃ । ಲಿಪ್ಯನುಮಿತೇತಿ ॥ 'ಯತ್ರ ಲಿಪಿದೃಷ್ಟ್ಯಾ ಪದಸ್ಯಾನುಮಾನಂ ತಾದೃಶಸ್ಥಳೇ' ಇತ್ಯರ್ಥಃ । ತಥಾ ಚ 'ತತ್ರ ಅವ್ಯಾಪ್ತಿಃ' ಇತಿ ಭಾವಃ ।**

ವಿವರಣೆ - 'ಪದಾವ್ಯವಧಾನಂ ಆಸತ್ತಿಃ' ಎಂಬುದು ಆಸತ್ತಿಯ ಮತ್ತೊಂದು ಲಕ್ಷಣ. ಪದಗಳಲ್ಲಿ ವ್ಯವಧಾನ ಇಲ್ಲದೇ ಇರುವಿಕೆಯೇ ಆಸತ್ತಿ ಎನಿಸುತ್ತದೆ ಎಂಬುದು ಇವರ ಅಭಿಪ್ರಾಯ.

ಇಲ್ಲಿ ಈ ಪಕ್ಷವೂ ಕೂಡ ಸರಿಯಲ್ಲ. ಏಕೆಂದರೆ ವ್ಯವಧಾನ ಇಲ್ಲ ಎಂದು ಹೇಳುವುದಾದರೆ ಯಾವ ಕಾರಣದಿಂದ ವ್ಯವಧಾನ ಇಲ್ಲ ಎಂಬುದನ್ನು ನಿರೂಪಣೆ ಮಾಡಬೇಕು. ಉಚ್ಚಾರಣೆ ಅಥವಾ ಲಿಪಿ ಇವುಗಳನ್ನು ಬಿಟ್ಟು ಬೇರೆ ಕಾರಣವನ್ನು ಹೇಳಲು ಸಾಧ್ಯವಿಲ್ಲ. ಲಿಪಿಯಲ್ಲಿ ವ್ಯವಧಾನವಿದ್ದರೂ ಕೂಡ ಶಾಬ್ದಬೋಧ ಬರುವುದಿಲ್ಲ. ಒಂದು ಪದವನ್ನು ಬರೆದ ಅನಂತರ ಬಹಳ ಹೊತ್ತಿನ ಮೇಲೆ ಮತ್ತೊಂದು ಪದವನ್ನು ಬರೆದರೆ ಆಗಲೂ ಶಾಬ್ದಬೋಧ ಬರುವುದಿಲ್ಲ. ಇದರಂತೆ ಒಂದು ಪದವನ್ನು ಉಚ್ಚಾರಣೆ ಮಾಡಿ, ಬಹಳ ಹೊತ್ತಿನ ಅನಂತರ ಮತ್ತೊಂದು ಪದವನ್ನು ಉಚ್ಚಾರಣೆ ಮಾಡಿದಾಗಲೂ ಶಾಬ್ದಬೋಧ ಬರುವುದಿಲ್ಲ. ಆದ್ದರಿಂದ ಲಿಪಿ ಮತ್ತು ಉಚ್ಚಾರಣೆ ಇವುಗಳಲ್ಲಿ ವ್ಯವಧಾನವು ಇರಬಾರದು.

ಆದರೆ ವ್ಯವಹಿತವಾದ ಲಿಪಿ ಮತ್ತು ಉಚ್ಚಾರಣೆಯಿರುವ ವಾಕ್ಯದಲ್ಲಿಯೂ ಆಸತ್ತಿಯ ಲಕ್ಷಣ ಬರುವುದಿಲ್ಲ. ಏಕೆಂದರೆ ವ್ಯವಹಿತವಾಗಿ ಉಚ್ಚಾರಣೆ ಮಾಡಿದ ವಾಕ್ಯದಲ್ಲಿಯೂ ಸಹ ಅನ್ವಯವನ್ನು ಮಾಡಿಕೊಳ್ಳಲು ಸಾಧ್ಯವಿದೆ. ಇದರಂತೆ ಲಿಖಿತವಾದ ಶಬ್ದದಲ್ಲೂ ಸಹ ವ್ಯವಧಾನವಿದ್ದರೂ ಯೋಗ್ಯವಾದ ಅನ್ವಯವನ್ನು ಮಾಡಿಕೊಳ್ಳಲು ಸಾಧ್ಯವಿದೆ. ಆದ್ದರಿಂದ ವ್ಯವಹಿತವಾಗಿ ಉಚ್ಚಾರಣೆ ಮಾಡಿದ ವಾಕ್ಯದಿಂದ, ಹಾಗೂ ವ್ಯವಹಿತವಾಗಿ ಲಿಖಿತವಾದ ವಾಕ್ಯದಿಂದ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ. ಇಲ್ಲಿ ಆಸತ್ತಿಯ ಲಕ್ಷಣ ಬರಬೇಕು. ಆದರೆ ಪದವ್ಯವಧಾನರೂಪವಾದ ನೀವು ಹೇಳಿದ ಆಸತ್ತಿಯ ಲಕ್ಷಣ ಬರುತ್ತಿಲ್ಲವಾದ್ದರಿಂದ ಅತಿವ್ಯಾಪ್ತಿ ದೋಷವು ಪ್ರಾಪ್ತವಾಗುತ್ತದೆ.

ಶಾಸ್ತ್ರಗಳಲ್ಲಿ ದೂರದಲ್ಲಿ ಪ್ರಯುಕ್ತವಾದ ಪದಗಳನ್ನು ಯೋಜನೆ ಮಾಡಿಕೊಂಡು ಅನ್ವಯ ಮಾಡಿಕೊಳ್ಳುವ ಕ್ರಮವಿದೆ. ವ್ಯವಹಿತವಾದ ಪದಗಳನ್ನು ಅವ್ಯವಹಿತವಾಗಿ ಮಾಡುವ ಕ್ರಮವೇ ಯೋಜನೆ ಎಂದು ಕರೆಸಿಕೊಳ್ಳುತ್ತದೆ. ವ್ಯವಹಿತವಾಗಿ ಉಚ್ಚಾರಣೆ ಮಾಡಿದ ಸ್ಥಳದಲ್ಲಿ ಯೋಜನೆಯನ್ನು ಮಾಡಿಕೊಂಡಾಗ ಅನ್ವಯಬೋಧ ಬರುತ್ತದೆ. ಇದನ್ನು ಅಲ್ಲಗಳೆಯುವುದು ಸೂಕ್ತವಲ್ಲ.

## ಆಸತ್ತಿಯ ಲಕ್ಷಣವನ್ನು ಅವ್ಯವಹಿತತ್ವೇನ ಪದತಾತ್ಪರ್ಯಮ್ ಎಂದೂ ಹೇಳಬಾರದು

**ತರ್ಕತಾಂಡವ – ನಾಪಿ 'ಅವ್ಯವಹಿತತ್ವೇನ ಪದತಾತ್ಪರ್ಯಮ್ ಆಸತ್ತಿ:' । ಅತಾತ್ಪರ್ಯಕಶುಕಾದಿವಾಕ್ಯಾವ್ಯಾಪ್ತೇಃ । ಅವ್ಯವಹಿತತಾತ್ಪರ್ಯಕಂ ವ್ಯವಹಿತಮುಚ್ಚಾರಯತೋ ವಾದಿನಃ ಅನಾಸನ್ನಾಭಿಧಾನರೂಪಾಪಾರ್ಥಕನಿಗ್ರಹಾನುಪಪತ್ತೇಶ್ಚ ।**

ಅನುವಾದ - ಅವ್ಯವಹಿತತ್ವೇನ ಪದತಾತ್ಪರ್ಯವನ್ನು ಆಸತ್ತಿ ಎಂದು ಹೇಳಬಾರದು. ಏಕೆಂದರೆ ಪದತಾತ್ಪರ್ಯದ ಅರಿವಿಲ್ಲದ ಗಿಳಿಯ ಮಾತು ಮೊದಲಾದವುಗಳಲ್ಲಿ ಅವ್ಯಾಪ್ತಿದೋಷವು ಬರುತ್ತದೆ. ಮತ್ತು ಅವ್ಯವಹಿತವಾದ ತಾತ್ಪರ್ಯವನ್ನು ತಿಳಿದು ವ್ಯವಧಾನದಿಂದ ಉಚ್ಚಾರ ಮಾಡುವ ವಾದಿಗೆ ಅನ್ವಯವಿಲ್ಲದ ವಾಕ್ಯವನ್ನು ಪ್ರಯೋಗ ಮಾಡಿದರೆ ಅಪಾರ್ಥಕ ಎಂಬ ನಿಗ್ರಹಸ್ಥಾನ ಬರುತ್ತದೆ ಎಂದು ಹೇಳುವುದೇ ಕಷ್ಟವಾಗುತ್ತದೆ.

## ಪಕ್ಷಧರನು ಹೇಳಿದ ಆಸತ್ತಿಯ ಲಕ್ಷಣವೂ ಸರಿಯಲ್ಲ

**ನ್ಯಾಯದೀಪ – 'ವಸ್ತುತಃ ಅವ್ಯವಹಿತತ್ವೇನ ಪದತಾತ್ಪರ್ಯಮ್ ಆಸತ್ತಿರಿತಿ ಪರ್ಯವಸಿತಾ' ಇತಿ ಪಕ್ಷಧರನಿರ್ಧಾರಿತಪಕ್ಷಂ ನಿರಾಹ – ನಾಪಿ ಅವ್ಯಹಿತತ್ವೇನೇತಿ ॥**

ಅನುವಾದ - ವಾಸ್ತವಿಕವಾಗಿ 'ಅವ್ಯವಹಿತತ್ವೇನ ಪದತಾತ್ಪರ್ಯಮಾಸತ್ತಿಃ' ಎಂಬುದೇ ಆಸತ್ತಿಯ ಪರಿಷ್ಕೃತ ಲಕ್ಷಣ ಎಂಬುದಾಗಿ ಪಕ್ಷಧರನು ನಿರ್ಧಾರ ಮಾಡಿ ಹೇಳಿರುತ್ತಾನೆ.

ಈ ಪಕ್ಷವನ್ನು ನಿರಾಕರಣೆ ಮಾಡಲು 'ನಾಪ್ಯವ್ಯವಹಿತತ್ವೇನ' ಇತ್ಯಾದಿ ಗ್ರಂಥವು ಹೊರಟಿದೆ.

## ಕುಲಕಶ್ಲೋಕದಲ್ಲಿ ಅವ್ಯಾಪ್ತಿ ಇಲ್ಲವೆಂಬುದು ಪಕ್ಷಧರನ ಧೋರಣೆ

**ನ್ಯಾಯದೀಪ – ವ್ಯವಹಿತಪದ್ಯೇ ಕುಲಕಾದೌ ಚ ಪದಾನಾಂ ವ್ಯವಧಾರಣೇನ ಉಚ್ಚಾರಣೇ ಲೇಖನೇಽಪಿ ಚ ಅವ್ಯವಹಿತತ್ವೇನ ವಕ್ತೃತಾತ್ಪರ್ಯಗೋಚರತ್ವಾತ್ ತೇಷಾಂ ತತ್ರ ನಾತಿವ್ಯಾಪ್ತಿರಿತಿ ಭಾವಃ ।**

ಅನುವಾದ - ವ್ಯವಹಿತಾನ್ವಯವುಳ್ಳ ಶ್ಲೋಕದಲ್ಲಿ ಮತ್ತು ಕುಲಕಶ್ಲೋಕಗಳಲ್ಲಿ ಪದಗಳಿಗೆ ವ್ಯವಧಾನವಿರುತ್ತದೆ. ಇಂಥ ಶ್ಲೋಕವನ್ನು ಉಚ್ಚಾರಣೆ ಮಾಡುವಾಗ, ಅಥವಾ ಬರೆಯುವ ಸಂದರ್ಭದಲ್ಲಿ ವಕ್ತೃವಾದವನು ಅವ್ಯವಹಿತವಾದ ತಾತ್ಪರ್ಯವನ್ನು ಹೊಂದಿರುತ್ತಾನೆ. ಆದ್ದರಿಂದ ಹಿಂದಿನ ದೋಷವು ಬರುವುದಿಲ್ಲವೆಂಬುದು ಪಕ್ಷಧರಮಿಶ್ರನ ಅಭಿಪ್ರಾಯ.

## ಈಶ್ವರತಾತ್ಪರ್ಯವಿಷಯತ್ವವನ್ನು ಹೇಳಬಾರದು

**ನ್ಯಾಯದೀಪ – ಶುಕಾದೀತಿ ॥ ನ ಚ 'ತತ್ರಾಪಿ ಅಸ್ತಿ ಈಶ್ವರತಾತ್ಪರ್ಯಮ್' ಇತಿ ವಾಚ್ಯಮ್ । ತಥಾ ಸತಿ ಆಸತ್ತಿಭ್ರಮಸ್ಥಲೇ ತದಾದಾಯ ಆಸತ್ತಿಸತ್ತ್ವಸಂಭವೇ ತದ್‌ಭ್ರಮಾನುಪಪತ್ತೇಃ ।**

ಅನುವಾದ - ಗಿಳಿಯ ಮಾತುಗಳೂ ಕೂಡ ಈಶ್ವರನ ತಾತ್ಪರ್ಯಕ್ಕೆ ವಿಷಯವಾಗಿರುವುದರಿಂದ ಆಸತ್ತಿಯ ಲಕ್ಷಣ ಬರುತ್ತದಲ್ಲವೇ ? ಎಂದು ಪ್ರಶ್ನಿಸಬಾರದು. ಹಾಗಾದರೆ ಆಸತ್ತಿಭ್ರಮದ ಸ್ಥಳದಲ್ಲಿಯೂ ಈಶ್ವರತಾತ್ಪರ್ಯವಿರುವ ಕಾರಣ ಅದೂ ಕೂಡ ಸಾಧುವಾದ ವಾಕ್ಯವಾಗಬೇಕಾಗುತ್ತದೆ.

## ಮತ್ತೊಂದು ದೋಷ

**ನ್ಯಾಯದೀಪ – ದೋಷಾಂತರಂ ಚಾಹ – ಅವ್ಯವಹಿತೇತಿ ॥ ಅಪಾರ್ಥಕಮ್ ಇತಿ ॥ 'ಅನನ್ವಿತವಾಚಕಪದಾದಿಪ್ರಯೋಗಃ ಅಪಾರ್ಥಕಮ್' ಇತಿ ಅಪಾರ್ಥಕ-ನಿಗ್ರಹಸ್ಥಾನಲಕ್ಷಣಾತ್ ಇತಿ ಭಾವಃ ।**

ಅನುವಾದ - ಮತ್ತೊಂದು ದೋಷವನ್ನು 'ಅವ್ಯವಹಿತ' ಇತ್ಯಾದಿ ವಾಕ್ಯದಿಂದ 'ಅನನ್ವಿತವಾಚಕ-ಪದಾದಿಪ್ರಯೋಗಃ ಅಪಾರ್ಥಕಂ' ಎಂಬುದು ಅಪಾರ್ಥಕರೂಪವಾದ ನಿಗ್ರಹಸ್ಥಾನದ ಲಕ್ಷಣವಾಗಿದೆ ಎಂದು 'ಅಪಾರ್ಥಕಂ' ಎಂಬ ಶಬ್ದದ ಅಭಿಪ್ರಾಯ.

## ಅನಾಸನ್ನೋದಾಹರಣವಾಕ್ಯದಲ್ಲಿ ಈ ಲಕ್ಷಣಕ್ಕೆ ಅತಿವ್ಯಾಪ್ತಿ ದೋಷವಿದೆ

**ತರ್ಕತಾಂಡವ – 'ಗಿರಿರ್ಭುಕ್ತಮ್ ಅಗ್ನಿಮಾನ್ ದೇವದತ್ತೇನ' ಇತ್ಯಾನಸನ್ನೋದಾ-**

**ಹರಣೇ ಅತಿವ್ಯಾಪ್ತೇಶ್ಚ । ತತ್ರಾಪಿ ಅವ್ಯವಹಿತತಾತ್ಪರ್ಯಕತ್ವಸಂಭವಾತ್ । ತಸ್ಮಾದ್ 'ಆಸತ್ತಿರ್ದುರ್ನಿರೂಪಾ' ಇತಿ ॥**

ಅನುವಾದ - 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಎಂಬ ಆಸತ್ತಿಯಿಲ್ಲದ ವಾಕ್ಯದಲ್ಲಿ ಅವ್ಯವಹಿತತ್ವೇನ ಪದತಾತ್ಪರ್ಯವಿರುವುದರಿಂದ ಅತಿವ್ಯಾಪ್ತಿದೋಷವು ಬರುತ್ತದೆ. ಆದ್ದರಿಂದ ತಾರ್ಕಿಕರಿಗೆ ಆಸತ್ತಿಯ ಲಕ್ಷಣವನ್ನು ನಿರೂಪಣೆ ಮಾಡುವುದು ಬಹಳ ಕಠಿಣವಾಗಿದೆ.

## ಅಪಾರ್ಥಕದ ಲಕ್ಷಣವೇನು?

**ನ್ಯಾಯದೀಪ – ನನು ಸರ್ವಥೈವ ಅನನ್ವಿತವಾಚಕಪದಪ್ರಯೋಗಃ ಅಪಾರ್ಥಕಮ್ । 'ಕುಂಡಮಜಾಜಿನಂ ದಶದಾಡಿಮಾನಿ ಷಡಪೂಪಾಃ' ಇತ್ಯಾದೌ ಯೋಜನಯಾ ಅಪಿ ಅನ್ವಯಹೀನಸ್ಥಲೇ ಏವ ತತ್ । ನ ತು ಯೋಜನಯಾಪಿ ಅನ್ವಯಸ್ಥಲೇಪಿ ಇತಿ ಚೇತ್ । ತತ್ರಾಪಿ 'ಅಸ್ತಿ' ಇತ್ಯಾದಿಪದಾಂತರತಾತ್ಪರ್ಯಕತ್ವ-ಸಂಭವಾತ್ ।**

ಅನುವಾದ - ಸರ್ವಥಾ ಅನನ್ವಿತವಾದ ಅರ್ಥವನ್ನು ಹೇಳುವ ಪದಪ್ರಯೋಗವೇ ಅಪಾರ್ಥಕ ಎನಿಸುತ್ತದೆ. 'ಕುಂಡಮಜಾಜಿನಂ ದಶ ದಾಡಿಮಾನಿ ಷಡಪೂಪಾಃ' ಇತ್ಯಾದಿ ಸ್ಥಳವು ಇಂಥ ಅಪಾರ್ಥಕಕ್ಕೆ ಉದಾಹರಣೆಯಾಗಿದೆ. ಏಕೆಂದರೆ ಇಲ್ಲಿ ಯೋಜನೆ ಮಾಡಿಕೊಳ್ಳಲು ಸಾಧ್ಯವೇ ಇಲ್ಲ.

ಹೀಗೆ ಹೇಳಬಾರದು - ಏಕೆಂದರೆ 'ಕುಂಡಮಜಾಜಿನಂ' ಇತ್ಯಾದಿ ಸ್ಥಳದಲ್ಲಿಯೂ ಕೂಡ 'ಅಸ್ತಿ' ಎಂಬ ಮತ್ತೊಂದು ಪದವನ್ನು ಅಧ್ಯಾಹಾರ ಮಾಡಿಕೊಳ್ಳುವ ಮೂಲಕ ಅವ್ಯವಹಿತತ್ವೇನ ಪದ-ತಾತ್ಪರ್ಯರೂಪವಾದ ಆಸತ್ತಿಯನ್ನು ಹೇಳಬಹುದಾದ್ದರಿಂದ ಅಪಾರ್ಥಕವೆಂಬ ನಿಗ್ರಹಸ್ಥಾನವನ್ನು ಹೇಳಲು ಸಾಧ್ಯವಾಗುವುದಿಲ್ಲ ಎಂಬ ಆಕ್ಷೇಪ ಇದ್ದೇ ಇದೆ.

**ನ್ಯಾಯದೀಪ – ದೋಷಾಂತರಂ ಚಾಹ – ಗಿರಿರಿತಿ ॥**

ಅನುವಾದ - 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಎಂಬ ಸ್ಥಳದಲ್ಲಿ ಆಸತ್ತಿಯ ಲಕ್ಷಣಕ್ಕೆ ಅತಿವ್ಯಾಪ್ತಿದೋಷವನ್ನು ಹೇಳುತ್ತಿದ್ದಾರೆ.

## ಪಕ್ಷಧರನ ಪಕ್ಷಾಂತರದ ನಿರಾಕರಣೆ

**ನ್ಯಾಯದೀಪ– ಯದಪಿ ಅವ್ಯವಹಿತಪದಾರ್ಥೋಪಸ್ಥಿತ್ಯನುಕೂಲವ್ಯಾಪಾರ ಆಸತ್ತಿಃ, ಸ ಚೈಕಪದಾನಂತರಮ್ ಅಪರಪದೇನ ತಾತ್ಪರ್ಯಮುಚ್ಚಾರಣಂ ವೇತಿ ಪಕ್ಷಧರಾಭಿಮತಂ ಪಕ್ಷಾಂತರಮ್, ತದಪಿ ಅನೇನೈವ ನಿರಸ್ತಮ್ । ಶುಕಾದಿ-ವಾಕ್ಯಾದೌ ಅವ್ಯಾಪ್ತೇಃ । 'ಗಿರಿಃ' ಇತ್ಯಾದಿವಾಕ್ಯೇ ಅತಿವ್ಯಾಪ್ತೇಃ । ವಾಕ್ಯೇ ಪದಾ-ರ್ಥೋಪಸ್ಥಿತೇರೇವ ಅಭಾವಸ್ಯ ವಕ್ಷ್ಯಮಾಣತ್ವಾತ್ ಇತಿ ಭಾವೇನ ಉಪಸಂಹರತಿ – ತಸ್ಮಾದಿತಿ ॥**

ಅನುವಾದ - ವ್ಯವಧಾನವಿಲ್ಲದ ಪದಾರ್ಥದ ಉಪಸ್ಥಿತಿಗೆ ಅನುಕೂಲವಾದ ವ್ಯಾಪಾರವನ್ನೇ 'ಆಸತ್ತಿ' ಎಂದು ಹೇಳುತ್ತೇವೆ. ಅಥವಾ ಒಂದು ಪದವನ್ನು ಉಚ್ಚಾರಣೆ ಮಾಡಿದ ಮೇಲೆ ಮತ್ತೊಂದು ಪದದ ತಾತ್ಪರ್ಯವನ್ನು ವಿವಕ್ಷಿಸುವುದು ಅಥವಾ ಉಚ್ಚಾರಣೆ ಮಾಡುವುದನ್ನು ಆಸತ್ತಿಯ ಲಕ್ಷಣವೆಂದು ಹೇಳಬಹುದು. ಹೀಗೆ ಪಕ್ಷಧರಮಿಶ್ರನಿಗೆ ಅಭಿಮತವಾದ ಮತ್ತೊಂದು ಪಕ್ಷವೂ ಕೂಡ ಇದರಿಂದಲೇ ನಿರಸ್ತವಾಯಿತು. ಏಕೆಂದರೆ ಗಿಳಿಯ ಮಾತಿನಲ್ಲಿ ಈ ಲಕ್ಷಣವು ಬರುವುದಿಲ್ಲವಾದ್ದರಿಂದ ಅವ್ಯಾಪ್ತಿ-ದೋಷವು ಬರುತ್ತದೆ. ಮತ್ತು 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಎಂಬ ವಾಕ್ಯದಲ್ಲಿಯೂ ಈ ಲಕ್ಷಣವಿರುವುದರಿಂದ ಅತಿವ್ಯಾಪ್ತಿದೋಷವು ಬರುತ್ತದೆ. ಮತ್ತು ವಾಕ್ಯದಲ್ಲಿ ಪದಾರ್ಥದ ಉಪಸ್ಥಿತಿಯನ್ನೇ ಸಮರ್ಥಿಸಲು ಬರುವುದಿಲ್ಲವೆಂದು ಮುಂದೆ ಹೇಳುವವರಿದ್ದೇವೆ. ಈ ಅಭಿಪ್ರಾಯದಿಂದ 'ತಸ್ಮಾತ್' ಎಂಬುದಾಗಿ ಪರವಾದಿಯ ಆಸತ್ತಿಯ ಲಕ್ಷಣದ ನಿರಾಕರಣೆನ್ನು ಉಪಸಂಹಾರ ಮಾಡುತ್ತಿದ್ದಾರೆ.

## ಆಸತ್ತಿಯ ನಿಖರಲಕ್ಷಣ

**ತರ್ಕತಾಂಡವ – ಉಚ್ಯತೇ – 'ಪದೋಪಸ್ಥಿತ್ಯನುಕೂಲವಕ್ತೃವ್ಯಾಪಾರೇ ನಿಷ್ಫಲಸ್ಯ ಅನ್ವಯಬೋಧವಿರೋಧಿವ್ಯವಧಾನಸ್ಯ ಅಭಾವಃ ಆಸತ್ತಿಃ' ।**

ಅನುವಾದ - ಆಸತ್ತಿಯ ನಿಖರವಾದ ಲಕ್ಷಣ ಹೀಗಿದೆ - ಪದದ ಉಪಸ್ಥಿತಿಗೆ ಅನುಕೂಲವಾದ ವಕ್ತೃವಿನ ವ್ಯಾಪಾರದಲ್ಲಿ ಫಲರಹಿತವಾದ ಹಾಗೂ ಅನ್ವಯಬೋಧಕ್ಕೆ ವಿರೋಧಿಯಾದ ವ್ಯವಧಾನ ಇಲ್ಲದೇ ಇರುವಿಕೆಯು ಆಸತ್ತಿಯ ಲಕ್ಷಣ.

ವಿವರಣೆ - ಹಿಂದೆ ಹೇಳಿದ ನಾಲ್ಕು ರೀತಿಯ ಲಕ್ಷಣಗಳಲ್ಲಿ ದೋಷಗಳನ್ನು ಹೇಳಿ, ಪ್ರಕೃತ ನಿಖರವಾದ ಆಸತ್ತಿಯ ಲಕ್ಷಣವನ್ನು ಇಲ್ಲಿ ಹೇಳುತ್ತಿದ್ದಾರೆ. ವಕ್ತೃವು ಶಬ್ದಪ್ರಯೋಗ ಮಾಡಿ-ದಾಗ ಅದರಲ್ಲಿ ಅನ್ವಯಬೋಧಕ್ಕೆ ವಿರೋಧಿಯಾದ ಶಬ್ದದ ವ್ಯವಧಾನ ಇರಬಾರದು. ಒಂದು ವೇಳೆ ವ್ಯವಧಾನ ಇದ್ದರೆ ಏನಾದರೂ ಪ್ರಯೋಜನವಿರಬೇಕು. ಪ್ರಯೋಜನ-ವಿಲ್ಲದ ವ್ಯವಧಾನ ಇರಬಾರದು ಎಂದಭಿಪ್ರಾಯ.

## ಪ್ರಮಾಣಪದ್ಧತಿಯಲ್ಲಿ ಆಸತ್ತಿಯ ಲಕ್ಷಣ

**ನ್ಯಾಯದೀಪ – 'ಸನ್ನಿಧಿಃ ಅವಿಲಂಬೇನ ಉಚ್ಚರಿತತ್ವಮ್' ಇತಿ ಪದ್ಧತ್ಯಾದ್ಯುಕ್ತಂ ಹೃದಿ ಕೃತ್ವಾ ಆಹ – ಪದೇತಿ ॥**

ಅನುವಾದ - ಪ್ರಮಾಣಪದ್ಧತಿಯಲ್ಲಿ 'ಸನ್ನಿಧಿಃ ಅವಿಲಂಬೇನ ಉಚ್ಚರಿತತ್ವಂ' ಎಂಬುದಾಗಿ ಆಸತ್ತಿಯ ಲಕ್ಷಣವನ್ನು ಹೇಳಿದ್ದಾರೆ. ಇದರ ವಿವರಣೆಯನ್ನು 'ಪದೋಪಸ್ಥಿತಿ' ಇತ್ಯಾದಿಯಾಗಿ ಪ್ರಕೃತ ಹೇಳಿದ್ದಾರೆ. 'ಪದ್ಧತ್ಯಾದಿ' ಎಂಬಲ್ಲಿರುವ ಆದಿಶಬ್ದದಿಂದ ಪ್ರಮಾಣಲಕ್ಷಣಟೀಕಾವನ್ನು ಸ್ವೀಕರಿಸಬೇಕು.

ವಿವರಣೆ - ಪ್ರಮಾಣಪದ್ಧತಿ ಹಾಗೂ ಪ್ರಮಾಣಲಕ್ಷಣಗಳಲ್ಲಿ ಆಸತ್ತಿಯ ನಿಖರವಾದ ಲಕ್ಷಣವನ್ನು ಹೇಳಿದ್ದಾರೆ. ಅವುಗಳ ಅಭಿಪ್ರಾಯವನ್ನು ಸೇರಿಸಿ ಆಸತ್ತಿಯ ಲಕ್ಷಣವನ್ನು 'ಪದೋಪಸ್ಥಿತಿ' ಇತ್ಯಾದಿಯಾಗಿ ವಿವರಿಸಿದ್ದಾರೆ.

## 'ಪದ' ಶಬ್ದಕ್ಕೆ ಏನರ್ಥ?

**ನ್ಯಾಯದೀಪ– ಪದಗ್ರಹಣಂ ಶಬ್ದಮಾತ್ರಪರಮ್ । ತೇನ ಪ್ರಕೃತಿ-ಪ್ರತ್ಯಯಯೋರವಾಂತರವಾಕ್ಯಯೋಶ್ಚ ಆಸತ್ತೌ ನಾವ್ಯಾಪ್ತಿಃ ।**

ಅನುವಾದ - 'ಪದೋಪಸ್ಥಿತಿ' ಎಂಬಲ್ಲಿರುವ ಪದ ಶಬ್ದಕ್ಕೆ 'ಶಬ್ದ' ಎಂದಷ್ಟೇ ಅರ್ಥ. ಹೀಗೆ ಅರ್ಥ ಮಾಡಿದಾಗ ಪ್ರಕೃತಿ ಮತ್ತು ಪ್ರತ್ಯಯಗಳ ಆಸತ್ತಿಯಲ್ಲಿ ಹಾಗೂ ಅವಾಂತರ ವಾಕ್ಯಗಳ ಆಸತ್ತಿಯಲ್ಲಿ ಅವ್ಯಾಪ್ತಿಯು ಬರುವುದಿಲ್ಲ.

ವಿವರಣೆ - ಆಸತ್ತಿಯ ಲಕ್ಷಣದಲ್ಲಿ 'ಪದೋಪಸ್ಥಿತಿ' ಎಂದು ಹೇಳಿದ್ದಾರೆ. ಇಲ್ಲಿ 'ಪದ'

ಎಂದರೆ 'ಶಬ್ದ' ಎಂದರ್ಥ. ಹೀಗೆ ಹೇಳದಿದ್ದರೆ ಪ್ರಕೃತಿ ಮತ್ತು ಪ್ರತ್ಯಯಗಳ ಆಸತ್ತಿಯಲ್ಲಿ ಹಾಗೂ ಅವಾಂತರವಾಕ್ಯಗಳ ಆಸತ್ತಿಯಲ್ಲಿ ಆಸತ್ತಿಲಕ್ಷಣಕ್ಕೆ ಅವ್ಯಾಪ್ತಿದೋಷವು ಬರುತ್ತದೆ.

ಅಭಿಪ್ರಾಯ ಹೀಗಿದೆ - ಪದೋಪಸ್ಥಿತಿಗೆ ಅನುಕೂಲವಾದದ್ದು ವಕ್ತೃವಿನ ವ್ಯಾಪಾರ ಎಂದು ಹೇಳಿದಾಗ ಅವಾಂತರ ವಾಕ್ಯಗಳಲ್ಲಿ ಪರಸ್ಪರವಾಗಿ ಆಸತ್ತಿಯು ಇರುತ್ತದೆ.

ಉದಾಹರಣೆ - 'ಪರ್ವತಃ ವಹ್ನಿಮಾನ್ ಧೂಮಾತ್' ಎಂಬುದು ಮಹಾವಾಕ್ಯ.

ಇದರಲ್ಲಿ ಎರಡು ಅವಾಂತರವಾಕ್ಯಗಳಿವೆ.

1. 'ಪರ್ವತಃ ವಹ್ನಿಮಾನ್', 2. 'ಧೂಮವತ್ವಾತ್'.

ಈ ಎರಡು ಅವಾಂತರವಾಕ್ಯಗಳಲ್ಲಿ ಒಂದೇ ಆಸತ್ತಿಯು ಇರುತ್ತದೆ. ಆದರೆ ಇಲ್ಲಿ ಪ್ರತ್ಯೇಕವಾಗಿ 'ಪದ' ಇರುವುದಿಲ್ಲ. ಕೇವಲ ಪದೋಪಸ್ಥಿತಿಗೆ ಅನುಕೂಲವಾದ ವ್ಯಾಪಾರವಷ್ಟೇ ಇದೆ. ಈ ವ್ಯಾಪಾದರಲ್ಲಿ ವ್ಯವಧಾನ ಇರಬಾರದು ಎಂದಷ್ಟೇ ಹೇಳಿದರೆ ಈ ಅವಾಂತರ ವಾಕ್ಯಗಳಲ್ಲಿ ಪದ ಇಲ್ಲವಾದ್ದರಿಂದ ಇಲ್ಲಿ ಆಸತ್ತಿಯು ಇಲ್ಲದೇ ಇರಬೇಕಾದೀತು ಎಂದಭಿಪ್ರಾಯ. ಇದರಂತೆ ಪ್ರಕೃತಿ ಮತ್ತು ಪ್ರತ್ಯಯಗಳಲ್ಲಿ ಆಸತ್ತಿ ಇದೆ. ಅದರಿಂದ ಪದದ ಬೋಧವು ಬರುತ್ತದೆ. ಪ್ರತ್ಯೇಕವಾದ ಪ್ರಕೃತಿಪ್ರತ್ಯಯಗಳ ಆಸತ್ತಿಯಲ್ಲಿ ಪದ ಇಲ್ಲವಾದ್ದರಿಂದ ಆ ಪ್ರಕೃತಿ ಪ್ರತ್ಯಯಗಳ ಪ್ರಯೋಗ ಮಾಡಿದಾಗ ಅಲ್ಲಿ ಶಾಬ್ದಬೋಧವು ಬರದೇ ಇರಬೇಕಾದೀತು. ಆದ್ದರಿಂದ ಮೂಲದಲ್ಲಿರುವ ಪದ ಎಂಬ ಶಬ್ದಕ್ಕೆ ಕೇವಲ ಶಬ್ದ ಎಂದರ್ಥ. ಶಬ್ದದ ಉಪಸ್ಥಿತಿಗೆ ಅನುಕೂಲವಾದ ವಕ್ತೃವಿನ ವ್ಯಾಪಾರದಲ್ಲಿ ವ್ಯವಧಾನ ಇರಬಾರದು ಎಂದಭಿಪ್ರಾಯ. ಪ್ರಕೃತಿ-ಪ್ರತ್ಯಯಗಳಲ್ಲಿ ಶಬ್ದಗಳಿವೆ ಹಾಗೂ ಅವಾಂತರ ವಾಕ್ಯಗಳಲ್ಲೂ ಶಬ್ದಗಳಿವೆ. ಇವುಗಳಲ್ಲಿ ಆಸತ್ತಿಯ ಲಕ್ಷಣವು ಬರುತ್ತದೆ.

## ಪದೋಪಸ್ಥಿತಿ ಶಬ್ದಕ್ಕೆ ಏನು ಅರ್ಥ?

**ನ್ಯಾಯದೀಪ– ಪದಯೋಃ ಪದಾನಾಂ ಚ ಉಪಸ್ಥಿತೇರನುಕೂಲಃ ಯಃ ವ್ಯಾಪಾರಃ ಲಿಪಿಃ ಉಚ್ಚಾರಣಂ ತಾತ್ಪರ್ಯಂ ವಾ ತಸ್ಮಿನ್ ಇತ್ಯರ್ಥಃ ।**

ಅನುವಾದ - ಎರಡು ಪದಗಳ ಅಥವಾ ಅನೇಕ ಪದಗಳ ಉಪಸ್ಥಿತಿಗೆ ಅನುಕೂಲವಾದ ವ್ಯಾಪಾರ ಎನಿಸಿದ ಲಿಪಿ ಅಥವಾ ಉಚ್ಚಾರಣೆ ಅಥವಾ ವಕ್ತೃವಿನ ತಾತ್ಪರ್ಯ ಇದರಲ್ಲಿ ಎಂದು 'ಪದೋಪಸ್ಥಿತ್ಯನು-ಕೂಲವಕ್ತೃವ್ಯಾಪಾರೇ' ಎಂಬ ಶಬ್ದದ ಅರ್ಥ.

ವಿವರಣೆ - ಒಂದು ವಾಕ್ಯದಲ್ಲಿ ಎರಡು ಪದಗಳಿರುತ್ತವೆ. ಒಂದೇ ಪದದಿಂದ ಅನ್ವಯ-ಬೋಧವು ಬರುವುದಿಲ್ಲ. 'ಗಾಂ ಆನಯ' ಎಂಬ ಎರಡು ಶಬ್ದಗಳ ಉಚ್ಚಾರಣೆಯಿಂದ ಗೋಕರ್ಮಕಾನಯನದ ಅನ್ವಯಬೋಧವು ಬರುತ್ತದೆ. ಇದರಂತೆ ಅನೇಕ ಶಬ್ದಗಳಿರುವ ವಾಕ್ಯಗಳು ಇರುತ್ತವೆ. 'ದೇವದತ್ತಃ ಪಾಕಂ ಪಚತಿ' 'ಪರ್ವತೋ ವಹ್ನಿಮಾನ್ ಧೂಮಾತ್ ಮಹಾನಸವತ್' ಮುಂತಾದ ವಾಕ್ಯಗಳು ಇದಕ್ಕೆ ಉದಾಹರಣೆಗಳು. ಇಂಥ ವಾಕ್ಯಗಳನ್ನು ಸಂಗ್ರಹ ಮಾಡುವುದಕ್ಕೋಸ್ಕರ ಪದ ಎಂಬ ಶಬ್ದಕ್ಕೆ ಎರಡು ಶಬ್ದಗಳ ಅಥವಾ ಅನೇಕ ಶಬ್ದಗಳ ಉಪಸ್ಥಿತಿ ಇದಕ್ಕೆ ಅನುಕೂಲವಾದ ವಕ್ತೃವಿನ ವ್ಯಾಪಾರ ಎಂದು ಅರ್ಥೈಸಬೇಕು.

## ವಕ್ತೃವ್ಯಾಪಾರ ಎಂದರೆ ಮಾತಾನಾಡುವುದಲ್ಲ

ಇಲ್ಲಿ ವಕ್ತೃವಿನ ವ್ಯಾಪಾರವು ಅನೇಕ ರೀತಿಯಾಗಿದೆ. ಕೆಲವು ಕಡೆ ಶಬ್ದೋಚ್ಚಾರಣೆ ಮಾಡಲು ಬರದ ವ್ಯಕ್ತಿಯು ತನ್ನ ಅಭಿಪ್ರಾಯವನ್ನು ತಿಳಿಸಲು ಅಕ್ಷರಗಳನ್ನು ಬರೆಯು-ತ್ತಾನೆ. ಇದನ್ನು ಲಿಪಿ ಎಂದು ಕರೆಯುತ್ತಾರೆ ಲಿಪಿರೂಪವಾದ ವ್ಯಾಪಾರ ಎಂದರ್ಥ. ಕೆಲವು ಕಡೆ ಸಾಕ್ಷಾತ್ ಮಾತನಾಡುತ್ತಾರೆ. ಇದು ಉಚ್ಚಾರಣೆ. ಕೆಲವು ಕಡೆ ಶಬ್ದಗಳ ತಾತ್ಪರ್ಯ ಅಭಿಪ್ರೇತವಾಗಿರುತ್ತದೆ. ಇಂತಹ ಮೂರು ರೀತಿಯ ವ್ಯಾಪಾರವನ್ನು ಸಂಗ್ರಹ ಮಾಡುವುದ-ಕ್ಕೋಸ್ಕರ ವ್ಯಾಪಾರಶಬ್ದಕ್ಕೆ ಲಿಪಿ, ಉಚ್ಚಾರಣೆ, ತಾತ್ಪರ್ಯ ಎಂದು ಅರ್ಥೈಸಬೇಕು.

ಹಿಂದಿನ ಲಕ್ಷಣಗಳಲ್ಲಿ ಪೂರ್ವಪಕ್ಷಿಯು ಶಬ್ದೋಚ್ಚಾರಣೆಯ ನಂತರ ಪದಾರ್ಥಸ್ಮೃತಿ-ಯನ್ನು ಪ್ರತ್ಯೇಕವಾಗಿ ಹೇಳಿದ್ದನು. ಸಿದ್ಧಾಂತದ ಲಕ್ಷಣದಲ್ಲಿ ಪದಾರ್ಥಸ್ಮೃತಿಯನ್ನು ಹೇಳುವುದಿಲ್ಲ. ಕೇವಲ ಪದೋಪಸ್ಥಿಯನ್ನು ಮಾತ್ರ ಹೇಳುತ್ತೇವೆ. ಪದೋಪಸ್ಥಿತಿಗೆ ಅನು-ಕೂಲವಾದ ವಕ್ತೃವಿನ ವ್ಯಾಪಾರ ಎಂದರೆ ಅದು ಲಿಪಿ ಅಥವಾ ಉಚ್ಚಾರಣೆ ಅಥವಾ ಅಂಗಚೇಷ್ಟೆ ಮುಂತಾದವುಗಳು.

## ಆಸತ್ತಿಯ ಲಕ್ಷಣದಲ್ಲಿ ಪರಿಷ್ಕಾರ ಹೇಗೆ ?

**ನ್ಯಾಯದೀಪ – ನಿಷ್ಫಲಾನ್ವಯಬೋಧವಿರೋಧಿವ್ಯವಹಾರಶೂನ್ಯಃ ಶಬ್ದೋ-ಪಸ್ಥಿತ್ಯನುಕೂಲವಕ್ತೃವ್ಯಾಪಾರವಿಷಯತಾ ಆಸತ್ತಿಃ ಇತ್ಯರ್ಥಃ ।**

ಅನುವಾದ - ಆಸತ್ತಿಯ ಲಕ್ಷಣವನ್ನು ನ್ಯಾಯದೀಪಕಾರರು ಹೀಗೆ ಪರಿಷ್ಕರಿಸಿದ್ದಾರೆ - 'ನಿಷ್ಫಲವಾದ ಅನ್ವಯಬೋಧಕ್ಕೆ ವಿರೋಧಿಯಾದ ವ್ಯವಧಾನ ಇಲ್ಲದ ಶಬ್ದದ ಉಪಸ್ಥಿತಿಗೆ ಅನುಕೂಲವಾದ ವಕ್ತೃವಿನ ವ್ಯಾಪಾರಕ್ಕೆ ಯಾವುದು ವಿಷಯವಾಗಿದೆಯೋ, ಅದೇ ಆಸತ್ತಿ ಎಂದು.

ವಿವರಣೆ - ಮೂಲದಲ್ಲಿ ವ್ಯವಧಾನದ ಅಭಾವವು ವ್ಯಾಪಾರದಲ್ಲಿ ವಿಶೇಷಣವಾಗಿ ಹೇಳ-ಲಾಗಿದೆ. ಆದರೆ ಇದು ಶಬ್ದಧರ್ಮವಾಗಿದೆ. ಆದರೆ ಆಸತ್ತಿಯು ವಕ್ತೃವಿನ ಧರ್ಮವೆಂದು ಬೇರೆಡೆ ಹೇಳಲಾಗಿದೆ. ಮತ್ತು 'ಸನ್ನಿಧಿಃ ಅವಿಲಂಬೇನ ಉಚ್ಚರಿತತ್ವಂ' ಎಂಬುದಾಗಿ ಹೇಳಿರು-ವುದರಿಂದ ಉಚ್ಚರಿತತ್ವವು ಶಬ್ದಧರ್ಮವಾಗಿ ಪ್ರಯೋಗಿಸಲಾಗಿದೆ. ಪ್ರಕೃತ ನ್ಯಾಯದೀಪ-ದಲ್ಲಿ 'ವ್ಯಾಪಾರವಿಷಯತಾ ಆಸತ್ತಿಃ' ಎಂದು ಹೇಳಿರುವುದರಿಂದ ಶಬ್ದಧರ್ಮವಾಗಿಯೇ ಆಸತ್ತಿಯ ಲಕ್ಷಣವೆಂದು ಹೇಳಿರುತ್ತಾರೆ.

## ವಕ್ತೃವ್ಯಾಪಾರತ್ವವು ಮೂರರಲ್ಲೂ ಸಾಧಾರಣ

**ತರ್ಕತಾಂಡವ – ವಕ್ತೃವ್ಯಾಪಾರತ್ವಂ ಚ ಲಿಪ್ಯುಚ್ಚಾರಣಾಭಿಪ್ರಾಯಸಾಧಾರಣಮ್ ಇತಿ ನ ಮೌನಿಶ್ಲೋಕಾದೌ ಅವ್ಯಾಪ್ತಿಃ ।**

ಅನುವಾದ - ವಕ್ತೃವ್ಯಾಪಾರವು ಲಿಪಿ, ಉಚ್ಚಾರಣೆ ಹಾಗೂ ಅಭಿಪ್ರಾಯ. ಈ ಮೂರರಲ್ಲಿ ಸಾಧಾರಣವಾಗಿದೆ. ಹೀಗೆ ಹೇಳಿದಾಗ ಆಸತ್ತಿಯ ಲಕ್ಷಣಕ್ಕೆ ಮೌನಿಶ್ಲೋಕಾದಿಗಳಲ್ಲಿ ಅವ್ಯಾಪ್ತಿದೋಷವು ಬರುವುದಿಲ್ಲ.

ವಿವರಣೆ - ಕೇವಲ ಉಚ್ಚಾರಣೆಯೇ ವಕ್ತೃವಿನ ವ್ಯಾಪಾರ ಎಂದು ಅಂಗೀಕರಿಸಿದರೆ ಆಗ ಆಸತ್ತಿಯ ಲಕ್ಷಣಕ್ಕೆ ಮೌನಿಶ್ಲೋಕದಲ್ಲಿ ಅವ್ಯಾಪ್ತಿದೋಷವು ಬರುತ್ತದೆ. ಮೌನವ್ರತ-

ಮಾಡುವ ವ್ಯಕ್ತಿಯು ಶ್ಲೋಕವನ್ನು ರಚನೆ ಮಾಡಿದಾಗ ಅದರಲ್ಲಿ ಪರಸ್ಪರ ಆಸತ್ತಿಯು ಇದೆ. ಆದರೆ ವಕ್ತೃವಿನ ಉಚ್ಚಾರಣರೂಪವಾದ ವ್ಯಾಪಾರ ಇರುವುದಿಲ್ಲ. ಆದ್ದರಿಂದ ಅಂಥ ಮೌನಿಶ್ಲೋಕಾದಿಗಳಲ್ಲಿ ಆಸತ್ತಿಯ ಲಕ್ಷಣವು ಅವ್ಯಾಪ್ತವಾಗುತ್ತದೆ.

ಈ ಅವ್ಯಾಪ್ತಿದೋಷದ ಪರಿಹಾರಕ್ಕೋಸ್ಕರ ವಕ್ತೃವ್ಯಾಪಾರ ಎಂದರೆ ಲಿಪಿ, ಉಚ್ಚಾರಣೆ ಹಾಗೂ ತಾತ್ಪರ್ಯ ಈ ಮೂರನ್ನೂ ಗ್ರಹಣ ಮಾಡಬೇಕು. ಮೌನಿಶ್ಲೋಕಾದಿಗಳಲ್ಲಿ ಉಚ್ಚಾರಣರೂಪವಾದ ವ್ಯಾಪಾರ ಇರುವುದಿಲ್ಲ. ಆದರೂ ಲಿಪಿರೂಪವಾದ ವ್ಯಾಪಾರ ಇದೆ. ಆದ್ದರಿಂದ ಅಲ್ಲಿ ಅವ್ಯಾಪ್ತಿ ದೋಷಕ್ಕೆ ಅವಕಾಶವಿಲ್ಲ.

## ಎಲ್ಲಿಯೂ ಅವ್ಯಾಪ್ತಿ ಇಲ್ಲ

**ನ್ಯಾಯದೀಪ – ಉಚ್ಚಾರಣಮಾತ್ರಂ ವಕ್ತೃವ್ಯಾಪಾರಶ್ಚ ಮೌನಿಶ್ಲೋಕಾದೌ ಅವ್ಯಾಪ್ತಿರಿತ್ಯತ ಆಹ – ವಕ್ತ್ರಿತಿ ॥**

ಅನುವಾದ - ಕೇವಲ ಉಚ್ಚಾರಣೆಯನ್ನಷ್ಟೇ ವಕ್ತೃವ್ಯಾಪಾರವನ್ನಾಗಿ ವಿವಕ್ಷಿಸಿದರೆ ಮೌನಿಶ್ಲೋಕಾದಿಗಳಲ್ಲಿ ಅವ್ಯಾಪ್ತಿ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರವಾಗಿ 'ವಕ್ತೃವ್ಯಾಪಾರತ್ವಂ ಚ ' ಎಂಬುದಾಗಿ ಉತ್ತರವನ್ನು ನೀಡುತ್ತಿದ್ದಾರೆ.

## ವ್ಯವಹಿತಾನ್ವಯಸ್ಥಳದಲ್ಲಿ ಅಸತ್ತಿಲಕ್ಷಣ ಬರುತ್ತದೆಯೇ?

**ತರ್ಕತಾಂಡವ – ನ ಚ 'ಗಿರಿರ್ಭುಕ್ತಮ್' ಇತ್ಯನಯೋರ್ಮಧ್ಯೇ ವಿರೋಧ್ಯುಪಸ್ಥಿತ್ಯ-ಭಾವಾತ್ ಏತಯೋರಾಸತ್ತಿಃ ಸ್ಯಾತ್, ಇತಿ ವಾಚ್ಯಮ್ । ಇಷ್ಟಾಪತ್ತೇಃ । ಅನ್ವಯಾ-ಬೋಧಸ್ತು ಆಕಾಂಕ್ಷಾವಿರಹಾತ್ ।**

ಅನುವಾದ - 'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತೇನ' ಎಂಬ ವಾಕ್ಯದಲ್ಲಿ ಗಿರಿಶಬ್ದ ಹಾಗೂ ಭುಕ್ತಶಬ್ದಗಳ ಮಧ್ಯ ಅನ್ವಯಬೋಧವಿರೋಧಿಯಾದ ಉಪಸ್ಥಿತಿ ಇಲ್ಲದಿರುವುದರಿಂದ ಈ ಎರಡು ಶಬ್ದಗಳಿಗೆ ಆಸತ್ತಿಯು ಬರಬೇಕಾದೀತು? ಎಂದು ಆಕ್ಷೇಪ ಮಾಡಬಾರದು. ಇದು ನಮಗೆ

ಇಷ್ಟಾಪತ್ತಿಯಾಗಿದೆ. ಎರಡು ಶಬ್ದಗಳಿಗೆ ಅನ್ವಯಬೋಧ ಬಾರದೇ ಇರುವುದು ಆಕಾಂಕ್ಷಾ ಇಲ್ಲದಿರುವುದರಿಂದ ಎಂದು ಹೇಳುತ್ತೇವೆ.

ವಿವರಣೆ - ಪ್ರಶ್ನೆ - 'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತೇನ' ಎಂಬ ವಾಕ್ಯವು ವ್ಯವಹಿತಾನ್ವಯಸ್ಥಳಕ್ಕೆ ಉದಾಹರಣೆಯಾಗಿದೆ. ಇಲ್ಲಿ ಗಿರಿಶಬ್ದಕ್ಕೂ ಅಗ್ನಿಮತ್ ಶಬ್ದಕ್ಕೂ ವ್ಯವಧಾನವಿದೆ. ಆದ್ದರಿಂದ ಈ ವಾಕ್ಯದಿಂದ ಅನ್ವಯಬೋಧ ಬರುವುದಿಲ್ಲ. ಇಲ್ಲಿ ಆಸತ್ತಿಯ ಲಕ್ಷಣವು ಇಲ್ಲ ಎಂದು ಎಲ್ಲರೂ ಅಂಗೀಕರಿಸಿದ್ದಾರೆ. ಇಂಥ ವ್ಯವಹಿತಾನ್ವಯವತ್ವೇನ ಪ್ರಸಿದ್ಧವಾದ ವಾಕ್ಯದಲ್ಲಿ ಗಿರಿಶಬ್ದಕ್ಕೂ ಭುಕ್ತಶಬ್ದಕ್ಕೂ ಅನ್ವಯಬೋಧವಿರೋಧಿಯಾದ ವ್ಯವಧಾನ ಇಲ್ಲ. ಆದ್ದರಿಂದ ವಿರೋಧ್ಯುಪಸ್ಥಿತಿ ಇರಬಾರದು ಎಂದು ಇಷ್ಟೇ ಹೇಳಿದಾಗ ವ್ಯವಹಿತಾನ್ವಯವದ್ವಾಕ್ಯದಲ್ಲಿ ಆಸತ್ತಿಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತಲ್ಲವೇ?

ಉತ್ತರ - ಇಂಥ ಸ್ಥಳಗಳಲ್ಲಿ ಅತಿವ್ಯಾಪ್ತಿಯು ಬರುವುದಿಲ್ಲ. ವ್ಯವಹಿತಾನ್ವಯಸ್ಥಳದಲ್ಲಿ ವ್ಯವಹಿತಪದಗಳಿಗೆ ಪ್ರತ್ಯೇಕವಾಗಿ ಅರ್ಥಬೋಧಕತ್ವವನ್ನು ಅಂಗೀಕರಿಸುತ್ತೇವೆ.

ಪ್ರಶ್ನೆ - ಪ್ರತ್ಯೇಕವಾಗಿ ಅರ್ಥವಿದ್ದರೆ ಅನ್ವಯಬೋಧ ಏಕೆ ಆಗುವುದಿಲ್ಲ?

ಉತ್ತರ - ಅನ್ವಯಬೋಧ ಬರಲು ಕೇವಲ ಶಬ್ದಗಳ ಆಸತ್ತಿಯು ಮಾತ್ರ ಕಾರಣವಲ್ಲ. ಆಕಾಂಕ್ಷೆಯೂ ಸಹ ಕಾರಣ ಎಂದು ಹಿಂದೆ ಹೇಳಿದ್ದೇವೆ. 'ಗಿರಿಃ' ಎಂಬ ಶಬ್ದಕ್ಕೂ 'ಭುಕ್ತಂ' ಎಂಬ ಶಬ್ದಕ್ಕೂ ಆಸತ್ತಿಯು ಇದೆ. ಈ ಎರಡು ಶಬ್ದಗಳ ಮಧ್ಯದಲ್ಲಿ ಅನ್ವಯಬೋಧವಿರೋಧಿಯಾದ ಶಬ್ದೋಪಸ್ಥಿತಿ ಇಲ್ಲ. ಆದರೆ ಇವುಗಳಲ್ಲಿ ಆಕಾಂಕ್ಷಾ ಇಲ್ಲವಾದ್ದರಿಂದ 'ಗಿರಿಃ' 'ಭುಕ್ತಂ' ಎಂಬ ಶಬ್ದಪ್ರಯೋಗ ಮಾಡಿದಾಗ ಅನ್ವಯಬೋಧವು ಬರುವುದಿಲ್ಲ.

ಪ್ರಶ್ನೆ - ಉಚ್ಚಾರಣೆ ಮತ್ತು ಲಿಪಿಗಳಲ್ಲಿ ವಕ್ತೃವ್ಯಾಪಾರವು ಸ್ಪಷ್ಟವಾಗಿದೆ. ತಾತ್ಪರ್ಯವನ್ನು ಏಕೆ ಗ್ರಹಣ ಮಾಡಬೇಕು?

ಉತ್ತರ - ತಾತ್ಪರ್ಯಶಬ್ದದಿಂದ ವಕ್ತೃವಿನ ಅಂಗವ್ಯಾಪಾರವು ಇಲ್ಲಿ ವಿವಕ್ಷಿತವಾಗಿದೆ. ಸಂದರ್ಭವು ಹೀಗೆ ಬರುತ್ತದೆ - ಏಡಮೂಕನಿಗೆ ಅಂಗದ ಚಲನೆಯಿಂದ ಶಬ್ದೋಪಸ್ಥಿತಿಯು ಬರುತ್ತದೆ. ಆದರಿಂದ ಶಾಬ್ದಬೋಧವನ್ನು ಏಡಮೂಕನು ಅನುಮಾನ ಮಾಡಿ ತಿಳಿದುಕೊಳ್ಳುತ್ತಾನೆ. ಈ ಸ್ಥಳದಲ್ಲಿ ವಕ್ತೃವಿನ ಉಚ್ಚಾರಣರೂಪ ವ್ಯಾಪಾರ ಇಲ್ಲದೇ

ಏಡಮೂಕನಿಗೆ ಶಾಬ್ದಬೋಧವು ಉಂಟಾಗಿದೆ. ಇಲ್ಲಿ ಆಸತ್ತಿಯು ಸಂಗತವಾಗಿದೆ. ಈ ಸ್ಥಳದಲ್ಲಿ ಲಿಪಿಯಾಗಲೀ ಉಚ್ಚಾರಣೆಯಾಗಲೀ ಇಲ್ಲ. ಇಲ್ಲಿ ಆಸತ್ತಿಲಕ್ಷಣಕ್ಕೆ ಅತಿವ್ಯಾಪ್ತಿ ದೋಷವು ಬರದೇ ಇರುವುದಕ್ಕೋಸ್ಕರಕ ತಾತ್ಪರ್ಯವನ್ನು ಸಂಗ್ರಹ ಮಾಡಲಾಗಿದೆ. ಸಾಕ್ಷಾತ್ ಅಂಗವ್ಯಾಪಾರದಿಂದ ಶಾಬ್ದಬೋಧವು ಬರದೇ ಶಬ್ದದ ಜ್ಞಾನವು ಬಂದರೆ ಅಲ್ಲಿ ಪ್ರಕೃತವಾದ ಆಸತ್ತಿಯ ಲಕ್ಷಣವು ಅಭಿಪ್ರೇತವಾಗುವುದಿಲ್ಲ.

## ಆಸತ್ತಿಲಕ್ಷಣಕ್ಕೆ ವ್ಯವಹಿತಾನ್ವಯಸ್ಥಳದಲ್ಲಿ ಅತಿವ್ಯಾಪ್ತಿ ಇಲ್ಲ

**ನ್ಯಾಯದೀಪ – ವಿಶಿಷ್ಟಸ್ಯಾಪಿ ಲಕ್ಷಣಸ್ಯ ಅತಿವ್ಯಾಪ್ತಿಮಾಶಂಕ್ಯ ಲಕ್ಷ್ಯತ್ವೋಪಗಮೇನ ಸಮಾಧಿಮಾಹ – ನ ಚ ಗಿರಿರಿತಿ ॥**

ಅನುವಾದ - ವಿಶಿಷ್ಟವಾದ ಆಸತ್ತಿ ಲಕ್ಷಣಕ್ಕೆ ಅತಿವ್ಯಾಪ್ತಿ ಶಂಕೆಯನ್ನು ಮಾಡಿ ಲಿಪಿಯೂ ಸಹ ಲಕ್ಷ್ಯವಾದ್ದರಿಂದ ಅತಿವ್ಯಾಪ್ತಿದೋಷವು ಬರುವುದಿಲ್ಲ ಎಂಬ ಉತ್ತರವನ್ನು 'ನ ಚ ಗಿರಿಃ' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ.

ವಿವರಣೆ - ಹಿಂದೆ ಹೇಳಿದ ಆಸತ್ತಿಲಕ್ಷಣಕ್ಕೆ 'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತೇನ' ಎಂಬ ವ್ಯವಹಿತಾನ್ವಯಸ್ಥಳದಲ್ಲಿ ಅತಿವ್ಯಾಪ್ತಿಶಂಕೆಯನ್ನು ಮಾಡಿ ಅದನ್ನು ಪರಿಹರಿಸುತ್ತಾರೆ.

## ವ್ಯವಹಿತಾನ್ವಯದಲ್ಲಿ ಅನ್ವಯಬೋಧ ಬರದೇ ಇರಲು ಕಾರಣವೇನು?

**ನ್ಯಾಯದೀಪ – 'ತಥಾತ್ವೇ ಸ್ಯಾದನ್ವಯಬೋಧಃ' ಇತ್ಯತ ಆಹ – ಅನ್ವಯಾಬೋಧಸ್ತು ಇತಿ ॥**

ಅನುವಾದ - ಹೀಗೆ ಅಂಗೀಕರಿಸಿದರೆ 'ಗಿರಿಃ ಭುಕ್ತಂ' ಎಂಬಲ್ಲೂ ಸಹ ಅನ್ವಯಬೋಧವು ಬರುತ್ತದೆಯೇ ? ಎಂಬ ಪ್ರಶ್ನೆಗೆ ಉತ್ತರವಾಗಿ -'ಅನ್ವಯಾಬೋಧಸ್ತು' ಎಂಬ ವಾಕ್ಯ ಹೊರಟಿದೆ.

## ಆಸತ್ತಿಲಕ್ಷಣಕ್ಕೆ ಪದ್ಯ , ಕುಲಕಾದಿಗಳಲ್ಲಿ ಅವ್ಯಾಪ್ತಿ ಇದೆಯೇ?

**ತರ್ಕತಾಂಡವ – ನಾಪಿ ಪದ್ಯಕುಲಕಾದೌ ಅವ್ಯಾಪ್ತಿಃ । ತತ್ರಾಪಿ ಮಯಾ ಛಂದೋಽ-**

**ನುರೋಧಾಯ ಅಲಂಕಾರರಸವಿಶೇಷಯೋರಾಧಾನಾಯ ಚ ವ್ಯವಧಾನೇ ಕೃತೇಽಪಿ 'ಶ್ರೋತಾ ಏವಂ ಯೋಜಯಿಷ್ಯತಿ' ಇತ್ಯಭಿಪ್ರಾಯಸ್ಯ ಸತ್ವಾತ್ ।**

ಅನುವಾದ - ಪದ್ಯ , ಕುಲಕಾದಿಗಳಲ್ಲಿ ಅವ್ಯಾಪ್ತಿದೋಷವೂ ಸಹ ಇಲ್ಲ. ಅಲ್ಲೂ ಸಹ ಛಂದಸ್ಸಿಗೋಸ್ಕರ ಹಾಗೂ ಅಲಂಕಾರಕ್ಕೋಸ್ಕರ ವ್ಯವಧಾನವನ್ನು ಶಬ್ದಗಳಲ್ಲಿ ಹೇಳಿದ್ದರೂ ಪದ್ಯ-ಕುಲಕಾದಿಗಳನ್ನು ಶ್ರವಣ ಮಾಡುವ ವ್ಯಕ್ತಿ ಆ ವ್ಯವಹಿತವಾದ ಶಬ್ದಗಳನ್ನು ಅವ್ಯವಹಿತವಾಗಿ ಯೋಜನಾ ಮಾಡಿಕೊಳ್ಳುತ್ತಾನೆ ಎಂದು ವಕ್ತೃವಿನ ಅಭಿಪ್ರಾಯವು ಇರುತ್ತದೆ.

ವಿವರಣೆ- ಆಸತ್ತಿಯ ಲಕ್ಷಣಕ್ಕೆ ಹಿಂದೆ ಪದ್ಯ ಕುಲಕಾದಿಗಳಲ್ಲಿ ಅವ್ಯಾಪ್ತಿ ದೋಷವನ್ನು ಹೇಳಲಾಗಿತ್ತು. ಸಿದ್ಧಾಂತದ ಲಕ್ಷಣದಂತೆ ಈ ದೋಷವು ಬರುವುದಿಲ್ಲ. ಒಂದು ಶ್ಲೋಕದಲ್ಲಿ ಕರ್ತೃಪದ ಕ್ರಿಯಾಪದ ಮುಂತಾದ ಪದಗಳಿಗೆ ಅನ್ವಯದ ವ್ಯವಧಾನ ಇರುತ್ತದೆ. ಇಲ್ಲಿ ಶಬ್ದಗಳು ದೂರ ದೂರ ಇದ್ದರೂ ಸಹ ಶ್ಲೋಕವನ್ನು ರಚನೆ ಮಾಡುವ ವ್ಯಕ್ತಿಗೆ ಅವುಗಳಲ್ಲಿ ವ್ಯವಧಾನವು ಅಭಿಪ್ರೇತ ಆಗಿರುವುದಿಲ್ಲ. ಶ್ಲೋಕವನ್ನು ರಚನೆ ಮಾಡುವಾಗ 'ಅನುಷ್ಟುಪ್' 'ತ್ರಿಷ್ಟುಪ್' ಮುಂತಾದ ಛಂದಸ್ಸುಗಳ ಅನುಕೂಲತೆಗೋಸ್ಕರ ಶ್ಲೋಕಗಳಲ್ಲಿ ಶಬ್ದಗಳನ್ನು ವ್ಯವಹಿತವಾಗಿ ಉಚ್ಚರಿಸಿರುತ್ತಾರೆ.

ಇದರಂತೆ ಕುಲಕವು ಶಬ್ದಾಲಂಕಾರವಿಶೇಷ. ಕುಲಕದಲ್ಲಿ ದೂರದಲ್ಲಿರುವ ಅನೇಕ ಶ್ಲೋಕಗಳ ನಂತರ ಇರುವ ಕ್ರಿಯಾಪದದ ಒಟ್ಟಿಗೆ ಮೊದಲನೆಯ ಶ್ಲೋಕದಲ್ಲಿ ಇರುವ ಕರ್ತೃಪದಕ್ಕೆ ಅನ್ವಯವು ವಕ್ತೃವಿಗೆ ಅಭಿಪ್ರೇತವಾಗಿದೆ. 'ನಾನು ಕುಲಕಾಲಂಕಾರದಲ್ಲಿ ಶ್ಲೋಕವನ್ನು ರಚನೆ ಮಾಡಿದ್ದೇನೆ. ಈ ಅಲಂಕಾರವಿಶೇಷವನ್ನು ಶ್ರೋತೃವು ಅರ್ಥ ಮಾಡಿಕೊಳ್ಳುತ್ತಾನೆ' ಎಂಬುದಾಗಿ ಕುಲಕಾಲಂಕಾರಯುಕ್ತಶ್ಲೋಕರಚಯಿತೃಪುರುಷನಿಗೆ ಅಭಿಪ್ರಾಯವಿರುತ್ತದೆ. ಇದು ಸಫಲವಾದ ವ್ಯವಧಾನ. ಉಚ್ಚಾರಣೆಯಲ್ಲಿ ವ್ಯವಧಾನ ಇದ್ದರೂ ಸಹ ಅಭಿಪ್ರಾಯದಲ್ಲಿ ವ್ಯವಧಾನವು ಈ ಸ್ಥಲದಲ್ಲಿ ಇಲ್ಲ.

ಇದರಂತೆ ಶೃಂಗಾರ, ವೀರ, ಕರುಣ ಮುಂತಾದ ರಸಗಳ ವಿಶೇಷಗಳನ್ನು ಕಾವ್ಯಗಳಲ್ಲಿ ಹೇಳುವುದಕ್ಕೋಸ್ಕರ ಶಬ್ದಗಳ ಅನ್ವಯವನ್ನು ವ್ಯವಹಿತವಾಗಿ ಉಚ್ಚರಣೆ ಮಾಡಲಾಗಿರುತ್ತದೆ. ಇವುಗಳಲ್ಲಿ ಅತಿವ್ಯವಹಿತತ್ವವು ಇದ್ದರೂ ಸಹ ಅದು ಆಸತ್ತಿಯ ಅಭಾವಕ್ಕೆ ಕಾರಣವಾಗುವುದಿಲ್ಲ.

ಗ್ರಂಥರಚನೆ ಮಾಡುವ ವ್ಯಕ್ತಿಯು 'ಶ್ರೋತಾ ಏವಂ ಯೋಜಯಿಷ್ಯತಿ' ಈ ಶ್ಲೋಕಗಳನ್ನು ಅಧ್ಯಯನ ಮಾಡುವ ವ್ಯಕ್ತಿಯು ದೂರದಲ್ಲಿರುವ ಕರ್ತೃಪದ ಕ್ರಿಯಾಪದಗಳಿಗೆ ಅನ್ವಯ-ವನ್ನು ಹೀಗೆ ಯೋಜನೆ ಮಾಡಿಕೊಳ್ಳುತ್ತಾನೆ ಎಂದು ತಾನು ಅಭಿಪ್ರಾಯ ಪಟ್ಟಿರುತ್ತಾನೆ. ಆದ್ದರಿಂದ ಛಂದೋವಿಶೇಷದ ಆಧಾನ, ಅಲಂಕಾರದ ಆಧಾನ, ರಸವಿಶೇಷದ ಆಧಾನ-ಕ್ಕೋಸ್ಕರ ಇರುವ ವ್ಯವಧಾನವು ಆಸತ್ತ್ಯಭಾವವನ್ನು ಕುರಿತು ಕಾರಣವಲ್ಲ.

ಪದ್ಯಕುಲಕಾದಿಗಳಲ್ಲಿ ಇರುವ ವಕ್ತೃವ್ಯಾಪಾರದಲ್ಲಿ ಅನ್ವಯಬೋಧ ವಿರೋಧಿಯಾದ ವ್ಯವಧಾನವು ಇಲ್ಲ. ಇಲ್ಲಿ ವಕ್ತೃವ್ಯಾಪಾರ ಎಂದರೆ ವಕ್ತೃವಿನ ತಾತ್ಪರ್ಯ ಎಂದರ್ಥ. 'ಶ್ರೋತೃವು ನನ್ನ ಅಭಿಪ್ರಾಯವನ್ನು ಹೀಗೆ ತಿಳಿದುಕೊಳ್ಳುತ್ತಾನೆ' ಎಂದು ವಕ್ತೃವಿನ ಅಭಿಪ್ರಾಯವಿರುತ್ತದೆ. ಆದ್ದರಿಂದ ಕಾದಂಬರೀ ಮುಂತಾದವುಗಳಲ್ಲಿ ಅನೇಕ ವಿಶೇಷಣ-ಗಳು ಇರುವ ಸ್ಥಳದಲ್ಲೂ ಸಹ ಯೋಗ್ಯವಾದ ಅನ್ವಯವು ರಚಯಿತೃ ಪುರುಷನಿಗೆ ಅಭಿಪ್ರೇತವಾದ್ದರಿಂದ ಆ ಸ್ಥಳಗಳಲ್ಲಿ ಒಂದು ಶಬ್ದಕ್ಕೆ ಮತ್ತೊಂದು ಶಬ್ದದ ಆಸತ್ತಿ ಇದೆ. ಇನ್ನೊಂದು ಶಬ್ದದ ಆಸತ್ತಿ ಇಲ್ಲ ಎಂಬ ಆಕ್ಷೇಪವು ಬರುವುದಿಲ್ಲ. ಶಬ್ದಗಳಲ್ಲಿ ಆಸತ್ತಿಯು ವಕ್ತೃವಿನ ವ್ಯಾಪಾರದ ಅಧೀನವಾಗಿದೆ.

## ನಿಷ್ಫಲ ಎಂಬ ವಿಶೇಷಣದ ಔಚಿತ್ಯವೇನು?

**ನ್ಯಾಯದೀಪ – 'ನಿಷ್ಫಲಸ್ಯ' ಇತಿ ವಿಶೇಷಣಮ್ ಅವ್ಯಾಪ್ತಿನಿರಾಸಾಯ ಇತಿ ಭಾವೇನಾಹ – ನಾಪಿ ಪದ್ಯೇತಿ ॥**

ಅನುವಾದ - ಆಸತ್ತಿ ಲಕ್ಷಣದಲ್ಲಿ 'ನಿಷ್ಫಲಸ್ಯ' ಎಂಬ ವಿಶೇಷಣವು ಅವ್ಯಾಪ್ತಿದೋಷ ಪರಿಹಾರ-ಕ್ಕೋಸ್ಕರ ನೀಡಲಾಗಿದೆ ಎಂಬ ಅಭಿಪ್ರಾಯದಿಂದ 'ನಾಪಿ ಪದ್ಯ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ - ಮೂಲದಲ್ಲಿ ಆಸತ್ತಿಯ ಲಕ್ಷಣವನ್ನು ಹೇಳುವಾಗ 'ನಿಷ್ಫಲ-ಅನ್ವಯಬೋಧ-ವಿರೋಧಿವ್ಯವಧಾನಶೂನ್ಯ-ಶಬ್ದೋಪಸ್ಥಿತ್ಯನುಕೂಲವಕ್ತೃವ್ಯಾಪಾರವಿಷಯತಾ ಆಸತ್ತಿಃ' ಎಂಬುದಾಗಿ ವ್ಯಾಪಾರದಲ್ಲಿ ನಿಷ್ಫಲ ಎಂಬ ವಿಶೇಷಣವನ್ನು ನೀಡಲಾಗಿದೆ. ಕೇವಲ 'ಅನ್ವಯಬೋಧವಿರೋಧಿಶೂನ್ಯ' ಎಂದಿಷ್ಟೇ ಲಕ್ಷಣವನ್ನು ಹೇಳಿದರೆ ಪದ್ಯಕುಲಕಾದಿಗಳಲ್ಲಿ ಅವ್ಯಾಪ್ತಿಯು ಬರುತ್ತದೆ.

ಪದ್ಯಾದಿಗಳಲ್ಲಿ ಅನ್ವಯಬೋಧಕ್ಕೆ ವಿರೋಧಿಯಾದ ವ್ಯವಧಾನ ಇರುತ್ತದೆ. ಕ್ರಿಯಾಪದ, ಕರ್ತೃಪದಗಳು ದೂರದಲ್ಲಿ ಪ್ರಯುಕ್ತವಾಗಿರುತ್ತವೆ. ವಾಸ್ತವಿಕವಾಗಿ ಪದ್ಯಾದಿಗಳಿಂದ ಶಾಬ್ದಬೋಧವು ಬರುತ್ತದೆ. ಆದರೆ ಅನ್ವಯಬೋಧ ವಿರೋಧಿಯಾದ ವ್ಯವಧಾನ ಇರುವುದರಿಂದ ಆಸತ್ತಿಯ ಲಕ್ಷಣವು ಬರುವುದಿಲ್ಲ. ಆದ್ದರಿಂದ ಅವ್ಯಾಪ್ತಿದೋಷವು ಬರುತ್ತದೆಂದಭಿಪ್ರಾಯ.

ಇದಕ್ಕೆ ಸಮಾಧಾನ ಹೀಗಿದೆ - ನಾವು ಲಕ್ಷಣದಲ್ಲಿ ನಿಷ್ಫಲ ಎಂಬ ವಿಶೇಷಣವನ್ನು ನೀಡಿದ್ದೇವೆ. ವ್ಯವಧಾನವು ಶ್ಲೋಕ, ಕುಲಕಾದಿಗಳಲ್ಲಿ ಇದ್ದರೂ ಸಹ ಅದಕ್ಕೆ ಪ್ರಯೋಜನವಿದ್ದಲ್ಲಿ ಸಪ್ರಯೋಜನಕವಾದ ವ್ಯವಧಾನವು ಆಸತ್ತಿಯು ಇಲ್ಲದೇ ಇರುವುದಕ್ಕೆ ಕಾರಣವಾಗುವುದಿಲ್ಲ. ಈ ಸ್ಥಳಗಳಲ್ಲಿ ಛಂಧಸ್, ಅಲಂಕಾರ, ರಸವಿಶೇಷ ಮುಂತಾದ ಪ್ರಯೋಜನದ ಅಪೇಕ್ಷೆಯಿಂದ ವಕ್ತೃವು ವ್ಯವಹಿತವಾದ ಅನ್ವಯವುಳ್ಳ ಶಬ್ದಗಳನ್ನು ಪ್ರಯೋಗ ಮಾಡಿರುತ್ತಾನೆ. ಆದ್ದರಿಂದ ಇದೂ ಸಹ ಲಕ್ಷ್ಯವೇ ಆಗಿದೆ. ಆದ್ದರಿಂದ ಅವ್ಯಾಪ್ತಿ ದೋಷವು ಇಲ್ಲ.

## 'ವಾಗರ್ಥಾವಿವ ಸಂಪೃಕ್ತೌ' ಎಂಬಲ್ಲಿ ಬೋಧಕ್ರಮ

**ನ್ಯಾಯದೀಪ– ಛಂದ ಇತಿ ॥ 'ವಾಗರ್ಥಾವಿವ ಸಂಪೃಕ್ತೌ ಪಾರ್ವತೀಪರಮೇಶ್ವರೌ ವಂದೇ' ಇತ್ಯುಕ್ತೇಃ ಅನುಷ್ಟುಪ್ ಸಂಜ್ಞಕಚ್ಛಂದೋ ಭಜ್ಯೇತ, ಅತೋ ವ್ಯವಧಾನಮ್ । ಏವಮನ್ಯತ್ರಾಪಿ ।**

ಅನುವಾದ- 'ಛಂದ' ಎಂಬುದರ ಅಭಿಪ್ರಾಯ ಹೀಗಿದೆ - 'ವಾಗರ್ಥಾವಿವ ಸಂಪೃಕ್ತೌ ಪಾರ್ವತೀಪರಮೇಶ್ವರೌ ವಂದೇ' ಎಂದು ಶಬ್ದಪ್ರಯೋಗ ಮಾಡಿದರೆ ಅನುಷ್ಟುಪ್ ಎಂಬ ಛಂದಸ್‌ಲಕ್ಷಣವು ಈ ಶ್ಲೋಕದಲ್ಲಿ ಭಂಗವಾಗುತ್ತಿತ್ತು. ಆದ್ದರಿಂದ ಕ್ರಿಯಾಪದದ ವ್ಯವಧಾನ ಮಾಡಲಾಗಿದೆ. ಇದರಂತೆ ಬೇರೆಡೆಯಲ್ಲೂ ಸಹ ತಿಳಿಯಬೇಕು.

ವಿವರಣೆ - ಕಾಳಿದಾಸನ ರಘುವಂಶಕಾವ್ಯದಲ್ಲಿ ಪ್ರಥಮ ಶ್ಲೋಕ ಇದು.

'ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥' ಎಂಬುದಾಗಿ ಪೂರ್ಣಶ್ಲೋಕ.

'ಪಾರ್ವತೀಪರಮೇಶ್ವರೌ' ಎಂಬುದಕ್ಕೂ 'ವಾಗರ್ಥಾವಿವ ಸಂಪೃಕ್ತೌ' ಎಂಬುದಕ್ಕೂ ಮಧ್ಯೆ ವ್ಯವಧಾನವಿದೆ. ಆದರೂ ರಚಯಿತೃವಿಗೆ 'ವಾಗರ್ಥಾವಿವ ಸಂಪೃಕ್ತೌ' ಎಂಬ ಶಬ್ದಕ್ಕೂ 'ಪಾರ್ವತೀಪರಮೇಶ್ವರೌ' ಎಂಬ ಶಬ್ದಕ್ಕೂ ಅನ್ವಯವು ಅಭಿಪ್ರೇತವಾಗಿದೆ. 'ಅಧ್ಯಯನ ಮಾಡುವ ಅಥವಾ ಈ ಶ್ಲೋಕವನ್ನು ಕೇಳುವ ವ್ಯಕ್ತಿಯು ಈ ಶಬ್ದಗಳನ್ನು ಹೀಗೆ ಅನ್ವಯ ಮಾಡಿಕೊಳ್ಳಲಿ' ಎಂಬ ಅಭಿಪ್ರಾಯದಿಂದ ಈ ಶ್ಲೋಕವನ್ನು ಅನುಷ್ಟುಪ್ ಛಂಧಸ್ಸಿನಲ್ಲಿ ರಚನೆ ಮಾಡಲಾಗಿದೆ. ಒಂದು ವೇಳೆ ಕ್ರಿಯಾಪದದ ವ್ಯವಧಾನ ಇರಬಾರದು ಎಂದು ಇಷ್ಟೇ ಆಸತ್ತಿಯ ಲಕ್ಷಣದಲ್ಲಿ ಅಭಿಪ್ರೇತವಾಗಿದ್ದರೆ ಆಗ ಈ ಶ್ಲೋಕವು ಅನುಷ್ಟುಪ್ ಛಂಧಸ್ಸಿನಲ್ಲಿ ರಚನೆ ಮಾಡಲು ಸಾಧ್ಯವಿಲ್ಲ. ಕ್ರಿಯಾಪದವನ್ನು ಪೂರ್ವಾರ್ಧದಲ್ಲಿ ನಿವೇಶನೆ ಮಾಡಲು ಆಗುವುದಿಲ್ಲ. ಆದರೆ ಉತ್ತರಾರ್ಧದಲ್ಲಿ ಇರುವ ಕ್ರಿಯಾಪದದ ಅನ್ವಯವನ್ನು ಲೋಕದಲ್ಲಿ ಎಲ್ಲರೂ ಅಂಗೀಕರಿಸಿದ್ದಾರೆ. ಇಂಥಾ ಛಂದಸ್ಸು-ಗಳಿರುವ ಶ್ಲೋಕಗಳ ರಚನೆಗಾಗಿ ಶಬ್ದಗಳಲ್ಲಿ ವ್ಯವಧಾನವು ದೋಷಕರವಲ್ಲ. ಇಲ್ಲಿ ಇರುವ ವ್ಯವಧಾನವು ಸಫಲವಾದ ವ್ಯವಧಾನವಾಗಿದೆ.

ಈ ರೀತಿಯಾಗಿ ಶ್ಲೋಕದಲ್ಲಿ ಛಂದೋ ಆಧಾನ ರೂಪವಾದ ಪ್ರಯೋಜನವಿಶೇಷ ಇರುವುದರಿಂದ ಆಸತ್ತಿಯ ಲಕ್ಷಣಕ್ಕೆ ದೋಷವು ಬರುವುದಿಲ್ಲ.

## ಸಿದ್ಧಾಂತದಲ್ಲಿ ಅತಿವ್ಯಾಪ್ತಿಯ ಪರಿಹಾರ

**ನ್ಯಾಯದೀಪ – ಅಲಂಕಾರೇತಿ ॥ 'ಕುಲಕಾಲಂಕಾರೇ' ಇತ್ಯರ್ಥಃ । ರಸೇತಿ ॥ 'ಶೃಂಗಾರವೀರಕರುಣಾದಿರಸೇಷು ಮಧ್ಯೇ ಶೃಂಗಾರಾದಿರಸವಿಶೇಷಲಾಭಾಯ' ಇತ್ಯರ್ಥಃ । ತಥಾ ಚ ತತ್ರ 'ನಿಷ್ಫಲವ್ಯವಧಾನಾಭಾವಾತ್ ನಾವ್ಯಾಪ್ತಿಃ' ಇತಿ ಭಾವಃ ।**

ಅನುವಾದ - 'ಅಲಂಕಾರ' ಶಬ್ದಕ್ಕೆ ಕುಲಕಾಲಂಕಾರ ಎಂದರ್ಥ. 'ರಸ' ಎಂಬ ಶಬ್ದದ ಅಭಿಪ್ರಾಯ ಹೀಗಿದೆ - ಶೃಂಗಾರ, ವೀರ, ಕರುಣ ಮುಂತಾದ ರಸಗಳ ಮಧ್ಯೆ ಶೃಂಗಾರ ಮುಂತಾದ ರಸವಿಶೇಷದ ಲಾಭಕ್ಕೋಸ್ಕರ ಎಂಬುದಾಗಿ. ಆದ್ದರಿಂದ ಇಂಥ ಸ್ಥಳಗಳಲ್ಲಿ ನಿಷ್ಫಲವಾದ ವ್ಯವಧಾನ ಇಲ್ಲದೇ ಇರುವು-ದರಿಂದ ಅಲ್ಲಿ ಅತಿವ್ಯಾಪ್ತಿದೋಷವು ಇಲ್ಲ ಎಂದು ಅಭಿಪ್ರಾಯ.

ವಿವರಣೆ - ರಸ ಎಂದರೆ ಕಟು, ಆಮ್ಲ ಮುಂತಾದ ರಸಗಳೂ ಸಹ ಪ್ರಸಿದ್ಧವಾಗಿವೆ. ಆದರೆ ಇವುಗಳು ಕಾವ್ಯದಲ್ಲಿ ಪ್ರಸಕ್ತವಲ್ಲ. ಆದ್ದರಿಂದ ರಸಾಧಾನ ಎಂದರೆ ಕಾವ್ಯದಲ್ಲಿ ಅದರ ಸೊಬಗಿಗೆ ಪ್ರಯೋಗ ಮಾಡುವ ಶೃಂಗಾರ, ವೀರ, ಕರುಣ ಮುಂತಾದ ರಸಗಳು ಎಂದರ್ಥ ಮಾಡಬೇಕು.

ಪ್ರಶ್ನೆ - ಯಾವುದೇ ಕಾರಣವಿಲ್ಲದೇ ಫಲಾಪೇಕ್ಷೆಯೂ ಇಲ್ಲದೇ ವ್ಯವಹಿತಾನ್ವಯವಿರುವ ವಾಕ್ಯವನ್ನು ಪ್ರಯೋಗ ಮಾಡಿ, ಅದರಲ್ಲಿ ಶ್ರೋತೃವು ಅನ್ವಯವನ್ನು ಮಾಡಿಕೊಳ್ಳಲಿ ಎಂದು ಅಭಿಪ್ರಾಯವನ್ನು ಹೇಳಿದರೆ ಇಂತಹ ಸ್ಥಳದಲ್ಲಿ ಆಸತ್ತಿ ಇರುತ್ತದೆಯೇ?

ಉತ್ತರ - ಈ ಸ್ಥಳದಲ್ಲಿ ಆಸತ್ತಿಯನ್ನು ಅಂಗೀಕರಿಸುವುದಿಲ್ಲ. ವಕ್ತೃವು ಆಪ್ತನಾಗಿರಬೇಕು. ಆಪ್ತನು ಪ್ರತಾರಕವಾಕ್ಯವನ್ನು ಬೋಧಿಸುವುದಿಲ್ಲ. ಪ್ರತಾರಕವಾಕ್ಯದಲ್ಲಿ ಆಸತ್ತಿಯು ಇರುವುದಿಲ್ಲ. ಉದಾಹರಣೆ - ಪದ್ಯ , ಕುಲಕಾದಿಗಳಲ್ಲಿ ವ್ಯವಹಿತಾನ್ವಯವಿದ್ದರೂ ಆಸತ್ತಿ ಇದೆ ಎಂದು ಹೇಳುತ್ತೇವೆ. ಆದರೆ 'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತೇನ' ಎಂಬ ಅನಾಸನ್ನ ಉದಾಹರಣೆಯಲ್ಲಿ ಆಸತ್ತಿಯನ್ನು ಹೇಳುವುದಿಲ್ಲ. ಇದಕ್ಕೆ ಕಾರಣ ಹೀಗಿದೆ – ಪದ್ಯಾದಿಗಳಲ್ಲಿ ವಕ್ತೃತಾತ್ಪರ್ಯವಿದೆ. 'ಗಿರಿಃ ಭುಕ್ತಂ' ಎಂಬಲ್ಲಿ ತಾತ್ಪರ್ಯ ಇಲ್ಲ.

## ಅಪೌರುಷೇಯವಾದರೂ ಈಶ್ವರಾಭಿಪ್ರಾಯ ಹೇಳಬಹುದು

**ತರ್ಕತಾಂಡವ – ಅಪೌರುಷೇಯೇಪಿ ವೇದೇ ಅಸ್ಮಾಕಮುಕ್ತ ಈಶ್ವರಾಭಿಪ್ರಾಯಃ ಅಸ್ತ್ಯೇವ ।**

ಅನುವಾದ - ಅಪೌರುಷೇಯವಾದ ವೇದದಲ್ಲಿಯೂ ಸಹ ನಾವು ಹೇಳಿದಂಥ ಈಶ್ವರಾಭಿಪ್ರಾಯವು ನಮ್ಮ ಮತದಂತೆ ಇದ್ದೇ ಇದೆ.

ವಿವರಣೆ- ವಕ್ತೃವ್ಯಾಪಾರದಲ್ಲಿ ವ್ಯವಧಾನ ಇರಬಾರದು ಎಂದು ಆಸತ್ತಿಯ ಲಕ್ಷಣವನ್ನು ಹೇಳಲಾಯಿತು. ಆದರೆ ಈ ಲಕ್ಷಣಕ್ಕೆ ವೇದವಾಕ್ಯಗಳಲ್ಲಿ ಅವ್ಯಾಪ್ತಿದೋಷವು ಬರುತ್ತದೆ. ವೇದವಾಕ್ಯಗಳು ಪುರುಷನಿರ್ಮಿತವಾದ್ದಲ್ಲ. ಆದ್ದರಿಂದ ಅಲ್ಲಿ ಪುರುಷಾಭಿಪ್ರಾಯ ಇಲ್ಲದೇ ಇರುವುದರಿಂದ ಆ ವಾಕ್ಯಗಳಿಂದ ಶಾಬ್ದಬೋಧವು ಹೇಗೆ ಬರುತ್ತದೆ ?

ಉತ್ತರ - ಅಪೌರುಷೇಯವಾದ ವೇದವಾಕ್ಯಗಳಲ್ಲೂ ಸಹ ಈಶ್ವರಾಭಿಪ್ರಾಯವು ಇದೆ. ಆದ್ದರಿಂದ ಆ ವಾಕ್ಯಗಳಲ್ಲಿ ಆಸತ್ತಿಯ ಲಕ್ಷಣಕ್ಕೆ ಅವ್ಯಾಪ್ತಿದೋಷವು ಇರುವುದಿಲ್ಲ.

## ವೇದವಾಕ್ಯಗಳಲ್ಲಿ ಆಸತ್ತಿ ಇದೆಯೇ?

**ನ್ಯಾಯದೀಪ– ವೇದವಾಕ್ಯೇ ಅವ್ಯಾಪ್ತಿಃ ತರ್ಹಿ ಸ್ಯಾತ್ ಇತ್ಯತ ಆಹ – ಅಪೌರುಷೇಯೇತಿ ॥ ಉಕ್ತ ಇತಿ ॥ 'ಶ್ರೋತಾ ಏವಂ ಯೋಜಯಿಷ್ಯತಿ' ಇತ್ಯೇವಂ-ರೂಪಾಭಿಪ್ರಾಯಃ ಅಸ್ಮಾಕಂ ಮತೇ ಅಸ್ತ್ಯೇವ ಇತ್ಯರ್ಥಃ । 'ಸೇಶ್ವರವಾದಿತ್ವಾತ್' ಇತಿ ಭಾವಃ ।**

ಅನುವಾದ - ವೇದವಾಕ್ಯದಲ್ಲಿ ಆಸತ್ತಿಯ ಲಕ್ಷಣಕ್ಕೆ ಅವ್ಯಾಪ್ತಿದೋಷವು ಬರುತ್ತದೆಯೇ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಅಪೌರುಷೇಯ' ಇತ್ಯಾದಿ ವಾಕ್ಯವು ಹೊರಟಿದೆ. 'ಉಕ್ತ' ಎಂಬ ಶಬ್ದದ ಅಭಿಪ್ರಾಯ ಹೀಗಿದೆ - ನಮ್ಮ ಮತದಲ್ಲಿ 'ಶ್ರೋತಾ ಏವಂ ಯೋಜಯಿಷ್ಯತಿ' ಎಂಬ ಅಭಿಪ್ರಾಯವು ಇದ್ದೇ ಇದೆ. ನಾವು ಸೇಶ್ವರವಾದಿಗಳಾದ್ದರಿಂದ ವೇದದಲ್ಲಿ ಈಶ್ವರಾಭಿಪ್ರಾಯವು ಇದೆ ಎಂದು ತಾತ್ಪರ್ಯ.

ವಿವರಣೆ - ಮೌನಿಶ್ಲೋಕ ಹಾಗೂ ವೇದವಾಕ್ಯಗಳಿಗೆ ಇರುವ ವ್ಯತ್ಯಾಸವೇನು?

ಉತ್ತರ - ಮೌನಿಶ್ಲೋಕವು ಎರಡುವಿಧ. 1. ಲಿಪಿರೂಪ. 2. ಅಂಗವ್ಯಾಪಾರರೂಪ.

ಲಿಪಿರೂಪವಾದ ವ್ಯಾಪಾರದಲ್ಲಿ ಉಚ್ಚಾರಣರೂಪ ಆಸತ್ತಿಯನ್ನು ಹೇಳಲು ಬರುವುದಿಲ್ಲ. ಅಂಗವ್ಯಾಪಾರದಲ್ಲಿ ತಾತ್ಪರ್ಯವನ್ನು ಹೇಳಲು ಬರುತ್ತದೆ. ವೇದವಾಕ್ಯಗಳಲ್ಲಿ ಉಚ್ಚಾರಣ-ರೂಪವಾದ ವ್ಯಾಪಾರ ಇಲ್ಲದಿದ್ದರೂ ಈಶ್ವರಾಭಿಪ್ರಾಯವು ಹೀಗಿದೆ. ಈ ವೇದವಾಕ್ಯ-ಗಳನ್ನು ಶ್ರವಣ ಮಾಡುವ ಅಧಿಕಾರಿಯು ಈ ಶಬ್ದಗಳಲ್ಲಿ ಅನ್ವಯವನ್ನು ಹೀಗೆ ಯೋಜನ ಮಾಡಿಕೊಳ್ಳುತ್ತಾನೆ ಎಂಬುದಾಗಿ.

ಪ್ರಶ್ನೆ - ಒಂದು ಶ್ಲೋಕಕ್ಕೆ ಅನೇಕ ಅರ್ಥಗಳನ್ನು ವ್ಯಾಖ್ಯಾನಕಾರರು ಮಾಡುತ್ತಾರೆ. ಇಲ್ಲಿ ವಕ್ತೃವಿಗೆ ಆ ಎಲ್ಲಾ ಅರ್ಥಗಳೂ ಅಭಿಪ್ರೇತವಾಗಿರುತ್ತವೆಯೇ?

ಉತ್ತರ - ಶ್ಲೋಕರಚನೆ ಮಾಡುವ ಪುರುಷನು ಸರ್ವಜ್ಞನಾಗಿದ್ದರೆ ಅವನು ರಚಿಸಿದ ಶ್ಲೋಕದಲ್ಲಿ ಎಲ್ಲಾ ಅರ್ಥಗಳೂ ಅಭಿಪ್ರೇತ ಎಂದು ಹೇಳಬಹುದು. ಅರ್ವಾಚೀನ-ವ್ಯಕ್ತಿಗಳು ಅಥವಾ ಅಸರ್ವಜ್ಞರು ರಚಿಸಿದ ಶ್ಲೋಕ ಅಥವಾ ಬುದ್ಧಿಕೌಶಲದಿಂದ ಮಾಡಿದ ವ್ಯಾಖ್ಯಾನಗಳಲ್ಲಿ ಎಲ್ಲಾ ಅರ್ಥಗಳೂ ಮೂಲಕಾರರಿಗೆ ಮೂಲಗ್ರಂಥಕ್ಕೆ ಅಭಿಪ್ರೇತ ಎಂದು ಹೇಳಲು ಬರುವುದಿಲ್ಲ.

ಪ್ರಶ್ನೆ - ತಾತ್ಪರ್ಯವನ್ನು ಪ್ರತ್ಯೇಕವಾಗಿ ಏಕೆ ಅಂಗೀಕರಿಸಲಾಗಿದೆ.

ಉತ್ತರ- ಲಿಪಿ,ಅಥವಾ ಉಚ್ಚಾರಣೆ ಇಲ್ಲದ ಸ್ಥಳದಲ್ಲಿ ಆಸತ್ತಿಯನ್ನು ಯೋಜನಾ ಮಾಡು-ವುದಕ್ಕಾಗಿ ವಕ್ತೃತಾತ್ಪರ್ಯವನ್ನು ಅಂಗೀಕಾರ ಮಾಡಬೇಕು.

## ಮೀಮಾಂಸಕರೂ ಸಹ ಆಸತ್ತಿಯನ್ನು ಅಂಗೀಕರಿಸುತ್ತಾರೆಯೇ ?

**ತರ್ಕತಾಂಡವ – ಮೀಮಾಂಸಕಾನಾಮಪಿ ಅನಾದೌ ಸಂಸಾರೇऽರ್ಥಾಭಿಜ್ಞಾಧ್ಯಾಪಕಸ್ಯ ಉಕ್ತಾಭಿಪ್ರಾಯಃ ಅಸ್ತ್ಯೇವ । ವ್ಯವಧಾನಸ್ಯ ತು ಅದೃಷ್ಟವಿಶೇಷಃ ಫಲಮ್ ।**

ಅನುವಾದ - ಮೀಮಾಂಸಕರೂ ಸಹ ಅನಾದಿಯಾದ ಸಂಸಾರದಲ್ಲಿ ವೇದಾರ್ಥವನ್ನು ತಿಳಿದ ಅಧ್ಯಾಪಕನ ಅಭಿಪ್ರಾಯವನ್ನು ಅಂಗೀಕರಿಸಿದ್ದಾರೆ. ವೇದದಲ್ಲಿ ಇರುವ ಶಬ್ದಗಳ ವ್ಯವಧಾನಕ್ಕೆ ಶುಭಪ್ರಾಪ್ತಿ ಅಶುಭಪ್ರಾಪ್ತಿ ಮುಂತಾದ ಅದೃಷ್ಟವಿಶೇಷವು ಫಲವಾಗಿವೆ.

ವಿವರಣೆ - ಪ್ರಶ್ನೆ ವೇದಮಂತ್ರಗಳ ಉಚ್ಚಾರಣರೂಪವ್ಯಾಪಾರದಲ್ಲಿ ವ್ಯವಧಾನ ಇದೆ. ಇದಕ್ಕೆ ಅದೃಷ್ಟವಿಶೇಷರೂಪವಾದ ಫಲವನ್ನು ಹೇಳಬಹುದು. ಆದರೆ ಮಂತ್ರಗಳಿಗೆ ಆ ಅರ್ಥದಲ್ಲಿ ತಾತ್ಪರ್ಯವಿದೆ ಎಂದು ಹೇಳಲು ಹೇಗೆ ಬರುತ್ತದೆ?

ಉತ್ತರ - ವೇದಮಂತ್ರಗಳಲ್ಲಿ ಈಶ್ವರಾಭಿಪ್ರಾಯವಿದೆ. ಅಥವಾ ಮಂತ್ರದ್ರಷ್ಟಾರರಾದ ಋಷಿಗಳ ಅಭಿಪ್ರಾಯವಿದೆ. ಅವರ ಅಭಿಪ್ರಾಯದಲ್ಲಿ ವ್ಯವಧಾನ ಇಲ್ಲವಾದ್ದರಿಂದ ವೇದ-ಮಂತ್ರಗಳಲ್ಲಿ ಆಸತ್ತಿ ಇದೆ.

ಪ್ರಶ್ನೆ - ಮೀಮಾಂಸಕರು ನಿರೀಶ್ವರವಾದಿಗಳಾದ್ದರಿಂದ ಈಶ್ವರಾಭಿಪ್ರಾಯವನ್ನು ಅವರ ಮತದಂತೆ ಹೇಗೆ ಕೂಡಿಸುವುದು?

ಉತ್ತರ - ಈಶ್ವರಾಭಿಪ್ರಾಯವನ್ನು ಹೇಳಲಾಗದಿದ್ದರೂ ಅರ್ಥವನ್ನು ತಿಳಿದ ಅಧ್ಯಾಪಕರ ಅಭಿಪ್ರಾಯವನ್ನು ಮೀಮಾಂಸಕರು ಅಂಗೀಕರಿಸಿದ್ದಾರೆ. ಆದರಲ್ಲಿ ವ್ಯವಧಾನವಿಲ್ಲ. ಆದ್ದರಿಂದ ದೋಷವಿಲ್ಲ.

## ವೇದದಲ್ಲಿ ವ್ಯವಧಾನದ ಪ್ರಯೋಜನವೇನು?

**ನ್ಯಾಯದೀಪ – ನನು ವೇದೇ ಅಲಂಕಾರವಿಶೇಷರಸವಿಶೇಷಯೋರಾಧಾನಾಭಾವಾತ್ – 'ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ' ಇತ್ಯಾದೌ ನಿಷ್ಫಲಮೇವ ವ್ಯವಧಾನಮಿತಿ, ತತ್ರ ಅವ್ಯಾಪ್ತಿರಿತ್ಯತ ಆಹ – ವ್ಯವಧಾನಸ್ಯ ತ್ವಿತಿ ॥**

ಅನುವಾದ - ವೇದದಲ್ಲಿ ಅಲಂಕಾರವಿಶೇಷ ಅಥವಾ ರಸವಿಶೇಷಗಳ ಆಧಾನವು ಇರುವುದಿಲ್ಲ. 'ಸಪ್ತಾರ್ಧಾ ಗರ್ಭಾ ಭುವನಸ್ಯ ರೇತಃ' ಎಂಬ ಈ ವೇದಮಂತ್ರದಲ್ಲಿ ಯಾವ ರಸವಿಶೇಷಾದಿಗಳು ಇಲ್ಲದಿರುವುದರಿಂದ ವ್ಯವಧಾನವು ಪ್ರಯೋಜನರಹಿತವಾಗಿದೆ. ಆದ್ದರಿಂದ ಇಲ್ಲಿ ಆಸತ್ತಿಯ ಲಕ್ಷಣಕ್ಕೆ ಅವ್ಯಾಪ್ತಿದೋಷವು ಬರುತ್ತದಯೇ ? ಎಂಬ ಪ್ರಶ್ನೆಗೆ ಉತ್ತರವಾಗಿ 'ವ್ಯವಧಾನಸ್ಯ ತು' ಎಂಬ ವಾಕ್ಯವು ಹೊರಟಿದೆ.

ವಿವರಣೆ - 'ಸಪ್ತಾರ್ಧಾಗರ್ಭಾ ಭುವನಸ್ಯ ರೇತಃ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ' ಎಂಬ ಮಂತ್ರದಲ್ಲಿ ವಿಷ್ಣುವಿನ ಆಜ್ಞಾನುಸಾರ ಎಲ್ಲ ದೇವತೆಗಳು ಇದ್ದಾರೆ ಎಂದು ಹೇಳುತ್ತಿದ್ದಾರೆ. ಇಲ್ಲಿ ಅನ್ವಯಬೋಧಕ್ಕೆ ಉಚ್ಚಾರಣರೂಪವಾದ ವ್ಯವಧಾನ ಇದೆ. ಶಬ್ದಗಳನ್ನು ವ್ಯವಹಿತವಾಗಿ ಉಚ್ಚರಿಸಲಾಗಿದೆ. ಈ ವ್ಯವಧಾನಕ್ಕೆ ಯಾವ ಪ್ರಯೋಜನವೂ ಇಲ್ಲ. ಇಲ್ಲಿ ಯಾವ ಶಬ್ದಾಲಂಕಾರಾದಿಗಳನ್ನೂ ಹೇಳಲು ಬರುವುದಿಲ್ಲ. ಆದ್ದರಿಂದ ಇಂತಹ ವೇದಮಂತ್ರಗಳಲ್ಲಿ ಆಸತ್ತಿಯನ್ನು ಹೇಗೆ ಉಪಪಾದನೆ ಮಾಡುವುದು?

ಉತ್ತರ - ವೇದಮಂತ್ರಗಳಲ್ಲಿ ಅಲಂಕಾರಾದಿಗಳ ನಿರೂಪಣೆ ಇಲ್ಲದಿದ್ದರೂ ಅವುಗಳ ಯಥಾವತ್ ಉಚ್ಚಾರಣೆಗೆ ಪ್ರಯೋಜನವಿದೆ. ವೇದವು ಅಪೌರುಷೇಯ. ಈ ಮಂತ್ರ-ಗಳನ್ನು ಹೀಗೆಯೇ ಉಚ್ಚಾರಣೆ ಮಾಡಿದಾಗ ಅದೃಷ್ಟವಿಶೇಷವು ಹುಟ್ಟುತ್ತದೆ. ಇಲ್ಲದಿದ್ದರೆ ಇಲ್ಲ ಎಂಬುದಾಗಿ ವ್ಯಾಪ್ತಿಯು ಇದೆ. ಆದ್ದರಿಂದ ವ್ಯವಹಿತವಾದ ಅನ್ವಯ ಇರುವ ಕ್ರಮ-ದಲ್ಲೇ ಮಂತ್ರೋಚ್ಚಾರಣೆಯು ಸಫಲವಾದ್ದರಿಂದ ನಿಷ್ಫಲವಾದ ವ್ಯವಧಾನವು ಇಲ್ಲ. ಆದ್ದರಿಂದ ವೇದಮಂತ್ರದಲ್ಲಿ ಆಸತ್ತಿಯು ಇದೆ.

ಪ್ರಶ್ನೆ - ವೇದಮಂತ್ರದಲ್ಲಿ ಛಂದೋಭಂಗವಾಗದೇ ಇರಲು ವ್ಯವಹಿತಪ್ರಯೋಗ ಮಾಡಿ-ದ್ದಾರೆ ಎಂದು ಹೇಳಬಹುದಲ್ಲವೇ?

ಉತ್ತರ - ಕೆಲವು ಸ್ಥಳಗಳಲ್ಲಿ ಹಾಗೆ ಹೇಳಲು ಬರುತ್ತದೆ. ಆದರೆ ಈ ಮಂತ್ರದಲ್ಲಿ ಛಂದೋ-ಭಂಗವನ್ನು ತೋರಿಸಲು ಬರುವುದಿಲ್ಲ. ಆದ್ದರಿಂದ ಅಲಂಕಾರವಿಶೇಷ, ರಸವಿಶೇಷಗಳ ಆಧಾನ ಇಲ್ಲದಿರುವ ವಾಕ್ಯವನ್ನು ಇಲ್ಲಿ ಗ್ರಹಣ ಮಾಡಿದ್ದಾರೆ.

## ವ್ಯವಧಾನದಿಂದ ಶುಭಾಶುಭಗಳು

**ನ್ಯಾಯದೀಪ - ಅನಾದಿತೋ ವ್ಯವಧಾನೇನೈವ ಸನ್ನಿವೇಶಿತಪದಾವಲ್ಯಾ ತಥೈವ ಅಧ್ಯಾಪನಜಪಾದ್ಯನುಷ್ಠಾನೇಽದೃಷ್ಟಮನ್ಯಥಾ ನಾರ್ಥ ಇತಿ ಶುಭಾಶುಭ-ಪ್ರಾಪ್ತಿಪರಿಹಾರರೂಪಾದೃಷ್ಟಮೇವ ಫಲಮ್ - ಇತ್ಯರ್ಥಃ।**

ಅನುವಾದ - ಅನಾದಿಕಾಲದಿಂದ ವ್ಯವಹಿತವಾಗಿಯೇ ಇರುವ ಪದಗಳ ಸಮೂಹ ಇರುವ ವೇದ-ಗಳಲ್ಲಿ ವ್ಯವಹಿತಪದೋಪೇತವಾದ ಮಂತ್ರ, ಪಾರಾಯಣ, ಅಧ್ಯಾಪನ, ಜಪಾದಿಗಳನ್ನು ಮಾಡಿದಾಗ ಶುಭಪ್ರಾಪ್ತಿರೂಪವಾದ ಅದೃಷ್ಟ ಹಾಗೂ ಅಶುಭಪರಿಹಾರರೂಪವಾದ ಅದೃಷ್ಟವು ಫಲವಾಗಿ ಕಂಡಿದೆ. ಆದ್ದರಿಂದ ವೇದವಾಕ್ಯಗಳಲ್ಲಿ ವ್ಯವಧಾನಕ್ಕೆ ಶುಭಾಶುಭಪ್ರಾಪ್ತಿಪರಿಹಾರರೂಪವಾದ ಪ್ರಯೋಜನವನ್ನು ಅಂಗೀಕರಿಸುತ್ತೇವೆ.

ವಿವರಣೆ - ವೇದಮಂತ್ರಗಳಲ್ಲಿ ಕೆಲವು ಕಡೆ ಛಂದೋವಿಶೇಷಕ್ಕೋಸ್ಕರ ಪದಗಳನ್ನು ವ್ಯವಹಿತವಾಗಿ ಉಚ್ಚರಿಸಿದ್ದಾರೆ ಎಂದು ಹೇಳಬಹುದು. ಆದರೆ ಉಪನಿಷತ್ತುಗಳಲ್ಲಿ ಹಾಗೆ

ಹೇಳಲು ಬರುವುದಿಲ್ಲ. ಉಪನಿಷತ್ತಿನಲ್ಲಿ ಗದ್ಯಗಳು ಇರುತ್ತವೆ. ಅದರಲ್ಲಿ ಛಂದಸ್ಸು ಇರುವುದಿಲ್ಲ. ಅಂತಹ ಗದ್ಯಗಳಲ್ಲಿ ವ್ಯವಹಿತವಾಗಿ ಪದಗಳ ಉಚ್ಚಾರಣೆ ಇದೆ. ಆದರೆ ಅಲ್ಲಿ ಆಸತ್ತಿಯೂ ಇದೆ. ಹೇಗೆಂದರೆ ಗದ್ಯದಲ್ಲಿರುವ ಶಬ್ದವ್ಯವಧಾನವು ಮನುಷ್ಯಬುದ್ಧಿಕೃತವಲ್ಲ. ಅನಾದಿಕಾಲದಿಂದಲೂ ಉಪನಿಷದಾದಿಗಳಲ್ಲಿ ಪದವ್ಯವಧಾನವು ಇದೆ. ಇವುಗಳನ್ನು ಹೀಗೆ ವ್ಯವಹಿತವಾಗಿ ಉಚ್ಚರಿಸಿದಾಗಲೇ ಶುಭಪ್ರಾಪ್ತಿರೂಪವಾದ ಫಲವು ಬರುತ್ತದೆ. ನಮ್ಮ ಮನಸ್ಸಿಗೆ ತಕ್ಕಂತೆ ಅವುಗಳಲ್ಲಿ ಪದಗಳನ್ನು ಹಿಂದು ಮುಂದು ಮಾಡಿದರೆ ಆಗ ಅಶುಭಫಲ ಉಂಟಾಗುತ್ತದೆ. ಆದ್ದರಿಂದ ಶುಭಪ್ರಾಪ್ತಿ ಹಾಗೂ ಅಶುಭನಿವೃತ್ತಿರೂಪಫಲವು ಇರುವುದರಿಂದ ಪದವ್ಯವಧಾನವು ನಿಷ್ಫಲವಲ್ಲ. ಆದ್ದರಿಂದ ಉಪನಿಷದಾದಿಗಳಲ್ಲಿ ಆಸತ್ತಿಯು ಸಮಂಜಸವಾಗಿದೆ.

## ಅನಾಸನ್ನವಾಕ್ಯದಲ್ಲಿ ಅತಿವ್ಯಾಪ್ತಿ ಇಲ್ಲ

**ತರ್ಕತಾಂಡವ – ನಾಪಿ ಅನಾಸನ್ನೋದಾಹರಣೇ ಅತಿವ್ಯಾಪ್ತಿಃ । ತತ್ರ ವ್ಯವಧಾನಸ್ಯ ನಿಷ್ಫಲತ್ವಾತ್ ।**

ಅನುವಾದ - ಅನಾಸನ್ನ ಉದಾಹರಣವಾಕ್ಯದಲ್ಲಿ ಈ ಲಕ್ಷಣಕ್ಕೆ ಅತಿವ್ಯಾಪ್ತಿಯೂ ಸಹ ಇಲ್ಲ. ಉದಾಹರಣವಾಕ್ಯದಲ್ಲಿ ವ್ಯವಧಾನವು ನಿಷ್ಫಲವಾಗಿದೆ.

## 'ನಿಷ್ಫಲ' ಎಂಬ ಪದದ ಕೃತ್ಯ

**ನ್ಯಾಯದೀಪ –'ನಿಷ್ಫಲಸ್ಯ' ಇತ್ಯುಕ್ತ್ಯಾ 'ಗಿರಿರ್ಭುಕ್ತಮಗ್ನಿಮಾನ್ ದೇವದತ್ತೇನ' ಇತ್ಯಾದೌ ಅತಿವ್ಯಾಪ್ತಿಶ್ಚ ನಿರಸ್ತಾ, ಇತ್ಯತ ಆಹ – ನಾಪಿ ಅನಾಸನ್ನೇತಿ ॥**

ಅನುವಾದ - 'ನಿಷ್ಫಲ' ಎಂಬ ಶಬ್ದವನ್ನು ಹೇಳಿದ್ದರಿಂದ 'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತೇನ' ಮುಂತಾದ ಸ್ಥಳಗಳಲ್ಲಿ ಅತಿವ್ಯಾಪ್ತಿಯನ್ನೂ ನಿರಾಸ ಮಾಡಿದಂತಾಯಿತು ಎಂಬ ಅಭಿಪ್ರಾಯದಿಂದ 'ನಾಪ್ಯನಾಸನ್ನ' ಎಂಬ ವಾಕ್ಯವು ಹೊರಟಿದೆ.

ವಿವರಣೆ - ಆಸತ್ತಿಯ ಲಕ್ಷಣದಲ್ಲಿ 'ನಿಷ್ಫಲ' ಎಂಬ ವಿಶೇಷಣವನ್ನು ನೀಡಲಾಗಿದೆ. ಇದರಿಂದ ಆಸತ್ತಿಶೂನ್ಯವಾದ ವಾಕ್ಯದಲ್ಲಿ ಅತಿವ್ಯಾಪ್ತಿಯು ಬರುವುದಿಲ್ಲ.

ಅಭಿಪ್ರಾಯ ಹೀಗಿದೆ - 'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತೇನ' ಎಂಬ ವಾಕ್ಯವು ಆಸತ್ತಿರಹಿತವಾಕ್ಯಕ್ಕೆ ಉದಾಹರಣೆ. ಇದರಲ್ಲಿ ಗಿರಿ, ಭುಕ್ತ ಮುಂತಾದ ಶಬ್ದಗಳಿಗೆ ಅರ್ಥವಿದ್ದರೂ ಸಹ ಅನ್ವಯಬೋಧ ಬರುವುದಿಲ್ಲ.

ಇಲ್ಲಿ ಪದಗಳು ವ್ಯವಹಿತವಾಗಿರುವುದೇ ಅನ್ವಯಬೋಧಾಭಾವಕ್ಕೆ ಕಾರಣವಾಗಿದೆ.

ಈ ವಾಕ್ಯದಲ್ಲಿರುವ ಪದವ್ಯವಧಾನಕ್ಕೆ ಯಾವ ಪ್ರಯೋಜನವೂ ಇಲ್ಲ. ನಿಷ್ಫಲವಾದ ವ್ಯವಧಾನವು ಇರುವ ಸ್ಥಳದಲ್ಲಿ ಆಸತ್ತಿ ಇರುವುದಿಲ್ಲ.

ಆದ್ದರಿಂದ ಲಕ್ಷಣದಲ್ಲಿ 'ನಿಷ್ಫಲ' ಎಂಬ ವಿಶೇಷಣವನ್ನು ಕೊಟ್ಟಿದ್ದರಿಂದ ಆಸತ್ತಿಶೂನ್ಯವಾಕ್ಯದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ ಎಂದಭಿಪ್ರಾಯ.

## ವಾದಿವಾಕ್ಯದಲ್ಲಿಯೂ ಅತಿವ್ಯಾಪ್ತಿ ಇಲ್ಲ

**ತರ್ಕತಾಂಡವ – ಅತ ಏವ ಅವ್ಯವಹಿತತಾತ್ಪರ್ಯಕೇ ವಾದಿವಾಕ್ಯೇ ನಾತಿವ್ಯಾಪ್ತಿಃ । ಶ್ರುತಸ್ಯ ವ್ಯವಹಿತತ್ವಾತ್ । ಅಭಿಪ್ರಾಯಕಸ್ಯ ಚ ವಾದಿನಃ ಅನಾಪ್ತತ್ವೇನ ಅಭಿಪ್ರಾಯ-ವಿರಹಕಲ್ಪನಾದೇವ ಅನುಪಸ್ಥಿತೇಃ ।**

ಅನುವಾದ - ಆದ್ದರಿಂದಲೇ ಅವ್ಯವಹಿತವಾದ ತಾತ್ಪರ್ಯವುಳ್ಳ ವಾದಿವಾಕ್ಯದಲ್ಲಿಯೂ ಅತಿ-ವ್ಯಾಪ್ತಿಯು ಇಲ್ಲ. ಪದಶ್ರವಣವು ವ್ಯವಹಿತವಾಗಿದೆ. ಹಾಗೂ ವಾದಿಯು ಅನಾಪ್ತನಾದ್ದರಿಂದ ಅವನ ಅಭಿಪ್ರಾಯವನ್ನು ಕಲ್ಪನೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ತಾತ್ಪರ್ಯೋಪಸ್ಥಿತಿಯು ವಾದಿವಾಕ್ಯದಲ್ಲಿ ಇರುವುದಿಲ್ಲ.

ವಿಶೇಷವಿಚಾರ - 'ಅವ್ಯವಹಿತತಾತ್ಪರ್ಯಕೇ' ಎಂದು ಆಭಿಮಾನಿಕವಾಗಿ ಹೇಳಲಾಗಿದೆ. ಪ್ರತಿವಾದಿಯು ವ್ಯವಹಿತಪದೋಚ್ಚಾರಣೆ ಮಾಡಿದಾಗ ತನಗೆ ತಾತ್ಪರ್ಯದಲ್ಲಿ ವ್ಯವಧಾನ

ಇದೆ ಎಂದು ಅಭಿಮಾನ ಮಾಡುತ್ತಾನೆ ಎಂದು ಹೇಳುತ್ತೇವೆ. ವಸ್ತುತಃ ಅವನಿಗೆ ತಾತ್ಪರ್ಯ-ವ್ಯವಧಾನದಲ್ಲಿ ಅಭಿಪ್ರಾಯವಿದೆಯೋ ಇಲ್ಲವೋ? ಎಂಬುದನ್ನು ನಿಶ್ಚಯ ಮಾಡಲು ಸಾಧ್ಯವಿಲ್ಲ.

ಕೆಲವು ಪಾಠಗಳಲ್ಲಿ 'ವ್ಯವಹಿತತಾತ್ಪರ್ಯಕೇ' ಎಂದೇ ವಾಕ್ಯಕ್ರಮವಿದೆ. ಎರಡು ಪಾಠ-ದಲ್ಲೂ ಸಹ ವಾದಿಯು ಅನಾಪ್ತನಾದ್ದರಿಂದ ತದ್ವಾಕ್ಯದಲ್ಲಿ ಅಭಿಪ್ರಾಯವನ್ನು ಕಲ್ಪನಾ ಮಾಡಲು ಸಾಧ್ಯವಿಲ್ಲ ಎಂದಭಿಪ್ರಾಯ.

'ಅಭಿಪ್ರಾಯಕಸ್ಯ' ಎಂಬ ಪದಕ್ಕೆ 'ಅನುಪಸ್ಥಿತೇಃ' ಎಂಬಲ್ಲಿ ಅನ್ವಯ. ವಾದಿಯು ಅನಾಪ್ತ-ನಾದ್ದರಿಂದ ವ್ಯವಹಿತೋಚ್ಚರಿತವಾಕ್ಯದಲ್ಲಿ ಅಭಿಪ್ರಾಯಕಲ್ಪನಾ ಮಾಡಲು ಆಗುವುದಿಲ್ಲ. ಆದ್ದರಿಂದ ಅಭಿಪ್ರಾಯಕವಾದ =ತಾತ್ಪರ್ಯವ್ಯವಧಾನವು ಇಲ್ಲ ಎಂಬ ಉಪಸ್ಥಿತಿಯು ಬರುವುದಿಲ್ಲ ಎಂದಭಿಪ್ರಾಯ.

## ನಮ್ಮ ಸಿದ್ಧಾಂತದಲ್ಲಿ ಯಾವುದೇ ದೋಷಗಳಿಲ್ಲ

**ನ್ಯಾಯದೀಪ – 'ಅವ್ಯವಹಿತತಾತ್ಪರ್ಯಕಮ್' ಇತ್ಯಾದಿನೋಕ್ತದೋಷಃ ಸ್ವಪಕ್ಷೇ ನೇತ್ಯಾಹ – ಅತ ಏವೇತಿ ॥ ತಮೇವ ಹೇತುಂ ವ್ಯನಕ್ತಿ – ಶ್ರುತಸ್ಯೇತಿ ॥**

ಅನುವಾದ - 'ಅವ್ಯವಹಿತತಾತ್ಪರ್ಯಕಂ' ಎಂಬ ಪಕ್ಷದಲ್ಲಿ ಹೇಳಿದ ದೋಷಗಳು ನಮ್ಮ ಸಿದ್ಧಾಂತ-ದಲ್ಲಿ ಬರುವುದಿಲ್ಲ ಎಂದು 'ಅತ ಏವ' ಮುಂತಾದ ಗ್ರಂಥದಿಂದ ಹೇಳಿದ್ದಾರೆ. ಅದೇ ಕಾರಣವನ್ನು 'ಶ್ರುತಸ್ಯ' ಎಂಬ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ.

ವಿವರಣೆ - ಸಿದ್ಧಾಂತದಲ್ಲಿ ಹೇಳಿದ ಆಸತ್ತಿಯ ಲಕ್ಷಣಕ್ಕೆ ಅತಿವ್ಯಾಪ್ತಿ ಮುಂತಾದ ದೋಷ-ಗಳಿಲ್ಲ ಎಂಬುದನ್ನು ವಿವರಿಸುತ್ತಿದ್ದಾರೆ.

ಪ್ರಶ್ನೆ - ಪದಗಳಲ್ಲಿ ವ್ಯವಧಾನವಿದ್ದರೂ ತಾತ್ಪರ್ಯದಲ್ಲಿ ವ್ಯವಧಾನ ಇಲ್ಲದಿದ್ದರೆ ಆಗ ಆಸತ್ತಿಯು ಆ ವಾಕ್ಯದಲ್ಲಿ ಇರುತ್ತದೆಂದು ಹಿಂದೆ ಉಪಪಾದನೆ ಮಾಡಲಾಯಿತು. ಹೀಗೆ ಹೇಳಿದರೆ ಪ್ರತಿವಾದಿಯ ವಾಕ್ಯದಲ್ಲೂ ಆಸತ್ತಿಯನ್ನು ಅಂಗೀಕರಿಸಬೇಕಾಗುತ್ತದೆ. ಪ್ರತಿ-ವಾದಿಯು ವ್ಯವಹಿತವಾಗಿ ಪದಗಳನ್ನು ಉಚ್ಚರಿಸುತ್ತಾನೆ. ಆದರೆ ನನಗೆ ತಾತ್ಪರ್ಯದಲ್ಲಿ

ವ್ಯವಧಾನ ಇಲ್ಲ ಎಂದು ಹೇಳುತ್ತಾನೆ. ಹೀಗೆ ಪ್ರತಿವಾದಿಯ ವಾಕ್ಯದಲ್ಲಿ ತಾತ್ಪರ್ಯಾ-ವ್ಯವಧಾನವನ್ನು ಅಂಗೀಕರಿಸಿದರೆ ಅಪಾರ್ಥಕರೂಪವಾದ ನಿಗ್ರಹಸ್ಥಾನವನ್ನು ಪ್ರತಿವಾದಿಗೆ ಹೇಳಲು ಸಾಧ್ಯವಿಲ್ಲವಲ್ಲವೇ?

ಉತ್ತರ - ಪ್ರತಿವಾದಿಯ ವಾಕ್ಯದಲ್ಲಿ ಆಪ್ತತ್ವವು ಇಲ್ಲ. ಆದ್ದರಿಂದ ಆ ವಾಕ್ಯದಲ್ಲಿ ತಾತ್ಪರ್ಯವ್ಯವಧಾನವು ಇಲ್ಲ ಎಂದು ನಿಶ್ಚಯ ಮಾಡಲು ಬರುವುದಿಲ್ಲ. ಮತ್ತು ಪದೋಚ್ಚಾರಣದಲ್ಲಿ ವ್ಯವಧಾನವು ಕಂಡಿದೆ. ದೃಷ್ಟವಾದ ವ್ಯವಧಾನವನ್ನು ಅಪಲಾಪ ಮಾಡುವುದು ಸರಿಯಲ್ಲ. ಆದ್ದರಿಂದ ವ್ಯವಹಿತವಾಗಿ ಉಚ್ಚಾರಣೆ ಮಾಡಿದ ಪ್ರತಿವಾದಿ-ವಾಕ್ಯದಲ್ಲಿ ಆಸತ್ತಿಯು ಬರುವುದಿಲ್ಲ.

## ಶ್ಲೋಕಾದಿಗಳಲ್ಲಿ ಆಸತ್ತಿ ಇಲ್ಲ ಎಂದು ಕೆಲವರ ಅಭಿಪ್ರಾಯ

**ತರ್ಕತಾಂಡವ – ಕೇಚಿತ್ತು – ''ಶ್ಲೋಕಕುಲಕಾದೌ ಆಸತ್ತ್ಯಭಾವಾತ್ ನ ಶ್ಲೋಕಾದಿಕಂ ಬೋಧಕಮ್ । ಕಿಂತು ತದುನ್ನೀತಂ ವಾಕ್ಯಾದಿಕಮೇವ'' ಇತ್ಯಾಹುಃ ।**

ಅನುವಾದ - ಕೆಲವರು ಶ್ಲೋಕ, ಕುಲಕಾದಿಗಳಲ್ಲಿ ಆಸತ್ತಿ ಇಲ್ಲದಿರುವುದರಿಂದ ಶ್ಲೋಕಾದಿಗಳು ಬೋಧಕವಲ್ಲ. ಮತ್ತೇನೆಂದರೆ ತದುನ್ನೀತವಾದ ಬೇರೆ ವಾಕ್ಯಗಳೇ ಶಾಬ್ದಬೋಧಜನಕ ಎಂದು ಹೇಳು-ತ್ತಾರೆ.

ವಿವರಣೆ - ಪದ್ಯ , ಕುಲಕಾದಿಗಳಲ್ಲಿ ಆಸತ್ತಿಯು ಬೇಡ. ಅದರಲ್ಲಿ ಅನ್ವಯವು ವ್ಯವಹಿತ-ವಾದ್ದರಿಂದ ಆ ಸ್ಥಳಗಳಲ್ಲಿ ವಕ್ತೃತಾತ್ಪರ್ಯವನ್ನು ಕಲ್ಪನಾ ಮಾಡುವುದು ಬೇಡ. ಆಸತ್ತಿ ಇಲ್ಲದಿದ್ದರೆ ಅನ್ವಯಬೋಧ ಹೇಗೆ ಬರುತ್ತದೆ ಎಂದರೆ ಈ ಶ್ಲೋಕಾದಿಗಳಿಂದ ಅನ್ವಯ-ಬೋಧ ಬರುವುದಿಲ್ಲ. ಮತ್ತೇನೆಂದರೆ ಇಲ್ಲಿರುವ ವ್ಯವಹಿತಪದಾದಿಗಳನ್ನು ಯೋಜನಾ ಮಾಡಿದಾಗ ಮತ್ತೊಂದು ವಾಕ್ಯವು ಆಗುತ್ತದೆ. ಆ ವಾಕ್ಯಾಂತರದಿಂದ ಶಾಬ್ದಬೋಧವು ಬರುತ್ತದೆ.

ಉದಾಹರಣೆ - 'ಘಟಃ ಕರ್ಮತ್ವಂ ಆನಯನಂ' ಹೀಗೆ ಹೇಳಿದಾಗ ಅನ್ವಯಬೋಧ ಬರುವುದಿಲ್ಲ. ಯೋಚನೆ ಮಾಡಿದಾಗ ಘಟಕರ್ಮಕವಾದ ಆನಯನರೂಪ ಶಾಬ್ದ-

ಬೋಧ ಬರುತ್ತದೆ. ಆದರಂತೆ ವ್ಯವಹಿತಪದಗಳಿರುವ ಪದ್ಯ ಕುಲಕಾದಿಗಳಿಂದ ಅನ್ವಯ-ವಿರುವ ಮತ್ತೊಂದು ವಾಕ್ಯವು ಉನ್ನೀತವಾಗುತ್ತದೆ. ಅದರಿಂದ ಶಾಬ್ದಬೋಧ ಬರುತ್ತದೆ. ಸಾಕ್ಷಾತ್ ಪದ್ಯಾದಿಗಳು ಶಾಬ್ದಬೋಧಜನಕವಲ್ಲ. ಹೀಗೆ ಕೆಲವರು ಅಭಿಪ್ರಾಯಪಡುತ್ತಾರೆ.

## 'ಕೇಚಿತ್' ಎಂಬ ಶಬ್ದಪ್ರಯೋಗದ ಆಂತರ್ಯ

**ನ್ಯಾಯದೀಪ – ಕೇಚಿತ್ತ್ವಿತಿ ॥ ಕಲ್ಪನಾಗೌರವಮಸ್ಮಿನ್ ಪಕ್ಷೇ ಅಸ್ವಾರಸ್ಯಬೀಜಂ ಧ್ಯೇಯಮ್ ।**

ಅನುವಾದ- 'ಕೇಚಿತ್ತು' ಎಂಬ ಪ್ರತೀಕದ ಅಭಿಪ್ರಾಯ ಹೀಗಿದೆ - ಕೇಚಿತ್‌ಕಾರರ ಪಕ್ಷದಲ್ಲಿ ಅಸ್ವಾರಸ್ಯಕ್ಕೆ ಕಾರಣ ಕಲ್ಪನಾಗೌರವರೂಪದೋಷ ಇರುವುದು.

ವಿವರಣೆ- ಕೆಲವರ ಈ ಅಭಿಪ್ರಾಯ ಸರಿಯಲ್ಲ. ಈ ಪಕ್ಷದಲ್ಲಿ ಕಲ್ಪನಾಗೌರವದೋಷ ಬರುತ್ತದೆ. ಶ್ಲೋಕವನ್ನು ಪಠನೆ ಮಾಡಿದಾಗ ನಮಗೆ ಅನ್ವಯಬೋಧ ಬರಲಿಲ್ಲ. ಅನಂತರ ಅಲ್ಲಿರುವ ಶಬ್ದಗಳನ್ನು ಯೋಜನಾ ಮಾಡಿಕೊಂಡು ವಾಕ್ಯಾಂತರವನ್ನು ರಚನೆ ಮಾಡಿಕೊಳ್ಳುತ್ತೇವೆ. ಅದರಿಂದ ನಮಗೆ ಶಾಬ್ದಬೋಧ ಬರುತ್ತದೆ ಎಂದು ಯಾರಿಗೂ ಅನುಭವ ಬರುವುದಿಲ್ಲ. ಈ ಅನುಭವವಿರೋಧವೇ ಅಸ್ವಾರಸ್ಯಕ್ಕೆ ಕಾರಣ. ಆದ್ದರಿಂದ ಗ್ರಂಥಕಾರರು 'ಕೇಚಿತ್' ಎಂಬ ಶಬ್ದವನ್ನು ಪ್ರಯೋಗ ಮಾಡಿದ್ದಾರೆ.

## ಜ್ಞಾತವಾದ ಆಸತ್ತಿಯೇ ಶಾಬ್ದಬೋಧಕ್ಕೆ ಕಾರಣ

**ತರ್ಕತಾಂಡವ – ಇಯಂ ಚ ಆಸತ್ತಿರ್ಜ್ಞಾತಾ ಏವ ಶಾಬ್ದಧೀಹೇತುಃ । ಆಸತ್ತಿಭ್ರಮೇಣ ಶಾಬ್ದಭ್ರಮಾತ್ ।**

ಅನುವಾದ - ಈ ಆಸತ್ತಿಯು ಜ್ಞಾತವಾದಾಗಲೇ ಶಾಬ್ದಬೋಧಕ್ಕೆ ಕಾರಣವಾಗುತ್ತದೆ. ಆಸತ್ತಿಭ್ರಮ-ದಿಂದ ಶಾಬ್ದಭ್ರಮೆಯು ಬರುವುದು ಕಂಡಿದೆ.

ವಿವರಣೆ - ಆಕಾಂಕ್ಷಾ ಹೇಗೆ ಜ್ಞಾತವಾಗಿ ಶಾಬ್ದಬೋಧಕ್ಕೆ ಕಾರಣವೋ ಆದರಂತೆ

ಆಸತ್ತಿಯೂ ಸಹ ಜ್ಞಾತವಾಗಿಯೇ ಶಾಬ್ದಬೋಧಕ್ಕೆ ಕಾರಣವಾಗುತ್ತದೆ. ಆಸತ್ತಿಯ ಭ್ರಮದಿಂದ ಶಾಬ್ದಭ್ರಮ ಬರುವ ಸ್ಥಳಕ್ಕೆ ಉದಾಹರಣೆ ಹೀಗಿದೆ - 'ದೇವದತ್ತಸ್ಯ ಪುತ್ರಸ್ಯ ಸಖಾ' ಎಂಬ ವಾಕ್ಯವಿದೆ. ಇದರಲ್ಲಿ ಸಖಾ ಎಂಬ ಶಬ್ದಕ್ಕೆ ದೇವದತ್ತಶಬ್ದದಲ್ಲೂ ಪುತ್ರಶಬ್ದದಲ್ಲೂ ಅನ್ವಯವನ್ನು ಹೇಳಲು ಬರುತ್ತದೆ. ಇದನ್ನು ಕೇಳುವಾಗ 'ದೇವದತ್ತಸ್ಯ' ಎಂಬ ಶಬ್ದಶ್ರವಣಾನಂತರದಲ್ಲಿ 'ಪುತ್ರಸ್ಯ' ಎಂಬ ಶಬ್ದವು ಶ್ರುತವಾಗಿಲ್ಲ. 'ಸಖಾ' ಎಂಬ ಶಬ್ದವು ಮಾತ್ರ ಶ್ರುತವಾಗಿದೆ. ಇಂತಹ ಸ್ಥಳದಲ್ಲಿ ವಕ್ತೃವಿಗೆ 'ದೇವದತ್ತಸ್ಯ ಪುತ್ರಸ್ಯ ಸಖಾ' ಎಂದು ಶಬ್ದಪ್ರಯೋಗವು ಅಭಿಪ್ರೇತವಾಗಿದೆ. ಆದರೆ ಪ್ರಯೋಗ ಮಾಡುವಾಗ ಉಚ್ಚಾರಣೆಯಲ್ಲಿ ವ್ಯವಧಾನವಿದ್ದ ಪ್ರಯುಕ್ತ 'ಪುತ್ರಸ್ಯ' ಎಂಬ ಶಬ್ದವು ಶ್ರುತವಾಗಿಲ್ಲ. ಆಗ 'ದೇವದತ್ತಸ್ಯ ಸಖಾ' ಎಂದು ಶಾಬ್ದಬೋಧವು ಬರುತ್ತದೆ.

ಇಲ್ಲಿ ಆಸತ್ತಿಭ್ರಮದಿಂದ ಶಾಬ್ದಭ್ರಮವು ಬಂದಿದೆ. ವಸ್ತುತಃ ಅನ್ವಯಬೋಧವಿರೋಧಿಯಾದ ವ್ಯವಧಾನ ಇದೆ. ಇಂತಹ ಸ್ಥಳದಲ್ಲಿ ವ್ಯವಧಾನವಿದ್ದರೂ ವ್ಯವಧಾನ ಇಲ್ಲ ಎಂಬ ಭ್ರಮದಿಂದ ಶಾಬ್ದಬೋಧವು ಬಂದಿದೆಯಾದ್ದರಿಂದ ಇಲ್ಲಿ ಶಾಬ್ದಭ್ರಮವಿದೆ ಎಂದು ಹೇಳುತ್ತೇವೆ.

ಇಂತಹ ಸ್ಥಳಗಳಲ್ಲಿ ಕೇವಲ ಆಸತ್ತಿಯು ಶಾಬ್ದಬೋಧಕ್ಕೆ ಕಾರಣವಲ್ಲ. ಆಸತ್ತಿಜ್ಞಾನವು ಕಾರಣ ಎಂದು ಹೇಳುತ್ತೇವೆ.

## ಸಂದೇಹವಿದ್ದರೆ ವ್ಯಾಕ್ಯಾರ್ಥಬೋಧ ಬರುವುದಿಲ್ಲ

**ತರ್ಕತಾಂಡವ – 'ನೀಲೋ ಘಟೋಽಸ್ತಿ' ಇತ್ಯಾದೌ ನೀಲಘಟಪದಯೋರ್ಮಧ್ಯೇ ಅನುಷಂಗಪದಾಂತರೋಚ್ಚಾರಣಾವೃತ್ತ್ಯಧ್ಯಾಹಾರಾದಿಸಂದೇಹೇ ನಿಶ್ಚಯೇ ವಾ ವಾಕ್ಯಾರ್ಥಾಬೋಧಾಚ್ಚ।**

ಅನುವಾದ- 'ನೀಲಃ ಘಟಃ ಅಸ್ತಿ' 'ನೀಲಘಟ ಇದೆ' ಮುಂತಾದ ಪ್ರಯೋಗ ಮಾಡಿದಾಗ ನೀಲಪದ ಮತ್ತು ಘಟಪದಗಳ ಮಧ್ಯದಲ್ಲಿ ಅನುಷಂಗ, ಪದಾಂತರೋಚ್ಚಾರಣ, ಪದಾಂತರಾವೃತ್ತಿ, ಅಧ್ಯಾಹಾರ-

ಗಳನ್ನು ಮಾಡಬೇಕೋ ಬೇಡವೋ? ಎಂಬ ಸಂದೇಹ ಬಂದಾಗ, ಅಥವಾ ಅಧ್ಯಾಹಾರಾದಿಗಳ ನಿಶ್ಚಯ ಮಾಡಿದಾಗ ವಾಕ್ಯಾರ್ಥಬೋಧವು ಬರುವುದಿಲ್ಲ.

ವಿವರಣೆ- 'ನೀಲಃ ಘಟಃ ಅಸ್ತಿ' ಎಂಬ ಪ್ರಯೋಗದಲ್ಲಿ ನೀಲಪದಕ್ಕೂ ಘಟಪದಕ್ಕೂ ವ್ಯವಧಾನ ಇಲ್ಲ. ನೀಲಾಭಿನ್ನವಾದ ಘಟವಿದೆ ಎಂದು ಸಾಮಾನ್ಯಾಕಾರವಾಗಿ ಶಾಬ್ದ-ಬೋಧವು ಬರುತ್ತದೆ. ಆದಕ್ಕೆ ನೀಲಶಬ್ದ ಮತ್ತು ಘಟಶಬ್ದಗಳ ಮಧ್ಯ ಬೇರೆ ಯಾವು-ದಾದರೂ ಶಬ್ದವನ್ನು ಅನುಷಂಗ ಮಾಡಬೇಕೋ ಅಥವಾ ಬೇರೆ ಪದವನ್ನು ಆವೃತ್ತಿ ಮಾಡಬೇಕೋ? ಇತ್ಯಾದಿಯಾಗಿ ಸಂದೇಹ ಬಂದರೆ ಆಗ ಈ ವಾಕ್ಯದಿಂದ ಶಾಬ್ದ-ಬೋಧವು ಬರುವುದಿಲ್ಲ.

**ನ್ಯಾಯದೀಪ – ಆಸತ್ತಿಭ್ರಮೇಣ ಶಬ್ದಭ್ರಮೇ ವಿಪ್ರತಿಪನ್ನಂ ಪ್ರತ್ಯಾಹ – ನೀಲ ಇತಿ ॥**

ಅನುವಾದ - ಆಸತ್ತಿಭ್ರಮದಿಂದ ಶಾಬ್ದಭ್ರಮವು ಬರುವ ವಿಷಯದಲ್ಲಿ ಸಂದೇಹಪಡುವ ವಾದಿ-ಯನ್ನು ಕುರಿತು ದೋಷವನ್ನು 'ನೀಲಃ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

## ಆಸತ್ತಿಯು ಇದ್ದ ಮಾತ್ರಕ್ಕೆ ಏಕೆ ಬೋಧಜನಕವಲ್ಲ ?

**ನ್ಯಾಯದೀಪ – ಅನುಷಂಗಶ್ಚ ಪದಾಂತರೋಚ್ಚಾರಣಂ ಚ ಆವೃತ್ತಿಶ್ಚ ಅಧ್ಯಾ-ಹಾರಶ್ಚ ಇತ್ಯೇವಮಾದಿಸಂದೇಹೇ ನೀಲಘಟಪದಾರ್ಥಾನ್ವಯಬೋಧಾಭಾವೇನ ಸ್ವರೂಪಸದಾಸತ್ತ್ಯಾ ನ ಹೇತುತ್ವಂ ಕಿಂತು ಜ್ಞಾತಾಯಾ ಏವ । ಅನ್ಯಥಾ ತಾದೃಶ-ಸ್ಥಲೇಽಪಿ ಅನ್ವಯಬೋಧಃ ಸ್ಯಾದೇವ । ಸ್ವರೂಪಸತ್ತ್ಯಾಸ್ತಸ್ಯಾಸ್ತತ್ರ ಸತ್ತ್ವಾದಿತ್ಯರ್ಥಃ ।**

ಅನುವಾದ - ಅನುಷಂಗ ಪದಾಂತರೋಚ್ಚಾರಣೆ, ಆವೃತ್ತಿ, ಅಧ್ಯಾಹಾರ ಇವೇ ಮುಂತಾದವುಗಳ ಸಂದೇಹ ಬಂದಾಗ ನೀಲಪದಾರ್ಥಕ್ಕೂ ಘಟಪದಾರ್ಥಕ್ಕೂ ಅಭೇದಾನ್ವಯಬೋಧ ಬರುವುದಿಲ್ಲ-ವಾದ್ದರಿಂದ ಸ್ವರೂಪತಃ ಸತ್ ಆದ ಆಸತ್ತಿಯು ಶಾಬ್ದಬೋಧಕ್ಕೆ ಕಾರಣವಲ್ಲ. ಜ್ಞಾತವಾದ ಆಸತ್ತಿಯೇ ಕಾರಣ ಎಂದು ಹೇಳಬೇಕು. ಇಲ್ಲದಿದ್ದರೆ ಹಿಂದೆ ಹೇಳಿದ ಅಧ್ಯಾಹಾರಾದಿಸಂದೇಹಸ್ಥಳಗಳಲ್ಲೂ

ಅನ್ವಯಬೋಧವು ಬರಬೇಕಾದೀತು. ಅಲ್ಲೂ ಸಹ ಸ್ವರೂಪಸತ್ ಆದ ಆಸತ್ತಿಯು ಇದೆಯಾದ್ದರಿಂದ ಎಂಬುದು ಈ 'ನೀಲಃ ಘಟಃ ಅಸ್ತಿ' ಎಂಬ ವಾಕ್ಯದ ಅಭಿಪ್ರಾಯ.

ವಿವರಣೆ - ಶಾಬ್ದಬೋಧ ಬರದೇ ಇರಲು ಎರಡು ಕಾರಣಗಳು.

1. ಶಬ್ದಗಳ ಮಧ್ಯದಲ್ಲಿ ವ್ಯವಧಾನ ಇದೆಯೋ ಇಲ್ಲವೋ ಎಂಬ ಸಂದೇಹದಿಂದ ಅನು-ಷಂಗ ಹಾಗೂ ಅಧ್ಯಾಹಾರಾದಿಗಳನ್ನು ಮಾಡಬೇಕೋ ಬೇಡವೋ? ಎಂಬ ಸಂದೇಹ-ದಿಂದ ಅನ್ವಯಬೋಧ ಬರುವುದಿಲ್ಲ.

2. ವಾಸ್ತವಿಕವಾಗಿ ವ್ಯವಧಾನ ಇಲ್ಲದಿದ್ದರೂ ವ್ಯವಧಾನವಿದೆ ಎಂಬ ಭ್ರಮದಿಂದ ಆಸತ್ತಿಯು ಬರದೇ ಅನ್ವಯಬೋಧ ಬರುವುದಿಲ್ಲ.

ಈ ಎರಡು ಸ್ಥಳಗಳಲ್ಲೂ ಸ್ವರೂಪಸತ್ತಾದ ಆಸತ್ತಿಯು ಇದೆ. ಆದರೆ ಅನ್ವಯಬೋಧ ಬರುತ್ತಿಲ್ಲ. ಆದ್ದರಿಂದ ಜ್ಞಾತವಾದ ಆಸತ್ತಿಯೇ ಅನ್ವಯಬೋಧಕ್ಕೆ ಕಾರಣ ಎಂದು ಹೇಳಬೇಕು.

## ರುಚಿದತ್ತ ಹೇಳಿದ ಆಸತ್ತಿಯ ಲಕ್ಷಣ ಸರಿಯಲ್ಲ

**ಏತೇನ ''ಆಸತ್ತಿಃ ಸ್ವರೂಪಸತೀ ಹೇತುಃ । ನ ತು ಜ್ಞಾತಾ । ಮಾನಾಭಾವಾತ್'' ಇತಿ ರುಚಿದತ್ತೇನೋಕ್ತಂ ನಿರಸ್ತಮ್ ।**

ಅನುವಾದ - ಹೀಗೆ ಹೇಳಿದ್ದರಿಂದ 'ಆಸತ್ತಿಯು ಸ್ವರೂಪತಃ ಸತ್ತಾಗಿಯೇ ಕಾರಣವಾಗಿದೆ. ಹೊರತು ಜ್ಞಾತವಾಗಿ ಕಾರಣವಾಗಿಲ್ಲ. ಪ್ರಮಾಣವಿಲ್ಲವಾದ್ದರಿಂದ' ಎಂಬ ರುಚಿದತ್ತನ ವಿಚಾರನ್ನೂ ಸಹ ನಿರಾ-ಕರಿಸಿದಂತಾಯಿತು.

ವಿವರಣೆ - ಹಿಂದೆಯೇ ಪೂರ್ವಪಕ್ಷವನ್ನು ಹೇಳುವಾಗ ರುಚಿದತ್ತನ ಮತವನ್ನು ಉಪ-ಪಾದನೆ ಮಾಡಲಾಗಿದೆ. ಅದೇ ವಿಷಯವನ್ನು ಸಿದ್ಧಾಂತನಿರೂಪಣೆಯಲ್ಲೂ ಸಹ ನಿರಾ-ಕರಣೆ ಮಾಡುತ್ತಿದ್ದಾರೆ.

ಸ್ವರೂಪಸತ್ತಾದ ಆಸತ್ತಿಯು ಶಾಬ್ದಬೋಧಕ್ಕೆ ಕಾರಣ ಎಂದು ಹೇಳಿದರೆ ಅನುಷಂಗ, ಅಧ್ಯಾಹಾರಾದಿಗಳ ಸಂದೇಹದಿಂದ ಶಾಬ್ದಬೋಧ ಬರುವುದಿಲ್ಲ ಎಂಬ ದೋಷವು ರುಚಿ-

ದತ್ತನ ಮತಕ್ಕೂ ಅನ್ವಯಿಸುತ್ತದೆ. ಆದ್ದರಿಂದ ಜ್ಞಾತವಾದ ಆಸತ್ತಿಯೇ ಶಾಬ್ದಬೋಧಕ್ಕೆ ಕಾರಣ ಎಂದು ಹೇಳಬೇಕು.

**ತರ್ಕತಾಂಡವ – ಆವೃತ್ತಿರಸ್ತಿ ಪದಸ್ಯ । ನೀಲೋಽಸ್ತಿ ಘಟೋಽಸ್ತೀತಿ ನೀಲೋ ಭವತಿ, ಘಟೋಽಸ್ತೀತಿ ಕ್ರಿಯಾಂತರಾಧ್ಯಾಹಾರ ಇತ್ಯಾದಿ ಧ್ಯೇಯಮ್ ।**

ಅನುವಾದ - 'ಆವೃತ್ತಿ' ಎಂದರೆ 'ಅಸ್ತಿ' ಎಂಬ ಪದದ ಆವೃತ್ತಿ ಎಂದರ್ಥ. 'ನೀಲಃ ಅಸ್ತಿ' 'ಘಟಃ ಅಸ್ತಿ' ಎಂಬುದು ಉದಾಹರಣೆ. 'ಅಧ್ಯಾಹಾರ' ಎಂದರೆ 'ನೀಲಃ ಅಸ್ತಿ', 'ಘಟಃ ಅಸ್ತಿ' 'ನೀಲಃ ಭವತಿ' 'ಘಟಃ ಭವತಿ' ಮೊದಲಾದ ಕ್ರಿಯಾಪದಾಂತರಗಳ ಅಧ್ಯಾಹಾರ ಎಂದರ್ಥ.

ವಿವರಣೆ - ಮೂಲಗ್ರಂಥದಲ್ಲಿ 'ಆವೃತ್ತ್ಯಧ್ಯಾಹಾರಾದಿ' ಎಂಬ ವಾಕ್ಯವಿದೆ. ಇಲ್ಲಿ ಆವೃತ್ತಿ ಎಂದರೆ ' ನೀಲಃ ಘಟಃ ಅಸ್ತಿ' ಎಂಬ ವಾಕ್ಯದಲ್ಲಿ ನೀಲಶಬ್ದದ ಅನಂತರ 'ಅಸ್ತಿ' ಎಂಬ ಶಬ್ದವನ್ನು ಆವೃತ್ತಿ ಮಾಡುವುದು ಎಂದರ್ಥ. ಕ್ರಿಯಾಪದಾಂತರದ ಅಧ್ಯಾಹಾರ ಎಂದರೆ 'ಅಸ್ತಿ' ಎಂಬ ಪದದ ಬದಲಾಗಿ 'ಭವತಿ' ಎಂಬ ಮತ್ತೊಂದು ಕ್ರಿಯಾಪದವನ್ನು ಹೇಳು-ವುದು. ಹೀಗೆ ಮಾಡಿದಾಗ ನೀಲವರ್ಣದ ಪದಾರ್ಥವು ಇದೆ, ಘಟವು ಇದೆ, ನೀಲ-ಪದಾರ್ಥವು ಆಗುತ್ತದೆ ಘಟವು ಆಗುತ್ತದೆ ಎಂಬುದಾಗಿ ಶಾಬ್ದಬೋಧವು ಬರುತ್ತದೆ. ಆದರೆ ವಕ್ತೃವಿಗೆ ವಿವಕ್ಷೆ ಇದ್ದಾಗ ನೀಲಾಭಿನ್ನಘಟಾಸ್ತಿತ್ವದ ಶಾಬ್ದಬೋಧವು ಬರುವುದಿಲ್ಲ.

## ಪ್ರಮಾಣಪದ್ಧತಿ ಹಾಗೂ ಪ್ರಮಾಣ ಬೇಕಾದಲ್ಲಿ ಆಸಕ್ತಿಯ ಲಕ್ಷಣ

**ತರ್ಕತಾಂಡವಮ್ – ಪದ್ಧತೌ ಪ್ರಮಾಣಲಕ್ಷಣಟೀಕಾಯಾಂ ಚ 'ಸನ್ನಿಧಿಃ ಅವಿಲಂಬೇನ ಉಚ್ಚರಿತತ್ವಮ್' ಇತ್ಯತ್ರ ಅವಿಲಂಬಶಬ್ದೇನ ಅಸ್ಮದುಕ್ತವ್ಯವಧಾನಾಭಾವಃ ಉಚ್ಚಾ-ರಣಶಬ್ದೇನ ಚ ವಕ್ತೃವ್ಯಾಪಾರಮಾತ್ರಂ ವಿವಕ್ಷಿತಮ್ ಇತಿ ಜ್ಞೇಯಮ್ ॥**

॥ ಇತ್ಯಾಸತ್ತಿನಿರೂಪಣಮ್ ॥

ಅನುವಾದ - ಪ್ರಮಾಣಪದ್ಧತಿ ಹಾಗೂ ಪ್ರಮಾಣಲಕ್ಷಣಟೀಕೆಯಲ್ಲಿ 'ಸನ್ನಿಧಿಃ ಅವಿಲಂಬೇನ ಉಚ್ಚರಿತತ್ವಂ' ಎಂದು ಹೇಳಿದ್ದಾರೆ. ಅಲ್ಲಿರುವ 'ಅವಿಲಂಬ' ಎಂಬ ಶಬ್ದದಿಂದ ನಾವು ಹೇಳಿದ ವ್ಯವ-

ಧಾನಾಭಾವವನ್ನು ಹಾಗೂ ಉಚ್ಚಾರಣ ಎಂಬ ಶಬ್ದದಿಂದ ವಕ್ತೃವ್ಯಾಪಾರವನ್ನು ವಿವಕ್ಷೆ ಮಾಡಿದ್ದಾರೆ ಎಂದು ತಿಳಿಯಬೇಕು.

ವಿವರಣೆ - ಎರಡೂ ಟೀಕೆಯಲ್ಲಿರುವ 'ಅವಿಲಂಬೇನ' ಎಂಬ ಶಬ್ದಕ್ಕೆ ನಿಷ್ಫಲವಾದ ಅನ್ವಯಬೋಧ- ವಿರೋಧಿಯಾದ ವ್ಯವಧಾನ ಇಲ್ಲದೇ ಇರುವಿಕೆ ಎಂದು ಅರ್ಥ.

## ತಾವು ಹೇಳಿದ್ದನ್ನು ಮೂಲಾರೂಢ ಮಾಡಿರುವರು

**ನ್ಯಾಯದೀಪ – ಉಕ್ತಲಕ್ಷಣಂ ಮೂಲಾರೂಢಂ ದರ್ಶಯತಿ – ಪದ್ಧತಾವಿತಿ ॥ ಅಸ್ಮದುಕ್ತೇತಿ ॥ 'ನಿಷ್ಫಲಸ್ಯ' ಇತ್ಯಾದಿನಾ ಅಸ್ಮದುಕ್ತಃ - ಇತ್ಯರ್ಥಃ । ವಕ್ತೃವ್ಯಾಪಾರ-ಮಾತ್ರಮಿತಿ ॥ 'ಲಿಪ್ಯುಚ್ಚಾರಣಾಭಿಪ್ರಾಯಸಾಧಾರಣಮ್' ಇತ್ಯರ್ಥಃ ॥**

॥ ಇತಿ ಆಸತ್ತಿನಿರೂಪಣಮ್ ॥

ಅನುವಾದ - ಹಿಂದೆ ಹೇಳಿದ ಲಕ್ಷಣವನ್ನು ಮೂಲಾರೂಢವಾಗಿ ತೋರಿಸುತ್ತಿದ್ದಾರೆ - 'ಪದ್ಧತೌ' ಎಂಬ ವಾಕ್ಯದಿಂದ. 'ನಿಷ್ಫಲಸ್ಯ' ಮುಂತಾದ ವಾಕ್ಯದಿಂದ ಹಿಂದೆ ಹೇಳಿದ ಅಭಿಪ್ರಾಯವನ್ನು 'ಉಕ್ತ' ಎಂಬ ಶಬ್ದದಿಂದ ವಿವಕ್ಷೆ ಮಾಡಬೇಕು. 'ವಕ್ತೃವ್ಯಾಪಾರಮಾತ್ರ' ಎಂದರೆ ಲಿಪಿ, ಉಚ್ಚಾರಣೆ, ಅಭಿಪ್ರಾಯಗಳಲ್ಲಿ ಸಾಧಾರಣವಾದ ವಕ್ತೃವ್ಯಾಪಾರ ಎಂದರ್ಥ.

* * * * * *

# ನೆನಪಿಡಿ

ಸನ್ನಿಧಾನ ಹಾಗೂ ಆಸತ್ತಿ ಇವೆರಡೂ ಸಹ ಪರ್ಯಾಯ ಪದಗಳು.

* 'ಅವ್ಯವಧಾನೇನ ಪದಾರ್ಥಸ್ಮೃತಿಃ' ಎಂಬುದು ಆಸತ್ತಿಯ ಲಕ್ಷಣ ಅಲ್ಲ.

* 'ಸಂಕೇತ' ಎಂದರೆ ಈ ಶಬ್ದಕ್ಕೆ ಇದು ಅರ್ಥ ಎಂಬ ಈಶ್ವರನ ಇಚ್ಛೆ.

* ಆಸತ್ತಿಯ ಲಕ್ಷಣವು 'ಪದೋಪಸ್ಥಿತ್ಯನುಕೂಲವಕ್ತ್ಯ-ವ್ಯಾಪಾರೇ ನಿಷ್ಫಲಸ್ಯ ಅನ್ವಯಬೋಧವಿರೋಧಿವ್ಯವಧಾನಸ್ಯಾ-ಭಾವಃ' ಎಂಬುದಾಗಿ.

* ಮೌನ ಮಾಡುವ ವ್ಯಕ್ತಿ ಬರೆಯುವ ಶ್ಲೋಕದಲ್ಲಿ ಹಾಗೂ ಏಡಮೂಕನಿಗೆ ಬರುವ ಶಾಬ್ದಬೋಧದಲ್ಲಿ ಆಸತ್ತಿಯನ್ನು ಉಪಪಾದನೆ ಮಾಡುವುದಕ್ಕೋಸ್ಕರ ವಕ್ತೃವ್ಯಾಪಾರ ಎಂದರೆ ಲಿಪಿ, ಉಚ್ಚಾರಣೆ, ತಾತ್ಪರ್ಯ ಎಂದು ಅರ್ಥೈಸಲಾಗಿದೆ.

* ವಾಕ್ಯದಿಂದ ಅನ್ವಯಬೋಧ ಬರಲು ಕೇವಲ ಆಸತ್ತಿಯು ಮಾತ್ರ ಕಾರಣವಲ್ಲ. ಆಕಾಂಕ್ಷಾ, ಯೋಗ್ಯತೆಗಳೂ ಸಹ ಆವಾಕ್ಯದಲ್ಲಿ ಇರಬೇಕು.

* ಕೇವಲ ವಿರೋಧ್ಯುಪಸ್ಥಿತಿ ಇಲ್ಲದೇ ಇರುವ ಎಲ್ಲಾ ಸ್ಥಳದಲ್ಲಿಯೂ ಅನ್ವಯಬೋಧ ಬರುವುದಿಲ್ಲ.

* ಫಲರಹಿತವಾದ ವ್ಯವಧಾನ ಇರುವ ಸ್ಥಳಗಳಲ್ಲಿ ಆಸತ್ತಿಯು ಇರುವುದಿಲ್ಲ.

* ಆಪ್ತತ್ವನಿಶ್ಚಾಯಕಪ್ರಮಾಣಗಳಲ್ಲಿ ಅವಿಪ್ರಲಿಪ್ಸಾದಿಗಳೂ ಸೇರಿವೆ. ವ್ಯವಹಿತವಾಗಿ ಪ್ರತಿವಾದಿಯು ಉಚ್ಚಾರಣೆ ಮಾಡಿದಾಗ ಆ ವಾಕ್ಯದಲ್ಲಿ ಸಂದೇಹ ಬರುತ್ತದೆ. ಪ್ರತಿವಾದಿಯಲ್ಲಿ ಆಪ್ತಿನಿಶ್ಚಯವಿಲ್ಲದೇ ಇರುವುದರಿಂದ ವ್ಯವಹಿತವಾಗಿ ಉಚ್ಚರಿತವಾದ ಶಬ್ದಗಳ ಅಭಿಪ್ರಾಯಕಲ್ಪನೆಗೆ ಅವಕಾಶ ಇಲ್ಲ. ಆದ್ದರಿಂದ ಆಭಿಪ್ರಾಯಕವಾದ ವ್ಯವಧಾನಾಭಾವವನ್ನು ಉಪಪಾದನೆ ಮಾಡಲು ಸಾಧ್ಯವಿಲ್ಲ.

* ಮಾತನಾಡುವ ವ್ಯಕ್ತಿಯು ಆಪ್ತನಾಗಿದ್ದರೆ ಅವನ ವಾಕ್ಯದಲ್ಲಿ ವ್ಯವಧಾನ ಇದ್ದರೂ ಅಭಿಪ್ರಾಯ, ತಾತ್ಪರ್ಯಾದಿಗಳನ್ನು ಕಲ್ಪನೆ ಮಾಡಿ ಆಕಾಂಕ್ಷೆಯನ್ನು ಹೇಳಿ ಆಸತ್ತಿಯನ್ನು ಹೇಳುತ್ತೇವೆ.

* ಮಾತನಾಡುವ ವ್ಯಕ್ತಿ ಅನಾಪ್ತನಾಗಿದ್ದರೆ ಅವನ ವಾಕ್ಯದಲ್ಲಿ ಅಭಿಪ್ರಾಯವನ್ನು ಕಲ್ಪನೆ ಮಾಡುವುದಿಲ್ಲವಾದ್ದರಿಂದ ಆಕಾಂಕ್ಷಾದಿಗಳು ಇಲ್ಲದೇ ಆಸತ್ತಿಯೂ ಸಹ ಇರುವುದಿಲ್ಲ.

* ಆಪ್ತೋಚ್ಚರಿತವಾಕ್ಯಗಳಲ್ಲಿ ಯಥಾಕಥಂಚಿತ್ ಆಸತ್ತಿಯನ್ನು ಉಪಪಾದನೆ ಮಾಡಲು ಬರುತ್ತದೆ.

* ಜ್ಞಾತವಾದ ಆಸತ್ತಿಯೇ ಶಾಬ್ದಬೋಧಕ್ಕೆ ಕಾರಣ

* 'ಅಸ್ತಿ' ಎಂಬ ಶಬ್ದದ ಅಧ್ಯಾಹಾರದ ಸಂದೇಹ ಬಂದರೆ 'ನೀಲಃ ಅಸ್ತಿ' ನೀಲವರ್ಣದ ಪದಾರ್ಥ ಇದೆ, 'ಘಟಃ ಅಸ್ತಿ' ಘಟವು ಇದೆ ಎಂದು ಶಾಬ್ದಬೋಧವೂ ಬರಬಹುದು.

* ಅಥವಾ ಪದಾಂತರವ್ಯವಧಾನ ಇದೆಯೋ ಇಲ್ಲವೋ? ಎಂಬ ಸಂದೇಹದಿಂದ ಶಾಬ್ದಬೋಧವು ಬರುವುದಿಲ್ಲ. ನೀಲಪದಕ್ಕೂ ಅಸ್ತಿ ಎಂಬ ಪದಕ್ಕೂ ಮಧ್ಯದಲ್ಲಿ ಘಟಪದದ ವ್ಯವಧಾನ ಇದೆಯೋ ಇಲ್ಲವೋ? ಎಂದು ವ್ಯವಧಾನದ ಸಂದೇಹ ಬರುತ್ತದೆ. ಇದರಿಂದ ಆಸತ್ತಿಯ ಸಂದೇಹ ಬಂದು ವಾಕ್ಯಾರ್ಥಬೋಧ ಆಗುವುದಿಲ್ಲ ಎಂದಭಿಪ್ರಾಯ.

* ಆಸತ್ತಿಸಂದೇಹದಿಂದ ಶಾಬ್ದಬೋಧಸಂದೇಹವು ಬರುತ್ತದೆ.

* ಆಸತ್ತಿಭ್ರಮದಿಂದ ಶಾಬ್ದಬೋಧಭ್ರಮ ಬರುತ್ತದೆ.

* ಆಸತ್ತಿಜ್ಞಾನದಿಂದ ಶಾಬ್ದಬೋಧ ಬರುತ್ತದೆ.

* ಆಸತ್ತಿ ಇಲ್ಲದಿದ್ದರೂ ಆಸತ್ತಿಭ್ರಮದಿಂದ ಶಾಬ್ದಭ್ರಮ ಬರುತ್ತದೆ.

* ಆಸತ್ತಿ ಇದ್ದ ಸ್ಥಳದಲ್ಲೂ ಕ್ರಿಯಾಪದಾದಿಗಳ ಅಧ್ಯಾಹಾರ ಸಂದೇಹದಿಂದ ಶಾಬ್ದಬೋಧ ಬರುವುದಿಲ್ಲ.

* ಸ್ವರೂಪಸತ್ತಾದ ಆಸತ್ತಿಯು ಶಾಬ್ದಬೋಧಕ್ಕೆ ಕಾರಣ-ವಲ್ಲ.

* ಪ್ರತ್ಯಕ್ಷ, ಅನುಮಾನ, ಆಗಮಗಳ, ದೋಷ ವಿಷಯದಲ್ಲಿ ವ್ಯತ್ಯಾಸವಿದೆ. ಪ್ರತ್ಯಕ್ಷದಲ್ಲಿ ದೋಷಗಳು ಇದ್ದರೆ ಸಾಕು ಅವು ಪ್ರಮಾಕ್ಕೆ ಪ್ರತಿಬಂಧಕವಾಗುತ್ತವೆ.

* ಉಚ್ಚಾರಣೆಯಲ್ಲಿಯೂ ವ್ಯವಧಾನ ಇದ್ದು ತಾತ್ಪರ್ಯ-ದಲ್ಲೂ ವ್ಯವಧಾನ ಇರುವ ಸ್ಥಳದಲ್ಲಿ ಆಸತ್ತಿ ಇರುವುದಿಲ್ಲ.

* ಉಚ್ಚಾರಣೆಯಲ್ಲಿ ವ್ಯವಧಾನವಿದ್ದರೂ ತಾತ್ಪರ್ಯದಲ್ಲಿ ವ್ಯವಧಾನ ಇಲ್ಲದಿದ್ದರೆ ಆಸತ್ತಿ ಇರುತ್ತದೆ.

* ವ್ಯವಧಾನಕ್ಕೆ ಫಲವು ಇರುವ ಸ್ಥಳದಲ್ಲೂ ಆಸತ್ತಿ ಇರುತ್ತದೆ. ವಾದಿವಾಕ್ಯದಲ್ಲಿ ಉಚ್ಚಾರಣೆಯಲ್ಲಿ ವ್ಯವಧಾನ ಇದ್ದರೆ ಅಂತಹ ಸ್ಥಳದಲ್ಲಿ ಅಭಿಪ್ರಾಯಾವ್ಯವಧಾನವನ್ನು ಹೇಳಿ ಆಸತ್ತಿ-ಯನ್ನು ಹೇಳುವುದಿಲ್ಲ.

* ಆಪ್ತವಾಕ್ಯದಲ್ಲಿ ಉಚ್ಚಾರಣವ್ಯವಧಾನವಿದ್ದರೂ ಅಭಿಪ್ರಾಯವ್ಯವಧಾನವಿಲ್ಲವಾದ್ದರಿಂದ ಅಲ್ಲಿ ಆಸತ್ತಿಯು ಇರುತ್ತದೆ.

* ಲಿಪಿ ಮತ್ತು ಉಚ್ಚಾರಣೆಗಳಲ್ಲಿ ವ್ಯವಧಾನವು ಪ್ರತ್ಯಕ್ಷಸಿದ್ಧವಾಗಿದೆ. ಅಭಿಪ್ರಾಯದಲ್ಲಿ ವ್ಯವಧಾನ ಮತ್ತು ಅವ್ಯವಧಾನಗಳು ಕಾಲ್ಪನಿಕವಾಗಿದೆ.

* ಅನುಮಾನ ಮತ್ತು ಆಗಮಗಳಲ್ಲಿ ದೋಷವು ಸತ್ ಆದರೆ ಮಾತ್ರ ಸಾಲದು, ಅವು ಜ್ಞಾತವೂ ಆಗಬೇಕು. ಜ್ಞಾತವಾದ ದೋಷಗಳು ಅನುಮಿತ್ಯಾದಿಗಳಿಗೆ ಪ್ರತಿಬಂಧಕವಾಗಿ ಪ್ರಮಾಕ್ಕೆ ಪ್ರತಿಬಂಧಕವಾಗುತ್ತವೆ.

* ವೇದಮಂತ್ರಗಳಲ್ಲಿ ಉಚ್ಚಾರಣರೂಪ ವ್ಯಾಪಾರದ ವ್ಯವಧಾನ ಇದೆ. ಆದರೆ ಈಶ್ವರಾಭಿಪ್ರಾಯದಲ್ಲಿ ವ್ಯವಧಾನವು ಇಲ್ಲ. ಆದ್ದರಿಂದ ವೇದಮಂತ್ರಗಳಲ್ಲಿ ಆಸತ್ತಿಯನ್ನು ಸಿದ್ಧಾಂತದಂತೆ ಉಪಪಾದನೆ ಮಾಡಲು ಬರುತ್ತದೆ. ವೇದಮಂತ್ರಗಳಲ್ಲಿ ಪೂರ್ವಪಕ್ಷಕಾರರ ಮತದಂತೆ ಪದಾವ್ಯವಧಾನಾದಿಗಳನ್ನು ಹೇಳಲು ಬರುವುದಿಲ್ಲ.

* * * * *

।। श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः ।।

# ಯೋಗ್ಯತಾಪ್ರಕರಣ

## ಸಾರಾಮೃತ

ಇಲ್ಲಿಯ ತನಕ ಆಕಾಂಕ್ಷಾ ಸನ್ನಿಧಿಗಳ ವಿಚಾರ ತಿಳಿದಿದ್ದಾಯಿತು. ಪ್ರಕೃತ 'ಯೋಗ್ಯತೆ' ಎಂದರೆನು? ಎಂಬುದನ್ನು ತಿಳಿಯೋಣ. ಒಂದು ಶಬ್ದದಿಂದ ಅರ್ಥಜ್ಞಾನವು ಬರಬೇಕಾದರೆ ಆ ಶಬ್ದಕ್ಕೆ ಅರ್ಥವನ್ನು ಹೇಳುವ ಸಾಮರ್ಥ್ಯ ಇರಬೇಕು. ಉದಾಹರಣೆ - 'ಜಲೇನ ಸಿಂಚತಿ' ಎಂಬ ವಾಕ್ಯವಿದೆ. ನೀರಿಗೂ ಸೇಚನಕರ್ಮಕ್ಕೂ ಪ್ರತ್ಯೇಕವಾದ ಸಾಮರ್ಥ್ಯವಿದೆ. ಇಲ್ಲಿ ನೀರು ಹಾಗೂ ಸೇಚನಕರ್ಮ ಇವುಗಳು ಪರಸ್ಪರ ಯೋಗ್ಯವಾದ ಅರ್ಥವನ್ನು ಹೊಂದಿದ ಶಬ್ದಗಳಾಗಿವೆ. ಆದ್ದರಿಂದ ಈ ಸ್ಥಳದಲ್ಲಿ ಇರುವ ಶಬ್ದಗಳಿಗೆ ಯೋಗ್ಯತಾ ಇದೆ ಎಂದು ಹೇಳುತ್ತೇವೆ. ಆದರೆ 'ಅಗ್ನಿನಾ ಸಿಂಚತಿ' ಎಂಬ ವಾಕ್ಯಕ್ಕೆ ಯೋಗ್ಯತೆಯನ್ನು ಹೇಳುವುದಿಲ್ಲ. ಅಗ್ನಿ ಶಬ್ದಕ್ಕೂ ಸೇಚನ ಶಬ್ದಕ್ಕೂ ಪ್ರತ್ಯೇಕವಾದ ಸಾಮರ್ಥ್ಯವು ಬೇರೆ ಸ್ಥಳಗಳಲ್ಲಿ ಇದ್ದರೂ ಸಹ ಅಗ್ನಿಕರ್ಮಕವಾದ ಸೇಚನ ಎಲ್ಲೂ ಕಂಡಿಲ್ಲ. ಆದ್ದರಿಂದ ಈ ವಾಕ್ಯದಲ್ಲಿ ಯೋಗ್ಯತೆ ಇಲ್ಲ ಎಂಬುದಾಗಿ ಲೋಕದಲ್ಲಿ ವ್ಯವಹಾರ ಮಾಡುತ್ತಾರೆ. ಈ ಸ್ಥಳಗಳಲ್ಲಿರುವ ಶಬ್ದಗಳ ಸಾಮರ್ಥ್ಯವು ಏನು ಎಂಬುದರ ವಿವರಣೆಯನ್ನೇ ಈ ಯೋಗ್ಯತಾಪ್ರಕರಣದಲ್ಲಿ ಮಾಡಲಾಗಿದೆ.

ಸಜಾತೀಯವಾದ ಪದಾರ್ಥದಲ್ಲಿ ಅನ್ವಯವು ಇದ್ದರೆ ಅದನ್ನು ಯೋಗ್ಯತಾಶಬ್ದದಿಂದ ಕರೆಯಬೇಕು ಎಂಬುದು ಕೆಲವರ ಮತ. ಉದಾಹರಣೆ - ಜಲ ಮತ್ತು ಸೇಚನಗಳಿಗೆ ಸಜಾತೀಯವಾದ ಜಲಾಂತರದಲ್ಲಿ ಸೇಚನಯೋಗ್ಯತೆಯು ಕಂಡಿದೆ. ಆದ್ದರಿಂದ ಆಪ್ತನು ಪ್ರಯೋಗ ಮಾಡುವ 'ಜಲೇನ ಸಿಂಚತಿ' ಎಂಬ ವಾಕ್ಯವು ಪ್ರಮಾಣವಾಗುತ್ತದೆ. ಆದರೆ ಕೇವಲ ಸಜಾತೀಯವಾದ ಪದಾರ್ಥದಲ್ಲಿ ಅನ್ವಯವು ದೃಷ್ಟವಾದ ಮಾತ್ರದಿಂದ ಆ ವಾಕ್ಯಗಳಲ್ಲಿ ಯೋಗ್ಯತೆಯನ್ನು ಹೇಳಬಾರದು. ವಾಸ್ತವಿಕವಾಗಿ ಅನಾಪ್ತನು ಹೇಳುವ ವಾಕ್ಯದಲ್ಲಿ ಪ್ರಾಮಾಣ್ಯವು ಇರುವುದಿಲ್ಲ. ಆದರೆ ಅವನು ಮಾಡುವ ಪ್ರಯೋಗದಲ್ಲಿರುವ ಶಬ್ದಗಳಿಗೆ ಬೇರೆ ಸಜಾತೀಯವಾದ ವಾಕ್ಯದಲ್ಲಿ ಅನ್ವಯವು ಕಂಡುಬರುತ್ತದೆ. ಅನಾಪ್ತನು ರಾತ್ರಿಕಾಲದಲ್ಲಿ 'ಪಯಸಾ ಸಿಂಚತಿ' ಎಂದು ಪ್ರಯೋಗ ಮಾಡುತ್ತಾನೆ. ರಾತ್ರಿಕಾಲದಲ್ಲಿ ಯಾರೂ ಸಹ ಮನೆಯ ಮುಂದೆ ನೀರನ್ನು ಹಾಕುವುದಿಲ್ಲ. ಆದರೆ ಈ ವಾಕ್ಯದಲ್ಲಿರುವ ಶಬ್ದಗಳಿಗೆ ಅನ್ವಯವಂತೂ ಬೇರೆ ಕಡೆ ಕಂಡುಬರುತ್ತದೆ. ಹೀಗಾಗಿ ಇಂತಹ ಅನಾಪ್ತವಾಕ್ಯದಲ್ಲಿ ಯೋಗ್ಯತಾಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆ.

ಮತ್ತು ಸಜಾತೀಯವಾದ ಅನ್ವಯ ಎಂದರೆ ಅದನ್ನು ಯಥಾಕಥಚಿಂತ್ ಸಾಜಾತ್ಯವನ್ನು ಅಥವಾ ಪದಾರ್ಥತಾ-ವಚ್ಛೇದಕಧರ್ಮದಿಂದ ಸಾಜಾತ್ಯವನ್ನು ಅಥವಾ ತಾತ್ಪರ್ಯವಿಷಯೀಭೂತವಾದ ಅನ್ವಯಪ್ರತಿಯೋಗಿತಾ-ವಚ್ಛೇದಕಧರ್ಮದಿಂದ ಸಾಜಾತ್ಯವನ್ನು ಹೇಳಬೇಕು. ಯಾವುದೋ ಒಂದು ರೀತಿಯಾಗಿ ಸಜಾತೀಯವಾದ ಪದಾರ್ಥದಲ್ಲಿ ವಾಕ್ಯದಲ್ಲಿರುವ ಶಬ್ದಗಳಿಗೆ ಅನ್ವಯ ಕಂಡರೆ ಸಾಕು ಎಂದಲ್ಲಿ ಅಗ್ನಿ ಮತ್ತು ನೀರುಗಳಿಗೆ ಪದಾರ್ಥತ್ವೇನ ಅಥವಾ ದ್ರವ್ಯತ್ವೇನ ಸಾಜಾತ್ಯವಿದೆ. ಆದ್ದರಿಂದ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವೂ ಸಹ ಯೋಗ್ಯತಾ ಇರುವ ವಾಕ್ಯ ಎಂದಾಗಬೇಕಾಗುವುದು. ಇನ್ನು ಧರ್ಮದ ಮುಖಾಂತರ ಸಾಜಾತ್ಯವನ್ನು ಹೇಳಬೇಕು. ಇದು ಎರಡು ವಿಧ - 1. ಪದಾರ್ಥತಾವಚ್ಛೇದಕಧರ್ಮ. 2. ತಾತ್ಪರ್ಯವಿಷಯೀಭೂತ ಅನ್ವಯಪ್ರತಿಯೋಗಿತಾವಚ್ಛೇದಕಧರ್ಮ ಎಂದು.

ಇವುಗಳಲ್ಲಿ ಜಲರೂಪವಾದ ಪದಾರ್ಥಕ್ಕೆ ಪದಾರ್ಥತಾವಚ್ಛೇದಕಧರ್ಮ ಜಲತ್ವ, ಜಲತ್ವರೂಪದಿಂದ ಸಜಾತೀಯವಾದದ್ದು ಮತ್ತೊಂದು ಜಲ. ಅದರಲ್ಲಿ ಸೇಚನಕರ್ಮತ್ವವು ಕಂಡಿದೆ. ಆದರೆ ಅಗ್ನಿಗೆ ಸಜಾತೀಯ-ವಾದ ಪದಾರ್ಥತಾವಚ್ಛೇದಕಧರ್ಮ ಅಗ್ನಿತ್ವ ಅಗ್ನಿತ್ವ ರೂಪದಿಂದ ಸಜಾತೀಯವಾದ ಮತ್ತೊಂದು ಅಗ್ನಿಯಲ್ಲಿ ಸೇಚನ ರೂಪವಾದ ಕರ್ಮಕ್ಕೆ ಅನ್ವಯವು ಇಲ್ಲ. ಆದ್ದರಿಂದ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವು ಯೋಗ್ಯವಾದ ವಾಕ್ಯವಲ್ಲ.

ಆದರೆ 'ಗಂಗಾಯಾಂ ಘೋಷಃ' ಎಂಬಲ್ಲಿ ಈ ಲಕ್ಷಣವನ್ನು ಉಪಪಾದನೆ ಮಾಡಲು ಬರುವುದಿಲ್ಲ. ಇಲ್ಲಿ ಪದಾರ್ಥತಾವಚ್ಛೇದಕಧರ್ಮ ಎಂದರೆ ಪ್ರವಾಹತ್ವ ಈ ಪ್ರವಾಹತ್ವರೂಪದಿಂದ ಸಜಾತೀಯವಾದದ್ದು ಬೇರೆ ಪ್ರವಾಹಗಳು. ಗೋದಾವರಿಪ್ರವಾಹ, ಕಾವೇರಿಪ್ರವಾಹ ಮುಂತಾದವುಗಳು. ಇವುಗಳಲ್ಲಿ ಘೋಷಾನ್ವಯವು ಇಲ್ಲ. ಆದ್ದರಿಂದ ಈ ಪಕ್ಷವನ್ನು ಅಂಗೀಕಾರ ಮಾಡದೆ ಎರಡನೆಯ ಪಕ್ಷವನ್ನು ಹೇಳಿದ್ದಾರೆ. ತಾತ್ಪರ್ಯ-ವಿಷಯೀಭೂತವಾದ ವಕ್ತೃವಿನ ತಾತ್ಪರ್ಯಕ್ಕೆ ವಿಷಯವಾದದ್ದು ಕ್ರಿಯಾಕರಣಗಳ ಅನ್ವಯ. ಇದರಲ್ಲಿ ಪ್ರತಿಯೋಗಿತಾವಚ್ಛೇದಕವಾದ ಧರ್ಮ ಕ್ರಿಯಾಕರಣತ್ವ. ಇದು ಜಲ ಮತ್ತು ಸೇಚನಕ್ರಿಯೆಗಳ ಬೇರೆ ಕಡೆ ಕಂಡಿದೆ. ಆದ್ದರಿಂದ ಏತಾದೃಶವಾದ ಸಾಜಾತ್ಯವನ್ನು ಹೇಳಿ ಲಕ್ಷಣವನ್ನು ಉಪಪಾದನೆ ಮಾಡಿದ್ದಾರೆ.

ಆದರೆ ಈ ಲಕ್ಷಣವು ಸರಿಯಲ್ಲ. 'ಇವತ್ತು ಹುಟ್ಟಿದ ಮಗುವು ಹಾಲನ್ನು ಕುಡಿಯುತ್ತದೆ' ಎಂದು ಹೇಳಿದಾಗ ಈ ವಾಕ್ಯದಲ್ಲಿ ಯೋಗ್ಯತೆಯನ್ನು ಉಪಪಾದನೆ ಮಾಡಲು ಬರುವುದಿಲ್ಲ. ಲಾಕ್ಷಣಿಕಪ್ರಯೋಗಗಳಲ್ಲಿ ಲಕ್ಷಣವನ್ನು ಉಪಪಾದನೆ ಮಾಡಲು ಬಂದರೂ ಅವ್ಯವಸ್ಥಿತವಾದ ಪದಗಳಿರುವ ಸ್ಥಳಗಳಲ್ಲಿ ಯೋಗ್ಯತಾಲಕ್ಷಣಕ್ಕೆ ಅವ್ಯಾಪ್ತಿ ಬರುತ್ತದೆ. ಇವತ್ತು, ನಾಳೆ, ನಿನ್ನೆ ಮುಂತಾದ ಶಬ್ದಗಳು ಅವ್ಯವಸ್ಥಿತವಾದ ಶಬ್ದಗಳು.

ಅಭಿಪ್ರಾಯ ಹೀಗಿದೆ - 'ಇವತ್ತು ಇದ್ದಾನೆ' ಎಂದು ಹೇಳಿದಾಗ ಈ ವಾಕ್ಯಕ್ಕೆ ಸಜಾತೀಯವಾದ ಮತ್ತೊಂದು ವಾಕ್ಯವನ್ನು ಹೇಳಲು ಬರುವುದಿಲ್ಲ. ಇವತ್ತು ಇರುವವನು ಕಾಣಬೇಕಾದರೆ ಅದು ಇವತ್ತೇ ಆಗಬೇಕು. ನಿನ್ನೆ

ಕಂಡವನು ಇವತ್ತು ಕಂಡವನು ಅಲ್ಲ. ಲಕ್ಷಣವನ್ನು ಹೇಳುವಾಗ ಹಿಂದೆ ಕಂಡಿರುವ ಶಬ್ದಗಳ ಅನ್ವಯವನ್ನು ಈ ವಾಕ್ಯದಲ್ಲಿ ಹೇಳುವುದು ಎಂದು ಅಭಿಪ್ರಾಯ ಬರುತ್ತಿದೆ. ಇವತ್ತಿನ ವ್ಯಕ್ತಿಯನ್ನು ನಿನ್ನೆ ಕಾಣಲು ಸಾಧ್ಯವಿಲ್ಲ. ಆದ್ದರಿಂದ ವಾಸ್ತವಿಕವಾಗಿ ಯೋಗ್ಯತಾ ಇರುವ 'ಅದ್ಯ ಜಾತಃ ಪಯಃ ಪಿಬತಿ' ಎಂಬಲ್ಲಿ ಯೋಗ್ಯತಾವನ್ನು ಉಪಪಾದನೆ ಮಾಡಲು ಸಾಧ್ಯವಾಗುವುದಿಲ್ಲ.

'ಬಾಲಃ ಪಯಃ ಪಿಬತಿ' ಮುಂತಾದ ವಾಕ್ಯವನ್ನು ಹೇಳಿದಾಗ ಕಾಲವಾಚಕವಾದ ಶಬ್ದಗಳನ್ನು ಹೇಳದಿರುವ ಸ್ಥಳಗಳಲ್ಲಿ ಯೋಗ್ಯತಾವನ್ನು ಕೂಡಿಸಲು ಬರುತ್ತದೆ. ಆದರೆ ಅದ್ಯ ಮುಂತಾದ ಕಾಲವಾಚಕ ಶಬ್ದಗಳಿದ್ದಾಗ ಯೋಗ್ಯತಾ ಬರುವುದಿಲ್ಲ. ಅದ್ಯಜಾತತ್ವವು ಹಾಗೂ ಪೂರ್ವದೃಷ್ಟತ್ವ ಎರಡೂ ಸಹ ವ್ಯಾಹತವಾಗಿವೆ.

'ಏಕಪದಾರ್ಥೇ ಅಪರಪದಾರ್ಥನಿಷ್ಠಅತ್ಯಂತಭಾವಪ್ರತಿಯೋಗಿತ್ವಪ್ರಮಾವಿಶೇಷತ್ವಾಭಾವಃ ಎಂಬುದು ಲಕ್ಷಣ. ಇದು 'ಜಲೇನ ಸಿಂಚತಿ' ಎಂಬಲ್ಲಿ ಸಮನ್ವಯ ಆಗಬೇಕು. 'ಅಗ್ನಿನಾ ಸಿಂಚತಿ' ಎಂಬಲ್ಲಿ ಸಮನ್ವಯ ಆಗಬಾರದು.

ಒಂದು ಪದಾರ್ಥದಲ್ಲಿ ಮತ್ತೊಂದು ಪದಾರ್ಥದ ಸಂಸರ್ಗ ಇರುವ ಪ್ರಮಾ ಇರಬಾರದು. 'ಏಕಪದಾರ್ಥ' ಎಂದರೆ ಜಲ. ಅಪರಪದಾರ್ಥ ಎಂದರೆ ಸೇಚನ. ಜಲದಲ್ಲಿ ಸೇಚನಸಂಸರ್ಗ ಇದೆ. ಸೇಚನಸಂಸರ್ಗದ ಅತ್ಯಂತಾಭಾವವು ಇಲ್ಲ. ಅಥವಾ ಏಕಪದಾರ್ಥ ಎಂದರೆ ಸೇಚನ. ಇದರ ಅತ್ಯಂತಾಭಾವವು ಅಥವಾ ಸಂಸರ್ಗದ ಅತ್ಯಂತಾಭಾವವು ಜಲದಲ್ಲಿ ಇಲ್ಲ. ಜಲಕ್ಕೂ ಸೇಚನಕ್ಕೂ ಸಂಬಂಧವೂ ಇದೆ. ಸೇಚನಕ್ಕೆ ಜಲನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವ ಇಲ್ಲ. ಆದ್ದರಿಂದ 'ಜಲಂ ಸೇಚನನಿಷ್ಠ ಅತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನ ಅಥವಾ 'ಸೇಚನಂ ಜಲನಿಷ್ಠ-ಅತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನವು ಪ್ರಮಾತ್ಮಕಜ್ಞಾನ ಅಲ್ಲ. 'ಭ್ರಮಾತ್ಮಕವಾದ ಅಯಥಾರ್ಥವಾದ ಜ್ಞಾನ. ಆದರೆ 'ಅಗ್ನಿನಿಷ್ಠಸೇಚನಂ ಅತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನವು ಪ್ರಮಾರೂಪವಾಗಿದೆ. 'ಸೇಚನಸಂಸರ್ಗಃ ಜಲನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನದಲ್ಲಿ 'ಸೇಚನಸಂಸರ್ಗಃ' ಎಂಬುದು ವಿಶೇಷ್ಯ. 'ಜಲನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವವು ಪ್ರಕಾರ. ಆದ್ದರಿಂದ ಸೇಚನಸಂಸರ್ಗವು ಈ ಜ್ಞಾನದಲ್ಲಿ ವಿಶೇಷ್ಯವಾಗಿದೆ. ವಿಶೇಷ್ಯತ್ವಾಭಾವವು ಸೇಚನಸಂಸರ್ಗದಲ್ಲಿ ಇಲ್ಲ. ಆದ್ದರಿಂದ ಲಕ್ಷಣಸಮನ್ವಯವು ಆಗುತ್ತದೆ.

'ಅಗ್ನಿನಾ ಸಿಂಚತಿ' ಎಂಬಲ್ಲಿ ಈ ಲಕ್ಷಣಸಮನ್ವಯವು ಆಗುವುದಿಲ್ಲ. ಏಕಪದಾರ್ಥ ಎಂದರೆ ಅಗ್ನಿ. ಅಪರಪದಾರ್ಥ ಎಂದರೆ ಸೇಚನಸಂಸರ್ಗ, ಅದರಲ್ಲಿರುವ ಅತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವವು ಅಗ್ನಿಯಲ್ಲಿ ಇದೆ. ಅಗ್ನಿಗೂ ಸೇಚನಕ್ಕೂ ಸಂಸರ್ಗವು ಎಲ್ಲಿಯೂ ಪ್ರಸಿದ್ಧವಾಗಿಲ್ಲ. ಆದ್ದರಿಂದ ಅಪರಪದಾರ್ಥ ಎಂದರೆ ಸೇಚನರೂಪ ಪದಾರ್ಥ. ಅದರಲ್ಲಿರುವ ಅತ್ಯಂತಾಭಾವ ಎಂದರೆ ಸೇಚನಸಂಸರ್ಗದ ಅತ್ಯಂತಾಭಾವ.

ಇದಕ್ಕೆ ಅಗ್ನಿಯೂ ಪ್ರತಿಯೋಗಿಯಾಗಿದೆ. ಅಗ್ನಿಗೂ ಸೇಚನಕ್ಕೂ ಸಂಸರ್ಗವು ಅಪ್ರಸಿದ್ಧವಾದ್ದರಿಂದ ಅಪರ-ಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವ ಪ್ರಮಾವಿಶೇಷ್ಯತ್ವಾಭಾವವು ಈ ವಾಕ್ಯದಲ್ಲಿ ಇಲ್ಲ. ಪ್ರಮಾ-ವಿಶೇಷ್ಯತ್ವವೇ ಇದೆ. ಆದ್ದರಿಂದ ಯೋಗ್ಯತಾ ಇಲ್ಲ. 'ಸೇಚನಸಂಸರ್ಗಃ ಅಗ್ನಿನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನ. ಈ ಜ್ಞಾನವು ಪ್ರಮಾ. ಇಲ್ಲಿ ಸೇಚನಸಂಸರ್ಗವು ವಿಶೇಷ್ಯವಾಗಿದೆ. ಆದ್ದರಿಂದ ಯೋಗ್ಯತಾ ಇಲ್ಲ ಎಂದರ್ಥ.

'ಏಕ' ಮತ್ತು 'ಅಪರ' ಎಂಬುದು ಪದದಲ್ಲಿ ವಿಶೇಷಣವೋ ? ಅಥವಾ ಪದಾರ್ಥದಲ್ಲಿ ವಿಶೇಷಣವೋ ? ಪದಾರ್ಥದಲ್ಲಿ ವಿಶೇಷಣವಾಗುವುದಾದರೆ 'ಪ್ರಮೇಯತ್ವೇ ಪ್ರಮೇಯತ್ವಮ್' ಎಂಬ ಸ್ಥಳದಲ್ಲಿ ಅವ್ಯಾಪ್ತಿ-ದೋಷವು ಪ್ರಾಪ್ತವಾಗುತ್ತದೆ. ಪದದಲ್ಲಿ ವಿಶೇಷಣವೆನ್ನುವುದಾದರೆ ಒಂದೇ ಪದದಲ್ಲಿ ಪ್ರಕೃತ್ಯರ್ಥದಲ್ಲಿ ಪ್ರತ್ಯಯಾರ್ಥದಿಂದ ಅನ್ವಯವನ್ನು ಹೇಳಲು ಸಾಧ್ಯವಾಗದೆ ಇರಬೇಕಾದೀತು. ಏಕೆಂದರೆ ಇಲ್ಲಿ ಒಂದೇ ಪದವಿರುವುದರಿಂದ ಒಂದು ಪದಕ್ಕೆ ಇನ್ನೊಂದು ಪದದ ಅರ್ಥವನ್ನು ಹೇಳಲು ಸಾಧ್ಯವಾಗುವುದಿಲ್ಲ.

ಪ್ರಕೃತಿ ಹಾಗೂ ಪ್ರತ್ಯಯಗಳು ಬೇರೆ ಬೇರೆ ಶಬ್ದ ಆಗಿರುವುದರಿಂದ ದೋಷವಿಲ್ಲ ಎನ್ನುವುದಾದರೆ ಒಂದೇ ಆಖ್ಯಾತಕ್ಕೆ ಕೃತಿ ಹಾಗೂ ವರ್ತಮಾನತ್ವ ಎಂಬ ಎರಡು ಅರ್ಥಗಳು ಇರುವ ಸ್ಥಳದಲ್ಲಿ ಯೋಗ್ಯತೆಯ ಲಕ್ಷಣವು ಬರುವುದಿಲ್ಲ. ಏಕೆಂದರೆ ಕೃತಿ ಹಾಗೂ ವರ್ತಮಾನತ್ವಗಳೆರಡು ಒಂದೇ ಶಬ್ದದ ಅರ್ಥ ಆಗಿರುವುದರಿಂದ ಏಕಶಬ್ದದ ಅರ್ಥದಲ್ಲಿ ಮತ್ತೊಂದು ಶಬ್ದದ ಅರ್ಥದ ಸಂಸರ್ಗವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ಯೋಗ್ಯತೆಯು ಇಲ್ಲದೆ ಇರಬೇಕಾದೀತು. ಇಲ್ಲಿಯೂ ಕೂಡ ಲಿಙ್ತ್ವ ಲಙ್ತ್ವ ಎಂಬ ಅವಚ್ಛೇದಕಭೇದದಿಂದ ಭೇದವನ್ನು ಕಲ್ಪನೆ ಮಾಡಬಹುದೆಂದು ಹೇಳಿದರೆ 'ದ್ರವ್ಯಂ ಸಂಯೋಗೀ' ಎಂಬ ಸ್ಥಳದಲ್ಲಿ ಅವ್ಯಾಪ್ತಿದೋಷವನ್ನು ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಸಂಯೋಗವು ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿ ಆಗಿರು-ವುದರಿಂದ ತದಭಾವರೂಪಯೋಗ್ಯತೆಯ ಲಕ್ಷಣವು ಬರುವುದಿಲ್ಲ.

ಆಕ್ಷೇಪ - ಶಾಬ್ದಪ್ರಮಾ ಬರಬೇಕಾದರೆ ಯೋಗ್ಯತೆಯು ಸ್ವರೂಪತಃ ಸತ್ ಆಗಿರಬೇಕಲ್ಲವೆ ?

ಸಮಾಧಾನ - ನೈಯಾಯಿಕರು ಪ್ರಮೇಯವೂ ಕೂಡ ಪ್ರಮಾಕ್ಕೆ ಕಾರಣವೆಂದು ಹೇಳುತ್ತಾರೆ. 'ಅಯಂ ಘಟಃ' ಎಂಬ ಪ್ರಮಾ ಬರಬೇಕಾದರೆ ಇಂದ್ರಿಯ ಸನ್ನಿಕರ್ಷಾದಿಗಳು ಕಾರಣವೆಂದು ಹೇಗೆ ಹೇಳಬೇಕೋ ಅದರಂತೆ ವಿಷಯವು ಕೂಡ ಕಾರಣವೆಂದು ಹೇಳುತ್ತಾರೆ. ಭ್ರಮೆ ಬರಬೇಕಾದರೆ ವಿಷಯವು ಇರಲೇ ಬೇಕಾಗಿಲ್ಲ. ಆದರೆ ಪ್ರಮಾ ಬರಬೇಕಾದರೆ ವಿಷಯವು ಇರಲೇಬೇಕು.

ಆಕ್ಷೇಪ - ಹಾಗಾದರೆ ಅತೀತವಿಷಯಕವಾದ ಅಥವಾ ಅನಾಗತವಿಷಯಕವಾದ ಪ್ರಮಾ ಹೇಗೆ ಬರುತ್ತದೆ. ಅಲ್ಲಿ ವಿಷಯದ ಸತ್ವವು ಇರುವುದಿಲ್ಲವಲ್ಲವೆ?

ಸಮಾಧಾನ - ಸಾಕ್ಷಾತ್ಕಾರಪ್ರಮಾದಲ್ಲಿ ಪ್ರಮೇಯಕ್ಕೆ ವ್ಯಭಿಚಾರ ಇರುವುದಿಲ್ಲ. ಪ್ರಮಾ ಬರಬೇಕಾದರೆ ಪ್ರಮೇಯವು ಅವಶ್ಯವಾಗಿ ಇರಲೇ ಬೇಕು. ಆದ್ದರಿಂದ ಪ್ರತ್ಯಕ್ಷ ವಿಷಯದಲ್ಲಿ ಆ ಕಾಲದಲ್ಲಿಯೇ ವಿಷಯಸತ್ವವು ಅಪೇಕ್ಷಿತವಾಗಿರುತ್ತದೆ. ಆದರೆ ಎಲ್ಲೆಡೆಯೂ ಹೀಗಿಯೇ ಅಲ್ಲ. ಜ್ಞಾನವು ಯಾವ ಕಾಲದಲ್ಲಿ ವಿಷಯವನ್ನು ವಿಷಯಿಕರಿಸುತ್ತಿದೆಯೋ ಆ ಕಾಲದಲ್ಲಿ ವಿಷಯಸತ್ವವಿದ್ದರೆ ಸಾಕು. ಪ್ರಮಾಕಾಲದಲ್ಲಿಯೇ ವಿಷಯಸತ್ವವು ಸಾಕ್ಷಾತ್ಕಾರದಲ್ಲಿ ಮಾತ್ರ ಅಪೇಕ್ಷಿತ ಹೊರತು ಅತೀತಾನಾಗತ ವಿಷಯಗಳಲ್ಲಿ ಅಲ್ಲ. ಹೀಗೆ ತಾರ್ಕಿಕರ ಸಿದ್ಧಾಂತ.

ಆದರೆ ನಮ್ಮ ಸಿದ್ಧಾಂತದ ಪ್ರಕಾರ ಸಾಕ್ಷಾತ್ಕಾರಸ್ಥಳದಲ್ಲಿ ಅಥವಾ ಅತೀತಾನಾಗತ ಸ್ಥಳಗಳಲ್ಲಿ ಅಥವಾ ಅನುಮಿತಿ ಮೊದಲಾದ ಸ್ಥಳದಲ್ಲಿ ವಿಷಯಸತ್ವವು ಅಪೇಕ್ಷಿತವೆಂದು ಹೇಳುವುದೇ ಇಲ್ಲ.

ಆಕ್ಷೇಪ - ವಿಷಯವಿದ್ದರೆ ಪ್ರಮಾ ಹುಟ್ಟುತ್ತದೆ. ವಿಷಯವಿಲ್ಲದಿದ್ದರೆ ಪ್ರಮಾ ಹುಟ್ಟುವುದಿಲ್ಲ ಎಂಬ ಅನ್ವಯ ವ್ಯತಿರೇಕದಿಂದ ಪ್ರಮಾ ಹುಟ್ಟುವುದಕ್ಕೆ ವಿಷಯಸತ್ವವು ಕಾರಣವೆಂದು ಹೇಳಲೇಬೇಕಲ್ಲವೆ?

ಸಮಾಧಾನ - ಕೇವಲ ಅನ್ವಯವ್ಯತಿರೇಕದಿಂದ ಕಾರಣತ್ವವು ಸಿದ್ಧವಾಗುವುದಿಲ್ಲ. ಅನನ್ಯಥಾಸಿದ್ಧವಾದ ಕಾರಣತ್ವವು ಸಿದ್ಧವಾಗಬೇಕು. ವಿಷಯಸತ್ವವು ಸನ್ನಿಕರ್ಷದಲ್ಲಿಯೇ ಉಪಕ್ಷೀಣವಾಗಿದೆ. 'ಅಯಂ ಘಟಃ' ಎಂಬ ಪ್ರಮಾ ಬರಬೇಕಾದರೆ ಮೊದಲು ವಿಷಯೇಂದ್ರಿಯಗಳ ಸನ್ನಿಕರ್ಷ ಬೇಕು. ಈ ಸನ್ನಿಕರ್ಷ ಬರಬೇಕೆಂದರೆ ವಿಷಯದ ಸತ್ವವು ಆವಶ್ಯಕ. ಪ್ರಮಾ ಬರಲು ಇದು ವ್ಯಾಪಾರತ್ವೇನ ಕಾರಣವಾಗಿದೆ. ಆದ್ದರಿಂದ ಸನ್ನಿಕರ್ಷದಲ್ಲಿ ಉಪಕ್ಷೀಣವಾದ ವಿಷಯಸತ್ವವು ಸಾಕ್ಷಾತ್ಕಾರಪ್ರಮಾಕ್ಕೆ ಕಾರಣವಾಗುವುದಿಲ್ಲ.

ಆಕ್ಷೇಪ - ಪ್ರಾಮಾಣ್ಯವಿಶಿಷ್ಟವಾದ ಪ್ರಮಾಕ್ಕೆ ವಿಷಯಸತ್ವವು ಕಾರಣವೆಂದು ಹೇಳಿದರೆ ಏನು ತಪ್ಪು?

ಸಮಾಧಾನ - ಹಾಗೆ ಹೇಳಿದರೆ ಆತ್ಮಾಶ್ರಯದೋಷವು ಬರುತ್ತದೆ. ಪ್ರಾಮಾಣ್ಯಕ್ಕೆ ಪ್ರಾಮಾಣ್ಯವೇ ಕಾರಣವೆಂದು ಹೇಳಿದಂತಾಗುತ್ತದೆ. ಏಕೆಂದರೆ ಪ್ರಾಮಾಣ್ಯವು ವಿಷಯಸತ್ವದಿಂದಲೇ ಘಟಿತವಾಗಿದೆ. ಅದ-ಕ್ಕೋಸ್ಕರ ಯೋಗ್ಯತಾವು ಸತ್ವರೂಪವೇ ಆಗಿರುವುದರಿಂದ ಪ್ರಾಮಾಣ್ಯಕ್ಕಾಗಲೀ ಪ್ರಾಮಾಣ್ಯವಿಶಿಷ್ಟವಾದ ಜ್ಞಾನಕ್ಕಾಗಲೀ ಕಾರಣವಾಗಲು ಸಾಧ್ಯವೇ ಇಲ್ಲ.

ಶಾಬ್ದಪ್ರಮಾ ಬರಲು ಯೋಗ್ಯತೆಯು ಸ್ವರೂಪಸತ್ತಾಗಿಯೂ ಕಾರಣವಾಗುವುದಿಲ್ಲ. ಜ್ಞಾತವಾಗಿಯೂ ಕೂಡ ಕಾರಣವಾಗುವುದಿಲ್ಲವೆಂಬುದೇ ತತ್ವವಾದಿಗಳ ಸಿದ್ಧಾಂತ. ಅಂದರೆ ಯೋಗ್ಯತೆಯು ಪ್ರಾಮಾಣ್ಯವು ವಿಷಯಸತ್ವ-ಘಟಿತವಾಗಿರುವುದರಿಂದ ಪ್ರಾಮಾಣ್ಯವಿಶಿಷ್ಟವಾದ ಜ್ಞಾನಕ್ಕೆ ಯೋಗ್ಯತೆಯ ಸತ್ವವು ಕಾರಣವಾಗುವುದಿಲ್ಲ. ಯೋಗ್ಯತೆಯ ಜ್ಞಾನವು ಕೂಡ ಕಾರಣವಲ್ಲವೆಂಬುದನ್ನು ಪ್ರಾಮಾಣ್ಯಸ್ವತಸ್ತ್ವ ಪ್ರಕರಣದಲ್ಲಿ ಸಮರ್ಥಿಸಿದ್ದಾಗಿದೆ.

ಶಾಬ್ದಪ್ರಮಾ ಬರಲು ಯೋಗ್ಯತೆಯು ಕಾರಣವಾಗದಿರಬಹುದು. ಆದರೆ ಭ್ರಮಾ-ಪ್ರಮಾ-ಸಾಧಾರಣವಾದ ಶಾಬ್ದಜ್ಞಾನಕ್ಕೆ ಯೋಗ್ಯತೆಯನ್ನು ಕಾರಣವೆನ್ನಲೇಬೇಕಲ್ಲವೇ ? ಎಂಬ ಪ್ರಶ್ನೆಗೆ ಹೀಗೆ ಉತ್ತರ ತಿಳಿಯಬೇಕು -

ಭ್ರಮಾ-ಪ್ರಮಾ-ಸಾಧಾರಣವಾದ ಶಬ್ದಜ್ಞಾನಕ್ಕೆ ಆಕಾಂಕ್ಷೆಯು ಕಾರಣ. ಅದರಂತೆ ಆಸತ್ತಿಯೂ ಕೂಡ ಕಾರಣ. ಯೋಗ್ಯತೆಯನ್ನಾಗಲಿ ಯೋಗ್ಯತೆಯ ಜ್ಞಾನವನ್ನಾಗಲಿ ಕಾರಣವೆಂದು ಹೇಳುವುದಿಲ್ಲ. ಹೊರತಾಗಿ ಅಯೋಗ್ಯತಾನಿಶ್ಚಯದ ವಿರಹವು ಕಾರಣವೆನ್ನುತ್ತೇವೆ. 'ವಹ್ನಿನಾ ಸಿಂಚತಿ' ಎಂಬಲ್ಲಿ ಅಯೋಗ್ಯತೆಯ ನಿಶ್ಚಯವೇ ಇರುವುದರಿಂದ ಶಾಬ್ದಬೋಧವು ಬಂದಿರುವುದಿಲ್ಲ. ಎಲ್ಲಿ ಅಯೋಗ್ಯತಾನಿಶ್ಚಯವು ಇರುವುದಿಲ್ಲವೊ ಅಲ್ಲಿ ಶಾಬ್ದಬೋಧವು ಬಂದೇ ಬರುತ್ತದೆ. ಯೋಗ್ಯತಾಜ್ಞಾನವನ್ನು ಕಾರಣವೆಂದು ಹೇಳುವುದಕ್ಕಿಂತ ಅಯೋಗ್ಯತಾ-ನಿಶ್ಚಯವಿರಹವು ಕಾರಣವೆಂದು ಹೇಳುವುದು ಗುರುಭೂತವಾಗಿದೆ ಎಂದು ಆಕ್ಷೇಪ ಮಾಡಬಾರದು. ಇದು ಅಸಂಸರ್ಗಅಗ್ರಹರೂಪವಾಗಿ ವಿಶಿಷ್ಟಜ್ಞಾನದಲ್ಲಿ ಕಾರಣವೆಂದು ಈಗಾಗಲೇ ಕ್ಲೃಪ್ತವಾಗಿದೆ. ಅದನ್ನೇ ವಿಶಿಷ್ಟ-ಜ್ಞಾನರೂಪವಾದ ಶಾಬ್ದಬೋಧದಲ್ಲಿಯೂ ಕೂಡ ಕಾರಣವೆಂಬುದು ಹೇಳುತ್ತಿದ್ದೇವೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ಪ್ರಮುಖವಾಗಿ ವಿಚಾರ ಮಾಡಿದರೆ ಶಾಬ್ದಬೋಧಕ್ಕೆ ಅಯೋಗ್ಯತಾನಿಶ್ಚಯವಿರಹವು ಕೂಡ ಕಾರಣವಲ್ಲ. ಆಕಾಂಕ್ಷಾ ಮತ್ತು ಆಸತ್ತಿ ಇವೆರಡೇ ಕಾರಣಗಳು. ಅಯೋಗ್ಯತಾನಿಶ್ಚಯವಿರಹವನ್ನು ಕಾರಣವೆಂದು ಆಗ್ರಹಿಸಿದರೆ ಪ್ರತಿವಾದಿವಾಕ್ಯದಲ್ಲಿ ಅಯೋಗ್ಯತಾನಿಶ್ಚಯವೇ ಇರುವುದರಿಂದ ಅವನು ಹೇಳಿದ ವಾಕ್ಯಗಳಿಂದ ಶಾಬ್ದ-ಬೋಧವೇ ಬಾರದಿರಬೇಕಾದೀತು. ಮತ್ತು ವಾದಿ ಹೇಳಿದ ವಾಕ್ಯದಿಂದ ಪ್ರತಿವಾದಿಗೂ ಕೂಡ ಶಾಬ್ದಬೋಧ ಬಾರದಿರಬೇಕಾದೀತು. ಆಗ ವಾದಿ-ಪ್ರತಿವಾದಿಗಳು ಮಾಡುವ ವಾದಕಥೆಯು ಕೇವಲ ಕಿವುಡರ ಜಗಳ ಆಗುತ್ತದೆ ಹೊರತು ವಾದಕಥೆಯೆಂದು ಕರೆಸಿಕೊಳ್ಳುವುದಿಲ್ಲ. ಅಯೋಗ್ಯತಾನಿಶ್ಚಯದ ವಿರಹವೂ ಕೂಡ ಕಾರಣವಲ್ಲ ಎನ್ನುವುದಾದರೆ 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಿಂದಲೂ ಕೂಡ ಶಾಬ್ದಬೋಧವು ಬರಲಿ ಎಂಬುದಾಗಿ ಪೂರ್ವಪಕ್ಷಿಯು ಆಕ್ರೋಶದಿಂದ ಆಕ್ಷೇಪ ಮಾಡುತ್ತಾನೆ.

ಈ ಆಕ್ಷೇಪದಲ್ಲಿ ಹುರುಳೇ ಇಲ್ಲ. ಏಕೆಂದರೆ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವನ್ನು ಕೇಳಿದಾಗ ಪ್ರತಿ-ಯೊಬ್ಬರಿಗೂ ಶಾಬ್ದಬೋಧವು ಬರುತ್ತದೆ. ಆದರೆ ಅಗ್ನಿಯಲ್ಲಿ ಸೇಕಕರಣತ್ವವು ಇಲ್ಲವೆಂಬ ಅರಿವಿನಿಂದ ಯಾರೂ ಕೂಡ ಪ್ರವೃತ್ತಿಯನ್ನು ಮಾಡುವುದಿಲ್ಲ. ಅಷ್ಟೇ ಹೊರತು ಶಾಬ್ದಬೋಧವೇ ಬರುವುದಿಲ್ಲವೆಂಬುದು ಸುಳ್ಳು. ಶಾಬ್ದಬೋಧ ಬಾರದಿದ್ದರೆ ಅಗ್ನಿಯಲ್ಲಿ ಸೇಕಕರಣತ್ವ ಇಲ್ಲವೆಂದು ವಿರೋಧ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವನ್ನು ಕೇಳಿದಾಗ ಮತ್ತು 'ಮೇರುಃ ಸರ್ಷಪಃ' ಇತ್ಯಾದಿ ವಾಕ್ಯವನ್ನು ಕೇಳಿದಾಗ ಶಾಬ್ದಬೋಧವು ಬಂದೇ ಬರುತ್ತದೆ.

ಹೀಗೆ ಹೇಳಿದ್ದರಿಂದ 'ಯೋಗ್ಯತಾಜ್ಞಾನವು ಶಾಬ್ದಜ್ಞಾನವನ್ನು ಕುರಿತು ಕಾರಣವಾಗಿದೆ. ಯೋಗ್ಯತಾಭ್ರಮ ಶಾಬ್ದಭ್ರಮವನ್ನು ಕುರಿತು ಕಾರಣವಾಗಿದೆ'. ಯೋಗ್ಯತಾಪ್ರಮಾ ಶಾಬ್ದಪ್ರಮಾವನ್ನು ಕುರಿತು ಕಾರಣ ಎಂಬ ತಾರ್ಕಿಕರ ಮತ್ತೊಂದು ವಾದವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಯೋಗ್ಯತೆ ಇಲ್ಲವೆಂಬ

ನಿಶ್ಚಯವಿದ್ದಾಗ ಕೂಡ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ. ತಾರ್ಕಿಕರು ಹೇಳಿದ ಸಂಶಯ-ಸಾಧಾರಣವಾದ ಯೋಗ್ಯತೆಯು ಇಲ್ಲದಿದ್ದರೂ ಕೂಡ 'ಗೇಹೇ ಘಟಃ' ಎಂಬ ವಾಕ್ಯದಿಂದ ಸಂಸರ್ಗಜ್ಞಾನ ಬರುವುದು ಅನುಭವಸಿದ್ಧವಾಗಿದೆ. ಶಾಬ್ದಪ್ರಮಾವನ್ನು ಕುರಿತು ಯೋಗ್ಯತಾಪ್ರಮಾ ಕಾರಣವಾಗಿದೆ. ಅಥವಾ ಯೋಗ್ಯತೆಯು ಸ್ವರೂಪಸತ್ತಾಗಿ ಕಾರಣ ಎಂಬ ತಾರ್ಕಿಕರ ವಾದವನ್ನು ಪ್ರಾಮಾಣ್ಯಸ್ವತಸ್ತ್ವಪ್ರಕರಣದಲ್ಲಿಯೇ ನಿರಾಕರಣೆ ಮಾಡಿದ್ದಾಗಿದೆ.

'ಅನ್ವಯಸತ್ತ್ವಮ್ ಯೋಗ್ಯತಾ' ಮತ್ತು 'ಪ್ರಮಾಣಾವಿರೋಧಃ ಯೋಗ್ಯತಾ' ಎಂಬುದಾಗಿ ಎರಡು ಬಗೆಯಲ್ಲಿ ಸಿದ್ಧಾಂತಪರವಾದ ಯೋಗ್ಯತಾಲಕ್ಷಣವನ್ನು ತಿಳಿಯಬೇಕು. ಮೊದಲನೆಯ ಪಕ್ಷದಲ್ಲಿ ಸಮಸ್ಯೆಯೇ ಇಲ್ಲ. ಆದರೆ ಎರಡನೆಯ ಪಕ್ಷದಲ್ಲಿ ಯೋಗ್ಯತಾಲಕ್ಷಣವನ್ನು ತಿಳಿಯುವುದೇ ಕಷ್ಟವಾಗುತ್ತದೆ. ಏಕೆಂದರೆ 'ಪ್ರಮಾಣಾ-ವಿರೋಧಃ' ಎಂಬುದಕ್ಕೆ ಪ್ರಮಾಣದ ವಿರೋಧದ ಅತ್ಯಂತಾಭಾವ ಎಂದರ್ಥ. ಅತ್ಯಂತಾಭಾವಕ್ಕೆ ಪ್ರತಿಯೋಗಿ-ಯಾದದ್ದು ಅಪ್ರಾಮಾಣಿಕವಾಗಿರುವುದರಿಂದ ತದಭಾವವನ್ನು ಪ್ರಾಮಾಣಿಕವೆಂದು ಹೇಳಲು ಸಾಧ್ಯವಾಗು-ವುದಿಲ್ಲ ಎಂಬುದು ಕೆಲವರ ಶಂಕೆ.

ಆದರೆ ಈ ಶಂಕೆಯಲ್ಲಿ ಹುರುಳೇ ಇಲ್ಲ. ಪ್ರತಿಯೋಗಿಯು ಅಪ್ರಾಮಾಣಿಕವಾಗಿರುವುದು ತದಭಾವದ ಪ್ರಾಮಾಣಿಕತ್ವಕ್ಕೆ ಉಪಯೋಗಿ ಆಗುತ್ತದೆ. ಉದಾಹರಣೆ - ಶುಕ್ತಿರೂಪ್ಯದ ತಾದಾತ್ಮ್ಯವು ಅಪ್ರಾಮಾಣಿಕವಾಗಿ-ರುವುದರಿಂದಲೇ ತದಭಾವವು ಪ್ರಾಮಾಣಿಕವಾಗುವುದು ಲೋಕಸಿದ್ಧವಾಗಿದೆ.

ಪ್ರಮಾಣಪದ್ಧತಿಯಲ್ಲಿ ಪ್ರತೀತಾರ್ಥವು 'ಪ್ರಮಾಣವಿರೋಧಾಭಾವಃ ಯೋಗ್ಯತಾ ತತ್‌ಪ್ರತಿಪಾದಕತ್ವಾತ್ ಪದಾನ್ಯಪಿ ಯೋಗ್ಯತಾವಂತಿ' ಪದಗಳಿಂದ ಸಹಜವಾಗಿ ತಿಳಿಯಲ್ಪಡುವ ಪ್ರಮಾಣಗಳ ವಿರೋಧ ಇಲ್ಲದಿರು-ವಿಕೆಯೇ 'ಯೋಗ್ಯತಾ' ಎಂದು ಕರೆಸಿಕೊಳ್ಳುತ್ತದೆ. ಇದನ್ನು ಪ್ರತಿಪಾದನೆ ಮಾಡುವುದರಿಂದ ಪದಗಳು ಯೋಗ್ಯತಾವುಳ್ಳವುಗಳೆಂದು ಕರೆಸಿಕೊಳ್ಳುತ್ತವೆಂದು ಹೇಳಲಾಗಿದೆ. ಪ್ರಮಾಣಲಕ್ಷಣಟೀಕೆಯಲ್ಲಿ 'ಅನ್ಯೋನ್ಯಾ-ನ್ವಯಯೋಗ್ಯತಾಭಿಧಾಯಕತ್ವಮ್ ಯೋಗ್ಯತ್ವಮ್' 'ಪರಸ್ಪರವಾಗಿ ಅನ್ವಯಯೋಗ್ಯತೆಯುಳ್ಳ ಅರ್ಥವನ್ನು ಪ್ರತಿಪಾದನೆ ಮಾಡುವಿಕೆಯು ಯೋಗ್ಯತಾ' ಎಂದು ಹೇಳಿದ್ದಾರೆ.

ಪ್ರಮಾಣಪದ್ಧತಿಯಲ್ಲಿ ಹೇಳಿದ ಲಕ್ಷಣವು ಸಮಂಜಸವಾಗಿದೆ. ಆದರೆ ಪ್ರಮಾಣಲಕ್ಷಣಟೀಕೆಯಲ್ಲಿ ಹೇಳಿದ ಲಕ್ಷಣದಲ್ಲಿ ಒಂದು ಸಮಸ್ಯೆ ಇದೆ. 'ಅಗ್ನಿನಾ ಸಿಂಚತಿ' ಎಂಬ ಸ್ಥಳದಲ್ಲಿ ಇದು ಬರುವುದಿಲ್ಲ. ಆದರೆ 'ಜಲೇನ ಸಿಂಚತಿ' ಎಂಬ ಅನಾಪ್ತವಾಕ್ಯದಲ್ಲಿ ಈ ಲಕ್ಷಣವು ಬರುವುದರಿಂದ ಅತಿಪ್ರಸಂಗ ಬರುತ್ತದೆ.

ಪ್ರಮಾಣಲಕ್ಷಣಟೀಕೆಗೆ ಅನಾಪ್ತವಾಕ್ಯವನ್ನು ವ್ಯಾವೃತ್ತಿ ಮಾಡುವ ಉದ್ದೇಶವಿಲ್ಲ. ಅನಾಪ್ತವಾಕ್ಯದಲ್ಲಿ ಯೋಗ್ಯತೆ ಇದೆ ಎಂಬುದೇ ಅಭಿಪ್ರಾಯವಾಗಿದೆ. ಹಾಗಾದರೆ ಇದೂ ಕೂಡ ಪ್ರಮಾಣವಾಗಬೇಕಲ್ಲವೆ ? ಎಂದು

ಭ್ರಮಾ-ಪ್ರಮಾ-ಸಾಧಾರಣವಾದ ಶಬ್ದಜ್ಞಾನಕ್ಕೆ ಆಕಾಂಕ್ಷೆಯು ಕಾರಣ. ಅದರಂತೆ ಆಸತ್ತಿಯೂ ಕೂಡ ಕಾರಣ. ಯೋಗ್ಯತೆಯನ್ನಾಗಲಿ ಯೋಗ್ಯತೆಯ ಜ್ಞಾನವನ್ನಾಗಲಿ ಕಾರಣವೆಂದು ಹೇಳುವುದಿಲ್ಲ. ಹೊರತಾಗಿ ಅಯೋಗ್ಯತಾನಿಶ್ಚಯದ ವಿರಹವು ಕಾರಣವೆನ್ನುತ್ತೇವೆ. 'ವಹ್ನಿನಾ ಸಿಂಚತಿ' ಎಂಬಲ್ಲಿ ಅಯೋಗ್ಯತೆಯ ನಿಶ್ಚಯವೇ ಇರುವುದರಿಂದ ಶಾಬ್ದಬೋಧವು ಬಂದಿರುವುದಿಲ್ಲ. ಎಲ್ಲಿ ಅಯೋಗ್ಯತಾನಿಶ್ಚಯವು ಇರುವುದಿಲ್ಲವೊ ಅಲ್ಲಿ ಶಾಬ್ದಬೋಧವು ಬಂದೇ ಬರುತ್ತದೆ. ಯೋಗ್ಯತಾಜ್ಞಾನವನ್ನು ಕಾರಣವೆಂದು ಹೇಳುವುದಕ್ಕಿಂತ ಅಯೋಗ್ಯತಾ-ನಿಶ್ಚಯವಿರಹವು ಕಾರಣವೆಂದು ಹೇಳುವುದು ಗುರುಭೂತವಾಗಿದೆ ಎಂದು ಆಕ್ಷೇಪ ಮಾಡಬಾರದು. ಇದು ಅಸಂಸರ್ಗಅಗ್ರಹರೂಪವಾಗಿ ವಿಶಿಷ್ಟಜ್ಞಾನದಲ್ಲಿ ಕಾರಣವೆಂದು ಈಗಾಗಲೇ ಕ್ಲೃಪ್ತವಾಗಿದೆ. ಅದನ್ನೇ ವಿಶಿಷ್ಟ-ಜ್ಞಾನರೂಪವಾದ ಶಾಬ್ದಬೋಧದಲ್ಲಿಯೂ ಕೂಡ ಕಾರಣವೆಂಬುದು ಹೇಳುತ್ತಿದ್ದೇವೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ಪ್ರಮುಖವಾಗಿ ವಿಚಾರ ಮಾಡಿದರೆ ಶಾಬ್ದಬೋಧಕ್ಕೆ ಅಯೋಗ್ಯತಾನಿಶ್ಚಯವಿರಹವು ಕೂಡ ಕಾರಣವಲ್ಲ. ಆಕಾಂಕ್ಷಾ ಮತ್ತು ಆಸತ್ತಿ ಇವೆರಡೇ ಕಾರಣಗಳು. ಅಯೋಗ್ಯತಾನಿಶ್ಚಯವಿರಹವನ್ನು ಕಾರಣವೆಂದು ಆಗ್ರಹಿಸಿದರೆ ಪ್ರತಿವಾದಿವಾಕ್ಯದಲ್ಲಿ ಅಯೋಗ್ಯತಾನಿಶ್ಚಯವೇ ಇರುವುದರಿಂದ ಅವನು ಹೇಳಿದ ವಾಕ್ಯಗಳಿಂದ ಶಾಬ್ದ-ಬೋಧವೇ ಬಾರದಿರಬೇಕಾದೀತು. ಮತ್ತು ವಾದಿ ಹೇಳಿದ ವಾಕ್ಯದಿಂದ ಪ್ರತಿವಾದಿಗೂ ಕೂಡ ಶಾಬ್ದಬೋಧ ಬಾರದಿರಬೇಕಾದೀತು. ಆಗ ವಾದಿ-ಪ್ರತಿವಾದಿಗಳು ಮಾಡುವ ವಾದಕಥೆಯು ಕೇವಲ ಕಿವುಡರ ಜಗಳ ಆಗುತ್ತದೆ ಹೊರತು ವಾದಕಥೆಯೆಂದು ಕರೆಸಿಕೊಳ್ಳುವುದಿಲ್ಲ. ಅಯೋಗ್ಯತಾನಿಶ್ಚಯದ ವಿರಹವೂ ಕೂಡ ಕಾರಣವಲ್ಲ ಎನ್ನುವುದಾದರೆ 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಿಂದಲೂ ಕೂಡ ಶಾಬ್ದಬೋಧವು ಬರಲಿ ಎಂಬುದಾಗಿ ಪೂರ್ವಪಕ್ಷಿಯು ಆಕ್ರೋಶದಿಂದ ಆಕ್ಷೇಪ ಮಾಡುತ್ತಾನೆ.

ಈ ಆಕ್ಷೇಪದಲ್ಲಿ ಹುರುಳೇ ಇಲ್ಲ. ಏಕೆಂದರೆ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವನ್ನು ಕೇಳಿದಾಗ ಪ್ರತಿ-ಯೊಬ್ಬರಿಗೂ ಶಾಬ್ದಬೋಧವು ಬರುತ್ತದೆ. ಆದರೆ ಅಗ್ನಿಯಲ್ಲಿ ಸೇಕಕರಣತ್ವವು ಇಲ್ಲವೆಂಬ ಅರಿವಿನಿಂದ ಯಾರೂ ಕೂಡ ಪ್ರವೃತ್ತಿಯನ್ನು ಮಾಡುವುದಿಲ್ಲ. ಅಷ್ಟೇ ಹೊರತು ಶಾಬ್ದಬೋಧವೇ ಬರುವುದಿಲ್ಲವೆಂಬುದು ಸುಳ್ಳು. ಶಾಬ್ದಬೋಧ ಬಾರದಿದ್ದರೆ ಅಗ್ನಿಯಲ್ಲಿ ಸೇಕಕರಣತ್ವ ಇಲ್ಲವೆಂದು ವಿರೋಧ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವನ್ನು ಕೇಳಿದಾಗ ಮತ್ತು 'ಮೇರುಃ ಸರ್ಷಪಃ' ಇತ್ಯಾದಿ ವಾಕ್ಯವನ್ನು ಕೇಳಿದಾಗ ಶಾಬ್ದಬೋಧವು ಬಂದೇ ಬರುತ್ತದೆ.

ಹೀಗೆ ಹೇಳಿದ್ದರಿಂದ 'ಯೋಗ್ಯತಾಜ್ಞಾನವು ಶಾಬ್ದಜ್ಞಾನವನ್ನು ಕುರಿತು ಕಾರಣವಾಗಿದೆ. ಯೋಗ್ಯತಾಭ್ರಮ ಶಾಬ್ದಭ್ರಮವನ್ನು ಕುರಿತು ಕಾರಣವಾಗಿದೆ'. ಯೋಗ್ಯತಾಪ್ರಮಾ ಶಾಬ್ದಪ್ರಮಾವನ್ನು ಕುರಿತು ಕಾರಣ ಎಂಬ ತಾರ್ಕಿಕರ ಮತ್ತೊಂದು ವಾದವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಯೋಗ್ಯತೆ ಇಲ್ಲವೆಂಬ

ನಿಶ್ಚಯವಿದ್ದಾಗ ಕೂಡ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ. ತಾರ್ಕಿಕರು ಹೇಳಿದ ಸಂಶಯ-ಸಾಧಾರಣವಾದ ಯೋಗ್ಯತೆಯು ಇಲ್ಲದಿದ್ದರೂ ಕೂಡ 'ಗೇಹೇ ಘಟಃ' ಎಂಬ ವಾಕ್ಯದಿಂದ ಸಂಸರ್ಗಜ್ಞಾನ ಬರುವುದು ಅನುಭವಸಿದ್ಧವಾಗಿದೆ. ಶಾಬ್ದಪ್ರಮಾನನ್ನು ಕುರಿತು ಯೋಗ್ಯತಾಪ್ರಮಾ ಕಾರಣವಾಗಿದೆ. ಅಥವಾ ಯೋಗ್ಯತೆಯು ಸ್ವರೂಪಸತ್ತಾಗಿ ಕಾರಣ ಎಂಬ ತಾರ್ಕಿಕರ ವಾದವನ್ನು ಪ್ರಾಮಾಣ್ಯಸ್ವತಸ್ತ್ವಪ್ರಕರಣದಲ್ಲಿಯೇ ನಿರಾಕರಣೆ ಮಾಡಿದ್ದಾಗಿದೆ.

'ಅನ್ವಯಸತ್ವಮ್ ಯೋಗ್ಯತಾ' ಮತ್ತು 'ಪ್ರಮಾಣಾವಿರೋಧಃ ಯೋಗ್ಯತಾ' ಎಂಬುದಾಗಿ ಎರಡು ಬಗೆಯಲ್ಲಿ ಸಿದ್ಧಾಂತಪರವಾದ ಯೋಗ್ಯತಾಲಕ್ಷಣವನ್ನು ತಿಳಿಯಬೇಕು. ಮೊದಲನೆಯ ಪಕ್ಷದಲ್ಲಿ ಸಮಸ್ಯೆಯೇ ಇಲ್ಲ. ಆದರೆ ಎರಡನೆಯ ಪಕ್ಷದಲ್ಲಿ ಯೋಗ್ಯತಾಲಕ್ಷಣವನ್ನು ತಿಳಿಯುವುದೇ ಕಷ್ಟವಾಗುತ್ತದೆ. ಏಕೆಂದರೆ 'ಪ್ರಮಾಣಾ-ವಿರೋಧಃ' ಎಂಬುದಕ್ಕೆ ಪ್ರಮಾಣದ ವಿರೋಧದ ಅತ್ಯಂತಾಭಾವ ಎಂದರ್ಥ. ಅತ್ಯಂತಾಭಾವಕ್ಕೆ ಪ್ರತಿಯೋಗಿ-ಯಾದದ್ದು ಅಪ್ರಾಮಾಣಿಕವಾಗಿರುವುದರಿಂದ ತದಭಾವವನ್ನು ಪ್ರಾಮಾಣಿಕವೆಂದು ಹೇಳಲು ಸಾಧ್ಯವಾಗು-ವುದಿಲ್ಲ ಎಂಬುದು ಕೆಲವರ ಶಂಕೆ.

ಆದರೆ ಈ ಶಂಕೆಯಲ್ಲಿ ಹುರುಳೇ ಇಲ್ಲ. ಪ್ರತಿಯೋಗಿಯು ಅಪ್ರಾಮಾಣಿಕವಾಗಿರುವುದು ತದಭಾವದ ಪ್ರಾಮಾಣಿಕತ್ವಕ್ಕೆ ಉಪಯೋಗಿ ಆಗುತ್ತದೆ. ಉದಾಹರಣೆ - ಶುಕ್ತಿರೂಪ್ಯದ ತಾದಾತ್ಮ್ಯವು ಅಪ್ರಾಮಾಣಿಕವಾಗಿ-ರುವುದರಿಂದಲೇ ತದಭಾವವು ಪ್ರಾಮಾಣಿಕವಾಗುವುದು ಲೋಕಸಿದ್ಧವಾಗಿದೆ.

ಪ್ರಮಾಣಪದ್ಧತಿಯಲ್ಲಿ ಪ್ರತೀತಾರ್ಥವು 'ಪ್ರಮಾಣವಿರೋಧಾಭಾವಃ ಯೋಗ್ಯತಾ ತತ್‌ಪ್ರತಿಪಾದಕತ್ವಾತ್ ಪದಾನ್ಯಪಿ ಯೋಗ್ಯತಾವಂತಿ' ಪದಗಳಿಂದ ಸಹಜವಾಗಿ ತಿಳಿಯಲ್ಪಡುವ ಪ್ರಮಾಣಗಳ ವಿರೋಧ ಇಲ್ಲದಿರು-ವಿಕೆಯೇ 'ಯೋಗ್ಯತಾ' ಎಂದು ಕರೆಸಿಕೊಳ್ಳುತ್ತದೆ. ಇದನ್ನು ಪ್ರತಿಪಾದನೆ ಮಾಡುವುದರಿಂದ ಪದಗಳು ಯೋಗ್ಯತಾವುಳ್ಳವುಗಳೆಂದು ಕರೆಸಿಕೊಳ್ಳುತ್ತವೆಂದು ಹೇಳಲಾಗಿದೆ. ಪ್ರಮಾಣಲಕ್ಷಣಟೀಕೆಯಲ್ಲಿ 'ಅನ್ಯೋನ್ಯಾ-ನ್ವಯಯೋಗ್ಯತಾಭಿಧಾಯಕತ್ವಮ್ ಯೋಗ್ಯತ್ವಮ್' 'ಪರಸ್ಪರವಾಗಿ ಅನ್ವಯಯೋಗ್ಯತೆಯುಳ್ಳ ಅರ್ಥವನ್ನು ಪ್ರತಿಪಾದನೆ ಮಾಡುವಿಕೆಯು ಯೋಗ್ಯತಾ' ಎಂದು ಹೇಳಿದ್ದಾರೆ.

ಪ್ರಮಾಣಪದ್ಧತಿಯಲ್ಲಿ ಹೇಳಿದ ಲಕ್ಷಣವು ಸಮಂಜಸವಾಗಿದೆ. ಆದರೆ ಪ್ರಮಾಣಲಕ್ಷಣಟೀಕೆಯಲ್ಲಿ ಹೇಳಿದ ಲಕ್ಷಣದಲ್ಲಿ ಒಂದು ಸಮಸ್ಯೆ ಇದೆ. 'ಅಗ್ನಿನಾ ಸಿಂಚತಿ' ಎಂಬ ಸ್ಥಳದಲ್ಲಿ ಇದು ಬರುವುದಿಲ್ಲ. ಆದರೆ 'ಜಲೇನ ಸಿಂಚತಿ' ಎಂಬ ಅನಾಪ್ತವಾಕ್ಯದಲ್ಲಿ ಈ ಲಕ್ಷಣವು ಬರುವುದರಿಂದ ಅತಿಪ್ರಸಂಗ ಬರುತ್ತದೆ.

ಪ್ರಮಾಣಲಕ್ಷಣಟೀಕೆಗೆ ಅನಾಪ್ತವಾಕ್ಯವನ್ನು ವ್ಯಾವೃತ್ತಿ ಮಾಡುವ ಉದ್ದೇಶವಿಲ್ಲ. ಅನಾಪ್ತವಾಕ್ಯದಲ್ಲಿ ಯೋಗ್ಯತೆ ಇದೆ ಎಂಬುದೇ ಅಭಿಪ್ರಾಯವಾಗಿದೆ. ಹಾಗಾದರೆ ಇದೂ ಕೂಡ ಪ್ರಮಾಣವಾಗಬೇಕಲ್ಲವೆ ? ಎಂದು

ಆಶಂಕಿಸಬಹುದು. ಆದರೆ 'ನಿರ್ದೋಷಃ ಶಬ್ದಃ ಆಗಮಃ' ಎಂಬುದಾಗಿ ಆಗಮಲಕ್ಷಣದಲ್ಲಿ ನಿರ್ದೋಷತ್ವ ವಿಶೇಷಣವನ್ನು ಹೇಳಿರುವುದರಿಂದ ಅನಾಪ್ತವಾಕ್ಯವು ಪ್ರಮಾಣವಲ್ಲವೆಂದು ತಿಳಿಯುತ್ತದೆ.

ಹೀಗೆ ವೇದವು ಅಪೌರುಷೇಯವಾದರೂ ಪ್ರಮಾಣ ಎಂದು ಹೇಳಲು ಯಾವುದೇ ಸಮಸ್ಯೆಗಳಿಲ್ಲ. ಆದ್ದರಿಂದ ವಿಷ್ಣುವಿನಲ್ಲಿಯೇ ಸಮಗ್ರವೇದವು ಶಕ್ತಿ ಹಾಗೂ ತಾತ್ಪರ್ಯವನ್ನು ಹೊಂದಿದೆ ಎಂದು ಸಿದ್ಧವಾಯಿತು.

ಇಲ್ಲಿಗೆ ಯೋಗ್ಯತಾಪ್ರಕರಣದ ಸಾರಾಮೃತವು ಸಮಾಪ್ತವಾಯಿತು.

# तर्कताण्डवम्
# द्वितीयः परिच्छेदः

## ।। अथ योग्यताप्रकरणम् ।।

**तर्कताण्डवम् - अथ का योग्यता । न तावत्सजातीयेऽन्वयदर्शनं योग्यता । पयसा सिञ्चतीत्यनाप्तवाक्येऽतिव्याप्तिः ।**

**न्यायदीपः** - 'प्रतीतान्वयस्य प्रमाणविरोधाभावो योग्यता' इति प्रमाणपद्धत्युक्तिं समर्थयमानः प्रसक्तपक्षान् पूर्ववादिमुखेन प्रत्याख्याति - **अथेत्यादिना** ।। **सजातीय इति** ।। दृष्टान्वयसजातीयत्वं योग्यतेत्यर्थः।

**तर्कताण्डवम्- किञ्च यथाकथञ्चित्साजात्यमयोग्यसाधारणम् । पदार्थतावच्छेदकधर्मेण वा तात्पर्यविषयीभूतान्वयप्रतियोगितावच्छेदकधर्मेण वा साजात्यं तु 'अद्य जातः पयः पिबति' इत्यादावव्याप्तम् ।।**

**न्यायदीपः**- मण्युक्तमपि दोषमाह -**किञ्चेति** ।। **अयोग्यतेति** ।। 'अग्निना सिञ्चेत्' इत्यादावपि शब्दार्थत्वादिना साजात्यस्य सत्वादिति भावः ।

मणिव्याख्यातृभिरुक्तमाह - **तात्पर्यविषयेति** ।। **अद्य जात इति** ।। अद्यजातत्वेन रूपेण तदन्वयस्येतः पूर्वं क्वाप्यदर्शनादिति भावः ।

**तर्कताण्डवम्- नापि समभिव्याहृतपदार्थसंसर्गाभावव्याप्यधर्म-शून्यत्वं योग्यता ।**

**न्यायदीपः- समभिव्याहृतेति ।।** समभिव्याहृतं यत्पदं तदर्थनिरूपितसंसर्गस्य योऽभावस्तव्द्याप्यधर्मशून्यत्वं । यथा 'जलेन सिञ्चति' इत्यादौ समभिव्याहृतसेकरूपपपदार्थ-संसर्गाभावव्याप्यो धर्मोऽग्नित्वादिः, तथा समभिव्याहृतजलपदार्थसंसर्गाभावव्याप्यो दाहत्वादि-स्तादृशधर्मशून्यत्वमस्ति । अग्निना सिञ्चतीति जलेन दहति' इत्यादौ तु तादृशधर्मवत्वा-दयोग्यतेत्यर्थः ।।

**तर्कताण्डवम्- प्रमेयमभिधेयमित्यादौ संसर्गाभावस्याप्रसिद्ध्या न्यायमते तत्राव्याप्तेः । समभिव्याहृतपदार्थसंसर्गो योग्यतेत्येतावतैव पूर्णत्वेन शेषवैयर्थ्याच्च । अनाप्तवाक्येऽतिव्याप्तेश्च ।।**

न्यायदीपः - सिद्धान्ते धर्ममात्रस्य व्यतिरेकित्वाद् घटनिष्ठप्रमेयत्वादेः पटे तन्निष्ठ-प्रमेयत्वादेर्घटेऽसत्वेन प्रमेयत्वादिसंसर्गाभावस्यापि प्रसिद्धत्वादाह - **न्यायमत इति** ।। तन्मते तस्य केवलान्वयित्वादिति भावः ।

सिद्धान्ते तु कथमित्यतो दोषान्तरमाह - **समभिव्याहृतेति** ।। **अनाप्तेति** ।। 'पयसा सिञ्चति' इत्याद्यनाप्तवाक्य इत्यर्थः ।

**तर्कताण्डवम्- एतेनैव समभिव्याहृतपदार्थसंसर्गव्याप्यधर्मवत्वं वा,**

**अन्वयप्रतियोगितावच्छेदकधर्मवत्वं वा योग्यतेति निरस्तम् । उक्तरीत्या शेषवैयर्थ्यात् । अनाप्तवाक्येऽतिव्याप्तेश्च ।।**

न्यायदीपः- क्रमेण पक्षद्वये दोषमाह -**उक्तरीत्येति** ।। समभिव्याहृतपदार्थसंसर्ग इत्येव पूर्तेरिति भावः ।।

तर्कताण्डवम् - **नापि मण्युक्तरीत्या एकपदार्थसंसर्गेऽपरपदार्थनिष्ठात्यन्ताभावप्रतियोगित्वप्रमाविशेष्यत्वाभावो वा, एकपदार्थसंसर्गेऽपरपदार्थनिष्ठात्यन्ताभावप्रतियोगितावच्छेदकधर्मशून्यत्वं वा योग्यता ।**

न्यायदीपः- एकेति पदस्य वा पदार्थस्य वा विशेषणम् । अपरेत्यप्येवं बोध्यम् । तन्निरूपितसंसर्गेऽपरपदार्थनिष्ठात्यन्ताभावं प्रति यत्प्रतियोगित्वं तत्प्रकारिका या प्रमा तद्विशेष्यत्वाभाव इत्यर्थः ।

'अग्निना सिञ्चति' इत्यादावग्निकरणकान्वयः सेके नास्तीति वा, अग्निकरणान्वयः सेकनिष्ठात्यन्ताभावप्रतियोगीति वा अनुभवेन तद्वाक्यं त्वयोग्यम् ।

'पयसा सिञ्चति' इत्यादौ तु पयःकरणत्वं सेके नास्तीत्यादिप्रतीतेः कदाप्यभावेन तत्र पयःपदार्थसंसर्गे सेकनिष्ठाभावप्रतियोगित्वप्रकारकप्रमाविशेष्यत्वं नेति तद्योग्यमित्युच्यते ।

अत्र शब्दत्ववदाकाशस्य शब्दनिष्ठात्यन्ताभावप्रतियोगित्वात्तत्राव्याप्तिनिरासाय **संसर्गेति** ।।

तादृशप्रमाविषयत्वाभाव इत्येवोक्तौ घटसंसर्गत्वं गेहनिष्ठात्यन्ताभावप्रतियोगीति प्रमाविषयो घटसंसर्गोपि भवतीति तत्राव्याप्तिः स्यात् । तन्निरासाय तादृशप्रमाविशेष्यत्वाभाव इत्युक्तिरिति पक्षधरः ।।

रुचिदत्तस्तु यत्पदार्थसंसर्गो बोध्यः तदंशे तादृशप्रमाविशेष्यत्वाभावो विवक्षितः । तेन सेकसंसर्ग आकाशश्च जलनिष्ठात्यान्ताभावप्रतियोगीति समूहालम्बनकृतप्रमविशेष्यत्वकृत-दोषोऽपास्तः । एवं चांशभेदप्राप्तये विशेष्यतोक्तिः । विषयत्वमात्रे तात्पर्यमित्यवोचत् ।।

यन्मते तादृशप्रमात्वपरिग्रहः प्रतिबन्धकस्तन्मतेनैतल्लक्षणकरणात्तादृशाभाव प्रतियोगिताभाव इत्येवानुक्त्वा तादृशप्रमाविशेष्यत्वाभाव इत्युक्तमिति रुचिदत्तः ।।

नरहरिस्तु प्रमेत्याद्यनुक्त्वा तादृशप्रतियोगित्वाभावो योग्यतेत्येवोक्तौ योग्यताया वाक्यार्थ-मात्रपर्यवसन्नतया तद्धीर्वाक्यार्थबोधात् पूर्वं न भवतीति शाब्दबोधे योग्यताज्ञानस्याहेतुत्वापत्तेः तादृशप्रमाविशेष्यत्वाभाव इत्युक्तमित्याह ।।

यन्मतेऽप्रामाण्यशङ्काशून्यविपरीतनिश्चयस्य प्रतिबन्धकत्वं तन्मतेनोक्तं लक्षणान्तरं चानु-वदति – **एकपदार्थेति** ।। तादृशं हि 'अग्निना सिञ्चति' इत्यत्राग्निसंसर्गत्वमतस्तदयोग्यम् । 'जलेन सिञ्चति' इत्यादौ जलसंसर्गादिकं तथा न भवतीति तद्योग्यमित्युच्यत इत्येतदपि नेत्यर्थः ।।

तर्कताण्डवम्- **एकत्वापरत्वयोः पदार्थविशेषणत्वे 'प्रमेयत्वे प्रमेय-त्वम्' इत्यादावव्याप्तेः । तत्र पदार्थभेदाभावात् ।**

न्यायदीपः-लक्षणद्वयेप्येकपदार्थापरपदार्थेत्यत्रैकत्वापरत्वे पदार्थविशेषणे? पदविशेषणे वा? इति विकल्पो हृदि कृत्वा क्रमेण पक्षधराद्युक्तदोषानेवाह - **एकत्वेति** ।।

**तर्कताण्डवम्- पदविशेषणत्वे च प्रत्ययार्थान्वितस्वार्थबोधकं 'गाम्' इत्यादिकमयोग्यं स्यात् । तत्र पदस्यैकत्वात् ।**
**पदशब्दस्य शब्दमात्रपरत्वेपि स्वार्थीभूतवर्तमानत्वान्वितकृत्यादि-बोधको लडादिप्रत्ययो योग्यो न स्यात् । तत्र शब्दभेदस्याप्य-भावात् ।**

न्यायदीपः-पदविशेषणपक्षोक्तदोषो नास्ति तस्य शब्दमात्रपरत्वादित्यत आह - **पद-शब्दस्येति**।। 'गच्छति चैत्रः' इत्यत्राख्यातस्य कृतिर्वर्तमानत्वं च द्वयमर्थः । 'वर्तमाने लट्' इत्युक्तेः । 'लः कर्मणि च भावे चाकर्मकेभ्यः' इत्यत्र चकारेण कर्तरि लकारविधानेऽपि न्यायमते लाघवेन कृतिरेव लकारार्थ इति स्वीकृत्य तयोरन्योन्यान्वयस्य च स्वीकारात् । तथाच लडर्थभूतवर्तमानत्वान्वितकृत्यादिबोधको लडादिप्रत्ययो योग्यो न स्यादित्यर्थः ।

**कृत्यादीत्यादिपदेन** 'रथो गच्छति' इत्यादिजडसाधारणव्यापारग्रहः । चिरन्तनमते व्यापारमात्रस्याख्यातार्थत्वात्।

**तर्कताण्डवम्- तत्रापि तिङ्त्वलट्त्वादिना भेदकल्पनेऽपि 'द्रव्यं संयोगी' इति वाक्यमयोग्यं स्यात् । संयोगस्य द्रव्यनिष्ठात्यन्ता-भावप्रतियोगित्वात् ।।**

**न्यायदीपः - तिङ्त्वेति ।।** तिङ्त्वेन कृतिरर्थो लट्त्वेन वर्तमानत्वमर्थ इत्याकारभेदात् भेद इत्यर्थः ।

यद्यपि लकारत्वेनैव कृतिरर्थः । तथापि तिङो लकारादेशत्वात् तिङ्त्वेनेत्युक्तम् ।

**संयोगस्येति** ।। 'द्रव्यं संयोगी' इति विशिष्टवैशिष्ट्यं हि वाक्यार्थः । तथाच संयोगरूपैकपदार्थनिरूपितसंसर्गेऽपरपदार्थद्रव्यनिष्ठात्यन्ताभावप्रतियोगित्वस्यैव सत्वेन तत्प्रमाविशेष्यत्वस्य तत्प्रतियोगितावच्छेदकधर्मस्य च सत्वेनोक्तलक्षणाभावादव्याप्तिरिति भावः ।

संयोगसंसर्गश्च निरूपितत्वविशिष्टसमवायो वा, विशेषणतारूपस्वरूपसम्बन्धो वा ध्येयः । तत्रोक्तलक्षणसत्वेपि संयोगस्याव्याप्यवृत्तित्वमिति संयोगस्येत्येवोक्तम् ।।

यत्तूक्तं रुचिदत्तेन एकत्वापरत्वे पदार्थविशेषणे एव । न चैवं 'प्रमेयत्वे प्रमेयत्वम्' इत्यत्राव्याप्तिः । एकपदार्थसंसर्गे स्वाश्रयनिष्ठात्यन्ताभावप्रतियोगित्वप्रमाविशेष्यत्वाभावस्य तदर्थत्वादिति । तदेतेनैव निरस्तम् । 'द्रव्यं संयोगी' इत्यत्र तथाप्यव्याप्तेरपरिहारात् ।।

**तर्कताण्डवम्- अत्यन्ताभावस्य प्रतियोगिविरोधित्वेन व्याप्यवृत्तित्वेन वा विशेषणेऽपि 'गन्धप्रागभावसमानकालीनो घटो गन्धवान्' इति वाक्यमपि योग्यं स्यात् । गन्धवति गन्धप्रागभावस्य सत्वेऽपि गन्धात्यन्ताभावस्यासत्वात् ।।**

**एकपदार्थसंसर्गेऽपरपदार्थनिष्टसंसर्गान्योन्याभावप्रतियोगिताव-**

## च्छेदकत्वप्रमाविशेष्यत्वाभावरूपायामन्योन्याभावगर्भायां योग्यतायामव्याप्तेश्च ।

## न च सा न योग्यता । त्वयैव लाघवेन व्याप्तेरिव योग्यताया अपि अन्योन्याभावगर्भाया एव ग्राह्यत्वात् ।।

न्यायदीपः- उक्ताव्याप्तिपरिहारकविशेषणदानेऽतिव्याप्तिरायातीत्याह- **अत्यन्ताभावस्येति** ।। योग्यं स्यादित्येतद् व्यनक्ति - **गन्धवतीति** ।।

घटो हि गन्धवान् गन्धप्रागभाववांश्च भवति । 'उत्पन्नं द्रव्यं क्षणमगुणं तिष्ठति' इति तैरङ्गीकारात् । कालभेदेन गन्धतत्प्रागभावयोरेकत्राविरोधात् । तथाच द्वितीयादिक्षणेषु गन्धवति घटे प्रथमक्षणे गन्धतत्प्रागभावसत्वेपि तदत्यन्ताभावो नेति गन्धरूपैकपदार्थनिरूपितसंसर्गे घटरूपापरपदार्थनिष्ठात्यन्ताभावप्रतियोगित्वाभावस्य सत्वेनोक्तप्रमाविशेष्यत्वाभावस्योक्तरूपप्रतियोगितावच्छेदकधर्मशून्यत्वस्यापि सत्वादतिव्याप्तिरित्यर्थः ।।

यत्त्वत्यन्ताभावपदं विरोध्यभावपरम् । एवं चोक्तस्थले गन्धवानिति विशिष्टवैशिष्ट्यसंसर्गे प्रागभावोऽपि विरोधीति तत्प्रतियोगित्वस्यैव सत्वान्नाव्याप्तिरिति त्वग्रे नन्वित्यादिना शङ्कितपक्षधरमतनिरासेन निरसिष्यते ।।

यद्वैतदनुशयादाह - **पदार्थेति** ।। **अपरेति** ।। अपरपदार्थनिष्ठो यः पदार्थान्तरनिरूपितसंसर्गवदन्योन्याभावस्तत्तत्प्रतियोगितावच्छेदको वेत्यर्थः । 'जलेन सिञ्चति' इत्यत्र सेको वह्निसंसर्गवान्नेति धीवत्, जलसंसर्गनान्नेति बुद्धेरभावात् सेकनिष्ठान्योन्याभावप्रतियोगी वह्निसंसर्गाद्दाहादिरेव न तु संसर्गीति वह्निसंयोगस्यैव सेकनिष्ठान्योन्याभावगर्भप्रतियोगिता-

वच्छेदकत्वं न तु जलसंसर्गस्येति 'वह्निना सिञ्चति' इति वाक्यमयोग्यं जलेनेति वाक्यं योग्यमित्येतादृशयोग्यतायामत्यन्ताभावगर्भयोग्यतालक्षणस्याभावादव्याप्तिरित्यर्थः ॥

रुचिदत्तस्तु एकपदार्थसंसर्गत्वे अपरपदार्थसंसर्गनिष्ठान्योन्याभावप्रतियोगितावच्छेदकत्वप्रमाविशेष्यत्वाभाव इत्यवदत् ॥

**तर्कताण्डवम्- न चैवमन्योन्याभावगर्भैव योग्यतास्तु । न त्वत्यन्ताभावगर्भेति वाच्यम् । एकपदार्थसंसर्गोऽपरपदार्थनिष्ठात्यन्ताभावप्रतियोगीत्यत्यन्ताभावगर्भायोग्यत्वज्ञानेऽपि शाब्दधीप्रसङ्गात्।**

न्यायदीपः-व्याप्तेरिवेति ॥ 'प्रतियोग्यसमानाधिकरणयत्समानाधिकरणात्यन्ताभावप्रतियोगि यत्र भवति तेन समं तस्य सामानाधिकरण्यं व्याप्तिः' इत्यत्यन्ताभावगर्भव्याप्त्यपेक्षया 'यत्समानाधिकरणान्योन्याभावप्रतियोगितावच्छेदकं यत्र भवति तेन समं तस्य सामानाधिकरण्यं व्याप्तिः' इति त्वया व्याप्तिवादेऽन्योन्याभावस्य व्याप्यवृत्तित्वेन प्रतियोग्यसमानाधिकरणेति विशेषणनैरपेक्ष्यात् लाघवेनान्योन्याभावगर्भैव व्याप्तिरङ्गमिति यथैवान्योन्याभावगर्भयोग्यतायां प्रतियोगिव्यधिकरणेति विशेषणनैरपेक्ष्येण लाघवात् तस्या एव शाब्दबोधाङ्गत्वादिति भावः ॥

**तर्कताण्डवम्- ननु तर्ह्युभयधीरपि प्रत्येकं शाब्दबोधहेतुः । न चाननुगमः । ग्राह्यसंसर्गविरोधिविषयकप्रमाविरहज्ञानत्वेनानुगमात् । तथाच न कोपि दोषः । संसर्ग्यन्योन्याभावस्यापि संसर्गविरोधित्वात् । द्रव्ये संयोगात्यन्ताभावस्य संयोगाविरोधित्वात् ।**

**गन्धप्रागभावस्यापि भिन्नकालीनगन्धेन सहाविरोधेति तात्पर्य-विषयेण समानकालीनगन्धेन विरोधात् ।**

न्यायदीपः- पक्षधरेण 'अत्र ब्रूमः, इत्यादिना सिद्धान्तितमाशङ्कते- **नन्विति** ।। द्विरूप-योग्यताज्ञानस्याप्यनुगतधर्मानाह - **ग्राह्येति** ।।

ग्राह्यो यः संसर्गः जलसेकसंसर्गः, तद्विरोधि यदपरपदार्थनिष्ठात्यन्ताभावप्रतियोगित्वं, अपरपदार्थनिष्ठान्योन्याभावप्रतियोगितावच्छेदकत्वम्, विरोधित्वस्य तज्ज्ञानप्रतिबन्धकज्ञान-विषयकत्वरूपत्वस्यात्राभिमतत्वात्, तद्विषयकप्रमाविरहज्ञानत्वं द्विरूपस्यापि योग्यताज्ञान-स्यास्तीत्यनुगमादित्यर्थः ।।

'न कोपि दोषः' इत्युक्तं व्यञ्जयन्नत्यन्ताभावस्य संसर्गविरोधित्वं व्यक्तमिति तत्रा-व्याप्त्यभावमप्रदर्श्य अन्योन्याभावगर्भयोग्यतायामव्याप्तिदोषस्तावन्नेत्याह - **संसर्गेति** ।। वह्नि-संसर्गान्योन्याभाववति वह्निसंसर्गस्यादर्शनादिति भावः ।

'द्रव्यं संयोगी' इत्यत्राव्याप्तिदोषो नेत्याह- **द्रव्य इति** ।। **संयोगाविरोधित्वादिति**।। संयोगसंसर्गाविरोधित्वादित्यर्थः । एवं च तत्र संयोगस्याव्याप्यवृत्तितया स्वाधिकरणद्रव्य-निष्ठात्यन्ताभावप्रतियोगित्वेऽपि तस्य ग्राह्यसंयोगसंसर्गाविरोधित्वेन विरोध्यभावप्रतियोगित्व-प्रमाविशेष्यत्वाभावादेः सत्वान्नाव्याप्तिरित्यर्थः ।।

यदपि 'गन्धप्रागभावसमानकालीनः' इत्यादिनातिव्याप्तिकथनं तदपि नेत्याह - **गन्धेति** ।। गन्धप्रागभावस्यापि भिन्नकालीनगन्धेन सहाविरोधेऽपि तात्पर्यविषयेण समानकालीनगन्धेन

विरोधादिति - **विरोधित्वादिति** ।। तथाच तत्र गन्धस्य ग्राह्यसंसर्गविरोध्यभावप्रतियोगित्वमेवेति नातिव्याप्तिरित्यर्थः ।

**तर्कताण्डवम्- इति चेन्मैवम् ।। अत्र ह्याद्यपक्षे तात्पर्यविषयीभूतान्वयविरोधिप्रमाविरहो योग्यता । द्वितीये तात्पर्यविषयभूतान्वयविरोधिधर्मशून्यत्वं योग्यतेति फलितार्थः ।**

**न्यायदीपः- अत्र हीति** ।। एकपदार्थेत्यादिमण्युक्तलक्षणद्वय इत्यर्थः । **फलितार्थ इति** ।। त्वदुक्तविवक्षारीत्येति भावः ।।

तर्कताण्डवम्- **तथाच समभिव्याहृतशब्दतात्पर्यविषस्यान्वयस्य सत्वं वा तदविनाभूतप्रमाणाविरोधो वा योग्यतेत्येवास्तु । किमनया कुसृष्ट्या । तावतैव निश्चिताप्रामाण्यके 'अग्निना सिञ्चति' इत्यादावनिश्चिताप्रमाण्यके 'जलेन सिञ्चति' इत्यादौ चानाप्तवाक्येऽनतिव्याप्तेः ।**

**न्यायदीपः- तदिति** ।। उक्तरूपान्वयसत्वाविनाभूत इत्यर्थः ।

**इत्येवास्त्विति** ।। अन्यथाऽन्योन्याभावगर्भयोग्यतासत्वेऽत्यन्ताभावगर्भायोग्यताज्ञानादन्वयबोधापत्तेः । कारणतावच्छेदकावच्छिन्नयत्किञ्चित्कारणसत्वे एव कार्योत्पत्तेः । न चेष्टापत्तिः । ग्राह्यसंसर्गविरोध्यवगाहित्वेनावश्यं तस्य तत्प्रतिबन्धकत्वादिति भावः ।

न्यायदीपः-**अनिश्चितेति** ।। तत्र विवादस्यानिश्चयादनिश्चितेत्युक्तम् । **अनतिव्याप्ते-रिति** ।। अनाप्तोक्तत्वादेव तद्वाक्येऽन्वयस्यासत्यत्वादिति भावः ।

**तर्कताण्डवम्- त्वदीयद्वितीयलक्षणस्य 'जलेन सिञ्चति' इत्यनाप्त-वाक्येऽतिव्याप्तेश्च ।**

न्यायदीपः- **त्वदीयेति** ।। त्वदीयेत्यादिनोक्ते इत्यर्थः । जलेनेत्यादौ सेकान्वयविरोधि-वह्नित्वरूपधर्मशून्यत्वसत्वादिति भावः ।।

**तर्कताण्डवम्- इयं हि विषयसत्वरूपा योग्यता स्वरूपसत्येवा-नाप्तवाक्ये लक्षणस्यानतिव्याप्त्यर्थमुक्ता । न तु सत्तया ज्ञाततया वा शाब्दप्रमाकारणत्वेनोक्ता । शाब्दप्रमायां तस्या वा तद्विषय-ज्ञानस्य वा हेतुत्वायोगात् ।। उक्तं चैतत् प्रामाण्यस्वतस्त्वे ।**

न्यायदीपः- नन्वेवं शाब्दप्रमाहेतोर्योग्यताया विषयसत्वरूपत्वे शाब्दप्रमाया गुणजन्यत्वेन प्रमायाः परतस्त्वापत्तिरित्यत आह – **इयं हीति** ।। स्वरूपसत्येवेत्युक्तैवकारव्यावर्त्यं व्यनक्ति - **न त्विति** ।।

**तस्या वेति** ।। योग्यताया वेत्यर्थः । कथं न हेतुत्वमित्यत आह - **उक्तं चैतदिति**।। शाब्दप्रमायां योग्यता तज्ज्ञानं वा न हेतुरित्येतत्प्रत्यक्षप्रमादावनुगतगुणभङ्गे शाब्दप्रमानुगतगुण-खण्डनप्रस्तावे उपपादितं चेत्यर्थः ।।

**तर्कताण्डवम्- भ्रमसाधारणे शाब्दज्ञाने त्वाकाङ्क्षासत्ती अयोग्यतानिश्चयविरहश्च हेतव इत्यस्तु । न तु योग्यता । न वा तज्ज्ञानम् ।।**

**न्यायदीपः-** नन्वेवं शाब्दज्ञानमात्रेऽपि योग्यता न हेतुः स्यात् । तथाच निश्चितायोग्यताकवाक्यादपि धीप्रसङ्गः । न चायोग्यतानिश्चयविरहो हेतुः । गुरुत्वेन योग्यतायां एव हेतुत्वौचित्यादित्यत आह - **भ्रमेत्यादि** ।।

**तर्कताण्डवम् - यद्यपि योग्यताज्ञानादयोग्यतानिश्चयविरहो गुरुः । तथाप्यसावसंसर्गाग्रहरूपत्वात् प्रत्यक्षादिविशिष्टज्ञाने क्लृप्त आवश्यकश्च ।**

**न्यायदीपः-असाविति** ।। अयोग्यतानिश्चयविरह इत्यर्थः ।। **क्लृप्त इति** ।। हेतुत्वेनेति योज्यं । **आवश्यक इति** ।। तदभावे शाब्दज्ञानानुदयादिति भावः ।।

**तर्कताण्डवम्- किञ्च योग्यतायाः संसर्गात्मकत्वेन तज्ज्ञानस्य शाब्दसंसर्गज्ञानहेतुत्वात् आत्माश्रयः स्यात् ।।**

न्यायदीपः-योग्यताज्ञानहेतुत्वे विपक्षे बाधकं चाह - **किञ्चेति** ।।

**तर्कताण्डवम्- वस्तुतस्तु अयोग्यतानिश्चयविरहोऽपि न शाब्दधीहेतुः । किं त्वाकाङ्क्षासत्ती एव । तथात्वे हि अयोग्यत्वेन**

**निश्चितस्य प्रतिवादिवाक्यस्याबोधकतया कथा बधिरकलहः स्यात् ।**

न्यायदीपः- ननु असंसर्गाग्रहरूपतया यद्ययोग्यतानिश्चविरहः शाब्दधीहेतुः स्यात् तर्हि यत्सामान्यविशेषन्यायेनाविद्यमानासंसर्गाग्रहः, प्रमामात्रेऽविद्यमानायोग्यतानिश्चयविरहश्च शाब्द-प्रमायामनुगतो गुणो हेतुः प्राप्नोतीति प्रामाण्यस्य परतस्त्वापत्तिः । शाब्दसाधारण्यानापत्तिः । प्रतिवाद्यादिवाक्यादितोऽर्थज्ञानाभावापत्तिश्चेत्यत आह - **वस्तुतस्त्विति** ।।

**तर्कताण्डवम्- 'अग्निना सिञ्चति' इत्यदिवाक्यादपि सामग्रीसत्वाद-प्रमात्वेन निश्चितं प्रवृत्त्यजनकं ज्ञानं जायत एव । कथमन्यथा तन्निराकरणम् । उक्तं च सुधायाम् - 'मेरुः सर्षप इत्यादिवाक्यात् मेरोरपि सर्षपत्वेन प्रतिभासात्' इति ।।**

न्यायदीपः-कुत इत्यतो विपक्षे बाधकमाह - **तथात्वे हीति** ।। अयोग्यतानिश्चयविरहस्य शाब्दधीहेतुत्व इत्यर्थः ।

कथेत्यनुवादः । बधिरकलह इति विधिः । प्रतिवादिवाक्यात् पदार्थोपस्थितौ मानसः संसर्गबोध इति तु शब्दकरणकत्वानुभवविरुद्धम् । अन्यथा आप्तवाक्यस्थलेप्येवं सुवचत्वेन शब्दप्रामाण्यं दत्तजलाञ्जलि स्यादिति भावः ।

**तर्कताण्डवम्- एतेन संशयसाधारणं योग्यताज्ञानं शाब्दधीहेतु-रिति, योग्यताभ्रमः शाब्दभ्रमहेतुरिति च निरस्तम् ।**

**अयोग्यत्वनिश्चयेऽपि शाब्दधीदर्शनात् । दृश्यते च परोक्तयोग्यता-सन्देहाभावेपि 'गेहे घटः' इति वाक्याज्झडिति संसर्गधीः । परोक्तयोग्यता वा तत्प्रमा वा शाब्दप्रमायां हेतुरिति तु प्रामाण्य-स्वतस्त्वे निरस्तम् ।।**

**न्यायदीपः**- तर्हि अग्निनेत्यादिवाक्यादप्यर्थधीः स्यात् ततश्च प्रवर्तेतापि पुरुष इत्यत आह -**अग्निनेति** ।। **सामग्रीति** ।। आकाङ्क्षासत्तिरूपसामग्रीसत्वाज्ज्ञानं जायत इत्यन्वयः । अप्रामाण्यानिश्चयाकबाधावताररूपसामग्रीसत्वान्निश्चिता प्रामाण्यमिति नान्वयः । अत एव प्रवृत्यजनकमित्यर्थः ।

**न्यायदीपः**- **उक्तं चेति** ।। जिज्ञासाधिरणे 'विज्ञातस्यान्यथा सम्यग् विज्ञानं ह्येव तन्मतम्' इत्येतद् व्याख्यायामख्यातिपक्षखण्डनावसरे उक्तमित्यर्थः ।

योग्यताज्ञानस्य शाब्दज्ञानव्यतिरेकव्यभिचारमाह - **अयोग्यत्वेति** ।।

योग्यतासन्देहस्यापि व्यतिरेकव्यभिचारमाह - **दृश्यते चेति** ।। **परोक्तेति** ।। एकपदार्थ-संसर्ग इत्यादिना परोक्तेत्यर्थः ।।

यद्वा भवदुक्तान्वयसत्वादिरूपयोग्यताज्ञानस्याहेतुत्वेऽपि परोक्तयोग्यताज्ञानस्य तत्प्रमायाश्च शाब्दभ्रमत्वज्ञाने तत्प्रमयोः स्यादित्यत आह - **दृश्यते चेत्यादिना** ।। **प्रामाण्यस्वतस्त्व इति** ।। प्रत्यक्षादिप्रमास्वनुगतहेतुत्वभङ्ग इत्यर्थः ।।

**तर्कताण्डवम्- ननु प्रकृतप्रमाणविरोधरूपप्रतियोगिनोऽप्रामाणिक-त्वात् तदभावः कथं प्रामाणिकः स्यादिति चेत् कात्र कथन्ता ।**

**प्रतियोग्यप्रामाणिकत्वस्याभावप्रामाणिकत्वं प्रत्येव प्रयोजकतायाः शुक्तिरूप्यतादात्म्यादौ दर्शनात् ।।**

**न्यायदीपः-** नन्वस्त्वेवमन्वयसत्वं योग्यतेति पक्षः । प्रमाणाविरोधो योग्यतेति पक्षो न युक्तः। यत्किञ्चित् प्रमाणाविरोधस्यातिप्रसङ्गितया प्रकृतग्राह्यसंसर्गाभावावगाहिप्रमाणविरोध एव योग्यतेति वाच्यम् । स च न युक्त इत्याशङ्क्य समाधत्ते- **नन्वित्यादिना ।।**

'जलेन सिञ्चति' इत्यादौ प्रकृतजलसंसर्गाभावावगाहिप्रमाणेत्यर्थः । तादात्म्यस्यासत एव सदुपरागेण भ्रान्तौ भानस्य चिरन्तनमते स्वीकारात् शुक्तिरूप्यतादात्म्यादावित्युक्तम् ।।

**तर्कताण्डवम्- प्रपञ्चितं चैतन्न्यायामृते । एतदेवाभिप्रेत्योक्तं पद्धतौ- 'प्रतीतार्थस्य प्रमाणविरोधाभावो योग्यता । तत्प्रतिपादकत्वात् पदान्यपि योग्यतावन्ति' इति ।।**

न्यायदीपः- ननु कथमसतो निःस्वरूपस्यात्यन्ताभावप्रतियोगित्वं नाम धर्म उपपद्यता-मित्यत आह - **प्रपञ्चितं चैतदिति** । धर्मिसत्तानिरपेक्षधर्मत्वादिना प्रपञ्चितमाद्यपरिच्छेदेऽ-सतोत्यन्ताभावप्रतियोगित्वसमर्थनवाद इत्यर्थः ।

तर्कताण्डवम्- यत्तु प्रमाणलक्षणटीकायामन्योन्यान्वययोग्यता-वदर्थाभिधायकत्वं योग्यत्वमित्युक्तम् । तन्निश्चिताप्रामाण्यकात् 'अग्निना सिञ्चति' इत्यादिवाक्याद् व्यावृत्तयोग्यतानिरूपणपरम् ।

**न तु 'जलेन सिञ्चति' इत्यनाप्तवाक्यव्यावृत्तयोग्यतानिरूपणम् । तत् व्यावृत्तेर्निर्दोषत्वविशेषणेनैव सिद्धेरिति ज्ञेयम् ।।**

**न्यायदीपः** - ग्रन्थान्तरोक्तयोग्यतालक्षणस्यासदर्थके 'जलेन सिञ्चति' इत्याद्यनाप्तवाक्येऽतिव्याप्तिमाशङ्क्य तत्साधारण्यमेवाभिप्रेतमतो न दोष इत्याह - **यत्वित्यादिना** ।।

एवं तर्हि तद्वाक्यस्यापि प्रमाणशब्दत्वापत्तिरित्यतो 'निर्दोषवाक्यमागमः' इति निर्दोषत्वविशेषणेनैव तन्निवारणादन्यथा निर्दोषेति व्यर्थमापद्यत इति भावः ।।

**तर्कताण्डवम् - तस्मात् वेदस्यापौरुषेयत्वेपि प्रामाण्यसम्भवात् तस्य विष्णावेव शक्तितात्पर्ये युक्ते इति ।।**

इति तर्कताण्डवे योग्यताप्रकरणम् ।।

**न्यायदीपः**- एवं वेदस्यापोरुषेयत्वे आप्तवाक्यत्वरूपलक्षणाभावेऽप्रामाण्यमिति शङ्किते निर्दोषवाक्यरूपलक्षणेनैव प्रामाण्यम् । वाक्यत्वं चाकाङ्क्षायोग्यताऽसत्तिमत्पदकदम्बत्वमित्यभिप्रेत्याकाङ्क्षादिस्वरूपं चोपपाद्योत्तरप्रसङ्गमुपक्षिपन्नुपसंहरति - **तस्मादिति** ।।

उक्तरीत्या निर्दोषवाक्यत्वादिरूपलक्षणासम्भवादित्यर्थः ।। **शक्तीति** ।। पदानां शक्तिरेव तत्समुदायवेदस्यापि शक्तिरिति भावः । तात्पर्यं तत्प्रमितिशेषत्वं प्रागुवेदापौरुषेयत्ववादे व्यक्तम् ।। एवं च 'आदिवर्जितैराम्नायैराख्याता' इत्युक्तं युक्तमिति भावः ।।

।। इति न्यायदीपे योग्यतानिरूपणम् ।।

# ತರ್ಕತಾಂಡವ ದ್ವಿತೀಯಃ ಪರಿಚ್ಛೇದಃ
# ಯೋಗ್ಯತಾಪ್ರಕರಣ

## ಯೋಗ್ಯತೆಯ ಲಕ್ಷಣವೇನು?

**ತರ್ಕತಾಂಡವಮ್ – ಅಥ ಕಾ ಯೋಗ್ಯತಾ? ನ ತಾವತ್ ಸಜಾತೀಯೇಽನ್ವಯ-ದರ್ಶನಂ ಯೋಗ್ಯತಾ । 'ಪಯಸಾ ಸಿಂಚತಿ' ಇತ್ಯನಾಪ್ತವಾಕ್ಯೇ ಅತಿವ್ಯಾಪ್ತಿಃ ।**

ಅನುವಾದ - ಈಗ ಯೋಗ್ಯತೆಯ ಬಗ್ಗೆ ವಿಚಾರ - ಸಜಾತೀಯಪದಾರ್ಥದಲ್ಲಿ ಅನ್ವಯ ಕಂಡಿರುವುದು ಯೋಗ್ಯತಾಲಕ್ಷಣ ಎಂದು ಹೇಳಬಾರದು. 'ಪಯಸಾ ಸಿಂಚತಿ' ಎಂಬ ಅನಾಪ್ತನ ವಾಕ್ಯದಲ್ಲಿ ಅತಿವ್ಯಾಪ್ತಿ ಬರುತ್ತದೆ.

## ಸಜಾತೀಯ ಶಬ್ದದ ಅರ್ಥ

**ನ್ಯಾಯದೀಪಃ – 'ಪ್ರತೀತಾನ್ವಯಸ್ಯ ಪ್ರಮಾಣವಿರೋಧಾಭಾವೋ ಯೋಗ್ಯತಾ' ಇತಿ ಪ್ರಮಾಣಪದ್ಧತ್ಯುಕ್ತಂ ಸಮರ್ಥಯಮಾನಃ ಪ್ರಸಕ್ತಪಕ್ಷಾನ್ ಪೂರ್ವವಾದಿ-ಮುಖೇನ ಪ್ರತ್ಯಾಖ್ಯಾತಿ – ಅಥ ಇತ್ಯಾದಿನಾ ॥ ಸಜಾತೀಯ ಇತಿ ॥ 'ದೃಷ್ಟಾನ್ವಯ-ಸಜಾತೀಯತ್ವಂ ಯೋಗ್ಯತಾ' ಇತ್ಯರ್ಥಃ ।**

ಅನುವಾದ - 'ಪ್ರತೀತಾನ್ವಯಸ್ಯ ಪ್ರಮಾಣವಿರೋಧಾಭಾವಃ ಯೋಗ್ಯತಾ' ಎಂಬುದಾಗಿ ಪ್ರಮಾಣ ಪದ್ಧತಿಯಲ್ಲಿ ಯೋಗ್ಯತಾಲಕ್ಷಣವನ್ನು ಹೇಳಿದ್ದಾರೆ. ಅದನ್ನು ಸಮರ್ಥನೆ ಮಾಡುವುದಕ್ಕೋಸ್ಕರ ಪ್ರಸಕ್ತ-ವಾದ ಪೂರ್ವಪಕ್ಷಗಳನ್ನು ಪೂರ್ವವಾದಿಯ ಮುಖಾಂತರ 'ಅಥ' ಎಂಬ ವಾಕ್ಯದಿಂದ ನಿರೂಪಣೆ ಮಾಡಿ ಖಂಡಿಸುತ್ತಿದ್ದಾರೆ. 'ಸಜಾತೀಯ' ಎಂಬ ಶಬ್ದಕ್ಕೆ ದೃಷ್ಟವಾದ ಅನ್ವಯಕ್ಕೆ ಸಜಾತೀಯ ಎಂದರ್ಥ.

ವಿವರಣೆ - 'ಸಜಾತೀಯೇ ಅನ್ವಯದರ್ಶನಂ ಯೋಗ್ಯತಾ' ಎಂಬಲ್ಲಿ ಸಜಾತೀಯ ಎಂಬ ಶಬ್ದದ ಅರ್ಥವನ್ನು 'ದೃಷ್ಟಾನ್ವಯಸಜಾತೀಯ' ಎಂಬ ವಾಕ್ಯದಿಂದ ವಿವರಿಸಲಾಗಿದೆ. ಸಜಾತೀಯ ಎಂದಷ್ಟೇ ಹೇಳಿದರೆ ಯಾವ ರೀತಿಯಿಂದ ಸಜಾತೀಯವಾಗಿರಬೇಕು

ಎಂಬುದು ಸ್ಪಷ್ಟವಾಗುವುದಿಲ್ಲ. ಯಾವ ವಾಕ್ಯದಲ್ಲಿ ಯೋಗ್ಯತಾವನ್ನು ಉಪಪಾದನೆ ಮಾಡಬೇಕೋ, ಅಂತಹ ವಾಕ್ಯದಲ್ಲಿರುವ ಶಬ್ದಗಳಿಗೆ ಅನ್ವಯವು ಬೇರೆ ಸ್ಥಳಗಳಲ್ಲಿ ಕಂಡಿರಬೇಕು. 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿರುವ ಜಲಶಬ್ದಕ್ಕೆ ಜಲಾಂತರದಲ್ಲಿ ಸೇಚನಕ್ರಿಯೆಯ ಜೊತೆ ಅನ್ವಯ ಕಂಡಿದೆ. ಆದ್ದರಿಂದ ಈ ವಾಕ್ಯದಲ್ಲಿರುವ ಜಲಶಬ್ದಕ್ಕೂ ಸೇಚನಕರ್ಮಕ್ಕೂ ಅನ್ವಯವು ಯೋಗ್ಯವಾಗಿದೆ. ಆದ್ದರಿಂದ ಈ ವಾಕ್ಯದಲ್ಲಿ ಯೋಗ್ಯತಾ ಇದೆ ಎಂದು ಅರ್ಥ.

ವಿಶೇಷವಿಚಾರ - 'ಅನ್ವಯ' ಎಂದರೆ ಒಂದು ಪದದ ಅರ್ಥವು ಮತ್ತೊಂದು ಪದದ ಜೊತೆಗೆ ಸಂಬಂಧ ಹೊಂದಬೇಕು. 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ 'ಜಲೇನ' ಎಂಬುದು ಕಾರಕಪದ. 'ಸಿಂಚತಿ' ಎಂಬುದು ಕ್ರಿಯಾಪದ. ಜಲಶಬ್ದವು ತೃತೀಯಾ-ವಿಭಕ್ತಿಯಲ್ಲಿ ಪ್ರಯುಕ್ತವಾಗಿದೆ. ತೃತೀಯಾವಿಭಕ್ತಿಗೆ 'ಕರ್ತೃಕರಣಯೋಃ ತೃತೀಯಾ' ಎಂಬ ವ್ಯಾಕರಣನಿಯಮಾನುಸಾರವಾಗಿ ಕರಣಾರ್ಥವನ್ನು ಹೇಳಬೇಕು. ಆದ್ದರಿಂದ ಜಲವು ಸೇಚನಕರ್ಮಕ್ಕೆ ಕರಣ ಎಂಬ ಶಾಬ್ದಬೋಧವು ಬರುತ್ತದೆ.

ಜಲ ಮತ್ತು ಸೇಚನಗಳಿಗೆ ಕರಣ-ಕ್ರಿಯಾಭಾವವು ಇದೆ. ಸೇಚನವು ಕ್ರಿಯಾ. ಜಲವು ಕರಣ. 'ಜಲ'ಶಬ್ದಕ್ಕೆ ಜಲದಿಂದ ಎಂದರ್ಥ. 'ಸಿಂಚತಿ' ಎಂಬ ಕ್ರಿಯಾಪದಕ್ಕೆ ಸೇಚನ-ರೂಪಕ್ರಿಯಾ ಎಂದರ್ಥ. ಜಲೇನ ಮತ್ತು ಸಿಂಚತಿ ಎಂಬ ಎರಡು ಶಬ್ದಗಳಿಗೆ ಪರಸ್ಪರ-ವಾಗಿ ಸಂಬಂಧವಿದೆ. ನೀರಿನಿಂದ ಸೇಚನ ಮಾಡುತ್ತಾನೆ ಎಂಬುದು ಈ ವಾಕ್ಯದ ಅಭಿಪ್ರಾಯ.

ಸಜಾತೀಯಪದಾರ್ಥದಲ್ಲಿ ಅನ್ವಯ ಕಂಡಿದ್ದರೆ ಆ ಶಬ್ದಗಳಿಗೆ ಅನ್ವಯ ಇದೆ ಎಂಬ ಬೋಧವು ಬರುತ್ತದೆ. ಸಜಾತೀಯಪದಾರ್ಥದಲ್ಲಿ ಅನ್ವಯ ಕಾಣದಿದ್ದರೆ ಅಲ್ಲಿ ಯೋಗ್ಯತಾ ಇಲ್ಲ ಎಂದರ್ಥ.

ಉದಾಹರಣೆ - 'ಅನೇನ ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಜಲಕ್ಕೂ ಸೇಚನ ಕ್ರಿಯೆ-ಗೂ ಸಂಬಂಧವು ಬೋಧವಾಗುತ್ತದೆ. ಇಲ್ಲಿ 'ಅನೇನ' ಎಂಬ ಮತ್ತೊಂದು ಶಬ್ದವಿದೆ. ಈ ನೀರಿನಿಂದ ಎಂದಭಿಪ್ರಾಯ. ಬೇರೆ ಸ್ಥಳಗಳಲ್ಲಿ ಜಲಕ್ಕೂ ಸೇಚನಕ್ರಿಯೆಗೂ ಅನ್ವಯ

ದೃಷ್ಟವಾಗಿರುತ್ತದೆ. ಜಲಕ್ಕೆ ಸಜಾತೀಯವಾದ ಮತ್ತೊಂದು ಪದಾರ್ಥ ಎಂದರೆ ಜಲಾಂತರ. ಅದರಲ್ಲಿ ಸೇಚನರೂಪಕ್ರಿಯೆಯ ಅನ್ವಯ ಇದೆ. ಆದ್ದರಿಂದ ಸಜಾತೀಯವಾದ ಪದಾರ್ಥದಲ್ಲಿ ಕ್ರಿಯೆಗೆ ಅನ್ವಯವುಳ್ಳ 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಯೋಗ್ಯತಾ-ಲಕ್ಷಣವು ಬರುತ್ತದೆ.

'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಯೋಗ್ಯತಾ ಇರುವುದಿಲ್ಲ. ಈ ವಾಕ್ಯದಲ್ಲಿ ಅಗ್ನಿಗೆ ಸಜಾತೀಯವಾದ ಪದಾರ್ಥಾಂತರ ಎಂದರೆ ಮತ್ತೊಂದು ಅಗ್ನಿ. ಅಗ್ನಿಯಿಂದ ಸೇಚನ ಮಾಡುವುದು ಎಲ್ಲಿಯೂ ಕಂಡಿರುವುದಿಲ್ಲ. ಆದ್ದರಿಂದ ಸಜಾತೀಯವಾದ್ದರಲ್ಲಿ ಸೇಚನ-ಕ್ರಿಯೆಗೆ ಅನ್ವಯವು ಕಂಡಿಲ್ಲವಾದ್ದರಿಂದ 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಯೋಗ್ಯತೆ ಇರುವುದಿಲ್ಲ.

ಯೋಗ್ಯತಾಲಕ್ಷಣವು ಬರಬೇಕಾದರೆ ಸಜಾತೀಯವಾದ್ದರಲ್ಲಿ ಅನ್ವಯವು ಕಂಡಿರಬೇಕು ಎಂದಷ್ಟೇ ಹೇಳಿದರೆ ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿ ಬರುತ್ತದೆ. 'ಪಯಸಾ ಸಿಂಚತಿ' ಎಂದು ಅನಾಪ್ತನು ಪ್ರಯೋಗ ಮಾಡುತ್ತಾನೆ. ಇಲ್ಲಿ 'ಪಯಸ್' ಎಂದರೆ 'ಹಾಲು' ಎಂದರ್ಥ-ವಲ್ಲ. 'ಪಯಃ ಕೀಲಾಲಮಮೃತಂ' ಎಂಬ ಕೋಶಾನುಸಾರವಾಗಿ 'ನೀರು' ಎಂದರ್ಥ. 'ನೀರಿನಿಂದ ಸೇಚನೆ ಮಾಡುತ್ತಾನೆ' ಎಂಬುದು ಈ ವಾಕ್ಯದ ಅಭಿಪ್ರಾಯ, ಆದರೆ ಈ ವಾಕ್ಯವನ್ನು ಪ್ರಯೋಗ ಮಾಡುತ್ತಿರುವ ವ್ಯಕ್ತಿಯು ಅನಾಪ್ತನಾಗಿದ್ದಾನೆ. ಅನಾಪ್ತವಾಕ್ಯದಲ್ಲಿ ಯೋಗ್ಯತೆಯು ಇರುವುದಿಲ್ಲ. ಏಕೆಂದರೆ ಅರ್ಥಸತ್ವವಿದ್ದಾಗ ಈ ವಾಕ್ಯವನ್ನು ಪ್ರಯೋಗ ಮಾಡುತ್ತಿದ್ದಾನೋ ಅಥವಾ ಪ್ರತಾರಣಕ್ಕಾಗಿ ಈ ವಾಕ್ಯವನ್ನು ಪ್ರಯೋಗ ಮಾಡುತ್ತಿ-ದ್ದಾನೋ? ಎಂಬ ಸಂಶಯವು ಈ ಅನಾಪ್ತವಾಕ್ಯದಲ್ಲಿ ಇರುತ್ತದೆ.

ರಾತ್ರಿಕಾಲದಲ್ಲಿ ಮೋಸ ಮಾಡುವುದಕ್ಕಾಗಿ 'ನೀರಿನಿಂದ ಸೇಚನ ಮಾಡುತ್ತಿದ್ದಾನೆ' ಎಂದು ಅನಾಪ್ತನು ಪ್ರಯೋಗ ಮಾಡಿದಾಗ ಈ ವಾಕ್ಯದಲ್ಲಿ ಯೋಗ್ಯತಾಲಕ್ಷಣವು ಇದೆ. ಆದರೆ ಪ್ರಯೋಕ್ತೃವು ಅನಾಪ್ತನಾದ್ದರಿಂದ ವಾಕ್ಯವು ಅಪ್ರಮಾಣ. ಆದ್ದರಿಂದ ಅನಾಪ್ತವಾಕ್ಯದಲ್ಲಿ ಯೋಗ್ಯತಾಲಕ್ಷಣಕ್ಕೆ ಅತಿವ್ಯಾಪ್ತಿದೋಷವು ಬರುತ್ತದೆ.

ನಮ್ಮ ಸಿದ್ಧಾಂತದ ಯೋಗ್ಯತಾಲಕ್ಷಣದಲ್ಲಿ ಈ ದೋಷವು ಬರುವುದಿಲ್ಲ. 'ಪ್ರತೀತಾ-

ನ್ವಯಸ್ಯ ಪ್ರಮಾಣವಿರೋಧಾಭಾವಃ' ಎಂಬುದನ್ನು ಯೋಗ್ಯತಾಲಕ್ಷಣವನ್ನಾಗಿ ಅಂಗೀಕರಿಸಿದ್ದೇವೆ. ವಾಕ್ಯವನ್ನು ಪ್ರಯೋಗ ಮಾಡಿದಾಗ ಅಲ್ಲಿ ಬರುವ ಅನ್ವಯಕ್ಕೆ ಯಾವ ರೀತಿಯ ಪ್ರಮಾಣವಿರೋಧವೂ ಇರಬಾರದು ಎಂದಭಿಪ್ರಾಯ. ಪ್ರಕೃತ ಅನಾಪ್ತವಾಕ್ಯದಲ್ಲಿ ಶಾಬ್ದಿಕವಾದ ವಿರೋಧವಿರುವುದಿಲ್ಲ. ಆದರೆ ವಾಕ್ಯವೇ ಅಪ್ರಮಾಣವಾದ್ದರಿಂದ ಪ್ರಮಾಣ-ವಿರೋಧವು ಇರುತ್ತದೆ.

## ಸಜಾತೀಯತ್ವವನ್ನು ಹೇಗೋ ಹೇಳಬಾರದು

**ತರ್ಕತಾಂಡವ – ಕಿಂಚ ಯಥಾಕಥಂಚಿತ್ ಸಾಜಾತ್ಯಮ್ ಅಯೋಗ್ಯಸಾಧಾರಣಮ್ । ಪದಾರ್ಥತಾವಚ್ಛೇದಕಧರ್ಮೇಣ ವಾ ತಾತ್ಪರ್ಯವಿಷಯೀಭೂತಾನ್ವಯಪ್ರತಿಯೋಗಿತಾವಚ್ಛೇದಕಧರ್ಮೇಣ ವಾ ಸಾಜಾತ್ಯಂ ತು 'ಅದ್ಯ ಜಾತಃ ಪಯಃ ಪಿಬತಿ' ಇತ್ಯಾದಾವವ್ಯಾಪ್ತಮ್ ।**

ಅನುವಾದ - ಯಾವುದೋ ಒಂದು ರೀತಿಯಿಂದ ಸಜಾತೀಯತ್ವವನ್ನು ಹೇಳಿದರೆ ಅದು ಯೋಗ್ಯ ಹಾಗೂ ಅಯೋಗ್ಯವಾದವುಗಳಲ್ಲಿ ಸಾಧಾರಣವಾಗುತ್ತದೆ. 'ಪದಾರ್ಥತಾವಚ್ಛೇದಕಧರ್ಮದಿಂದ ಅಥವಾ ತಾತ್ಪರ್ಯವಿಷಯೀಭೂತಾನ್ವಯಪ್ರತಿಯೋಗಿತಾವಚ್ಛೇದಕಧರ್ಮದಿಂದ ಸಾಜಾತ್ಯವನ್ನು ಹೇಳಲು ಬರುವುದಿಲ್ಲ. 'ಅದ್ಯ ಜಾತಃ ಪಯಃ ಪಿಬತಿ' = 'ಇವತ್ತು ಹುಟ್ಟಿದ ಮಗುವು ಹಾಲನ್ನು ಕುಡಿಯುತ್ತದೆ' ಎಂಬ ವಾಕ್ಯದಲ್ಲಿ ಈ ಲಕ್ಷಣಕ್ಕೆ ಅವ್ಯಾಪ್ತಿದೋಷವು ಬರುತ್ತದೆ.

## ಯೋಗ್ಯತಾಲಕ್ಷಣಕ್ಕೆ ಮಣಿಕಾರ ಹೇಳಿದ ದೋಷ

**ನ್ಯಾಯದೀಪ – ಮಣ್ಯುಕ್ತಮಪಿ ದೋಷಮಾಹ – ಕಿಂಚೇತಿ ॥ ಅಯೋಗ್ಯತಾ ಇತಿ ॥ 'ಅಗ್ನಿನಾ ಸಿಂಚೇತ್' ಇತ್ಯಾದಾವಪಿ ಶಬ್ದಾರ್ಥತ್ವಾದಿನಾ ಸಾಜಾತ್ಯಸ್ಯ ಸತ್ವಾತ್ ಇತಿ ಭಾವಃ ।**

ಅನುವಾದ - ಮಣಿಗ್ರಂಥದಲ್ಲಿ ಹೇಳಿದ ದೋಷವನ್ನೂ ಸಹ 'ಕಿಂಚ' ಎಂಬ ವಾಕ್ಯದಿಂದ ಹೇಳು-

ತ್ತಿದ್ದಾರೆ. 'ಅಯೋಗ್ಯತಾ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - 'ಅಗ್ನಿನಾ ಸಿಂಚೇತ್' ಮುಂತಾದ ಸ್ಥಳಗಳಲ್ಲೂ ಸಹ ಶಬ್ದಾರ್ಥತ್ವರೂಪದಿಂದ ಸಾಜಾತ್ಯವು ಇದೆ ಎಂದು.

ವಿವರಣೆ - 'ಸಜಾತೀಯೇ ಅನ್ವಯದರ್ಶನಂ ಯೋಗ್ಯತಾ' ಎಂಬ ಲಕ್ಷಣಕ್ಕೆ ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿ ಬರುತ್ತದೆ ಎಂದು ಗ್ರಂಥಕಾರರು ಹೇಳಿದರು. ಈ ದೋಷವನ್ನು ಮಣಿಗ್ರಂಥದಲ್ಲಿಯೇ ಲಕ್ಷಣ ಪರಿಷ್ಕಾರ ಮಾಡುವ ಸಂದರ್ಭದಲ್ಲಿ ಮಣಿಕಾರನು ಹೇಳಿರುತ್ತಾನೆ. ಅದನ್ನು ಗ್ರಂಥಕಾರರು ಇಲ್ಲಿ ಸಂಗ್ರಹಿಸಿದ್ದಾರೆ.

'ಯೋಗ್ಯಾಯೋಗ್ಯಸಾಧಾರಣಂ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ವಾಕ್ಯಗಳು ಎರಡುವಿಧ.

1 ಯೋಗ್ಯವಾಕ್ಯ . 2 ಅಯೋಗ್ಯವಾಕ್ಯ ಎಂದು

1. 'ಜಲೇನ ಸಿಂಚತಿ ' ಎಂಬುದು ಯೋಗ್ಯವಾಕ್ಯಕ್ಕೆ ಉದಾಹರಣೆ.

2. 'ಅಗ್ನಿನಾ ಸಿಂಚತಿ' ಎಂಬುದು ಅಯೋಗ್ಯವಾಕ್ಯಕ್ಕೆ ಉದಾಹರಣೆ.

ಈ ಎರಡು ವಾಕ್ಯಗಳಲ್ಲಿ ಉಭಯಸಾಧಾರಣವಾದ ಧರ್ಮವನ್ನು ಹೇಳಲು ಬರುತ್ತದೆ. ಅಗ್ನಿ ಮತ್ತು ಜಲಗಳಿಗೆ ದ್ರವ್ಯತ್ವೇನ ಸಾಜಾತ್ಯವಿದೆ. ಭೂತತ್ವೇನ ಸಾಜಾತ್ಯವಿದೆ. ಶಬ್ದಾರ್ಥತ್ವೇನ ಸಾಜಾತ್ಯವಿದೆ (ಎರಡು ವಾಕ್ಯಗಳಲ್ಲಿರುವ ಶಬ್ದಗಳಿಗೂ ಅರ್ಥವಿರುವ ಪ್ರಯುಕ್ತ). ಆದ್ದರಿಂದ ಯಥಾಕಥಂಚಿತ್ ಸಜಾತೀಯವಾದ್ದರಲ್ಲಿ ಅನ್ವಯ ಕಂಡಿರಬೇಕು ಎಂದಷ್ಟೇ ಹೇಳಿದರೆ, ದುಷ್ಟವಾದ ಯೋಗ್ಯತಾರಹಿತವಾದ ವಾಕ್ಯಗಳಲ್ಲೂ ಯೋಗ್ಯತಾವನ್ನು ಅಂಗೀಕರಿಸಬೇಕಾಗುತ್ತದೆ ಎಂದಭಿಪ್ರಾಯ.

## ಮಣಿಗ್ರಂಥದ ವ್ಯಾಖ್ಯಾನದಲ್ಲಿ ಯೋಗ್ಯತಾಲಕ್ಷಣಕ್ಕೆ ಹೇಳಿದ ದೋಷ

**ನ್ಯಾಯದೀಪ – ಮಣಿವ್ಯಾಖ್ಯಾತೃಭಿರುಕ್ತಮಾಹ – ತಾತ್ಪರ್ಯವಿಷಯೇತಿ ॥ ಅದ್ಯಜಾತ ಇತಿ ॥ ಅದ್ಯಜಾತತ್ವೇನ ರೂಪೇಣ ತದನ್ವಯಸ್ಯ ಇತಃ ಪೂರ್ವಂ ಕ್ವಾಪ್ಯದರ್ಶನಾತ್ ಇತಿ ಭಾವಃ ।**

ಅನುವಾದ - 'ತಾತ್ಪರ್ಯವಿಷಯ' ಎಂಬ ಶಬ್ದದಿಂದ ಮಣಿವ್ಯಾಖ್ಯಾನಕಾರರು ಹೇಳಿದ ದೋಷ-ಗಳನ್ನು ಹೇಳುತ್ತಿದ್ದಾರೆ. 'ಅದ್ಯ ಜಾತಃ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಇವತ್ತು ಹುಟ್ಟಿದ ಮಗುವಿಗೆ ಅದ್ಯಜಾತತ್ವರೂಪದಿಂದ ಸಾದೃಶ್ಯವು ಮಗು ಹುಟ್ಟುವ ಮುಂಚೆ ಎಲ್ಲೂ ಕಂಡಿಲ್ಲವಾದ್ದರಿಂದ ಎಂದು ತಿಳಿಯಬೇಕು.

ವಿವರಣೆ - 'ತಾತ್ಪರ್ಯವಿಷಯೀಭೂತಾನ್ವಯಪ್ರತೀತಿಯೋಗಿತಾವಚ್ಛೇದಕಧರ್ಮೇಣ ಸಜಾತೀಯತ್ವವನ್ನು ಯೋಗ್ಯತಾಲಕ್ಷಣದಲ್ಲಿ ವಿವಕ್ಷಿಸಿದಾಗ 'ಅದ್ಯಜಾತಃ ಪಯಃ ಪಿಬತಿ' ಎಂಬ ಸ್ಥಳದಲ್ಲಿ ಯೋಗ್ಯತೆಯನ್ನು ಉಪಪಾದನೆ ಮಾಡಲು ಸಾಧ್ಯವಿಲ್ಲ. ಇಲ್ಲಿ ಅದ್ಯ-ಜಾತತ್ವೇನ ರೂಪೇಣ ಅದ್ಯಜಾತತ್ವದ ಅನ್ವಯವು ಈ ಶಿಶುಜನನದ ಮೊದಲು ಇರ-ಲಿಲ್ಲ. ಮುಂದೆಯೂ ಇರುವುದಿಲ್ಲ. ಇವತ್ತು ನಾಳೆ, ನಿನ್ನೆ, ಮೊನ್ನೆ ಮುಂತಾದ ಕಾಲ-ವಾಚಕಶಬ್ದಗಳಿಗೆ ಬೇರೆ ಕಾಲದಲ್ಲಿ ಅನ್ವಯಸಾಜಾತ್ಯವನ್ನು ಹೇಳಲು ಬರುವುದಿಲ್ಲ.

ವಿಶೇಷವಿಚಾರ - ಪ್ರಶ್ನೆ - 'ಸಜಾತೀಯವಾದ್ದರಲ್ಲಿ ಅನ್ವಯವು ಕಂಡಿರಬೇಕು' ಎಂಬುದು ಯೋಗ್ಯತಾಲಕ್ಷಣವಾಗಿದೆ. 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಸಜಾತೀಯವಾದ ಬೇರೆ ಅಗ್ನಿಯಲ್ಲಿ ಸೇಚನಕರ್ಮವು ಕಂಡಿಲ್ಲವಾದ್ದರಿಂದ ಈ ವಾಕ್ಯವು ಅಪ್ರಮಾಣವಾಗಿದೆ. ಈ ವಾಕ್ಯದಲ್ಲಿ ಯೋಗ್ಯತಾ ಇರುವುದಿಲ್ಲವೆಂಬ ದೋಷವನ್ನು ಹಿಂದೆ ಹೇಳಲಾಯಿತು. ಈ ದೋಷದ ಪರಿಹಾರಕ್ಕಾಗಿ ಸಜಾತೀಯತ್ವವನ್ನು ಯಾವುದೋ ಒಂದು ರೂಪದಿಂದ ಹೇಳಿದರೆ ಸಾಕು. ಅದೇ ಧರ್ಮದಿಂದ ಸಾಜಾತ್ಯವು ಇರಬೇಕಾಗಿಲ್ಲ.

'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಅಗ್ನಿಗೆ ಜಲವು ಭೂತತ್ವೇನ ರೂಪೇಣ ಸಜಾತೀಯವಾಗಿದೆ. ಅಥವಾ 'ಅಗ್ನಿನಾ' ಎಂಬ ಪದಕ್ಕೆ 'ಅಗ್ನಿಯಿಂದ' ಎಂದರ್ಥ. 'ಸಿಂಚತಿ' ಎಂಬ ಪದಕ್ಕೆ 'ಸೇಚನ ಮಾಡುತ್ತಾನೆ' ಎಂದರ್ಥ. ಈ ಎರಡು ಶಬ್ದಗಳಿಗೂ ಶಬ್ದಾರ್ಥತ್ವ ಎಂಬ ಧರ್ಮದಿಂದ ಸಾಜಾತ್ಯವಿದೆ. ಅಥವಾ ಅಗ್ನಿ ಮತ್ತು ಜಲಗಳು ಎರಡೂ ಭೂತಪದಾರ್ಥಗಳಾದ್ದರಿಂದ ಭೂತತ್ವೇನರೂಪೇಣ ಸಾಜಾತ್ಯವಿದೆ. ಹೀಗೆ 'ಶಬ್ದಾರ್ಥತ್ವರೂಪಧರ್ಮ' ಅಥವಾ 'ಭೂತತ್ವರೂಪಧರ್ಮ' ಅಥವಾ 'ದ್ರವ್ಯತ್ವರೂಪ-ಧರ್ಮ'ದಿಂದ ಸಜಾತೀಯವಾದ 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಸೇಚನ ಕರ್ಮಕ್ಕೆ ಅನ್ವಯ ಕಂಡಿದೆ. ಆದ್ದರಿಂದ ಯಥಾಕಥಂಚಿತ್ ಸಜಾತೀಯತ್ವವು ಇಲ್ಲಿ ವಿವಕ್ಷಿತವಾಗಿದೆ.

ಆದ್ದರಿಂದ 'ಸಜಾತೀಯೇ ಅನ್ವಯದರ್ಶನಂ' ಎಂಬ ವಾಕ್ಯಕ್ಕೆ 'ಯಥಾಕಥಂಚಿತ್ ಸಜಾತೀಯೇ ಅನ್ವಯದರ್ಶನಂ' ಎಂದರ್ಥ. ಹೀಗೆ ವಿವಕ್ಷಿಸಿದಾಗ ಅನಾಪ್ತವಾಕ್ಯದಲ್ಲಿ ಅವ್ಯಾಪ್ತಿದೋಷ ಹೇಗೆ ಬರುತ್ತದೆ?

ಉತ್ತರ - ಹೀಗೆ ಹೇಳಬಾರದು. ಯಥಾಕಥಂಚಿತ್ ಸಾದೃಶ್ಯವು ಯೋಗ್ಯವಾದ ವಾಕ್ಯದಲ್ಲಿ ಹಾಗೂ ಅಯೋಗ್ಯವಾದ ವಾಕ್ಯದಲ್ಲಿ ಸಾಧಾರಣವಾಗಿದೆ. ಉದಾಹರಣೆ - 'ಅಗ್ನಿನಾ ಸಿಂಚತಿ' ಎಂಬ ವಾಕ್ಯವು ಅಯೋಗ್ಯವಾಕ್ಯವಾಗಿದೆ. ಲೋಕದಲ್ಲಿ ಎಲ್ಲೂ ಸಹ ಇಂತಹ ಅಗ್ನಿಕರಣಕಸೇಚನಕರ್ಮವು ದೃಷ್ಟವಾಗಿಲ್ಲ. ಯಥಾಕಥಂಚಿತ್ ಸಾದೃಶ್ಯವನ್ನು ಹೇಳಿದಾಗ ಲೋಕದಲ್ಲಿ ಅಯೋಗ್ಯವಾಕ್ಯವೇ ಇರುವುದಿಲ್ಲ ಎಂದಾಗಬೇಕಾಗುತ್ತದೆ.

## ಯೋಗ್ಯತಾಲಕ್ಷಣದ ಪರಿಷ್ಕಾರ

ಪ್ರಶ್ನೆ - ಲಕ್ಷಣದಲ್ಲಿ ಯಥಾಕಥಂಚಿತ್ ಸಜಾತೀಯತ್ವವನ್ನು ವಿವಕ್ಷಿಸದೇ ಪದಾರ್ಥತಾವಚ್ಛೇದಕಧರ್ಮದಿಂದ ಸಾಜಾತ್ಯವನ್ನು ಹೇಳುತ್ತೇವೆ. 'ಪದಾರ್ಥತಾವಚ್ಛೇದಕಧರ್ಮೇಣ ಸಜಾತೀಯೇ ಅನ್ವಯದರ್ಶನಂ ಯೋಗ್ಯತಾ' ಎಂದು ಲಕ್ಷಣವನ್ನು ಪರಿಷ್ಕಾರ ಮಾಡುತ್ತೇವೆ.

ಲಕ್ಷಣಸಮನ್ವಯ ಹೀಗಿದೆ - 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ 'ಪದಾರ್ಥ' ಎಂದರೆ ಜಲ. 'ಪದಾರ್ಥತಾವಚ್ಛೇದಕಧರ್ಮ' ಎಂದರೆ 'ಜಲತ್ವ'. ಜಲತ್ವೇನ ರೂಪೇಣ ಸಜಾತೀಯವಾದದ್ದು ಮತ್ತೊಂದು ಜಲ. ಅದರಲ್ಲಿ ಸೇಚನಕರ್ಮಕ್ಕೆ ಅನ್ವಯವು ಇರುತ್ತದೆ. ಆದ್ದರಿಂದ 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಯೋಗ್ಯತೆಯ ಲಕ್ಷಣವು ಬರುತ್ತದೆ.

'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಈ ಯೋಗ್ಯತಾಲಕ್ಷಣವು ಬರುವುದಿಲ್ಲ. ಈ ವಾಕ್ಯದಲ್ಲಿ 'ಪದಾರ್ಥ' ಎಂದರೆ 'ಅಗ್ನಿ'. ಪದಾರ್ಥತಾವಚ್ಛೇದಕಧರ್ಮ ಎಂದರೆ 'ಅಗ್ನಿತ್ವ'. 'ತಾದೃಶಧರ್ಮರೂಪೇಣ' ಎಂದರೆ 'ಅಗ್ನಿತ್ವೇನ ರೂಪೇಣ' ಸಜಾತೀಯವಾದದ್ದು ಮತ್ತೊಂದು ಅಗ್ನಿ. ಇದರಲ್ಲಿ ಸೇಚನಕ್ರಿಯೆಗೆ ಅನ್ವಯವು ಇರುವುದಿಲ್ಲ. ಆದ್ದರಿಂದ ಅತಿವ್ಯಾಪ್ತಿ ದೋಷ ಬರುವುದಿಲ್ಲ.

ಅಥವಾ 'ಪದಾರ್ಥತಾವಚ್ಛೇದಕಧರ್ಮ' ಎಂಬ ಶಬ್ದದ ಬದಲು 'ತಾತ್ಪರ್ಯವಿಷಯೀ-

ಭೂತಾನ್ವಯಪ್ರತಿಯೋಗಿತಾವಚ್ಛೇದಕಧರ್ಮ' ಎಂಬ ಶಬ್ದವನ್ನು ಯೋಗ್ಯತಾಲಕ್ಷಣದಲ್ಲಿ ನಿವೇಶ ಮಾಡುತ್ತೇವೆ.

ಲಕ್ಷಣ ಸಮನ್ವಯ ಹೀಗಿದೆ - 'ಜಲೇನ ಸಿಂಚತಿ' ಎಂಬಲ್ಲಿ ಈ ವಾಕ್ಯಕ್ಕೆ ತಾತ್ಪರ್ಯವು ಜಲಸೇಚನದಲ್ಲಿದೆ. ತಾತ್ಪರ್ಯವಿಷಯೀಭೂತವಾದದ್ದು ಜಲ. ಇದಕ್ಕೆ ಸೇಚನಕರ್ಮದಲ್ಲಿ ಅನ್ವಯವು ಇರುತ್ತದೆ. ಈ ಅನ್ವಯಕ್ಕೆ ಪ್ರತಿಯೋಗಿಯಾದದ್ದು ಜಲ. ಪ್ರತಿಯೋಗಿತಾವಚ್ಛೇದಕಧರ್ಮ ಎಂದರೆ ಜಲತ್ವ. ಜಲತ್ವೇನ ರೂಪೇಣ ಸಜಾತೀಯವಾದದ್ದು ಮತ್ತೊಂದು ಜಲ. ಅಲ್ಲಿ ಸೇಚನಕರ್ಮಕ್ಕೆ ಅನ್ವಯ ದೃಷ್ಟವಾಗಿದೆ.

## ಅನಾಪ್ತವಾಕ್ಯದಲ್ಲಿ ಯೋಗ್ಯತಾಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ

'ತಾತ್ಪರ್ಯವಿಷಯೀಭೂತಾನ್ವಯಪ್ರತಿಯೋಗಿತಾವಚ್ಛೇದಕಧರ್ಮೇಣ ಸಜಾತೀಯೇ ಅನ್ವಯದರ್ಶನಂ ಯೋಗ್ಯತಾ' ಎಂಬುದಾಗಿ ಲಕ್ಷಣವನ್ನು ಪರಿಷ್ಕಾರ ಮಾಡಿದಾಗ ಅನಾಪ್ತವಾಕ್ಯದಲ್ಲಿ ಮತ್ತು 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಅತಿವ್ಯಾಪ್ತಿದೋಷವು ಬರುವುದಿಲ್ಲ.

ಅಭಿಪ್ರಾಯ ಹೀಗಿದೆ - 'ಪಯಸಾ ಸಿಂಚತಿ' ಎಂಬ ಅನಾಪ್ತವಾಕ್ಯದ ತಾತ್ಪರ್ಯವು ಜಲಸೇಚನದಲ್ಲಿ ಇರುವುದಿಲ್ಲ. ಪ್ರತಾರಣಕ್ಕಾಗಿ ಹೀಗೆ ವಾಕ್ಯಪ್ರಯೋಗವನ್ನು ಮಾಡಿದ್ದರಿಂದ ಈ ವಾಕ್ಯದ ಅಭಿಪ್ರಾಯವು ಪ್ರತಾರಣೆಯೇ ಆಗಿರುತ್ತದೆ.

ಆದ್ದರಿಂದ ಈ ವಾಕ್ಯದಲ್ಲಿ ತಾತ್ಪರ್ಯವಿಷಯೀಭೂತಾನ್ವಯಪ್ರತಿಯೋಗಿತಾವಚ್ಛೇದಕಧರ್ಮ ಎಂದರೆ ಜಲತ್ವವಾಗಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷಣವು ಬರುವುದಿಲ್ಲ.

'ಅಗ್ನಿನಾ ಸಿಂಚತಿ' ಎಂಬಲ್ಲಿ ತಾತ್ಪರ್ಯವಿಷಯೀಭೂತಾನ್ವಯಪ್ರತಿಯೋಗಿತಾವಚ್ಛೇದಕಧರ್ಮ ಎಂದರೆ ಅಗ್ನಿತ್ವ. ಅಗ್ನಿತ್ವೇನ ರೂಪೇಣ ಸಜಾತೀಯವಾದ ಮತ್ತೊಂದು ಅಗ್ನಿಯಲ್ಲಿ ಸೇಚನಕರ್ಮಕ್ಕೆ ಅನ್ವಯ ಇರುವುದಿಲ್ಲವಾದ್ದರಿಂದ ಈ ವಾಕ್ಯದಲ್ಲಿ ಯೋಗ್ಯತೆಯ ಲಕ್ಷಣವು ಬರುವುದಿಲ್ಲ.

## ಮಣಿವ್ಯಾಖ್ಯಾನದಲ್ಲಿ ಹೇಳಿದ ಯೋಗ್ಯತಾಲಕ್ಷಣ ಎಷ್ಟು ಸರಿ?

ಪ್ರಶ್ನೆ - 'ತಾತ್ಪರ್ಯವಿಷಯೀಭೂತಾನ್ವಯಪ್ರತಿಯೋಗಿತಾವಚ್ಛೇದಕಧರ್ಮೇಣ ಸಜಾತೀಯೇ ಅನ್ವಯದರ್ಶನಂ ಯೋಗ್ಯತಾ' ಎಂಬ ಲಕ್ಷಣವು ಹೇಗೆ ಸರಿ ?

ಉತ್ತರ - ಈ ಎರಡು ಲಕ್ಷಣವೂ ದುಷ್ಟವಾಗಿವೆ. 'ಅದ್ಯ ಜಾತಃ ಪಯಃ ಪಿಬತಿ' ಎಂಬ ವಾಕ್ಯಕ್ಕೆ ' ಇವತ್ತು ಹುಟ್ಟಿದ ಮಗುವು ಹಾಲನ್ನು ಕುಡಿಯುತ್ತದೆ' ಎಂದರ್ಥ. ಈ ವಾಕ್ಯದಲ್ಲಿ ಯೋಗ್ಯತಾ ಇದೆ. ಆದರೆ ಲಕ್ಷಣಸಮನ್ವಯ ಆಗುವುದಿಲ್ಲ.

'ಪದಾರ್ಥತಾವಚ್ಛೇದಕಧರ್ಮೇಣ ಸಜಾತೀಯೇ ಅನ್ವಯದರ್ಶನಂ' ಎಂಬುದು ಮೊದಲನೆಯ ಲಕ್ಷಣ. 'ಅದ್ಯ ಜಾತಃ ಪಯಃ ಪಿಬತಿ' ಎಂಬ ವಾಕ್ಯದಲ್ಲಿ ಪದಾರ್ಥವಾದದ್ದು ಇವತ್ತು ಹುಟ್ಟಿದ ಮಗು. ಪದಾರ್ಥತಾವಚ್ಛೇದಕಧರ್ಮ ಅಂದರೆ ಅದ್ಯಜಾತತ್ವ. ಅದ್ಯಜಾತತ್ವೇನ ರೂಪೇಣ ಸಜಾತೀಯವಾದ ಮತ್ತೊಂದು ಶಿಶುವೇ ಇಲ್ಲ. ಬೇರೆ ಮಕ್ಕಳು ಹಾಲು ಕುಡಿಯುವುದನ್ನು ನೋಡಿರುತ್ತೇವೆ. ಆದರೆ ಇಲ್ಲಿ ಪದಾರ್ಥತಾವಚ್ಛೇದಕಧರ್ಮವು ಅದ್ಯಜಾತತ್ವವಾಗಿದೆ. ನಿನ್ನೆ ಹುಟ್ಟಿದ ಮಗುವಿನಲ್ಲಿ ಅದ್ಯಜಾತತ್ವ ಎಂಬ ಧರ್ಮ ಇರುವುದಿಲ್ಲ. ಆದ್ದರಿಂದ ಅದ್ಯಜಾತತ್ವರೂಪೇಣ ಸಜಾತೀಯವಾದ ಮತ್ತೊಂದು ಶಿಶು ಇಲ್ಲವಾದ್ದರಿಂದ ಯೋಗ್ಯತಾ ಇರುವ ವಾಕ್ಯದಲ್ಲಿ ಯೋಗ್ಯತಾಲಕ್ಷಣದ ಸಮನ್ವಯವು ಆಗುವುದಿಲ್ಲ. ಆದ್ದರಿಂದ ಅವ್ಯಾಪ್ತಿದೋಷವು ಬರುತ್ತದೆ.

'ತಾತ್ಪರ್ಯವಿಷಯೀಭೂತಾನ್ವಯಪ್ರತಿಯೋಗಿತಾವಚ್ಛೇದಕಧರ್ಮೇಣ ಸಜಾತೀಯೇ ಅನ್ವಯದರ್ಶನಂ' ಎಂಬ ಲಕ್ಷಣದಲ್ಲೂ ಈ ದೋಷವು ಸಮಾನವಾಗಿದೆ. 'ಅದ್ಯ ಜಾತಃ ಪಯಃ ಪಿಬತಿ' ಎಂಬಲ್ಲಿ ಈ ವಾಕ್ಯಕ್ಕೆ ತಾತ್ಪರ್ಯವಿಷಯೀಭೂತವಾದ ಅನ್ವಯದಲ್ಲಿ ಪ್ರತಿಯೋಗಿಯಾದದ್ದು ಅದ್ಯಜಾತಶಿಶು. ಪ್ರತಿಯೋಗಿತಾವಚ್ಛೇದಕಧರ್ಮ ಅದ್ಯಜಾತತ್ವ. ಏತಾದೃಶವಾದ ಅದ್ಯಜಾತತ್ವರೂಪಧರ್ಮದಿಂದ ಸಜಾತೀಯವಾದ ಮತ್ತೊಂದು ಪದಾರ್ಥ ಇರುವುದಿಲ್ಲ. ಆದ್ದರಿಂದ ಸಜಾತೀಯೇ ಅನ್ವಯದರ್ಶನವೂ ಆಗುವುದಿಲ್ಲವಾದ್ದರಿಂದ ಲಕ್ಷಣಸಮನ್ವಯವಾಗದ ಕಾರಣ ಅವ್ಯಾಪ್ತಿದೋಷವು ಬಂದೇ ಬರುತ್ತದೆ. ಆದ್ದರಿಂದ ಮಣಿಕಾರ ಹೇಳಿದ ಯೋಗ್ಯತಾಲಕ್ಷಣವು ಅಸಾಧುವಾಗಿದೆ.

## ಮತ್ತೊಂದು ಬಗೆಯ ಯೋಗ್ಯತಾಲಕ್ಷಣ

**ತರ್ಕತಾಂಡವ – ನಾಪಿ ಸಮಭಿವ್ಯಾಹೃತಪದಾರ್ಥಸಂಸರ್ಗಾಭಾವವ್ಯಾಪ್ಯಧರ್ಮ-ಶೂನ್ಯತ್ವಂ ಯೋಗ್ಯತಾ ।**

ಅನುವಾದ - 'ಸಮಭಿವ್ಯಾಹೃತಪದಾರ್ಥಸಂಸರ್ಗಾಭಾವವ್ಯಾಪ್ಯಧರ್ಮಶೂನ್ಯತ್ವಂ' ಎಂಬುದನ್ನೂ ಕೂಡ ಯೋಗ್ಯತಾಲಕ್ಷಣವೆಂದು ಪರಿಗಣಿಸಬಾರದು.

## ಸಮಭಿವ್ಯಾಹೃತಶಬ್ದದ ವಿವರಣೆ

**ನ್ಯಾಯದೀಪ – ಸಮಭಿವ್ಯಾಹೃತೇತಿ ॥ ಸಮಭಿವ್ಯಾಹೃತಂ ಯತ್ಪದಂ ತದರ್ಥ-ನಿರೂಪಿತಸಂಸರ್ಗಸ್ಯ ಯೋಽಭಾವಃ ತದ್ವ್ಯಾಪ್ಯಧರ್ಮಶೂನ್ಯತ್ವಮ್ । ಯಥಾ 'ಜಲೇನ ಸಿಂಚತಿ' ಇತ್ಯಾದೌ ಸಮಭಿವ್ಯಾಹೃತಸೇಕರೂಪಪದಾರ್ಥಸಂಸರ್ಗಾ-ಭಾವವ್ಯಾಪ್ಯೋ ಧರ್ಮೋಽಗ್ನಿತ್ವಾದಿಃ, ತಥಾ ಸಮಭಿವ್ಯಾಹೃತಜಲಪದಾರ್ಥ-ಸಂಸರ್ಗಾಭಾವವ್ಯಾಪ್ಯೋ ದಾಹತ್ವಾದಿಃ ತಾದೃಶಧರ್ಮಶೂನ್ಯತ್ವಮಸ್ತಿ । 'ಅಗ್ನಿನಾ ಸಿಂಚತಿ' ಇತಿ, 'ಜಲೇನ ದಹತಿ' ಇತ್ಯಾದೌ ತು ತಾದೃಶಧರ್ಮವತ್ತ್ವಾತ್ ಅಯೋಗ್ಯತಾ ಇತ್ಯರ್ಥಃ ।**

ಅನುವಾದ - 'ಸಮಭಿವ್ಯಾಹೃತ' ಶಬ್ದದ ಅಭಿಪ್ರಾಯ ಹೀಗಿದೆ - ಸಮಭಿವ್ಯಾಹೃತವಾದ ಯಾವ ಪದವಿದೆಯೋ ಅದರ ಅರ್ಥದಿಂದ ನಿರೂಪಿತವಾದ ಸಂಸರ್ಗದ ಯಾವ ಅಭಾವವಿದೆಯೋ ತದ್-ವ್ಯಾಪ್ಯಧರ್ಮಶೂನ್ಯವಾಗಿರುವಿಕೆ ಎಂದು.

ಉದಾಹರಣೆ - 'ಜಲೇನ ಸಿಂಚತಿ' 'ನೀರಿನಿಂದ ಪ್ರೋಕ್ಷಣೆ ಮಾಡುತ್ತಾನೆ' ಇವೇ ಮೊದಲಾದ ಸ್ಥಳಗಳಲ್ಲಿ ಸಮಭಿವ್ಯಾಹೃತವಾದ 'ಸೇಕ'ರೂಪ ಪದಾರ್ಥಸಂಸರ್ಗಾಭಾವವ್ಯಾಪ್ಯವಾದ ಧರ್ಮ ಎಂದರೆ ಅಗ್ನಿತ್ವಾದಿಧರ್ಮಗಳು. ಹಾಗೂ ಸಮಭಿವ್ಯಾಹೃತವಾದ ಜಲರೂಪಪದಾರ್ಥಸಂಸರ್ಗಾಭಾವದಿಂದ ವ್ಯಾಪ್ಯವಾದ ಧರ್ಮ ಎಂದರೆ ದಾಹಕತ್ವಾದಿಧರ್ಮಗಳು. ಏತಾದೃಶಧರ್ಮಶೂನ್ಯತ್ವವು 'ಜಲೇನ

ಸಿಂಚತಿ' ಎಂಬಲ್ಲಿ ಇದೆ. 'ಅಗ್ನಿನಾ ಸಿಂಚತಿ' ಅಥವಾ 'ಜಲೇನ ದಹತಿ' ಮುಂತಾದ ಸ್ಥಳಗಳಲ್ಲಿ ಹಿಂದೆ ಹೇಳಿದ ಧರ್ಮವೇ ಇರುತ್ತದೆ. ಧರ್ಮಶೂನ್ಯತ್ವವು ಇರುವುದಿಲ್ಲವಾದ್ದರಿಂದ ಈ ವಾಕ್ಯಗಳಲ್ಲಿ ಯೋಗ್ಯತೆಯು ಇಲ್ಲವೆಂದಭಿಪ್ರಾಯ.

## ಈ ಯೋಗ್ಯತಾಲಕ್ಷಣಕ್ಕೆ ಅವ್ಯಾಪ್ತಿ ಹಾಗೂ ಅತಿವ್ಯಾಪ್ತಿ

**ತರ್ಕತಾಂಡವ – 'ಪ್ರಮೇಯಮಭಿಧೇಯಮ್' ಇತ್ಯಾದೌ ಸಂಸರ್ಗಾಭಾವಸ್ಯ ಅಪ್ರಸಿದ್ಧ್ಯಾ ನ್ಯಾಯಮತೇ ತತ್ರ ಅವ್ಯಾಪ್ತೇಃ । 'ಸಮಭಿವ್ಯಾಹೃತಪದಾರ್ಥ-ಸಂಸರ್ಗೋ ಯೋಗ್ಯತಾ' ಇತ್ಯೇತಾವತೈವ ಪೂರ್ಣತ್ವೇನ ಶೇಷವೈಯರ್ಥ್ಯಾಚ್ಚ । ಅನಾಪ್ತವಾಕ್ಯೇ ಅತಿವ್ಯಾಪ್ತೇಶ್ಚ ।**

ಅನುವಾದ- ಏಕೆಂದರೆ 'ಪ್ರಮೇಯಂ' 'ಅಭಿಧೇಯಮ್' ಮುಂತಾದ ಸ್ಥಳಗಳಲ್ಲಿ ಸಂಸರ್ಗಾಭಾವವು ಅಪ್ರಸಿದ್ಧವಾದ್ದರಿಂದ ನ್ಯಾಯಮತದಂತೆ ಈ ಸ್ಥಳಗಳಲ್ಲಿ ಅವ್ಯಾಪ್ತಿದೋಷವು ಬರುತ್ತದೆ. 'ಸಮಭಿವ್ಯಾಹೃತ-ಪದಾರ್ಥಸಂಸರ್ಗಃ ಯೋಗ್ಯತಾ' ಎಂದಷ್ಟೇ ಲಕ್ಷಣವನ್ನು ಹೇಳಿದರೂ ಕೂಡ ಯಾವುದೇ ದೋಷವಿಲ್ಲ-ವಾದ್ದರಿಂದ 'ಸಂಸರ್ಗಾಭಾವವ್ಯಾಪ್ಯಧರ್ಮಶೂನ್ಯತ್ವಂ' ಎಂಬ ಲಕ್ಷಣಶೇಷವು ವ್ಯರ್ಥವಾಗುತ್ತದೆ. ಹಾಗೂ ಈ ಲಕ್ಷಣಕ್ಕೆ ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿದೋಷವೂ ಬರುತ್ತದೆ.

## ನ್ಯಾಯಮತದ ಅಭಿಪ್ರಾಯ

**ನ್ಯಾಯದೀಪ – ಸಿದ್ಧಾಂತೇ ಧರ್ಮಮಾತ್ರಸ್ಯ ವ್ಯತಿರೇಕಿತ್ವಾತ್ ಘಟನಿಷ್ಠ-ಪ್ರಮೇಯತ್ವಾದೇಃ ಪಟೇ ತನ್ನಿಷ್ಠಪ್ರಮೇಯತ್ವಾದೇರ್ಘಟೇಽಸತ್ವೇನ ಪ್ರಮೇ-ಯತ್ವಾದಿಸಂಸರ್ಗಾಭಾವಸ್ಯಾಪಿ ಪ್ರಸಿದ್ಧತ್ವಾತ್ ಆಹ – ನ್ಯಾಯಮತ ಇತಿ ॥ ತನ್ಮತೇ ತಸ್ಯ ಕೇವಲಾನ್ವಯಿತ್ವಾತ್ ಇತಿ ಭಾವಃ ।**

ಅನುವಾದ - ಸಿದ್ಧಾಂತದಲ್ಲಿ ಕೇವಲ ಧರ್ಮವು ವ್ಯತಿರೇಕಿಧರ್ಮವಾಗಿದೆ. ಘಟನಿಷ್ಠವಾದ ಪ್ರಮೇ-ಯತ್ವಾದಿಗಳು ಪಟದಲ್ಲಿಲ್ಲ. ಪಟನಿಷ್ಠವಾದ ಪ್ರಮೇಯತ್ವಾದಿಗಳು ಘಟದಲ್ಲಿ ಇಲ್ಲ, ಆದ್ದರಿಂದ

ಪ್ರಮೇಯತ್ವ, ಅಭಿಧೇಯತ್ವಾದಿಸಂಸರ್ಗಾಭಾವವೂ ಪ್ರಸಿದ್ಧವಾಗಿದೆ. ಆದ್ದರಿಂದ 'ನ್ಯಾಯಮತೇ' ಎಂದು ಹೇಳಿದ್ದಾರೆ. ನ್ಯಾಯಮತದಂತೆ ಅಭಿಧೇಯತ್ವಾದಿಗಳು ಕೇವಲಾನ್ವಯಿಧರ್ಮವಾಗಿವೆ.

ವಿವರಣೆ - ನೈಯಾಯಿಕಮತದಂತೆ ಪ್ರಮೇಯತ್ವ, ಅಭಿಧೇಯತ್ವ ಮುಂತಾದ ಧರ್ಮಗಳು ಕೇವಲಾನ್ವಯಿಧರ್ಮಗಳು. ಕೇವಲಾನ್ವಯಿಧರ್ಮಗಳಿಗೆ ಸಂಸರ್ಗಾಭಾವವನ್ನು ಹೇಳಲು ಸಾಧ್ಯವಿಲ್ಲ. ಎಲ್ಲಾ ಕಡೆಯಲ್ಲೂ ಅಭಿಧೇಯತ್ವವೇ ಇರುತ್ತದೆ. ಇದರಂತೆ ಪ್ರಮೇಯತ್ವವೂ ಇರುತ್ತದೆ. ಇವುಗಳ ಸಂಸರ್ಗವೇ ಎಲ್ಲಾ ಸ್ಥಳಗಳಲ್ಲಿ ಇರುವುದರಿಂದ ತದಭಾವವನ್ನು ಹೇಳಲು ಬರುವುದಿಲ್ಲ. ಸಂಸರ್ಗಾಭಾವವು ಅಪ್ರಸಿದ್ಧ. ಆದ್ದರಿಂದ ಯೋಗ್ಯತಾಲಕ್ಷಣವನ್ನು ಹೇಳಲು ಬರುವುದಿಲ್ಲ.

ಅಭಿಪ್ರಾಯ ಹೀಗಿದೆ - 'ಪ್ರಮೇಯಂ ಅಭಿಧೇಯಂ' ಎಂದು ಒಂದು ವಾಕ್ಯ. ಇದರಲ್ಲಿ ಸಮಭಿವ್ಯಾಹೃತವಾದ ಪದಾರ್ಥ ಎಂದರೆ ಅಭಿಧೇಯತ್ವ ಪ್ರಮೇಯಶಬ್ದದ ಜೊತೆಗೆ ಹೇಳಿದ ಶಬ್ದವೆಂದರೆ 'ಅಭಿಧೇಯಂ' ಎಂಬುದು. ಇದರ ಸಂಸರ್ಗಾಭಾವವು ಎಲ್ಲಿಯೂ ಸಹ ಇರುವುದಿಲ್ಲ. ಆದ್ದರಿಂದ ತದಭಾವವ್ಯಾಪ್ಯವಾದ ಧರ್ಮವೇ ಅಪ್ರಸಿದ್ಧವಾಗಿದೆ. ಆದ್ದರಿಂದ ತಾದಶಧರ್ಮಶೂನ್ಯತ್ವವನ್ನು ಸಹ ಹೇಳಲು ಸಾಧ್ಯವಿಲ್ಲ. ಅಭಿಧೇಯತ್ವಸಂಸರ್ಗಾಭಾವ ವ್ಯಾಪ್ಯವಾದ ಯಾವುದೋ ಒಂದು ಧರ್ಮವಿದೆ. ಅಂತಹ ಧರ್ಮವು ಪ್ರಮೇಯದಲ್ಲಿಲ್ಲವೆಂದು ಹೇಳಬೇಕು. ಆದರೆ ಹೀಗೆ ಹೇಳಲು ಸಾಧ್ಯವಿಲ್ಲ ಎಂದಭಿಪ್ರಾಯ. ಅಭಿಧೇಯತ್ವ ಕೇವಲಾನ್ವಯ ಧರ್ಮವಾಗಿರುವುದೇ ಇಲ್ಲಿ ಕಾರಣ.

## ಪೂರ್ವವಾದಿಗಳ ಯೋಗ್ಯತಾಲಕ್ಷಣಕ್ಕೆ ದೋಷ

**ನ್ಯಾಯದೀಪ – ಸಿದ್ಧಾಂತೇ ತು ಕಥಮ್ ಇತ್ಯತೋ ದೋಷಾಂತರಮಾಹ – ಸಮಭಿವ್ಯಾಹೃತೇತಿ ॥ ಅನಾಪ್ತೇತಿ ॥ 'ಪಯಸಾ ಸಿಂಚತಿ' ಇತ್ಯಾದ್ಯನಾಪ್ತವಾಕ್ಯ ಇತ್ಯರ್ಥಃ ।**

ಅನುವಾದ - ಸಿದ್ಧಾಂತದಲ್ಲಿ ಹೇಗೆ ಯೋಜನಾ ಮಾಡಿಕೊಳ್ಳಬೇಕು? ಎಂಬ ಪ್ರಶ್ನೆಗೆ ಉತ್ತರವಾಗಿ 'ಸಮಭಿವ್ಯಾಹೃತ' ಎಂಬ ವಾಕ್ಯವು ಹೊರಟಿದೆ. 'ಅನಾಪ್ತವಾಕ್ಯ' ಎಂಬ ಶಬ್ದಕ್ಕೆ 'ಪಯಸಾ ಸಿಂಚತಿ' ಮುಂತಾದ ಅನಾಪ್ತವಾಕ್ಯದಲ್ಲಿ ಎಂದರ್ಥ.

## ಮತ್ತೆರಡು ಯೋಗ್ಯತಾಲಕ್ಷಣಗಳ ನಿರಾಕರಣೆ

**ತರ್ಕತಾಂಡವ – ಏತೇನೈವ 'ಸಮಭಿವ್ಯಾಹೃತಪದಾರ್ಥಸಂಸರ್ಗವ್ಯಾಪ್ಯಧರ್ಮವತ್ತ್ವಂ ವಾ, ಅನ್ವಯಪ್ರತಿಯೋಗಿತಾವಚ್ಛೇದಕಧರ್ಮವತ್ತ್ವಂ ವಾ ಯೋಗ್ಯತಾ' ಇತಿ ನಿರಸ್ತಮ್ । ಉಕ್ತರೀತ್ಯಾ ಶೇಷವೈಯರ್ಥ್ಯಾತ್ । ಅನಾಪ್ತವಾಕ್ಯೇ ಅತಿವ್ಯಾಪ್ತೇಶ್ಚ ।**

ಅನುವಾದ - ಹೀಗೆ ಹೇಳಿದ್ದರಿಂದ 'ಸಮಭಿವ್ಯಾಹೃತಪದಾರ್ಥಸಂಸರ್ಗವ್ಯಾಪ್ಯಧರ್ಮವತ್ತ್ವಂ' ಎಂಬ 'ಸಮಭಿವ್ಯಾಹೃತಪದಾರ್ಥಸಂಸರ್ಗಾನ್ವಯಪ್ರತಿಯೋಗಿತಾವಚ್ಛೇದಕಧರ್ಮವತ್ತ್ವಂ' ಎಂಬ ಎರಡುವಿಧದ ಯೋಗ್ಯತಾಲಕ್ಷಣವನ್ನೂ ನಿರಾಸ ಮಾಡಿದಂತಾಯಿತು. ಈ ಎರಡು ಲಕ್ಷಣದಲ್ಲಿಯೂ ಸಹ ಶೇಷವು ವ್ಯರ್ಥವಾಗಿದೆ. ಹಾಗೂ ಅನಾಪ್ತವಾಕ್ಯದಲ್ಲಿ ಈ ಎರಡು ಲಕ್ಷಣಗಳಿಗೆ ಅತಿವ್ಯಾಪ್ತಿ ದೋಷವು ಬರುತ್ತದೆ

**ನ್ಯಾಯದೀಪ – ಕ್ರಮೇಣ ಪಕ್ಷದ್ವಯೇ ದೋಷಮಾಹ – ಉಕ್ತರೀತ್ಯೇತಿ ॥ 'ಸಮಭಿವ್ಯಾಹೃತಪದಾರ್ಥಸಂಸರ್ಗ ಇತ್ಯೇವ ಪೂರ್ತೇಃ' ಇತಿ ಭಾವಃ ।**

ಅನುವಾದ - ಕ್ರಮವಾಗಿ ಎರಡುಪಕ್ಷಗಳಲ್ಲಿ ದೋಷವನ್ನು 'ಉಕ್ತರೀತ್ಯಾ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಉಕ್ತರೀತ್ಯಾ' ಎಂದರೆ 'ಸಮಭಿವ್ಯಾಹೃತಪದಾರ್ಥಸಂಸರ್ಗ' ಎಂದಷ್ಟೇ ಲಕ್ಷಣವನ್ನು ಹೇಳಿದ್ದರಿಂದ ಲಕ್ಷಣವು ಪೂರ್ಣವಾಗುತ್ತದೆ ಎಂದಭಿಪ್ರಾಯ.

ವಿವರಣೆ - 'ಜಲೇನ ಸಿಂಚತಿ' ಎಂಬಲ್ಲಿ ಎರಡು ಶಬ್ದಗಳಿವೆ. 'ಜಲ' ಮತ್ತು 'ಸೇಚನ' ಇವುಗಳಲ್ಲಿ ಜಲ ಶಬ್ದದ ಜೊತೆಗೆ ಪ್ರಯೋಗ ಮಾಡಿದ ಮತ್ತೊಂದು ಶಬ್ದವೆಂದರೆ 'ಸಿಂಚತಿ' ಎಂಬ ಶಬ್ದ. ಇದರ ಅರ್ಥದ ಸಂಬಂಧ ಬೇರೆ ಕಡೆ ಇರಬಾರದು. ಹಾಗಿದ್ದಾಗ ಯೋಗ್ಯತಾ ಇರುತ್ತದೆ. ಇಲ್ಲದಿದ್ದರೆ ಯೋಗ್ಯತಾ ಇರುವುದಿಲ್ಲ. ಉದಾಹರಣೆ :- 'ಅಗ್ನಿನಾ ಸಿಂಚತಿ' ಎಂಬಲ್ಲಿ 'ಸಿಂಚತಿ' ಎಂಬ ಶಬ್ದದ ಜೊತೆಗೆ ಸಮಭಿವ್ಯಾಹೃತವಾದ ಶಬ್ದ ಎಂದರೆ 'ಅಗ್ನಿ' ಶಬ್ದ. 'ಸಿಂಚತಿ' ಶಬ್ದಕ್ಕೆ 'ಸೇಚನ' ಎಂದರ್ಥ. ಸೇಚನಸಂಸರ್ಗಾಭಾವವ್ಯಾಪ್ಯವಾದ ಧರ್ಮವೆಂದರೆ ಅಗ್ನಿತ್ವರೂಪವಾದ ಧರ್ಮ. 'ಯಃ ಯಃ ಅಗ್ನಿಃ ಸಃ ಸಃ ಸೇಚನಕರಣಂ ನ ಭವತಿ ಯತ್ರ ಯತ್ರ ಅಗ್ನಿತ್ವಂ ತತ್ರ ತತ್ರ ಸೇಚನಕರಣತ್ವಾಭಾವಃ' ಎಂದು

ವ್ಯಾಪ್ತಿಯಿದೆ. ಆದ್ದರಿಂದ ಸೇಚನಸಂಸರ್ಗಾಭಾವಕ್ಕೆ ವ್ಯಾಪ್ಯವಾದ ಧರ್ಮವೆಂದರೆ ಅಗ್ನಿತ್ವ. ತಾದೃಶಧರ್ಮವು ಅಗ್ನಿಯಲ್ಲಿ ಇದೆಯಾದ್ದರಿಂದ ಧರ್ಮಶೂನ್ಯತ್ವವು ಅಗ್ನಿಯಲ್ಲಿ ಇಲ್ಲ. ಇದರಂತೆ 'ಜಲೇನ ದಹತಿ' ಎಂಬುದು ಮತ್ತೊಂದು ವಾಕ್ಯ. ಇಲ್ಲಿ ಸಮಭಿವ್ಯಾಹೃತವಾದ ಪದಾರ್ಥ ಎಂದರೆ ಜಲರೂಪವಾದ ಪದಾರ್ಥ. ಇದರ ಸಂಬಂಧಾಭಾವವು ದಹನಕ್ರಿಯೆ-ಯಲ್ಲಿದೆ. ನೀರಿಗೂ ದಹನಕ್ರಿಯೆಗೂ ಸಂಬಂಧವಿಲ್ಲ ಎಂದಭಿಪ್ರಾಯ. ಆದ್ದರಿಂದ ಸಮಭಿವ್ಯಾಹೃತಜಲಪದಾರ್ಥಸಂಸರ್ಗಾಭಾವವ್ಯಾಪ್ಯದಾಹಕತ್ವ ಎಂಬ ಧರ್ಮವು 'ಜಲೇನ ದಹತಿ' ಎಂಬ ವಾಕ್ಯದಲ್ಲಿದೆ. ಧರ್ಮಶೂನ್ಯತ್ವವು ಇರುವುದಿಲ್ಲ. ಆದ್ದರಿಂದ ಈ ವಾಕ್ಯ-ಗಳು ಯೋಗ್ಯತಾವಿಲ್ಲದ ವಾಕ್ಯ ಎಂದು ಕರೆಸಿಕೊಳ್ಳುತ್ತವೆ.

'ಜಲೇನ ಸಿಂಚತಿ' ಎಂಬಲ್ಲಿ ಸೇಚನಕ್ರಿಯೆಗೆ ಬೇರೆ ಜಲದಲ್ಲಿ ಸಂಬಂಧವು ಕಾಣಿಸುತ್ತದೆ. ಆದ್ದರಿಂದ ಸಮಭಿವ್ಯಾಹೃತವಾದ ಜಲಪದಾರ್ಥದ ಸಂಸರ್ಗಾಭಾವವ್ಯಾಪ್ಯವಾದ ಧರ್ಮ ಎಂದರೆ ಸೇಚನ ರೂಪವಾದ ಧರ್ಮವಾಗುವುದಿಲ್ಲ, ಹೊರತು ಅಗ್ನಿತ್ವರೂಪವಾದ ಧರ್ಮ.

ಈ ಧರ್ಮವು ಅಗ್ನಿಯಲ್ಲಿ ಇದೆಯೇ ಹೊರತು ಜಲದಲ್ಲಿ ಇರುವುದಿಲ್ಲ. ಜಲದಲ್ಲಿ ಇರುವ ಧರ್ಮವು ಸೇಚನಸಂಸರ್ಗಾಭಾವದಿಂದ ವ್ಯಾಪ್ಯವಾದದ್ದಲ್ಲ. ವ್ಯಾಪ್ಯವಾದ ಧರ್ಮವು ಜಲದಲ್ಲಿ ಇರುವುದಿಲ್ಲ. ಆದ್ದರಿಂದ ಈ ವಾಕ್ಯದಲ್ಲಿ ಯೋಗ್ಯತಾ ಇದೆ.

ಸಿದ್ಧಾಂತದಲ್ಲಿ ಕೇವಲ ಧರ್ಮವು ವ್ಯತಿರೇಕಿಯಾದ್ದರಿಂದ ಘಟದಲ್ಲಿರುವ ಪ್ರಮೇಯ-ತ್ವಾದಿಗಳು ಪಟದಲ್ಲಿ ಹಾಗೂ ಪಟದಲ್ಲಿರುವ ಪ್ರಮೇಯಾತ್ವಾದಿಗಳು ಘಟದಲ್ಲಿ ಇಲ್ಲವಾದ್ದರಿಂದ ಪ್ರಮೇಯಾತ್ವಾದಿಸಂಸರ್ಗಾಭಾವವು ಪ್ರಸಿದ್ಧವಾದ್ದರಿಂದ 'ನ್ಯಾಯಮತೇ' ಎಂಬುದಾಗಿ ವಾಕ್ಯವನ್ನು ಹೇಳಲಾಗಿದೆ. ನ್ಯಾಯಮತದ ರೀತಿಯಲ್ಲಿ ಕೇವಲ ಧರ್ಮವು ಕೇವಾಲಾನ್ವಯಿ ಆಗಿದೆ.

ಸಿದ್ಧಾಂತದಲ್ಲಿ ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಮತ್ತೊಂದು ದೋಷವನ್ನು ಹೇಳಿ-ದ್ದಾರೆ.

ಪ್ರಶ್ನೆ: - ಸಿದ್ಧಾಂತದಲ್ಲಿ ಪ್ರಮೇಯತ್ವ ಹಾಗೂ ಅಭಿಧೇಯತ್ವಾದಿಗಳು ಕೇವಲಾನ್ವಯಿ-ಧರ್ಮವಲ್ಲವೇ? ಈ ಪಕ್ಷದಲ್ಲಿ ಯೋಗ್ಯತಾಲಕ್ಷಣವನ್ನು ಹೇಗೆ ಕೂಡಿಸಬೇಕು ?

ಉತ್ತರ:- ಸಿದ್ಧಾಂತದಂತೆ ಯಾವ ಧರ್ಮಗಳೂ ಸಹ ಕೇವಲಾನ್ವಯಿ ಧರ್ಮವೇ ಅಲ್ಲ. ಎಲ್ಲವೂ ವ್ಯತಿರೇಕಿಧರ್ಮಗಳೇ ಆಗಿವೆ. ಘಟದಲ್ಲಿರುವ ಪ್ರಮೇಯತ್ವವು ಘಟದಲ್ಲೇ ಇದೆ. ಪಟದಲ್ಲಿಲ್ಲ. ಇದರಂತೆ ಪಟದಲ್ಲಿರುವ ಪ್ರಮೇಯತ್ವವು ಪಟದಲ್ಲಿಯೇ ಇದೆ ಹೊರತು ಘಟದಲ್ಲಿಲ್ಲ. ಹೀಗೆ ಪ್ರತಿಯೊಂದು ಧರ್ಮಗಳನ್ನು ಭಿನ್ನವಾಗಿಯೇ ಅಂಗೀಕಾರ ಮಾಡಿದ್ದೇವೆ. ಆದ್ದರಿಂದ ಎಲ್ಲಾ ಧರ್ಮಗಳು ವ್ಯತಿರೇಕಿಧರ್ಮಗಳೇ ಆಗಿವೆ. 'ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾಃ ನಿಖಿಲಾ ಅಪಿ' ಎಂಬುದು ನಮ್ಮ ಸಿದ್ಧಾಂತ. ಎರಡೂ ಕಡೆ ಇರುವ ಪ್ರಮೇಯತ್ವಗಳಿಗೆ ಅಥವಾ ಅಭಿಧೇಯತ್ವಕ್ಕೆ ಸಾದೃಶ್ಯವಿದೆಯೇ ಹೊರತು ಎರಡು ಒಂದೇ ಅಲ್ಲ. ಘಟನಿಷ್ಠವಾದ ಅಭಿಧೇಯತ್ವಾಭಾವ ಪಟದಲ್ಲಿದೆ. ಅಸಮಭಿ-ವ್ಯಾಹೃತಪದಾರ್ಥಸಂಸರ್ಗಾಭಾವ ಎಂದರೆ ಅಭಿಧೇಯತ್ವಾಭಾವ ಅಥವಾ ಪ್ರಮೇಯ-ತ್ವಾಭಾವ ಇವುಗಳನ್ನು ಉಪಪಾದನೆ ಮಾಡಲು ಬರುತ್ತದೆ. ಆದ್ದರಿಂದ ಈ ದೋಷವನ್ನು ನೈಯಾಯಿಕರ ಮತವೆಂದು ಉಪಪಾದನೆ ಮಾಡಿದ್ದಾರೆ.

ಪ್ರಶ್ನೆ :- ನೈಯಾಯಿಕರಮತದಲ್ಲೂ ಪ್ರಮೇಯತ್ವ ಹಾಗೂ ಅಭಿಧೇಯತ್ವಗಳು ಜಾತಿಗಳಲ್ಲ. ವಸ್ತುತಃ ನೈಯಾಯಿಕರು ಜಾತಿಯೆಂದು ಇವುಗಳನ್ನು ಅಂಗೀಕರಿಸಿಲ್ಲ-ವಾದ್ದರಿಂದ ಅವರ ಮತದಂತೆ ಹೇಗೆ ದೋಷವನ್ನು ಉಪಪಾದನೆ ಮಾಡುವುದು ?

ಉತ್ತರ :- ನೈಯಾಯಿಕರು ಸಹ ಪ್ರಮೇಯತ್ವಾದಿಗಳನ್ನು ಜಾತಿ ಎಂದು ಅಂಗೀ-ಕರಿಸುತ್ತಾರೆ. ಜಾತಿ-ಸಾಮಾನ್ಯ, ಉಪಾಧಿ-ಸಾಮಾನ್ಯ ಎಂದು ಎರಡನ್ನೂ ಅಂಗೀ-ಕರಿಸಿದ್ದಾರೆ. ಅನುಗತ ಜಾತಿವಾದದಲ್ಲಿ ಇದರ ವಿವರಣೆ ಇದೆ. ಕೃತಿತ್ವವೇ ಕಾರ್ಯತ್ವ. ಅಭಿಧೇಯತ್ವವೇ ಅಭಿಧೇಯ, ಪ್ರಮೇಯತ್ವವೇ ಪ್ರಮೇಯ ಎಂಬುದು ಅವರ ಸಿದ್ಧಾಂತ. ಪ್ರಮಾದಲ್ಲಿರುವ ಪ್ರಮಾತ್ವನಿಷ್ಠವಾದ ಜಾತಿಯೇ ಪ್ರಮೇಯತ್ವ. ಪ್ರಮಾತ್ವವು ಪ್ರಮಾದಲ್ಲಿದೆ. ಪ್ರಮೇಯತ್ವವು ಘಟದಲ್ಲಿದೆ. ಆದ್ದರಿಂದ ಎರಡು ಹೇಗೆ ಒಂದಾಗು-ತ್ತವೆ?

ಉತ್ತರ: - ಪ್ರಮಾದಲ್ಲಿರುವ ಪ್ರಮಾತ್ವವೇ ಘಟದಲ್ಲಿದೆ. ಘಟದಲ್ಲಿರುವ ಪ್ರಮೇಯತ್ವವು ಪ್ರಮಾರೂಪವಾಗಿದೆ. ಆದ್ದರಿಂದ ಎರಡು ಪ್ರತ್ಯೇಕವಲ್ಲ. ಪ್ರಮಾತ್ವವು ಸಾಕ್ಷಾತ್ ಸಂಬಂಧೇನ ಪ್ರಮಾದಲ್ಲಿದ್ದರೂ ಸಹ ಪರಂಪರೆಯಿಂದ ಘಟದಲ್ಲಿದೆ. ಆದ್ದರಿಂದ ಪ್ರಮೇಯತ್ವ ಹಾಗೂ ಪ್ರಮಾತ್ವಗಳು ಎರಡೂ ಸಹ ಒಂದೇ ಆಗಿವೆ. ಇದರಂತೆ ಅಭಿಧೇಯತ್ವಾದಿಗಳೂ ಸಹ ಜಾತಿಯೇ. ಆದರೆ ನಮ್ಮ ಸಿದ್ಧಾಂತದಂತೆ ಅನುಗತವಾದ ಜಾತಿಯನ್ನು ಅಂಗೀಕಾರ ಮಾಡಿರುವುದಿಲ್ಲ.

ವಿವರಣೆ: 'ಉಕ್ತರೀತ್ಯಾ ಶೇಷವೈಯರ್ಥ್ಯಾತ್' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಲಕ್ಷಣದಲ್ಲಿ 'ಸಮಭಿವ್ಯಾಹೃತಪದಾರ್ಥಸಂಸರ್ಗವ್ಯಾಪ್ಯಧರ್ಮವತ್ತ್ವಂ' ಎಂದು ಹೇಳಿದ್ದಾರೆ. ಇಲ್ಲಿ ಪದಾರ್ಥಸಂಸರ್ಗ ಎಂದು ಹೇಳಿದರೂ ಸಂಸರ್ಗವ್ಯಾಪ್ಯವಾದ ಧರ್ಮವುಳ್ಳದ್ದು ಎಂದು ಹೇಳಿದರೂ ಎರಡರ ಅಭಿಪ್ರಾಯವು ಒಂದೇ ಆಗಿದೆ. ಆದ್ದರಿಂದ ಲಕ್ಷಣದಲ್ಲಿ 'ವ್ಯಾಪ್ಯಧರ್ಮವತ್ತ್ವಂ' ಅಥವಾ 'ಅನ್ವಯಪ್ರತಿಯೋಗಿತಾವಚ್ಛೇದಕ ಧರ್ಮವತ್ತ್ವಂ' ಎಂಬುದು ವ್ಯರ್ಥ. ಹಿಂದೆ ಹೇಳಿದ ಲಕ್ಷಣದಿಂದಲೇ ಯೋಗ್ಯತಾದಲ್ಲಿ ಲಕ್ಷಣ ಸಮನ್ವಯವೂ ಆಗುತ್ತದೆ ಎಂದಭಿಪ್ರಾಯ.

## ಮಣಿಕಾರ ಹೇಳಿದ ಮತ್ತೆರಡು ಯೋಗ್ಯತಾಲಕ್ಷಣವೂ ತಪ್ಪು

**ತರ್ಕತಾಂಡವಮ್ - ನಾಪಿ ಮಣ್ಯುಕ್ತರೀತ್ಯಾ ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವಾಭಾವೋ ವಾ, ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕಧರ್ಮಶೂನ್ಯತ್ವಂ ವಾ ಯೋಗ್ಯತಾ ।**

ಅನುವಾದ - ಮಣಿಗ್ರಂಥದಲ್ಲಿ ಯೋಗ್ಯತಾಲಕ್ಷಣವನ್ನು ಮತ್ತೆ ಎರಡು ರೀತಿಯಲ್ಲಿ ಹೇಳಲಾಗಿದೆ.

೧. 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವಾಭಾವಃ ಯೋಗ್ಯತಾ'.

೨. 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕ-ಧರ್ಮಶೂನ್ಯತ್ವಂ ಯೋಗ್ಯತಾ' ಎಂಬುದಾಗಿ.

ಈ ಎರಡು ಲಕ್ಷಣಗಳೂ ಸಹ ಅಯುಕ್ತವಾಗಿವೆ.

## 'ಏಕ' ಮತ್ತು 'ಅಪರ' ಶಬ್ದಗಳು ಎಲ್ಲಿ ವಿಶೇಷಣ ?

**ನ್ಯಾಯದೀಪಃ – 'ಏಕ' ಇತಿ ಪದಸ್ಯ ವಾ ಪದಾರ್ಥಸ್ಯ ವಾ ವಿಶೇಷಣಮ್ । 'ಅಪರೇ'ತ್ಯಪಿ ಏವಂ ಬೋಧ್ಯಮ್ । ತನ್ನಿರೂಪಿತಸಂಸರ್ಗೇಽಪರಪದಾರ್ಥ-ನಿಷ್ಠಾತ್ಯಂತಾಭಾವಂ ಪ್ರತಿ ಯತ್ಪ್ರತಿಯೋಗಿತ್ವಂ ತತ್ ಪ್ರಕಾರಿಕಾ ಯಾ ಪ್ರಮಾ ತದ್ವಿಶೇಷ್ಯತ್ವಾಭಾವ ಇತ್ಯರ್ಥಃ ।**

ಅನುವಾದ - 'ಏಕ' ಎಂಬ ಪದವು ಪದಕ್ಕೆ ವಿಶೇಷಣವೋ ಅಥವಾ ಪದಾರ್ಥಕ್ಕೆ ವಿಶೇಷಣವೋ? ಇದರಂತೆ 'ಅಪರ' ಎಂಬ ಪದವನ್ನೂ ತಿಳಿಯಬೇಕು. ಈ ಏಕ ಮತ್ತು ಅಪರ ಮುಂತಾದ ಪದಾರ್ಥದಿಂದ ನಿರೂಪಿತವಾದ ಸಂಸರ್ಗದಲ್ಲಿ ಮತ್ತೊಂದು ಪದಾರ್ಥದಲ್ಲಿರುವ ಅತ್ಯಂತಾಭಾವವನ್ನು ಕುರಿತು ಯಾವುದು ಪ್ರತಿಯೋಗಿಯೋ ತತ್ಪ್ರಕಾರಕವಾದ ಯಾವ ಪ್ರಮಾ ಇದೆಯೋ ಅಂತಹ ಪ್ರಮಾವಿಶೇಷ್ಯತ್ವಾಭಾವ ಎಂದು 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿ-ಯೋಗಿತ್ವಪ್ರಮಾವಿಶೇಷ್ಯತ್ವಾಭಾವಃ' ಎಂಬ ಶಬ್ದದ ಅರ್ಥ.

ವಿವರಣೆ - 'ಏಕಪದಾರ್ಥೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕ-ಧರ್ಮಶೂನ್ಯತ್ವಂ' ಎಂಬುದು ಲಕ್ಷಣ. ಇದರಲ್ಲಿ 'ಏಕಪದಾರ್ಥೇ' ಎಂಬಲ್ಲಿ 'ಏಕ'-ಶಬ್ದವಿದೆ. 'ಪದಾರ್ಥೇ' ಎಂದಲ್ಲಿ 'ಪದ' ಮತ್ತು ಪದಾರ್ಥರೂಪವಾದ ಎರಡು ಧರ್ಮಗಳಿವೆ. ಇಲ್ಲಿ 'ಏಕ' ಎಂಬುದನ್ನು ಪದದಲ್ಲಿ ಹಾಗೂ ಪದಾರ್ಥದಲ್ಲಿ ವಿಶೇಷಣ ಮಾಡಬಹುದು. ಇದರಂತೆ 'ಅಪರಪದಾರ್ಥ' ಎಂಬಲ್ಲಿ 'ಅಪರ' ಎಂಬುದನ್ನು ಪದದಲ್ಲಿ ಹಾಗೂ ಪದಾರ್ಥದಲ್ಲಿ ವಿಶೇಷಣ ಮಾಡಬಹುದು.

## 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಯೋಗ್ಯತಾವಿಲ್ಲ

**ನ್ಯಾಯದೀಪ– 'ಅಗ್ನಿನಾ ಸಿಂಚತಿ' ಇತ್ಯಾದೌ ಅಗ್ನಿಕರಣಕಾನ್ವಯಃ ಸೇಕೇ ನಾಸ್ತೀತಿ ವಾ, ಅಗ್ನಿಕರಣಕಾನ್ವಯಃ ಸೇಕನಿಷ್ಠಾತ್ಯಂತಾಭಾವಪ್ರತಿಯೋಗೀತಿ ವಾ ಅನುಭವೇನ ತದ್ವಾಕ್ಯಂ ತು ಅಯೋಗ್ಯಮ್ ।**

ಅನುವಾದ - 'ಅಗ್ನಿನಾ ಸಿಂಚತಿ' ಮುಂತಾದ ಸ್ಥಳಗಳಲ್ಲಿ ಅಗ್ನಿಕರಣದ ಅನ್ವಯವು ಸೇಕದಲ್ಲಿ ಇಲ್ಲ ಎಂಬುದಾಗಿ ಅಥವಾ ಅಗ್ನಿಕರಣಾನ್ವಯವು ಸೇಕನಿಷ್ಠವಾದ ಅತ್ಯಂತಾಭಾವಕ್ಕೆ ಪ್ರತಿಯೋಗಿ ಎಂಬುದಾಗಿ ಅನುಭವವಿದೆಯಾದ್ದರಿಂದ ಈ ವಾಕ್ಯವು ಅಯೋಗ್ಯವಾಗಿದೆ.

## 'ಪಯಸಾ ಸಿಂಚತಿ' ಎಂಬ ವಾಕ್ಯದಲ್ಲಿ ಯೋಗ್ಯತಾ ಇದೆ

**ನ್ಯಾಯದೀಪ– 'ಪಯಸಾ ಸಿಂಚತಿ' ಇತ್ಯಾದೌ 'ಪಯಃಕರಣಕತ್ವಂ ಸೇಕೇ ನಾಸ್ತಿ' ಇತ್ಯಾದಿಪ್ರತೀತೇಃ ಕದಾಪ್ಯಭಾವೇನ ತತ್ರ ಪಯಃಪದಾರ್ಥಸಂಸರ್ಗೇ ಸೇಕನಿಷ್ಠಾಭಾವಪ್ರತಿಯೋಗಿತ್ವಪ್ರಕಾರಕಪ್ರಮಾಶೇಷ್ಯತ್ವಂ ನೇತಿ ತದ್ಯೋಗ್ಯಮ್ ಇತ್ಯುಚ್ಯತೇ ।**

ಅನುವಾದ - 'ಪಯಸಾ ಸಿಂಚತಿ' ಮುಂತಾದ ವಾಕ್ಯಗಳಲ್ಲಿ ಪಯಃಕರಣಕತ್ವವು ಸೇಕದಲ್ಲಿ ಇಲ್ಲವೆಂಬ ಪ್ರತೀತಿ ಯಾವಾಗಲೂ ಇರುವುದಿಲ್ಲವಾದ್ದರಿಂದ ಅಲ್ಲಿ 'ಪಯಃ' ಎಂಬ ಪದಾರ್ಥದ ಸಂಸರ್ಗದಲ್ಲಿ ಸೇಕದಲ್ಲಿರುವ ಅಭಾವಕ್ಕೆ ಪ್ರತಿಯೋಗಿಯಾದ ತತ್ಪ್ರಕಾರಕವಾದ ಪ್ರಮಾವಿಶೇಷ್ಯತ್ವವು ಇಲ್ಲವಾದ್ದರಿಂದ ಈ ವಾಕ್ಯವು ಯೋಗ್ಯಾತಾವುಳ್ಳವುದ್ದಾಗಿದೆ.

ವಿವರಣೆ - 'ಸೇಚನಸಂಸರ್ಗಃ ಅಗ್ನಿನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂದು ಯಾರಿಗೂ ಸಹ ಅನುಭವವಿಲ್ಲ. 'ಅಗ್ನಿನಾ ಸಿಂಚತಿ' ಎಂದು ಪ್ರಯೋಗ ಮಾಡಿದಾಗ ಲೋಕದಲ್ಲಿ ಯಾರೂ ಸಹ ಅಗ್ನಿಗೂ ಸೇಚನಕ್ರಿಯೆಗೂ ಸಂಬಂಧವನ್ನು ಹೇಳುವುದಿಲ್ಲ. 'ಸಂಸರ್ಗ' ಎಂದರೆ ಕ್ರಿಯಾಕರಣಭಾವರೂಪವಾದ ಸಂಸರ್ಗ. ಸೇಚನಕ್ರಿಯೆಗೆ ಕರಣವು ಅಗ್ನಿಯಲ್ಲ. ಆದ್ದರಿಂದ ಅಗ್ನಿಕರಣದ ಸಂಬಂಧವು ಸೇಚನಕ್ಕೆ ಇರುವುದಿಲ್ಲ. ಅಥವಾ ಅಗ್ನಿಕರಣದ

ಸಂಬಂಧದಲ್ಲಿ ಸೇಚನದ ಸಂಬಂಧವು ಇರುವುದಿಲ್ಲ. 'ಅಗ್ನಿನಾ ದಹತಿ' ಎಂಬಲ್ಲಿ ಅಗ್ನಿಗೂ ದಾಹಕ್ರಿಯೆಗೂ ಸಂಬಂಧವಿದೆ. ಆದ್ದರಿಂದ ಆ ವಾಕ್ಯವು ಪ್ರಮಾಣವಾಗುತ್ತದೆ. 'ಅಗ್ನಿನಾ ಸಿಂಚತಿ' ಎಂದು ಹೇಳಿದರೆ ಸೇಚನರೂಪ ಧರ್ಮದಲ್ಲಿರುವ ಅತ್ಯಂತಾಭಾವ ಎಂದರೆ ದಾಹಸಂಸರ್ಗಾಭಾವ. ಇದಕ್ಕೆ ಅಗ್ನಿಯು ಪ್ರತಿಯೋಗಿಯಾಗಿರುವುದಿಲ್ಲ. ಅಗ್ನಿಗೂ ದಹನರೂಪಕ್ರಿಯೆಗೂ ಸಂಬಂಧವಿದೆ. ಆದ್ದರಿಂದ ಪ್ರತಿಯೋಗಿತ್ವಾಭಾವವು ಬರುವುದಿಲ್ಲ.

'ಜಲೇನ ಸಿಂಚತಿ' ಎಂದು ಹೇಳಿದಾಗ ನೀರಿಗೂ ಸೇಚನಕ್ರಿಯೆಗೂ ಸಂಬಂಧವು ಇರುವು-ದಿಲ್ಲವೆಂಬ ಪ್ರತೀತಿಯು ಯಾರಿಗೂ ಸಹ ಬರುತ್ತಿಲ್ಲ. ಆದ್ದರಿಂದ 'ಏಕಪದಾರ್ಥ' ಎಂದರೆ ಜಲರೂಪವಾದ ಪದಾರ್ಥ. ಆದರಲ್ಲಿ 'ಅಪರಪದಾರ್ಥ' ಎಂದರೆ ಸೇಕರೂಪಪದಾರ್ಥ. 'ಸೇಕ' ಎಂದರೂ 'ಸೇಚನ' ಎಂದರೂ ಒಂದೇ ಅರ್ಥ. ಆದ್ದರಿಂದ 'ಅಪರಪದಾರ್ಥ-ನಿಷ್ಠಾತ್ಯಂತಾಭಾವ' ಎಂದರೆ ಸೇಕನಿಷ್ಠಾತ್ಯಂತಾಭಾವ'. ಈ ಅತ್ಯಂತಾಭಾವವನ್ನು ಕುರಿತು ಪ್ರತಿಯೋಗಿಯಾದದ್ದು ಸೇಕ. ತತ್ಪ್ರಕಾರಕವಾದ ಪ್ರಮಾವಿಶೇಷ್ಯತ್ವವು ಸೇಚನದಲ್ಲಿದೆ. ಸೇಚನದಲ್ಲಿ ದಾಹಸಂಸರ್ಗರೂಪವಾದ ಧರ್ಮವು ಇಲ್ಲವಾದ್ದರಿಂದ 'ದಾಹಸಂಸರ್ಗಾ-ತ್ಯಂತಾಭಾವಪ್ರತಿಯೋಗಿತ್ವಪ್ರಕಾರಕಪ್ರಮಾವಿಶೇಷ್ಯತ್ವ'ವು ದಾಹಸಂಸರ್ಗದಲ್ಲಿ ಇದೆ. ವಿಶೇಷ್ಯತ್ವಾಭಾವವು ಸೇಚನದಲ್ಲಿ ಇದೆ. ಆದ್ದರಿಂದ ಲಕ್ಷಣಸಮನ್ವಯ ಆಗುತ್ತದೆ. 'ಪಯಃಕರಣಕತ್ವಂ ಸೇಕೇ ನಾಸ್ತಿ' ಎಂದು ಅಥವಾ 'ಸೇಕಃ ಪಯಕರಣಕಂ ನ ಭವತಿ' ಎಂದು ಲೋಕದಲ್ಲಿ ವ್ಯವಹಾರವಿಲ್ಲ. ಒಂದುವೇಳೆ ನೀರಿಗೂ ಸೇಚನಕ್ರಿಯೆಗೂ ಸಂಬಂಧ-ವಿಲ್ಲವೆಂಬ ಜ್ಞಾನ ಬಂದರೆ ಅದು ಭ್ರಮಾರೂಪವಾದದ್ದು.

ಪ್ರಶ್ನೆ : ಯಾವುದೋ ಒಂದು ಜಲದಲ್ಲಿ ಯಾವ ಕಾಲಕ್ಕೂ ಸಹ ಸೇಚನರೂಪವಾದ ಕ್ರಿಯೆಯೇ ಇರುವುದಿಲ್ಲ. ಉದಾಹರಣೆ - ಸಮುದ್ರ ಮಧ್ಯದಲ್ಲಿ ಇರುವ ನೀರನ್ನು ತೆಗೆದುಕೊಂಡು ಯಾರೂ ಸಹ ಸೇಚನವನ್ನೇ ಮಾಡುವುದಿಲ್ಲ. ಆದ್ದರಿಂದ 'ಅಪರ-ಪದಾರ್ಥನಿಷ್ಠಾತ್ಯಂತಾಭಾವ' ಎಂದರೆ ಅನ್ಯೋನ್ಯಾಭಾವ ಅಥವಾ ಪ್ರಧ್ವಂಸಾಭಾವಗಳನ್ನು ಸ್ವೀಕಾರ ಮಾಡಿ ಯಾವುದೋ ಒಂದು ಸ್ಥಳದಲ್ಲಿ 'ಅತ್ಯಂತಾಭಾವಪ್ರತಿಯೋಗಿತ್ವಪ್ರಮಾ-ವಿಶೇಷ್ಯತ್ವಾಭಾವ'ವನ್ನು ಹೇಳಲು ಬರುತ್ತದಲ್ಲವೇ?

ಉತ್ತರ: ಇದಕ್ಕಾಗಿಯೇ ಇಲ್ಲಿ ಅತ್ಯಂತಾಭಾವ ಎಂಬ ಶಬ್ದವನ್ನು ಪ್ರಯೋಗ ಮಾಡ-

ಲಾಗಿದೆ. ಪ್ರಥಮ ಲಕ್ಷಣದಲ್ಲಿ ಈ ದೋಷವು ಬರುತ್ತದೆಂಬ ಕಾರಣದಿಂದಲೇ ಎರಡನೆಯ ಲಕ್ಷಣವನ್ನು ಅಂಗೀಕಾರ ಮಾಡಲಾಗಿದೆ. ಎರಡನೆಯ ಲಕ್ಷಣದಲ್ಲಿ ಯಾವುದೇ ನೀರನ್ನು ತೆಗೆದುಕೊಂಡರೂ ಅದರಲ್ಲಿ ಪ್ರತಿಯೋಗಿತಾವಚ್ಛೇದಕಧರ್ಮವು ಸೇಚನಸಂಸರ್ಗತ್ವ-ರೂಪವಾದದ್ದೇ ಆಗಿರುತ್ತದೆ. ಆ ನೀರನ್ನು ಸೇಚನಕ್ರಿಯೆಗೆ ಉಪಯೋಗಿಸಲಿ ಉಪ-ಯೋಗಿಸದೆ ಇರಲಿ ಅದರಲ್ಲಿರುವ ಧರ್ಮವು ಯಾವ ಕಾಲಕ್ಕೂ ನಾಶವಾಗುವುದಿಲ್ಲ. ಪ್ರಥಮಲಕ್ಷಣದಂತೆ ಬಂದ ಜ್ಞಾನವು ಪ್ರಮಾತ್ಮಕವೋ ಅಥವಾ ಭ್ರಮಾತ್ಮಕವೋ ಎಂಬುದನ್ನು ವಿಚಾರ ಮಾಡಿ ಆ ಜ್ಞಾನದಲ್ಲಿ ಯೋಗ್ಯತೆಯನ್ನು ಸಂಪಾದನೆ ಮಾಡುವುದು ಕ್ಲಿಷ್ಟಕರವಾದದ್ದು. ಆದ್ದರಿಂದ ದ್ವಿತೀಯಲಕ್ಷಣವನ್ನು ಅಂಗೀಕಾರ ಮಾಡಲಾಗಿದೆ. ಯಾವುದೋ ಒಂದು ಜಲವಿಶೇಷಕ್ಕೆ ಸೇಚನಸಂಸರ್ಗವು ಮೂರು ಕಾಲದಲ್ಲಿ ಆಗದಿದ್ದರೂ ಸಹ ಅದರಲ್ಲಿ ಪ್ರತಿಯೋಗಿತಾವಚ್ಛೇದಕಧರ್ಮವು ಇಲ್ಲವೆಂದಾಗುವುದಿಲ್ಲ. ಈ ಕಾರಣದಿಂದಲೇ ಎಲ್ಲಾ ಸ್ಥಳದಲ್ಲೂ ಲಕ್ಷಣಗಳನ್ನು ಪರಿಷ್ಕಾರ ಮಾಡುವಾಗ ಕೇವಲ 'ಪ್ರತಿಯೋಗಿತ್ವಪ್ರಮಾ' ಎಂದು ಹೇಳದೆ ಪ್ರತಿಯೋಗಿತಾವಚ್ಛೇದಕಧರ್ಮ ಎಂದು ಹೇಳಿರುತ್ತಾರೆ.

ವಿವರಣೆ - 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾ-ವಚ್ಛೇದಕಧರ್ಮಶೂನ್ಯತ್ವಂ' ಎಂದು ಮತ್ತೊಂದು ಲಕ್ಷಣ. 'ಏಕಪದಾರ್ಥಸಂಸರ್ಗ' ಎಂದರೆ 'ಸೇಚನಸಂಸರ್ಗ'. ಇದರಲ್ಲಿ 'ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿ-ಯೋಗಿತಾವಚ್ಛೇದಕ' ಎಂದರೆ ಅಗ್ನಿತ್ವರೂಪವಾದ ಧರ್ಮ. ಈ ಧರ್ಮವು ಜಲದಲ್ಲಿ ಇಲ್ಲ. ಸೇಚನದಲ್ಲೂ ಇಲ್ಲ. ಆದ್ದರಿಂದ ಪ್ರತಿಯೋಗಿತಾವಚ್ಛೇದಕಧರ್ಮಶೂನ್ಯತ್ವ-ರೂಪವಾದ ಲಕ್ಷಣವು 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಬರುತ್ತದೆ. ಅಥವಾ ಅಪರ-ಪದಾರ್ಥ ಎಂದರೆ 'ಅಗ್ನಿ'. ಅಗ್ನಿಯಲ್ಲಿ ಸೇಚನಸಂಸರ್ಗವು ಇಲ್ಲ. ಆದ್ದರಿಂದ ಸೇಚನ-ಸಂಸರ್ಗದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದದ್ದು 'ಅಗ್ನಿ'. ಅಗ್ನಿಸಂಸರ್ಗತ್ವವು ಪ್ರತಿಯೋಗಿತಾವಚ್ಛೇದಕ ಧರ್ಮವಾಗಿದೆ. ಆದ್ದರಿಂದ ಏತಾದೃಶಧರ್ಮಶೂನ್ಯತ್ವವು ಅಗ್ನಿಯಲ್ಲಿ ಇಲ್ಲವಾದ್ದರಿಂದ 'ಅಗ್ನಿನಾ ಸಿಂಚತಿ' ಎಂಬ ವಾಕ್ಯವು ಅಯೋಗ್ಯವಾದ ವಾಕ್ಯವಾಗಿದೆ.

'ಜಲೇನ ಸಿಂಚತಿ' ಎಂಬಲ್ಲಿ ಲಕ್ಷಣಸಮನ್ವಯವು ಹೀಗಿದೆ - ಸೇಚನಸಂಸರ್ಗವು 'ಜಲನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂದು ಹೇಳಲು ಬರುವುದಿಲ್ಲ. ಆದ್ದರಿಂದ 'ಪ್ರತಿಯೋಗಿತಾವಚ್ಛೇದಕಧರ್ಮ' ಎಂದರೆ ಅಗ್ನಿತ್ವರೂಪಧರ್ಮ. ಜಲದಲ್ಲಿರುವ ಜಲತ್ವರೂಪವಾದ ಧರ್ಮಕ್ಕೆ ಅಗ್ನಿಯು ಪ್ರತಿಯೋಗಿ ಅಲ್ಲ. 'ಜಲನಿಷ್ಠಾತ್ಯಂತಾಭಾವ' ಎಂದರೆ ಅಗ್ನಿಸಂಸರ್ಗಾತ್ಯಂತಾಭಾವ. ಇದಕ್ಕೆ ಪ್ರತಿಯೋಗಿಯಾದದ್ದು ಅಗ್ನಿ. 'ಪ್ರತಿಯೋಗಿತಾವಚ್ಛೇದಕಧರ್ಮ' ಎಂದರೆ ಅಗ್ನಿಸಂಸರ್ಗತ್ವ. ಏತಾದೃಶಧರ್ಮವು ಜಲದಲ್ಲಿ ಇರುವುದಿಲ್ಲ ಆದ್ದರಿಂದ ಧರ್ಮಶೂನ್ಯತ್ವರೂಪವಾದ ಯೋಗ್ಯತಾಲಕ್ಷಣವು 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಬರುತ್ತದೆ. ಸೇಚನಸಂಸರ್ಗವು 'ಜಲನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕಧರ್ಮ'ವಲ್ಲ ಎಂದರ್ಥ.

ಅಥವಾ ದಾಹಸಂಸರ್ಗತ್ವವು ಜಲನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕಧರ್ಮ. ಸೇಚನಸಂಸರ್ಗದಲ್ಲಿ ದಾಹಸಂಸರ್ಗತ್ವರೂಪವಾದ ಧರ್ಮವಿರುವುದಿಲ್ಲ. 'ಏಕಪದಾರ್ಥಸಂಸರ್ಗಃ' ಎಂದರೆ 'ಸೇಚನಸಂಸರ್ಗಃ', 'ಅಪರಪದಾರ್ಥ' ಎಂದರೆ 'ಜಲ', 'ತನ್ನಿಷ್ಠಾಂತ್ಯಂತಾಭಾವ' ಎಂದರೆ 'ದಾಹಸಂಸರ್ಗದ ಅತ್ಯಂತಾಭಾವ' ಇದಕ್ಕೆ ಪ್ರತಿಯೋಗಿಯಾದದ್ದು ದಾಹಸಂಸರ್ಗ. ಪ್ರತಿಯೋಗಿತಾವಚ್ಛೇದಕಧರ್ಮವಾದದ್ದು ದಾಹಸಂಸರ್ಗತ್ವ. ಇದು ದಾಹಸಂಸರ್ಗದಲ್ಲಿ ಇರುತ್ತದೆಯೇ ಹೊರತು, ಸೇಚನಸಂಸರ್ಗದಲ್ಲಿ ಇರುವುದಿಲ್ಲ. ಆದ್ದರಿಂದ ಈ ಧರ್ಮವು ಜಲದಲ್ಲಿ ಇರುವುದಿಲ್ಲ. ಯಾವ ಧರ್ಮವು ಸೇಚನಸಂಸರ್ಗದಲ್ಲಿ ಇದೆಯೋ ಅದು ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕಧರ್ಮವಾಗಿರುವುದಿಲ್ಲ. ಅಪರಪದಾರ್ಥ ನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕಧರ್ಮವು ಸೇಚನಸಂಸರ್ಗದಲ್ಲಿ ಇರುವುದಿಲ್ಲ.

ಮೊದಲನೆಯ ಲಕ್ಷಣಕ್ಕೂ ಎರಡನೆಯ ಲಕ್ಷಣಕ್ಕೂ ಇರುವ ವ್ಯತ್ಯಾಸ ಹೀಗಿದೆ - ಮೊದಲನೆಯ ಲಕ್ಷಣದಲ್ಲಿ 'ಸೇಚನಸಂಸರ್ಗಃ ಜಲನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಭ್ರಮಾತ್ಮಕಜ್ಞಾನವು ಬರಬಹುದು. ಇದರಂತೆ 'ಸೇಚನಸಂಸರ್ಗಃ' 'ದಾಹನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನವು ಬರಬಹುದು. ಸೇಚನಸಂಸರ್ಗವು ದಾಹದ ಜೊತೆ ಸಂಬಂಧವನ್ನು ಹೊಂದಿಲ್ಲ. ಜಲದ ಜೊತೆ ಸಂಬಂಧವನ್ನು ಹೊಂದಿದೆ. ಈಗ 'ಏಕಪದಾರ್ಥೇ' ಎಂದರೆ 'ಸೇಚನರೂಪಪದಾರ್ಥೇ', 'ಅಪರಪದಾರ್ಥ' ಎಂದರೆ

'ದಾಹರೂಪಪದಾರ್ಥ', ತನ್ನಿಷ್ಠಾತ್ಯಂತಾಭಾವಪ್ರತಿಯೋಗಿತ್ವಜ್ಞಾನವು ಪ್ರಮಾರೂಪವಾಗಿದೆ. ಆದ್ದರಿಂದ ಈ ಜ್ಞಾನವನ್ನು 'ಪ್ರಮಾ' ಎಂದು ಹೇಳಬಹುದು.

ಆದರೆ ಜಲನಿಷ್ಠಾತ್ಯಂತಾಭಾವಪ್ರತಿಯೋಗಿತ್ವಪ್ರಕಾರಕಜ್ಞಾನವು ಭ್ರಮಾರೂಪವಾಗಿದೆ. 'ಸೇಚನಸಂಸರ್ಗಃ ಜಲನಿಷ್ಠಾತ್ಯಂತಾಭಾವಪ್ರತಿಯೋಗೀ' ಇತ್ಯಾಕಾರಕಜ್ಞಾನವು ಪ್ರಮಾತ್ಮಕಲ್ಲ. ಆದ್ದರಿಂದ ಈ ಲಕ್ಷಣದಂತೆ ಜ್ಞಾನ ಬಂದಾಗ ಆ ಜ್ಞಾನವು ಪ್ರಮೆಯೋ, ಭ್ರಮೆಯೋ ಎಂದು ವಿಚಾರ ಮಾಡಿದ ಮೇಲೆ ಲಕ್ಷಣ ಸಮನ್ವಯವನ್ನು ತಿಳಿಯಬೇಕು. ಆದರೆ ಎರಡನೆಯ ಲಕ್ಷಣದಲ್ಲಿ ಜ್ಞಾನದ ಪ್ರಸಕ್ತಿಯೇ ಇರುವುದಿಲ್ಲ. ಯಾವ ಧರ್ಮವು ಇರುವುದಿಲ್ಲವೋ, ಅಂತಹ ಧರ್ಮವನ್ನು ಹೇಳಿ ಲಕ್ಷಣವನ್ನು ಸಮನ್ವಯ ಮಾಡುತ್ತೇವೆ.

## ಯೋಗ್ಯತಾಲಕ್ಷಣದಲ್ಲಿ ದಲಕೃತ್ಯವಿಚಾರ

**ನ್ಯಾಯದೀಪ– ಅತ್ರ ಶಬ್ದತ್ವವತ್ ಆಕಾಶಸ್ಯ ಶಬ್ದನಿಷ್ಠಾತ್ಯಂತಾಭಾವಪ್ರತಿಯೋಗಿತ್ವಾತ್ ತತ್ರ ಅವ್ಯಾಪ್ತಿನಿರಾಸಾಯ – ಸಂಸರ್ಗೇತಿ ॥**

ಅನುವಾದ - ಶಬ್ದವುಳ್ಳ ಆಕಾಶದಲ್ಲಿ ಶಬ್ದನಿಷ್ಠವಾದ ಅತ್ಯಂತಾಭಾವಪ್ರತಿಯೋಗಿತ್ವವು ಇರುವುದರಿಂದ, ಅವ್ಯಾಪ್ತಿದೋಷವು ಬರುತ್ತದೆ. ಆ ದೋಷದ ಪರಿಹಾರಕ್ಕೋಸ್ಕರ 'ಸಂಸರ್ಗ' ಎಂಬ ಶಬ್ದವನ್ನು ಹೇಳಿದ್ದಾರೆ.

## ಸಂಸರ್ಗಶಬ್ದವು ಏಕೆನ್ನುವ ಬಗ್ಗೆ ಪಕ್ಷಧರಮಿಶ್ರನ ಅಭಿಪ್ರಾಯ

ವಿವರಣೆ - ಈ ಲಕ್ಷಣದಲ್ಲಿ ದಲಕೃತ್ಯವನ್ನು ಹೇಳುತ್ತಿದ್ದಾರೆ - 'ಶಬ್ದವತ್ ಆಕಾಶಂ' ಎಂಬ ವಾಕ್ಯಕ್ಕೆ 'ಆಕಾಶವು ಶಬ್ದವುಳ್ಳದ್ದು' ಎಂದರ್ಥ. ಇಲ್ಲಿ 'ಏಕಪದಾರ್ಥ' ಎಂದರೆ ಆಕಾಶರೂಪವಾದ ಪದಾರ್ಥ. ಅಪರಪದಾರ್ಥ ಎಂದರೆ ಶಬ್ದ. ಅಪರಪದಾರ್ಥನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾದದ್ದು ಆಕಾಶ. ಶಬ್ದವು ಆಕಾಶನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿ ಅಲ್ಲದಿದ್ದರೂ ಆಕಾಶವು ಶಬ್ದನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾಗುತ್ತದೆ. ಶಬ್ದವು ಗುಣ. ಆಕಾಶವು ಗುಣಿ. ಆಕಾಶದಲ್ಲಿ ಶಬ್ದವಿದೆಯೇ ಹೊರತು, ಶಬ್ದದಲ್ಲಿ ಆಕಾಶವಿಲ್ಲ.

ಆದ್ದರಿಂದ 'ಶಬ್ದೇ ಆಕಾಶಃ' ಎಂದು ಹೇಳಲು ಬರುವುದಿಲ್ಲ. ಆಕಾಶವು ಕೇವಲಾನ್ವಯಿ-ಧರ್ಮವಾಗಿದೆ. ಆಕಾಶದ ಅತ್ಯಂತಾಭಾವವು ಎಲ್ಲಾ ಕಡೆಯಲ್ಲೂ ಇದೆ. 'ಆಕಾಶದಲ್ಲಿ ಶಬ್ದವಿದೆ' ಎಂದು ಹೇಳಲು ಬರುತ್ತದೆ. ಆದರೆ 'ಶಬ್ದದಲ್ಲಿ ಆಕಾಶವಿದೆ' ಎಂದು ಪ್ರಯೋಗ ಮಾಡಲು ಸಾಧ್ಯವಿಲ್ಲ. ಘಟದಲ್ಲಿ ರೂಪವಿದೆ ಎಂದು ಹೇಳಬಹುದೇ ಹೊರತು, ರೂಪದಲ್ಲಿ ಘಟವಿದೆ ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಘಟಕ್ಕೂ, ರೂಪಕ್ಕೂ ಆಧಾರಾಧೇಯಭಾವವಿದೆ. ಆದರೆ ಆಧಾರಾಧೇಯಭಾವರಹಿತವಾದ ಸ್ಥಳದಲ್ಲಿ ಈ ರೀತಿ ಪ್ರಯೋಗವು ಸಾಧ್ಯವಿಲ್ಲ. ಎಲ್ಲೂ ಇಲ್ಲದ ಆಕಾಶವು ಶಬ್ದದಲ್ಲೂ ಇರುವುದಿಲ್ಲವಾದ್ದರಿಂದ ಶಬ್ದನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾಗುತ್ತದೆ. ನೈಯಾಯಿಕರ ಪ್ರಕಾರ 'ಶಬ್ದದಲ್ಲಿ ಆಕಾಶವಿಲ್ಲ' ಎಂಬ ಜ್ಞಾನವು ಪ್ರಮಾರೂಪವಾಗಿದೆ. ಆದ್ದರಿಂದ 'ಆಕಾಶಃ ಶಬ್ದನಿಷ್ಠಾ-ತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನವು ಪ್ರಮಾಣವಾಗಿದೆ. ಇದರಲ್ಲಿ ಆಕಾಶವು ವಿಶೇಷ್ಯವಾಯಿತು. ಪ್ರಮಾವಿಶೇಷ್ಯತ್ವಾಭಾವವು ಆಕಾಶದಲ್ಲಿ ಇರುವುದಿಲ್ಲ. ಆದ್ದರಿಂದ ಈ ವಾಕ್ಯದಲ್ಲಿ ಯೋಗ್ಯತಾಲಕ್ಷಣವು ಬರುವುದಿಲ್ಲವಾದ್ದರಿಂದ ಅವ್ಯಾಪ್ತಿ ದೋಷವು ಬರುತ್ತದೆ.

ಈ ದೋಷದ ಪರಿಹಾರಕ್ಕೋಸ್ಕರ ಲಕ್ಷಣದಲ್ಲಿ 'ಸಂಸರ್ಗ' ಎಂಬ ಶಬ್ದವನ್ನು ಸೇರಿಸ-ಬೇಕು. ಒಂದು ಪದಾರ್ಥದಲ್ಲಿ ಮತ್ತೊಂದು ಪದಾರ್ಥದ ಅತ್ಯಂತಾಭಾವ-ಪ್ರತಿಯೋಗಿತ್ವಪ್ರಮಾವಿಶೇಷ್ಯತ್ವವು ಇರಬಾರದೆಂದು ಹೇಳಿದಾಗ 'ಶಬ್ದವತ್ ಆಕಾಶಂ' ಎಂಬ ಪ್ರತೀತಿಯಲ್ಲಿ ಅವ್ಯಾಪ್ತಿದೋಷವು ಬರುತ್ತಿತ್ತು. ಆದರೆ 'ಸಂಸರ್ಗ'ಶಬ್ದವನ್ನು ಲಕ್ಷಣದಲ್ಲಿ ಸೇರಿಸಿದಾಗ 'ಏಕಪದಾರ್ಥಸಂಸರ್ಗೇ' ಎಂಬುದು ಲಕ್ಷಣದ ಸ್ವರೂಪ-ವಾಗುತ್ತದೆ. ಈಗ ಅವ್ಯಾಪ್ತಿದೋಷವು ಬರುವುದಿಲ್ಲ.

ಆಕಾಶವು ಶಬ್ದನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾದರೂ ಆಕಾಶಸಂಸರ್ಗವು ಶಬ್ದದಲ್ಲಿ ಇರುತ್ತದೆ. 'ಶಬ್ದದಲ್ಲಿ ಆಕಾಶವಿಲ್ಲ' ಎಂದು ಹೇಳುವ ನೈಯಾಯಿಕರು ಆಕಾಶ-ಸಂಸರ್ಗವನ್ನು ಶಬ್ದದಲ್ಲಿ ಅಂಗೀಕಾರ ಮಾಡುತ್ತಾರೆ. ಆದ್ದರಿಂದ 'ಆಕಾಶಸಂಸರ್ಗಃ ಶಬ್ದನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನವು ಬಂದರೆ ಅದು ಪ್ರಮಾತ್ಮಕವಲ್ಲ. ತದಭಾವವು ಆಕಾಶದಲ್ಲಿ ಬರುತ್ತದೆ. ಹೀಗಾಗಿ 'ಶಬ್ದವದ್ ಆಕಾಶಂ' ಎಂಬ ಪ್ರತೀತಿಯು ಯೋಗ್ಯವಾಗಿದೆ.

ನೈಯಾಯಿಕರ ಮತ ಹೀಗಿದೆ - ಸಮವಾಯವು ಎರಡರಲ್ಲಿರುವ ಪದಾರ್ಥ. ಶಬ್ದ-ಸಮವಾಯವು ಆಕಾಶದಲ್ಲಿದೆ. ಆಕಾಶಸಮವಾಯವು ಶಬ್ದದಲ್ಲಿದೆ. ಆದರೆ ಶಬ್ದದಲ್ಲಿ ಆಕಾಶವಿಲ್ಲ. ಆಕಾಶದಲ್ಲಿ ಶಬ್ದವಿದೆ. ಸಮವಾಯ ಇದ್ದರೂ ಸಹ ಆಕಾಶ ಇಲ್ಲ ಎಂದು ತಾತ್ಪರ್ಯ.

'ಶಬ್ದನಿರೂಪಿತಸಮವಾಯಃ ಆಕಾಶೇ, ಆಕಾಶನಿರೂಪಿತಸಮವಾಯಃ ಶಬ್ದೇ' ಎಂಬುದಾಗಿ ಅವೃತ್ತಿ ಪದಾರ್ಥಗಳಿಗೆ ಅವ್ಯವಹಿತಸಂಬಂಧದಿಂದ ಸಾಮಾನ್ಯವಾಗಿ ದ್ರವ್ಯದ ಸಮ-ವಾಯವು ಅದರ ಅವಯವದಲ್ಲೇ ಹೇಳಬೇಕು. ಆಕಾಶದಲ್ಲಿ ಅವಯವಗಳು ಇರುವು-ದಿಲ್ಲ. ಆದ್ದರಿಂದ ಆಕಾಶಸಮವಾಯವು ಇದೆ ಎಂದು ಹೇಳಲು ಬರುವುದಿಲ್ಲ.

ಪದಾರ್ಥಗಳಿಗೆ ಅದರ ಗುಣಗಳಲ್ಲಿ ಸಮವಾಯಸಂಬಂಧದಿಂದ ವೃತ್ತಿಯನ್ನು ಹೇಳಿದ್ದಾರೆ. ಕಾಲದಲ್ಲಿ ಕಾಲನಿಷ್ಠವಾದ ಗುಣ, ಜಾತಿ ಮೊದಲಾದವುಗಳನ್ನು ಹೇಳಬಹುದು. ಆಕಾಶ-ದಲ್ಲಿ ಆಕಾಶನಿಷ್ಠವಾದ ಗುಣವನ್ನು ಸಮವಾಯ ಸಂಬಂಧದಿಂದ ಒಪ್ಪಿದ್ದಾರೆ. ಸಂಯೋಗ ಸಂಬಂಧದಿಂದ ಇರುತ್ತದೆಂದು ಒಪ್ಪಿಲ್ಲ.

ಈ ವಿಷಯದಲ್ಲಿ ನೈಯಾಯಿಕರ ಮತ ವಿಭಿನ್ನವಾಗಿದೆ. ಆಕಾಶದಲ್ಲಿ ಅವಯವವೇ ಇಲ್ಲ. ಸಮವಾಯ ಸಂಬಂಧವನ್ನು ದ್ರವ್ಯಗಳ ಅವಯವದಲ್ಲಿ ಮಾತ್ರವೇ ಹೇಳ-ಬೇಕೆಂಬುದು ಅವರ ಸಿದ್ಧಾಂತ. ಈ ಸಿದ್ಧಾಂತದಂತೆ ಆಕಾಶದಲ್ಲಿ ಅವಯವಗಳು ಇಲ್ಲ-ವಾದ್ದರಿಂದ ಸಮವಾಯಸಂಬಂಧವನ್ನು ಹೇಳಲು ಬರುವುದಿಲ್ಲವಾದರೂ ಮತ್ತೊಂದು ದೃಷ್ಟಿಯಿಂದ ನೋಡಿದಾಗ ಆಕಾಶವು ಶಬ್ದಸಮವಾಯದಲ್ಲಿದೆ. ಶಬ್ದಸಮವಾಯವು ಆಕಾಶದಲ್ಲಿದೆ. ಸ್ಥಾಣು-ಶ್ಯೇನಗಳಿಗೆ ಸಂಯೋಗವನ್ನು ಹೇಳಿದಾಗ ಸ್ಥಾಣುಸಂಯೋಗ ಶ್ಯೇನದಲ್ಲಿ, ಶ್ಯೇನಸಂಯೋಗ ಸ್ಥಾಣುವಿನಲ್ಲಿದೆ. 'ಯತ್ಸಮವೇತಂ ಕಾರ್ಯಂ ಉತ್ಪದ್ಯತೇ' ಎಂಬ ನಿಯಮಕ್ಕೆ ಅನುಸಾರಿಯಾಗಿ ಆಕಾಶದಲ್ಲಿ ಸಮವಾಯಸಂಬಂಧವನ್ನು ಹೇಳಲು ಸಾಧ್ಯವಿಲ್ಲ. ಆದರೆ 'ಗುಣಗುಣಿನೋಃ ಸಮವಾಯಃ' ಎಂಬ ಲಕ್ಷಣದಂತೆ ಆಕಾಶದಲ್ಲೂ ಶಬ್ದಸಮವಾಯವನ್ನು ಹೇಳಲು ಬರುತ್ತದೆ.

## ಪಕ್ಷಧರನ ಲಕ್ಷಣಪರಿಷ್ಕಾರ

**ನ್ಯಾಯದೀಪ – 'ತಾದೃಶಪ್ರಮಾವಿಷಯತ್ವಾಭಾವಃ' ಇತ್ಯೇವೋಕ್ತೌ 'ಘಟಸಂಸರ್ಗತ್ವಂ ಗೇಹನಿಷ್ಠಾತ್ಯಂತಾಭಾವಪ್ರತಿಯೋಗೀ' ಇತಿ ಪ್ರಮಾವಿಷಯೋ ಘಟಸಂಸರ್ಗೋಽಪಿ ಭವತೀತಿ ತತ್ರಾವ್ಯಾಪ್ತಿಃ ಸ್ಯಾತ್ । ತನ್ನಿರಾಸಾಯ ತಾದೃಶಪ್ರಮಾವಿಶೇಷ್ಯತ್ವಾಭಾವ ಇತ್ಯುಕ್ತಿರಿತಿ ಪಕ್ಷಧರಃ ।**

ಅನುವಾದ - 'ತಾದೃಶಪ್ರಮಾವಿಷಯತ್ವಾಭಾವಃ' ಎಂದಷ್ಟೇ ಲಕ್ಷಣವನ್ನು ಹೇಳಿದಲ್ಲಿ ಘಟಸಂಸರ್ಗತ್ವವು ಗೇಹನಿಷ್ಠವಾದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ ಎಂಬ ಪ್ರಮಾವಿಷಯವಾದ ಜ್ಞಾನದಲ್ಲಿ ಘಟಸಂಸರ್ಗವೂ ವಿಷಯವಾದ್ದರಿಂದ ಈ ಸ್ಥಳದಲ್ಲಿ ಅವ್ಯಾಪ್ತಿಯು ಬರುತ್ತದೆ. ಈ ದೋಷದ ಪರಿಹಾರಕ್ಕೋಸ್ಕರ 'ತಾದೃಶಪ್ರಮಾವಿಶೇಷ್ಯತ್ವಾಭಾವಃ' ಎಂದು ಹೇಳಲಾಗಿದೆ ಇದು ಪಕ್ಷಧರನ ಅಭಿಪ್ರಾಯ.

ವಿವರಣೆ - ಯೋಗ್ಯತಾಲಕ್ಷಣದಲ್ಲಿ 'ಪ್ರಮಾವಿಶೇಷ್ಯತ್ವಾಭಾವಃ' ಎಂಬ ಶಬ್ದವಿದೆ. ಇಲ್ಲಿ 'ವಿಶೇಷ್ಯತ್ವಾಭಾವಃ' ಎಂಬ ಶಬ್ದದ ಬದಲು 'ಪ್ರಮಾವಿಷಯತ್ವಾಭಾವಃ' ಎಂಬುದಾಗಿ ಲಕ್ಷಣವನ್ನು ಹೇಳಬಹುದೇ ? ಎಂಬುದಾಗಿ ವಿಚಾರ ಮಾಡಲಾಗುತ್ತಿದೆ.

ವಿಶೇಷ್ಯಶಬ್ದವನ್ನು ಬಿಟ್ಟು ವಿಷಯ ಶಬ್ದವನ್ನು ಹೇಳಿದರೆ ಅವ್ಯಾಪ್ತಿದೋಷವು ಬರುತ್ತದೆಂಬುದು ಪಕ್ಷಧರನ ಅಭಿಪ್ರಾಯ.

ಉದಾಹರಣೆ - 'ಘಟಸಂಸರ್ಗತ್ವಂ ಗೇಹನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬುದು ಒಂದು ವಾಕ್ಯ. 'ಮನೆಯಲ್ಲಿ ಘಟಸಂಸರ್ಗವಿದೆ. ಘಟಸಂಸರ್ಗದಲ್ಲಿ ಘಟಸಂಸರ್ಗತ್ವವಿದೆ. ಮನೆಯಲ್ಲಿ ಘಟಸಂಸರ್ಗತ್ವವು ಇರುವುದಿಲ್ಲ ಘಟಸಂಸರ್ಗತ್ವವು ಗೇಹದಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ' ಎಂಬುದು ಪ್ರಮಾತ್ಮಕವಾದ ಜ್ಞಾನ. ಈ ಜ್ಞಾನಕ್ಕೆ ವಿಷಯವಾದದ್ದು ಘಟಸಂಸರ್ಗ. 'ಏಕಪದಾರ್ಥಸಂಸರ್ಗ' ಎಂದರೆ 'ಘಟಸಂಸರ್ಗ'. ಅಪರಪದಾರ್ಥ ಎಂದರೆ 'ಗೇಹ'. 'ಗೇಹನಿಷ್ಠಾತ್ಯಂತಾಭಾವ ಎಂದರೆ 'ಘಟಸಂಸರ್ಗಾತ್ಯಂತಾಭಾವ' ಆಗಿದೆ. ಗೇಹದಲ್ಲಿ ಘಟಸಂಸರ್ಗತ್ವವು ಇಲ್ಲ. ಆದ್ದರಿಂದ ಗೇಹನಿಷ್ಠವಾದ

ಘಟಸಂಸರ್ಗತ್ವಾತ್ಯಂತಾಭಾವಕ್ಕೆ ಪ್ರತಿಯೋಗಿಯಾದದ್ದು ಘಟಸಂಸರ್ಗ. ಇದರಲ್ಲಿ ಪ್ರಮಾವಿಷಯತ್ವವೇ ಇದೆ. ಪ್ರಮಾವಿಷಯತ್ವಾಭಾವವು ಇರುವುದಿಲ್ಲ. ಆದರೆ ವಾಸ್ತವಿಕ-ವಾಗಿ 'ಘಟಸಂಸರ್ಗತ್ವಂ ಗೇಹನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ವಾಕ್ಯವು ಯೋಗ್ಯತಾವುಳ್ಳ ವಾಕ್ಯವಾಗಿದೆ. ಆದರೆ ಯೋಗ್ಯತಾಲಕ್ಷಣವು ಈ ವಾಕ್ಯದಲ್ಲಿ ಬರುತ್ತಿಲ್ಲ.

ಪ್ರಶ್ನೆ : 'ಮಂದಿರೇ ಮಣಿಮಾಲಾ' ಎಂಬ ಪ್ರಯೋಗವಿದೆ. 'ಮನೆಯಲ್ಲಿ ರತ್ನದ ಹಾರ-ವಿದೆ' ಎಂಬ ಪ್ರಯೋಗವನ್ನು ಮಾಡಿದಾಗ ಮನೆಯಲ್ಲಿ ಕೋಣೆಯಿದೆ, ಕೋಣೆಯೊಳಗೆ ಕಪಾಟಿದೆ, ಕಪಾಟಿನೊಳಗೆ ಪೆಟ್ಟಿಗೆಯಿದೆ, ಪೆಟ್ಟಿಗೆಯೊಳಗೆ ರತ್ನದ ಹಾರವಿದೆ. ಹೀಗೆ ಪರಂಪರೆಯಿಂದ 'ಮನೆಯಲ್ಲಿ ರತ್ನದ ಹಾರವಿದೆ' ಎಂಬ ವಾಕ್ಯದ ಅರ್ಥವನ್ನು ತಿಳಿಯು-ತ್ತೇವೆ. ಇದರಂತೆ ಮನೆಯಲ್ಲಿ ಘಟಸಂಸರ್ಗತ್ವವಿದೆ ಎಂದು ಏಕೆ ಹೇಳಬಾರದು?

ಉತ್ತರ: ನೈಯಾಯಿಕರ ಮತದಂತೆ ಈ ರೀತಿ ಪ್ರಯೋಗ ಮಾಡಲು ಬರುವುದಿಲ್ಲ. ಮನೆಯಲ್ಲಿ ಘಟವಿದೆ. ಘಟದಲ್ಲಿ ಘಟಸಂಸರ್ಗವಿದೆ. ಘಟಸಂಸರ್ಗದಲ್ಲಿ ಘಟ-ಸಂಸರ್ಗತ್ವವಿದೆ ಎಂದು ಪರಂಪರೆಯಿಂದ ಪ್ರಯೋಗವನ್ನು ಕೂಡಿಸಬೇಕು. ಆದರೆ ಜಾತಿಯನ್ನು ಹೇಳುವ ಸಮಯದಲ್ಲಿ ಜಾತಿಗೆ ಯಾವುದು ಆಧಾರವೋ ಅಲ್ಲೇ ಆ ಶಬ್ದವನ್ನು ಪ್ರಯೋಗ ಮಾಡಬೇಕೇ ಹೊರತು, ಜಾತಿಗೆ ಆಧಾರವಾದದ್ದು ಎಲ್ಲಿ ಆಧೇಯವಾಗಿದೆಯೋ ಅಲ್ಲಿ ಜಾತಿವಾಚಕಶಬ್ದವನ್ನು ಪ್ರಯೋಗ ಮಾಡಲು ಬರುವುದಿಲ್ಲ.

ಘಟಸಂಸರ್ಗದಲ್ಲಿ ಘಟಸಂಸರ್ಗತ್ವರೂಪವಾದ ಜಾತಿಯಿದೆ. ಇದನ್ನು ಘಟಸಂಸರ್ಗದಲ್ಲಿ ಮಾತ್ರವೇ ವ್ಯವಹಾರ ಮಾಡಬೇಕು. ಗೇಹದಲ್ಲಿ ಘಟಸಂಸರ್ಗತ್ವವಿದೆ ಎಂದು ವ್ಯವಹಾರ ಮಾಡಬಾರದು. 'ಘಟಸಂಸರ್ಗಃ ಗೇಹನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನ ಬಂದರೆ ಇದು ಭ್ರಮಾತ್ಮಕವಾಗಿದೆ. ಮನೆಯಲ್ಲಿ ಘಟವಿದ್ದಾಗ ತದಭಾವವಿಷಯಕವಾದ ಈ ಜ್ಞಾನವು ಪ್ರಮಾತ್ಮಕವಾಗುವುದಿಲ್ಲ. ಆದರೆ ಘಟಸಂಸರ್ಗತ್ವಂ ಗೇಹನಿಷ್ಠಾತ್ಯಂತಾ-ಭಾವಪ್ರತಿಯೋಗೀ ಎಂಬ ಜ್ಞಾನ ಬಂದರೆ ಇದು ಪ್ರಮಾಣವೇ ಆಗಿದೆ. ಏಕೆಂದರೆ ಘಟ-ಸಂಸರ್ಗತ್ವವು ಮನೆಯಲ್ಲಿ ಇರುವುದಿಲ್ಲ. ಈ ಪ್ರಮಾದಲ್ಲಿ ವಿಶೇಷ್ಯವಾದದ್ದು ಘಟ-ಸಂಸರ್ಗತ್ವ. ಆದರೆ ಘಟಸಂಸರ್ಗವು ಈ ಜ್ಞಾನದಲ್ಲಿ ವಿಷಯವಾಗಿದೆ ಹೊರತು ವಿಶೇಷ್ಯವಾಗಿಲ್ಲ.

ಜಾತಿಯು ಸಮಾನಸಂವಿತ್‌ಸಂವೇದ್ಯವಾಗಿದೆ ಎಂಬುದಾಗಿ ಶಕ್ತಿವಾದದಲ್ಲಿ ಹೇಳಿದ್ದಾರೆ. ಅಭಿಪ್ರಾಯ ಹೀಗಿದೆ - ಜಾತಿಯ ಜ್ಞಾನವು ಯಾವುದರಿಂದ ಬರುತ್ತದೋ ಆ ಜ್ಞಾನದಲ್ಲಿ ಯಾವ ಪದಾರ್ಥದ ಜಾತಿಯನ್ನು ಹೇಳುತ್ತಾರೋ ಆ ಪದಾರ್ಥವೂ ಕೂಡ ಜ್ಞಾನಕ್ಕೆ ವಿಷಯವಾಗಿರುತ್ತದೆ. ಉದಾಹರಣೆ - ಘಟತ್ವದ ಜ್ಞಾನ ಬರುವಾಗ ಘಟದ ಜ್ಞಾನವೂ ಬರುತ್ತದೆ. ಆ ಜ್ಞಾನದಲ್ಲಿ ಘಟವೂ ವಿಷಯವಾಗಿರುತ್ತದೆ. ವಿಶೇಷ್ಯವು ಘಟತ್ವವಾದರೂ ವಿಷಯತ್ವವು ಘಟದಲ್ಲಿರುತ್ತದೆ. ಅದರಂತೆ ಇಲ್ಲಿ ಘಟಸಂಸರ್ಗತ್ವವು ವಿಶೇಷ್ಯವಾದರೂ ಘಟಸಂಸರ್ಗವು ವಿಷಯವಾಗಬಹುದು. ಜಾತಿವಿಷಯಕವಾದ ಜ್ಞಾನವು ವ್ಯಕ್ತಿ-ವಿಷಯಕವೂ ಆಗಿರುತ್ತದೆ ಎಂದು ತಾತ್ಪರ್ಯ.

## ಪ್ರಮಾವಿಶೇಷ್ಯತ್ವಶಬ್ದದ ಅರ್ಥ

'ಪ್ರಮಾವಿಶೇಷ್ಯತ್ವ' ಎಂದರೆ 'ಭಾಸಮಾನಪ್ರಕಾರವಿಷಯವೈಶಿಷ್ಟ್ಯ' ಎಂದರ್ಥ. ಇದು ಸಂಸರ್ಗತ್ವಕ್ಕೆ ಇದೆಯೇ ಹೊರತು, ಸಂಸರ್ಗಕ್ಕೆ ಇರುವುದಿಲ್ಲ. ಆದರೆ ಜಾತಿಯು ವ್ಯಕ್ತಿಘಟಿತವಾಗಿ ಬೋಧ್ಯವಾಗುವುದರಿಂದ ಅನಿವಾರ್ಯವಾಗಿ ಸಂಸರ್ಗತ್ವದ ಜೊತೆಗೆ ಸಂಸರ್ಗವೂ ತೋರುತ್ತದೆ. ಆದರೆ ಅದು ವಿಶೇಷ್ಯವಲ್ಲ. ಆದ್ದರಿಂದ 'ಗೇಹೇ ಘಟಃ' ಎಂಬ ವಾಕ್ಯದಲ್ಲಿ ಪ್ರಮಾವಿಶೇಷ್ಯತ್ವವೇ ಇದೆ. ಪ್ರಮಾವಿಶೇಷ್ಯತ್ವಾಭಾವವು ಇಲ್ಲ.

ಲಕ್ಷಣಸಮನ್ವಯವು ಹೀಗಿದೆ - ಏಕಪದಾರ್ಥೇ = ಗೇಹರೂಪಪದಾರ್ಥೇ, ಅಪರ-ಪದಾರ್ಥನಿಷ್ಠಾತ್ಯಂತಾಭಾವಃ = ಘಟಸಂಸರ್ಗತ್ವಾಭಾವಃ, 'ತದತ್ಯಂತಾಭಾವಪ್ರತಿ-ಯೋಗಿತ್ವರೂಪವಾದ ಪ್ರಮಾ' ಎಂದರೆ 'ಘಟಸಂಸರ್ಗತ್ವಂ ಗೇಹನಿಷ್ಠಾತ್ಯಂತಾಭಾವ-ಪ್ರತಿಯೋಗೀ' ಇತ್ಯಾಕಾರಕಪ್ರಮಾ. ಇದರಲ್ಲಿ ವಿಷಯವಾದದ್ದು ಘಟಸಂಸರ್ಗ. ವಿಷಯತ್ವವು 'ಗೇಹೇ ಘಟಃ' ಎಂಬ ವಾಕ್ಯದಲ್ಲಿದೆ. ಆದ್ದರಿಂದ ವಿಷಯತ್ವಾಭಾವವು ಬರ-ಲಿಲ್ಲ. ಆದ್ದರಿಂದ ಯೋಗ್ಯತಾಲಕ್ಷಣಕ್ಕೆ ಅವ್ಯಾಪ್ತಿ ದೋಷವು ಬರುತ್ತದೆ.

ಈ ದೋಷದ ಪರಿಹಾರಕ್ಕೋಸ್ಕರ ಪ್ರಮಾವಿಷಯತ್ವದ ಬದಲಾಗಿ 'ಪ್ರಮಾವಿಶೇಷ್ಯತ್ವಾ-ಭಾವ' ಎಂಬ ಶಬ್ದವನ್ನು ಪ್ರಯೋಗ ಮಾಡಲಾಗಿದೆ. ಘಟಸಂಸರ್ಗವು ಈ ಜ್ಞಾನದಲ್ಲಿ

ಸಮಾನಸಂವಿತ್‌ಸಂವೇದ್ಯತಯಾ ವಿಷಯವಾಗಿದೆಯೇ ಹೊರತು, ವಿಶೇಷ್ಯವಾಗಿಲ್ಲ. ಆದ್ದರಿಂದ ಪ್ರಮಾವಿಶೇಷ್ಯತ್ವವು ಘಟಸಂಸರ್ಗದಲ್ಲಿ ಇಲ್ಲದ ಕಾರಣ ಪ್ರಮಾವಿಶೇಷ್ಯತ್ವಾ-ಭಾವವು ಘಟಸಂಸರ್ಗದಲ್ಲಿ ಬರುತ್ತದೆ. ಆದ್ದರಿಂದ 'ಗೇಹೇ ಘಟಃ' ಎಂಬ ವಾಕ್ಯದಲ್ಲಿ ಯೋಗ್ಯತಾ ಲಕ್ಷಣವು ಯುಕ್ತವಾಗಿದೆ. ಇಷ್ಟು ಪಕ್ಷಧರಮಿಶ್ರನ ಅಭಿಪ್ರಾಯ.

ಘಟಸಂಸರ್ಗವು ಪ್ರಕಾರವಾಗಿ ತೋರುವುದು ಎಂಬ ಧರ್ಮವು ವಿಶೇಷ್ಯತ್ವ ಬಾರದೇ ಇರಲು ಕಾರಣವಲ್ಲ. ವಿಶೇಷ್ಯತ್ವವು ಅದರಲ್ಲಿ ಇರುವುದಿಲ್ಲ. ಇದಕ್ಕೆ ಪ್ರತ್ಯೇಕವಾಗಿ ಕಾರಣದ ಅವಶ್ಯಕತೆ ಇಲ್ಲ. 'ವಿಶೇಷ್ಯ' ಎಂದರೆ 'ಭಾಸಮಾನಪ್ರಕಾರವೈಶಿಷ್ಟ್ಯ'. ಭಾಸಮಾನವಾದದ್ದು ಘಟಸಂಸರ್ಗತ್ವ ಹೊರತು, ಘಟಸಂಸರ್ಗವಲ್ಲ. ಆದ್ದರಿಂದ ಅಲ್ಲಿ ವೈಶಿಷ್ಟ್ಯವಿಲ್ಲ ಎಂದಭಿಪ್ರಾಯ ಹೊರತಾಗಿ ಘಟಸಂಸರ್ಗವು ಪ್ರಕಾರವಾಗಿ ತೋರುತ್ತಿಲ್ಲ-ವೆಂಬುದು ಅಪ್ರಸ್ತಕವಾಗಿದೆ.

ಜ್ಞಾನದಲ್ಲಿ ತೋರುವುದೆಲ್ಲವೂ ವಿಶೇಷ್ಯವಾಗಲು ಸಾಧ್ಯವಿಲ್ಲ. ಆದ್ದರಿಂದ ಸಮಾನಸಂವಿತ್ ಸಂವೇದ್ಯವಾದ ಎಲ್ಲವೂ ವಿಶೇಷ್ಯವಾಗುವುದಿಲ್ಲ. ಜ್ಞಾನದಲ್ಲಿ ತೋರಿದ ಮಾತ್ರಕ್ಕೆ ವೈಶಿಷ್ಟ್ಯವನ್ನು ಹೇಳಲು ಬರುವುದಿಲ್ಲ.

## ಗೋಷ್ಠಿವಿಚಾರ

ನೈಯಾಯಿಕರು ಗುಣಗುಣಿಗಳಿಗೆ ಸಮವಾಯಸಂಬಂಧವನ್ನು ಹೇಳುತ್ತಾರೆ.

ಉದಾಹರಣೆ – 'ರೂಪವಾನ್ ಘಟಃ' ಎಂದು ಹೇಳಿದಾಗ ಸಮವಾಯ ಸಂಬಂಧದಿಂದ ಘಟದಲ್ಲಿ ರೂಪವಿದೆ ಎಂದು ಹೇಳಬಹುದು. 'ರೂಪದಲ್ಲಿ ಘಟ' ಇದೆ ಎಂದೂ ಕೂಡ ಹೇಳಬಹುದು. ಆದರೆ ಊರ್ಧ್ವ–ಅಧರೀಭಾವರೂಪವಾದ ಸಂಯೋಗಸಂಬಂಧವನ್ನು ಹೇಳುವಾಗ ಈ ರೀತಿ ಹೇಳಲು ಬರುವುದಿಲ್ಲ. 'ಭೂತಲೇ ಘಟಃ' ಎಂದು ಹೇಳಿದಾಗ ಘಟವು ಆಧೇಯ, ಭೂತಲವು ಆಧಾರ. ಇವುಗಳಲ್ಲಿ ವ್ಯತ್ಯಾಸ ಮಾಡಲು ಬರುವುದಿಲ್ಲ. ಸಮವಾಯಸಂಬಂಧದಲ್ಲಿ ಈ ನಿಯಮ ಇರುವುದಿಲ್ಲ. 'ತಂತುಷು ಪಟಃ' ಎಂದು ಹೇಳಿದಾಗ ಅಥವಾ 'ಪಟೇ ರೂಪಂ' ಎಂದು ಹೇಳಿದಾಗ ತಂತುವಿನಲ್ಲಿ ಪಟವಿದೆ. ಪಟದಲ್ಲಿ ರೂಪವಿದೆ

ಎಂಬ ಪ್ರತೀತಿಯಲ್ಲಿ ಆಧಾರಾಧೇಯಭಾವ ಇಲ್ಲ. ಸಮವಾಯಸಂಬಂಧದಿಂದ ಪಟದಲ್ಲಿ ತಂತುವಿದೆ. ಪಟದಲ್ಲಿ ರೂಪವಿದೆ ಎಂದು ಹೇಳಲು ಬರುತ್ತದೆ.

ಲೋಕದಲ್ಲಿ ಈ ವ್ಯವಹಾರವಿಲ್ಲದಿದ್ದರೂ ಸಹ ಶಾಸ್ತ್ರದಲ್ಲಿ ಈ ರೀತಿಯಾಗಿ ವ್ಯವಹಾರ ಮಾಡುತ್ತಾರೆ.

## ರುಚಿದತ್ತನ ಅಭಿಪ್ರಾಯ ಏನು ?

**ನ್ಯಾಯದೀಪ– ರುಚಿದತ್ತಸ್ತು ಯತ್ಪದಾರ್ಥಸಂಸರ್ಗೋ ಬೋಧ್ಯಃ ತದಂಶೇ ತಾದೃಶಪ್ರಮಾವಿಶೇಷ್ಯತ್ವಾಭಾವೋ ವಿವಕ್ಷಿತಃ । ತೇನ 'ಸೇಕಸಂಸರ್ಗ ಆಕಾಶಶ್ಚ ಜಲನಿಷ್ಠಾತ್ಯಂತಾಭಾವಪ್ರತಿಯೋಗೀ ಇತಿ ಸಮೂಹಾಲಂಬನಕೃತಪ್ರಮಾವಿಶೇಷ್ಯತ್ವ-ಕೃತದೋಷೋಽಪಾಸ್ತಃ । ಏವಂ ಚಾಂಶಭೇದಪ್ರಾಪ್ತಯೇ ವಿಶೇಷ್ಯತೋಕ್ತಿಃ । ವಿಷಯತ್ವಮಾತ್ರೇ ತಾತ್ಪರ್ಯಮ್ ಇತ್ಯವೋಚತ್ ।**

ರುಚಿದತ್ತನು ಹೀಗೆ ಹೇಳುತ್ತಾನೆ - ಯಾವ ಪದಾರ್ಥದ ಸಂಸರ್ಗವು ಬೋಧ್ಯವಾಗಿದೆಯೋ ಅದರ ಅಂಶದಲ್ಲಿ ಅಂತಹ ಪ್ರಮಾವಿಶೇಷ್ಯಾತ್ವಾಭಾವವು ವಿವಕ್ಷಿತವಾಗಿದೆ. ಆದ್ದರಿಂದ 'ಸೇಕಸಂಸರ್ಗವು ಮತ್ತು ಆಕಾಶವು ಜಲನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ' ಎಂಬ ಸಮೂಹಾಲಂಬನಜ್ಞಾನದಲ್ಲಿ ಬರುವ ಪ್ರಮಾವಿಶೇಷ್ಯತ್ವದ ದೋಷವನ್ನು ನಿರಾಸ ಮಾಡಲಾಗಿದೆ. ಹೀಗೆ ಹೇಳಿದಾಗ ಅಂಶಗಳಲ್ಲಿ ಭೇದವನ್ನು ಸಾಧಿಸುವುದಕ್ಕೋಸ್ಕರ ವಿಶೇಷ್ಯತ್ವವನ್ನು ಹೇಳಿರುವುದು. ಕೇವಲ ವಿಷಯತ್ವದಲ್ಲಿ ಮಾತ್ರವೇ ತಾತ್ಪರ್ಯವು ವಿವಕ್ಷಿತವಾಗಿದೆ.

ವಿವರಣೆ - ಪ್ರಮಾವಿಶೇಷ್ಯತ್ವದ ಬದಲು ಪ್ರಮಾವಿಷಯ ಎಂದು ಹೇಳಿದರೆ ದೋಷವನ್ನು ಬೇರೆ ಸ್ಥಳದಲ್ಲಿ ರುಚಿದತ್ತನು ಹೇಳುತ್ತಾನೆ. ವಿಶೇಷ್ಯತ್ವವನ್ನು ಹೇಳಿದ್ದರ ಅಭಿಪ್ರಾಯ ಅಂಶಭೇದವನ್ನು ಹೊಂದಿಸುವುದು. ಆದರೆ ತಾತ್ಪರ್ಯವು ವಿಷಯದಲ್ಲೇ ಇರುತ್ತದೆ.

ಅಭಿಪ್ರಾಯ ಹೀಗಿದೆ - ಯಾವ ಪದಾರ್ಥದ ಸಂಸರ್ಗವನ್ನು ವಾಕ್ಯದಲ್ಲಿ ಬೋಧನೆ ಮಾಡುತ್ತೇವೋ ಅಂತಹ ಅಂಶದಲ್ಲಿ ಅದರ ಅತ್ಯಂತಾಭಾವವನ್ನು ಹೇಳುವ ಪ್ರಮಾವು

ವಿಶೇಷ್ಯವಾಗಿರಬೇಕು. ಒಂದು ವಾಕ್ಯದಲ್ಲಿ ಎರಡು ಪದಾರ್ಥಗಳಿಗೆ ಸಂಸರ್ಗವನ್ನು ಬೋಧನೆ ಮಾಡುತ್ತೇವೆ. ಅದರಲ್ಲಿ ಯಾವ ಪದಾರ್ಥಕ್ಕೆ ಯಾವ ಪದಾರ್ಥದ ಸಂಸರ್ಗ-ವನ್ನು ಹೇಳಬೇಕಾಗಿದೆಯೋ ಆ ಪದಾರ್ಥದಲ್ಲಿರುವ ಸಂಸರ್ಗದ ಅತ್ಯಂತಾಭಾವವು ಇದರಲ್ಲಿ ಇರಬಾರದು. ಆದರ ಅಂಶದಲ್ಲಿ ಬರುವ ಅತ್ಯಂತಾಭಾವ-ಪ್ರತಿಯೋಗಿತ್ವ ಪ್ರಮಾವು ಆ ಅಂಶದಲ್ಲಿ ಪ್ರಮಾ ಆಗಿರಬೇಕು. ಅಂಶಭೇದದಿಂದ ಒಂದೇ ಜ್ಞಾನವು ಪ್ರಮಾ ಹಾಗೂ ಭ್ರಮಾ ಆಗಲು ಸಾಧ್ಯವಿದೆ. ಉದಾಹರಣೆ - 'ಜಲಸಂಸರ್ಗಃ ಆಕಾಶಶ್ಚ ಜಲನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಒಂದು ಸಮೂಹಾಲಂಬನಾತ್ಮಕವಾದ ಜ್ಞಾನ-ವಿದೆ. ಸೇಚನದ ಸಂಬಂಧ ಹಾಗೂ ಆಕಾಶಗಳು ಜಲದಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿವೆ ಎಂದರ್ಥ. ಈ ಜ್ಞಾನವು ಪ್ರಮಾರೂಪವೋ ಅಥವಾ ಭ್ರಮಾ-ರೂಪವೋ?

ಆಕಾಶದ ಅಂಶದಲ್ಲಿ ಈ ಜ್ಞಾನವು ಭ್ರಮಾತ್ಮಕವಾಗಿದೆ. ಸೇಕಸಂಸರ್ಗದ ಅಂಶದಲ್ಲಿ ಪ್ರಮಾತ್ಮಕವಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಇದು ಸಮೂಹಾಲಂಬನಾತ್ಮಕವಾದ ಜ್ಞಾನವಾಗಿದೆ. ಮತ್ತು ಇಲ್ಲಿ ವ್ಯಾಸಜ್ಯವೃತ್ತಿಧರ್ಮಾವಚ್ಛಿನ್ನಪ್ರತಿಯೋಗಿತಾಕಾಭಾವವನ್ನು ಹೇಳಲಾಗಿದೆ. 'ಏಕಸತ್ತ್ವೇ ದ್ವಯಂ ನಾಸ್ತಿ' ಎಂದು ಒಂದು ನಿಯಮವಿದೆ. ಒಂದು ಇದ್ದರೂ ಸಹ ಎರಡು ಇರುವುದಿಲ್ಲವೆಂಬುದು ಇದರ ಅಭಿಪ್ರಾಯ. ಆಕಾಶವು ಜಲನಿಷ್ಠಾ-ತ್ಯಂತಾಭಾವಪ್ರತಿಯೋಗಿಯಾಗಿದೆ. ಆದರೆ ಸೇಚನಸಂಸರ್ಗವು ಜಲನಿಷ್ಠಾತ್ಯಂತಾಭಾವ-ಪ್ರತಿಯೋಗಿಯಾಗಿಲ್ಲ. ಇಲ್ಲಿ ಸೇಕಸಂಸರ್ಗ ಮತ್ತು ಆಕಾಶ ಎರಡನ್ನೂ ಸಮುಚ್ಚಯ ಮಾಡುತ್ತಿದ್ದೇವೆ. ವಸ್ತುತಃ ಜಲದಲ್ಲಿ ಸೇಚನಸಂಸರ್ಗ ಇದೆ. ಆದರೆ ಆಕಾಶದಲ್ಲಿ ಇರು-ವುದಿಲ್ಲ. ಆದ್ದರಿಂದ ಸೇಕಸಂಸರ್ಗ ಮತ್ತು ಆಕಾಶ ಎರಡನ್ನೂ ಸೇರಿ ಹೇಳುವ ಸಮೂಹಾಲಂಬನಾತ್ಮಕಜ್ಞಾನದಲ್ಲಿ ವಿಷಯವಾದದ್ದು ಸೇಚನಸಂಸರ್ಗ ಹಾಗೂ ಆಕಾಶ.

ವಾಸ್ತವಿಕವಾಗಿ 'ಆಕಾಶಃ ಜಲೇ ನಾಸ್ತಿ' 'ಆಕಾಶವು ಜಲದಲ್ಲಿ ಇಲ್ಲ' ಎಂಬ ಜ್ಞಾನವೂ ಕೂಡ ಪ್ರಮಾತ್ಮಕವಾಗಿದೆ. 'ಸೇಚನಸಂಸರ್ಗಃ ಜಲೇ ನಾಸ್ತಿ' ಎಂಬ ಜ್ಞಾನವು ಭ್ರಮಾ-ತ್ಮಕವಾಗಿದೆ. ಆದರೂ ಎರಡನ್ನೂ ಸೇರಿ ಹೇಳಿದಾಗ ಆಕಾಶ ಮತ್ತು ಜಲಸಂಸರ್ಗಗಳು ಒಟ್ಟಿಗೆ ಜಲದಲ್ಲಿ ಇಲ್ಲ ಎಂದು ಹೇಳಿದಾಗ ಈ ಜ್ಞಾನವು ಪ್ರಮಾತ್ಮಕವಾದದ್ದೇ ಆಗುತ್ತದೆ.

ಈ ಜ್ಞಾನದಲ್ಲಿ ವಿಶೇಷ್ಯವಾದದ್ದು ಜಲಸಂಸರ್ಗ. ಆದ್ದರಿಂದ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವವು ಜಲಸಂಸರ್ಗದಲ್ಲಿ ಇದೆ. ವಿಶೇಷ್ಯತ್ವಾಭಾವವು ಬರುವುದಿಲ್ಲ. ಆದ್ದರಿಂದ 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಲಕ್ಷಣಸಮನ್ವಯವನ್ನು ಮಾಡಲು ಬರುವುದಿಲ್ಲ.

ಸಮೂಹಾಲಂಬನಾತ್ಮಕವಾದ ಜ್ಞಾನದಲ್ಲಿರುವ ಪ್ರಮಾವಿಶೇಷ್ಯತ್ವವು ಜಲಸಂಸರ್ಗಕ್ಕೆ ಹೇಳಲು ಬರುತ್ತದೆ. ಆದ್ದರಿಂದ ಕೇವಲ ವಿಷಯತ್ವವು ಮಾತ್ರವಲ್ಲ. ವಿಶೇಷ್ಯತ್ವವನ್ನು ಹೇಳಿದರೂ ಸಹ ಅವ್ಯಾಪ್ತಿದೋಷವು ಬರುತ್ತದೆ.

ಈ ರೀತಿಯಾಗಿ ಅವ್ಯಾಪ್ತಿದೋಷವನ್ನು ಹೇಳಬಾರದು. ಏಕೆಂದರೆ ಇಲ್ಲಿ ಅಂಶಗಳನ್ನು ಭಿನ್ನ-ಭಿನ್ನವಾಗಿ ಗ್ರಹಣ ಮಾಡಬೇಕು. ಯಾವ ಪದಾರ್ಥಕ್ಕೆ ಯಾವ ಪದಾರ್ಥದ ಸಂಬಂಧವನ್ನು ಹೇಳಬೇಕಾಗಿದೆಯೋ ಅಂತಹ ಸಂಬಂಧದಲ್ಲಿ ಮತ್ತೊಂದು ಪದಾರ್ಥದಲ್ಲಿರುವ ಅತ್ಯಂತಾಭಾವಪ್ರತಿಯೋಗಿತ್ವವು ಆ ಅಂಶದಲ್ಲಿ ಮಾತ್ರ ಇದ್ದರೆ ಸಾಕು. ಎಲ್ಲಾ ಅಂಶದಲ್ಲೂ ಇರಲೇಬೇಕೆಂಬ ನಿಯಮವಿಲ್ಲ.

ಸಮೂಹಾಲಂಬನಾತ್ಮಕಜ್ಞಾನದಲ್ಲಿ ಆಕಾಶಾಂಶದಲ್ಲಿ ವಸ್ತುತಃ ಸೇಚನಕರ್ಮತ್ವವು ಇಲ್ಲ. ಆದ್ದರಿಂದ ಆಕಾಶವು ಜಲದಲ್ಲಿಲ್ಲ. ಆಕಾಶವು ಜಲನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ ಎಂಬ ಅಂಶದಲ್ಲಿ ಸಮೂಹಾಲಂಬನಾತ್ಮಕಜ್ಞಾನವೂ ಕೂಡ ಪ್ರಮಾಣವೇ ಆಗುತ್ತದೆ. ಆದರೆ ಸೇಚನಸಂಸರ್ಗವು ಜಲನಿಷ್ಠಾತ್ಯಂತಾಭಾವಪ್ರತಿಯೋಗಿಯಾಗಿದೆ ಎನ್ನುವ ಅಂಶದಲ್ಲಿ ಇದು ಪ್ರಮಾಣವಾಗುವುದಿಲ್ಲ.

## ರುಚಿದತ್ತ ಹೇಳಿದ ಮತ್ತೊಂದು ವಿವರಣೆ

**ನ್ಯಾಯದೀಪ – ಯನ್ಮತೇ ತಾದೃಶಪ್ರಮಾತ್ವಪರಿಗ್ರಹಃ ಪ್ರತಿಬಂಧಕಸ್ತನ್ಮತೇನೈತಲ್ಲಕ್ಷಣಕರಣಾತ್ ತಾದೃಶಾಭಾವಪ್ರತಿಯೋಗಿತಾಭಾವ ಇತ್ಯೇವಾನುಕ್ತ್ವಾ ತಾದೃಶಪ್ರಮಾವಿಶೇಷ್ಯತ್ವಾಭಾವ ಇತ್ಯುಕ್ತಮಿತಿ ರುಚಿದತ್ತಃ ।**

ಅನುವಾದ - ಯಾರ ಮತದಲ್ಲಿ ತಾದೃಶಪ್ರಮಾತ್ವಗ್ರಹಣವು ಪ್ರತಿಬಂಧಕವಾಗಿದೆಯೋ ಅವರ ಮತದಂತೆ ಈ ರೀತಿಯಾಗಿ ಯೋಗ್ಯತಾಲಕ್ಷಣವನ್ನು ಮಾಡಿರುವ ಕಾರಣ 'ತಾದೃಶಾಭಾವಪ್ರತಿ-ಯೋಗಿತ್ವಾಭಾವಃ' ಎಂದು ಹೇಳದೆ 'ತಾದೃಶಪ್ರಮಾವಿಶೇಷ್ಯತ್ವಾಭಾವಃ' ಎಂದು ಹೇಳಲಾಗಿದೆ. ಇದು ರುಚಿದತ್ತನ ಅಭಿಪ್ರಾಯ.

## ನರಹರಿಯ ಅಭಿಪ್ರಾಯದಂತೆ ವಿಶೇಷಣಗಳ ಔಚಿತ್ಯ

**ನ್ಯಾಯದೀಪ– ನರಹರಿಸ್ತು 'ಪ್ರಮಾ' ಇತ್ಯಾದ್ಯನುಕ್ತ್ವಾ ತಾದೃಶಪ್ರತಿ-ಯೋಗಿತ್ವಾಭಾವೋ ಯೋಗ್ಯತಾ ಇತ್ಯೇವೋಕ್ತೌ ಯೋಗ್ಯತಾಯಾ ವಾಕ್ಯಾರ್ಥ-ಮಾತ್ರಪರ್ಯವಸನ್ನತಯಾ ತದ್ಧೀಃ ವಾಕ್ಯಾರ್ಥಬೋಧಾತ್ ಪೂರ್ವಂ ನ ಭವತಿ ಇತಿ ಶಾಬ್ದಬೋಧೇ ಯೋಗ್ಯತಾಜ್ಞಾನಸ್ಯಾಹೇತುತ್ವಾಪತ್ತೇಃ ತಾದೃಶಪ್ರಮಾ-ವಿಶೇಷ್ಯತ್ವಾಭಾವ ಇತ್ಯುಕ್ತಮಿತ್ಯಾಹ ।**

ಅನುವಾದ - ನರಹರಿಯು ಹೀಗೆ ಅಭಿಪ್ರಾಯ ಪಡುತ್ತಾನೆ - ಪ್ರಮಾ ಮುಂತಾದವುಗಳನ್ನು ಹೇಳದೆ 'ತಾದೃಶಪ್ರತಿಯೋಗಿತ್ವಾಭಾವಃ ಯೋಗ್ಯತಾ' ಎಂದಷ್ಟೆ ಲಕ್ಷಣವನ್ನು ಹೇಳಿದರೆ ಯೋಗ್ಯತೆಯು ಕೇವಲ ವಾಕ್ಯಾರ್ಥದಲ್ಲಿಯೇ ಪರ್ಯಾವಸಾನಗೊಳ್ಳುತ್ತದೆ. ಯೋಗ್ಯತೆಯು ವಾಕ್ಯಾರ್ಥಬೋಧದ ಮೊದಲು ಇರುವುದಿಲ್ಲ. ಆದ್ದರಿಂದ ಶಾಬ್ದಬೋಧದಲ್ಲಿ ಯೋಗ್ಯತಾಜ್ಞಾನವು ಕಾರಣ ಎಂದು ಆಗದೇ ಇರ-ಬೇಕಾದೀತು. ಆದ್ದರಿಂದ 'ತಾದೃಶಪ್ರಮಾವಿಶೇಷ್ಯತ್ವಾಭಾವಃ' ಎಂದು ಹೇಳಲಾಗಿದೆ.

### ಮಣಿಕಾರನ ಎರಡನೆಯ ಯೋಗ್ಯತಾಲಕ್ಷಣ

**ನ್ಯಾಯದೀಪ– ಯನ್ಮತೇ ಅಪ್ರಾಮಾಣ್ಯಶಂಕಾಶೂನ್ಯವಿಪರೀತನಿಶ್ಚಯಸ್ಯ ಪ್ರತಿಬಂಧಕತ್ವಂ ತನ್ಮತೇನೋಕ್ತಂ ಲಕ್ಷಣಾಂತರಂ ಚಾನುವದತಿ – ಏಕಪದಾರ್ಥೇತಿ ॥ ತಾದೃಶಂ ಹಿ 'ಅಗ್ನಿನಾ ಸಿಂಚತಿ' ಇತ್ಯತ್ರಾಗ್ನಿಸಂಸರ್ಗತ್ವಮ್ ಅತಸ್ತದಯೋಗ್ಯಮ್ । 'ಜಲೇನ ಸಿಂಚತಿ' ಇತ್ಯಾದೌ ಜಲಸಂಸರ್ಗಾದಿಕಂ ತಥಾ ನ ಭವತಿ ಇತಿ ತದ್ಯೋಗ್ಯಮ್ ಇತ್ಯುಚ್ಯತೇ ಇತ್ಯೇತದಪಿ ನ ಇತ್ಯರ್ಥಃ ।**

ಅನುವಾದ - ಯಾವ ಮತದಲ್ಲಿ ಅಪ್ರಾಮಾಣ್ಯಸಂಶಯರಹಿತವಾದ ವಿಪರೀತನಿಶ್ಚಯವು ಪ್ರತಿ-ಬಂಧಕವೋ ಅವರ ಮತದಂತೆ ಹೇಳಿದ ಮತ್ತೊಂದು ಲಕ್ಷಣವನ್ನು 'ಏಕಪದಾರ್ಥ' ಎಂಬ ಶಬ್ದದಿಂದ ಅನುವಾದ ಮಾಡುತ್ತಿದ್ದಾರೆ. 'ಅಗ್ನಿನಾ ಸಿಂಚತಿ' ಎಂಬಲ್ಲಿ ಅಗ್ನಿಸಂಸರ್ಗವು ಏತಾದೃಶವಾಗಿದೆ. ಆದ್ದರಿಂದ ಈ ವಾಕ್ಯವು ಅಯೋಗ್ಯವಾಗಿದೆ. 'ಜಲೇನ ಸಿಂಚತಿ' ಮುಂತಾದ ಸ್ಥಳಗಳಲ್ಲಿ ಜಲಸಂಸರ್ಗಾದಿಗಳು ಹಿಂದೆ ಹೇಳಿದಂತಲ್ಲ.

ಆದ್ದರಿಂದ ಈ ವಾಕ್ಯವು ಯೋಗ್ಯವಾಗಿದೆ ಎಂಬ ಪಕ್ಷವೂ ಸರಿಯಲ್ಲ ಎಂದಭಿಪ್ರಾಯ.

## ಮಣಿಕಾರನ ಲಕ್ಷಣಕ್ಕೆ ಅವ್ಯಾಪ್ತಿದೋಷ

**ತರ್ಕತಾಂಡವಮ್ – ಏಕತ್ವಾಪರತ್ವಯೋಃ ಪದಾರ್ಥವಿಶೇಷಣತ್ವೇ ಪ್ರಮೇಯತ್ವೇ 'ಪ್ರಮೇಯತ್ವಮ್' ಇತ್ಯಾದಾವವ್ಯಾಪ್ತೇಃ । ತತ್ರ ಪದಾರ್ಥಭೇದಾಭಾವಾತ್ ।**

ಅನುವಾದ - ಈ ಲಕ್ಷಣದಲ್ಲಿ ಏಕತ್ವ ಮತ್ತು ಅಪರತ್ವಗಳನ್ನು ಪದಾರ್ಥಕ್ಕೆ ವಿಶೇಷಣವಾಗಿ ಹೇಳಿದರೆ 'ಪ್ರಮೇಯತ್ವೇ ಪ್ರಮೇಯತ್ವಂ' 'ಪ್ರಮೇಯತ್ವದಲ್ಲಿ ಪ್ರಮೇಯತ್ವವಿದೆ' ಮುಂತಾದ ಸ್ಥಳಗಳಲ್ಲಿ ಅವ್ಯಾಪ್ತಿದೋಷವು ಬರುತ್ತದೆ. ಅಲ್ಲಿ ಪದಾರ್ಥಭೇದವು ಇರುವುದಿಲ್ಲ.

## ಮಣಿಕಾರ ಹೇಳಿದ ಎರಡು ಲಕ್ಷಣಕ್ಕೂ ಪಕ್ಷಧರನೇ ದೋಷ ಹೇಳಿದ್ದಾನೆ

**ನ್ಯಾಯದೀಪಃ – ಲಕ್ಷಣದ್ವಯೇಽಪಿ ಏಕಪದಾರ್ಥಾಪರಪದಾರ್ಥೇ'ತ್ಯತ್ರ ಏಕತ್ವಾಪರತ್ವೇ ಪದಾರ್ಥವಿಶೇಷಣೇ ಪದವಿಶೇಷಣೇವಾ ಇತಿ ವಿಕಲ್ಪೌ ಹೃದಿ ಕೃತ್ವಾ ಕ್ರಮೇಣ ಪಕ್ಷಧರಾದ್ಯುಕ್ತದೋಷಾನೇವ ಆಹ – ಏಕತ್ವೇತಿ ॥**

ಅನುವಾದ - ಎರಡು ಲಕ್ಷಣಗಳಲ್ಲಿಯೂ ಏಕಪದಾರ್ಥ ಹಾಗೂ ಅಪರಪದಾರ್ಥ ಎಂಬಲ್ಲಿರುವ 'ಏಕತ್ವ' ಮತ್ತು ಅಪರತ್ವಗಳು ಪದಾರ್ಥದಲ್ಲಿ ವಿಶೇಷಣವೋ ಅಥವಾ ಪದದಲ್ಲಿ ವಿಶೇಷಣವೋ ? ಎಂಬ ವಿಕಲ್ಪವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಕ್ರಮವಾಗಿ ಪಕ್ಷಧರಾದಿಗಳು ಹೇಳಿದ ದೋಷವನ್ನೇ 'ಏಕತ್ವ' ಮುಂತಾದ ಶಬ್ದದಿಂದ ಹೇಳುತ್ತಿದ್ದಾರೆ.

**ತರ್ಕತಾಂಡವ – ಪದವಿಶೇಷಣತ್ವೇ ಚ ಪ್ರತ್ಯಯಾರ್ಥಾನ್ವಿತಸ್ವಾರ್ಥಬೋಧಕಂ 'ಗಾಮ್' ಇತ್ಯಾದಿಕಮ್ ಅಯೋಗ್ಯಂ ಸ್ಯಾತ್ । ತತ್ರ ಪದಸ್ಯೈಕತ್ವಾಯೋಗಾತ್ ।**

ಅನುವಾದ - ಏಕತ್ವ ಮತ್ತು ಅಪರತ್ವಗಳನ್ನು ಪದಕ್ಕೆ ವಿಶೇಷಣವಾಗಿ ಹೇಳಿದರೆ ಪ್ರತ್ಯ-ಯಾರ್ಥದಿಂದ ಕೂಡಿದ ಸ್ವಾರ್ಥವನ್ನು ಹೇಳುವ 'ಗಾಂ' ಮುಂತಾದವುಗಳು ಅಯೋಗ್ಯಶಬ್ದ ಎಂದಾಗಬೇಕಾಗುತ್ತದೆ. ಅಲ್ಲಿ ಪದವು ಒಂದೇ ಆಗಿದೆ.

## ಪದಶಬ್ದಕ್ಕೆ ಶಬ್ದಮಾತ್ರಪರತ್ವವನ್ನು ಹೇಳಿದರೂ ದೋಷವಿದೆ

**ತರ್ಕತಾಂಡವ – ಪದಶಬ್ದಸ್ಯ ಶಬ್ದಮಾತ್ರಪರತ್ವೇಪಿ ಸ್ವಾರ್ಥೀಭೂತವರ್ತಮಾನ-ತ್ವಾನ್ವಿತಕೃತ್ಯಾದಿಬೋಧಕೋ ಲಡಾದಿಪ್ರತ್ಯಯೋ ಯೋಗ್ಯೋ ನ ಸ್ಯಾತ್ । ತತ್ರ ಶಬ್ದಭೇದಸ್ಯಾಪ್ಯಭಾವಾತ್ ।**

ಅನುವಾದ - 'ಪದ' ಎಂಬ ಶಬ್ದಕ್ಕೆ ಕೇವಲ 'ಶಬ್ದ' ಎಂದು ಅರ್ಥವನ್ನು ಮಾಡಿದರೆ ಸ್ವಾರ್ಥೀಭೂತವಾದ ವರ್ತಮಾನತ್ವದಿಂದ ಅನ್ವಿತವಾದ ಕಾರ್ಯವನ್ನು ಬೋಧನೆ ಮಾಡುವ ಲಟ್ ಲಿಟ್ ಮುಂತಾದ ಪ್ರತ್ಯಯಗಳು ಯೋಗ್ಯ ಎಂದಾಗದೇ ಹೋಗಬೇಕಾದೀತು. ಅಲ್ಲಿ ಶಬ್ದ-ಭೇದವು ಇರುವುದಿಲ್ಲ.

## ಪದ ಎಂದರೆ ಯಾವುದು ?

**ನ್ಯಾಯದೀಪ – ಪದವಿಶೇಷಣಪಕ್ಷೋಕ್ತದೋಷೋ ನಾಸ್ತಿ, ತಸ್ಯ ಶಬ್ದ-ಮಾತ್ರಪರತ್ವಾತ್ ಇತ್ಯತ ಆಹ – ಪದಶಬ್ದಸ್ಯೇತಿ ॥ 'ಗಚ್ಛತಿ ಚೈತ್ರಃ' ಇತ್ಯತ್ರಾ-ಖ್ಯಾತಸ್ಯ ಕೃತಿರ್ವರ್ತಮಾನತ್ವಂ ಚ ದ್ವಯಮರ್ಥಃ । 'ವರ್ತಮಾನೇ ಲಟ್' ಇತ್ಯುಕ್ತೇಃ । 'ಲಃ ಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ' ಇತ್ಯತ್ರ ಚಕಾರೇಣ ಕರ್ತರಿ ಲಕಾರವಿಧಾನೇಽಪಿ ನ್ಯಾಯಮತೇ ಲಾಘವೇನ ಕೃತಿರೇವ ಲಕಾರಾರ್ಥ ಇತಿ**

**ಸ್ವೀಕೃತ್ಯ ತಯೋರನ್ಯೋನ್ಯಾನ್ವಯಸ್ಯ ಚ ಸ್ವೀಕಾರಾತ್ । ತಥಾ ಚ ಲಡರ್ಥ-ಭೂತವರ್ತಮಾನತ್ವಾನ್ವಿತಕೃತ್ಯಾದಿಬೋಧಕೋ ಲಡಾದಿಪ್ರತ್ಯಯೋ ಯೋಗ್ಯೋ ನ ಸ್ಯಾದಿತ್ಯರ್ಥಃ ।**

ಅನುವಾದ - ಪದವಿಶೇಷಣಪಕ್ಷದಲ್ಲಿ ಹೇಳಿದ ದೋಷವು ಬರುವುದಿಲ್ಲ. ಏಕೆಂದರೆ 'ಪದ' ಶಬ್ದಕ್ಕೆ ಕೇವಲ 'ಶಬ್ದ' ಎಂದರ್ಥ ಎಂಬ ಸಮಾಧಾನವನ್ನು 'ಪದಶಬ್ದಸ್ಯ' ಎಂಬ ವಾಕ್ಯದಿಂದ ಉತ್ತರಿಸು-ತ್ತಿದ್ದಾರೆ.

'ವರ್ತಮಾನೇ ಲಟ್' ಎಂಬುದಾಗಿ ಹೇಳಿದ್ದರಿಂದ 'ಗಚ್ಛತಿ ಚೈತ್ರಃ' ಎಂಬಲ್ಲಿ 'ಆಖ್ಯಾತಕ್ಕೆ' ಕೃತಿ ಮತ್ತು 'ವರ್ತಮಾನತ್ವ' ಎಂಬೆರಡು ಅರ್ಥಗಳು. 'ಲಃ ಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ' ಎಂಬಲ್ಲಿ ಚಕಾರದಿಂದ ಕರ್ತರ್ಥದಲ್ಲಿ ಲಕಾರವನ್ನು ವಿಧಾನ ಮಾಡಿದ್ದಾರೆ. ಆದ್ದರಿಂದ, ನ್ಯಾಯಮತದಲ್ಲಿ ಲಾಘವವಿದೆಯಾದ್ದರಿಂದ ಕೃತಿಯೇ ಲಕಾರದ ಅರ್ಥವೆಂದು ಸ್ವೀಕಾರ ಮಾಡಿ ಅವೆರಡಕ್ಕೆ ಪರಸ್ಪರವಾಗಿ ಅನ್ವಯವನ್ನು ಸ್ವೀಕಾರ ಮಾಡಲಾಗಿದೆ. ಆದ್ದರಿಂದ ಲಟ್ ಲಕಾರದ ಅರ್ಥವಾದ ವರ್ತಮಾನತ್ವದಿಂದ ಕೂಡಿದ ಕೃತ್ಯಾದಿಗಳನ್ನು ಬೋಧನೆ ಮಾಡುವ ಲಟ್ ಮುಂತಾದ ಪ್ರತ್ಯಯಗಳು ಯೋಗ್ಯವಾಗದೆ ಇರಬೇಕಾದೀತು.

> ವಿವರಣೆ - 'ಲಃ ಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ' ಎಂಬ ಸೂತ್ರದಲ್ಲಿ ಕರ್ಮಾ-ರ್ಥದಲ್ಲಿ ಮತ್ತು ಕರ್ತ್ರರ್ಥದಲ್ಲಿ ಹಾಗೂ ಅಕರ್ಮಕಧಾತುವಿನ ಭಾವೇಪ್ರಯೋಗದಲ್ಲಿ ಲಕಾರವನ್ನು ವಿಧಾನ ಮಾಡಲಾಗಿದೆ. 'ದೇವದತ್ತಃ ಗ್ರಾಮಂ ಗಚ್ಛತಿ' ಎಂಬಲ್ಲಿರುವ ಆಖ್ಯಾತವು ಕರ್ತರ್ಥದಲ್ಲಿದೆ. 'ದೇವದತ್ತೇನ ಗ್ರಾಮಃ ಗಮ್ಯತೇ' ಎಂಬಲ್ಲಿ ಆಖ್ಯಾತವು ಕರ್ಮಾರ್ಥದಲ್ಲಿದೆ. 'ಪುಷ್ಪಂ ವಿಕಸತಿ' ಎಂಬುದರ ಬದಲು 'ಪುಷ್ಪಃ ವಿಕಸ್ಯತೇ' ಎಂಬುದಾಗಿ ಪ್ರಯೋಗ ಮಾಡಿದಾಗ ಅಕರ್ಮಕವಾದ ಆಖ್ಯಾತವು ಭಾವಾರ್ಥವನ್ನು ಹೇಳುತ್ತದೆ. ಹೀಗೆ ಈ ಸೂತ್ರದಲ್ಲಿ 'ಚ' ಶಬ್ದದಿಂದ ಕರ್ತ್ರರ್ಥವನ್ನು ವಿವಕ್ಷಿಸಬೇಕೆಂದು ವೈಯಾಕರಣರು ತಿಳಿಸಿದ್ದಾರೆ.
>
> ಆದರೆ ಈ ವಿಷಯವನ್ನು ತಾರ್ಕಿಕರು ಅಂಗೀಕಾರ ಮಾಡುವುದಿಲ್ಲ. ಪ್ರಥಮಾಂತ-

ವಿಶೇಷ್ಯಕವಾದ ಶಾಬ್ದಬೋಧ ಹಾಗೂ ಧಾತ್ವರ್ಥವಿಶೇಷ್ಯಕಶಬ್ದಬೋಧ ಈ ಎರಡು ವಿಷಯದಲ್ಲಿ ವೈಯಾಕರಣರಿಗೂ ತಾರ್ಕಿಕರಿಗೂ ಬಹಳ ವಿವಾದವಿದೆ.

ನೈಯಾಯಿಕರು ಆಖ್ಯಾತಕ್ಕೆ ಕೃತಿ ಎಂಬರ್ಥವನ್ನು ಹೇಳುತ್ತಾರೆ. 'ದೇವದತ್ತಃ ಗ್ರಾಮಂ ಗಚ್ಛತಿ' ಎಂಬಲ್ಲಿರುವ 'ಗಚ್ಛತಿ' ಎಂಬ ಆಖ್ಯಾತಕ್ಕೆ ಕೃತಿಯುಳ್ಳವನು ಎಂಬ ಕರ್ತರ್ಥವನ್ನು ಹೇಳುವುದಕ್ಕಿಂತ 'ಕೃತಿ' ಎಂಬ ಅರ್ಥವನ್ನು ಹೇಳುವುದರಲ್ಲಿ ಲಾಘವವಿದೆ. 'ದೇವದತ್ತೇನ ಗಮ್ಯತೇ' ಎಂಬಲ್ಲಿರುವ ಆಖ್ಯಾತಕ್ಕೂ ಕೂಡ ಕೃತಿ ಎಂದೇ ಅರ್ಥ ಹೊರತು, ಕೃತಿ-ವಿಷಯತ್ವವು ಅರ್ಥವಲ್ಲ. ಆದ್ದರಿಂದ 'ಗಚ್ಛತಿ' ಹಾಗೂ 'ಗಮ್ಯತೇ' ಎಂಬೆರಡು ಕಡೆ ಕೃತಿ ಎಂಬ ಒಂದೇ ಅರ್ಥವನ್ನು ಹೇಳಬೇಕು. ಎರಡು ಕಡೆ ಹೀಗೆ ಒಂದೇ ಅರ್ಥವನ್ನು ಹೇಳುವುದರಿಂದ ಲಾಘವವಿದೆ. ಆದರೆ 'ಗಚ್ಛತಿ' ಎಂಬಲ್ಲಿ ಕೃತ್ಯಾಶ್ರಯತ್ವವು ಸಂಬಂಧ-ರೂಪವಾಗಿದೆ. 'ಗಮ್ಯತೇ' ಎಂಬಲ್ಲಿ ಕೃತಿವಿಷಯತ್ವವನ್ನು ಒಪ್ಪುವುದರಿಂದ ಲಾಘವವಿದೆ. ಆದರೆ 'ಗಚ್ಛತಿ' ಎಂಬಲ್ಲಿ ಕೃತ್ಯಾಶ್ರಯತ್ವವು ಸಂಬಂಧರೂಪವಾಗಿದೆ. 'ಗಮ್ಯತೇ' ಎಂಬಲ್ಲಿ ಕೃತಿವಿಷಯತ್ವವು ಸಂಬಂಧರೂಪವಾಗಿದೆ.

## 'ಕೃತ್ಯಾದಿ' ಎಂಬಲ್ಲಿರುವ ಆದಿಪದಾರ್ಥ

**ನ್ಯಾಯದೀಪ – 'ಕೃತ್ಯಾದಿ' ಇತ್ಯಾದಿಪದೇನ 'ರಥೋ ಗಚ್ಛತಿ' ಇತ್ಯಾದಿ-ಜಡಸಾಧಾರಣವ್ಯಾಪಾರಗ್ರಹಃ । ಚಿರಂತನಮತೇ ವ್ಯಾಪಾರಮಾತ್ರಸ್ಯ ಆಖ್ಯಾತಾ-ರ್ಥತ್ವಾತ್,**

ಅನುವಾದ - 'ಕೃತ್ಯಾದಿ' ಎಂಬಲ್ಲಿ ಆದಿಪದದಿಂದ 'ರಥೋ ಗಚ್ಛತಿ' ಮುಂತಾದ ಜಡಸಾಧಾರಣ-ವಾದ ವ್ಯಾಪಾರವನ್ನು ಗ್ರಹಣ ಮಾಡಬೇಕು. ಹಿಂದಿನ ಮತದಲ್ಲಿ ಕೇವಲ ವ್ಯಾಪಾರವೇ ಆಖ್ಯಾತದ ಅರ್ಥವಾಗಿತ್ತು.

## ಸಂಯೋಗವು ದ್ರವ್ಯನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ

**ತರ್ಕತಾಂಡವ – ತತ್ರಾಪಿ ತಿಙ್ತ್ವಲಟ್ತ್ವಾದಿನಾ ಭೇದಕಲ್ಪನೇಽಪಿ 'ದ್ರವ್ಯಂ**

**ಸಂಯೋಗೀ'ಇತಿ ವಾಕ್ಯಮಯೋಗ್ಯಂ ಸ್ಯಾತ್ । ಸಂಯೋಗಸ್ಯ ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವಾತ್ ।**

ಅನುವಾದ - ಲಡಾದಿಪ್ರತ್ಯಯಗಳಲ್ಲೂ ಸಹ ತಿಙ್ತ್ವ ಲಟ್ತ್ವ ಮುಂತಾದವುಗಳಿಂದ ಭೇದವನ್ನು ಕಲ್ಪನೆ ಮಾಡಿದರೂ 'ದ್ರವ್ಯಂ ಸಂಯೋಗೀ' ಮುಂತಾದ ವಾಕ್ಯವು ಅಯೋಗ್ಯವಾಗಬೇಕಾದೀತು. ಸಂಯೋಗವು ದ್ರವ್ಯನಿಷ್ಠಾತ್ಯಾಂತಭಾವಕ್ಕೆ ಪ್ರತಿಯೋಗಿಯಾಗಿದೆ.

**ನ್ಯಾಯದೀಪ – ತಿಙ್ತ್ವೇತಿ ॥ ತಿಙ್ತ್ವೇನ ಕೃತಿರರ್ಥೋ ಲಟ್ತ್ವೇನ ವರ್ತಮಾನತ್ವಮರ್ಥ ಇತ್ಯಾಕಾರಭೇದಾದ್ ಭೇದ ಇತ್ಯರ್ಥಃ ।**

ಅನುವಾದ– 'ತಿಙ್ತ್ವ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ತಿಙ್ತ್ವೇನ ಕೃತಿಯು ಅರ್ಥವಾಗಿದೆ. ಲಟ್ತ್ವೇನ = ವರ್ತಮಾನತ್ವವು ಅರ್ಥವಾಗಿದೆ ಎಂದು ಎರಡಕ್ಕೂ ಆಕಾರಭೇದವು ಇದೆಯಾದ್ದರಿಂದ ಶಬ್ದಭೇದವಿದೆ ಎಂದರ್ಥ.

ವಿವರಣೆ - ಗ್ರಂಥದಲ್ಲಿ 'ಕೃತ್ಯಾದಿ' ಎಂಬುದಾಗಿ ಆದಿಪದದಿಂದ ವ್ಯಾಪಾರವನ್ನು ವಿವಕ್ಷಿಸಿದ್ದಾರೆ. ಏಕೆಂದರೆ 'ರಥೋ ಗಚ್ಛತಿ' ಎಂಬಲ್ಲಿ ಆಖ್ಯಾತಕ್ಕೆ ಕೃತಿಯನ್ನು ವಿವಕ್ಷಿಸಲು ಸಾಧ್ಯವಿಲ್ಲ. 'ಕೃತಿ' ಎಂಬ ಶಬ್ದಕ್ಕೆ 'ಪ್ರಯತ್ನ' ಎಂದರ್ಥ. ಇದು ಚೇತನನಿಷ್ಠವಾದ ಧರ್ಮವಾಗಿದೆ. ಜ್ಞಾನ, ಇಚ್ಛೆ, ಕೃತಿ ಈ ಮೂರೂ ಕೂಡ ಜಡಪದಾರ್ಥದಲ್ಲಿ ಇರುವುದಿಲ್ಲ. ಆದ್ದರಿಂದ 'ರಥೋ ಗಚ್ಛತಿ' ಎಂಬ ಸ್ಥಳದಲ್ಲಿರುವ ಆಖ್ಯಾತಕ್ಕೆ ಕೃತಿಯನ್ನು ಅರ್ಥವೆಂದು ವಿವಕ್ಷಿಸಲು ಸಾಧ್ಯವಾಗುವುದಿಲ್ಲ. ಇಂಥ ಸ್ಥಳದಲ್ಲಿ ವ್ಯಾಪಾರವನ್ನು ಆಖ್ಯಾತದ ಅರ್ಥವೆಂದು ವಿವಕ್ಷಿಸಬೇಕು. ಪ್ರಾಚೀನತಾರ್ಕಿಕರು ಎಲ್ಲೆಡೆಯು ಕೃತಿಯನ್ನೇ ಆಖ್ಯಾತದ ಅರ್ಥವೆಂದು ಒಪ್ಪುತ್ತಾರೆ. ಆದರೆ ನವೀನತಾರ್ಕಿಕರು ಚೇತನವಿಶೇಷ್ಯಕವಾದ ಪ್ರಯೋಗಗಳಲ್ಲಿ ಕೃತಿಯನ್ನು ಆಖ್ಯಾತದ ಅರ್ಥವೆಂದು ಜಡವಿಷಯಕವಾದ ಪ್ರಯೋಗದಲ್ಲಿ ವ್ಯಾಪಾರವನ್ನು ಆಖ್ಯಾತದ ಅರ್ಥವೆಂದು ವಿವಕ್ಷಿಸುತ್ತಾರೆ. ಗ್ರಂಥಕಾರರು ಆದಿಪದದಿಂದ ಜಡಸಾಧಾರಣವಾದ ವ್ಯಾಪಾರವನ್ನು ಪ್ರಕೃತ ವಿವಕ್ಷಿಸಿದ್ದಾರೆ. ನವೀನತಾರ್ಕಿಕರು 'ರಥೋ ಗಚ್ಛತಿ' ಇತ್ಯಾದಿ ಸ್ಥಳದಲ್ಲಿ ಕೃತಿ ಶಬ್ದಕ್ಕೆ ಲಕ್ಷಣಾರ್ಥವನ್ನು ಸ್ವೀಕರಿಸುತ್ತಾರೆ.

ಪ್ರಾಚೀನತಾರ್ಕಿಕರು ಹೇಳುವ ವ್ಯಾಪಾರವೆಂಬ ಅರ್ಥವನ್ನೇ ನಮ್ಮ ಸಿದ್ಧಾಂತದಲ್ಲೂ ಕೂಡ ಅಂಗೀಕರಿಸಲಾಗಿದೆ. ಒಂದೇ ಆಖ್ಯಾತಕ್ಕೆ 'ತಿಪ್ತ್ವ' ಎಂಬ ಅವಚ್ಛೇದಕಧರ್ಮದಿಂದ ಕೃತಿ ಎಂಬ ಅರ್ಥವನ್ನು ಹೇಳಲಾಗುತ್ತದೆ. 'ಟತ್ವ' ಎಂಬ ಅವಚ್ಛೇದಕಧರ್ಮದಿಂದ ವರ್ತಮಾನತ್ವ ಎಂಬ ಅರ್ಥವನ್ನು ತಿಳಿಯಬೇಕು. ಉದಾಹರಣೆ - 'ರಾಮಂ' ಎಂಬಲ್ಲಿ 'ಅಮ್' ಎಂಬ ಪ್ರತ್ಯಯವು ಕಾರಕಧರ್ಮಪುರಸ್ಸರವಾಗಿ ಕರ್ಮತ್ವವನ್ನು ಏಕವಚನ-ಪ್ರಯುಕ್ತವಾಗಿ ಏಕತ್ವವನ್ನು ಹೇಳುತ್ತದೆ. ಅದರಂತೆ ಇಲ್ಲಿಯೂ ತಿಳಿಯಬೇಕು. ಹೀಗೆ ವಿವಕ್ಷಿಸಿದಾಗ ಏಕಪದಾರ್ಥದಲ್ಲಿ ಅಪರಪದಾರ್ಥಸಂಸರ್ಗವನ್ನು ಸುಲಭವಾಗಿ ಹೇಳ-ಬಹುದು. ಏಕಪದಾರ್ಥ ಎಂದರೆ 'ತಿಪ್ತ್ವ' ಎಂಬ ಧರ್ಮದಿಂದ ಅವಚ್ಛಿನ್ನವಾದ 'ತಿಪ್' ಎಂಬುದು ಲಟ್ತ್ವಾವಚ್ಛಿನ್ನವಾದ 'ತಿಪ್' ಎಂಬ ಅಪರಪದಾರ್ಥದಲ್ಲಿ ಸಂಸರ್ಗವನ್ನು ಹೊಂದುತ್ತದೆಂದು ಸುಲಭವಾಗಿ ಹೇಳಬಹುದು.

## ಲಕಾರದಲ್ಲಿ ತಿಪ್ತ್ವವಿದೆ

**ನ್ಯಾಯದೀಪ – ಯದ್ಯಪಿ ಲಕಾರತ್ವೇನೈವ ಕೃತಿರರ್ಥಃ । ತಥಾಪಿ ತಿಪಶ್ಚೋ ಲಕಾರಾದೇಶತ್ವಾತ್ ತಿಪ್ತ್ವೇನ ಇತ್ಯುಕ್ತಮ್ ।**

ಅನುವಾದ - ವಾಸ್ತವಿಕವಾಗಿ ಲಕಾರತ್ವೇನ ಕೃತಿಯನ್ನೇ ಅರ್ಥವಾಗಿ ಹೇಳಬೇಕು. ಆದರೂ ತಿಪ್ ಪ್ರತ್ಯಯವು ಲಕಾರಕ್ಕೆ ಆದೇಶವಾದ್ದರಿಂದ ತಿಪ್ತ್ವೇನ ಎಂದು ಹೇಳಲಾಗಿದೆ.

## ''ದ್ರವ್ಯಂ ಸಂಯೋಗೀ'' ಎಂಬಲ್ಲಿ ಅವ್ಯಾಪ್ತಿ

**ನ್ಯಾಯದೀಪ – ಸಂಯೋಗಸ್ಯೇತಿ ॥ 'ದ್ರವ್ಯಂ ಸಂಯೋಗೀ' ಇತಿ ವಿಶಿಷ್ಟ-ವೈಶಿಷ್ಟ್ಯಂ ಹಿ ವಾಕ್ಯಾರ್ಥಃ । ತಥಾ ಚ ಸಂಯೋಗರೂಪೈಕಪದಾರ್ಥನಿರೂಪಿತ-ಸಂಸರ್ಗೇ ಅಪರಪದಾರ್ಥದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವಸ್ಯೈವ ಸತ್ವೇನ ತತ್ಪ್ರಮಾಣವಿಶೇಷ್ಯತ್ವಸ್ಯ ತತ್ಪ್ರತಿಯೋಗಿತಾವಚ್ಛೇದಕಧರ್ಮಸ್ಯ ಚ ಸತ್ವೇನೋಕ್ತ-ಲಕ್ಷಣಾಭಾವಾದವ್ಯಾಪ್ತಿರಿತಿ ಭಾವಃ ।**

ಅನುವಾದ - 'ಸಂಯೋಗಸ್ಯ' ಎಂಬ ಶಬ್ದದ ಅಭಿಪ್ರಾಯ ಹೀಗಿದೆ - 'ದ್ರವ್ಯಂ ಸಂಯೋಗೀ' 'ದ್ರವ್ಯವು ಸಂಯೋಗವುಳ್ಳದ್ದು' ಎಂಬ ವಿಶಿಷ್ಟವೈಶಿಷ್ಟ್ಯವು ವಾಕ್ಯದ ಅರ್ಥ. ಇಲ್ಲಿ ಸಂಯೋಗರೂಪವಾದ ಒಂದು ಪದಾರ್ಥದಿಂದ ನಿರೂಪಿತವಾದ ಸಂಸರ್ಗದಲ್ಲಿ ಅಪರಪದಾರ್ಥವಾದ ದ್ರವ್ಯದಲ್ಲಿರುವ ಅತ್ಯಂತಾಭಾವಪ್ರತಿಯೋಗಿತ್ವವೇ ಇರುವುದರಿಂದ ಇಂತಹ ಪ್ರಮಾವಿಶೇಷ್ಯತ್ವ ಮತ್ತು ತತ್ಪ್ರತಿಯೋಗಿತಾವಚ್ಛೇದಕಧರ್ಮ ಇರುವುದರಿಂದ ಹಿಂದೆ ಹೇಳಿದ ಲಕ್ಷಣವಿಲ್ಲವಾದ್ದರಿಂದ ಅವ್ಯಾಪ್ತಿ ಬರುತ್ತದೆಂದಭಿಪ್ರಾಯ.

ವಿವರಣೆ - 'ಸಂಯೋಗಸಂಸರ್ಗ' ಎಂಬುದು 'ಸಂಯೋಗನಿರೂಪಿತತ್ವವಿಶಿಷ್ಟ-ಸಮವಾಯ' ಅಥವಾ ವಿಶೇಷಣತಾರೂಪವಾದ ಸ್ವರೂಪಸಂಬಂಧ ಎಂಬ ಸ್ವರೂಪ-ವುಳ್ಳದ್ದು.

ಸಂಯೋಗವು ಅವ್ಯಾಪ್ಯವೃತ್ತಿ ಆಗುವಂತೆ ಸಮವಾಯವು ಕೂಡ ಅವ್ಯಾಪ್ಯವೃತ್ತಿ ಆಗುತ್ತದೆ. ಏಕೆಂದರೆ ಎಲ್ಲಿ ಸಂಯೋಗ ಇರುವುದಿಲ್ಲವೋ ಅಲ್ಲಿ ಸಂಯೋಗನಿರೂಪಿತ-ವಾದ ಸಮವಾಯುವೂ ಕೂಡ ಇರುವುದಿಲ್ಲ. ಆದ್ದರಿಂದ ಸಂಯೋಗವು ಅವ್ಯಾಪ್ಯವೃತ್ತಿ ಆಗುವಂತೆ ಸಮವಾಯುವೂ ಕೂಡ ಅವ್ಯಾಪ್ಯವೃತ್ತಿಯಾಯಿತು. ಆದ್ದರಿಂದ ಸಂಯೋಗ-ಸಂಸರ್ಗ ಎಂಬುದಕ್ಕೆ 'ಸಂಯೋಗನಿರೂಪಿತತ್ವ-ವಿಶಿಷ್ಟಸಮವಾಯ' ಎಂಬರ್ಥವನ್ನು ತಿಳಿಯಬೇಕು.

ಅಥವಾ 'ವೃಕ್ಷಃ ಕಪಿಸಂಯೋಗೀ' ಎಂಬಲ್ಲಿ 'ವೃಕ್ಷ' ಎಂಬುದು ವಿಶೇಷ್ಯವಾಗಿದೆ. ಸಂಯೋಗವು ವಿಶೇಷಣವಾಗಿದೆ. ವೃಕ್ಷ ಹಾಗೂ ಸಂಯೋಗಗಳಿಗೆ ವಿಶೇಷಣ-ವಿಶೇಷ್ಯ-ಭಾವರೂಪವಾದ ಸ್ವರೂಪಸಂಬಂಧವನ್ನು ಹೇಳಬೇಕು. ಆದ್ದರಿಂದ ವಿಶೇಷಣತಾರೂಪ-ವಾದ ಸ್ವರೂಪಸಂಬಂಧವನ್ನು ಕೂಡ ಸಂಯೋಗಸಂಸರ್ಗರೂಪವೆಂದು ತಿಳಿಯಬೇಕು.

ಗ್ರಂಥದಲ್ಲಿ 'ಸಂಯೋಗಸ್ಯ ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವಾತ್' ಎಂದು ಹೇಳಿದ್ದಾರೆ. ಆದರೆ 'ಸಂಯೋಗಸಂಸರ್ಗಸ್ಯ' ಎಂದು ಹೇಳಬೇಕಿತ್ತಲ್ಲವೆ? ಎಂಬ ಪ್ರಶ್ನೆ ಬರುತ್ತದೆ. ಸಂಯೋಗಸಂಸರ್ಗವು ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿಯಾಗಬೇಕಾದರೆ ಸಂಯೋಗವು ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗೀ ಆಗಿರಬೇಕು. ಸಮವಾಯವಾಗಲಿ

ಅಥವಾ ವಿಶೇಷ್ಯ-ವಿಶೇಷಣತಾರೂಪವಾದ ಸ್ವರೂಪಸಂಬಂಧವಾಗಲಿ ಅವ್ಯಾಪ್ಯವೃತ್ತಿ-ಯಾಗಬೇಕಾದರೆ ಸಂಯೋಗವು ಅವ್ಯಾಪ್ಯವೃತ್ತಿಯಾಗಿರಬೇಕು. ಆದ್ದರಿಂದ ಹಿಂದೆ ಹೇಳಿದ ಯೋಗ್ಯತೆಯ ಲಕ್ಷಣವು ಬಾರದಿರಲು ಸಂಯೋಗವು ಅವ್ಯಾಪ್ಯವೃತ್ತಿಯಾಗಿರುವುದೇ ನಿಮಿತ್ತವಾಗಿದೆ. ಆದ್ದರಿಂದ ಗ್ರಂಥದಲ್ಲಿ 'ಸಂಯೋಗಸಂಸರ್ಗಸ್ಯ' ಎಂದು ಹೇಳದೆ 'ಸಂಯೋಗಸ್ಯ' ಎಂಬುದಾಗಿ ಹೇಳಿರುತ್ತಾರೆ.

## 'ಸಂಯೋಗಸಂಸರ್ಗಸ್ಯ' ಎಂದು ಹೇಳದಿರಲು ಕಾರಣ

**ನ್ಯಾಯದೀಪ – ಸಂಯೋಗಸಂಸರ್ಗಶ್ಚ ನಿರೂಪಿತತ್ವವಿಶಿಷ್ಟಸಮವಾಯೋ ವಾ, ವಿಶೇಷಣತಾರೂಪಸ್ವರೂಪಸಂಬಂಧೋ ವಾ ಧ್ಯೇಯಃ । ತತ್ರೋಕ್ತಲಕ್ಷಣಸತ್ತ್ವೇಪಿ ಸಂಯೋಗಸ್ಯ ಅವ್ಯಾಪ್ಯವೃತ್ತಿತ್ವಮಿತಿ ಸಂಯೋಗಸ್ಯ ಇತ್ಯೇವೋಕ್ತಮ್ ।**

ಅನುವಾದ - ಸಂಯೋಗಸಂಸರ್ಗವು ನಿರೂಪಿತತ್ವವಿಶಿಷ್ಟವಾದ ಸಮವಾಯಸಂಬಂಧ ಅಥವಾ ವಿಶೇಷಣತಾ ರೂಪವಾದ ಸ್ವರೂಪಸಂಬಂಧ ಎಂದು ತಿಳಿಯಬೇಕು. ಹಿಂದೆ ಹೇಳಿದ ಲಕ್ಷಣ ಬಾರದಿರಲು ಸಂಯೋಗವು ಅವ್ಯಾಪ್ಯವೃತ್ತಿಯಾಗಿರುವುದೇ ನಿಮಿತ್ತವಾಗಿದೆ. ಆದ್ದರಿಂದ ಗ್ರಂಥದಲ್ಲಿ 'ಸಂಯೋಗ-ಸಂಸರ್ಗಸ್ಯ' ಎಂದು ಹೇಳದೆ 'ಸಂಯೋಗಸ್ಯ' ಎಂದೇ ಹೇಳಿದ್ದಾರೆ.

ವಿವರಣೆ -ಒಂದು ಧರ್ಮದಿಂದ ವಿಶಿಷ್ಟವಾದ ಪದಾರ್ಥವು ಮತ್ತೊಂದು ಧರ್ಮದಿಂದ ವಿಶಿಷ್ಟವಾದಾಗ ವಿಶಿಷ್ಟಬೋಧಕವಾಕ್ಯ ಎನ್ನುತ್ತಾರೆ. 'ದಂಡೀ ಕುಂಡಲೀ ದೇವದತ್ತಃ' ಎಂಬುದು ಇದಕ್ಕೆ ಉದಾಹರಣೆ– ದಂಡವಿಶಿಷ್ಟನಾದ ದೇವದತ್ತನಲ್ಲಿ ಕುಂಡಲವೈಶಿಷ್ಟ್ಯ-ವನ್ನು ಹೇಳಿದರೆ ಆಗ ಈ ವಾಕ್ಯವು ವಿಶಿಷ್ಟವಿಶಿಷ್ಟ್ಯಬೋಧಕವಾಗುತ್ತದೆ. ಪ್ರಕೃತ 'ದ್ರವ್ಯಂ ಸಂಯೋಗೀ' ಎಂಬ ವಾಕ್ಯದಲ್ಲಿ ದ್ರವ್ಯತ್ವ ಎಂಬ ಧರ್ಮದಿಂದ ವಿಶಿಷ್ಟವಾದ ದ್ರವ್ಯದಲ್ಲಿ ಸಂಯೋಗದ ವೈಶಿಷ್ಟ್ಯವನ್ನು ಹೇಳುತ್ತಿರುವುದರಿಂದ ವಿಶಿಷ್ಟವೈಶಿಷ್ಟ್ಯಬೋಧಕವಾದ ವಾಕ್ಯವಾಗುತ್ತದೆ.

'ದ್ರವ್ಯಂ ಸಂಯೋಗೀ' ಎಂಬಲ್ಲಿ ಸಂಯೋಗರೂಪವಾದ, ಏಕಪದಾರ್ಥೇ = ಸಂಯೋಗ-ರೂಪವಾದ ಏಕಪದಾರ್ಥದಲ್ಲಿ, ಅಪರಪದಾರ್ಥವೆನಿಸಿದ ದ್ರವ್ಯನಿಷ್ಠಾತ್ಯಂತಾಭಾವಪ್ರತಿ-

ಯೋಗಿತ್ವವೇ ಸಂಯೋಗರೂಪವಾದ ಸಂಸರ್ಗದಲ್ಲಿ ಇರುವುದರಿಂದ ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವವೇ ಬರುತ್ತದೆ. ಈಗ ಸಂಯೋಗದಲ್ಲಿ ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವವೇ ಇರುವುದರಿಂದ ದ್ರವ್ಯನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಪ್ರಮಾವಿಶೇಷತ್ವವೇ ಬರುತ್ತದೆ. ಏಕೆಂದರೆ 'ಅಯಂ ಸಂಯೋಗಃ ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಜ್ಞಾನವು ಪ್ರಮಾರೂಪವೇ ಆಗಿದೆ. ಈ ಪ್ರಮಾದಲ್ಲಿ ಸಂಯೋಗಸಂಸರ್ಗವು ವಿಶೇಷ್ಯವಾಗಿದೆ. ಆಗ ಸಂಯೋಗಸಂಸರ್ಗವು ದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿಯಾಗುವುದರಿಂದ ಯೋಗ್ಯತೆಯ ಲಕ್ಷಣವು ಬರುವುದಿಲ್ಲವಾದ್ದರಿಂದ ಅವ್ಯಾಪ್ತಿದೋಷವು ಬರುತ್ತದೆ.

## ರುಚಿದತ್ತನ ಅಭಿಪ್ರಾಯ ಸರಿಯಲ್ಲ

**ನ್ಯಾಯದೀಪ– ಯತ್ತೂಕ್ತಂ ರುಚಿದತ್ತೇನ – ಏಕತ್ವಾಪರತ್ವೇ ಪದಾರ್ಥವಿಶೇಷಣೇ ಏವ । ನ ಚೈವಂ ಪ್ರಮೇಯತ್ವೇ ಪ್ರಮೇಯತ್ವಮಿತ್ಯತ್ರ ಅವ್ಯಾಪ್ತಿಃ । ಏಕಪದಾರ್ಥಸಂಸರ್ಗೇ ಸ್ವಾಶ್ರಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವಾಭಾವಸ್ಯ ತದರ್ಥತ್ವಾತ್– ಇತಿ । ತದೇತೇನೈವ ನಿರಸ್ತಮ್ ।**

**'ದ್ರವ್ಯಂ ಸಂಯೋಗೀ' ಇತ್ಯತ್ರ ತಥಾಪ್ಯವ್ಯಾಪ್ತೇರಪರಿಹಾರಾತ್ ।**

ಅನುವಾದ - ರುಚಿದತ್ತ ಹೇಳಿದ ಪಕ್ಷವೂ ಸಹ ಇದರಿಂದಲೇ ನಿರಸ್ತವಾಯಿತು. ರುಚಿದತ್ತನಿಂದ ಏಕತ್ವ ಮತ್ತು ಅಪರತ್ವಗಳು ಪದಾರ್ಥಕ್ಕೆ ವಿಶೇಷಣವಾಗಿವೆ. ಹೀಗೆ ಹೇಳಿದಲ್ಲಿ 'ಪ್ರಮೇಯತ್ವೇ ಪ್ರಮೇಯತ್ವಂ' 'ಪ್ರಮೇಯತ್ವದಲ್ಲಿ ಪ್ರಮೇಯತ್ವವಿದೆ' ಎಂಬ ಸ್ಥಳದಲ್ಲಿ ಅವ್ಯಾಪ್ತಿದೋಷವು ಬರುವುದಿಲ್ಲ. ಏಕಪದಾರ್ಥಸಂಸರ್ಗದಲ್ಲಿ ಸ್ವಾಶ್ರಯನಿಷ್ಠವಾದ ಅತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವಾಭಾವವು ಲಕ್ಷಣದ ಅಭಿಪ್ರಾಯ. ಈ ಪಕ್ಷವೂ ಸಹ ನಿರಸ್ತವಾಯಿತು.

'ದ್ರವ್ಯಂ ಸಂಯೋಗೀ' ಎಂಬಲ್ಲಿ ಈ ಲಕ್ಷಣಕ್ಕೆ ಅವ್ಯಾಪ್ತಿದೋಷವು ಪರಿಹಾರವಾಗುವುದಿಲ್ಲ.

## ಅತ್ಯಂತಾಭಾವವು ಲಕ್ಷಣದಲ್ಲಿ ಹೇಗೆ ವಿಶೇಷಣ?

**ತರ್ಕತಾಂಡವಮ್ - ಅತ್ಯಂತಾಭಾವಸ್ಯ ಪ್ರತಿಯೋಗಿವಿರೋಧಿತ್ವೇನ ವ್ಯಾಪ್ಯ-ವೃತ್ತಿತ್ವೇನ ವಾ ವಿಶೇಷಣೇಽಪಿ ಗಂಧಪ್ರಾಗಭಾವಸಮಾನಕಾಲೀನೋ ಘಟೋ ಗಂಧವಾನಿತಿ ವಾಕ್ಯಮಪಿ ಯೋಗ್ಯಂ ಸ್ಯಾತ್ । ಗಂಧವತಿ ಗಂಧಪ್ರಾಗಭಾವಸ್ಯ ಸತ್ವೇಽಪಿ ಗಂಧಾತ್ಯಂತಾಭಾವಸ್ಯಾಸತ್ವಾತ್ ।**

ಅನುವಾದ - ಅತ್ಯಂತಾಭಾವವು ಪ್ರತಿಯೋಗಿವಿರೋಧಿತ್ವೇನ ಅಥವಾ ವ್ಯಾಪ್ಯವೃತ್ತಿತ್ವೇನ ವಿಶೇಷಣ ಎಂದು ಹೇಳಿದರೂ 'ಗಂಧಪ್ರಾಗಭಾವಸಮಾನಕಾಲೀನೋ ಘಟಃ ಗಂಧವಾನ್' 'ಗಂಧಪ್ರಾಗಭಾವದ ಸಮಾನಕಾಲದಲ್ಲಿರುವ ಘಟವು ಗಂಧವುಳ್ಳದ್ದು' ಎಂಬ ವಾಕ್ಯವೂ ಯೋಗ್ಯವಾಗಬೇಕಾಗುತ್ತದೆ. ಗಂಧವುಳ್ಳ ಘಟದಲ್ಲಿ ಗಂಧದ ಪ್ರಾಗಭಾವವಿದ್ದರೂ ಸಹ ಗಂಧದ ಅತ್ಯಂತಾಭಾವವು ಇರುವುದಿಲ್ಲ.

ವಿವರಣೆ - ಅತ್ಯಂತಾಭಾವದಲ್ಲಿ 'ಪ್ರತಿಯೋಗಿವಿರೋಧಿತ್ವ' ಎಂಬ ವಿಶೇಷಣವನ್ನು ಅಥವಾ 'ವ್ಯಾಪ್ಯವೃತ್ತಿತ್ವ' ಎಂಬ ವಿಶೇಷಣವನ್ನು ಹೇಳುತ್ತೇವೆ. ಹೀಗೆ ಹೇಳಿದಾಗ ಯಾವುದೇ ದೋಷಕ್ಕೆ ಅವಕಾಶವಿಲ್ಲ. ಈಗ 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಪ್ರತಿಯೋಗಿವಿರೋಧಿಅತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವಾಭಾವಃ' ಎಂಬುದಾಗಿ ಲಕ್ಷಣವನ್ನು ಪರಿಷ್ಕರಿಸಿದಂತಾಯಿತು.

ಈ ಲಕ್ಷಣವು 'ಜಲೇನ ಸಿಂಚತಿ' ಎಂಬ ಯೋಗ್ಯತಾವುಳ್ಳ ಸ್ಥಳದಲ್ಲಿ ಸಮನ್ವಯವಾಗುತ್ತದೆ. ಸೇಚನಸಂಸರ್ಗವು ಜಲದಲ್ಲಿ ಸ್ವಾಭಾವಿಕವಾಗಿಯೇ ಇದೆ. ಈ ಸೇಚನಸಂಸರ್ಗವು ಅಗ್ನಿಯಲ್ಲಿ ಸರ್ವಥಾ ಇರುವುದಿಲ್ಲ. ಆದ್ದರಿಂದ ಸೇಚನಸಂಸರ್ಗವು ಅಗ್ನಿನಿಷ್ಠ-ಅತ್ಯಂತಾಭಾವಪ್ರತಿಯೋಗಿಯಾಗಿದೆ. ಈ ಅತ್ಯಂತಾಭಾವವು ಪ್ರತಿಯೋಗಿಗೆ ವಿರೋಧಿಯೇ ಆಗಿದೆ. ಸಂಯೋಗ ಬಿಟ್ಟು ಉಳಿದ ಎಲ್ಲಾ ಅತ್ಯಂತಾಭಾವವೂ ಕೂಡ ಪ್ರತಿಯೋಗಿಗೆ ವಿರೋಧಿಯೇ ಆಗಿರುತ್ತದೆ. ಆದ್ದರಿಂದ ಪ್ರತಿಯೋಗಿಗೆ ವಿರೋಧಿಯಾದ ಸ್ವಾಶ್ರಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವರೂಪವಾದ ಪ್ರಮಾವಿಶೇಷ್ಯತ್ವವು ಇಲ್ಲದ

ಕಾರಣ ಯೋಗ್ಯತೆಯ ಲಕ್ಷಣವು ಸಮನ್ವಯವಾಗುತ್ತದೆ. 'ಅಗ್ನಿನಾ ಸಿಂಚತಿ' ಎಂಬಲ್ಲಿ ಏಕಪದಾರ್ಥಸಂಸರ್ಗೇ = ಅಗ್ನಿರೂಪಏಕಪದಾರ್ಥಸಂಸರ್ಗೇ ಪ್ರತಿಯೋಗಿವಿರೋಧಿಯಾದ ಸ್ವಾಶ್ರಯನಿಷ್ಠವಾದ ಅತ್ಯಂತಭಾವ ಎಂದರೆ ಸೇಚನದ ಅತ್ಯಂತಾಭಾವ, ಅದಕ್ಕೆ ಪ್ರತಿಯೋಗಿಯಾದದ್ದು ಸೇಚನ, ತತ್‌ಪ್ರಮಾವಿಶೇಷ್ಯತ್ವವು ಇರುವುದರಿಂದ ತದಭಾವರೂಪವಾದ ಯೋಗ್ಯತೆಯ ಲಕ್ಷಣವು ಬರುವುದಿಲ್ಲ.

'ದ್ರವ್ಯಂ ಸಂಯೋಗೀ' ಎಂಬಲ್ಲಿ ಅವ್ಯಾಪ್ತಿಗೆ ಅವಕಾಶವಿಲ್ಲ. ಏಕೆಂದರೆ ಏಕಪದಾರ್ಥಸಂಸರ್ಗೇ = ಸಂಯೋಗರೂಪಪದಾರ್ಥಸಂಸರ್ಗದಲ್ಲಿ, ಸ್ವಾಶ್ರಯನಿಷ್ಠಾತ್ಯಂತಾಭಾವ ಎಂದರೆ ದ್ರವ್ಯನಿಷ್ಠವಾದ ಸಂಯೋಗದ ಅತ್ಯಂತಭಾವ, ಇದು ಪ್ರತಿಯೋಗಿಗೆ ವಿರೋಧಿ ಯಾಗಿರುವುದಿಲ್ಲ. ಮತ್ತು ಅವ್ಯಾಪ್ಯವೃತ್ತಿಯೇ ಆಗಿದೆ. ಆದ್ದರಿಂದ ಸ್ವಾಶ್ರಯನಿಷ್ಠವಾದ ಅತ್ಯಂತಾಭಾವ ಎಂದರೆ ದ್ರವ್ಯನಿಷ್ಠವಾದ ಸಂಯೋಗಾತ್ಯಂತಾಭಾವವನ್ನು ವಿವಕ್ಷಿಸಲು ಸಾಧ್ಯವಿಲ್ಲ. ಬೇರೆ ಯಾವುದಾದರೂ ಅತ್ಯಂತಾಭಾವವನ್ನು ವಿವಕ್ಷಿಸಬೇಕು. ಆದ್ದರಿಂದ ತತ್‌ಪ್ರತಿಯೋಗಿಪ್ರಮಾವಿಶೇಷತ್ವವು ಬರುವುದಿಲ್ಲ. ತದಭಾವರೂಪವಾದ ಯೋಗ್ಯತೆಯ ಲಕ್ಷಣವು ಸಮನ್ವಯವಾಗುತ್ತದೆ.

'ದ್ರವ್ಯಂ ಸಂಯೋಗೀ' ಎಂಬ ಸ್ಥಳದಲ್ಲಿ ಅವ್ಯಾಪ್ತಿದೋಷವು ಪರಿಹಾರವಾದರೂ ಕೂಡ 'ಗಂಧಪ್ರಾಗಭಾವಸಮಾನಕಾಲೀನೋ ಘಟಃ ಗಂಧವಾನ್' ಎಂಬ ವ್ಯಾಹತವಾದ ಸ್ಥಳದಲ್ಲಿ ಅತಿವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ. ಘಟ ಹುಟ್ಟಿದ ಕ್ಷಣದಲ್ಲಿ ಗಂಧವು ಇರುವುದಿಲ್ಲ. ಗಂಧದ ಪ್ರಾಗಭಾವವೇ ಇರುತ್ತದೆ. ಪ್ರಥಮಕ್ಷಣಾವಚ್ಛಿನ್ನವಾದ ಘಟವು ಗಂಧಪ್ರಾಗಭಾವಸಮಾನಕಾಲೀನವಾಗಿದೆ. ಇಂಥ ಘಟವನ್ನು 'ಗಂಧವಾನ್' ಎಂದು ಹೇಳಿದರೆ ಯೋಗ್ಯತಾ ಇಲ್ಲದ ವಾಕ್ಯವಾಗುತ್ತದೆ. ಇಂಥ ಸ್ಥಳದಲ್ಲಿ ನೀವು ಹೇಳಿದ ಲಕ್ಷಣವು ಸಮನ್ವಯವಾಗುತ್ತದೆ.

ಅದು ಹೀಗೆ - ಒಂದೇ ಘಟದಲ್ಲಿ ಪ್ರಥಮಕ್ಷಣಾವಚ್ಛೇದೇನ ಗಂಧದ ಪ್ರಾಗಭಾವವಿದೆ. ಅದೇ ಘಟದಲ್ಲಿ ದ್ವಿತೀಯಕ್ಷಣಾವಚ್ಛೇದೇನ ಗಂಧವು ಇದೆ. ಹೀಗೆ ಗಂಧ ಹಾಗೂ ಗಂಧಪ್ರಾಗಭಾವಗಳೆರಡು ಕಾಲಭೇದದಿಂದ ಸಮಾನಾಧಿಕರಣಗಳಾಗಿವೆ. ಹೀಗಿರುವಾಗ

ಅತ್ಯಂತಾಭಾವವನ್ನು ಘಟದಲ್ಲಿ ಹೇಳಲು ಬರುವುದಿಲ್ಲ. ಗಂಧದ ಪ್ರಾಗಭಾವಕ್ಷಣದಲ್ಲಿಯೂ ಅತ್ಯಂತಭಾವ ಇರುವುದಿಲ್ಲ. ಗಂಧ ಇರುವ ಕ್ಷಣದಲ್ಲಿಯೂ ಗಂಧದ ಅತ್ಯಂತಭಾವ ಇರುವುದಿಲ್ಲ. ಆದ್ದರಿಂದ ಏಕಪದಾರ್ಥ ಎಂದರೆ ಗಂಧಪ್ರಾಗಭಾವ ಸಮಾನಕಾಲೀನವಾದ ಘಟ. ಈ ಘಟದ ಸಂಸರ್ಗದಲ್ಲಿ ಅಪರಪದಾರ್ಥ ಎಂದರೆ ಗಂಧ ಎಂಬ ಪದಾರ್ಥ. ಇದರ ಅತ್ಯಂತಾಭಾವವು ಘಟದಲ್ಲಿ ಇರುವುದಿಲ್ಲ. ಆದ್ದರಿಂದ ತತ್ ಪ್ರತಿಯೋಗಿತ್ವಪ್ರಮಾವಿಶೇಷತ್ವವು ಇಲ್ಲದ ಕಾರಣ ತದಭಾವರೂಪವಾದ ಯೋಗ್ಯತೆಯ ಲಕ್ಷಣವು ಬರುವುದರಿಂದ ಅತಿವ್ಯಾಪ್ತಿಯು ಪ್ರಾಪ್ತವಾಗುತ್ತದೆ. 'ಏಕಪದಾರ್ಥಸಂಸರ್ಗೇ' ಎಂದರೆ ಗಂಧರೂಪವಾದ ಏಕಪದಾರ್ಥಸಂಸರ್ಗದಲ್ಲಿ ಘಟರೂಪವಾದ ಅಪರಪದಾರ್ಥದ ಅತ್ಯಂತಾಭಾವಪ್ರತಿಯೋಗಿತ್ವಾಭಾವವು ಬರುತ್ತದೆ.

## ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣದಲ್ಲಿ ಅವ್ಯಾಪ್ತಿದೋಷವಿದೆ

**ತರ್ಕತಾಂಡವ – ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಸಂಸರ್ಗಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವಪ್ರಮಾವಿಶೇಷ್ಯತ್ವಾಭಾವರೂಪಾಯಾಮ್ ಅನ್ಯೋನ್ಯಾಭಾವಗರ್ಭಾಯಾಂ ಯೋಗ್ಯತಾಯಾಮವ್ಯಾಪ್ತೇಶ್ಚ।**

ಅನುವಾದ - ಈ ರೀತಿ ವಿಶೇಷಣವನ್ನು ಹೇಳಿದರೆ 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಸಂಸರ್ಗಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವಪ್ರಮಾವಿಶೇಷ್ಯತ್ವಾಭಾವಃ ಯೋಗ್ಯತಾ' ಎಂಬ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣದಲ್ಲಿ ಅವ್ಯಾಪ್ತಿಯು ಬರುತ್ತದೆ.

ವಿವರಣೆ - 1. ಅತ್ಯಂತಾಭಾವಗರ್ಭಿತವಾದ ಯೋಗ್ಯತೆ 2. ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆ ಎಂಬುದಾಗಿ ಯೋಗ್ಯತೆಯು ಎರಡುವಿಧವಾಗಿದೆ. ಅತ್ಯಂತಾಭಾವಗರ್ಭಿತವಾದ ಯೋಗ್ಯತೆಯ ಲಕ್ಷಣಕ್ಕೆ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆಯಲ್ಲಿ ಅವ್ಯಾಪ್ತಿದೋಷವನ್ನು ಇಲ್ಲಿ ಹೇಳುತ್ತಿದ್ದಾರೆ.

ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣ ಹೀಗಿದೆ - 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಸಂಸರ್ಗಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವಪ್ರಮಾ-ವಿಶೇಷತ್ವಾಭಾವಃ' ಇಲ್ಲಿರುವ 'ಅಪರಪದಾರ್ಥನಿಷ್ಠಸಂಸರ್ಗ' ಎಂಬ ಪದಕ್ಕೆ 'ಅಪರ-ಪದಾರ್ಥೇ ನಿಷ್ಠಃ ಸಂಸರ್ಗಃ ಯಸ್ಯ ಸಃ ಅಪರಪದಾರ್ಥನಿಷ್ಠಸಂಸರ್ಗಃ' ಎಂಬುದಾಗಿ ಬಹುವ್ರೀಹಿಸಮಾಸವನ್ನು ಮಾಡಬೇಕು. ಆಗ 'ಅಪರಪದಾರ್ಥನಿಷ್ಠಸಂಸರ್ಗವಾನ್' ಎಂಬ ಅರ್ಥವು ದೊರೆಯುತ್ತದೆ. ಆದ್ದರಿಂದ ಸಂಸರ್ಗವದನ್ಯೋನ್ಯಾಭಾವಪ್ರತಿಯೋಗಿತಾ-ವಚ್ಛೇದಕತ್ವಪ್ರಮಾವಿಶೇಷ್ಯತ್ವಾಭಾವ' ಎಂಬ ಲಕ್ಷಣವನ್ನು ತಿಳಿದಂತಾಯಿತು. 'ವಹ್ನಿನಾ ಸಿಂಚತಿ' ಎಂಬಲ್ಲಿ ಸೇಚನನಿಷ್ಠಸಂಸರ್ಗವು ಅಗ್ನಿಯಲ್ಲಿ ಇರುವುದಿಲ್ಲ. ಆದ್ದರಿಂದ ಸೇಚನ-ಸಂಸರ್ಗವು ಅಗ್ನಿನಿಷ್ಠವಾದ ಅನ್ಯೋನ್ಯಾಭಾವಕ್ಕೆ ಪ್ರತಿಯೋಗಿಯಾಗಿದೆ. ಅಗ್ನಿಯು 'ಸೇಚನಸಂಸರ್ಗನಿಷ್ಠ-ಅನ್ಯೋನ್ಯಾಭಾವವತ್' ಆಗಿದೆ. ಈ ಪ್ರತಿಯೋಗಿತಾವಚ್ಛೇದಕವು ಸೇಚನಸಂಸರ್ಗದಲ್ಲಿ ಇದೆ. ಆದ್ದರಿಂದ ಅನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವ-ಪ್ರಮಾವಿಶೇಷ್ಯತ್ವವೇ ಬರುವುದರಿಂದ ತದಭಾವರೂಪವಾದ ಯೋಗ್ಯತೆಯು 'ವಹ್ನಿನಾ ಸಿಂಚತಿ' ಎಂಬಲ್ಲಿ ಬರುವುದಿಲ್ಲ. ಏಕೆಂದರೆ ಏಕಪದಾರ್ಥಸಂಸರ್ಗೇ = ಸೇಚನರೂಪ-ಸಂಸರ್ಗದಲ್ಲಿ, ಅಪರಪದಾರ್ಥನಿಷ್ಠ = ಅಗ್ನಿನಿಷ್ಠವಾದ ಸಂಸರ್ಗವದನ್ಯೋನ್ಯಾಭಾವ = ಸಂಸರ್ಗದ ಅನ್ಯೋನ್ಯಾಭಾವವು, ಸೇಚನಸಂಸರ್ಗದ ಅನ್ಯೋನ್ಯಾಭಾವಕ್ಕೆ ಪ್ರತಿಯೋಗಿತಾಚ್ಛೇದಕವಾದದ್ದು ಸೇಚನಸಂಸರ್ಗ. 'ಅಗ್ನಿಃ ಸೇಚನಸಂಸರ್ಗಪ್ರತಿಯೋ-ಗಿಕಾನ್ಯೋನ್ಯಾಭಾವವಾನ್' ಎಂದು ಪ್ರಮಾತ್ಮಕಜ್ಞಾನ ಬರುವುದರಿಂದ ಈ ಪ್ರಮಾದಲ್ಲಿ ವಿಶೇಷ್ಯವೇ ಆಗಿರುವುದರಿಂದ 'ಅಗ್ನಿನಾ ಸಿಂಚತಿ' ಎಂಬಲ್ಲಿ ಪ್ರಮಾವಿಶೇಷ್ಯತ್ವಾಭಾವ-ರೂಪವಾದ ಯೋಗ್ಯತಾಲಕ್ಷಣವು ಬರುವುದಿಲ್ಲ. ಆದ್ದರಿಂದ ಅನ್ಯೋನ್ಯಾಭಾವಗರ್ಭಿತ-ವಾದ ಯೋಗ್ಯತಾಲಕ್ಷಣಕ್ಕೆ 'ವಹ್ನಿನಾ ಸಿಂಚತಿ' ಎಂಬಲ್ಲಿ ಅತಿಪ್ರಸಂಗದೋಷವು ಬರುವುದಿಲ್ಲ.

'ಜಲೇನ ಸಿಂಚತಿ' ಎಂಬಲ್ಲಿ ಈ ಲಕ್ಷಣವು ಸಮನ್ವಯವಾಗುತ್ತದೆ. ಏಕಪದಾರ್ಥಸಂಸರ್ಗೇ = ಸೇಚನರೂಪಸಂಸರ್ಗದಲ್ಲಿ ಅಪರಪದಾರ್ಥನಿಷ್ಠ = ಜಲನಿಷ್ಠವಾದ ಸಂಸರ್ಗ-ವದನ್ಯೋನ್ಯಾಭಾವ= ಸೇಚನಸಂಸರ್ಗವದನ್ಯೋನ್ಯಾಭಾವವನ್ನು ಹೇಳಲು ಬರುವುದಿಲ್ಲ.

'ಜಲಂ ಸೇಚನಸಂಸರ್ಗಪ್ರತಿಯೋಗಿಕಾನ್ಯೋನ್ಯಾಭಾವವಾನ್ ಎಂಬ ಜ್ಞಾನವು ಬಂದರೆ ಇದು ಪ್ರಮಾರೂಪವಾಗಿರುವುದಿಲ್ಲ. ಆದ್ದರಿಂದ ಪ್ರಮಾವಿಶೇಷ್ಯತ್ವವು ಇದರಲ್ಲಿ ಬರುವುದಿಲ್ಲವಾದ್ದರಿಂದ ಸಂಸರ್ಗವದನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವಪ್ರಮಾ-ವಿಶೇಷ್ಯತ್ವಾಭಾವವು ಬರುತ್ತದೆ. ಆದ್ದರಿಂದ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆಯ ಲಕ್ಷಣವು 'ಜಲೇನ ಸಿಂಚತಿ' ಎಂಬಲ್ಲಿ ಸಮನ್ವಯವಾಗುತ್ತದೆ.

## ಪರಕೀಯರೂ ಅನ್ಯೋನ್ಯಾಭಾವಘಟಿತವಾದ ಯೋಗ್ಯತಾಲಕ್ಷಣವನ್ನೇ ಸ್ವೀಕರಿಸಬೇಕು

**ತರ್ಕತಾಂಡವ – ನ ಚ ಸಾ ನ ಯೋಗ್ಯತಾ । ತ್ವಯ್ಯೈವ ಲಾಘವೇನ ವ್ಯಾಪ್ತೇರಿವ ಯೋಗ್ಯತಾಯಾ ಅಪಿ ಅನ್ಯೋನ್ಯಾಭಾವಗರ್ಭಾಯಾ ಏವ ಗ್ರಾಹ್ಯತ್ವಾತ್ ।**

ಅನುವಾದ - ಇದೇ ಯೋಗ್ಯತಾಲಕ್ಷಣವೆಂದು ಹೇಳಲು ಬರುವುದಿಲ್ಲ. ಲಾಘವದಿಂದ ವ್ಯಾಪ್ತಿಯನ್ನು ಹೇಳಿದಂತೆ ಯೋಗ್ಯತೆಯನ್ನೂ ಸಹ ಅನ್ಯೋನ್ಯಾಭಾವಘಟಿತವಾಗಿಯೇ ಸ್ವೀಕರಿಸಬೇಕು.

## ಯೋಗ್ಯತಾಲಕ್ಷಣಕ್ಕೆ ಅವ್ಯಾಪ್ತಿದೋಷ ಹೇಗೆ

**ನ್ಯಾಯದೀಪಃ – ಉಕ್ತಾವ್ಯಾಪ್ತಿಪರಿಹಾರಕವಿಶೇಷಣದಾನೇ ಅತಿವ್ಯಾಪ್ತಿ-ರಾಯಾತಿ ಇತ್ಯಾಹ – ಅತ್ಯಂತಾಭಾವಸ್ಯೇತಿ ॥ 'ಯೋಗ್ಯಂ ಸ್ಯಾತ್' ಇತ್ಯೇತದ್ ವ್ಯನಕ್ತಿ – ಗಂಧವತೀತಿ ॥**

ಅನುವಾದ - ಹಿಂದೆ ಹೇಳಿದ ಅವ್ಯಾಪ್ತಿಪರಿಹಾರಕ್ಕೋಸ್ಕರ ವಿಶೇಷಣವನ್ನು ಕೊಟ್ಟರೂ ಸಹ ಅತಿವ್ಯಾಪ್ತಿ ದೋಷವು ಬರುತ್ತದೆಂಬ ಅಭಿಪ್ರಾಯದಿಂದ 'ಅತ್ಯಂತಾಭಾವಸ್ಯ' ಎಂಬ ವಾಕ್ಯವನ್ನು ಹೇಳಿದ್ದಾರೆ. 'ಯೋಗ್ಯಂ ಸ್ಯಾತ್' ಯೋಗ್ಯವಾಗಬೇಕಾದೀತು ಎಂಬ ವಿಷಯವನ್ನು 'ಗಂಧವತೀ' ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ.

**ನ್ಯಾಯದೀಪ – 'ಘಟೋ ಹಿ ಗಂಧವಾನ್ ಗಂಧಪ್ರಾಗಭಾವವಾಂಶ್ಚ ಭವತಿ । ಉತ್ಪನ್ನಂ ದ್ರವ್ಯಂ ಕ್ಷಣಮಗುಣಂ ತಿಷ್ಠತಿ' ಇತಿ ತೈರಂಗೀಕಾರಾತ್ । ಕಾಲಭೇದೇನ**

**ಗಂಧತತ್ಪ್ರಾಗಭಾವಯೋಃ ಏಕತ್ರಾವಿರೋಧಾತ್ । ತಥಾ ಚ ದ್ವಿತೀಯಾದಿಕ್ಷಣೇಷು ಗಂಧವತಿ ಘಟೇ ಪ್ರಥಮಕ್ಷಣೇ ಗಂಧಪ್ರಾಗಭಾವಸತ್ವೇಪಿ ತದತ್ಯಂತಾಭಾವೋ ನ ಇತಿ ಗಂಧರೂಪೈಕಪದಾರ್ಥನಿರೂಪಿತಸಂಸರ್ಗೇ ಘಟರೂಪಾಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವಾಭಾವಸ್ಯ ಸತ್ವೇನೋಕ್ತಪ್ರಮಾವಿಶೇಷ್ಯತ್ವಾಭಾವಸ್ಯೋಕ್ತರೂಪಪ್ರತಿಯೋಗಿತಾವಚ್ಛೇದಕಧರ್ಮಶೂನ್ಯತ್ವಸ್ಯಾಪಿ ಸತ್ವಾತ್ ಅತಿವ್ಯಾಪ್ತಿರಿತ್ಯರ್ಥಃ ।**

ಅನುವಾದ - ಘಟವು ಗಂಧವುಳ್ಳದ್ದು ಹಾಗೂ ಗಂಧದ ಪ್ರಾಗಭಾವವುಳ್ಳದ್ದು ಸಹ ಆಗುತ್ತದೆ. 'ಉತ್ಪನ್ನಂ ದ್ರವ್ಯಂ ಕ್ಷಣಂ ಅಗುಣಂ ನಿಷ್ಕ್ರಿಯಂ ತಿಷ್ಠತಿ' ಹುಟ್ಟಿದ ದ್ರವ್ಯವು ಒಂದು ಕ್ಷಣ ಗುಣರಹಿತವಾಗಿರುತ್ತದೆ ಎಂದು ತಾರ್ಕಿಕರು ಅಂಗೀಕಾರ ಮಾಡಿದ್ದಾರೆ. ಕಾಲಭೇದದಿಂದ ಗಂಧ ಹಾಗೂ ಗಂಧದ ಪ್ರಾಗಭಾವಗಳಿಗೆ ಒಂದೇ ಕಡೆ ವಿರೋಧ ಇರುವುದಿಲ್ಲ. ಆದ್ದರಿಂದ ದ್ವಿತೀಯಾದಿಕ್ಷಣದಲ್ಲಿ ಗಂಧವುಳ್ಳ ಘಟದಲ್ಲಿ ಪ್ರಥಮಕ್ಷಣದಲ್ಲಿ ಗಂಧದ ಪ್ರಾಗಭಾವವಿದ್ದರೂ ಗಂಧದ ಅತ್ಯಂತಾಭಾವವು ಇರುವುದಿಲ್ಲ. ಆದ್ದರಿಂದ ಗಂಧರೂಪವಾದ ಏಕಪದಾರ್ಥದಿಂದ ನಿರೂಪಿತವಾದ ಸಂಸರ್ಗದಲ್ಲಿ ಘಟರೂಪವಾದ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವಾಭಾವವು ಇದೆ. ಆದ್ದರಿಂದ ಹಿಂದೆ ಹೇಳಿದ ಪ್ರಮಾವಿಶೇಷ್ಯತ್ವಾಭಾವಕ್ಕೆ ಪ್ರತಿಯೋಗಿತಾವಚ್ಛೇದಕಧರ್ಮಶೂನ್ಯತ್ವವು ಇರುವುದರಿಂದ ಅತಿವ್ಯಾಪ್ತಿ ಬರುತ್ತದೆಂದರ್ಥ.

ವಿವರಣೆ - 'ಪ್ರತಿಯೋಗಿವಿರೋಧಿತ್ವ', ಅಥವಾ 'ವ್ಯಾಪ್ಯವೃತ್ತಿತ್ವ' ಎಂಬ ವಿಶೇಷಣವನ್ನು ಅತ್ಯಂತಾಭಾವದಲ್ಲಿ ನೀಡಿದಾಗ 'ದ್ರವ್ಯಂ ಸಂಯೋಗೀ' ಎಂಬ ಸ್ಥಳದಲ್ಲಿ ಅವ್ಯಾಪ್ತಿ ಬಾರದಿದ್ದರೂ 'ಗಂಧಪ್ರಾಗಭಾವಸಮಾನಕಾಲೀನೋ ಘಟಃ ಗಂಧವಾನ್' ಎಂಬ ಯೋಗ್ಯತಾವಿಲ್ಲದ ಸ್ಥಳದಲ್ಲಿ ಅತಿವ್ಯಾಪ್ತಿಯು ಪ್ರಾಪ್ತವಾಗುತ್ತದೆ. ಏಕೆಂದರೆ ಈ ಸ್ಥಳದಲ್ಲಿ ಏಕಪದಾರ್ಥಸಂಸರ್ಗವೆಂದರೆ ಗಂಧರೂಪವಾದ ಪದಾರ್ಥನಿರೂಪಿತವಾದ ಸಂಸರ್ಗ ಎಂದರ್ಥ. ಇದರಲ್ಲಿ ಘಟರೂಪವಾದ ಅಪರಪದಾರ್ಥನಿಷ್ಠವಾದ ಅತ್ಯಂತಾಭಾವವಿದೆ. ಏಕೆಂದರೆ ಘಟದಲ್ಲಿ ಅತ್ಯಂತಾಭಾವವನ್ನು ಉತ್ಪತ್ತಿಯಾದ ಕ್ಷಣದಲ್ಲಿ ಅಥವಾ ದ್ವಿತೀಯಾದಿಕ್ಷಣದಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅಪರಪದಾರ್ಥನಿಷ್ಠಾತ್ಯಂತಾಭಾವವೇ

ಬಾರದ ಕಾರಣ ತತ್‌ಪ್ರತಿಯೋಗಿತ್ವಾಭಾವರೂಪವಾದ ಯೋಗ್ಯತೆಯ ಲಕ್ಷಣವು ಸಮನ್ವಯವಾಗುತ್ತದೆ. ಯಾವ ಕ್ಷಣದಲ್ಲಿ ಗಂಧವೇ ಇರುವುದಿಲ್ಲವೋ ಅಂಥ ಸಂದರ್ಭ-ದಲ್ಲಿ ಮಾತ್ರ ಅತ್ಯಂತಾಭಾವವನ್ನು ಹೇಳಬಹುದು.

## ಅತ್ಯಂತಾಭಾವ ಎಂದರೆ ವಿರೋಧ್ಯಭಾವ ಎಂದರ್ಥ

**ನ್ಯಾಯದೀಪ– ಯತ್ತು ''ಅತ್ಯಂತಾಭಾವಪದಂ ವಿರೋಧ್ಯಭಾವಪರಮ್ । ಏವಂ ಚೋಕ್ತಸ್ಥಳೇ ಗಂಧವಾನ್ ಇತಿ ವಿಶಿಷ್ಟವೈಶಿಷ್ಟ್ಯಸಂಸರ್ಗೇ ಪ್ರಾಗ-ಭಾವೋಽಪಿ ವಿರೋಧೀತಿ ತತ್ಪ್ರತಿಯೋಗಿತ್ವಸ್ಯೈವ ಸತ್ವಾನ್ನಾವ್ಯಾಪ್ತಿಃ'' ಇತಿ ತು, ಅಗ್ರೇ 'ನನು' ಇತ್ಯಾದಿನಾ ಶಂಕಿತಪಕ್ಷಧರಮತನಿರಾಸೇನ ನಿರಸಿಷ್ಯತೇ ॥**

ಅನುವಾದ - ಕೆಲವರು ಅತ್ಯಂತಾಭಾವಪದವು ವಿರೋಧಿಯಾದ ಅಭಾವ ಪರವಾಗಿದೆ. ಹೀಗಾಗಿ ಹಿಂದೆ ಹೇಳಿದ ಸ್ಥಳದಲ್ಲಿ 'ಗಂಧವಾನ್' ಎಂಬ ವಿಶಿಷ್ಟವೈಶಿಷ್ಟ್ಯಸಂಸರ್ಗದಲ್ಲಿ ಪ್ರಾಗಭಾವವು ಸಹ ವಿರೋಧಿಯಾಗಿರುವುದರಿಂದ ವಿರೋಧಿಪ್ರತಿಯೋಗಿತ್ವವೇ ಬರುತ್ತದೆ. ಆದ್ದರಿಂದ ಅವ್ಯಾಪ್ತಿದೋಷವು ಬರುವುದಿಲ್ಲವೆಂದು ಹೇಳುತ್ತಾರೆಂದು ಮುಂದೆ 'ಅಗ್ರೇ ನನು' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. ಇದನ್ನು ಪಕ್ಷಧರನು ಸಂಶಯಕೋಟಿಯಲ್ಲಿ ಹೇಳಿದ್ದಾನೆ. ಈ ಮತವನ್ನು ಮುಂದೆ ಪಕ್ಷಧರಪಕ್ಷದ ನಿರಾಕರಣೆಯ ಮುಖಾಂತರ ನಿರಾಕರಿಸಲಾಗುತ್ತದೆ.

ವಿವರಣೆ - ಅನ್ಯೋನ್ಯಾಭಾವಘಟಿತವಾದ ಹಾಗೂ ಅತ್ಯಂತಾಭಾವಘಟಿತವಾದ ಎರಡು ಬಗೆಯ ವ್ಯಾಪ್ತಿಲಕ್ಷಣವನ್ನು ತಾರ್ಕಿಕರು ಹೇಳುತ್ತಾರೆ. ಹೀಗೆ ಹೇಳಿದಾಗ ಅತ್ಯಂತಾ-ಭಾವಘಟಿತವಾದ ಯೋಗ್ಯತಾಲಕ್ಷಣಕ್ಕೆ ಅನ್ಯೋನ್ಯಾಭಾವಘಟಿತವಾದ ಯೋಗ್ಯತಾಲಕ್ಷಣ-ದಿಂದ ಅವ್ಯಾಪ್ತಿದೋಷವು ಬರುತ್ತದೆ. ಅನ್ಯೋನ್ಯಾಭಾವಘಟಿತವಾದ ಯೋಗ್ಯತಾ-ಲಕ್ಷಣದಿಂದ ಅತ್ಯಂತಾಭಾವಘಟಿತವಾದ ಯೋಗ್ಯತಾಲಕ್ಷಣಕ್ಕೆ ಅವ್ಯಾಪ್ತಿಯು ಬರುತ್ತದೆ.

'ಗಂಧಪ್ರಾಗಭಾವಸಮಾನಕಾಲೀನೋ ಘಟಃ ಗಂಧವಾನ್' ಎಂಬ ಸ್ಥಳದಲ್ಲಿ ಅತಿವ್ಯಾಪ್ತಿ-ದೋಷವನ್ನು ಹೀಗೆ ಪರಿಹಾರ ಮಾಡಬಹುದು ಅತ್ಯಂತಾಭಾವಪದಕ್ಕೆ 'ವಿರೋಧ್ಯಭಾವ' ಎಂದರ್ಥ. ಪ್ರಾಗಭಾವವು ಕೂಡ ವಿಶಿಷ್ಟವೈಶಿಷ್ಟ್ಯಸಂಸರ್ಗದಲ್ಲಿ ವಿರೋಧಿಯಾಗಿರುವು-

ದರಿಂದ ತತ್‌ಪ್ರತಿಯೋಗಿತ್ವವೇ ಬರುತ್ತದೆ. ತತ್‌ಪ್ರತಿಯೋಗಿತಾವಚ್ಛೇದಕ-ಧರ್ಮಶೂನ್ಯತ್ವ ಎಂಬ ಲಕ್ಷಣವು ಬರುವುದಿಲ್ಲ. ಆದ್ದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಇದನ್ನು ಮುಂದೆ ಪಕ್ಷಧರಮಿಶ್ರನ ಅಭಿಪ್ರಾಯವನ್ನು ನಿರಾಕರಣೆ ಮಾಡುವ ಸಂದರ್ಭ-ದಲ್ಲಿ ನಿರಾಕರಿಸುವವರಿದ್ದಾರೆ.

## ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣಕ್ಕೆ ಅವ್ಯಾಪ್ತಿ

**ನ್ಯಾಯದೀಪ – ಯದ್ವಾ, ಏತದನುಶಯಾದಾಹ – ಪದಾರ್ಥೇತಿ ॥ ಅಪರೇತಿ ॥ ಅಪರಪದಾರ್ಥನಿಷ್ಠೋ ಯಃ ಪದಾರ್ಥಾಂತರನಿರೂಪಿತಸಂಸರ್ಗವತ್ ಅನ್ಯೋನ್ಯಾಭಾವಃ ತತ್‌ಪ್ರತಿಯೋಗಿತಾವಚ್ಛೇದಕೋ ವಾ ಇತ್ಯರ್ಥಃ । 'ಜಲೇನ ಸಿಂಚತಿ' ಇತ್ಯತ್ರ 'ಸೇಕೋ ವಹ್ನಿಸಂಸರ್ಗವಾನ್ ನ' ಇತಿ ಧೀವತ್, 'ಜಲಸಂಸರ್ಗವಾನ್ನ' ಇತಿ ಬುದ್ಧೇರಭಾವಾತ್ ಸೇಕನಿಷ್ಠಾನ್ಯೋನ್ಯಾಭಾವಪ್ರತಿ-ಯೋಗೀ ವಹ್ನಿಸಂಸರ್ಗವದ್ದಾಹಾದಿರೇವ ನ ತು ಸಂಸರ್ಗೀತಿ ವಹ್ನಿಸಂಸರ್ಗಸ್ಯೈವ ಸೇಕನಿಷ್ಠಾನ್ಯೋನ್ಯಾಭಾವಗರ್ಭಪ್ರತಿಯೋಗಿತಾವಚ್ಛೇದಕತ್ವಂ ನ ತು ಜಲ-ಸಂಸರ್ಗಸ್ಯೇತಿ ತಸ್ಯೈವ ತಾದೃಶಪ್ರಮಾವಿಶೇಷ್ಯತ್ವಂ ನ ತು ಜಲಸಂಸರ್ಗಸ್ಯೇತಿ 'ವಹ್ನಿನಾ ಸಿಂಚತಿ' ಇತಿ ವಾಕ್ಯಮ್ ಅಯೋಗ್ಯಂ, ಜಲೇನ ಇತಿ ಯೋಗ್ಯಮ್ ಇತ್ಯೇತಾದೃಶಯೋಗ್ಯತಾಯಾಮ್ ಅತ್ಯಂತಾಭಾವಗರ್ಭಮ್ ಅಯೋಗ್ಯತಾ-ಲಕ್ಷಣಸ್ಯಾಭಾವಾದವ್ಯಾಪ್ತಿರಿತ್ಯರ್ಥಃ ॥**

ಅನುವಾದ - 'ಗಂಧಪ್ರಾಗಭಾವಸಮಾನಕಾಲೀನೋ ಘಟಃ ಗಂಧವಾನ್' ಎಂಬ ಸ್ಥಳದಲ್ಲಿ ಅತಿ-ವ್ಯಾಪ್ತಿದೋಷವನ್ನು ಪೂರ್ವಪಕ್ಷಕಾರರು ಪರಿಹಾರ ಮಾಡಿಕೊಂಡರು. ಇದರಿಂದ ತಾವು ಅತಿವ್ಯಾಪ್ತಿ-ದೋಷ ಹೇಳಿದ್ದು ಸರಿಯಾಗಲಿಲ್ಲ ಎಂಬ ಪಶ್ಚಾತ್ತಾಪದಿಂದ ಪದಾರ್ಥ ಇತ್ಯಾದಿಯಾಗಿ ಅವ್ಯಾಪ್ತಿ ದೋಷವನ್ನು ಹೇಳುತ್ತಿದ್ದಾರೆ.

ಅಪರಪದಾರ್ಥದಲ್ಲಿರುವ ಅತ್ಯಂತಾಭಾವವು ಮತ್ತೊಂದು ಪದಾರ್ಥದಿಂದ ನಿರೂಪಿತವಾದ ಸಂಸರ್ಗವುಳ್ಳ ಅನ್ಯೋನ್ಯಾಭಾವವು ತತ್ಪ್ರತಿಯೋಗಿತಾವಚ್ಛೇದಕವೋ ಅಲ್ಲವೋ ? ಎಂಬುದು ಅಪರ

ಇತ್ಯಾದಿ ಪದದ ಅರ್ಥ. 'ಜಲೇನ ಸಿಂಚತಿ' ಎಂಬಲ್ಲಿ ಸೇಕವು ವಹ್ನಿಸಂಸರ್ಗವುಳ್ಳದ್ದು ಅಲ್ಲ ಎಂಬ ಬುದ್ಧಿಯಂತೆ ಜಲಸಂಸರ್ಗವುಳ್ಳದ್ದು ಅಲ್ಲ ಎಂಬ ಬುದ್ಧಿಯು ಇರುವುದಿಲ್ಲ. ಆದ್ದರಿಂದ ಸೇಕನಿಷ್ಠವಾದ ಅನ್ಯೋನ್ಯಾಭಾವಕ್ಕೆ ಪ್ರತಿಯೋಗಿಯಾದದ್ದು ವಹ್ನಿಸಂಸರ್ಗವುಳ್ಳ ದಾಹಾದಿಗಳೇ ಆಗಿವೆ ಹೊರತು ಸಂಸರ್ಗೀಯವಾದ ಪದಾರ್ಥವಲ್ಲ. ಆದ್ದರಿಂದ ವಹ್ನಿಸಂಯೋಗಕ್ಕೆ ಸೇಕನಿಷ್ಠಾನ್ಯೋನ್ಯಾಭಾವಗರ್ಭ-ಪ್ರತಿಯೋಗಿತಾವಚ್ಛೇದಕತ್ವವು ಬರುತ್ತದೆ ಹೊರತು ಜಲಸಂಸರ್ಗಕ್ಕೆ ಅಲ್ಲ. ಆದ್ದರಿಂದ 'ವಹ್ನಿನಾ ಸಿಂಚತಿ' ಎಂಬ ವಾಕ್ಯವು ಅಯೋಗ್ಯವಾಗಿದೆ. 'ಜಲೇನ ಸಿಂಚತಿ' ಎಂಬ ವಾಕ್ಯವು ಯೋಗ್ಯವಾಗಿದೆ ಎಂಬುದಾಗಿ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣದಲ್ಲಿ ಇಲ್ಲದಿರುವುದರಿಂದ ಅವ್ಯಾಪ್ತಿಯು ಬರುತ್ತದ ಎಂದರ್ಥ.

ವಿವರಣೆ - 'ಅಪರಪದಾರ್ಥನಿಷ್ಠ' ಇತ್ಯಾದಿ ಗ್ರಂಥದ ಅರ್ಥ ಹೀಗಿದೆ - ಅಪರ-ಪದಾರ್ಥದಲ್ಲಿರುವ ಯಾವ ಪದಾರ್ಥಾಂತರನಿರೂಪಿತವಾದ ಸಂಸರ್ಗದ ಅನ್ಯೋನ್ಯಾ-ಭಾವವಿದೆಯೋ ಅದಕ್ಕೆ ಪ್ರತಿಯೋಗಿತಾವಚ್ಛೇದಕವಾದದ್ದು ಎಂದು. ಇದರ ಸಮನ್ವಯ-ವನ್ನು ಹೀಗೆ ತಿಳಿಯಬೇಕು - 'ಜಲೇನ ಸಿಂಚತಿ' ಎಂಬಲ್ಲಿ 'ಸೇಕಃ ವಹ್ನಿಸಂಸರ್ಗವಾನ್ ನ' ಎಂಬ ಜ್ಞಾನ ಬರುವಂತೆ 'ಸೇಕಃ ಜಲಸಂಸರ್ಗವಾನ್ ನ' ಎಂಬ ಜ್ಞಾನ ಯಾರಿಗೂ ಬರುವುದಿಲ್ಲ. 'ಸೇಕಃ ವಹ್ನಿಸಂಸರ್ಗವಾನ್ ನ' ಎಂಬ ಜ್ಞಾನವು ಯಥಾರ್ಥವಾಗಿದೆ. ಇದರಲ್ಲಿ ಪ್ರತಿಯೋಗಿಯಾದದ್ದು 'ವಹ್ನಿಸಂಸರ್ಗಿ', ಪ್ರತಿಯೋಗಿತಾವಚ್ಛೇದಕವಾದದ್ದು ವಹ್ನಿಸಂಸರ್ಗ ಹೊರತು ಜಲಸಂಸರ್ಗಿಯು ಪ್ರತಿಯೋಗಿ ಆಗುವುದಿಲ್ಲ. ಆದ್ದರಿಂದ ಜಲ-ಸಂಸರ್ಗವು ಪ್ರತಿಯೋಗಿತಾವಚ್ಛೇದಕ ಆಗುವುದಿಲ್ಲ. ಆದ್ದರಿಂದ 'ವಹ್ನಿನಾ ಸಿಂಚತಿ' ಎಂಬ ವಾಕ್ಯವು ಅಯೋಗ್ಯವಾಗಿದೆ; 'ಜಲೇನ ಸಿಂಚತಿ' ಎಂಬ ವಾಕ್ಯವು ಯೋಗ್ಯವಾಗಿದೆ. ಹೀಗೆ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣದಲ್ಲಿ ಅತ್ಯಂತಾಭಾವಗರ್ಭಿತ-ವಾದ ಯೋಗ್ಯತಾಲಕ್ಷಣವು ಬಾರದ ಕಾರಣ ಅವ್ಯಾಪ್ತಿದೋಷ ಬರುತ್ತದೆಂದು ಗ್ರಂಥದ ಅಭಿಪ್ರಾಯ.

## ರುಚಿದತ್ತ ಹೇಳಿದ ಲಕ್ಷಣ

**ನ್ಯಾಯದೀಪ – ರುಚಿದತ್ತಸ್ತು 'ಏಕಪದಾರ್ಥಸಂಸರ್ಗತ್ವೇ ಅಪರಪದಾರ್ಥ–**

**ಸಂಸರ್ಗನಿಷ್ಠಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವಪ್ರಮಾವಿಶೇಷ್ಯತ್ವಾ-ಭಾವಃ' ಇತ್ಯವದತ್ ।**

ಅನುವಾದ - ರುಚಿದತ್ತನು 'ಏಕಪದಾರ್ಥಸಂಸರ್ಗತ್ವೇ ಅಪರಪದಾರ್ಥಸಂಸರ್ಗನಿಷ್ಠಾನ್ಯೋನ್ಯಾ-ಭಾವಪ್ರತಿಯೋಗಿತಾವಚ್ಛೇದಕತ್ವಪ್ರಮಾವಿಶೇಷ್ಯತ್ವಾಭಾವಃ ಯೋಗ್ಯತಾ' ಎಂದು ಲಕ್ಷಣವನ್ನು ಹೇಳಿದ್ದಾನೆ.

ವಿವರಣೆ - ರುಚಿದತ್ತನು ಏಕತ್ವ ಹಾಗೂ ಅಪರತ್ವಗಳು ಪದಾರ್ಥದಲ್ಲಿ ವಿಶೇಷಣ-ಗಳೆಂದು ಹೇಳುತ್ತಾನೆ. ಏಕಪದಾರ್ಥಸಂಸರ್ಗದಲ್ಲಿ ಅಪರಪದಾರ್ಥದ ಸಂಸರ್ಗವನ್ನು ಹೇಳುವುದಿಲ್ಲ. ಸ್ವಾಶ್ರಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವವನ್ನು ಹೇಳಿದಾಗ. ಆಗ ಸ್ವಂ = ಪ್ರಮೇಯತ್ವ, ಸ್ವಾಶ್ರಯವಾದದ್ದು ಕೂಡ ಪ್ರಮೇಯತ್ವವೇ ಆಗುತ್ತದೆ. 'ಪ್ರಮೇಯತ್ವೇ ಪ್ರಮೇಯತ್ವಂ' ಎಂಬಲ್ಲಿ ಹೀಗೆ ಅವ್ಯಾಪ್ತಿದೋಷವು ಬರುತ್ತದೆ. ಏಕೆಂದರೆ ಸ್ವಪದದಿಂದ ಪ್ರಮೇಯತ್ವವನ್ನು ವಿವಕ್ಷಿಸಿದಾಗ ತದಾಶ್ರಯವಾದದ್ದು ಕೂಡ ಪ್ರಮೇಯತ್ವವೇ ಆಗುತ್ತದೆ. ತನ್ನಿಷ್ಠಾತ್ಯಂತಾಭಾವಪ್ರತಿಯೋಗಿತ್ವವನ್ನು ಪ್ರಮೇಯತ್ವದಲ್ಲಿ ಹೇಳಲು ಬರುವುದಿಲ್ಲ. ಆದ್ದರಿಂದ ಪದಾರ್ಥಭೇದವಿಲ್ಲದಿದ್ದರೂ ಕೂಡ 'ಪ್ರಮೇಯತ್ವೇ ಪ್ರಮೇಯತ್ವಂ' ಎಂಬಲ್ಲಿ ಲಕ್ಷಣಸಮನ್ವಯವಾಗುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ. ಹೀಗೆ ರುಚಿದತ್ತನು ಅಭಿಪ್ರಾಯ ಪಡುತ್ತಾನೆ.

ಇದನ್ನು ಕೂಡ ಈಗ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ 'ದ್ರವ್ಯಂ ಸಂಯೋಗೀ' ಎಂಬಲ್ಲಿ ಅವ್ಯಾಪ್ತಿದೋಷವು ಇದ್ದೇ ಇದೆ. ಇಲ್ಲಿ ಏಕಪದಾರ್ಥವೆಂದರೆ ಸಂಯೋಗ, ಇದಕ್ಕೆ ಆಶ್ರಯವಾದದ್ದು ವೃಕ್ಷ, ತನ್ನಿಷ್ಠವಾದ ಅತ್ಯಂತಾಭಾವಪ್ರತಿಯೋಗಿ ಆದದ್ದು ಸಂಯೋಗಸಂಸರ್ಗವೇ ಆಗಿದೆ. ಆದ್ದರಿಂದ ತದಭಾವರೂಪವಾದ ಲಕ್ಷಣವು ಬಾರದ ಕಾರಣ ಅವ್ಯಾಪ್ತಿಯು ಪರಿಹಾರವಾಗುವುದಿಲ್ಲ.

## ಅಯೋಗ್ಯಜ್ಞಾನದಲ್ಲಿ ಶಾಬ್ದಬೋಧವು ಬರುತ್ತದೆಯೇ

**ತರ್ಕತಾಂಡವ– ನ ಚೈವಮನ್ಯೋನ್ಯಾಭಾವಗರ್ಭೈವ ಯೋಗ್ಯತಾಽಸ್ತು । ನ**

ಇತ್ಯಾದಿ ಪದದ ಅರ್ಥ. 'ಜಲೇನ ಸಿಂಚತಿ' ಎಂಬಲ್ಲಿ ಸೇಕವು ವಹ್ನಿಸಂಸರ್ಗವುಳ್ಳದ್ದು ಅಲ್ಲ ಎಂಬ ಬುದ್ಧಿಯಂತೆ ಜಲಸಂಸರ್ಗವುಳ್ಳದ್ದು ಅಲ್ಲ ಎಂಬ ಬುದ್ಧಿಯು ಇರುವುದಿಲ್ಲ. ಆದ್ದರಿಂದ ಸೇಕನಿಷ್ಠವಾದ ಅನ್ಯೋನ್ಯಾಭಾವಕ್ಕೆ ಪ್ರತಿಯೋಗಿಯಾದದ್ದು ವಹ್ನಿಸಂಸರ್ಗವುಳ್ಳ ದಾಹಾದಿಗಳೇ ಆಗಿವೆ ಹೊರತು ಸಂಸರ್ಗೀಯವಾದ ಪದಾರ್ಥವಲ್ಲ. ಆದ್ದರಿಂದ ವಹ್ನಿಸಂಯೋಗಕ್ಕೆ ಸೇಕನಿಷ್ಠಾನ್ಯೋನ್ಯಾಭಾವಗರ್ಭ-ಪ್ರತಿಯೋಗಿತಾವಚ್ಛೇದಕತ್ವವು ಬರುತ್ತದೆ ಹೊರತು ಜಲಸಂಸರ್ಗಕ್ಕೆ ಅಲ್ಲ. ಆದ್ದರಿಂದ 'ವಹ್ನಿನಾ ಸಿಂಚತಿ' ಎಂಬ ವಾಕ್ಯವು ಅಯೋಗ್ಯವಾಗಿದೆ. 'ಜಲೇನ ಸಿಂಚತಿ' ಎಂಬ ವಾಕ್ಯವು ಯೋಗ್ಯವಾಗಿದೆ ಎಂಬುದಾಗಿ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣದಲ್ಲಿ ಇಲ್ಲದಿರುವುದರಿಂದ ಅವ್ಯಾಪ್ತಿಯು ಬರುತ್ತದೆ ಎಂದರ್ಥ.

ವಿವರಣೆ - 'ಅಪರಪದಾರ್ಥನಿಷ್ಠ' ಇತ್ಯಾದಿ ಗ್ರಂಥದ ಅರ್ಥ ಹೀಗಿದೆ - ಅಪರ-ಪದಾರ್ಥದಲ್ಲಿರುವ ಯಾವ ಪದಾರ್ಥಾಂತರನಿರೂಪಿತವಾದ ಸಂಸರ್ಗದ ಅನ್ಯೋನ್ಯಾ-ಭಾವವಿದೆಯೋ ಅದಕ್ಕೆ ಪ್ರತಿಯೋಗಿತಾವಚ್ಛೇದಕವಾದದ್ದು ಎಂದು. ಇದರ ಸಮನ್ವಯ-ವನ್ನು ಹೀಗೆ ತಿಳಿಯಬೇಕು - 'ಜಲೇನ ಸಿಂಚತಿ' ಎಂಬಲ್ಲಿ 'ಸೇಕಃ ವಹ್ನಿಸಂಸರ್ಗವಾನ್ ನ' ಎಂಬ ಜ್ಞಾನ ಬರುವಂತೆ 'ಸೇಕಃ ಜಲಸಂಸರ್ಗವಾನ್ ನ' ಎಂಬ ಜ್ಞಾನ ಯಾರಿಗೂ ಬರುವುದಿಲ್ಲ. 'ಸೇಕಃ ವಹ್ನಿಸಂಸರ್ಗವಾನ್ ನ' ಎಂಬ ಜ್ಞಾನವು ಯಥಾರ್ಥವಾಗಿದೆ. ಇದರಲ್ಲಿ ಪ್ರತಿಯೋಗಿಯಾದದ್ದು 'ವಹ್ನಿಸಂಸರ್ಗಿ', ಪ್ರತಿಯೋಗಿತಾವಚ್ಛೇದಕವಾದದ್ದು ವಹ್ನಿಸಂಸರ್ಗ ಹೊರತು ಜಲಸಂಸರ್ಗಿಯು ಪ್ರತಿಯೋಗಿ ಆಗುವುದಿಲ್ಲ. ಆದ್ದರಿಂದ ಜಲ-ಸಂಸರ್ಗವು ಪ್ರತಿಯೋಗಿತಾವಚ್ಛೇದಕ ಆಗುವುದಿಲ್ಲ. ಆದ್ದರಿಂದ 'ವಹ್ನಿನಾ ಸಿಂಚತಿ' ಎಂಬ ವಾಕ್ಯವು ಅಯೋಗ್ಯವಾಗಿದೆ; 'ಜಲೇನ ಸಿಂಚತಿ' ಎಂಬ ವಾಕ್ಯವು ಯೋಗ್ಯವಾಗಿದೆ. ಹೀಗೆ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣದಲ್ಲಿ ಅತ್ಯಂತಾಭಾವಗರ್ಭಿತ-ವಾದ ಯೋಗ್ಯತಾಲಕ್ಷಣವು ಬಾರದ ಕಾರಣ ಅವ್ಯಾಪ್ತಿದೋಷ ಬರುತ್ತದೆಂದು ಗ್ರಂಥದ ಅಭಿಪ್ರಾಯ.

## ರುಚಿದತ್ತ ಹೇಳಿದ ಲಕ್ಷಣ

**ನ್ಯಾಯದೀಪ – ರುಚಿದತ್ತಸ್ತು 'ಏಕಪದಾರ್ಥಸಂಸರ್ಗತ್ವೇ ಅಪರಪದಾರ್ಥ-**

**ಸಂಸರ್ಗನಿಷ್ಠಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವಪ್ರಮಾವಿಶೇಷ್ಯತ್ವಾ- ಭಾವಃ' ಇತ್ಯವದತ್ ।**

ಅನುವಾದ - ರುಚಿದತ್ತನು 'ಏಕಪದಾರ್ಥಸಂಸರ್ಗತ್ವೇ ಅಪರಪದಾರ್ಥಸಂಸರ್ಗನಿಷ್ಠಾನ್ಯೋನ್ಯಾ- ಭಾವಪ್ರತಿಯೋಗಿತಾವಚ್ಛೇದಕತ್ವಪ್ರಮಾವಿಶೇಷ್ಯತ್ವಾಭಾವಃ ಯೋಗ್ಯತಾ' ಎಂದು ಲಕ್ಷಣವನ್ನು ಹೇಳಿದ್ದಾನೆ.

ವಿವರಣೆ - ರುಚಿದತ್ತನು ಏಕತ್ವ ಹಾಗೂ ಅಪರತ್ವಗಳು ಪದಾರ್ಥದಲ್ಲಿ ವಿಶೇಷಣ- ಗಳೆಂದು ಹೇಳುತ್ತಾನೆ. ಏಕಪದಾರ್ಥಸಂಸರ್ಗದಲ್ಲಿ ಅಪರಪದಾರ್ಥದ ಸಂಸರ್ಗವನ್ನು ಹೇಳುವುದಿಲ್ಲ. ಸ್ವಾಶ್ರಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವವನ್ನು ಹೇಳಿದಾಗ. ಆಗ ಸ್ವಂ = ಪ್ರಮೇಯತ್ವ, ಸ್ವಾಶ್ರಯವಾದದ್ದು ಕೂಡ ಪ್ರಮೇಯತ್ವವೇ ಆಗುತ್ತದೆ. 'ಪ್ರಮೇಯತ್ವೇ ಪ್ರಮೇಯತ್ವಂ' ಎಂಬಲ್ಲಿ ಹೀಗೆ ಅವ್ಯಾಪ್ತಿದೋಷವು ಬರುತ್ತದೆ. ಏಕೆಂದರೆ ಸ್ವಪದದಿಂದ ಪ್ರಮೇಯತ್ವವನ್ನು ವಿವಕ್ಷಿಸಿದಾಗ ತದಾಶ್ರಯವಾದದ್ದು ಕೂಡ ಪ್ರಮೇಯತ್ವವೇ ಆಗುತ್ತದೆ. ತನ್ನಿಷ್ಠಾತ್ಯಂತಾಭಾವಪ್ರತಿಯೋಗಿತ್ವವನ್ನು ಪ್ರಮೇಯತ್ವದಲ್ಲಿ ಹೇಳಲು ಬರುವುದಿಲ್ಲ. ಆದ್ದರಿಂದ ಪದಾರ್ಥಭೇದವಿಲ್ಲದಿದ್ದರೂ ಕೂಡ 'ಪ್ರಮೇಯತ್ವೇ ಪ್ರಮೇಯತ್ವಂ' ಎಂಬಲ್ಲಿ ಲಕ್ಷಣಸಮನ್ವಯವಾಗುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ. ಹೀಗೆ ರುಚಿದತ್ತನು ಅಭಿಪ್ರಾಯ ಪಡುತ್ತಾನೆ.

ಇದನ್ನು ಕೂಡ ಈಗ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ 'ದ್ರವ್ಯಂ ಸಂಯೋಗೀ' ಎಂಬಲ್ಲಿ ಅವ್ಯಾಪ್ತಿದೋಷವು ಇದ್ದೇ ಇದೆ. ಇಲ್ಲಿ ಏಕಪದಾರ್ಥವೆಂದರೆ ಸಂಯೋಗ, ಇದಕ್ಕೆ ಆಶ್ರಯವಾದದ್ದು ವೃಕ್ಷ, ತನ್ನಿಷ್ಠವಾದ ಅತ್ಯಂತಾಭಾವಪ್ರತಿಯೋಗಿ ಆದದ್ದು ಸಂಯೋಗಸಂಸರ್ಗವೇ ಆಗಿದೆ. ಆದ್ದರಿಂದ ತದಭಾವರೂಪವಾದ ಲಕ್ಷಣವು ಬಾರದ ಕಾರಣ ಅವ್ಯಾಪ್ತಿಯು ಪರಿಹಾರವಾಗುವುದಿಲ್ಲ.

## ಅಯೋಗ್ಯಜ್ಞಾನದಲ್ಲಿ ಶಾಬ್ದಬೋಧವು ಬರುತ್ತದೆಯೇ

**ತರ್ಕತಾಂಡವ – ನ ಚೈವಮನ್ಯೋನ್ಯಾಭಾವಗರ್ಭೈವ ಯೋಗ್ಯತಾऽಸ್ತು । ನ**

**ತ್ವತ್ಯಂತಾಭಾವಗರ್ಭೇತಿ ವಾಚ್ಯಮ್ । ಏಕಪದಾರ್ಥಸಂಸರ್ಗೋಽಪರಪದಾರ್ಥ-ನಿಷ್ಠಾತ್ಯಂತಾಭಾವಪ್ರತಿಯೋಗೀ ಇತ್ಯತ್ಯಂತಾಭಾವಗರ್ಭಾಯೋಗ್ಯತ್ವಜ್ಞಾನೇಽಪಿ ಶಾಬ್ದಧೀಪ್ರಸಂಗಾತ್ ॥**

ಅನುವಾದ - ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಲಕ್ಷಣವನ್ನೇ ಅಂಗೀಕರಿಸುತ್ತೇವೆ. ಅತ್ಯಂತಾಭಾವಗರ್ಭಿತವಾದ ಲಕ್ಷಣವು ಬೇಡವೆಂದು ಹೇಳಬಾರದು. ಏಕಪದಾರ್ಥಸಂಸರ್ಗಃ ಅಪರಪದಾರ್ಥ-ನಿಷ್ಠಾತ್ಯಂತಾಭಾವಪ್ರತಿಯೋಗೀ' ಎಂಬ ಲಕ್ಷಣಕ್ಕೆ ಅತ್ಯಂತಾಭಾವಗರ್ಭಿತವಾದ ಅಯೋಗ್ಯತ್ವಜ್ಞಾನ-ದಲ್ಲೂ ಶಾಬ್ದಬೋಧವು ಬರುವ ಪ್ರಸಂಗ ಬರುತ್ತದೆ.

ವಿವರಣೆ - ಅನ್ಯೋನ್ಯಾಭಾವಗರ್ಭಿತವಾದ ಹಾಗೂ ಅತ್ಯಂತಾಭಾವಗರ್ಭಿತವಾದ ಎರಡು ಯೋಗ್ಯತಾಲಕ್ಷಣವನ್ನು ಅಂಗೀಕರಿಸಿದರೆ ಪರಸ್ಪರವಾಗಿ ಅವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ. ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆ ಇಲ್ಲವೆಂದು ಹೇಳಲಾಗದು. ಲಾಘವ ಇರುವ ಪ್ರಯುಕ್ತ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆಯನ್ನೇ ನೀನು ಅಂಗೀಕಾರ ಮಾಡಬೇಕು.

'ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆ ಒಂದೇ ಸಾಕು. ಅತ್ಯಂತಾಭಾವಗರ್ಭಿತ-ವಾದ ಯೋಗ್ಯತೆಯನ್ನು ನಾವು ಒಪ್ಪವುದೇ ಇಲ್ಲ' ಎಂದು ತಾರ್ಕಿಕರು ಹೇಳಿದರೆ ಇದಕ್ಕೂ ಕೂಡ ಗ್ರಂಥಕಾರರು ದೋಷವನ್ನು ಹೇಳುತ್ತಿದ್ದಾರೆ. ಯೋಗ್ಯತೆ ಒಂದೇ ಶಾಬ್ದಬೋಧಕ್ಕೆ ಕಾರಣವಲ್ಲ. ಯೋಗ್ಯತೆಯ ಕಾರಣವು ಕೂಡ ಶಾಬ್ದಬೋಧಕ್ಕೆ ಕಾರಣವೆಂದು ತಾರ್ಕಿಕ-ರಾದ ನೀವು ಹೇಳುತ್ತಿರಿ. ಅಷ್ಟೇ ಅಲ್ಲದೆ ಅಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಪ್ರತಿ-ಬಂಧಕವೆಂದು ಕೂಡ ಒಪ್ಪುತ್ತೀರಿ. (ನಮ್ಮ ಸಿದ್ಧಾಂತದಲ್ಲಿ ಯೋಗ್ಯತಾಜ್ಞಾನವನ್ನು ಶಾಬ್ದಬೋಧಕ್ಕೆ ಕಾರಣವೆಂದು ಒಪ್ಪದಿದ್ದರೂ ಅಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಪ್ರತಿಬಂಧಕವೆಂದು ಒಪ್ಪುತ್ತೇವೆ.) ಆದ್ದರಿಂದ ಪ್ರಕೃತ ಅತ್ಯಂತಾಭಾವಗರ್ಭಿತವಾದ ಹಾಗೂ ಅನ್ಯೋನ್ಯಾಭಾವಗರ್ಭಿತವಾದ ಎರಡು ಯೋಗ್ಯತೆಗಳನ್ನು ಒಪ್ಪಿದಂತೆ ಅತ್ಯಂತಾ-ಭಾವಗರ್ಭಿತವಾದ ಅಯೋಗ್ಯತಾ ಹಾಗೂ ಅನ್ಯೋನ್ಯಾಭಾವಗರ್ಭಿತವಾದ ಅಯೋಗ್ಯತಾ

ಎಂಬುದಾಗಿ ಅಯೋಗ್ಯತಾಜ್ಞಾನವೂ ಕೂಡ ಎರಡು ಎಂದು ಒಪ್ಪಿದಂತಾಯಿತು. 'ಏಕಪದಾರ್ಥನಿಷ್ಠಸಂಸರ್ಗಸ್ಯ ಅಪರಪದಾರ್ಥನಿಷ್ಠಸಂಸರ್ಗಾಭಾವಪ್ರತಿಯೋಗೀ' ಎಂಬುದು ಯೋಗ್ಯತಾಜ್ಞಾನವೆಂದು ಕರೆಸಿಕೊಳ್ಳುತ್ತದೆ. 'ಏಕಪದಾರ್ಥಸಂಸರ್ಗಸ್ಯ ಅಪರ-ಪದಾರ್ಥನಿಷ್ಠಃ ಅತ್ಯಂತಾಭಾವಪ್ರತಿಯೋಗಿತ್ವಾಭಾವಃ' ಎಂಬುದನ್ನು ಯೋಗ್ಯತೆ ಎಂದು ಹೇಳುವಿರಿ. ಆದ್ದರಿಂದ ತತ್‌ಪ್ರತಿಯೋಗಿತ್ವರೂಪವಾದದ್ದೇ ಅಯೋಗ್ಯತಾಜ್ಞಾನವೆಂದು ಹೇಳಿದಂತಾಯಿತು.

'ವಹ್ನಿನಾ ಸಿಂಚತಿ' ಎಂದು ಹೇಳಿದಾಗ ಶಾಬ್ದಬೋಧವು ಹುಟ್ಟುವುದಿಲ್ಲ. ಏಕೆಂದರೆ 'ಅಗ್ನಿ-ನಿಷ್ಠಃ ಸಂಸರ್ಗಃ ಸೇಚನನಿಷ್ಠಃ ಅತ್ಯಂತಭಾವಪ್ರತಿಯೋಗೀ' ಎಂಬ ಜ್ಞಾನವು ಬಂದಿರುವು-ದರಿಂದ ಶಾಬ್ದಬೋಧವು ಬರಲು ಸಾಧ್ಯವಿಲ್ಲ. ಅತ್ಯಂತಾಭಾವಗರ್ಭಿತವಾದ ಅಯೋ-ಗ್ಯತಾಜ್ಞಾನವು ಶಾಬ್ದಬೋಧಕ್ಕೆ ಪ್ರತಿಬಂಧಕವಾದ ಮೇಲೆ ಅತ್ಯಂತಾಭಾವಗರ್ಭಿತವಾದ ಯೋಗ್ಯತಾಜ್ಞಾನವನ್ನು ಶಾಬ್ದಬೋಧಕ್ಕೆ ಕಾರಣವೆಂದು ಹೇಳಬೇಕು. ಆದ್ದರಿಂದ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆಯಷ್ಟೇ ಶಾಬ್ದಬೋಧವನ್ನು ಕುರಿತು ಕಾರಣ-ವೆಂದು ಒಪ್ಪಿದರೆ ಸಾಕು. ಅತ್ಯಂತಾಭಾವಗರ್ಭಿತವಾದ ಯೋಗ್ಯತೆಯನ್ನು ಒಪ್ಪಬೇಕಾಗಿಲ್ಲ-ವೆಂದು ತಾರ್ಕಿಕರಿಗೆ ಸಮರ್ಥಿಸಲು ಸಾಧ್ಯವಿಲ್ಲ.

## ಅನ್ಯೋನ್ಯಾಭಾವಗರ್ಭಿತವಾದ ವ್ಯಾಪ್ತಿಲಕ್ಷಣವೇ ಶಾಬ್ದಬೋಧಕ್ಕೆ ಕಾರಣ

**ನ್ಯಾಯದೀಪ – ವ್ಯಾಪ್ತೇರಿವೇತಿ ॥ ಪ್ರತಿಯೋಗ್ಯಸಮಾನಾಧಿಕರಣ-ಯತ್ಸಮಾನಾಧಿಕರಣಾತ್ಯಂತಾಭಾವಪ್ರತಿಯೋಗೀ ಯನ್ನ ಭವತಿ ತೇನ ಸಮಂ ತಸ್ಯ ಸಾಮಾನಾಧಿಕರಣ್ಯಂ ವ್ಯಾಪ್ತಿರಿತ್ಯತ್ಯಂತಾಭಾವಗರ್ಭವ್ಯಾಪ್ತ್ಯಪೇಕ್ಷಯಾ ಯತ್ಸಮಾ-ನಾಧಿಕರಣಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕಂ ಯನ್ನ ಭವತಿ ತೇನ ಸಮಂ ತಸ್ಯ ಸಾಮಾನಾಧಿಕರಣ್ಯಂ ವ್ಯಾಪ್ತಿರಿತಿ ತ್ವಯಾ ವ್ಯಾಪ್ತಿವಾದೇ ಅನ್ಯೋನ್ಯಾಭಾವಸ್ಯ ವ್ಯಾಪ್ಯವೃತ್ತಿತ್ವೇನ ಪ್ರತಿಯೋಗ್ಯಸಮಾನಾಧಿಕರಣೇತಿ ವಿಶೇಷಣನೈರಪೇಕ್ಷ್ಯಾತ್ ಲಾಘವೇನಾನ್ಯೋನ್ಯಾಭಾವಗರ್ಭೈವ ವ್ಯಾಪ್ತಿರಂಗಮಿತಿ ಯಥೈವಾನ್ಯೋನ್ಯಾ-**

**ಭಾವಗರ್ಭಯೋಗ್ಯತಾಯಾಂ ಪ್ರತಿಯೋಗಿವ್ಯಧಿಕರಣೇತಿ ವಿಶೇಷಣನ್ನೈರ-ಪೇಕ್ಷ್ಯೇಣ ಲಾಘವಾತ್ ತಸ್ಯಾ ಏವ ಶಾಬ್ದಬೋಧಾಂಗತ್ವಾದಿತಿ ಭಾವಃ ॥**

ಅನುವಾದ - 'ವ್ಯಾಪ್ತೇರಿವ' ಎಂಬುದಾಗಿ ಗ್ರಂಥದಲ್ಲಿ ದೃಷ್ಟಾಂತವನ್ನು ನೀಡಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - 'ಪ್ರತಿಯೋಗ್ಯಸಮಾನಾಧಿಕರಣ-ಯತ್ಸಮಾನಾಧಿಕರಣಾತ್ಯಂತಾಭಾವಪ್ರತಿ-ಯೋಗೀ ಯತ್ ನ ಭವತಿ ತೇನ ಸಮಂ ತಸ್ಯ ಸಾಮಾನಾಧಿಕರಣ್ಯಂ ವ್ಯಾಪ್ತಿಃ' 'ಪ್ರತಿಯೋಗಿಗೆ ಸಮಾನಾ-ಧಿಕರಣವಾಗದ ಹೇತುಸಮಾನಾಧಿಕರಣವಾದ ಯಾವ ಅತ್ಯಂತಾಭಾವವಿದೆಯೋ ಅದಕ್ಕೆ ಯಾವುದು ಪ್ರತಿಯೋಗಿ ಆಗುವುದಿಲ್ಲವೋ ಅದರಿಂದ ಹೇತುವಿಗಿರುವ ಸಾಮಾನಾಧಿಕರಣ್ಯವೇ ವ್ಯಾಪ್ತಿ' ಎಂದು ಕರೆಸಿಕೊಳ್ಳುತ್ತದೆ. ಇದು ಅತ್ಯಂತಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣ. ಇದಕ್ಕಿಂತ 'ಯತ್ಸಮಾನಾಧಿ-ರಕರಣಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕಂ ಯನ್ನ ಭವತಿ ತೇನ ಸಮಂ ತಸ್ಯ ಸಾಮಾನಾಧಿ-ಕರಣ್ಯಂ ವ್ಯಾಪ್ತಿಃ' 'ಹೇತುಸಮಾನಾಧಿರಣವಾದ ಯಾವ ಅನ್ಯೋನ್ಯಾಭಾವವಿದೆಯೋ ಅದಕ್ಕೆ ಪ್ರತಿ-ಯೋಗಿತಾವಚ್ಛೇದಕವು ಯಾವುದಕ್ಕಿಲ್ಲವೋ ಅಂಥ ಹೇತುವಿನಿಂದ ಸಾಧ್ಯಕ್ಕೆ ಇರುವ ಸಾಮಾನಾಧಿ-ಕರಣ್ಯವೇ ವ್ಯಾಪ್ತಿ' ಎಂದು ಕರೆಸಿಕೊಳ್ಳುತ್ತದೆ. ಹೀಗೆ ತಾರ್ಕಿಕರಾದ ನೀವು ವ್ಯಾಪ್ತಿವಾದದಲ್ಲಿ ಎರಡು ಬಗೆಯ ಲಕ್ಷಣವನ್ನು ಹೇಳಿರುತ್ತೀರಿ. ಮತ್ತು ಅನ್ಯೋನ್ಯಾಭಾವವು ವ್ಯಾಪ್ತಿಯಾಗಿರುವುದರಿಂದ ಅನ್ಯೋ-ನ್ಯಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣದಲ್ಲಿ ಪ್ರತಿಯೋಗ್ಯಸಾಮಾನಾಧಿಕರಣ್ಯವೆಂಬ ವಿಶೇಷಣವು ಅನಾವಶ್ಯಕವಾದ್ದರಿಂದ ಲಾಘವವಿದೆಯೆಂದು ನೀವೇ ಒಪ್ಪಿರುತ್ತೀರಿ. ಇದರಂತೆ ಪ್ರಕೃತ ಯೋಗ್ಯತೆಯ ಲಕ್ಷಣದಲ್ಲಿಯೂ ಕೂಡ ಅನ್ಯೋನ್ಯಾಭಾವಗರ್ಭಿತವಾದ ಲಕ್ಷಣವನ್ನು ವಿವಕ್ಷಿಸಿದರೆ ಪ್ರತಿಯೋಗಿವೈಯಧಿ-ಕರಣ್ಯವೆಂಬ ವಿಶೇಷಣದ ಅಪೇಕ್ಷೆ ಇಲ್ಲವಾದ್ದರಿಂದ ಲಾಘವವಿದೆ. ಆದ್ದರಿಂದ ಅನ್ಯೋನ್ಯಾಭಾವ-ಗರ್ಭಿತವಾದ ಯೋಗ್ಯತೆಯ ಲಕ್ಷಣವೇ ಶಾಬ್ದಬೋಧವನ್ನು ಕುರಿತು ಕಾರಣವೆಂದು ಒಪ್ಪಬೇಕು.

ವಿಶೇಷ ವಿಚಾರ - 'ಯಸ್ಯ ಯತ್ಸಾಮಾನಾಧಿಕರಣ್ಯಂ ತೇನ ತಸ್ಯ ವ್ಯಾಪ್ತಿಃ' ಎಂದಷ್ಟೇ ವ್ಯಾಪ್ತಿಯ ಲಕ್ಷಣವನ್ನು ಹೇಳಿದರೆ 'ಪರ್ವತಃ ವಹ್ನಿಮಾನ್ ಪ್ರಮೇಯತ್ವಾತ್' ಎಂಬ ಸ್ಥಳದಲ್ಲಿ ಅತಿವ್ಯಾಪ್ತಿದೋಷವು ಬರುತ್ತದೆ. ಇಲ್ಲಿ 'ಪ್ರಮೇಯತ್ವಾತ್' ಎಂಬ ಹೇತುವಿಗೆ ಅಗ್ನಿಯ ಸಾಮಾನಾಧಿಕರಣ್ಯ ಇರುತ್ತದೆ. ಹಾಗಾಗಿ 'ಯತ್ಸಾಮಾನಾಧಿಕರಣ್ಯಾತ್ಯಂತಾಭಾವಪ್ರತಿಯೋಗೀ ಯನ್ನಭವತಿ' ಎಂಬ ವಿಶೇಷಣವನ್ನು ಹೇಳಬೇಕು.

ಪ್ರಮೇಯತ್ವಸಮಾನಾಧಿಕರಣವಾದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದದ್ದು ವಹ್ನಿಯು ಆಗುತ್ತದೆ. ಏಕೆಂದರೆ ಹ್ರದದಲ್ಲಿ ಪ್ರಮೇಯತ್ವ ಇದ್ದರೂ ಕೂಡ ಅಗ್ನಿಯು ಇರುವುದಿಲ್ಲ. ಆದ್ದರಿಂದ ಪ್ರಮೇಯತ್ವ-ಸಮಾನಾಧಿಕರಣವಾದ ಅತ್ಯಂತಾಭಾವವೆಂದರೆ ಅಗ್ನಿಯ ಅತ್ಯಂತಾಭಾವ ಆಯಿತು. ಅದಕ್ಕೆ ಪ್ರತಿಯೋಗಿ-ಯಾದದ್ದು ಅಗ್ನಿಯೇ ಆಗುತ್ತದೆ. ಹೀಗೆ ಪ್ರಮೇಯತ್ವಕ್ಕೂ ಅಗ್ನಿಗೂ ಸಾಮಾನಾಧಿಕರಣ್ಯ ಇದ್ದರೂ ಕೂಡ ವ್ಯಾಪ್ತಿ ಇದೆಯೆಂದು ಹೇಳಲು ಬರುವುದಿಲ್ಲ. ಧೂಮ ಮತ್ತು ಅಗ್ನಿಗಳಿಗೆ ಸಾಮಾನಾಧಿಕರಣ್ಯ ಇದ್ದರೂ ಕೂಡ ವ್ಯಾಪ್ತಿ ಇದೆಯೆಂದು ಹೇಳಲು ಬರುತ್ತದೆ. ಏಕೆಂದರೆ ಧೂಮಸಮನಾಧಿಕರಣವಾದ ಅತ್ಯಂತಾ-ಭಾವಕ್ಕೆ ಅಗ್ನಿಯು ಪ್ರತಿಯೋಗಿ ಆಗುವುದಿಲ್ಲ.

ಹೀಗೆ ಲಕ್ಷಣವನ್ನು ಪರಿಷ್ಕಾರ ಮಾಡಿದರೂ ಕೂಡ 'ಇದಂ ಸಂಯೋಗೀ ದ್ರವ್ಯತ್ವಾತ್' ಎಂಬ ಸ್ಥಳದಲ್ಲಿ ಅವ್ಯಾಪ್ತಿ ಬರುತ್ತದೆ. ಏಕೆಂದರೆ ದ್ರವ್ಯತ್ವಸಮಾನಾಧಿಕರಣವಾದ ಅತ್ಯಂತಾಭಾವಪ್ರತಿ-ಯೋಗಿಯಾದದ್ದು ಸಂಯೋಗವಾಗುತ್ತದೆ. ಸಮಗ್ರ ವೃಕ್ಷದಲ್ಲಿ ದ್ರವ್ಯತ್ವವಿದೆ; ಆದರೆ ಸಂಯೋಗವು ಸಮಗ್ರ ವೃಕ್ಷದಲ್ಲಿ ಇರುವುದಿಲ್ಲ. ಆದ್ದರಿಂದ ದ್ರವ್ಯತ್ವಸಮಾನಾಧಿಕರಣವಾದ ಅತ್ಯಂತಾಭಾವವೆಂದರೆ ಸಂಯೋಗದ ಅತ್ಯಂತಾಭಾವವು ಆಯಿತು. ಅದಕ್ಕೆ ಪ್ರತಿಯೋಗಿಯಾದದ್ದು ಸಂಯೋಗವೇ ಆಗುತ್ತದೆ. ಹೀಗೆ ವ್ಯಾಪ್ತಿಯ ಲಕ್ಷಣವು ಬಾರದ ಕಾರಣ ಪ್ರತಿಯೋಗ್ಯಸಾಮಾನಾಧಿಕರಣ್ಯವೆಂಬ ವಿಶೇಷಣವನ್ನು ಹೇಳಬೇಕು. ಈಗ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಯತ್ಸಾಮಾನಾಧಿಕರಣಾತ್ಯಂತಾ-ಭಾವವೆಂದರೆ ದ್ರವ್ಯತ್ವಸಮಾನಾಧಿಕರಣವಾದ ಸಂಯೋಗದ ಅತ್ಯಂತಾಭಾವವನ್ನು ವಿವಕ್ಷಿಸಿದರೆ ಇದು ಪ್ರತಿಯೋಗಿಗೆ ಸಮಾನಾಧಿಕರಣವೇ ಆಗಿದೆ. ಏಕೆಂದರೆ ಸಂಯೋಗದ ಅತ್ಯಂತಾಭಾವವು ಸಂಯೋಗ-ವೆಂಬ ಪ್ರತಿಯೋಗಿಯ ಜೊತೆಯಲ್ಲಿಯೇ ಇರುವುದರಿಂದ ಪ್ರತಿಯೋಗ್ಯಸಮಾನಾಧಿಕರಣ ಎನಿಸು-ವುದಿಲ್ಲ. ಆದ್ದರಿಂದ ಯತ್ಸಮಾನಾಧಿಕರಣ ಅತ್ಯಂತಾಭಾವಪದದಿಂದ ಸಂಯೋಗದ ಅತ್ಯಂತಾಭಾವವನ್ನು ವಿವಕ್ಷಿಸಲು ಬರುವುದಿಲ್ಲ; ಹೊರತಾಗಿ ಬೇರೆ ಘಟಾದ್ಯಭಾವಗಳನ್ನು ವಿವಕ್ಷಿಸಬೇಕು. ಅದಕ್ಕೆ ಸಂಯೋಗವು ಪ್ರತಿಯೋಗಿ ಆಗುವುದಿಲ್ಲ. ಆದ್ದರಿಂದ ದ್ರವ್ಯತ್ವದ ಜೊತೆ ಸಂಯೋಗಕ್ಕೆ ವ್ಯಾಪ್ತಿಯನ್ನು ಹೇಳಬಹುದು. ಈಗ ಯಾವುದೇ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಹೀಗೆ ಅತ್ಯಂತಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣದಲ್ಲಿ ಸಾಮಾನಾಧಿಕರಣ್ಯವೆಂಬ ವಿಶೇಷಣವನ್ನು ವಿವಕ್ಷಿಸಲೇಬೇಕು.

'ಯತ್ಸಮಾನಾಧಿಕರಣಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕಮ್ ಯನ್ನಭವತಿ ತೇನ ಸಮಂ ತಸ್ಯ ಸಾಮನಾಧಿಕರಣ್ಯಂ ವ್ಯಾಪ್ತಿಃ' ಎಂಬುದು ಅನ್ಯೋನ್ಯಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣವಾಗಿದೆ. ಹಿಂದೆ ಹೇಳಿದ ಅತ್ಯಂತಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣಕ್ಕಿಂತ ಈ ಅನ್ಯೋನ್ಯಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣದಲ್ಲಿ ಲಾಘವವಿದೆ. ಏಕೆಂದರೆ ಅನ್ಯೋನ್ಯಾಭಾವವು ವ್ಯಾಪ್ಯವೃತ್ತಿಯಾಗಿರುವುದರಿಂದ ಪ್ರತಿಯೋಗ್ಯಸಾಮಾನಾಧಿಕರಣ್ಯವೆಂಬ ವಿಶೇಷಣವನ್ನು ಈ ವ್ಯಾಪ್ತಿಯ ಲಕ್ಷಣದಲ್ಲಿ ವಿವಕ್ಷಿಸುವ ಅವಶ್ಯಕತೆ ಇರುವುದಿಲ್ಲ.

ಅದು ಹೀಗೆ - ಏಕೆಂದರೆ ಧೂಮವಿರುವ ಸ್ಥಳದಲ್ಲಿ ಅಗ್ನಿಮದನ್ಯೋನ್ಯಾಭಾವವು ಇರುವುದಿಲ್ಲ. ಇಂಥ ಅನ್ಯೋನ್ಯಾಭಾವದಲ್ಲಿ ಧೂಮಕ್ಕೆ ಅಧಿಕರಣವಾದ ಮಹಾನಸಾದಿಗಳಲ್ಲಿ ಅಗ್ನಿಮದನ್ಯೋನ್ಯಾ-ಭಾವವು ಇರುವುದೇ ಇಲ್ಲ. ಒಂದು ವೇಳೆ ಅಗ್ನಿಮದನ್ಯೋನ್ಯಾಭಾವವು ಇದ್ದರೆ ಆಗ ಪ್ರತಿ-ಯೋಗಿತಾವಚ್ಛೇದಕ ಅಗ್ನಿಯು ಆಗುತ್ತಿತ್ತು. ಆದರೆ ಧೂಮಸಮಾನಾಧಿಕರಣವಾದ ಸ್ಥಳದಲ್ಲಿ ಅಗ್ನಿ-ಮದನ್ಯೋನ್ಯಾಭಾವವು ಇಲ್ಲದ ಕಾರಣ ಅಗ್ನಿಯು ಪ್ರತಿಯೋಗಿತಾವಚ್ಛೇದಕ ಆಗುವುದಿಲ್ಲ.

'ಪರ್ವತೋ ವಹ್ನಿಮಾನ್ ಪ್ರಮೇಯತ್ವಾತ್' ಎಂಬ ವ್ಯಭಿಚಾರಿಸ್ಥಳದಲ್ಲಿ ಪ್ರಮೇಯತ್ವವು ಹ್ರದದಲ್ಲಿ ಇರುತ್ತದೆ. ಅಲ್ಲಿ ಅಗ್ನಿಮದನ್ಯೋನ್ಯಾಭಾವವು ಇರುತ್ತದೆ. ಇದರಲ್ಲಿ ಪ್ರತಿಯೋಗಿಯಾದದ್ದು ಅಗ್ನಿಮತ್, ಪ್ರತಿಯೋಗಿತಾವಚ್ಛೇದಕವಾದದ್ದು ಅಗ್ನಿಮತ್ವ; ಆದ್ದರಿಂದ ಯತ್ಸಮನಾಧಿಕರಣವಾದ ಅನ್ಯೋನ್ಯಾ-ಭಾವವೆಂದರೆ ಅಗ್ನಿಮದನ್ಯೋನ್ಯಾಭಾವ ಆಯಿತು. ಅದರಲ್ಲಿ ಪ್ರತಿಯೋಗಿತಾವಚ್ಛೇದಕವಾದದ್ದು ಅಗ್ನಿಯೇ ಆಯಿತು. ಆದ್ದರಿಂದ 'ಪ್ರತಿಯೋಗಿತಾವಚ್ಛೇದಕಮ್ ಯತ್ ನ ಭವತಿ' ಎಂಬ ವ್ಯಾಪ್ತಿಯ ಲಕ್ಷಣವು ಸಮನ್ವಯವಾಗುವುದಿಲ್ಲ. 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬಲ್ಲಿ ಈ ವ್ಯಾಪ್ತಿಯ ಲಕ್ಷಣವು ಸಮನ್ವಯವಾಗುತ್ತದೆ. ಧೂಮಸಮಾನಾಧಿಕರಣವಾದ ಅನ್ಯೋನ್ಯಾಭಾವವೆಂದರೆ ಅಗ್ನಿಮದ-ನ್ಯೋನ್ಯಾಭಾವವು ಆಗುವುದಿಲ್ಲ. ಧೂಮವಿರುವ ಮಹಾನಸಾದಿಗಳಲ್ಲಿ ಅಗ್ನಿಯೇ ಇರುವುದರಿಂದ ತದನ್ಯೋನ್ಯಾಭಾವವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಧೂಮಸಮಾನಾಧಿಕರಣವಾದ ಅನ್ಯೋನ್ಯಾಭಾವವೆಂದರೆ ವಹ್ನಿಯ ಅನ್ಯೋನ್ಯಾಭಾವ ಆಗುವುದಿಲ್ಲ. ಘಟಾದಿಗಳ ಅನ್ಯೋನ್ಯಾಭಾವವೇ ಆಗುತ್ತದೆ. ಆದಕ್ಕೆ ಪ್ರತಿಯೋಗಿತಾವಚ್ಛೇದಕವಾದದ್ದು ಘಟತ್ವಾದಿಗಳು ಆಗುತ್ತವೆ. ಹೊರತು ಅಗ್ನಿ ಆಗುವುದಿಲ್ಲ.

ಹೀಗೆ ಅನ್ಯೋನ್ಯಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣದಲ್ಲಿ ಪ್ರತಿಯೋಗಿವ್ಯೆಯಧಿಕರಣ್ಯ ಎಂಬ ವಿಶೇಷಣದ ಅಪೇಕ್ಷೆ ಇಲ್ಲದಿರುವುದರಿಂದ ಲಾಘವವಿದೆಯೆಂದು ವ್ಯಾಪ್ತಿವಾದದಲ್ಲಿ ತಾರ್ಕಿಕರಾದ ನೀವು ಅಂಗೀಕಾರ ಮಾಡಿರುವಿರಿ.

ತಾರ್ಕಿಕರು ಅತ್ಯಂತಾಭಾವಗರ್ಭಿತವಾದ ವ್ಯಾಪ್ತಿಲಕ್ಷಣವನ್ನು ಹಾಗೂ ಅನ್ಯೋನ್ಯಾಭಾವಗರ್ಭಿತ-ವಾದ ವ್ಯಾಪ್ತಿಲಕ್ಷಣವನ್ನು ಹೇಳುತ್ತಾರೆ. ಅತ್ಯಂತಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣದಲ್ಲಿ ಪ್ರತಿ-ಯೋಗ್ಯಸಾಮಾನಾಧಿಕರಣ್ಯ ಎಂಬ ವಿಶೇಷಣವನ್ನು ಹೇಳಬೇಕಾದ ಕ್ಲೇಶವಿದೆ. ಆದ್ದರಿಂದ ಸಹಜವಾಗಿ ಗೌರವದೋಷ ಬರುತ್ತದೆ. ಅನ್ಯೋನ್ಯಾಭಾವಗರ್ಭಿತವಾದ ವ್ಯಾಪ್ತಿಯ ಲಕ್ಷಣದಲ್ಲಿ ಪ್ರತಿಯೋಗ್ಯ-ಸಾಮಾಧಿಕರಣ್ಯ ಎಂಬ ವಿಶೇಷಣವನ್ನು ಕೊಡುವ ಪ್ರಸಂಗವಿಲ್ಲದ ಕಾರಣ ಲಾಘವವಿದೆ. ಹೀಗೆ ವ್ಯಾಪ್ತಿ-ಯಲ್ಲಿ ಅನ್ಯೋನ್ಯಾಭಾವಗರ್ಭಿತವಾದದ್ದನ್ನೇ ಲಕ್ಷಣವೆಂದು ಸ್ವೀಕಾರ ಮಾಡಿದಂತೆ ಯೋಗ್ಯತೆಯಲ್ಲೂ ಕೂಡ ಅನ್ಯೋನ್ಯಾಭಾವಗರ್ಭಿತವಾದ ಲಕ್ಷಣವನ್ನೇ ಸ್ವೀಕಾರ ಮಾಡಬೇಕು.

ಧೂಮಕ್ಕೆ ಅಗ್ನಿಯಿಂದ ವ್ಯಾಪ್ತಿಯಿದೆ. ಏಕೆಂದರೆ ಅಗ್ನಿಯು ಧೂಮಸಮಾನಾಧಿಕರಣವಾದ ಅತ್ಯಂತಾಭಾವಪ್ರತಿಯೋಗಿ ಆಗಿರುವುದಿಲ್ಲ ಎಂಬುದು ಈ ಲಕ್ಷಣದ ಅಭಿಪ್ರಾಯ. ಇದರ ಸಮನ್ವಯ ಹೀಗಿದೆ - ಯತ್ = ಧೂಮ, ಧೂಮಾಧಿಕರಣ = ಪರ್ವತ, ತದವೃತ್ತಿಃ ಯಃ ಅತ್ಯಂತಾಭಾವಃ = ವಹ್ನಿಯ ಅತ್ಯಂತಾಭಾವವನ್ನು ಹೇಳಲು ಬರುವುದಿಲ್ಲ. ವಹ್ನಿಯೇ ಇರುವುದರಿಂದ ಘಟಾದ್ಯಭಾವಗಳನ್ನು ಹೇಳಬೇಕು. ಅದಕ್ಕೆ ಪ್ರತಿಯೋಗೀ = ಘಟ, ಹೊರತು ವಹ್ನಿಯಾಗುವುದಿಲ್ಲ. ತೇನ ಸಮಂ = ವಹ್ನಿಯ ಜೊತೆ, ತಸ್ಯ = ಧೂಮಕ್ಕೆ ಸಾಮಾನಾಧಿಕರಣ್ಯವು ಇರುವುದರಿಂದ ಇದೇ ವ್ಯಾಪ್ತಿಯೆಂದು ಕರೆಸಿಕೊಳ್ಳು-ತ್ತದೆ.

ಆಕ್ಷೇಪ - ಅತ್ಯಂತಾಭಾವಪ್ರತಿಯೋಗಿಕವಾದ ಹಾಗೂ ಅನ್ಯೋನ್ಯಾಭಾವಪ್ರತಿಯೋಗಿಕವಾದ ಎರಡು ಬಗೆಯ ಯೋಗ್ಯತಾಜ್ಞಾನಗಳೂ ಕೂಡ ಪ್ರತ್ಯೇಕವಾಗಿ ಶಾಬ್ದಬೋಧ ಕಾರಣವೆಂದೇ ಹೇಳುತ್ತೇವೆ. ಒಂದು ಕಾರ್ಯಕ್ಕೆ ಎರಡು ಕಾರಣವನ್ನು ಅನುಗಮ ಮಾಡಿದ ದೋಷ ಬರುತ್ತದಲ್ಲವೆ ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ಗ್ರಾಹ್ಯಸಂಸರ್ಗವಿಷಯಕಪ್ರಮಾವಿರಹಜ್ಞಾನತ್ವವು ಎರಡಲ್ಲೂ ಅನುಗತವಾಗಿದೆ. ಬೋಧನೀಯವಾದ ಯಾವ ಸಂಸರ್ಗವಿದೆಯೋ ಅದಕ್ಕೆ ಯಾವುದು ವಿರೋಧಿಯೋ

ತದ್ವಿಷಯಕವಾದ ಪ್ರಮಾ ಇಲ್ಲದಿದ್ದರೆ ಪ್ರಮಾವಿರಹಜ್ಞಾನವು ಯೋಗ್ಯತಾಜ್ಞಾನದಲ್ಲಿ ಬರುತ್ತದೆಂಬುದು ಇದರ ಅಭಿಪ್ರಾಯ. ಹೀಗೆ ಹೇಳಿದ್ದರಿಂದ ಯಾವುದೇ ದೋಷಕ್ಕೂ ಕೂಡ ಅವಕಾಶವಿರುವುದಿಲ್ಲ.

ಮತ್ತು ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆಯಲ್ಲಿ ಅತ್ಯಂತಾಭಾವಗರ್ಭಿತವಾದ ಯೋಗ್ಯತಾಲಕ್ಷಣಕ್ಕೆ ಅವ್ಯಾಪ್ತಿದೋಷ ಬರುತ್ತದೆಂದು ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ವಹ್ನಿಸಂಸರ್ಗದ ಅನ್ಯೋನ್ಯಾಭಾವವಿರುವ ಸ್ಥಳದಲ್ಲಿ ವಹ್ನಿಸಂಸರ್ಗವಿರುವುದು ಕಂಡಿಲ್ಲ. ಆದ್ದರಿಂದ ವಹ್ನಿಸಂಸರ್ಗದ ಅನ್ಯೋನ್ಯಾಭಾವವು ಕೂಡ ಸಂಸರ್ಗಕ್ಕೆ ವಿರೋಧಿಯಾಗಿದೆ.

'ದ್ರವ್ಯಂ ಸಂಯೋಗೀ' ಎಂಬಲ್ಲಿಯೂ ಕೂಡ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ದ್ರವ್ಯಸಂಯೋಗದ ಅತ್ಯಂತಾಭಾವವು ಅವ್ಯಾಪ್ಯವೃತ್ತಿಯಾಗಿರುವುದರಿಂದ ಸಂಯೋಗಕ್ಕೆ ವಿರೋಧಿಯೇ ಆಗಿರುವುದಿಲ್ಲ.

'ಗಂಧಪ್ರಾಗಭಾವಸಮಾನಕಾಲೀನೋ ಘಟಃ ಗಂಧವಾನ್' ಎಂಬ ಸ್ಥಳದಲ್ಲಿ ಅತಿವ್ಯಾಪ್ತಿದೋಷವೂ ಕೂಡ ಬರುವುದಿಲ್ಲ. ಏಕೆಂದರೆ ಗಂಧಪ್ರಾಗಭಾವವೂ ಕೂಡ ಭಿನ್ನಕಾಲೀನವಾದ ಗಂಧದ ಜೊತೆ ಅವಿರುದ್ಧವಾಗಿದೆ. ಆದ್ದರಿಂದ ಸಮಾನಕಾಲೀನವಾದ ಗಂಧದ ಜೊತೆ ಗಂಧಪ್ರಾಗಭಾವವು ವಿರುದ್ಧವಾಗಿದೆ. ತದ್ವಿಷಯಕವಾದ ಪ್ರಮಾವೇ ಬರುವುದರಿಂದ ಪ್ರಮಾವಿರಹರೂಪವಾದ ಯೋಗ್ಯತೆಯು ಇರುವುದಿಲ್ಲವಾದ್ದರಿಂದ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

## ಯೋಗ್ಯತಾಲಕ್ಷಣದಲ್ಲಿ ಅನುಗಮ ಹೇಗೆ ?

**ತರ್ಕತಾಂಡವಮ್ – ನನು ತಥ್ಯುರ್ಭಯಧೀರಪಿ ಪ್ರತ್ಯೇಕಂ ಶಾಬ್ದಬೋಧಹೇತುಃ । ನ ಚಾನನುಗಮಃ । ಗ್ರಾಹ್ಯಸಂಸರ್ಗವಿರೋಧಿವಿಷಯಕಪ್ರಮಾವಿರಹಜ್ಞಾನತ್ವೇನ ಅನುಗಮಾತ್ । ತಥಾ ಚ ನ ಕೋಪಿ ದೋಷಃ । ಸಂಸರ್ಗವದನ್ಯೋನ್ಯಾಭಾವಸ್ಯಾಪಿ ಸಂಸರ್ಗವಿರೋಧಿತ್ವಾತ್ । ದ್ರವ್ಯೇ ಸಂಯೋಗಾತ್ಯಂತಾಭಾವಸ್ಯ ಸಂಯೋಗಾ–**

**ವಿರೋಧಿತ್ವಾತ್ । ಗಂಧಪ್ರಾಗಭಾವಸ್ಯಾಪಿ ಭಿನ್ನಕಾಲೀನಗಂಧೇನ ಸಹಾವಿರೋಧೇತಿ ತಾತ್ಪರ್ಯವಿಷಯೇಣ ಸಮಾನಕಾಲೀನಗಂಧೇನ ವಿರೋಧಾತ್,**

ಅನುವಾದ - ಅನ್ಯೋನ್ಯಾಭಾವಘಟಿತವಾದ ಹಾಗೂ ಅತ್ಯಂತಾಭಾವಘಟಿತವಾದ ಯೋಗ್ಯತಾಲಕ್ಷಣವನ್ನು ವಿವಕ್ಷಿಸಿದರೆ ಎರಡೂ ಕೂಡ ಪ್ರತ್ಯೇಕವಾಗಿ ಶಾಬ್ದಬೋಧವನ್ನು ಕುರಿತು ಕಾರಣವಾಗಬೇಕಾದೀತಲ್ಲವೆ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ, ಅತ್ಯಂತಾಭಾವ-ಗರ್ಭಿತವಾದ ಹಾಗೂ ಅನ್ಯೋನ್ಯಾಭಾವಗರ್ಭಿತವಾದ ಎರಡು ಬಗೆಯ ಯೋಗ್ಯತಾಜ್ಞಾನಗಳು ಕೂಡ ಶಾಬ್ದಬೋಧಕ್ಕೆ ಕಾರಣವೆಂದು ಹೇಳುತ್ತೇವೆ. ಒಂದು ಕಾರಣಕ್ಕೆ ಎರಡು ಕಾರಣಗಳನ್ನು ಹೇಳಿದರೆ ಅನನುಗಮನದೋಷ ಬರುತ್ತದಲ್ಲವೆ? ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರಿಸುತ್ತಿದ್ದಾರೆ-ಗ್ರಾಹ್ಯಸಂಸರ್ಗವಿರೋಧಿವಿಷಯಕಪ್ರಮಾವಿರಹಜ್ಞಾನತ್ವವು ಎರಡು ಬಗೆಯ ಯೋಗ್ಯತಾ ಜ್ಞಾನ-ಗಳಲ್ಲಿ ಅನುಗತವಾಗಿದೆ.

ಬೋಧನೀಯವಾದ ಯಾವ ಅನ್ವಯವಿದೆಯೋ ಅದಕ್ಕೆ ಯಾವುದು ವಿರೋಧಿಯಾಗಿ-ದೆಯೋ ತದ್‌ವಿಷಯಕವಾದ ಯಥಾರ್ಥಜ್ಞಾನವು ಇಲ್ಲದಿದ್ದರೆ ಅಂಥ ಪ್ರಮಾವಿರಹವೇ ಯೋಗ್ಯತಾ ಎಂದು ಕರೆಸಿಕೊಳ್ಳುತ್ತದೆ. ತದ್‌ವಿರಹಜ್ಞಾನತ್ವವು ಯೋಗ್ಯತಾಜ್ಞಾನದಲ್ಲಿ ಅನುಗತವಾಗಿದೆ. ಆದ್ದರಿಂದ ಗ್ರಾಹ್ಯಸಂಸರ್ಗವಿರೋಧಿವಿಷಯಕಪ್ರಮಾವಿರಹಜ್ಞಾನತ್ವವು ಅತ್ಯಂತಾ-ಭಾವಗರ್ಭಿತವಾದ ಹಾಗೂ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಜ್ಞಾನಗಳಲ್ಲಿ ಅನುಗತ-ವಾಗಿದೆ. ಆದ್ದರಿಂದ ಯಾವುದೇ ದೋಷವಿಲ್ಲ.

ಕ್ರಿಯಾಕಾರಕಭಾವಸ್ವರೂಪವಾದ ಸಂಸರ್ಗಕ್ಕೆ ಸಂಸರ್ಗವದತ್ಯಂತಾಭಾವ ಆದಂತೆ ಸಂಸರ್ಗ-ವದನ್ಯೋನ್ಯಾಭಾವವೂ ಆಗಿದೆ. ಮತ್ತು 'ದ್ರವ್ಯಂ ಸಂಯೋಗೀ' ಎಂಬಲ್ಲಿ ಅವ್ಯಾಪ್ತಿದೋಷವೂ ಬರುವುದಿಲ್ಲ. ಏಕೆಂದರೆ ಸಂಯೋಗಾತ್ಯಂತಾಭಾವವು ಸಂಯೋಗಕ್ಕೆ ಅವಿರೋಧಿಯಾಗಿದೆ. ಗಂಧಪ್ರಾಗಭಾವವೂ ಕೂಡ ಭಿನ್ನಕಾಲೀನವಾದ ಗಂಧದಿಂದ ಅವಿರುದ್ಧವಾಗಿದೆ ಎಂಬ ತಾತ್ಪರ್ಯಕ್ಕೆ ವಿಷಯವಾದ್ದರಿಂದ ಸಮಾನಕಾಲೀನಗಂಧದಿಂದ ವಿರುದ್ಧವಾಗಿದೆ.

ವಿವರಣೆ– 'ಸಿಂಚತಿ' ಎಂಬಲ್ಲಿ ಬೋಧನೀಯವಾದ ಸಂಸರ್ಗವೆಂದರೆ ಜಲ ಹಾಗೂ ಸೇಚನಕ್ರಿಯೆಗೂ ಇರುವ ಕ್ರಿಯಾಕಾರಕಭಾವಸ್ವರೂಪವಾದ ಸಂಸರ್ಗ. ಈ ಸಂಸರ್ಗಕ್ಕೆ ವಿರೋಧಿಯಾದದ್ದು ಸಂಸರ್ಗವದನ್ಯೋನ್ಯಾಭಾವವಾಗುತ್ತದೆ. ಅದರಂತೆ ಸಂಸರ್ಗದ ಅತ್ಯಂತಾಭಾವವು ಕೂಡ ಆಗುತ್ತದೆ. ಘಟಕ್ಕೆ ಘಟದ ಅಭಾವ ಹಾಗೂ ಘಟವದನ್ಯೋ-ನ್ಯಾಭಾವ ಎರಡು ಕೂಡ ವಿರೋಧಿಯಾದಂತೆ ಇಲ್ಲಿಯೂ ಕೂಡ ತಿಳಿಯಬೇಕು. ಆದ್ದರಿಂದ ಅತ್ಯಂತಾಭಾವವಿಷಯಕವಾದ ಪ್ರಮಾ ಹಾಗೂ ಅನ್ಯೋನ್ಯಾಭಾವವಿಷಯಕ-ವಾದ ಪ್ರಮಾ ಎರಡೂ ಕೂಡ ಗ್ರಾಹ್ಯಸಂಸರ್ಗಗಳಿಗೆ ವಿರೋಧಿಯೇ ಆಗಿರುತ್ತದೆ.

'ಜಲಂ ಸೇಚನಸಂಸರ್ಗವಾನ್ ನ ಭವತಿ' ಎಂಬ ಪ್ರಮಾವಾಗಲಿ 'ಜಲಂ ಸೇಚನ ಸಂಸರ್ಗಪ್ರತಿಯೋಗಿಕಾತ್ಯಂತಾಭಾವವತ್' ಎಂಬ ಪ್ರಮಾವಾಗಲಿ ಇರುವುದಿಲ್ಲ. ಆದ್ದರಿಂದ ತದ್‌ವಿರಹಜ್ಞಾನತ್ವವು 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿರುವ ಯೋಗ್ಯತಾ ಜ್ಞಾನದಲ್ಲಿ ಬರುತ್ತದೆ. 'ವಹ್ನಿನಾ ಸಿಂಚತಿ' ಎಂಬಲ್ಲಿ ಯೋಗ್ಯತಾ ಇಲ್ಲದ ಕಾರಣ ಗ್ರಾಹ್ಯ-ಸಂಸರ್ಗವಿಷಯಕಪ್ರಮಾವಿರಹಜ್ಞಾನತ್ವವು ಬರುವುದಿಲ್ಲ. ಏಕೆಂದರೆ 'ಅಗ್ನಿಃ ಸೇಚನ-ಸಂಸರ್ಗವಾನ್ ನ ಭವತಿ' ಎಂಬ ಹಾಗೂ 'ಅಗ್ನಿಃ ಸೇಚನಸಂಸರ್ಗಪ್ರತಿಯೋಗಿಕಾ-ತ್ಯಂತಾಭಾವವಾನ್' ಎಂಬ ಜ್ಞಾನವು ಪ್ರಮಾವೇ ಆಗಿರುವುದರಿಂದ ಪ್ರಮಾವಿರಹ-ಜ್ಞಾನತ್ವವನ್ನು ಹೇಳಲು ಸಾಧ್ಯವಿಲ್ಲ.

'ದ್ರವ್ಯಂ ಸಂಯೋಗೀ' ಎಂಬಲ್ಲಿಯೂ ಕೂಡ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಯಾವ ದ್ರವ್ಯದಲ್ಲಿ ಸಂಯೋಗವಿದೆಯೋ ಅದೇ ದ್ರವ್ಯದಲ್ಲಿ ಸಂಯೋಗಾ-ಭಾವವು ಕೂಡ ಇರುತ್ತದೆ. ಗ್ರಾಹ್ಯವಾದ ಸಂಸರ್ಗವೆಂದರೆ ದ್ರವ್ಯನಿಷ್ಠವಾದ ಸಂಸರ್ಗ. ಇದು ಅವ್ಯಾಪ್ಯವೃತ್ತಿ ಆಗಿರುವುದರಿಂದ ದ್ರವ್ಯನಿಷ್ಠವಾದ ಸಂಯೋಗದ ಅತ್ಯಂತಾಭಾವವು ಗ್ರಾಹ್ಯಸಂಸರ್ಗಕ್ಕೆ ವಿರೋಧಿಯಾಗಿರುವುದಿಲ್ಲ. ಗ್ರಾಹ್ಯವಾದ ಸಂಸರ್ಗವೆಂದರೆ ಸಂಯೋಗದ ಸಂಸರ್ಗ. ಇದು ಅವ್ಯಾಪ್ಯವೃತ್ತಿಯಾಗಿರುವುದರಿಂದ ಒಂದೇ ದ್ರವ್ಯದಲ್ಲಿ ಸಂಯೋಗದ ಸಂಸರ್ಗವು ಇದೆ. ಅದರ ಅತ್ಯಂತಾಭಾವವೂ ಕೂಡ ಇದೆ. ಆದ್ದರಿಂದ 'ದ್ರವ್ಯನಿಷ್ಠಸಂಯೋಗಸಂಸರ್ಗಾತ್ಯಂತಾಭಾವವಾನ್' ಎಂಬ ಜ್ಞಾನವು ಪ್ರಮಾರೂಪವೇ ಆಗಿದೆ. ಇದು ಸಂಯೋಗಸಂಸರ್ಗಕ್ಕೆ ವಿರೋಧಿಯಾಗದ ಕಾರಣ ದ್ರವ್ಯಸಂಸರ್ಗಕ್ಕೆ

ವಿರೋಧಿಯಾದ ಅತ್ಯಂತಾಭಾವವೆಂದರೆ ದ್ರವ್ಯಸಂಯೋಗಸಂಸರ್ಗದ ಅತ್ಯಂತಾ-ಭಾವವನ್ನು ವಿವಕ್ಷಿಸಲು ಸಾಧ್ಯವಿಲ್ಲ. ಬೇರೆ ಪದಾರ್ಥದ ಅತ್ಯಂತಾಭಾವವನ್ನೇ ವಿವಕ್ಷಿಸ-ಬೇಕು. ತದ್ವಿಷಯಕವಾದ ಪ್ರಮಾವಿರಹಜ್ಞಾನತ್ವವು 'ದ್ರವ್ಯಂ ಸಂಯೋಗೀ' ಎಂಬಲ್ಲಿ ಬರುವುದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ.

'ಗಂಧಪ್ರಾಗಭಾವಸಮಾನಕಾಲೀನೋ ಘಟಃ ಗಂಧವಾನ್' ಎಂಬ ವ್ಯಾಹತವಾದ ವಾಕ್ಯದಲ್ಲಿ ಅತಿವ್ಯಾಪ್ತಿದೋಷಕ್ಕೂ ಕೂಡ ಅವಕಾಶವಿಲ್ಲ. ಘಟದಲ್ಲಿ ಗಂಧಸಂಸರ್ಗದ ಪ್ರಾಗಭಾವವಿರಬಹುದೇ ಹೊರತು ಗಂಧಸಂಸರ್ಗದ ಅತ್ಯಂತಾಭಾವವಿರಲು ಸಾಧ್ಯವಿಲ್ಲದ ಕಾರಣ ಯೋಗ್ಯತಾಲಕ್ಷಣವು ಬರುತ್ತದೆಂದು ಅತಿಪ್ರಸಂಗವನ್ನು ಹಿಂದೆ ಹೇಳಲಾಗಿತ್ತು. ಈಗ 'ಗ್ರಾಹ್ಯಸಂಸರ್ಗವಿರೋಧಿವಿಷಯಕಪ್ರಮಾವಿರಹಜ್ಞಾನತ್ವಮ್' ಎಂದು ಹೇಳಿರುವು-ದರಿಂದ ಆ ದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಗ್ರಾಹ್ಯಸಂಸರ್ಗಕ್ಕೆ ವಿರೋಧಿಯಾದದ್ದು ಗಂಧಪ್ರಾಗಭಾವವೂ ಆಗಿದೆ. ಉತ್ಪದ್ಯಮಾನವಾದ ಗಂಧಕ್ಕೆ ಗಂಧಪ್ರಾಗಭಾವವು ಸಮಾನ-ಕಾಲದಲ್ಲಿ ವಿರೋಧಿಯಾಗಿದೆ. ಆದ್ದರಿಂದ ಗ್ರಾಹ್ಯಸಂಸರ್ಗವಾದದ್ದು ಗಂಧಸಂಸರ್ಗ. ಅದಕ್ಕೆ ವಿರೋಧಿಯಾದದ್ದು ಗಂಧದ ಪ್ರಾಗಭಾವ. ತದ್ವಿಷಯಕವಾದ ಪ್ರಮಾವೇ ಇರುವುದರಿಂದ ತದ್ವಿರಹಜ್ಞಾನತ್ವರೂಪವಾದ ಯೋಗ್ಯತಾಲಕ್ಷಣವು ಬರುವುದಿಲ್ಲ.

## ಅನುಗತಧರ್ಮದ ಸ್ವರೂಪ ಹೀಗಿದೆ

**ನ್ಯಾಯದೀಪಃ – ಪಕ್ಷಧರೇಣ 'ಅತ್ರ ಬ್ರೂಮಃ' ಇತ್ಯಾದಿನಾ ಸಿದ್ಧಾಂತಿತಮ್ ಆಶಂಕತೇ – ನನ್ವಿತಿ ॥ ದ್ವಿರೂಪಯೋಗ್ಯತಾಜ್ಞಾನಸ್ಯಾಪಿ ಅನುಗತಧರ್ಮಾನಾಹ – ಗ್ರಾಹ್ಯೇತಿ ॥**

ಅನುವಾದ - ಪಕ್ಷಧರನು 'ಅತ್ರ ಬ್ರೂಮಃ' ಎಂಬುದಾಗಿ ಸಿದ್ಧಾಂತ ಮಾಡಿದ ಪಕ್ಷವನ್ನು 'ನನು' ಎಂಬ ವಾಕ್ಯದಿಂದ ಶಂಕಿಸುತ್ತಿದ್ದಾರೆ. ದ್ವಿರೂಪವಾದ ಯೋಗ್ಯತೆಯ ಜ್ಞಾನಕ್ಕೆ ಅನುಗತವಾದ ಧರ್ಮವನ್ನು 'ಗ್ರಾಹ್ಯ' ಎಂಬ ಶಬ್ದದಿಂದ ಹೇಳಿದ್ದಾರೆ.

## ಅನುಗತವಾಗಿದೆ ಯೋಗ್ಯತಾಲಕ್ಷಣ

**ನ್ಯಾಯದೀಪ – ಗ್ರಾಹ್ಯೋ ಯಃ ಸಂಸರ್ಗಃ ಜಲಸೇಕಸಂಸರ್ಗಃ, ತದ್ವಿರೋಧಿ ಯದಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವಮ್, ಅಪರಪದಾರ್ಥನಿಷ್ಠಾನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವಮ್, ವಿರೋಧಿತ್ವಸ್ಯ ತಜ್ಜ್ಞಾನಪ್ರತಿಬಂಧಕಜ್ಞಾನವಿಷಯತ್ವರೂಪತ್ವಸ್ಯ ಅತ್ರಾಭಿಮತತ್ವಾತ್, ತದ್ವಿಷಯಕಪ್ರಮಾವಿರಹಜ್ಞಾನತ್ವಂ ದ್ವಿರೂಪಸ್ಯಾಪಿ ಯೋಗ್ಯತಾಜ್ಞಾನಸ್ಯಾಸ್ತೀತ್ಯನುಗಮಾದಿತ್ಯರ್ಥಃ ।**

ಅನುವಾದ - 'ಗ್ರಾಹ್ಯಸಂಸರ್ಗವಿರೋಧಿವಿಷಯಕಪ್ರಮಾವಿರಹಜ್ಞಾನತ್ವಮ್' ಎಂಬುದಾಗಿ ಗ್ರಂಥದಲ್ಲಿ ಅನುಗತಧರ್ಮವನ್ನು ಹೇಳಿದ್ದಾರೆ. ಇದರ ಸಮನ್ವಯ ಹೀಗಿದೆ - 'ಜಲೇನ ಸಿಂಚತಿ' ಎಂಬಲ್ಲಿ ಗ್ರಾಹ್ಯವಾದ ಸಂಸರ್ಗವೆಂದರೆ ಜಲದಲ್ಲಿ ತಿಳಿಯಲ್ಪಡುವ ಸೇಕದ ಸಂಸರ್ಗ. ಇದಕ್ಕೆ ವಿರೋಧಿಯಾದದ್ದು ಜಲನಿಷ್ಠವಾದ ಅತ್ಯಂತಾಭಾವಪ್ರತಿಯೋಗಿತ್ವ, ಹಾಗೂ ಜಲನಿಷ್ಠವಾದ ಅನ್ಯೋನ್ಯಾಭಾವಪ್ರತಿಯೋಗಿತಾವಚ್ಛೇದಕತ್ವ. ಇವೆರಡರಲ್ಲಿರುವ ವಿರೋಧಿತ್ವ ಎಂದರೆ 'ಜಲದಲ್ಲಿ ಸೇಕಸಂಸರ್ಗವಿದೆ' ಎಂಬ ಜ್ಞಾನಕ್ಕೆ ಪ್ರತಿಬಂಧಕವಾದ ಜ್ಞಾನವಿಷಯತ್ವರೂಪತ್ವ ಎಂದರ್ಥ. ತದ್‌ವಿಷಯಕಪ್ರಮಾಜ್ಞಾನತ್ವವು ಅನ್ಯೋನ್ಯಾಭಾವಗರ್ಭಿತವಾದ ಹಾಗೂ ಅತ್ಯಂತಾಭಾವಗರ್ಭಿತವಾದ ಯೋಗ್ಯತಾ ಜ್ಞಾನದಲ್ಲಿ ಇರುತ್ತದೆ. ಆದ್ದರಿಂದ ಎರಡು ಬಗೆಯ ಯೋಗ್ಯತಾಜ್ಞಾನಗಳಲ್ಲಿ ಇದು ಅನುಗತವಾಗಿದೆ ಎಂದು ತಿಳಿಯಬೇಕು.

## ಅನ್ಯೋನ್ಯಾಭಾವಗರ್ಭಿತವಾದ ಲಕ್ಷಣದಲ್ಲಿ ಅವ್ಯಾಪ್ತಿ ಇಲ್ಲ

**ನ್ಯಾಯದೀಪ – 'ನ ಕೋಪಿ ದೋಷಃ' ಇತ್ಯುಕ್ತಂ ವ್ಯಂಜಯನ್, 'ಅತ್ಯಂತಾಭಾವಸ್ಯ ಸಂಸರ್ಗವಿರೋಧಿತ್ವಂ ವ್ಯಕ್ತಮ್' ಇತಿ, ತತ್ರ ಅವ್ಯಾಪ್ತ್ಯಭಾವಮಪ್ರದರ್ಶ್ಯ , ಅನ್ಯೋನ್ಯಾಭಾವಗರ್ಭಯೋಗ್ಯತಾಯಾಮ್ ಅವ್ಯಾಪ್ತಿದೋಷಸ್ತಾವನ್ನ ಇತ್ಯಾಹ – ಸಂಸರ್ಗೇತಿ ।। ವಹ್ನಿಸಂಸರ್ಗಾನ್ಯೋನ್ಯಾಭಾವವತಿ ವಹ್ನಿಸಂಸರ್ಗಸ್ಯಾದರ್ಶನಾದಿತಿ ಭಾವಃ ।**

ಅನುವಾದ - ಗ್ರಂಥದಲ್ಲಿ 'ತಥಾ ಚ ನ ಕೋಪಿ ದೋಷಃ' ಎಂದು ಹೇಳಿದ್ದಾರೆ. ಗ್ರಾಹ್ಯಸಂಸರ್ಗವಿರೋಧವಿಷಯಕ ಪ್ರಮಾವಿರಹಜ್ಞಾನತ್ವವನ್ನು ಅನುಗತವನ್ನಾಗಿ ಹೇಳಿರುವುದರಿಂದ ಹಿಂದೆ ಹೇಳಿದ

ಯಾವುದೇ ದೋಷಕ್ಕೂ ಅವಕಾಶ ಇಲ್ಲ ಎಂಬುದು ಇದರ ಅಭಿಪ್ರಾಯ. ಹಿಂದೆ ಅತ್ಯಂತಾಭಾವಗರ್ಭಿತವಾದ ಯೋಗ್ಯತಾದಲ್ಲಿ ಹಾಗೂ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆಯಲ್ಲಿ ಪರಸ್ಪರವಾಗಿ ಅವ್ಯಾಪ್ತಿದೋಷವನ್ನು ಹೇಳಲಾಗಿತ್ತು. ಇವೆರಡರಲ್ಲಿ ಅತ್ಯಂತಾಭಾವವು ಸಂಸರ್ಗಕ್ಕೆ ವಿರೋಧಿಯಾಗಿರುವುದು ಲೋಕಪ್ರಸಿದ್ಧವಾಗಿರುವುದರಿಂದ ಇಲ್ಲಿ ಅವ್ಯಾಪ್ತಿ ದೋಷವಿಲ್ಲವೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತೆಯಲ್ಲಿ ಮಾತ್ರ ಅವ್ಯಾಪ್ತಿದೋಷವನ್ನು 'ಸಂಸರ್ಗ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಅನ್ಯೋನ್ಯಾಭಾವ ಇರುವ ಸ್ಥಳದಲ್ಲಿ ವಹ್ನಿಸಂಸರ್ಗವಿರುವುದು ಕಂಡಿರುವುದಿಲ್ಲ. ಆದ್ದರಿಂದ ವಿರೋಧಿಯಾಗಿದೆ ಎಂದು ತಿಳಿಯಬೇಕು.

## 'ದ್ರವ್ಯಂ ಸಂಯೋಗೀ' ಎಂಬ ಸ್ಥಳದಲ್ಲಿ ಅವ್ಯಾಪ್ತಿದೋಷವು ಬರುವುದಿಲ್ಲ

**ನ್ಯಾಯದೀಪ– 'ದ್ರವ್ಯಂ ಸಂಯೋಗೀ' ಇತ್ಯತ್ರ ಅವ್ಯಾಪ್ತಿದೋಷೋ ನ ಇತ್ಯಾಹ – ದ್ರವ್ಯ ಇತಿ ॥ ಸಂಯೋಗಾವಿರೋಧಿತ್ವಾದಿತಿ ॥ 'ಸಂಯೋಗಸಂಸರ್ಗಾವಿರೋಧಿತ್ವಾತ್' ಇತ್ಯರ್ಥಃ । ಏವಂ ಚ ತತ್ರ ಸಂಯೋಗಸ್ಯ ಅವ್ಯಾಪ್ಯವೃತ್ತಿತಯಾ ಸ್ವಾಧಿಕರಣದ್ರವ್ಯನಿಷ್ಠಾತ್ಯಂತಾಭಾವಪ್ರತಿಯೋಗಿತ್ವೇಽಪಿ ತಸ್ಯ ಗ್ರಾಹ್ಯಸಂಯೋಗಸಂಸರ್ಗಾವಿರೋಧಿತ್ವೇನ ವಿರೋಧ್ಯಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವಾಭಾವಾದೇಃ ಸತ್ವಾತ್ ನಾವ್ಯಾಪ್ತಿಃ ಇತ್ಯರ್ಥಃ ।**

ಅನುವಾದ - 'ದ್ರವ್ಯಂ ಸಂಯೋಗೀ' ಎಂಬಲ್ಲಿ ಅವ್ಯಾಪ್ತಿ ದೋಷವು ಇಲ್ಲವೆಂಬುದಾಗಿ 'ದ್ರವ್ಯೇ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಸಂಯೋಗಸಂಸರ್ಗವು ಅವಿರೋಧಿಯಾದ್ದರಿಂದ ಎಂದು 'ಸಂಯೋಗಾವಿರೋಧಿತ್ವಾತ್' ಎಂಬ ಶಬ್ದದ ಅರ್ಥ. ಆದ್ದರಿಂದ ಈ ಸ್ಥಳದಲ್ಲಿ ಸಂಯೋಗವು ಅವ್ಯಾಪ್ಯವೃತ್ತಿಯಾದ್ದರಿಂದ ಸ್ವಾಧಿಕರಣದ್ರವ್ಯನಿಷ್ಠಾತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದ್ದರೂ ಸಹ ಈ ಸಂಯೋಗವು ಗ್ರಾಹ್ಯಸಂಯೋಗಸಂಸರ್ಗಕ್ಕೆ ವಿರೋಧಿಯಲ್ಲವಾದ್ದರಿಂದ ವಿರೋಧಿಯಾದ ಅಭಾವಪ್ರತಿಯೋಗಿತ್ವ ಮತ್ತು ಪ್ರಮಾವಿಶೇಷ್ಯತ್ವಾಭಾವಾದಿಗಳು ಇದೆಯಾದ್ದರಿಂದ ಅವ್ಯಾಪ್ತಿದೋಷವು ಇಲ್ಲ ಎಂದರ್ಥ.

## ಅತಿವ್ಯಾಪ್ತಿದೋಷವೂ ಇಲ್ಲ

**ನ್ಯಾಯದೀಪ – ಯದಪಿ 'ಗಂಧಪ್ರಾಗಭಾವಸಮಾನಕಾಲೀನಃ' ಇತ್ಯಾದಿನಾ ಅತಿವ್ಯಾಪ್ತಿಕಥನಂ ತದಪಿ ನ, ಇತ್ಯಾಹ – ಗಂಧೇತಿ ॥ ವಿರೋಧಿತ್ವಾದಿತಿ ॥ ತಥಾ ಚ – 'ತತ್ರ ಗಂಧಸ್ಯ ಗ್ರಾಹ್ಯಸಂಸರ್ಗವಿರೋಧ್ಯಭಾವಪ್ರತಿಯೋಗಿತ್ವಮೇವೇತಿ ನಾತಿವ್ಯಾಪ್ತಿಃ' ಇತ್ಯರ್ಥಃ ।**

ಅನುವಾದ - 'ಗಂಧಪ್ರಾಗಭಾವಸಮಾನಕಾಲೀನ' ಮುಂತಾದ ವಾಕ್ಯದಿಂದ ಅತಿವ್ಯಾಪ್ತಿಯನ್ನು ಹೇಳಲಾಗಿತ್ತು. ಆ ದೋಷವೂ ಸಹ ಇಲ್ಲ ಎಂಬುದಾಗಿ 'ಗಂಧ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಗಂಧಪ್ರಾಗಭಾವವು ಸಹ ಭಿನ್ನಕಾಲೀನವಾದ ಗಂಧದ ಒಟ್ಟಿಗೆ ಇರುವುದಕ್ಕೆ ವಿರೋಧವಿಲ್ಲದಿದ್ದರೂ ತಾತ್ಪರ್ಯಕ್ಕೆ ವಿಷಯವಾದ ಸಮಾನಕಾಲೀನವಾದ ಗಂಧದ ಜೊತೆ ಇರುವುದಕ್ಕೆ ವಿರೋಧವಿದೆ. ಹೀಗೆ 'ವಿರೋಧಿತ್ವಾತ್' ಎಂಬ ಶಬ್ದದ ಅರ್ಥ. ಈ ಸ್ಥಳದಲ್ಲಿ ಗಂಧಕ್ಕೆ ಗ್ರಾಹ್ಯಸಂಸರ್ಗವಿರೋಧ್ಯಭಾವಪ್ರತಿಯೋಗಿತ್ವವೇ ಇದೆ. ಆದ್ದರಿಂದ ಅತಿವ್ಯಾಪ್ತಿದೋಷವು ಇಲ್ಲ ಎಂದು ಅಭಿಪ್ರಾಯ.

ವಿವರಣೆ - 'ಗಂಧಪ್ರಾಗಭಾವಸಮಾನಕಾಲೀನೋ ಘಟಃ ಗಂಧವಾನ್' ಎಂಬುದು ವ್ಯಾಹತವಾದ ವಾಕ್ಯವಾಗಿದೆ. ಇದರಲ್ಲಿ ಯೋಗ್ಯತೆ ಇಲ್ಲದ ಕಾರಣ ಯೋಗ್ಯತೆಯ ಲಕ್ಷಣವು ಬರಬಾರದು. ಪ್ರಕೃತ ಗ್ರಾಹ್ಯಸಂಸರ್ಗವಿರೋಧಿವಿಷಯಕಪ್ರಮಾವಿರಹ-ಜ್ಞಾನತ್ವವೆಂಬ ಯೋಗ್ಯತೆಯ ಲಕ್ಷಣವು ಇದರಲ್ಲಿ ಬರುವುದಿಲ್ಲ ಎಂಬುದನ್ನು ಹೀಗೆ ತಿಳಿಯಬೇಕು. ಈ ವಾಕ್ಯದಲ್ಲಿ ತಾತ್ಪರ್ಯವಿಷಯಭೂತವಾದದ್ದು ಗಂಧಪ್ರಾಗಭಾವ. ಇದು ಇರುವ ಕಾಲದಲ್ಲಿಯೇ ಗಂಧ ಇರಬೇಕು. ಗ್ರಾಹ್ಯವಾದ ಸಂಸರ್ಗವೆಂದರೆ ಘಟದಲ್ಲಿರುವ ಗಂಧದ ಸಂಸರ್ಗ. ಈ ಸಂಸರ್ಗಕ್ಕೆ ಪ್ರಾಗಭಾವಕಾಲಾವಚ್ಛೇದೇನ ಗಂಧಕ್ಕೆ ಗಂಧದ ಪ್ರಾಗಭಾವವು ವಿರೋಧಿಯಾಗಿದೆ. ಈ ಗಂಧಪ್ರಾಗಭಾವಕ್ಕೆ ಪ್ರತಿಯೋಗಿಯಾದದ್ದು ಗಂಧಸಂಸರ್ಗ. 'ಗಂಧಃ ಘಟನಿಷ್ಠಪ್ರಾಗಭಾವಪ್ರತಿಯೋಗೀ' ಎಂಬುದಾಗಿ ಜ್ಞಾನವು ಬಂದರೆ ಇದು ಪ್ರಮಾರೂಪವಾಗಿದೆ. ಇದರಲ್ಲಿ ಗಂಧಸಂಸರ್ಗವು ವಿಶೇಷ್ಯವೇ ಆಗಿರು-ವುದರಿಂದ ಪ್ರಮಾವಿಶೇಷತ್ವವೇ ಬರುತ್ತದೆ ಹೊರತು ಪ್ರಮಾವಿರಹಜ್ಞಾನತ್ವವು ಬರುವುದಿಲ್ಲ. ಆದ್ದರಿಂದ ಅತಿವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ.

## ಎರಡು ಯೋಗ್ಯತಾಲಕ್ಷಣಗಳ ಫಲಿತಾರ್ಥ

**ತರ್ಕತಾಂಡವ– ಇತಿ ಚೇತ್, ಮೈವಮ್ ॥ ಅತ್ರ ಹಿ ಆದ್ಯಪಕ್ಷೇ 'ತಾತ್ಪರ್ಯ-ವಿಷಯೀಭೂತಾನ್ವಯವಿರೋಧಿಪ್ರಮಾವಿರಹೋ ಯೋಗ್ಯತಾ' । ದ್ವಿತೀಯೇ 'ತಾತ್ಪರ್ಯವಿಷಯಭೂತಾನ್ವಯವಿರೋಧಿಧರ್ಮಶೂನ್ಯತ್ವಂ ಯೋಗ್ಯತಾ' ಇತಿ ಫಲಿತಾರ್ಥಃ ।**

ಅನುವಾದ - ಹೀಗೆ ಶಂಕಾ ಮಾಡಬಾರದು. ಮಣಿಕಾರ ಹೇಳಿದ ಎರಡು ಪಕ್ಷಗಳಲ್ಲಿ ಮೊದಲನೆಯ ಪಕ್ಷದ ಫಲಿತಾರ್ಥ ಹೀಗಿದೆ -'ತಾತ್ಪರ್ಯವಿಷಯೀಭೂತಾನ್ವಯವಿರೋಧಿಪ್ರಮಾವಿರಹಃ ಯೋಗ್ಯತಾ' ಎಂಬುದು ಲಕ್ಷಣ. ವಾಕ್ಯದ ತಾತ್ಪರ್ಯಕ್ಕೆ ವಿಷಯಭೂತವಾದ ಯಾವ ಅನ್ವಯವಿರುತ್ತದೋ ಅದಕ್ಕೆ ವಿರೋಧಿಯಾದ ಪ್ರಮಾ ಇರಬಾರದು ಇದೇ 'ಯೋಗ್ಯತೆ' ಎನಿಸುತ್ತದೆ.

ಎರಡನೆಯ ಯೋಗ್ಯತಾಲಕ್ಷಣದ ಫಲಿತಾರ್ಥ - 'ವಿಷಯೀಭೂತಾನ್ವಯವಿರೋಧಿಧರ್ಮ-ಶೂನ್ಯತ್ವಂ ಯೋಗ್ಯತಾ' ಎಂಬುದು ವಾಕ್ಯತಾತ್ಪರ್ಯಕ್ಕೆ ವಿಷಯೀಭೂತವಾದ ಅನ್ವಯವಿರೋಧಿಯಾದ ಧರ್ಮಗಳು ಅಪರಪದಾರ್ಥದಲ್ಲಿ ಇರಬಾರದು. ಇದೇ 'ಯೋಗ್ಯತಾ' ಎನಿಸುತ್ತದೆ ಎಂದು.

ವಿವರಣೆ - ಯೋಗ್ಯತಾಲಕ್ಷಣವನ್ನು ಎರಡು ಬಗೆಯಲ್ಲಿ ಹೇಳಿದ್ದನು. 'ಏಕಪದಾರ್ಥ-ಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯತ್ವಾಭಾವಃ' ಎಂಬುದು ಮೊದಲನೆಯ ಯೋಗ್ಯತಾಲಕ್ಷಣ. ಇದರ ತಾತ್ಪರ್ಯಾರ್ಥವನ್ನು ಪಕ್ಷಧರನು ಹೀಗೆ ಹೇಳಿದ್ದನು - ತಾತ್ಪರ್ಯವಿಷಯೀಭೂತವಾದ ಯಾವ ಸಂಸರ್ಗವಿದೆಯೋ ಆ ಸಂಸರ್ಗಕ್ಕೆ ವಿರೋಧಿಯಾದ ಯಾವ ಅಭಾವವಿದೆಯೋ, ತದ್ವಿಷಯಕವಾದ ಪ್ರಮಾ ಇಲ್ಲದಿರುವಿಕೆಯು ಯೋಗ್ಯತಾ ಎಂದು ಕರೆಸಿಕೊಳ್ಳುತ್ತದೆ.

'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕ-ಧರ್ಮಶೂನ್ಯತ್ವಮ್ ಯೋಗ್ಯತಾ' ಇದು ಮಣಿಕಾರ ಹೇಳಿದ ಯೋಗ್ಯತಾಲಕ್ಷಣ. ಇದರ ಫಲಿತಾರ್ಥ ಹೀಗಿದೆ - ತಾತ್ಪರ್ಯವಿಷಯಿಕವಾದ ಅನ್ವಯವಿರೋಧಿಯಾದ ಧರ್ಮಗಳು ಇರಬಾರದು ಎಂದು. 'ಅಗ್ನಿನಾ ಸಿಂಚತಿ' ಎಂಬಲ್ಲಿ ತಾತ್ಪರ್ಯವಿಷಯೀಭೂತವಾದದ್ದು

ಸೇಚನಸಂಸರ್ಗ. ಇದಕ್ಕೆ ವಿರೋಧಿಯಾದ ಧರ್ಮ ಎಂದರೆ ಅಗ್ನಿತ್ವ. ಇದು ಅಗ್ನಿಯಲ್ಲಿದೆ 'ಜಲೇನ ಸಿಂಚತಿ' ಎಂಬಲ್ಲಿ ಇಂಥ ವಿರೋಧಿಯಾದ ಧರ್ಮಗಳು ಯಾವುದೂ ಇರುವುದಿಲ್ಲ. ಆದ್ದರಿಂದ ಧರ್ಮಶೂನ್ಯತ್ವಯೋಗ್ಯತೆಯು 'ಜಲೇನ ಸಿಂಚತಿ' ಎಂಬಲ್ಲಿ ಬರುತ್ತದೆ. 'ಅಗ್ನಿನಾ ಸಿಂಚತಿ' ಎಂಬಲ್ಲಿ ಬರುವುದಿಲ್ಲ.

**ನ್ಯಾಯದೀಪ – ಅತ್ರ ಹೀತಿ ॥ 'ಏಕಪದಾರ್ಥೇ' ಇತ್ಯಾದಿ ಮಣ್ಯುಕ್ತಲಕ್ಷಣದ್ವಯೇ ಇತ್ಯರ್ಥಃ। ಫಲಿತಾರ್ಥ ಇತಿ ॥ 'ತ್ವದುಕ್ತವಿಧಯಾರೀತ್ಯಾ' ಇತಿ ಭಾವಃ।**

ಅನುವಾದ - 'ಅತ್ರ ಹಿ' ಎಂದರೆ 'ಏಕಪದಾರ್ಥ' ಮುಂತಾದ ಮಣಿಕಾರ ಹೇಳಿದ ಎರಡು ಲಕ್ಷಣದಲ್ಲಿಯೂ ಎಂದರ್ಥ. 'ಫಲಿತಾರ್ಥಃ' ಎಂದರೆ 'ನೀನು ಹೇಳಿದ ರೀತಿಯಿಂದ ಫಲಿತವಾದ ಅರ್ಥ' ಎಂದಭಿಪ್ರಾಯ.

## ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿದೋಷ ಬರುವುದಿಲ್ಲ

**ತರ್ಕತಾಂಡವ – ತಥಾ ಚ 'ಸಮಭಿವ್ಯಾಹೃತಶಬ್ದತಾತ್ಪರ್ಯವಿಷಯಸ್ಯ ಅನ್ವಯಸ್ಯ ಸತ್ವಂ ವಾ ತದವಿನಾಭೂತಪ್ರಮಾಣಾವಿರೋಧೋ ವಾ ಯೋಗ್ಯತಾ' ಇತ್ಯೇವಾಸ್ತು। ಕಿಮನಯಾ ಕುಸೃಷ್ಟ್ಯಾ। ತಾವತೈವ ನಿಶ್ಚಿತಾಪ್ರಾಮಾಣ್ಯಕಃ 'ಅಗ್ನಿನಾ ಸಿಂಚೇತ್' ಇತ್ಯಾದೌ ಅನಿಶ್ಚಿತಾಪ್ರಾಮಾಣ್ಯಕೇ 'ಜಲೇನ ಸಿಂಚತಿ' ಇತ್ಯಾದೌ ಚಾನಾಪ್ತವಾಕ್ಯೇ ಅನತಿವ್ಯಾಪ್ತೇಃ।**

ಅನುವಾದ - ಆದ್ದರಿಂದ ಟೀಕಾರಾಯರು ಹೇಳಿದಂತೆ 'ಸಮಭಿವ್ಯಾಹೃತಶಬ್ದತಾತ್ಪರ್ಯವಿಷಯಸ್ಯ ಅನ್ವಯಸ್ಯ ಸತ್ವಂ ಯೋಗ್ಯತಾ' ಎಂದು ಹೇಳಬಹುದು. ಅಥವಾ 'ತದವಿನಾಭೂತಪ್ರಮಾಣಾವಿರೋಧಃ ಯೋಗ್ಯತಾ' ಎಂದು ಕೂಡ ಹೇಳಬಹುದು. ಸಮಭಿವ್ಯಾಹೃತವಾದ ಯಾವ ಶಬ್ದವಿದೆಯೋ ಅದರ ತಾತ್ಪರ್ಯಕ್ಕೆ ವಿಷಯೀಭೂತವಾದ ಅನ್ವಯದ ಇರುವಿಕೆಯು 'ಯೋಗ್ಯತಾ' ಎಂದು ಕರೆಸಿಕೊಳ್ಳುತ್ತದೆ. ಅಥವಾ ಅನ್ವಯದ ಇರುವಿಕೆಯಿಂದ ಅವಿನಾಭೂತವಾದ ಪ್ರಮಾಣ-

ವಿರೋಧದ ಇಲ್ಲದಿರುವಿಕೆಯೂ ಕೂಡ ಯೋಗ್ಯತಾ ಎಂದು ಕರೆಸಿಕೊಳ್ಳುತ್ತದೆ. ಹೀಗೆ ಸುಲಭ-ವಾಗಿಯೇ ಯೋಗ್ಯತಾಲಕ್ಷಣವನ್ನು ಹೇಳಲು ಬರುತ್ತಿರುವಾಗ ತಾರ್ಕಿಕರ ಕಠಿಣವಾದ ಯೋಗ್ಯತಾ-ಲಕ್ಷಣದ ಪರಿಷ್ಕಾರದಿಂದ ಏನು ಉಪಯೋಗ ?

ನಾವು ಹೇಳಿದ ಯೋಗ್ಯತಾಲಕ್ಷಣದಿಂದ ನಿಶ್ಚಿತಾಪ್ರಾಮಾಣ್ಯಕವಾದ 'ಅಗ್ನಿನಾ ಸಿಂಚತಿ' ಇತ್ಯಾದಿ ವಾಕ್ಯಗಳಲ್ಲಿ ಅನ್ವಯದ ಇರುವಿಕೆಯೇ ಇಲ್ಲದ್ದರಿಂದ ಅತಿವ್ಯಾಪ್ತಿದೋಷವು ಬರುವುದಿಲ್ಲ. ಇದರಂತೆ ಅನಿಶ್ಚಿತ ಅಪ್ರಾಮಾಣ್ಯಕವಾದ 'ಜಲೇನ ಸಿಂಚತಿ' ಎಂಬ ಅನಾಪ್ತವಾಕ್ಯದಲ್ಲಿ ಅನ್ವಯವೇ ಇಲ್ಲದ ಕಾರಣ ಅಥವಾ ಪ್ರಮಾಣದ ಅವಿರೋಧವು ಇಲ್ಲದ ಕಾರಣ ಅತಿವ್ಯಾಪ್ತಿದೋಷವು ಬರುವುದಿಲ್ಲ. ಆದ್ದರಿಂದ ನಾವು ಹೇಳಿದ ಯೋಗ್ಯತಾಲಕ್ಷಣವೇ ಅತ್ಯಂತ ನಿರ್ದುಷ್ಟವಾಗುತ್ತದೆ.

ವಿವರಣೆ - ಆದ್ದರಿಂದ ಟೀಕಾಕಾರರು ಹೇಳಿದಂತೆ ಯಾವುದೇ ಒಂದು ಶಬ್ದವನ್ನು ಉಚ್ಚಾರ ಮಾಡಿದಾಗ ಅದರಿಂದ ಸಮಭಿವ್ಯಾಹೃತವಾದ ಮತ್ತೊಂದು ಶಬ್ದವು ಇದ್ದರೆ ಆಗ ಸಮಭಿವ್ಯಾಹೃತವಾದ ಶಬ್ದಕ್ಕೂ, ಅರ್ಥಕ್ಕೂ ಅನ್ವಯ ಇರಬೇಕು. ವಾಕ್ಯಬೋಧ್ಯವಾದ ಪದಾರ್ಥದ ಅನ್ವಯವು ಇದ್ದರೆ ಮಾತ್ರ ಯೋಗ್ಯತೆ ಇರುತ್ತದೆಂದರ್ಥ. ಆದ್ದರಿಂದ ಅನ್ವಯದ ಇರುವಿಕೆಯ ಯೋಗ್ಯತಾನ್ವಯ ಇದೆ ಎಂದರೆ ಪ್ರಮಾಣ ಇಲ್ಲ ಎಂದರ್ಥ. 'ಯತ್ರ ಅನ್ವಯಸ್ಯ ಸತ್ವಮ್ ತತ್ರ ಪ್ರಮಾಣವಿರೋಧಾಭಾವಃ, ಯತ್ರ ಪ್ರಮಾಣ-ವಿರೋಧಾಭಾವಃ ತತ್ರ ಅನ್ವಯಸ್ಯ ಸತ್ವಮ್' ಎಂಬ ಸಮವ್ಯಾಪ್ತಿಯನ್ನು ತಿಳಿಯಬೇಕು. ಆದ್ದರಿಂದ ಸಮಭಿವ್ಯಾಹೃತವಾದ ಶಬ್ದತಾತ್ಪರ್ಯಕ್ಕೆ ವಿಷಯೀಭೂತವಾದ ಅನ್ವಯದ ಸತ್ವವನ್ನೇ 'ಯೋಗ್ಯತಾ' ಎಂದು ಕರೆಯಬಹುದು. ಅಥವಾ ತದವಿನಾಭೂತವಾದ ಪ್ರಮಾಣಾವಿರೋಧವನ್ನು 'ಯೋಗ್ಯತಾ' ಎಂದು ಕರೆಯಬಹುದು. ಹೀಗೆ ಸುಲಭ-ವಾಗಿಯೇ ಯೋಗ್ಯತಾಲಕ್ಷಣವನ್ನು ಹೇಳಲು ಬರುವಾಗ ಅತ್ಯಂತ ಪರಿಶ್ರಮದಲ್ಲಿ ತಾರ್ಕಿಕರು ಪರಿಷ್ಕರಿಸುವ ಯೋಗ್ಯತಾಲಕ್ಷಣದಿಂದ ಏನು ಉಪಯೋಗ?

**ನ್ಯಾಯದೀಪ – ತದಿತಿ ।। 'ಉಕ್ತರೂಪಾನ್ವಯಸತ್ತ್ವಾವಿನಾಭೂತಃ' ಇತ್ಯರ್ಥಃ ।**

ಅನುವಾದ - 'ತತ್' ಎಂಬ ವಾಕ್ಯಕ್ಕೆ ಹಿಂದೆ ಹೇಳಿದ ಅನ್ವಯಸತ್ವದಿಂದ ಅವಿನಾಭೂತವಾದ ಎಂದರ್ಥ.

ವಿವರಣೆ - ಯೋಗ್ಯತಾಜ್ಞಾನವಿದ್ದರೂ ಕೂಡ ಶಾಬ್ದಬೋಧ ಬರುತ್ತದೆಂದು ಹೇಳಿದರೆ, ಪೂರ್ವಪಕ್ಷಿಯು ಇಷ್ಟಾಪತ್ತಿ ಎನ್ನುತ್ತಾನೆ. ಇದಕ್ಕೆ ಅನಿಷ್ಟಾಪಾದನೆಯನ್ನು ಪ್ರಕೃತ ಸಮರ್ಥಿ-ಸುತ್ತಿದ್ದಾರೆ. ಒಂದರ ಯೋಗ್ಯತಾಜ್ಞಾನವಿದೆ ಮತ್ತೊಂದರ ಅಯೋಗ್ಯತಾಜ್ಞಾನವಿದೆ. ಶಾಬ್ದಬೋಧಕ್ಕೆ ಕಾರಣವಾದ ಯೋಗ್ಯತಾಜ್ಞಾನವು ಭ್ರಮರೂಪವೂ ಆಗಬಹುದು ಪ್ರಮಾ-ರೂಪವೂ ಆಗಬಹುದು. ಅಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಪ್ರತಿಬಂಧಕವಾಗು-ತ್ತದೆ. ಇದೂ ಕೂಡ ಭ್ರಮರೂಪವೂ ಆಗಬಹುದು, ಪ್ರಮಾರೂಪವು ಆಗಬಹುದು. ಶ್ರೋತೃವು ವಾಕ್ಯವನ್ನು ಕೇಳಿದಾಗ ಈ ವಾಕ್ಯದಲ್ಲಿ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾ ಇದೆ ಎಂಬ ಅರಿವು ಅವನಿಗೆ ಬರುತ್ತದೆ. ಅತ್ಯಂತಾಭಾವಗರ್ಭಿತವಾದ ಯೋಗ್ಯತೆ ಇರುವುದಿಲ್ಲಎಂಬ ಜ್ಞಾನವೂ ಕೂಡ ಅವನಿಗೆ ಬರುತ್ತದೆ. ಈ ಎರಡರಲ್ಲಿ ಒಂದನ್ನು ಭ್ರಮರೂಪವೆಂದು ಒಪ್ಪಲೇ ಬೇಕು. ಏಕೆಂದರೆ ಅನ್ಯೋನ್ಯಾಭಾವ-ಗರ್ಭಿತವಾದ ಯೋಗ್ಯತಾ ಇದ್ದ ಮೇಲೆ ಅತ್ಯಂತಾಭಾವಗರ್ಭಿತವಾದ ಯೋಗ್ಯತೆಯು ಕೂಡ ಇರಲೇ ಬೇಕು. ಇಂಥ ಸಂದರ್ಭದಲ್ಲಿ ಒಂದು ಯೋಗ್ಯತೆಯು ಇದೆ ಎಂದು ತಿಳಿದುಕೊಂಡಾಗ ಮತ್ತೊಂದು ಯೋಗ್ಯತೆಯು ಕೂಡ ಇದೆ ಎಂದು ಅವನು ತಿಳಿಯು-ತ್ತಾನೆ. ಆದರೆ ಅತ್ಯಂತಾಭಾವಗರ್ಭಿತವಾದ ಯೋಗ್ಯತೆ ಇರುವುದಿಲ್ಲ ಎಂಬ ಜ್ಞಾನವು ಬಂದರೆ ಒಂದನ್ನು ಭ್ರಮರೂಪವೆಂದು ಒಪ್ಪುವುದು ಅನಿವಾರ್ಯ. ಇಂಥ ಸಂದರ್ಭದಲ್ಲಿ ಶಾಬ್ದಬೋಧವು ಬರಬೇಕಾದೀತು. ಏಕೆಂದರೆ ಶಾಬ್ದಬೋಧಕ್ಕೆ ಕಾರಣತಾವಚ್ಛೇದಕಾ-ವಚ್ಛಿನ್ನವಾದ ಒಂದು ಕಾರಣವಿದ್ದರೂ ಸಾಕು. ಇಂಥ ಕಡೆಯು ಶಾಬ್ದಬೋಧ ಬರುವುದು ಇಷ್ಟವೇ ಆಗಿದೆ ಎಂದು ಪೂರ್ವಪಕ್ಷಿಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಅತ್ಯಂತಾ-ಭಾವಗರ್ಭಿತವಾದ ಅಯೋಗ್ಯತಾಜ್ಞಾನವೆಂಬ ಪ್ರತಿಬಂಧಕ ಇರುವುದರಿಂದ ಶಾಬ್ದಬೋಧ ಬರುವುದು ಇಷ್ಟಾಪತ್ತಿ ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪಕ್ಷಧರನ ಪಕ್ಷದಲ್ಲಿ ಅತ್ಯಂತಾಭಾವಗರ್ಭಿತವಾದ ಎರಡು ವಿಧವಾದ ಯೋಗ್ಯತೆಗಳನ್ನು ಕಾರಣವೆಂದು ಹೇಳುವುದು ಅಸಾಧುವಾಗುತ್ತದೆ.

## ಒಂದು ಶಾಬ್ದಬೋಧಕ್ಕೆ ಎರಡು ಕಾರಣ ಒಪ್ಪಿದರೆ ಅತಿವ್ಯಾಪ್ತಿ

**ನ್ಯಾಯದೀಪ – ಇತ್ಯೇವಾಸ್ತು ಇತಿ ॥ ಅನ್ಯಥಾನ್ಯೋನ್ಯಾಭಾವಗರ್ಭ-ಯೋಗ್ಯತಾಸತ್ವೇ ಅತ್ಯಂತಾಭಾವಗರ್ಭಾಯೋಗ್ಯತಾಜ್ಞಾನಾದನ್ವಯಬೋಧಾ-ಪತ್ತೇಃ । ಕಾರಣತಾವಚ್ಛೇದಕಾವಚ್ಛಿನ್ನಯತ್ಕಿಂಚಿತ್ ಕಾರಣಸತ್ವೇ ಏವ ಕಾರ್ಯೋ-ತ್ಪತ್ತೇಃ । ನ ಚೇಷ್ಟಾಪತ್ತಿಃ । ಗ್ರಾಹ್ಯಸಂಸರ್ಗವಿರೋಧ್ಯವಗಾಹಿತ್ವೇನ ಅವಶ್ಯಂ ತಸ್ಯ ತತ್ಪ್ರತಿಬಂಧಕತ್ವಾದಿತಿ ಭಾವಃ ।**

ಅನುವಾದ - ಪಕ್ಷಧರನ ಪಕ್ಷದಲ್ಲಿಯೂ ಕೂಡ ದೋಷ ತಪ್ಪಿದ್ದಲ್ಲ. ಶಾಬ್ದಬೋಧ ಎಂಬ ಒಂದು ಕಾರ್ಯಕ್ಕೆ ಎರಡು ಕಾರಣಗಳನ್ನು ಒಪ್ಪಿದರೆ ಅತಿಪ್ರಸಂಗ ಬರುತ್ತದೆ. ಹೀಗೆ -

ಒಬ್ಬರಿಗೆ ಅನ್ಯೋನ್ಯಾಭಾವಗರ್ಭಿತವಾದ ಯೋಗ್ಯತಾಜ್ಞಾನ. ಅದೇ ಸಂದರ್ಭದಲ್ಲಿ ಅತ್ಯಂತಾಭಾವ-ಗರ್ಭಿತವಾದ ಯೋಗ್ಯತಾಜ್ಞಾನ ಇಲ್ಲದೆ ಅಯೋಗ್ಯತಾಜ್ಞಾನವೇ ಇದೆ. ಇಂಥ ವ್ಯಕ್ತಿಗೂ ಕೂಡ ಶಾಬ್ದ-ಬೋಧವು ಬರಬೇಕಾದೀತು. ಏಕೆಂದರೆ ಕಾರಣತಾವಚ್ಛೇದಕಾವಚ್ಛಿನ್ನವಾದ ಎರಡು ಕಾರಣಗಳಲ್ಲಿ ಒಂದು ಕಾರಣವಿದ್ದರೂ ಕೂಡ ಕಾರ್ಯವು ಉತ್ಪತ್ತಿಯಾಗುವುದು ಲೋಕಸಿದ್ಧವಾಗಿದೆ. ಹೌದು ಇಂಥ ಸ್ಥಳದಲ್ಲಿ ಶಾಬ್ದಬೋಧ ಬರುವುದು ನಮಗೆ ಇಷ್ಟವೇ ಆಗಿದೆ. ಎಂದು ಪೂರ್ವಪಕ್ಷಿಗಳಿಗೆ ಉತ್ತರಿಸಲಾಗದು. ಏಕೆಂದರೆ ಅನ್ವಯಜ್ಞಾನಕ್ಕೆ ವಿರೋಧಿಯಾದ ಅಯೋಗ್ಯತಾಜ್ಞಾನವೆಂಬ ಪ್ರತಿಬಂಧಕ ಇರುವಾಗ ಶಾಬ್ದಬೋಧವು ಎಂಬ ಕಾರ್ಯವು ಹುಟ್ಟುತ್ತದೆಂದು ಹೇಳಲು ಸುತರಾಂ ಸಾಧ್ಯವಿಲ್ಲ. ಆದ್ದರಿಂದ ಒಂದು ಶಾಬ್ದಬೋಧದ ಕಾರ್ಯಕ್ಕೆ ಎರಡು ಬಗೆಯ ಯೋಗ್ಯತಾಜ್ಞಾನಗಳೆಂಬ ಕಾರಣವನ್ನು ಪಕ್ಷಧರನು ಒಪ್ಪಿರುವುದು ಅಸಾಧುವಾಗಿದೆ.

ವಿವರಣೆ - ಪಕ್ಷಧರ ಹೇಳಿದ ಲಕ್ಷಣಕ್ಕೆ ದೋಷವನ್ನು ಗ್ರಂಥದಲ್ಲಿ ಹೇಳಿರುವುದಿಲ್ಲ. ಆದರೆ ಇವರ ಲಕ್ಷಣಕ್ಕೂ ಕೂಡ ದೋಷವಿದೆ.

ಅನ್ಯೋನ್ಯಾಭಾವಗರ್ಭಿತವಾದ ಹಾಗೂ ಅತ್ಯಂತಾಭಾವಗರ್ಭಿತವಾದ ಎರಡು ಯೋಗ್ಯತಾಲಕ್ಷಣವನ್ನು ಹೇಳಿ ಎರಡೂ ಕೂಡ ಪ್ರತ್ಯೇಕವಾಗಿ ಶಾಬ್ದಬೋಧಕ್ಕೆ ಕಾರಣ-ವಾಗಿದೆ ಎಂದು ಪಕ್ಷಧರನು ಹೇಳಿದನು. 'ಅಗ್ನಿಃ ಸೇಚನಸಂಸರ್ಗವಾನ್ ನ ಭವತಿ' ಎಂಬ ಬೋಧವು ಬರಬಹುದು. 'ಅಗ್ನೌ ಸೇಚನಸಂಸರ್ಗಃ ನಾಸ್ತಿ' ಎಂಬ ಬೋಧವು ಬರಬಹುದು ಈ ಎರಡು ಬಗೆಯ ಯೋಗ್ಯತಾ ಜ್ಞಾನಗಳಲ್ಲಿ ಅನುಗಮಕವಾದಂತದ್ದು

ಗ್ರಾಹ್ಯಸಂಸರ್ಗವಿರೋಧಿವಿಷಯಕಪ್ರಮಾವಿರಹಜ್ಞಾನತ್ವ. ಆದ್ದರಿಂದ ಕಾರಣತಾ-ಚ್ಛೇದಕವು ಒಂದೇ ಆಯಿತು. ತದವಚ್ಛಿನ್ನವಾದ ಕಾರಣವು ಎರಡು ಎಂದಾಯಿತು. ಒಂದು ಕಾರಣವಿದ್ದರೂ ಕೂಡ ಕಾರ್ಯವು ಹುಟ್ಟುತ್ತದೆಂದು ಹೇಳಿದಂತಾಯಿತು. ದಂಡತ್ವವೆಂಬ ಕಾರಣತಾಚ್ಛೇದಕದಿಂದ ಅವಚ್ಛಿನ್ನವಾದ ಒಂದೇ ದಂಡವಿದ್ದರೂ ಕೂಡ ಘಟವು ಹುಟ್ಟುತ್ತದೆ. ಕಾರಣತಾವಚ್ಛೇದಕಾವಚ್ಛಿನ್ನವಾದ ಸಕಲ ಕಾರಣಗಳು ಇದ್ದರೆ ಮಾತ್ರ ಕಾರ್ಯ ಹುಟ್ಟುತ್ತದೆಂಬ ನಿಯಮ ಇರುವುದಿಲ್ಲ. ಯತ್‌ಕಿಂಚಿತ್ ಕಾರಣ-ವಿದ್ದರೂ ಕೂಡ ಅವಶ್ಯವಾಗಿ ಕಾರ್ಯದ ಉತ್ಪತ್ತಿಯು ಆಗುತ್ತದೆ.

ಪ್ರಕೃತ ಎರಡು ಬಗೆಯ ಯೋಗ್ಯತಾಜ್ಞಾನಗಳು ಶಾಬ್ದಬೋಧಕ್ಕೆ ಕಾರಣವೆಂದು ಹೇಳಿದ್ದಾರೆ. ಅತ್ಯಂತಾಭಾವಗರ್ಭಿವಾದ ಯೋಗ್ಯತೆಯು ಇಲ್ಲದೆ ಅನ್ಯೋನ್ಯಾಭಾವ-ಗರ್ಭಿತವಾದ ಯೋಗ್ಯತೆ ಇದ್ದರೂ ಕೂಡ ಶಾಬ್ದಬೋಧವು ಅವಶ್ಯವಾಗಿ ಬರಲೇ ಬೇಕಾದೀತು.

**ನ್ಯಾಯದೀಪ – ಅನಿಶ್ಚಿತೇತಿ ॥ ತತ್ರ ವಿವಾದಸ್ಯ ಅನಿಶ್ಚಯಾದನಿಶ್ಚಿತಾ ಇತ್ಯುಕ್ತಮ್ । ಅನತಿವ್ಯಾಪ್ತೇರಿತಿ ॥ ಅನಾಪ್ತೋಕ್ತತ್ವಾದೇವ ತದ್ವಾಕ್ಯೇ ಅನ್ವಯಸ್ಯ ಅಸತ್ಯತ್ವಾದಿತಿ ಭಾವಃ ।**

ಅನುವಾದ - 'ಅನತಿವ್ಯಾಪ್ತೇಃ' ಎಂಬ ವಾಕ್ಯಕ್ಕೆ ಹೀಗರ್ಥ - ಅನಾಪ್ತನು ಹೇಳಿದ್ದರಿಂದಲೇ 'ಅನಾ-ಪ್ತೋಚ್ಚರಿತವಾದ ವಾಕ್ಯದಲ್ಲಿ ಅನ್ವಯವು ಅಸತ್ಯವಾದ್ದರಿಂದ' ಎಂದಭಿಪ್ರಾಯ.

ವಿವರಣೆ - 'ಅಗ್ನಿನಾ ಸಿಂಚತಿ' ಎಂಬ ವಾಕ್ಯವು ವಿಸಂವಾದವೆಂದು ನಿಶ್ಚಿತವಾಗಿದೆ. 'ಜಲೇನ ಸಿಂಚತಿ' ಎಂಬ ವಾಕ್ಯವು ವಿಸಂವಾದವೆಂದು ನಿಶ್ಚಿತವಾಗಿಲ್ಲ. ಆದ್ದರಿಂದ ಅಪ್ರಾಮಾಣ್ಯದ ನಿಶ್ಚಯವೂ ಕೂಡ ಆಗುವುದಿಲ್ಲ. ಯೋಗ್ಯತಾರಹಿತವಾದ ಅನಾಪ್ತವಾಕ್ಯವಾಗಿದೆ. ಇಂಥ ಸ್ಥಳದಲ್ಲಿ ಯೋಗ್ಯತಾಲಕ್ಷಣವು ನಮ್ಮ ಮತದ ಪ್ರಕಾರ ಬರುವುದಿಲ್ಲ. ನಿಮ್ಮ ತಾರ್ಕಿಕ-ಮತದ ಪ್ರಕಾರ ಯೋಗ್ಯತಾಲಕ್ಷಣ ಬರುವುದರಿಂದ ಅತಿವ್ಯಾಪ್ತಿದೋಷವು ಬರುತ್ತ-ದೆಂಬುದನ್ನು 'ಅನಿಶ್ಚಿತ' ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ.

'ಜಲೇನ ಸಿಂಚತಿ' ಎಂಬ ವಾಕ್ಯವನ್ನು ಅನಾಪ್ತನು ಹೇಳಿರುತ್ತಾನೆ. ಆದ್ದರಿಂದಲೇ ಆ ವಾಕ್ಯದಲ್ಲಿಯೇ ಪ್ರಾಮಾಣ್ಯ ಇರುವುದಿಲ್ಲ. ಆದ್ದರಿಂದಲೇ ತದನ್ವಯದಲ್ಲಿ ಇರುವುದಿಲ್ಲ ಎಂಬುದು 'ಅನತಿವ್ಯಾಪ್ತೀಃ' ಎಂಬ ಗ್ರಂಥದ ಅಭಿಪ್ರಾಯವಾಗಿದೆ.

ಅನಾಪ್ತನು ಪ್ರಯೋಗಿಸಿದ 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ವಿಸಂವಾದವು ಅನಿಶ್ಚಿತವಾಗಿರುವುದರಿಂದ ಗ್ರಂಥದಲ್ಲಿ ಅನಿಶ್ಚಿತ ಎಂದು ಹೇಳಿದ್ದಾರೆ. 'ಅನತಿವ್ಯಾಪ್ತೇಃ' ಎಂಬುದುರ ಅಭಿಪ್ರಾಯ ಹೀಗಿದೆ - ಅನಾಪ್ತನು 'ಜಲೇನ ಸಿಂಚತಿ' ಎಂದು ಹೇಳಿರು-ವುದರಿಂದಲೇ ಆ ವಾಕ್ಯದಲ್ಲಿ ಅಪ್ರಾಮಾಣ್ಯವಿದೆ. ಆದ್ದರಿಂದಲೇ ಅನ್ವಯದ ಅಸತ್ವವಿದೆ ಎಂದು ತಿಳಿಯಬೇಕು. 'ತದನ್ವಯ' ಎಂದರೆ 'ದ್ವಿತೀಯೇ' ಇತ್ಯಾದಿ ಗ್ರಂಥದಿಂದ ಹೇಳ-ಲ್ಪಟ್ಟಂತೆ ಎಂದರ್ಥ. 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಸೇಕಾನ್ವಯಕ್ಕೆ ವಿರೋಧಿಯಾದ ವಹ್ನಿತ್ವರೂಪವಾದ ಧರ್ಮವು ಇದಲ್ಲ ಕಾರಣ ಎಂದಭಿಪ್ರಾಯ.

## ಮಣಿಕಾರನ ಲಕ್ಷಣಕ್ಕೆ ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿ ದೋಷವಿದೆ

**ತರ್ಕತಾಂಡವ– ತ್ವದೀಯದ್ವಿತೀಯಲಕ್ಷಣಸ್ಯ 'ಜಲೇನ ಸಿಂಚತಿ' ಇತ್ಯನಾಪ್ತವಾಕ್ಯೇ ಅತಿವ್ಯಾಪ್ತೇಶ್ಚ ॥**

ಅನುವಾದ - ನೀವು ಹೇಳಿದ ಲಕ್ಷಣಕ್ಕೆ 'ಜಲೇನ ಸಿಂಚತಿ' ಮುಂತಾದ ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿಯು ಬರುತ್ತದೆ.

ವಿವರಣೆ- 'ತಾತ್ಪರ್ಯವಿಷಯೀಭೂತಾನ್ವಯವಿರೋಧಿಧರ್ಮಶೂನ್ಯತ್ವಂ ಯೋಗ್ಯತಾ' ಎಂಬುದಾಗಿ ತಾರ್ಕಿಕರು ಹೇಳಿದ ಎರಡನೆಯ ಯೋಗ್ಯತಾಲಕ್ಷಣಕ್ಕೆ ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿದೋಷವು ಬರುತ್ತದೆ. ಅನಾಪ್ತನು 'ಜಲೇನ ಸಿಂಚತಿ' ಎಂದು ಹೇಳಿದರೆ ತಾತ್ಪರ್ಯವಿಷಯೀಭೂತವಾದದ್ದು ಸೇಚನಾನ್ವಯ, ಇದಕ್ಕೆ ವಿರೋಧಿಯಾದ ಧರ್ಮ-ಗಳು ಜಲದಲ್ಲಿ ಇರುವುದಿಲ್ಲ. ಆದ್ದರಿಂದ ಅನಾಪ್ತವಾಕ್ಯದಲ್ಲಿ ಅನ್ವಯವಿರೋಧಧರ್ಮ-ಶೂನ್ಯತ್ವರೂಪವಾದ ಯೋಗ್ಯತಾಲಕ್ಷಣವು ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ.

ತಾತ್ಪರ್ಯವಿಷಯೀಭೂತಾನ್ವಯವಿರೋಧಪ್ರಮಾವಿರಹರೂಪವಾದ ಮೊದಲನೆಯ ಯೋಗ್ಯತಾಲಕ್ಷಣಕ್ಕೆ ಅತಿವ್ಯಾಪ್ತಿಯು ಬರುವುದಿಲ್ಲ. ಏಕೆಂದರೆ ಅನ್ವಯಕ್ಕೆ ವಿರೋಧಿ-ಯಾದ ಸೇಚನಕ್ರಿಯೆಯು ಇಲ್ಲವೆಂಬ ಯಾವ ಪ್ರಮಾವಿದೆಯೋ, ತದ್‌ವಿರಹರೂಪವಾದ ಯೋಗ್ಯತೆಯು ಇರುವುದಿಲ್ಲ. ಆದ್ದರಿಂದ ಮೊದಲನೆಯ ಲಕ್ಷಣಕ್ಕೆ ಅತಿವ್ಯಾಪ್ತಿದೋಷವು ಬರುವುದಿಲ್ಲ. ಆದರೆ ಎರಡನೆಯ ಲಕ್ಷಣಕ್ಕೆ ಅತಿವ್ಯಾಪ್ತಿದೋಷವು ಬರುತ್ತದೆ.

ವಿಶೇಷವಿಚಾರ - ನಾವು ಹೇಳಿದ ಯೋಗ್ಯತಾಲಕ್ಷಣದಲ್ಲಿ ಲಾಘವವಿದೆ ಎಂದಷ್ಟೇ ಅಲ್ಲ; ಹಿಂದೆ ಹೇಳಿದ ಎಲ್ಲಾ ದೋಷಗಳು ಕೂಡ ಪರಿಹಾರವಾಗುತ್ತವೆ. 'ಅಗ್ನಿನಾ ಸಿಂಚತಿ' ಎಂಬ ವಾಕ್ಯವು ಅಪ್ರಮಾಣವಾಗಿದೆ ಎಂಬುದು ಮೊದಲೇ ನಿಶ್ಚಯವಾಗಿದೆ. ಈ ವಾಕ್ಯದಲ್ಲಿ ತಾತ್ಪರ್ಯವಿಷಯೀಭೂತವಾದ ಅನ್ವಯದ ಇರುವಿಕೆ ಎಂಬ ಯೋಗ್ಯತಾ-ಲಕ್ಷಣವು ಬರುವುದಿಲ್ಲ. ಅಗ್ನಿಗೂ ಸೇಚನಕ್ಕೂ ಇರುವ ಅನ್ವಯವು ಸತ್ಯಭೂತವಾಗಿಲ್ಲ. ಅಷ್ಟೇ ಅಲ್ಲ; ಇರುವ ಈ ಅನ್ವಯಕ್ಕೇ ಪ್ರಮಾಣವಿರೋಧವೇ ಬರುತ್ತದೆ.

ಒಬ್ಬ ಅನಾಪ್ತನು ಜಲದಲ್ಲಿ ಸೇಚನಕ್ರಿಯೆ ಇಲ್ಲದಾಗಲೂ ಕೂಡ 'ಜಲೇನ ಸಿಂಚತಿ' ಎಂಬುದಾಗಿ ವಾಕ್ಯಪ್ರಯೋಗವನ್ನು ಮಾಡುತ್ತಾನೆ. ಈ ಸ್ಥಳದಲ್ಲಿ ಅತಿವ್ಯಾಪ್ತಿದೋಷವು ಬರುವುದಿಲ್ಲ. ವಾಸ್ತವಿಕವಾಗಿ ಜಲದಲ್ಲಿ ಸೇಚನಕ್ರಿಯೆಯ ಯೋಗ್ಯತೆಯು ಇರುತ್ತದೆ. ಆದರೆ ಈ ವಾಕ್ಯದಲ್ಲಿ ತಾತ್ಪರ್ಯವಿಷಯೀಭೂತವಾದ ಅನ್ವಯಕ್ಕೆ ಸತ್ವವು ಇರುವುದಿಲ್ಲ. 'ಅಸ್ಮಿನ್ ಕಾಲೇ ದೇವದತ್ತಃ ಜಲೇನ ಸಿಂಚತಿ' ಎಂಬುದಾಗಿ ಅನಾಪ್ತನು ಹೇಳಿದಾಗ ಈ ವಾಕ್ಯವು ಅಸತ್ಯಭೂತವಾದ ವಿಷಯವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಅಪ್ರಮಾಣವಾಗಿದೆ. ಏಕೆಂದರೆ ಈ ವಾಕ್ಯದಲ್ಲಿ ತಾತ್ಪರ್ಯವಿಷಯೀಭೂತವಾದ ಯಾವ ಅನ್ವಯ ಇದೆಯೋ ಆ ಅನ್ವಯಕ್ಕೆ ಸತ್ವವೇ ಇರುವುದಿಲ್ಲ. ಮತ್ತು ಈ ಅನ್ವಯಕ್ಕೆ ಪ್ರಮಾಣವಿರೋಧವೇ ಇರುತ್ತದೆ. ಆದ್ದರಿಂದ ಈ ವಾಕ್ಯವು 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಂತೆ ನಿಶ್ಚಿತ ಅಪ್ರಾಮಾಣಕವಾದ ವಾಕ್ಯವಲ್ಲ, ಹೊರತು ಅನಿಶ್ಚಿತ ಅಪ್ರಾಮಾಣ್ಯಕ-ವಾಗಿದೆ. ಇಂಥ ವಾಕ್ಯದಲ್ಲಿ ಸಮಭಿವ್ಯಹಾರದ ಶಕ್ತಿತಾತ್ಪರ್ಯವಿಷಯೀಭೂತವಾದ ಅನ್ವಯಸ್ಯ ಸತ್ವರೂಪವಾದ ಯೋಗ್ಯತಾಲಕ್ಷಣವು ಬರುವುದಿಲ್ಲವಾದ್ದರಿಂದ ಅತಿವ್ಯಾಪ್ತಿ-ದೋಷಕ್ಕೆ ಅವಕಾಶವಿಲ್ಲ.

**ನ್ಯಾಯದೀಪ – ತ್ವದೀಯೇತಿ ॥ 'ತ್ವದೀಯೇತ್ಯಾದಿನೋಕ್ತೇ' ಇತ್ಯರ್ಥಃ । 'ಜಲೇನ' ಇತ್ಯಾದೌ ಸೇಕಾನ್ವಯವಿರೋಧಿವಹ್ನಿತ್ವರೂಪಧರ್ಮಶೂನ್ಯತ್ವಸತ್ತ್ವಾತ್ ಇತಿ ಭಾವಃ ॥**

ಅನುವಾದ - ತ್ವದೀಯ ಎಂಬುದಕ್ಕೆ 'ತ್ವದೀಯ' ಮುಂತಾದ ವಾಕ್ಯದಿಂದ ಹೇಳಿದ್ದರಲ್ಲಿ ಎಂದರ್ಥ. 'ಜಲೇನ' ಮುಂತಾದ ಸ್ಥಳಗಳಲ್ಲಿ ಸೇಕಾನ್ವಯವಿರೋಧಿಯಾದ ವಹ್ನಿತ್ವರೂಪಧರ್ಮಶೂನ್ಯತ್ವವು ಇದೆಯಾದ್ದರಿಂದ ಎಂದಭಿಪ್ರಾಯ.

## ಯೋಗ್ಯತಾ ವಿಷಯಸತ್ವರೂಪವಾದದ್ದು

**ತರ್ಕತಾಂಡವಮ್ – ಇಯಂ ಹಿ ವಿಷಯಸತ್ತ್ವರೂಪಾ ಯೋಗ್ಯತಾ ಸ್ವರೂಪಸತ್ಯೇವ ಅನಾಪ್ತವಾಕ್ಯೇ ಲಕ್ಷಣಸ್ಯ ಅನತಿವ್ಯಾಪ್ತ್ಯರ್ಥಮುಕ್ತಾ । ನ ತು ಸತ್ತಯಾ ಜ್ಞಾತತಯಾ ವಾ ಶಾಬ್ದಪ್ರಮಾಕಾರಣತ್ವೇನೋಕ್ತಾ । ಶಾಬ್ದಪ್ರಮಾಯಾಂ ತಸ್ಯಾ ವಾ ತದ್ವಿಷಯಜ್ಞಾನಸ್ಯ ವಾ ಹೇತುತ್ವಾಯೋಗಾತ್ । ಉಕ್ತಂ ಚೈತತ್ ಪ್ರಾಮಾಣ್ಯಸ್ವತಸ್ತ್ವೇ ।**

ಅನುವಾದ - ಈ ಯೋಗ್ಯತೆಯು ವಿಷಯಸತ್ವರೂಪವಾಗಿದೆ. ಇದನ್ನು ಅನಾಪ್ತವಾಕ್ಯವೆನಿಸಿದ 'ಅಗ್ನಿನಾ ಸಿಂಚತಿ' ಇತ್ಯಾದಿ ಸ್ಥಳದಲ್ಲಿ ಅತಿವ್ಯಾಪ್ತಿ ಬರಬಾರದೆಂದು ತಿಳಿಸಲು ಸ್ವರೂಪತಃ ಸತ್ವ-ರೂಪವಾಗಿಯೇ ಅಂಗೀಕರಿಸಲಾಗಿದೆ. ಹೊರತು ಶಾಬ್ದಪ್ರಮಾವನ್ನು ಕುರಿತು ಜ್ಞಾತವಾಗಿ ಕಾರಣವೆಂದು ಹೇಳುವುದಿಲ್ಲ. ಶಾಬ್ದಭ್ರಮೆ ಹುಟ್ಟುವುದಕ್ಕೆ ಯೋಗ್ಯತೆಯಾಗಲಿ ತದ್‌ವಿಷಯಕಜ್ಞಾನವಾಗಲಿ ಹೇತು-ವಾಗುವುದಿಲ್ಲ. ಇದನ್ನು ಪ್ರಾಮಾಣ್ಯಸ್ವತಸ್ತ್ವಪ್ರಕರಣದಲ್ಲಿ ಈ ಹಿಂದೆಯೇ ಸಮರ್ಥಿಸಿದ್ದಾಗಿದೆ

> ವಿವರಣೆ - 'ಪ್ರತೀತಸ್ಯ ಅನ್ವಯಸ್ಯ ಪ್ರಮಾಣವಿರೋಧಾಭಾವಃ ಯೋಗ್ಯತಾ' ಎಂಬು-ದಾಗಿ ಯೋಗ್ಯತೆಯ ಲಕ್ಷಣವನ್ನು ನಾವು ಹೇಳಿದೆವು. ಇದರ ಅಭಿಪ್ರಾಯವೇನೆಂದರೆ 'ತಾತ್ಪರ್ಯವಿಷಯೀಭೂತಸ್ಯ ಅನ್ವಯಸ್ಯ ಸತ್ವಮ್' ಎಂದು. ಅಥವಾ 'ತಾತ್ಪರ್ಯ-ವಿಷಯೀಭೂತಸ್ಯ ಅನ್ವಯಸ್ಯ ಪ್ರಮಾಣವಿರೋಧಾಭಾವಃ' ಎಂದು. ಇದರಿಂದ - ವಿಷಯಸತ್ವವನ್ನೇ 'ಯೋಗ್ಯತಾ' ಎಂದು ಹೇಳಿದಂತಾಯಿತು. ಏಕೆಂದರೆ ವಾಕ್ಯರೂಪವಾದ

ಶಬ್ದದಿಂದ ಬೋಧ್ಯವಾದದ್ದು ಅನ್ವಯ. ಅದಕ್ಕೆ ವಿಷಯೀಭೂತವಾದದ್ದು ಯಾವುದು ಇದೆಯೋ, ಅದಕ್ಕೆ ಪ್ರಮಾಣವಿರೋಧವು ಇರಬಾರದು. ಇದು ಶಬ್ದದಲ್ಲಿ ಸ್ವರೂಪತಃ ಸತ್ವವಾಗಿರುತ್ತದೆ. ಹೊರತು ಶಾಬ್ದಬೋಧಕ್ಕೆ ಯಾವುದೇ ರೀತಿಯಲ್ಲಿ ಕಾರಣವಾಗು-ವುದಿಲ್ಲ. ಹೀಗೆ ಲಕ್ಷಣವನ್ನು ಹೇಳಿರುವುದು ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿ ಬರಬಾರ-ದೆಂದು ತಿಳಿಸುವುದಕ್ಕಾಗಿ. ಅನಾಪ್ತವಾಕ್ಯದಲ್ಲಿ ಆಕಾಂಕ್ಷಾ, ಸನ್ನಿಧಿ ಮೊದಲಾದವುಗಳು ಇದ್ದರೂ ಕೂಡ ಯೋಗ್ಯತಾ ಇರುವುದಿಲ್ಲ. ಯೋಗ್ಯತಾ ಇಲ್ಲದ ಅನಾಪ್ತವಾಕ್ಯದಲ್ಲಿ ಯೋಗ್ಯತಾಲಕ್ಷಣವು ಬರಬಾರದೆಂದು ಸಮರ್ಥಿಸುವುದಕ್ಕಾಗಿ ವಿಷಯಸತ್ವರೂಪವಾದ ಯೋಗ್ಯತಾವನ್ನು ಹೇಳಿದ್ದಾರೆ. ಆದ್ದರಿಂದ ಇದು ಸತ್ತಾಮಾತ್ರದಿಂದ ಅಥವಾ ಜ್ಞಾತತಯಾ ಶಾಬ್ದಪ್ರಮಾಕ್ಕೆ ಕಾರಣವಾಗುತ್ತದೆಂದು ನಾವು ಹೇಳುವುದೇ ಇಲ್ಲ. ಏಕೆಂದರೆ ಶಾಬ್ದಪ್ರಮಾ ಬರಬೇಕಾದರೆ ಯೋಗ್ಯತಾವೂ ಕೂಡ ಕಾರಣವಾಗುವುದಿಲ್ಲ. ಯೋಗ್ಯತಾ ಅಥವಾ ಯೋಗ್ಯತಾಜ್ಞಾನ ಕಾರಣವಾಗುವುದಿಲ್ಲ. ಏಕೆಂದರೆ ಶಾಬ್ದಪ್ರಮಾ ಎಂಬುದೇ ಜ್ಞಾನ-ರೂಪವಾಗಿದೆ. ಆದ್ದರಿಂದ ಜ್ಞಾನ ಬರಬೇಕಾದರೆ ವಿಷಯಸತ್ವ ಇದ್ದರೆ ಸಾಕು.

## ಶಾಬ್ದಪ್ರಮಾಕ್ಕೆ ಯೋಗ್ಯತೆಯು ಕಾರಣವೇ ಅಲ್ಲ

**ನ್ಯಾಯದೀಪಃ – 'ನನ್ವೇವಂ ಶಾಬ್ದಪ್ರಮಾಹೇತೋರ್ಯೋಗ್ಯತಾಯಾ ವಿಷಯ-ಸತ್ತ್ವರೂಪತ್ವೇ ಶಾಬ್ದಪ್ರಮಾಯಾ ಗುಣಜನ್ಯತ್ವೇನ ಪ್ರಮಾಯಾಃ ಪರತಸ್ತ್ವಾಪತ್ತಿಃ' ಇತ್ಯತ ಆಹ – ಇಯಂ ಹೀತಿ ॥ 'ಸ್ವರೂಪಸತ್ಯೇವ' ಇತ್ಯುಕ್ತೈವಕಾರವ್ಯಾವರ್ತ್ಯಂ ವ್ಯನಕ್ತಿ – ನ ತ್ವಿತಿ ॥**

ಅನುವಾದ - ಪ್ರಶ್ನೆ - ಶಾಬ್ದಪ್ರಮಾವನ್ನು ಕುರಿತು ಹೇತುವಾಗಿರುವ ಯೋಗ್ಯತೆಯು ವಿಷಯಸತ್ವ-ರೂಪವೆಂದು ನೀವು ಹೇಳಿದರೆ ಶಾಬ್ದಪ್ರಮಾವು ಗುಣಜನ್ಯವಾದ್ದರಿಂದ ಶಾಬ್ದಪ್ರಮಾವಿಗೆ ಪರಸ್ತ್ವವು ಬಂದಿತಲ್ಲವೆ? ಎಂಬ ಆಕ್ಷೇಪಕ್ಕೆ 'ಇಯಂ ಹಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಯೋಗ್ಯತೆಯು ಶಬ್ದದಲ್ಲಿ ಇರುತ್ತದೆ ಹೊರತು ಶಾಬ್ದಪ್ರಮಾವನ್ನು ಕುರಿತು ಕಾರಣವೆಂದು ನಾವು ಹೇಳುವುದೇ ಇಲ್ಲ. ಗ್ರಂಥದಲ್ಲಿರುವ 'ಸ್ವರೂಪಸತ್ಯೇವ' ಎಂಬ ಏವಕಾರದಿಂದ ವ್ಯಾವರ್ತ್ಯವಾದದ್ದನ್ನು 'ನ ತು' ಎಂಬುದಾಗಿ ವಿವರಿಸುತ್ತಿದ್ದಾರೆ.

ವಿವರಣೆ - ವಾಕ್ಯಕ್ಕೆ ವಿಷಯವಾದ ಅನ್ವಯವು ಇರಬೇಕು. ಪ್ರಮಾಣವಿರೋಧವು ಇರಬಾರದು ಎಂಬುದಾಗಿ ಯೋಗ್ಯತೆಯ ಲಕ್ಷಣವನ್ನು ಹೇಳಿದರೆ ಆಗ ವಿಷಯಸತ್ವವನ್ನೇ ಯೋಗ್ಯತಾ ಎಂದು ಹೇಳಿದಂತಾಯಿತು. ಹೀಗೆ ಹೇಳಿದರೆ ಶಾಬ್ದಪ್ರಮಾವನ್ನು ಕುರಿತು ಯೋಗ್ಯತೆಯು ಕಾರಣವಾಗಿರುವುದರಿಂದ ಪ್ರಾಮಾಣ್ಯಕ್ಕೆ ಪರತಸ್ತ್ವವನ್ನು ಒಪ್ಪಿದಂತಾಯಿತು. ವಿಷಯಸತ್ವವು ಗುಣರೂಪವಾಗಿರುವುದರಿಂದ ಪ್ರಮಾ ಎಂಬ ಗುಣಜನ್ಯ ಎಂದು ಒಪ್ಪಿದಂತಾಯಿತು. ಆದ್ದರಿಂದ ಪ್ರಾಮಾಣ್ಯಕ್ಕೆ ಪರತಸ್ತ್ವವನ್ನು ಒಪ್ಪಿದಂತಾಯಿತಲ್ಲವೆ ?

ತಾರ್ಕಿಕರ ಈ ಆಕ್ಷೇಪವೇ ಅಸಾಧುವಾಗಿದೆ. ಏಕೆಂದರೆ ನಾವು ಯೋಗ್ಯತಾವನ್ನು ವಿಷಯಸತ್ವರೂಪವೆಂದು ಅಂಗೀಕರಿಸುತ್ತೇವೆ ಹೊರತು ಶಾಬ್ದಪ್ರಮಾವನ್ನು ಕುರಿತು ಕಾರಣವೆಂದು ಅಂಗೀಕರಿಸುವುದಿಲ್ಲ. ಆದ್ದರಿಂದ ಪ್ರಾಮಾಣ್ಯಕ್ಕೆ ಪರತಸ್ತ್ವಾಪತ್ತಿ ಎಂಬ ದೋಷವು ಕೂಡ ಬರುತ್ತದೆ.

ಯೋಗ್ಯತೆಯು ಶಬ್ದದಲ್ಲಿ ಇರುತ್ತದೆ ಹೊರತು ಶಾಬ್ದಬೋಧ ಬರಬೇಕಾದರೆ ಸ್ವರೂಪಸತ್ತಾಗಿ ಕಾರಣವಾಗುವುದಿಲ್ಲ. ಜ್ಞಾತವಾಗಿಯೂ ಕೂಡ ಕಾರಣವಾಗುವುದಿಲ್ಲ.

**ನ್ಯಾಯದೀಪ – ತಸ್ಯಾ ವೇತಿ ॥ 'ಯೋಗ್ಯತಾಯಾ ವಾ' ಇತ್ಯರ್ಥಃ । ಕಥಂ ನ ಹೇತುತ್ವಮ್? ಇತ್ಯತ ಆಹ – ಉಕ್ತಂ ಚೈತದಿತಿ ॥ 'ಶಾಬ್ದಪ್ರಮಾಯಾಂ ಯೋಗ್ಯತಾ ತಜ್ಜ್ಞಾನಂ ವಾ ನ ಹೇತುಃ' ಇತ್ಯೇತತ್ ಪ್ರತ್ಯಕ್ಷಪ್ರಮಾದಾವನುಗತಗುಣಭಂಗೇ ಶಾಬ್ದಪ್ರಮಾನುಗತಗುಣಖಂಡನಪ್ರಸ್ತಾವೇ ಉಪಪಾದಿತಂ ಚೇತ್ಯರ್ಥಃ ।**

ಅನುವಾದ- 'ತಸ್ಯಾಃ ವಾ' ಎಂಬಲ್ಲಿ ತದ್‌ಶಬ್ದಕ್ಕೆ ಯೋಗ್ಯತಾಕ್ಕೆ ಎಂದರ್ಥ. ಯೋಗ್ಯತೆಯು ಶಾಬ್ದಬೋಧಕ್ಕೆ ಏಕೆ ಕಾರಣವಾಗುವುದಿಲ್ಲ? ಎಂಬ ಪ್ರಶ್ನೆಗೆ 'ಉಕ್ತಂ ಚೈತತ್' ಎಂಬುದರಿಂದ ಉತ್ತರಿಸಿದ್ದಾರೆ. ಶಾಬ್ದಪ್ರಮಾದಲ್ಲಿ ಯೋಗ್ಯತಾ ಅಥವಾ ಯೋಗ್ಯತಾಜ್ಞಾನವು ಕಾರಣವಲ್ಲ ಎಂಬುದನ್ನು 'ಪ್ರತ್ಯಕ್ಷಪ್ರಮಾದೌ ಅನುಗತಗುಣಭಂಗ' ಪ್ರಕರಣದಲ್ಲಿ ಶಾಬ್ದಪ್ರಮಾನುಗತವಾದ ಗುಣಖಂಡನದ ಪ್ರಸ್ತಾವನೆಯಲ್ಲಿ ಉಪಪಾದನೆ ಮಾಡಲಾಗಿದೆ.

ವಿವರಣೆ - ಪ್ರಶ್ನೆ - ಯೋಗ್ಯತೆಯು ಶಾಬ್ದಬೋಧವನ್ನು ಕುರಿತು ಕಾರಣವಲ್ಲವೆಂದು ಹೇಳಿದಿರಿ ಇದು ಹೇಗೆ ಸಾಧ್ಯ ?

ಉತ್ತರ - ಪ್ರತ್ಯಕ್ಷ ಮೊದಲಾದ ಬೇರೆಬೇರೆ ಪ್ರಮಾಗಳಿಗೆ ಬೇರೆಬೇರೆ ಗುಣಗಳು ಕಾರಣವೆಂಬುದು ಒಂದುಮತ. ಎಲ್ಲಾ ಬಗೆಯ ಪ್ರಮಾ ಹುಟ್ಟಲು ಒಂದೇ ಗುಣವು ಕಾರಣವೆಂಬುದು ಮತ್ತೊಂದು ಮತ. ಶಾಬ್ದಪ್ರಮಾ ಹುಟ್ಟುವುದಕ್ಕಾಗಿ ಆಪ್ತೋಕ್ತತ್ವ ಎಂಬ ಗುಣ ಹಾಗೂ ಯೋಗ್ಯತಾ ಎಂಬ ಗುಣವು ಕಾರಣವೆಂದು ತಾರ್ಕಿಕರು ಹೇಳುತ್ತಾರೆ. ಇದನ್ನು ನಾವು ಶಾಬ್ದಪ್ರಮಾನುಗತಗುಖಂಡನಪ್ರಸ್ತಾವದಲ್ಲಿ ನಿರಾಕರಣೆ ಮಾಡಿದ್ದೇವೆ. ಆದ್ದರಿಂದ ಶಾಬ್ದಪ್ರಮಾ ಹುಟ್ಟುವುದಕ್ಕೆ ಯೋಗ್ಯತಾವಾಗಲಿ ಯೋಗ್ಯತಾಜ್ಞಾನವಾಗಲಿ ಕಾರಣವಾಗುವುದಿಲ್ಲ.

## ಭ್ರಮಪ್ರಮಾಸಾಧಾರಣವಾದ ಅಯೋಗ್ಯತಾನಿಶ್ಚಯವಿರಹವು ಕಾರಣ

**ತರ್ಕತಾಂಡವ – ಭ್ರಮಸಾಧಾರಣೇ ಶಾಬ್ದಜ್ಞಾನೇ ತು ಆಕಾಂಕ್ಷಾಸತ್ತೀ ಅಯೋಗ್ಯತಾ-ನಿಶ್ಚಯವಿರಹಶ್ಚ ಹೇತವ ಇತ್ಯಸ್ತು । ನ ತು ಯೋಗ್ಯತಾ । ನ ವಾ ತಜ್ಜ್ಞಾನಮ್ ।**

ಅನುವಾದ - ಭ್ರಮಪ್ರಮಾಸಾಧಾರಣವಾದ ಶಾಬ್ದಬೋಧವನ್ನು ಕುರಿತು ಆಕಾಂಕ್ಷಾ ಆಸತ್ತಿ ಹಾಗೂ ಅಯೋಗ್ಯತಾನಿಶ್ಚಯವಿರಹ ಈ ಮೂರು ಕಾರಣವೆಂದು ಹೇಳುತ್ತೇವೆ; ಹೊರತು ಯೋಗ್ಯತಾವನ್ನಾಗಲಿ ಯೋಗ್ಯತಾಜ್ಞಾನವನ್ನಾಗಲಿ ಕಾರಣವೆಂದು ಹೇಳುವುದಿಲ್ಲ.

ವಿವರಣೆ - ಶಾಬ್ದಪ್ರಮಾವಿಗೆ ಯೋಗ್ಯತೆಯ ಸತ್ತ್ವವು ಕಾರಣವಲ್ಲ. ಯೋಗ್ಯತೆಯ ಜ್ಞಾನವೂ ಕೂಡ ಕಾರಣವಲ್ಲವೆಂದು ಸಮರ್ಥಿಸಿದ್ದಾಯಿತು. ಆದರೆ ಭ್ರಮಪ್ರಮಾ-ಸಾಧಾರಣವಾದ ಶಾಬ್ದಜ್ಞಾನದಲ್ಲಿ ಯೋಗ್ಯತೆಯು ಕಾರಣವಾಗುತ್ತದೋ ಇಲ್ಲವೋ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸಲಾಗಿದೆ. ಭ್ರಮಪ್ರಮಾಸಾಧಾರಣವಾದ ಶಾಬ್ದಬೋಧವನ್ನು ಕುರಿತು ಆಕಾಂಕ್ಷೆ ಹಾಗೂ ಆಸತ್ತಿಗಳು ಕಾರಣವಾಗುತ್ತವೆ. ಆದರೆ ಯೋಗ್ಯತೆಯನ್ನಾಗಲಿ ಯೋಗ್ಯತೆಯ ಜ್ಞಾನವನ್ನಾಗಲಿ ಕಾರಣವೆಂದು ಹೇಳುವುದಿಲ್ಲ. ಹೊರತಾಗಿ ಅಯೋಗ್ಯತಾ-ನಿಶ್ಚಯವಿರಹವು ಕಾರಣವೆಂದು ಹೇಳುತ್ತೇವೆ.

ವಿಶೇಷ ವಿಚಾರ - ಯೋಗ್ಯತಾಜ್ಞಾನವನ್ನೇ ಕಾರಣವೆಂದು ಸುಲಭವಾಗಿ ಹೇಳಲು ಬರುವಾಗ ಗುರು-ಭೂತವಾದ ಅಯೋಗ್ಯತಾನಿಶ್ಚಯವಿರಹವೆಂಬ ಕಾರಣವನ್ನು ಏಕೆ ಹೇಳಬೇಕು? ಎಂಬ ಪ್ರಶ್ನೆಗೆ ಹೀಗೆ ಉತ್ತರ -

ಬೇರೆ ಕಡೆ ಕ್ಲೃಪ್ತವಾಗಿರುವುದನ್ನು ಗೌರವ ಇದ್ದರೂ ಕೂಡ ಒಪ್ಪುವುದು ತಪ್ಪಾಗುವುದಿಲ್ಲ. ಮತ್ತು ಹೀಗೆ ಒಪ್ಪುವುದು ಅತ್ಯಂತ ಆವಶ್ಯಕವೇ ಆಗಿದೆ. ಉದಾಹರಣೆ - 'ದಂಡವಿಶಿಷ್ಟೋ ದೇವದತ್ತ:' ಎಂಬ ಪ್ರತ್ಯಕ್ಷಜ್ಞಾನವು ಬರಬೇಕಾದರೆ ಇಂದ್ರಿಯಸನ್ನಿಕರ್ಷವಾಗಬೇಕು. ಚಕ್ಷುಸ್ಸಿಗೂ ದಂಡಕ್ಕೂ ಸನ್ನಿಕರ್ಷವಾಗುತ್ತದೆ. ಅದರಂತೆ ಚಕ್ಷುಸ್ಸಿಗೂ ದೇವದತ್ತನಿಗೂ ಸನ್ನಿಕರ್ಷವಾಗುತ್ತದೆ. ಮತ್ತು ದಂಡಕ್ಕೂ ದೇವದತ್ತನಿಗೂ ಸಂಸರ್ಗವಿಲ್ಲವೆಂಬ ಜ್ಞಾನವು ಬರುವುದಿಲ್ಲ. ವಿಶಿಷ್ಟಜ್ಞಾನವು ವಿಶೇಷಣ ಇರುವ ಮಾತ್ರಕ್ಕೆ ಬರುತ್ತದೆ; ಹೊರತು ಇದು ವಿಶೇಷಣ ಎಂಬ ಜ್ಞಾನದ ಆವಶ್ಯಕತೆ ಇರುವುದಿಲ್ಲ. ನಮ್ಮ ಸಿದ್ಧಾಂತದಲ್ಲಿ ವಿಶಿಷ್ಟಜ್ಞಾನವನ್ನು ಕುರಿತು ವಿಶೇಷಣಜ್ಞಾನವು ಕಾರಣವೆಂದು ಒಪ್ಪಿರುವುದೇ ಇಲ್ಲ. ಆದ್ದರಿಂದ ದಂಡ, ದೇವದತ್ತ ಇವುಗಳ ಜೊತೆ ಚಕ್ಷುಸ್ಸು ಸನ್ನಿಕರ್ಷವಾದಾಗ ಇವುಗಳಿಗೆ ಅಸಂಸರ್ಗವಿದೆಯೆಂಬ ಜ್ಞಾನವು ಬಾರದಿದ್ದರೆ 'ದಂಡೀ ದೇವದತ್ತ:' ಎಂಬ ವಿಶಿಷ್ಟಜ್ಞಾನವು ಬರುತ್ತದೆ. ಆದ್ದರಿಂದ ವಿಶಿಷ್ಟಜ್ಞಾನಕ್ಕೆ ಅಸಂಸರ್ಗದ ಅಗ್ರಹ ಎಂಬುದು ಕಾರಣವಾಗುತ್ತದೆ. ವಿಶಿಷ್ಟಜ್ಞಾನ ಬರಬೇಕಾದರೆ ದಂಡ ಹಾಗೂ ದೇವದತ್ತ ಇವರಲ್ಲಿ ಸನ್ನಿಕರ್ಷ ಹಾಗೂ ಅಸಂಸರ್ಗದ ಅಗ್ರಹ ಇವುಗಳಿದ್ದರೆ ಸಾಕು. ಪ್ರಕೃತ ಅಯೋಗ್ಯತಾನಿಶ್ಚಯವಿರಹ ಎಂಬುದೂ ಕೂಡ ಅಸಂಸರ್ಗದ ಅಗ್ರಹವೇ ಆಗಿದೆ. ಅನ್ವಯಸತ್ವವೇ ಯೋಗ್ಯತಾಜ್ಞಾನವೆಂದರೆ ಸಂಸರ್ಗಜ್ಞಾನ ಎಂದರ್ಥ. ಯೋಗ್ಯತಾ ಇಲ್ಲವೆಂಬ ನಿಶ್ಚಯವಿಲ್ಲ-ವೆಂಬುದು ಅಸಂಸರ್ಗದ ಅಗ್ರಹರೂಪವಾಗಿದೆ.

ಆದ್ದರಿಂದ 'ದಂಡೀ ದೇವದತ್ತ:' ಎಂಬಲ್ಲಿ ಅಸಂಸರ್ಗ ಅಗ್ರಹವಿಶಿಷ್ಟಜ್ಞಾನಕ್ಕೆ ಕಾರಣವೆಂದು ಈಗಾಗಲೇ ಕ್ಲೃಪ್ತವಾಗಿದೆ. ಅದನ್ನು ಇಲ್ಲಿಯೂ ಕೂಡ ವಿಶಿಷ್ಟರೂಪವಾದ ಶಾಬ್ದಬೋಧದಲ್ಲಿ ಅಯೋಗ್ಯತಾನಿಶ್ಚಯವಿರಹ ಎಂಬುದನ್ನು ಕಾರಣವೆಂದು ಹೇಳುತ್ತೇವೆ.

## ಸಕಲಶಾಬ್ದಜ್ಞಾನಗಳಿಗೆ ಯೋಗ್ಯತೆಯು ಕಾರಣವಾಗಬೇಕಾದೀತು

**ನ್ಯಾಯದೀಪ – ನನ್ವೇವಂ ಶಾಬ್ದಜ್ಞಾನಮಾತ್ರೇಽಪಿ ಯೋಗ್ಯತಾ ನ ಹೇತುಃ ಸ್ಯಾತ್ । ತಥಾ ಚ ಅನಿಶ್ಚಿತಾಯೋಗ್ಯತಾವಾಕ್ಯಾದಪಿ ಧೀಪ್ರಸಂಗಃ । ನ ಚ ಅಯೋಗ್ಯತಾನಿಶ್ಚಯವಿರಹೋ ಹೇತುಃ । ಗುರುತ್ವೇನ ಯೋಗ್ಯತಾಯಾಮ್ ಏವ ಹೇತುತ್ವೇ ಔಚಿತ್ಯಾದಿತ್ಯತ ಆಹ – ಭ್ರಮೇತ್ಯಾದಿ ॥**

ಅನುವಾದ - ಯೋಗ್ಯತೆಯು ಅಥವಾ ಯೋಗ್ಯತೆಯ ಜ್ಞಾನವು ಶಾಬ್ದಪ್ರಮಾವನ್ನು ಕುರಿತು ಕಾರಣ-ವಲ್ಲವೆಂದು ಹೇಳುವುದಾದರೆ ಸಕಲವಿಧವಾದ ಶಾಬ್ದಜ್ಞಾನಗಳಿಗೂ ಕೂಡ ಯೋಗ್ಯತೆಯು ಕಾರಣವಲ್ಲ-ವೆಂದು ಹೇಳಬೇಕಾದೀತು. ಆಗ ಯೋಗ್ಯತೆ ಇಲ್ಲವೆಂದು ನಿಶ್ಚಯವುಳ್ಳ ವಾಕ್ಯದಿಂದಲೂ ಕೂಡ ಶಾಬ್ದಬೋಧವು

ಬರಬೇಕಾದೀತೆಂಬ ಅತಿಪ್ರಸಂಗ ಬರುತ್ತದೆ. ಇನ್ನು ಅಯೋಗ್ಯತಾನಿಶ್ಚಯವಿರಹವನ್ನು ಕಾರಣವೆಂದು ಹೇಳಬೇಕು, ಇದು ಗುರುಭೂತವಾಗಿದೆ. ಇದನ್ನೇ ಕಾರಣವೆಂದು ಹೇಳಲು ಬರುವಾಗ ಅಯೋಗ್ಯತಾನಿಶ್ಚಯದ ವಿರಹವು ಕಾರಣವೆಂದು ಹೇಳುವುದು ಉಚಿತವಲ್ಲ. ಈ ಆಕ್ಷೇಪಕ್ಕೆ 'ಭ್ರಮಸಾಧಾರಣೇ' ಇತ್ಯಾದಿಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - ಶಾಬ್ದಪ್ರಮಾವನ್ನು ಕುರಿತು ಯೋಗ್ಯತೆಯು ಕಾರಣವಾಗದಿದ್ದರೆ ಶಾಬ್ದಜ್ಞಾನಕ್ಕೂ ಕೂಡ ಯೋಗ್ಯತೆಯು ಕಾರಣವಾಗದೆ ಇರಬೇಕಾದೀತು. ಇಷ್ಟಾಪತ್ತಿ ಎನ್ನಲಾಗದು. ಏಕೆಂದರೆ ಯಾವ ವಾಕ್ಯದಲ್ಲಿ ಯೋಗ್ಯತೆ ಇಲ್ಲವೆಂದು ನಿಶ್ಚಯವಾಗಿದೆಯೋ ಅಂಥ ವಾಕ್ಯದಿಂದಲೂ ಕೂಡ ಶಾಬ್ದಬೋಧವು ಬರಬೇಕಾದೀತು.

ಶಾಬ್ದಬೋಧಕ್ಕೆ ಯೋಗ್ಯತಾಜ್ಞಾನವು ಕಾರಣವಲ್ಲ. ಅಯೋಗ್ಯತಾನಿಶ್ಚಯದ ವಿರಹವು ಕಾರಣವೆಂಬುದಾಗಿ ವ್ಯತಿರೇಕಮುಖದಿಂದ ಹೇಳುತ್ತೇವೆಂದು ಉತ್ತರಿಸಲಾಗದು. ಅಯೋಗ್ಯತಾ ಇರುವ ವಾಕ್ಯದಲ್ಲಿ ಅಯೋಗ್ಯತಾನಿಶ್ಚಯವೇ ಇರುವುದರಿಂದ ಯೋಗ್ಯತಾನಿಶ್ಚಯದ ಕಾರಣವಿಲ್ಲದ್ದರಿಂದ ಶಾಬ್ದಬೋಧ ಬರುವುದಿಲ್ಲವೆಂದು ಉತ್ತರಿಸಲಾಗದು. ಏಕೆಂದರೆ ಅಯೋಗ್ಯತಾನಿಶ್ಚಯದ ವಿರಹವು ಕಾರಣವೆಂದು ಹೇಳುವುದಕ್ಕಿಂತ ಯೋಗ್ಯತಾಜ್ಞಾನವೇ ಕಾರಣವೆಂದು ಹೇಳುವುದು ಲಘುಭೂತವಾಗಿದೆ.

ಈ ಶಂಕೆಯನ್ನು 'ಭ್ರಮಸಾಧಾರಣೇ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

## ಅಸಂಸರ್ಗವು ಕಾರಣವೆಂದರೆ ಗೌರವ ಇಲ್ಲ.

**ತರ್ಕತಾಂಡವ – ಯದ್ಯಪಿ ಯೋಗ್ಯತಾಜ್ಞಾನಾತ್ ಅಯೋಗ್ಯತಾನಿಶ್ಚಯವಿರಹೋ ಗುರುಃ । ತಥಾಪ್ಯಸೌ ಅಸಂಸರ್ಗಾಗ್ರಹರೂಪತ್ವಾತ್ ಪ್ರತ್ಯಕ್ಷಾದಿವಿಶಿಷ್ಟಜ್ಞಾನೇ ಕ್ಲೃಪ್ತ ಆವಶ್ಯಕಶ್ಚ ।**

ಅನುವಾದ - ವಾಸ್ತವಿಕವಾಗಿ ಯೋಗ್ಯತಾಜ್ಞಾನವನ್ನು ಕಾರಣವೆಂದು ಹೇಳುವುದಕ್ಕಿಂತ ಅಯೋಗ್ಯತಾನಿಶ್ಚಯವಿರಹವನ್ನು ಕಾರಣವೆಂದು ಹೇಳುವುದು ಗುರುಭೂತವಾಗಿದೆ. ಆದರೂ ಕೂಡ ಇದು ದೋಷವಲ್ಲ. ಏಕೆಂದರೆ ಈ ಅಯೋಗ್ಯತಾನಿಶ್ಚಯವಿರಹವು ಅಸಂಸರ್ಗ-ಅಗ್ರಹರೂಪವಾದ 'ದಂಡೀ ದೇವದತ್ತಃ' ಎಂಬ ವಿಶಿಷ್ಟಜ್ಞಾನಕ್ಕೆ ಅಸಂಸರ್ಗ ಅಗ್ರಹವು ಕಾರಣ-ವೆಂದು ಈಗಾಗಲೇ ಕ್ಲೃಪ್ತವಾಗಿದೆ. ಅದನ್ನೇ ಇಲ್ಲೂ ಕೂಡ ಕಾರಣವೆಂದು ಹೇಳಿದರೆ ಗೌರವ-ದೋಷವು ಬರುವುದಿಲ್ಲ.

**ನ್ಯಾಯದೀಪ – ಅಸಾವಿತಿ ॥ 'ಅಯೋಗ್ಯತಾನಿಶ್ಚಯಾವಿರಹಃ' ಇತ್ಯರ್ಥಃ । ಕ್ಲೃಪ್ತ ಇತಿ ॥ 'ಹೇತುತ್ವೇನ' ಇತಿ ಯೋಜ್ಯಮ್ । ಆವಶ್ಯಕ ಇತಿ ॥ 'ತದಭಾವೇ ಶಾಬ್ದಜ್ಞಾನಾನುದಯಾತ್' ಇತಿ ಭಾವಃ ।**

ಅನುವಾದ - 'ಅಸೌ' ಎಂದರೆ 'ಅಯೋಗ್ಯತಾನಿಶ್ಚಯವಿರಹ' ಎಂದರ್ಥ. 'ಕ್ಲೃಪ್ತ' ಎಂಬಲ್ಲಿ 'ಹೇತುತ್ವೇನ' ಎಂಬುದನ್ನು ಸೇರಿಸಿಕೊಳ್ಳಬೇಕು. 'ಆವಶ್ಯಕ' ಎಂದರೆ ಅದಿಲ್ಲದಿದ್ದರೆ ಶಾಬ್ದಜ್ಞಾನವು ಉಂಟಾಗುವುದಿಲ್ಲ ಎಂದರ್ಥ.

## ತಾರ್ಕಿಕರಿಗೆ ಆತ್ಮಾಶ್ರಯ ದೋಷ

**ತರ್ಕತಾಂಡವ – ಕಿಂಚ ಯೋಗ್ಯತಾಯಾಃ ಸಂಸರ್ಗಾತ್ಮಕತ್ವೇನ ತಜ್ಜ್ಞಾನಸ್ಯ ಶಾಬ್ದಸಂಸರ್ಗಜ್ಞಾನಹೇತುತ್ವ ಆತ್ಮಾಶ್ರಯಃ ಸ್ಯಾತ್ ।**

ಅನುವಾದ - ಯೋಗ್ಯತಾವು ಸಂಸರ್ಗರೂಪವಾಗಿದೆ. ಶಾಬ್ದಬೋಧವು ಕೂಡ ಪದಾರ್ಥಗಳ ಸಂಸರ್ಗರೂಪವಾಗಿದೆ. ಶಾಬ್ದಬೋಧಕ್ಕೆ ಯೋಗ್ಯತಾಜ್ಞಾನವು ಕಾರಣವೆಂದು ಹೇಳಿದರೆ ಸಂಸರ್ಗಜ್ಞಾನಕ್ಕೆ ಸಂಸರ್ಗವು ಕಾರಣವೆಂದು ಹೇಳಿದಂತಾಗುವುದರಿಂದ ಆತ್ಮಾಶ್ರಯದೋಷವು ತಾರ್ಕಿಕರಿಗೆ ಬರುತ್ತದೆ.

**ನ್ಯಾಯದೀಪ – ಯೋಗ್ಯತಾಜ್ಞಾನಹೇತುತ್ವೇ ವಿಪಕ್ಷೇ ಬಾಧಕಂ ಚಾಹ – ಕಿಂಚೇತಿ ॥**

ಅನುವಾದ- ಯೋಗ್ಯತಾಜ್ಞಾನವು ಕಾರಣ ಎನ್ನುವ ಪಕ್ಷದಲ್ಲಿ ವಿಪಕ್ಷದಲ್ಲಿ ಬಾಧಕವನ್ನು 'ಕಿಂಚ' ಎಂಬ ವಾಕ್ಯದಿಂದ ಹೇಳಿದ್ದಾರೆ.

## ಅಯೋಗ್ಯತಾನಿಶ್ಚಯವಿರಹವು ಕೂಡ ಕಾರಣವಲ್ಲ

**ತರ್ಕತಾಂಡವಮ್ – ವಸ್ತುತಸ್ತು ಅಯೋಗ್ಯತಾನಿಶ್ಚಯವಿರಹೋಽಪಿ ನ ಶಾಬ್ದಧೀ-ಹೇತುಃ, ಕಿಂತು ಆಕಾಂಕ್ಷಾಸತ್ತೀ ಏವ । ತಥಾತ್ವೇ ಹಿ ಅಯೋಗ್ಯತ್ವೇನ ನಿಶ್ಚಿತಸ್ಯ ಪ್ರತಿವಾದಿವಾಕ್ಯಸ್ಯ ಅಬೋಧಕತಯಾ ಕಥಾ ಬಧಿರಕಲಹಃ ಸ್ಯಾತ್ ।**

ಅನುವಾದ - ವಾಸ್ತವಿಕವಾಗಿ ನಮ್ಮ ಸಿದ್ಧಾಂತದಲ್ಲಿ ಅಯೋಗ್ಯತಾನಿಶ್ಚಯವಿರಹವೂ ಕೂಡ ಶಾಬ್ದ-ಬೋಧಕ್ಕೆ ಕಾರಣವಲ್ಲ. ಆಕಾಂಕ್ಷಾ ಮತ್ತು ಆಸತ್ತಿ ಇವೆರಡು ಮಾತ್ರ ಶಾಬ್ದಬೋಧಕ್ಕೆ ಕಾರಣವಾಗುತ್ತವೆ. ಒಂದು ವೇಳೆ ಅಯೋಗ್ಯತಾನಿಶ್ಚಯವಿರಹವೂ ಕೂಡ ಕಾರಣವೆಂದು ಹೇಳುವುದಾದರೆ ಯಾವ ವಾಕ್ಯದಲ್ಲಿ ಯೋಗ್ಯತೆ ಇಲ್ಲವೆಂದು ನಿಶ್ಚಯವಾಗಿದೆಯೋ ಅಂಥ ಪ್ರತಿವಾದಿವಾಕ್ಯದಲ್ಲಿ ಶಾಬ್ದಬೋಧವೇ ಹುಟ್ಟದೆ ಇರಬೇಕಾದೀತು. ಆಗ ಕಥೆಯಲ್ಲಿ ಮಾತನಾಡುವ ಮಾತುಗಳಲ್ಲೆವೂ ಕಿವುಡರ ಜಗಳ ಆಗಬೇಕಾದೀತು.

> ವಿವರಣೆ - ಅಯೋಗ್ಯತಾನಿಶ್ಚಯವಿರಹವನ್ನು ಕಾರಣವೆಂದು ಹೇಳಿದ್ದು ಅಂಗೀಕಾರದಿಂದ ಮಾತ್ರ. ವಾಸ್ತವಿಕವಾಗಿ ಇದೂ ಕೂಡ ಶಾಬ್ದಬೋಧಕ್ಕೆ ಕಾರಣವಲ್ಲ. ಏಕೆಂದರೆ ಪ್ರತಿ-ವಾದಿಯು ವಾಕ್ಯವನ್ನು ಪ್ರಯೋಗ ಮಾಡಿದಾಗ ಅದರಲ್ಲಿ ಅಯೋಗ್ಯತೆಯ ನಿಶ್ಚಯವೇ ಇದೆ. ಆದರೂ ಕೂಡ ಶಾಬ್ದಬೋಧ ಬರುವುದು ಅನುಭವಸಿದ್ಧವಾಗಿದೆ. ಒಂದು ವೇಳೆ ಅಯೋಗ್ಯತಾನಿಶ್ಚಯವಿರಹವಿದ್ದರೆ ಮಾತ್ರ ಶಾಬ್ದಬೋಧ ಬರುತ್ತದೆಂದು ಒಪ್ಪಿದರೆ ಪ್ರತಿ-ವಾದಿವಾಕ್ಯದಿಂದ ಶಾಬ್ದಬೋಧವೇ ಬಾರದಿರುವ ಪ್ರಸಂಗ ಬರುತ್ತದೆ. ಆಗ ವಾದಕಥೆಯು ಕಿವುಡರ ಜಗಳವಷ್ಟೆ ಆಗುತ್ತದೆ.

## ಅಯೋಗ್ಯತಾನಿಶ್ಚಯವಿರಹವನ್ನು ಕಾರಣವೆನ್ನಬಹುದೇ ?

**ನ್ಯಾಯದೀಪಃ – ''ನನು ಅಸಂಸರ್ಗಾಗ್ರಹರೂಪತಯಾ ಯದಿ ಅಯೋಗ್ಯತಾ**

**-ನಿಶ್ಚಯವಿರಹಃ ಶಾಬ್ದಧೀಹೇತುಃ ಸ್ಯಾತ್ ತರ್ಹಿ ಯತ್ಸಾಮಾನ್ಯವಿಶೇಷನ್ಯಾಯೇನ ಅವಿದ್ಯಮಾನಾಸಂಸರ್ಗಾಗ್ರಹಃ, ಪ್ರಮಾಮಾತ್ರೇಽವಿದ್ಯಮಾನಾಯೋಗ್ಯತಾ-ನಿಶ್ಚಯವಿರಹಶ್ಚ ಶಾಬ್ದಪ್ರಮಾಯಾಮ್ ಅನುಗತೋ ಗುಣೋ ಹೇತುಃ ಪ್ರಾಪ್ನೋತಿ'' ಇತಿ ಪ್ರಾಮಾಣ್ಯಸ್ಯ ಪರತಸ್ತ್ವಾಪತ್ತಿಃ । ಶಾಬ್ದಸಾಧಾರಣ್ಯಾನಾಪತ್ತಿಃ । ಪ್ರತಿ-ವಾದ್ಯಾದಿವಾಕ್ಯಾದಿತಃ ಅರ್ಥಜ್ಞಾನಾಭಾವಾಪತ್ತಿಶ್ಚ ಇತ್ಯತ ಆಹ – ವಸ್ತುತಸ್ತ್ವಿತಿ ॥**

ಅನುವಾದ - ಅಯೋಗ್ಯತಾನಿಶ್ಚಯದ ವಿರಹವು ಶಾಬ್ದಜ್ಞಾನಸಾಮಾನ್ಯವನ್ನು ಕುರಿತು ಕಾರಣವೆಂದು ಹೇಳಿದರೆ ಪ್ರಾಮಾಣ್ಯವು 'ಪರತಃ' ಎಂದಾಗಬೇಕಾಗುತ್ತದೆ. ಏಕೆಂದರೆ ಅಯೋಗ್ಯತಾನಿಶ್ಚಯವಿರಹವು ಅಸಂಸರ್ಗ- ಅಗ್ರಹರೂಪವಾಗಿದೆ. ಸಾಮಾನ್ಯಗಳಿಗಿರುವ ಕಾರ್ಯಕಾರಣಭಾವವು ವಿಶೇಷಗಳಿಗೂ ಕೂಡ ಇರುತ್ತದೆ. ವಿಶೇಷಗಳಿಗಿರುವ ಕಾರ್ಯಕಾರಣಭಾವವು ಸಾಮಾನ್ಯಗಳಿಗೂ ಕೂಡ ಇರುತ್ತದೆಂಬ ನಿಯಮವು ಲೋಕಸಿದ್ಧವಾಗಿರುವುದರಿಂದ ಅವಿದ್ಯಮಾನ-ಅಸಂಸರ್ಗದ ಅಗ್ರಹವು ಶಾಬ್ದಬೋಧ-ಸಾಮಾನ್ಯವನ್ನು ಕುರಿತು ಕಾರಣವಾದ ಮೇಲೆ ಶಾಬ್ದಪ್ರಮಾವಿಶೇಷವನ್ನು ಕುರಿತು ಕೂಡ ಕಾರಣವೆಂದು ಹೇಳಿದಂತಾಗುತ್ತದೆ. ಮತ್ತು ಅವಿದ್ಯಮಾನವಾದ ಅಯೋಗ್ಯತಾನಿಶ್ಚಯವಿರಹವು ಶಾಬ್ದಪ್ರಮಾದಲ್ಲಿ ಅನುಗತವಾಗಿರುವುದರಿಂದ ಪ್ರಾಮಾಣ್ಯವು ಪರತಃ ಎಂದಾಗುತ್ತದೆ. ಅಷ್ಟೇ ಅಲ್ಲದೆ ಶಾಬ್ದಬೋಧಕ್ಕೆ ಇದು ಸಾಧಾರಣಕಾರಣವಾಗುವುದರಿಂದ ಅಸಾಧಾರಣಕಾರಣ ಆಗುವುದಿಲ್ಲ. ಮತ್ತು ಪ್ರತಿವಾದಿವಾಕ್ಯದಿಂದ ಅರ್ಥಜ್ಞಾನವೇ ಹುಟ್ಟದ ಕಾರಣ ಬದಿರಕಲಹಪ್ರಸಂಗವೂ ಕೂಡ ಬರುತ್ತದೆ. ಇವೇ ಮೊದಲಾದ ದೋಷಗಳನ್ನು 'ವಸ್ತುತಸ್ತು' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ವಿಶೇಷ ವಿಚಾರ - ಶಾಬ್ದಬೋಧವನ್ನು ಕುರಿತು ಆಕಾಂಕ್ಷಾ ಮತ್ತು ಆಸತ್ತಿಗಳು ಕಾರಣವಾಗಿವೆ. ಅದರಂತೆ ಯೋಗ್ಯತೆಯು ಕಾರಣವಲ್ಲ. ಹೊರತು ಅಯೋಗ್ಯತಾನಿಶ್ಚಯದ ವಿರಹವು ಕಾರಣವಾಗಿದೆ. ಇದು ಹೇಗೆಂದರೆ 'ದಂಡೀ ದೇವದತ್ತಃ' ಎಂಬ ವಿಶಿಷ್ಟಜ್ಞಾನವು ಬರಬೇಕಾದರೆ ವಿಶೇಷಣ ಹಾಗೂ ವಿಶೇಷ್ಯಗಳ ಜೊತೆ ಸನ್ನಿಕರ್ಷವಿದ್ದು ಆ ವಿಶೇಷಣ ಮತ್ತು ವಿಶೇಷ್ಯಗಳಿಗೆ ಅಸಂಸರ್ಗದ ಅಗ್ರಹವಿದ್ದರೆ ವಿಶಿಷ್ಟಜ್ಞಾನವು ಬರುತ್ತದೆಂದು ಅಂಗೀಕರಿಸಿದ್ದೇವೆ. ಆದ್ದರಿಂದ ವಿಶಿಷ್ಟಜ್ಞಾನದಲ್ಲಿ ಅಸಂಸರ್ಗದ ಅಗ್ರಹವು ಕಾರಣವೆಂದು ಈಗಾಗಲೇ ನಿರ್ಣಯವಾಗಿದೆ. ಶಾಬ್ದಬೋಧವನ್ನು ಕುರಿತು ಕಾರಣವೆಂದು ಹೇಳುತ್ತಿರುವ ಅಯೋಗ್ಯತಾನಿಶ್ಚಯವಿರಹವು ಕೂಡ ಅಸಂಸರ್ಗದ ಅಗ್ರಹರೂಪವೇ ಆಗಿದೆ. ಆದ್ದರಿಂದ ಮೊದಲೇ ಕ್ಲೃಪ್ತವಾದ ಕಾರಣತ್ವವೆಂಬ ಅಯೋಗ್ಯತಾನಿಶ್ಚಯತ್ವವನ್ನು ಒಪ್ಪಿದರೆ ಗೌರವದೋಷವು ಬರುವುದಿಲ್ಲವೆಂದು ಈ ಹಿಂದೆ ಸಮರ್ಥಿಸ-

ಲಾಯಿತು. ವಿಚಾರ ಮಾಡಿದರೆ ಅಯೋಗ್ಯತಾನಿಶ್ಚಯವಿರಹವನ್ನು ಶಾಬ್ದಬೋಧಕ್ಕೆ ಕಾರಣವೆಂದು ಒಪ್ಪಿದರೆ ಅನೇಕ ದೋಷಗಳು ಬರುತ್ತವೆ.

ಅಯೋಗ್ಯತಾನಿಶ್ಚಯವಿರಹವು ಅಸಂಸರ್ಗಅಗ್ರಹರೂಪವಾದ್ದರಿಂದ ಇದನ್ನು ಶಾಬ್ದಬೋಧಕ್ಕೆ ಕಾರಣವೆಂದು ಹೇಳಿದರೆ ಪ್ರಾಮಾಣ್ಯವು ಪರತಃ ಎಂದು ಹೇಳಬೇಕಾಗುತ್ತದೆ. ಏಕೆಂದರೆ ಈ ಅಸಂಸರ್ಗದ ಅಗ್ರಹವು ಎರಡು ವಿಧ 1) ವಿದ್ಯಮಾನ-ಅಸಂಸರ್ಗ-ಅಗ್ರಹ 2) ಅವಿದ್ಯಮಾನ-ಅಸಂಸರ್ಗ-ಅಗ್ರಹ. ಇವೆರಡರಲ್ಲಿ ವಿದ್ಯಮಾನ-ಅಸಂಸರ್ಗ-ಅಗ್ರಹವು ಭ್ರಮೆಗೆ ಕಾರಣವಾಗುತ್ತದೆ. ಅವಿದ್ಯಮಾನವಾದ ಅಸಸಂರ್ಗವು ಪ್ರಮಾ ಬರಲು ಕಾರಣವಾಗುತ್ತದೆ. 'ಯತ್ ಸಾಮಾನ್ಯಯೋಃ ಕಾರ್ಯಕಾರಣಭಾವಃ ತತ್ ವಿಶೇಷಯೋರಪಿ ಕಾರ್ಯ-ಕಾರಣಭಾವಃ' ಎಂಬ ನಿಯಮ ಇರುವುದರಿಂದ ಯಾವುದೇ ಒಂದು ಪ್ರಮಾವಿಗೂ ಕೂಡ ಅವಿದ್ಯಮಾನವಾದ ಅಸಂಸರ್ಗದ ಅಗ್ರಹವೇ ಕಾರಣವೆಂದು ಹೇಳಬೇಕಾಗುತ್ತದೆ. ಆಗ ಅವಿದ್ಯಮಾನವಾದ ಅಯೋಗ್ಯತಾ-ನಿಶ್ಚಯವಿರಹವು ಶಾಬ್ದಪ್ರಮಾವನ್ನು ಕುರಿತು ಅನುಗತವಾದ ಗುಣವೆಂದು ಹೇಳಿದಂತಾಯಿತು. 'ವಹ್ನಿನಾ ಸಿಂಚತಿ' ಎಂಬಲ್ಲಿ ಯೋಗ್ಯತಾ ಇಲ್ಲವೆಂಬ ನಿಶ್ಚಯವೇ ಇದೆ. ಆದರೆ 'ಜಲೇನ ಸಿಂಚತಿ' ಎಂಬಲ್ಲಿ ಅಯೋಗ್ಯತೆ ಇಲ್ಲವೆಂಬ ನಿಶ್ಚಯವಿದೆ. ಆದ್ದರಿಂದ ಅವಿದ್ಯಮಾನವಾದ ಅಯೋಗ್ಯತಾನಿಶ್ಚಯವೇ ಇರುವುದರಿಂದ ಅವಿದ್ಯಮಾನವಾದ ಅಯೋಗ್ಯತೆಯ ನಿಶ್ಚಯದ ವಿರಹವು ಇರುವುದಿಲ್ಲ. ಹೀಗೆ ಅವಿದ್ಯಮಾನವಿರಹವು ಶಾಬ್ದಪ್ರಮಾವನ್ನು ಕುರಿತು ಕಾರಣವೆಂದು ಹೇಳಿದರೆ ಗುಣವೆಂದು ಹೇಳಿದಂತಾಯಿತು. ಆದ್ದರಿಂದ ಪ್ರಮಾ-ಮಾತ್ರದಲ್ಲಿಯೂ ಕೂಡ ಅವಿದ್ಯಮಾನವಾದ ಅಸಂಸರ್ಗದ ಅಗ್ರಹವು ಗುಣವೆಂದಾಯಿತು. ಶಾಬ್ದಪ್ರಮಾದಲ್ಲಿ ಅವಿದ್ಯಮಾನವಾದ ಅಯೋಗ್ಯತಾನಿಶ್ಚಯದ ವಿರಹವು ಗುಣವೆಂದು ಹೇಳಿದಂತಾಯಿತು. ಆಗ ಪ್ರಾಮಾಣ್ಯವು ಪರತಃ ಎಂದಂತಾಯಿತು.

ವಿವರಣೆ – ಆಕಾಂಕ್ಷಾ ಮತ್ತು ಆಸತ್ತಿಗಳು ಶಾಬ್ದಬೋಧವನ್ನು ಕುರಿತು ಹೇಗೆ ಅಸಾ-ಧಾರಣಕಾರಣಗಳಾಗಿವೆಯೋ ಅದರಂತೆ ಯೋಗ್ಯತೆಯು ಅಸಾಧಾರಣಕಾರಣ-ವಾಗಿರುವುದಿಲ್ಲ. ಅಯೋಗ್ಯತಾನಿಶ್ಚಯದ ವಿರಹವು ಕೂಡ ಅಸಾಧಾರಣಕಾರಣವಲ್ಲ. ಶಾಬ್ದಬೋಧವು ಸಂಸರ್ಗಗ್ರಹರೂಪವಾಗಿದೆ. ಅಯೋಗ್ಯತಾನಿಶ್ಚಯದ ವಿರಹವು ಅಸಂಸರ್ಗದ ಅಗ್ರಹರೂಪವಾಗಿದೆ. ಇದು ಪ್ರತ್ಯಕ್ಷದಲ್ಲಿಯೂ ಸಮಾನವಾಗಿರುವುದರಿಂದ ಶಾಬ್ದಬೋಧದಲ್ಲಿ ಮಾತ್ರ ಅಯೋಗ್ಯತಾನಿಶ್ಚಯವಿರಹವು ಅಸಾಧಾರಣಕಾರಣವೆಂದು ಹೇಳಲು ಸಾಧ್ಯವಾಗುವುದಿಲ್ಲ.

ಮತ್ತೊಂದು ದೋಷ - ಪ್ರತಿವಾದಿಯು ಪ್ರಯೋಗಿಸಿದ ವಾಕ್ಯದಿಂದ ಅರ್ಥಜ್ಞಾನವೇ ಆಗದಿರಬೇಕಾದಿತು. ಏಕೆಂದರೆ ಪ್ರತಿವಾದಿ ಪ್ರಯೋಗಿಸುವ ವಾಕ್ಯದಲ್ಲಿ ಯೋಗ್ಯತಾ ಇಲ್ಲವೆಂಬ ನಿಶ್ಚಯವೇ ಇರುತ್ತದೆ. ಅಯೋಗ್ಯತಾನಿಶ್ಚಯದ ವಿರಹವು ಇರುವುದಿಲ್ಲ. ಈ ಎಲ್ಲಾ ಆಕ್ಷೇಪಗಳಿಗೆ 'ವಸ್ತುತಸ್ತು' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

## 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಿಂದಲೂ ಶಾಬ್ದಬೋಧ ಬರುತ್ತದೆ

**ತರ್ಕತಾಂಡವ – 'ಅಗ್ನಿನಾ ಸಿಂಚತಿ' ಇತ್ಯಾದಿವಾಕ್ಯಾದಪಿ ಸಾಮಗ್ರೀಸತ್ತ್ವಾತ್ ಅಪ್ರಮಾತ್ವೇನ ನಿಶ್ಚಿತಂ ಪ್ರವೃತ್ತ್ಯಜನಕಂ ಜ್ಞಾನಂ ಜಾಯತ ಏವ । ಕಥಮನ್ಯಥಾ ತನ್ನಿರಾಕರಣಮ್ । ಉಕ್ತಂ ಚ ಸುಧಾಯಾಮ್ 'ಮೇರುಃ ಸರ್ಷಪಃ ಇತ್ಯಾದಿವಾಕ್ಯಾತ್ ಮೇರೋರಪಿ ಸರ್ಷಪತ್ವೇನ ಪ್ರತಿಭಾಸಾತ್' ಇತಿ ।**

ಅನುವಾದ - 'ಅಗ್ನಿನಾ ಸಿಂಚತಿ' ಇತ್ಯಾದಿ ವಾಕ್ಯದಿಂದಲೂ ಕೂಡ ಸಾಮಗ್ರಿ ಇರುವ ಕಾರಣ ಶಾಬ್ದಬೋಧ ಬರುವುದು ಅನುಭವಸಿದ್ಧವೇ ಆಗಿದೆ. ಈ ವಾಕ್ಯವು ಅಪ್ರಮಾ ಎಂದು ನಿಶ್ಚಯ-ವಾಗಿದೆ. ಆದರೂ ಕೂಡ ಪ್ರವೃತ್ತಿಗೆ ಅಜನಕವಾದ ಶಾಬ್ದಬೋಧವು ಬಂದೇ ಬರುತ್ತದೆ. ಹೀಗೊಪ್ಪದಿದ್ದರೆ. ಅಗ್ನಿಯಲ್ಲಿ ಸೇಕಕರಣತ್ವವು ಇಲ್ಲವೆಂಬ ನಿರಾಕರಣೆಯನ್ನು ಮಾಡಲು ಹೇಗೆ ಸಾಧ್ಯವಾಗುತ್ತದೆ. ನ್ಯಾಯಸುಧೆಯಲ್ಲಿಯೂ ಕೂಡ 'ಮೇರುಃ ಸರ್ಷಪಃ ಇತ್ಯಾದಿ ವಾಕ್ಯಾತ್ ಮೇರೋರಪಿ ಸರ್ಷಪತ್ವೇನ ಪ್ರತಿಭಾಸಾತ್' ಇತ್ಯಾದಿ ವಾಕ್ಯದಿಂದಲೂ ಕೂಡ ಮೇರುವಿನಲ್ಲೂ ಕೂಡ 'ಸರ್ಷಪತ್ವದ' ಅಭಾವ ಬರುವುದು ಅನುಭವಸಿದ್ಧವಾಗಿದೆ ಎಂದು ಹೇಳಿರುತ್ತಾರೆ.

**ನ್ಯಾಯದೀಪ – ಕುತ ಇತ್ಯತೋ ವಿಪಕ್ಷೇ ಬಾಧಕಮಾಹ – ತಥಾತ್ವೇ ಹೀತಿ ॥**
**'ಅಯೋಗ್ಯತಾನಿಶ್ಚಯವಿರಹಸ್ಯ ಶಾಬ್ದಧೀಹೇತುತ್ವೇ' ಇತ್ಯರ್ಥಃ ।**

ಅನುವಾದ- ಏಕೆ ? ಎಂಬ ಪ್ರಶ್ನೆಗೆ ವಿಪಕ್ಷದಲ್ಲಿ ಬಾಧಕವನ್ನು 'ತಥಾತ್ವೇ ಹಿ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಅಯೋಗ್ಯತಾನಿಶ್ಚಯವಿರಹವು ಶಾಬ್ದಬೋಧವನ್ನು ಕುರಿತು ಕಾರಣ ಎಂದಾದರೆ ಎಂದರ್ಥ.

## ವಾದಕಥೆಯು ಕಿವುಡರ ಜಗಳ ಆದೀತು

**ನ್ಯಾಯದೀಪ – 'ಕಥಾ' ಇತ್ಯನುವಾದಃ । 'ಬದಿರಕಲಹಃ' ಇತಿ ವಿಧಿಃ । ಪ್ರತಿವಾದಿವಾಕ್ಯಾತ್ ಪದಾರ್ಥೋಪಸ್ಥಿತೌ ಮಾನಸಃ ಸಂಸರ್ಗಬೋಧಃ ಇತಿ ತು ಶಬ್ದಕರಣಕತ್ವಾನುಭವವಿರುದ್ಧಮ್ । ಅನ್ಯಥಾ ಆಪ್ತವಾಕ್ಯಸ್ಥಲೇಪಿ ಏವಂ ಸು-ವಚತ್ವೇನ ಶಬ್ದಪ್ರಾಮಾಣ್ಯಂ ದತ್ತಜಲಾಂಜಲಿ ಸ್ಯಾದಿತಿ ಭಾವಃ ।**

ಅನುವಾದ - 'ಕಥಾ .ಬದಿರಕಲಹಃ ಸ್ಯಾತ್' ಎಂದು ಗ್ರಂಥದಲ್ಲಿದೆ. 'ಕಥಾ' ಎಂಬುದು ಅನು-ವಾದವಾಗಿದೆ. 'ಬದಿರಕಲಹ' ಎಂಬುದು ವಿಧಿಯಾಗಿದೆ. 'ಕಥೆಯು ಕಿವುಡರ ಜಗಳವಾಗಬೇಕಾದೀತು' ಎಂಬುದು ಇದರ ಅಭಿಪ್ರಾಯ.

ಪ್ರತಿವಾದಿಯ ವಾಕ್ಯದಿಂದ ಪದಾರ್ಥಗಳ ಉಪಸ್ಥಿತಿ ಮಾತ್ರ ಬರುತ್ತದೆ. ಮನಸ್ಸಿನಿಂದ ಸಂಸರ್ಗ-ಬೋಧವು ಬರುತ್ತದೆಂಬುದು ಅನುಭವವಿರುದ್ಧವಾಗಿದೆ. ಸಂಸರ್ಗಬೋಧಕ್ಕೆ ಶಬ್ದವೇ ಕರಣವೆಂಬುದು ಅನುಭವಸಿದ್ಧವಾಗಿದೆ. ಇದನ್ನು ಬಿಟ್ಟಂತಾಗುತ್ತದೆ. ಆಪ್ತವಾಕ್ಯಸ್ಥಳದಲ್ಲಿಯೂ ಕೂಡ ವಾಕ್ಯದಿಂದ ಪದಾರ್ಥಗಳ ಉಪಸ್ಥಿತಿ ಮಾತ್ರ ಬಂದು ಸಂಸರ್ಗಬೋಧವು ಮನಸ್ಸಿನಿಂದ ಬರುತ್ತದೆಂದು ಒಪ್ಪಬಹು-ದಾದ್ದರಿಂದ ಶಬ್ದಪ್ರಾಮಾಣ್ಯಕ್ಕೆ ಜಲಾಂಜಲಿಯನ್ನು ಬಿಟ್ಟಂತಾಯಿತು.

> ವಿವರಣೆ - ಅಯೋಗ್ಯತಾನಿಶ್ಚಯದ ವಿರಹವು ಶಾಬ್ದಬೋಧವನ್ನು ಕುರಿತು ಕಾರಣವೆಂದು ಹೇಳಿದರೆ ಕಥೆಯು ಕಿವಿಡರ ಜಗಳ ಆಗಬೇಕಾಗುತ್ತದೆ. ಏಕೆಂದರೆ ವಾದಿ ಹೇಳುವ ವಾಕ್ಯದಲ್ಲಿ ಯೋಗ್ಯತೆಯಿಲ್ಲವೆಂದು ಪ್ರತಿವಾದಿ ತಿಳಿಯುತ್ತಾನೆ. ಪ್ರತಿವಾದಿ ಹೇಳುವ ವಾಕ್ಯದಲ್ಲಿ ಯೋಗ್ಯತೆ ಇಲ್ಲವೆಂದು ವಾದಿಯು ತಿಳಿಯುತ್ತಾನೆ. ಆದ್ದರಿಂದ ಶಾಬ್ದಬೋಧ ಬರುವುದಕ್ಕೆ ಉಪಯುಕ್ತವಾದ ಯೋಗ್ಯತಾವಿರಹನಿಶ್ಚಯವು ಉಭಯಪಕ್ಷದಲ್ಲಿಯೂ ಕೂಡ ಇರುವುದಿಲ್ಲ. ಇಬ್ಬರಿಗೂ ಕೂಡ ಶಾಬ್ದಬೋಧವೇ ಬಾರದಿರುವುದರಿಂದ ಕಿವುಡರ ಜಗಳ ಆಗಬೇಕಾಗುತ್ತದೆ ಎಂದು ಅಭಿಪ್ರಾಯ.
>
> ಆಕ್ಷೇಪ - ಪ್ರತಿವಾದಿವಾಕ್ಯದಲ್ಲಿ ಅಯೋಗ್ಯತಾನಿಶ್ಚಯ ಇದ್ದರೂ ಕೂಡ ಶಾಬ್ದಬೋಧ ಬರುತ್ತದೆ. ಹೇಗೆಂದರೆ ಪ್ರತಿವಾದಿ ವಾಕ್ಯದಿಂದ ಪದಾರ್ಥಗಳ ಉಪಸ್ಥಿತಿಮಾತ್ರ ಉಂಟಾ-ಗುತ್ತದೆ. ಅವುಗಳ ಸಂಸರ್ಗಬೋಧವು ಮಾನಸವಾಗಿ ಬರುತ್ತದೆ; ಹೊರತು ಪ್ರತಿವಾದಿ

ಮಾತಿನಿಂದ ನೇರವಾಗಿ ಬರುವುದಿಲ್ಲ. ಆದ್ದರಿಂದ ಬದಿರಕಲಹದ ಪ್ರಸಂಗವು ಹೇಗೆ ಬರುತ್ತದೆ ?

ಸಮಾಧಾನ - ಇದು ಅನುಭವವಿರುದ್ಧವಾಗಿದೆ. ಪ್ರತಿವಾದಿಯ ವಾಕ್ಯದಿಂದ ಕೇವಲ ಪದಾರ್ಥಗಳ ಉಪಸ್ಥಿತಿ ಒಂದು ಸಂಸರ್ಗಬೋಧವು ಬರುವುದಿಲ್ಲವೆಂಬುದು ಪ್ರತಿ-ಯೊಬ್ಬರ ಅನುಭವಕ್ಕೆ ವಿರುದ್ಧವಾಗಿದೆ. ಮತ್ತು ಆಪ್ತವಾಕ್ಯಸ್ಥಳದಲ್ಲಿ ಕೂಡ ಕೇವಲ ಪದಾರ್ಥಗಳ ಉಪಸ್ಥಿತಿ ಮಾತ್ರ ಬರುತ್ತದೆ ಎಂದು ಒಪ್ಪಿ ಸಂಸರ್ಗಬೋಧವು ಮನಸ್ಸಿನಿಂದ ಬರುತ್ತದೆಂದು ಹೇಳಬೇಕಾಗುತ್ತದೆ. ಪ್ರತ್ಯಕ್ಷ ಒಂದೇ ಪ್ರಮಾಣವಾಗುತ್ತದೆ. ಶಬ್ದವೆಂಬುದು ಪ್ರಮಾಣವೇ ಅಲ್ಲವೆಂದಾಗಬೇಕಾಗುತ್ತದೆ. ಆಗ ಶಬ್ದಪ್ರಾಮಾಣ್ಯಕ್ಕೆ ನೀರು ಬಿಟ್ಟಂತಾ-ಯಿತು.

## ಯೋಗ್ಯತಾಜ್ಞಾನವು ಶಾಬ್ದಜ್ಞಾನಕ್ಕೆ ಕಾರಣವಲ್ಲ

**ತರ್ಕತಾಂಡವ – ಏತೇನ 'ಸಂಶಯಸಾಧಾರಣಂ ಯೋಗ್ಯತಾಜ್ಞಾನಂ ಶಾಬ್ದಧೀ-ಹೇತುಃ' ಇತಿ, 'ಯೋಗ್ಯತಾಭ್ರಮಃ ಶಾಬ್ದಭ್ರಮಹೇತುಃ' ಇತಿ ಚ ನಿರಸ್ತಮ್ ।**

ಅನುವಾದ - ಅಯೋಗ್ಯತಾನಿಶ್ಚಯದ ವಿರಹವು ಶಾಬ್ದಬೋಧಕ್ಕೆ ಕಾರಣವಲ್ಲವೆಂದು ಸಮರ್ಥನೆ ಮಾಡಿದ್ದರಿಂದಲೇ ತಾರ್ಕಿಕರು ಹೇಳುವ ಸಂಸರ್ಗಸಾಧಾರಣವಾದ ಯೋಗ್ಯತಾಜ್ಞಾನವು ಶಾಬ್ದಬೋಧಕ್ಕೆ ಕಾರಣವೆಂಬ ಪಕ್ಷವನ್ನು ಹಾಗೂ ಯೋಗ್ಯತಾಭ್ರಮವು ಶಾಬ್ದಭ್ರಮಕ್ಕೆ ಕಾರಣವೆಂಬ ಪಕ್ಷವನ್ನು ನಿರಾಕರಣೆ ಮಾಡಿದಂತಾಯಿತು.

ವಿವರಣೆ - ಯೋಗ್ಯತಾಜ್ಞಾನವು ಪ್ರಮಾ, ಭ್ರಮಾ ಹಾಗೂ ಸಂಶಯ ಈ ಮೂರರಲ್ಲಿ ಸಾಧಾರಣವಾಗಿದೆ. ಇಂಥ ಯೋಗ್ಯತಾಜ್ಞಾನವನ್ನು ತಾರ್ಕಿಕರು ಸಂಶಯಾತ್ಮಕವಾದ ಹಾಗೂ ಭ್ರಮಾತ್ಮಕವಾದ ಮತ್ತು ಪ್ರಮಾತ್ಮಕವಾದ ಮೂರುವಿಧ ಶಾಬ್ದಬೋಧಗಳಿಗೂ ಕಾರಣವೆನ್ನುತ್ತಾರೆ. ಮತ್ತು ಯೋಗ್ಯತಾಭ್ರಮದಿಂದ ಶಾಬ್ದಬೋಧವು ಕೂಡ ಭ್ರಮಾತ್ಮಕ-ವಾಗಿಯೇ ಬರುತ್ತದೆನ್ನುತ್ತಾರೆ. ಈ ಪಕ್ಷವನ್ನು ಈಗ ನಿರಾಕರಣೆ ಮಾಡಿದಂತಾಯಿತು ಎಂದಭಿಪ್ರಾಯ.

## ಯೋಗ್ಯತಾವಿಲ್ಲವೆಂಬ ನಿಶ್ಚಯವಿದ್ದಾಗಲೂ ಶಾಬ್ದಬೋಧ ಬರುತ್ತದೆ

**ತರ್ಕತಾಂಡವ– ಅಯೋಗ್ಯತ್ವನಿಶ್ಚಯೇಽಪಿ ಶಾಬ್ದಧೀದರ್ಶನಾತ್ । ದೃಶ್ಯತೇ ಚ ಪರೋಕ್ತಯೋಗ್ಯತಾಸಂದೇಹಾಭಾವೇಪಿ 'ಗೇಹೇ ಘಟಃ' ಇತಿ ವಾಕ್ಯಾತ್ ಝಟಿತಿ ಸಂಸರ್ಗಧೀಃ । 'ಪರೋಕ್ತಯೋಗ್ಯತಾ ವಾ ತತ್ಪ್ರಮಾ ವಾ ಶಾಬ್ದಪ್ರಮಾಯಾಂ ಹೇತುಃ' ಇತಿ ತು ಪ್ರಾಮಾಣ್ಯಸ್ವತಸ್ತ್ವೇ ನಿರಸ್ತಮ್ ॥**

ಅನುವಾದ - ಯೋಗ್ಯತೆ ಇಲ್ಲವೆಂಬ ನಿಶ್ಚಯವಿದ್ದಾಗಲೂ ಶಾಬ್ದಬೋಧ ಬರುವುದು ಕಂಡಿದೆ. ಪರವಾದಿಯು 'ಏಕಪದಾರ್ಥಸಂಸರ್ಗ' ಇತ್ಯಾದಿಯಾಗಿ ಯಾವ ಯೋಗ್ಯತೆಯನ್ನು ಹೇಳುತ್ತಾನೋ ಅಂಥ ಯೋಗ್ಯತೆಯ ಸಂದೇಹವಿಲ್ಲದಿದ್ದರೂ ಕೂಡ 'ಗೇಹೇ ಘಟಃ' ಎಂಬ ವಾಕ್ಯವನ್ನು ಕೇಳಿದಾಗ ಕೂಡಲೇ ಸಂಸರ್ಗಜ್ಞಾನ ಬರುವುದು ಅನುಭವಸಿದ್ಧವಾಗಿದೆ. ಪರವಾದಿಯು ಹೇಳುತ್ತಿರುವ ಯೋಗ್ಯತೆಯಾಗಲಿ ಅದರ ಪ್ರಮಾವಾಗಲಿ ಶಾಬ್ದಪ್ರಮಾವನ್ನು ಕುರಿತು ಹೇತುವೆಂಬ ಪಕ್ಷವನ್ನು ಪ್ರಾಮಾಣ್ಯಸ್ವತಸ್ತ್ವ ಪ್ರಕರಣದಲ್ಲಿಯೇ ನಿರಾಕರಣೆ ಮಾಡಿದ್ದಾಗಿದೆ.

## ಅಯೋಗ್ಯತಾನಿಶ್ಚಯವಿರಹವನ್ನು ಕಾರಣವೆಂದಾಗ ಯಾವುದೇ ಬಾಧಕವಿಲ್ಲ

**ನ್ಯಾಯದೀಪ– ತರ್ಹಿ 'ಅಗ್ನಿನಾ' ಇತ್ಯಾದಿವಾಕ್ಯಾದಪಿ ಅರ್ಥಧೀಃ ಸ್ಯಾತ್ ತತಶ್ಚ ಪ್ರವರ್ತೇತಾಪಿ ಪುರುಷ ಇತ್ಯತ ಆಹ – ಅಗ್ನಿನೇತಿ ॥ ಸಾಮಗ್ರೀತಿ ॥ ಆಕಾಂಕ್ಷಾಸತ್ತಿರೂಪಸಾಮಗ್ರೀಸತ್ತ್ವಾತ್ ಜ್ಞಾನಂ ಜಾಯತ ಇತ್ಯನ್ವಯಃ । ಅಪ್ರಾಮಾಣ್ಯಾನಿಶ್ಚಾಯಕಬಾಧಾವತಾರರೂಪಸಾಮಗ್ರೀಸತ್ತ್ವಾತ್ ನಿಶ್ಚಿತಾ । 'ಪ್ರಾಮಾಣ್ಯಮ್' ಇತಿ ನಾನ್ವಯಃ । ಅತ ಏವ ಪ್ರವೃತ್ತ್ಯಜನಕಮಿತ್ಯರ್ಥಃ ।**

ಅನುವಾದ - ಅಯೋಗ್ಯತಾನಿಶ್ಚಯದ ವಿರಹವು ಕೂಡ ಶಾಬ್ದಬೋಧಕ್ಕೆ ಕಾರಣವಲ್ಲವೆಂದು ಹೇಳಿದರೆ 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಿಂದಲೂ ಕೂಡ ಶಾಬ್ದಬೋಧವು ಬರಬೇಕಾದೀತು. ಆದ್ದರಿಂದ ಅಗ್ನಿಯಲ್ಲಿ ಸೇಚನಕರಣ ಮಾಡಲು ಪ್ರವೃತ್ತಿಯನ್ನು ಕೂಡ ಪುರುಷನು ಮಾಡಬೇಕಾದೀತು. ಈ ಆಕ್ಷೇಪಕ್ಕೆ 'ಅಗ್ನಿನಾ ಸಿಂಚತಿ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಆಕಾಂಕ್ಷಾ , ಆಸತ್ತಿರೂಪವಾದ

ಸಾಮಗ್ರಿ ಬರುತ್ತದೆಂದು 'ಸಾಮಗ್ರೀಸತ್ವಾತ್' ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ. ಇಲ್ಲಿ 'ಸಾಮಗ್ರೀ-ಸತ್ವಾತ್' ಎಂಬುದಕ್ಕೆ 'ಜ್ಞಾನಂ ಜಾಯತೇ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು.

ಅಪ್ರಾಮಾಣ್ಯನಿಶ್ಚಾಯಕವಾದ ಬಾಧಾವತಾರವೆಂಬ ಸಾಮಗ್ರೀ ಇರುವುದರಿಂದ ಅಪ್ರಾಮಾಣ್ಯವು ನಿಶ್ಚಿತವೇ ಆಗಿದೆ. ಹೀಗೆ 'ಸಾಮಗ್ರೀಸತ್ವಾತ್' ಎಂಬುದಕ್ಕೆ ಆಕಾಂಕ್ಷಾ ಆಸತ್ತಿರೂಪವಾದ ಸಾಮಗ್ರಿ ಇರುವುದರಿಂದ ಎಂಬುದು ಮೊದಲನೆಯ ವ್ಯಾಖ್ಯಾನ. ಅಪ್ರಾಮಾಣ್ಯನಿಶ್ಚಾಯಕಬಾಧಾವತಾರವೆಂಬ ಸಾಮಗ್ರಿ ಇರುವುದರಿಂದ ಎಂಬುದು ಎರಡನೆಯ ವ್ಯಾಖ್ಯಾನ. ಮೊದಲನೆಯ ಪಕ್ಷದಲ್ಲಿ 'ಜ್ಞಾನಂ ಜಾಯತೇ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಎರಡನೆಯ ಪಕ್ಷದಲ್ಲಿ 'ಸಾಮಗ್ರೀ ಸತ್ವಾತ್' ಎಂಬುದಕ್ಕೆ 'ನಿಶ್ಚಿತಾಪ್ರಾಮಾಣ್ಯಂ' ಎಂಬುದರಲ್ಲಿ ಅನ್ವಯವನ್ನು ತಿಳಿಯಬೇಕು. ಅಪ್ರಾಮಾಣ್ಯವು ನಿಶ್ಚಿತವಾಗಿರುವುದರಿಂದಲೇ ಪ್ರವೃತ್ತಿಯು ಹುಟ್ಟುವುದಿಲ್ಲ. ಎಂಬುದಾಗಿ 'ಅಪ್ರಮಾತ್ವೇನ ನಿಶ್ಚಿತಂ' ಎಂಬುದನ್ನು ಹೇತುವನ್ನಾಗಿ ತಿಳಿದು 'ಪ್ರವೃತ್ತಿಜನಕಂ ಜ್ಞಾನಂ ಜಾಯತೇ ಏವ' ಎಂಬುದಾಗಿ ಅನ್ವಯವನ್ನು ಈ ಪಕ್ಷದಲ್ಲಿ ತಿಳಿಯಬೇಕು.

> ವಿವರಣೆ - ಅಯೋಗ್ಯತಾನಿಶ್ಚಯವಿರಹವೂ ಕೂಡ ಶಾಬ್ದಬೋಧಕ್ಕೆ ಕಾರಣವಲ್ಲವೆಂದರೆ 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಿಂದಲೂ ಕೂಡ ಶಾಬ್ದಬೋಧವು ಬರಬೇಕಾದೀತು. ಅನಂತರ ಅಗ್ನಿಯಿಂದ ಸೇಚನಕರಣ ಮಾಡಲು ಪ್ರವೃತ್ತಿಯನ್ನು ಕೂಡ ಮಾಡಬೇಕಾ-ದೀತು.
>
> ಈ ಆಕ್ಷೇಪಕ್ಕೆ ಗ್ರಂಥದಲ್ಲಿ 'ಅಗ್ನಿನಾ ಸಿಂಚತಿ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. 'ಅಗ್ನಿನಾ ಸಿಂಚತಿ' ಎಂಬ ವಾಕ್ಯವನ್ನು ಕೇಳಿದಾಗ ಆಕಾಂಕ್ಷೆ ಮತ್ತು ಆಸತ್ತಿಗಳು ಇರುವುದರಿಂದ ಶಾಬ್ದಬೋಧವು ಬಂದೇ ಬರುತ್ತದೆ. ಆದರೆ ಪ್ರವೃತ್ತಿ ಉಂಟಾಗುವುದಿಲ್ಲ. ಏಕೆಂದರೆ ಶಾಬ್ದಬೋಧ ಬರುವ ಕಾಲದಲ್ಲಿಯೇ ಅಪ್ರಾಮಾಣ್ಯನಿಶ್ಚಾಯಕವಾದ ಬಾಧಜ್ಞಾನವಿದೆ. ಆದ್ದರಿಂದ ಪ್ರವೃತ್ತಿಯು ಉಂಟಾಗುವುದಿಲ್ಲ.

**ನ್ಯಾಯದೀಪ – ಉಕ್ತಂ ಚೇತಿ ।। ಜಿಜ್ಞಾಸಾಧಿಕರಣೇ – 'ವಿಜ್ಞಾತಸ್ಯಾನ್ಯಥಾ ಸಮ್ಯಗ್ ವಿಜ್ಞಾನಂ ಹ್ಯೇವ ತನ್ಮತಮ್' ಇತ್ಯೇತದ್ ವ್ಯಾಖ್ಯಾಯಾಮ್ ಅಖ್ಯಾತಿ-ಪಕ್ಷಖಂಡನಾವಸರೇ ಉಕ್ತಮ್ ಇತ್ಯರ್ಥಃ ।**

ಅನುವಾದ - 'ಉಕ್ತಂ ಚ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಜಿಜ್ಞಾಸಾಧಿಕರಣದಲ್ಲಿ 'ವಿಜ್ಞಾತಸ್ಯ ಅನ್ಯಥಾ ಸಮ್ಯಕ್ ವಿಜ್ಞಾನಂ ಹ್ಯೇವ ತನ್ಮತಂ' ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ಅಖ್ಯಾತಿಪಕ್ಷದ ನಿರಾಕರಣೆಯ ಸಂದರ್ಭದಲ್ಲಿ ವಿವರಿಸಲಾಗಿದೆ ಎಂದರ್ಥ.

**ನ್ಯಾಯದೀಪ – ಯೋಗ್ಯತಾಜ್ಞಾನಸ್ಯ ಶಾಬ್ದಜ್ಞಾನವ್ಯತಿರೇಕವ್ಯಭಿಚಾರಮಾಹ – ಅಯೋಗ್ಯತ್ವೇತಿ ॥**

ಅನುವಾದ - ಯೋಗ್ಯತಾಜ್ಞಾನಕ್ಕೆ ಶಾಬ್ದಜ್ಞಾನದಿಂದ ವ್ಯತಿರೇಕವ್ಯಭಿಚಾರವನ್ನು 'ಅಯೋಗ್ಯತ್ವೇ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**ನ್ಯಾಯದೀಪ – ಯೋಗ್ಯತಾಸಂದೇಹಸ್ಯಾಪಿ ವ್ಯತಿರೇಕವ್ಯಭಿಚಾರಮಾಹ – ದೃಶ್ಯತೇ ಚೇತಿ ॥ ಪರೋಕ್ತೇತಿ ॥ 'ಪದಾರ್ಥಸಂಸರ್ಗ' ಇತ್ಯಾದಿನಾ ಪರೋಕ್ತೇ-ತ್ಯರ್ಥಃ ॥**

ಅನುವಾದ - ಯೋಗ್ಯತಾಸಂದೇಹಕ್ಕೂ ವ್ಯತಿರೇಕವ್ಯಭಿಚಾರವನ್ನು 'ದೃಶ್ಯತೇ ಚ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ಏಕಪದಾರ್ಥಸಂಸರ್ಗ' ಮುಂತಾದ ವಾಕ್ಯದಿಂದ ಪರಕೀಯರು ಹೇಳಿದ ಎಂಬುದು 'ಪರೋಕ್ತ' ಶಬ್ದದ ಅರ್ಥ.

## ಪರರ ಯೋಗ್ಯತೆಯು ಕಾರಣವಲ್ಲವೆಂಬುದನ್ನು ಪ್ರಾಮಾಣ್ಯಸ್ವತಸ್ತ್ವ ಪ್ರಕರಣದಲ್ಲಿ ನಿರಾಕರಿಸಲಾಗಿದೆ

**ನ್ಯಾಯದೀಪ – ಯದ್ವಾ ಭವದುಕ್ತಾನ್ವಯಸತ್ತ್ವಾದಿರೂಪಯೋಗ್ಯತಾಜ್ಞಾನಸ್ಯ ಅಹೇತುತ್ವೇಽಪಿ ಪರೋಕ್ತಯೋಗ್ಯತಾಜ್ಞಾನಸ್ಯ ತತ್ಪ್ರಮಾಯಾಶ್ಚ ಶಾಬ್ದಭ್ರಮತ್ವ-ಜ್ಞಾನೇ ತತ್ಪ್ರಮಯೋಃ ಸ್ಯಾದಿತ್ಯತ ಆಹ – ದೃಶ್ಯತೇ ಚೇತ್ಯಾದಿನಾ ॥ ಪ್ರಾಮಾಣ್ಯ-ಸ್ವತಸ್ತ್ವ ಇತಿ ॥ 'ಪ್ರತ್ಯಕ್ಷಾದಿಪ್ರಮಾಸ್ವನುಗತಹೇತುತ್ವಭಂಗೇ' ಇತ್ಯರ್ಥಃ ।**

ಅನುವಾದ - ಅಥವಾ ತತ್ವವಾದಿಗಳು ಹೇಳಲ್ಪಟ್ಟ ಅನ್ವಯಸತ್ವಾದಿರೂಪವಾದ ಯೋಗ್ಯತಾಜ್ಞಾನವು

ಶಾಬ್ದಬೋಧಕ್ಕೆ ಕಾರಣವಾಗುವುದು ಬೇಡ. ತಾರ್ಕಿಕರು ಹೇಳುವ ಅನ್ಯಥಾಜ್ಞಾನವಾಗಲಿ ಯೋಗ್ಯತೆಯ ಪ್ರಮಾವಾಗಲಿ ಶಾಬ್ದಜ್ಞಾನಕ್ಕೆ ಅಥವಾ ಶಾಬ್ದಪ್ರಮಾವಿಗೆ ಕಾರಣವಾಗಬಹುದಲ್ಲವೇ? ಈ ಆಕ್ಷೇಪಕ್ಕೆ 'ದೃಶ್ಯತೇ ಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಶಾಬ್ದಪ್ರಮಾವನ್ನು ಕುರಿತು ಯೋಗ್ಯತಾಪ್ರಮಾ ಎಂಬುದು ಕಾರಣವಾಗಿದೆ. ಅಥವಾ ಯೋಗ್ಯತೆಯು ಸ್ವರೂಪಸತ್ತಾಗಿ ಕಾರಣವಾಗಿದೆ ಎಂಬ ವಿಷಯವನ್ನು 'ಪ್ರತ್ಯಕ್ಷಾದಿಪ್ರಮಾಸು ಅನುಗತಹೇತುತ್ವಭಂಗಃ' ಪ್ರಕರಣದಲ್ಲಿ ನಿರಾಕರಣೆ ಮಾಡಿದ್ದಾಗಿದೆ.

## ಅತ್ಯಂತಾಭಾವಪ್ರತಿಯೋಗಿಯು ಅಪ್ರಾಮಾಣಿಕ

**ತರ್ಕತಾಂಡವಮ್ - ನನು ಪ್ರಕೃತಪ್ರಮಾಣವಿರೋಧರೂಪಪ್ರತಿಯೋಗಿನಃ ಅಪ್ರಾಮಾಣಿಕತ್ವಾತ್ ತದಭಾವಃ ಕಥಂ ಪ್ರಾಮಾಣಿಕಃ ಸ್ಯಾತ್? ಇತಿ ಚೇತ್ ಕಾऽತ್ರ ಕಥಂತಾ? ಪ್ರತಿಯೋಗ್ಯಪ್ರಾಮಾಣಿಕತ್ವಸ್ಯ ಅಭಾವಪ್ರಮಾಣಿಕತ್ವಂ ಪ್ರತ್ಯೇವ ಪ್ರಯೋಜಕತಾಯಾಃ ಶುಕ್ತಿರೂಪ್ಯತಾದಾತ್ಮ್ಯಾದೌ ದರ್ಶನಾತ್ ।**

ಅನುವಾದ - ಪ್ರಕೃತವಾದ ಪ್ರಮಾಣವಿರೋಧವೆಂಬ ಪ್ರತಿಯೋಗಿಯು ಅಪ್ರಾಮಾಣಿಕವಾಗಿರುವುದರಿಂದ ತದಭಾವರೂಪವಾದ ಯೋಗ್ಯತೆಯು ಹೇಗೆ ಪ್ರಾಮಾಣಿಕವಾಗುತ್ತದೆ?

ಈ ಆಕ್ಷೇಪವೇ ತಪ್ಪು. ಇಲ್ಲಿ ಪ್ರಶ್ನಿಸುವುದಾದರೂ ಏನಿದೆ? ಪ್ರತಿಯೋಗಿಯ ಅಪ್ರಾಮಾಣಿಕತ್ವವು ತದಭಾವದ ಪ್ರಾಮಾಣಿಕತ್ವಕ್ಕೆ ಉಪಯೋಗವೇ ಆಗುತ್ತದೆ ಹೊರತು ವಿರೋಧವಾಗುವುದಿಲ್ಲ. ಶುಕ್ತಿರಜತದ ತಾದಾತ್ಮ್ಯವು ಅಪ್ರಾಮಾಣಿಕವಾಗಿರುವುದರಿಂದಲೇ ತದಭಾವವು ಪ್ರಾಮಾಣಿಕವಾಗಿರುವುದು ಲೋಕದಲ್ಲಿ ಕಂಡಿದೆ.

> ವಿವರಣೆ - ಆಕ್ಷೇಪ - 'ಪ್ರತೀತಸ್ಯ ಅನ್ವಯಸ್ಯ ಪ್ರಮಾಣವಿರೋಧಾಭಾವಃ ಯೋಗ್ಯತಾ' ಎಂಬುದು ಯೋಗ್ಯತೆಯ ಲಕ್ಷಣ. 'ಜಲೇನ ಸಿಂಚತಿ' ಎಂಬಲ್ಲಿ ಜಲಕ್ಕೂ ಸೇಚನಕ್ಕೂ ಯಾವ ಅನ್ವಯವು ಪ್ರತೀತವಾಗುತ್ತಿದೆಯೋ ಇದಕ್ಕೆ ಯಾವುದೇ ಪ್ರಮಾಣದ

ವಿರೋಧವು ಇರುವುದಿಲ್ಲ. ಆದ್ದರಿಂದ ಇಲ್ಲಿ 'ಪ್ರಮಾಣವಿರೋಧಾಭಾವಃ ಯೋಗ್ಯತಾ' ಎಂದು ಹೇಳಿದಾಗ ಪ್ರತಿಯೋಗಿಯಾದದ್ದು ಪ್ರಮಾಣವಿರೋಧ, ಇದು ಅತ್ಯಂತ ಅಪ್ರಾಮಾಣಿಕವಾಗಿದೆ. ಶಶವಿಷಾಣಾಭಾವಕ್ಕೆ ಪ್ರತಿಯೋಗಿಯಾದ ಶಶವಿಷಾಣವು ಹೇಗೆ ಅಪ್ರಾಮಾಣಿಕವಾಗಿದೆಯೋ ಆದರಂತೆ ಪ್ರಮಾಣವಿರೋಧದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದ ಪ್ರಮಾಣವಿರೋಧವು ಕೂಡ ಅಪ್ರಾಮಾಣಿಕವಾಗಿದೆ. ಹೀಗಿರುವಾಗ ಇದರ ಅಭಾವವನ್ನು ಹೇಳಲು ಹೇಗೆ ಸಾಧ್ಯ? ಪ್ರಾಮಾಣಿಕವಾದ ಪ್ರತಿಯೋಗಿಯ ಅಭಾವವನ್ನು ಹೇಳಬಹುದೇ ಹೊರತು ಅಪ್ರಾಮಾಣಿಕವಾದ ಪ್ರತಿಯೋಗಿಯ ಅಭಾವ-ವನ್ನು ಹೇಳುವುದು ಹೇಗೆ ಸರಿಯಾಗುತ್ತದೆ?

ಸಮಾಧಾನ - ಈ ಪ್ರಶ್ನೆಗೆ ಇಲ್ಲಿ ಅವಕಾಶವೇ ಇಲ್ಲ. ಏಕೆಂದರೆ ಪ್ರತಿಯೋಗಿಯು ಅಪ್ರಾಮಾಣಿಕವಾಗಿರುವುದೇ ತದಭಾವದ ಪ್ರಾಮಾಣಿಕತ್ವಕ್ಕೆ ಪ್ರಯೋಜಕವಾಗುತ್ತದೆ. ಒಂದುವೇಳೆ ಪ್ರತಿಯೋಗಿಯು ಪ್ರಾಮಾಣಿಕವಾದರೆ ಅಭಾವವು ಪ್ರಾಮಾಣಿಕವಾಗಲು ಸಾಧ್ಯವೇ ಇಲ್ಲ. ಶುಕ್ತಿರಜತದ ತಾದಾತ್ಮ್ಯವು ಅಪ್ರಾಮಾಣಿಕವಾಗಿರುವುದರಿಂದಲೇ ಶುಕ್ತಿರಜತದ ತಾದಾತ್ಮ್ಯದ ಅಭಾವವು ಅಪ್ರಾಮಾಣಿಕವಾಗಿದೆ.

ತಾರ್ಕಿಕರು ಶುಕ್ತಿರಜತವನ್ನು ಪ್ರಾಮಾಣಿಕವೆಂದು ಹೇಳುವುದಿಲ್ಲ. ಆದಕ್ಕಾಗಿ ಗ್ರಂಥದಲ್ಲಿ ಶುಕ್ತಿರಜತದ ತಾದಾತ್ಮ್ಯವನ್ನು ಹೇಳಿದ್ದಾರೆ. ತಾರ್ಕಿಕರು ಶುಕ್ತಿರಜತದ ತಾದಾತ್ಮ್ಯವನ್ನು ಪ್ರಾಮಾಣಿಕವೆಂದು ಹೇಳಲು ಸಾಧ್ಯವೇ ಇಲ್ಲ.

## 'ಅನ್ವಯಸತ್ವಂ ಯೋಗ್ಯತಾ' ಎನ್ನಬಹುದೇ ?

**ನ್ಯಾಯದೀಪಃ – ''ನನ್ವಸ್ತ್ವೇವಮ್ 'ಅನ್ವಯಸತ್ವಂ ಯೋಗ್ಯತಾ' ಇತಿ ಪಕ್ಷಃ। 'ಪ್ರಮಾಣಾವಿರೋಧೋ ಯೋಗ್ಯತಾ' ಇತಿ ಪಕ್ಷೋ ನ ಯುಕ್ತಃ। ಯತ್ ಕಿಂಚಿತ್ ಪ್ರಮಾಣಾವಿರೋಧಸ್ಯ ಅತಿಪ್ರಸಂಗಿತಯಾ ಪ್ರಕೃತಗ್ರಾಹ್ಯಸಂಸರ್ಗಾಭಾವಾವಗಾಹಿ ಪ್ರಮಾಣವಿರೋಧ ಏವ ಯೋಗ್ಯತಾ ಇತಿ ವಾಚ್ಯಮ್ । ಸ ಚ ನ ಯುಕ್ತಃ'' ಇತ್ಯಾಶಂಕ್ಯ , ಸಮಾಧತ್ತೇ – ನನ್ವಿತ್ಯಾದಿನಾ ॥**

ಅನುವಾದ - 'ಅನ್ವಯಸತ್ವಮ್ ಯೋಗ್ಯತಾ' ಎಂಬ ಮೊದಲನೆಯ ಪಕ್ಷವನ್ನು ಒಪ್ಪಬಹುದು.

ಇದರಲ್ಲಿ ಯಾವುದೇ ಅನುಪಪತ್ತಿ ಇಲ್ಲ. ಆದರೆ 'ಪ್ರಮಾಣಾವಿರೋಧಃ ಯೋಗ್ಯತಾ' ಎಂಬ ಎರಡನೆಯ ಪಕ್ಷವು ಅಯುಕ್ತವಾಗಿದೆ. ಏಕೆಂದರೆ ಯತ್ಕಿಂಚಿತ್ ಪ್ರಮಾಣದ ಅವಿರೋಧವನ್ನು 'ವಹ್ನಿನಾ ಸಿಂಚತಿ' ಎಂಬಲ್ಲಿಯೂ ಕೂಡ ಹೇಳಬಹುದಾದ್ದರಿಂದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಪ್ರಕೃತವಾದ ವಾಕ್ಯದಲ್ಲಿ ತಿಳಿಯಲ್ಪಡುವ ಯಾವ ಸಂಸರ್ಗವಿದೆಯೋ ಅದರ ಅಭಾವವನ್ನು ತಿಳಿಸುವ ಪ್ರಮಾಣದ ವಿರೋಧವು ಇರಬಾರದು. ಇದನ್ನೇ ಯೋಗ್ಯತೆ ಎಂದು ಹೇಳಬೇಕು. ಆದರೆ ಪ್ರತಿಯೋಗಿ ಅಪ್ರಾಮಾಣಿಕವಾದ ಮೇಲೆ ತದಭಾವರೂಪವಾದ ಯೋಗ್ಯತೆಯನ್ನು ಹೇಳಲು ಹೇಗೆ ಸಾಧ್ಯವಾಗುತ್ತದೆ? ಎಂಬುದಾಗಿ ಆಶಂಕಿಸಿ ಸಮಾಧಾನವನ್ನು 'ನನು' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

> ವಿವರಣೆ - 'ಅನ್ವಯಸತ್ವಂ ಯೋಗ್ಯತಾ' ಎಂಬ ಮೊದಲನೆಯ ಯೋಗ್ಯತಾಲಕ್ಷಣವನ್ನು ಒಪ್ಪೋಣ. ಆದರೆ 'ಪ್ರಮಾಣಾವಿರೋಧಃ ಯೋಗ್ಯತಾ' ಎಂಬ ಎರಡನೆಯ ಪಕ್ಷವು ಅಯುಕ್ತವಾಗಿದೆ. 'ಪ್ರಮಾಣಾವಿರೋಧಃ' ಎಂದರೆ ಯಾವುದೋ ಒಂದು ಪ್ರಮಾಣದ ವಿರೋಧ ಇರಬಾರದೆಂದು ಅರ್ಥೈಸಿದರೆ 'ಅಗ್ನಿನಾ ಸಿಂಚತಿ' ಎಂಬಲ್ಲಿಯೂ ಅತಿಪ್ರಸಂಗ ಬರುತ್ತದೆ. 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಅಗ್ನಿಗೂ ಸೇಚನಕ್ರಿಯೆಗೂ ಇರುವ ಸಂಸರ್ಗಕ್ಕೆ ಯಾವುದೋ ಒಂದು ಜಗತ್ಸತ್ಯತ್ವಪ್ರತಿಪಾದಕವಾದ ಪ್ರಮಾಣದ ವಿರೋಧವು ಬರುವುದಿಲ್ಲ. ಆದ್ದರಿಂದ ಯತ್ಕಿಂಚಿತ್ ಪ್ರಮಾಣವಿರೋಧಾಭಾವವು 'ಅಗ್ನಿನಾ ಸಿಂಚತಿ' ಎಂಬಲ್ಲಿಯೂ ಇರುವುದರಿಂದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಪ್ರಕೃತ ಗ್ರಾಹ್ಯಸಂಸರ್ಗಾಭಾವಾವಗಾಹಿಪ್ರಮಾಣಾವಿರೋಧವನ್ನೇ ಹೇಳಬೇಕು. ಯಾವ ವಾಕ್ಯದಲ್ಲಿ ಯೋಗ್ಯತಾವನ್ನು ವಿಚಾರ ಮಾಡಲಾಗುತ್ತಿದೆಯೊ ಅಂಥ ವಾಕ್ಯದಿಂದ ಬೋಧ್ಯವಾದ ಯಾವ ಸಂಸರ್ಗವಿದೆಯೋ ಅದರ ಅಭಾವವನ್ನು ತಿಳಿಸುವ ಯಾವ ಪ್ರಮಾಣವಿದೆಯೋ ಅದರ ವಿರೋಧವು ಇರುವುದಿಲ್ಲವೆಂಬುದು ಇದರ ಅರ್ಥ. ಪ್ರಕೃತವಾದ ವಾಕ್ಯವೆಂದರೆ 'ಜಲೇನ ಸಿಂಚತಿ' ಎಂಬ ವಾಕ್ಯ. ತದ್ಬೋಧ್ಯವಾದ ಸಂಸರ್ಗವೆಂದರೆ ಜಲದಲ್ಲಿ ಸೇಚನಕರಣದ ಸಂಸರ್ಗ, ಈ ಸಂಸರ್ಗದ ಅಭಾವವನ್ನು ತಿಳಿಸುವ ಯಾವ ಪ್ರಮಾಣವಿದೆಯೋ ಅದರ ವಿರೋಧವು 'ಜಲೇನ ಸಿಂಚತಿ' ಎಂಬ ವಾಕ್ಯಕ್ಕೆ ಇರುವುದಿಲ್ಲ.
>
> 'ಅಗ್ನಿನಾ ಸಿಂಚತಿ' ಎಂಬಲ್ಲಿ ಗ್ರಾಹ್ಯವಾದ ಸಂಸರ್ಗ ಎಂದರೆ ಅಗ್ನಿಯಲ್ಲಿ ಸೇಚನಕರಣದ ಸಂಸರ್ಗ, ಇದರ ಅಭಾವವನ್ನು ತಿಳಿಸುವ ಯಾವ ಪ್ರಮಾಣವಿದೆಯೋ ಅದರ

ವಿರೋಧವು ಇರುವುದಿಲ್ಲ. ಆದ್ದರಿಂದ ಇಲ್ಲಿ 'ಪ್ರಮಾಣವಿರೋಧಾಭಾವಃ ಯೋಗ್ಯತಾ' ಎಂದು ಹೇಳಿದಾಗ ಪ್ರತಿಯೋಗಿಯಾದದ್ದು ಪ್ರಮಾಣವಿರೋಧ, ಇದು ಅತ್ಯಂತ ಅಪ್ರಾಮಾಣಿಕವಾಗಿದೆ. ಶಶವಿಷಾಣಾಭಾವಕ್ಕೆ ಪ್ರತಿಯೋಗಿಯಾದ ಶಶವಿಷಾಣವು ಹೇಗೆ ಅಪ್ರಾಮಾಣಿಕವಾಗಿದೆಯೋ ಅದರಂತೆ ಪ್ರಮಾಣವಿರೋಧದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದ ಪ್ರಮಾಣವಿರೋಧವು ಕೂಡ ಅಪ್ರಾಮಾಣಿಕವಾಗಿದೆ. ಹೀಗಿರುವಾಗ ಇದರ ಅಭಾವವನ್ನು ಹೇಳಲು ಹೇಗೆ ಸಾಧ್ಯ ? ಪ್ರಾಮಾಣಿಕವಾದ ಪ್ರತಿಯೋಗಿಯ ಅಭಾವವನ್ನು ಹೇಳಬಹುದೇ ಹೊರತು ಅಪ್ರಾಮಾಣಿಕವಾದ ಪ್ರತಿಯೋಗಿಯ ಅಭಾವ-ವನ್ನು ಹೇಳುವುದು ಹೇಗೆ ಸರಿಯಾಗುತ್ತದೆ?

ಸಮಾಧಾನ - ಈ ಪ್ರಶ್ನೆಗೆ ಇಲ್ಲಿ ಅವಕಾಶವೇ ಇಲ್ಲ. ಏಕೆಂದರೆ ಪ್ರತಿಯೋಗಿಯು ಅಪ್ರಾಮಾಣಿಕವಾಗಿರುವುದೇ ತದಭಾವದ ಪ್ರಾಮಾಣಿಕತ್ವಕ್ಕೆ ಪ್ರಯೋಜಕವಾಗುತ್ತದೆ. ಒಂದುವೇಳೆ ಪ್ರತಿಯೋಗಿಯು ಪ್ರಾಮಾಣಿಕವಾದರೆ ಅಭಾವವು ಪ್ರಾಮಾಣಿಕವಾಗಲು ಸಾಧ್ಯವೇ ಇಲ್ಲ. ಶುಕ್ತಿರಜತದ ತಾದಾತ್ಮ್ಯವು ಅಪ್ರಾಮಾಣಿಕವಾಗಿರುವುದರಿಂದಲೇ ಶುಕ್ತಿರಜತದ ತಾದಾತ್ಮ್ಯದ ಅಭಾವವು ಅಪ್ರಾಮಾಣಿಕವಾಗಿದೆ.

ತಾರ್ಕಿಕರು ಶುಕ್ತಿರಜತವನ್ನು ಪ್ರಾಮಾಣಿಕವೆಂದು ಹೇಳುವುದಿಲ್ಲ. ಅದಕ್ಕಾಗಿ ಗ್ರಂಥದಲ್ಲಿ ಶುಕ್ತಿರಜತದ ತಾದಾತ್ಮ್ಯವನ್ನು ಹೇಳಿದ್ದಾರೆ. ತಾರ್ಕಿಕರು ಶುಕ್ತಿರಜತದ ತಾದಾತ್ಮ್ಯವನ್ನು ಪ್ರಾಮಾಣಿಕವೆಂದು ಹೇಳಲು ಸಾಧ್ಯವೇ ಇಲ್ಲ.

## 'ಅನ್ವಯಸತ್ವಂ ಯೋಗ್ಯತಾ' ಎನ್ನಬಹುದೇ ?

**ನ್ಯಾಯದೀಪಃ – ''ನನ್ವಸ್ತ್ವೇವಮ್ 'ಅನ್ವಯಸತ್ವಂ ಯೋಗ್ಯತಾ' ಇತಿ ಪಕ್ಷಃ । 'ಪ್ರಮಾಣಾವಿರೋಧೋ ಯೋಗ್ಯತಾ' ಇತಿ ಪಕ್ಷೋ ನ ಯುಕ್ತಃ । ಯತ್ ಕಿಂಚಿತ್ ಪ್ರಮಾಣಾವಿರೋಧಸ್ಯ ಅತಿಪ್ರಸಂಗಿತಯಾ ಪ್ರಕೃತಗ್ರಾಹ್ಯಸಂಸರ್ಗಾಭಾವಾವಗಾಹಿ ಪ್ರಮಾಣವಿರೋಧ ಏವ ಯೋಗ್ಯತಾ ಇತಿ ವಾಚ್ಯಮ್ । ಸ ಚ ನ ಯುಕ್ತಃ'' ಇತ್ಯಾಶಂಕ್ಯ , ಸಮಾಧತ್ತೇ – ನನ್ವಿತ್ಯಾದಿನಾ ॥**

ಅನುವಾದ - 'ಅನ್ವಯಸತ್ವಮ್ ಯೋಗ್ಯತಾ' ಎಂಬ ಮೊದಲನೆಯ ಪಕ್ಷವನ್ನು ಒಪ್ಪಬಹುದು.

ಇದರಲ್ಲಿ ಯಾವುದೇ ಅನುಪಪತ್ತಿ ಇಲ್ಲ. ಆದರೆ 'ಪ್ರಮಾಣಾವಿರೋಧಃ ಯೋಗ್ಯತಾ' ಎಂಬ ಎರಡನೆಯ ಪಕ್ಷವು ಅಯುಕ್ತವಾಗಿದೆ. ಏಕೆಂದರೆ ಯತ್‌ಕಿಂಚಿತ್ ಪ್ರಮಾಣದ ಅವಿರೋಧವನ್ನು 'ವಹ್ನಿನಾ ಸಿಂಚತಿ' ಎಂಬಲ್ಲಿಯೂ ಕೂಡ ಹೇಳಬಹುದಾದ್ದರಿಂದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಪ್ರಕೃತವಾದ ವಾಕ್ಯದಲ್ಲಿ ತಿಳಿಯಲ್ಪಡುವ ಯಾವ ಸಂಸರ್ಗವಿದೆಯೋ ಅದರ ಅಭಾವವನ್ನು ತಿಳಿಸುವ ಪ್ರಮಾಣದ ವಿರೋಧವು ಇರಬಾರದು. ಇದನ್ನೇ ಯೋಗ್ಯತೆ ಎಂದು ಹೇಳಬೇಕು. ಆದರೆ ಪ್ರತಿಯೋಗಿ ಅಪ್ರಾಮಾಣಿಕವಾದ ಮೇಲೆ ತದಭಾವರೂಪವಾದ ಯೋಗ್ಯತೆಯನ್ನು ಹೇಳಲು ಹೇಗೆ ಸಾಧ್ಯವಾಗುತ್ತದೆ? ಎಂಬುದಾಗಿ ಆಶಂಕಿಸಿ ಸಮಾಧಾನವನ್ನು 'ನನು' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ವಿವರಣೆ - 'ಅನ್ವಯಸತ್ವಂ ಯೋಗ್ಯತಾ' ಎಂಬ ಮೊದಲನೆಯ ಯೋಗ್ಯತಾಲಕ್ಷಣವನ್ನು ಒಪ್ಪೋಣ. ಆದರೆ 'ಪ್ರಮಾಣಾವಿರೋಧಃ ಯೋಗ್ಯತಾ' ಎಂಬ ಎರಡನೆಯ ಪಕ್ಷವು ಅಯುಕ್ತವಾಗಿದೆ. 'ಪ್ರಮಾಣಾವಿರೋಧಃ' ಎಂದರೆ ಯಾವುದೋ ಒಂದು ಪ್ರಮಾಣದ ವಿರೋಧ ಇರಬಾರದೆಂದು ಅರ್ಥೈಸಿದರೆ 'ಅಗ್ನಿನಾ ಸಿಂಚತಿ' ಎಂಬಲ್ಲಿಯೂ ಅತಿಪ್ರಸಂಗ ಬರುತ್ತದೆ. 'ಅಗ್ನಿನಾ ಸಿಂಚತಿ' ಎಂಬ ವಾಕ್ಯದಲ್ಲಿ ಅಗ್ನಿಗೂ ಸೇಚನಕ್ರಿಯೆಗೂ ಇರುವ ಸಂಸರ್ಗಕ್ಕೆ ಯಾವುದೋ ಒಂದು ಜಗತ್‌ಸತ್ಯತ್ವಪ್ರತಿಪಾದಕವಾದ ಪ್ರಮಾಣದ ವಿರೋಧವು ಬರುವುದಿಲ್ಲ. ಆದ್ದರಿಂದ ಯತ್‌ಕಿಂಚಿತ್ ಪ್ರಮಾಣವಿರೋಧಾಭಾವವು 'ಅಗ್ನಿನಾ ಸಿಂಚತಿ' ಎಂಬಲ್ಲಿಯೂ ಇರುವುದರಿಂದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಪ್ರಕೃತ ಗ್ರಾಹ್ಯಸಂಸರ್ಗಾಭಾವಾವಗಾಹಿಪ್ರಮಾಣಾವಿರೋಧವನ್ನೇ ಹೇಳಬೇಕು. ಯಾವ ವಾಕ್ಯದಲ್ಲಿ ಯೋಗ್ಯತಾವನ್ನು ವಿಚಾರ ಮಾಡಲಾಗುತ್ತಿದೆಯೊ ಅಂಥ ವಾಕ್ಯದಿಂದ ಬೋಧ್ಯವಾದ ಯಾವ ಸಂಸರ್ಗವಿದೆಯೋ ಅದರ ಅಭಾವವನ್ನು ತಿಳಿಸುವ ಯಾವ ಪ್ರಮಾಣವಿದೆಯೋ ಅದರ ವಿರೋಧವು ಇರುವುದಿಲ್ಲವೆಂಬುದು ಇದರ ಅರ್ಥ. ಪ್ರಕೃತವಾದ ವಾಕ್ಯವೆಂದರೆ 'ಜಲೇನ ಸಿಂಚತಿ' ಎಂಬ ವಾಕ್ಯ. ತದ್‌ಬೋಧ್ಯವಾದ ಸಂಸರ್ಗವೆಂದರೆ ಜಲದಲ್ಲಿ ಸೇಚನಕರಣದ ಸಂಸರ್ಗ, ಈ ಸಂಸರ್ಗದ ಅಭಾವವನ್ನು ತಿಳಿಸುವ ಯಾವ ಪ್ರಮಾಣವಿದೆಯೋ ಅದರ ವಿರೋಧವು 'ಜಲೇನ ಸಿಂಚತಿ' ಎಂಬ ವಾಕ್ಯಕ್ಕೆ ಇರುವುದಿಲ್ಲ.

'ಅಗ್ನಿನಾ ಸಿಂಚತಿ' ಎಂಬಲ್ಲಿ ಗ್ರಾಹ್ಯವಾದ ಸಂಸರ್ಗ ಎಂದರೆ ಅಗ್ನಿಯಲ್ಲಿ ಸೇಚನಕರಣದ ಸಂಸರ್ಗ, ಇದರ ಅಭಾವವನ್ನು ತಿಳಿಸುವ ಯಾವ ಪ್ರಮಾಣವಿದೆಯೋ ಅದರ

ವಿರೋಧವೇ ಇದೆ, ಹೊರತು ಅವಿರೋಧವು ಇರುವುದಿಲ್ಲ. ಆದ್ದರಿಂದ 'ಅಗ್ನಿನಾ ಸಿಂಚತಿ' ಎಂಬಲ್ಲಿ ಯೋಗ್ಯತೆಯು ಇರುವುದಿಲ್ಲ. ಆದ್ದರಿಂದ 'ಪ್ರಮಾಣಾವಿರೋಧಃ ಯೋಗ್ಯತಾ' ಎಂಬುದಕ್ಕೆ ಇದೇ ರೀತಿಯಲ್ಲಿ ವ್ಯಾಖ್ಯಾನವನ್ನು ಮಾಡಬೇಕು. ಹೀಗೆ ಹೇಳಿದಾಗ ಪ್ರತಿಯೋಗಿಯು ಅಪ್ರಾಮಾಣಿಕವಾಗಿರುವುದರಿಂದ ತದಭಾವವನ್ನು ಹೇಳಲು ಹೇಗೆ ಸಾಧ್ಯವಾಗುತ್ತದೆ ?

## 'ಶುಕ್ತಿರೂಪ್ಯತಾದಾತ್ಮ್ಯಾದೌ' ಎಂದೇಕೆ ಹೇಳಿದರು ?

**ನ್ಯಾಯದೀಪ– 'ಜಲೇನ ಸಿಂಚತಿ' ಇತ್ಯಾದೌ ಪ್ರಕೃತಜಲಸಂಸರ್ಗಾ-ಭಾವಾವಗಾಹಿಪ್ರಮಾಣೇ ಇತ್ಯರ್ಥಃ । ತಾದಾತ್ಮ್ಯಸ್ಯ ಅಸತ ಏವ ಸದುಪರಾಗೇಣ ಭ್ರಾಂತೌ ಭಾನಸ್ಯ ಚಿರಂತನಮತೇ ಸ್ವೀಕಾರಾತ್ 'ಶುಕ್ತಿರೂಪ್ಯತಾದಾತ್ಮ್ಯಾದೌ' ಇತ್ಯುಕ್ತಮ್ ।**

ಅನುವಾದ - 'ಜಲೇನ ಸಿಂಚತಿ' ಎಂಬಲ್ಲಿ ಪ್ರಕೃತವಾದ ಜಲಸಂಸರ್ಗದ ಅಭಾವವನ್ನು ತಿಳಿಸುವ ಪ್ರಮಾಣವಿರೋಧರೂಪವಾದ ಪ್ರತಿಯೋಗಿ ಎಂಬರ್ಥವನ್ನು 'ಪ್ರಕೃತಪ್ರಮಾಣ' ಇತ್ಯಾದಿ ಪದಕ್ಕೆ ತಿಳಿಯಬೇಕು.

'ಅಸತ್ತಾದ ಶುಕ್ತಿರಜತದ ತಾದಾತ್ಮ್ಯವೇ ಸತ್ ಪದಾರ್ಥದ ಉಪರಾಗದಿಂದ ಭ್ರಾಂತಿಯಲ್ಲಿ ತೋರುತ್ತದೆಂದು ಪ್ರಾಚೀನತಾರ್ಕಿಕರು ಅಂಗೀಕರಿಸಿದ್ದಾರೆ. ಆದ್ದರಿಂದ ಶುಕ್ತಿರೂಪ್ಯವೆಂದಷ್ಟೇ ಹೇಳದೆ 'ಶುಕ್ತಿ-ರೂಪ್ಯತಾದಾತ್ಮ್ಯಾದೌ' ಎಂದು ಹೇಳಿದ್ದಾರೆ.

## ಅತ್ಯಂತಾಭಾವಪ್ರತಿಯೋಗಿಯು ಎಲ್ಲೆಡೆ ಅಸತ್ತಾಗಿರುತ್ತದೆಂಬ ವಿಚಾರ ನ್ಯಾಯಾಮೃತದಲ್ಲಿ

**ತರ್ಕತಾಂಡವ– ಪ್ರಪಂಚಿತಂ ಚ ಏತತ್ ನ್ಯಾಯಾಮೃತೇ । ಏತದೇವಾಭಿಪ್ರೇತ್ಯ ಉಕ್ತಂ ಪದ್ಧತೌ 'ಪ್ರತೀತಾರ್ಥಸ್ಯ ಪ್ರಮಾಣವಿರೋಧಾಭಾವೋ ಯೋಗ್ಯತಾ । ತತ್ ಪ್ರತಿಪಾದಕತ್ವಾತ್ ಪದಾನ್ಯಪಿ ಯೋಗ್ಯತಾವಂತೀ' ಇತಿ ॥**

ಅನುವಾದ - ಅತ್ಯಂತಾಭಾವಪ್ರತಿಯೋಗಿಯು ಎಲ್ಲೆಡೆಯು ಅತ್ಯಂತ ಅಸತ್ತಾಗಿರುತ್ತದೆ. ಎಂಬುದನ್ನು ನ್ಯಾಯಾಮೃತದ ಪ್ರಥಮಪರಿಚ್ಛೇದದಲ್ಲಿ ವಿಸ್ತರಿಸಲಾಗಿದೆ. ಈ ಎಲ್ಲಾ ಅಭಿಪ್ರಾಯವನ್ನು ಪ್ರಮಾಣಪದ್ಧತಿಯಲ್ಲಿ ಹೀಗೆ ಹೇಳಿದ್ದಾರೆ -

'ಪ್ರತೀತಾರ್ಥಸ್ಯ ಪ್ರಮಾಣವಿರೋಧಾಭಾವಃ ಯೋಗ್ಯತಾ ತತ್ಪ್ರತಿಪಾದಕತ್ವಾತ್ ಪದಾನ್ಯಪಿ ಯೋಗ್ಯತಾವಂತಿ' ವಾಕ್ಯದಿಂದ ಪ್ರತೀತವಾದ ಅರ್ಥಕ್ಕೆ ಪ್ರಮಾಣವಿರೋಧ ಇಲ್ಲದಿರುವುದೇ ಯೋಗ್ಯತಾ ಎನಿಸುತ್ತದೆ. ಅದನ್ನು ಪ್ರತಿಪಾದನೆ ಮಾಡುವುದರಿಂದ ಪದಗಳು ಯೋಗ್ಯತಾವುಳ್ಳವುಗಳೆಂದು ಕರೆಸಿಕೊಳ್ಳುತ್ತವೆ ಎಂದು.

## ಅಸತ್‌ಪದಾರ್ಥದಲ್ಲಿ ಧರ್ಮ ಹೇಳಬಹುದೇ ?

**ನ್ಯಾಯದೀಪ- ನನು ಕಥಮಸತೋ ನಿಃಸ್ವರೂಪಸ್ಯ ಅತ್ಯಂತಾಭಾವಪ್ರತಿಯೋಗಿತ್ವಂ ನಾಮ ಧರ್ಮ ಉಪಪದ್ಯತಾಮ್ ಇತ್ಯತ ಆಹ - ಪ್ರಪಂಚಿತಂ ಚೈತದಿತಿ ॥ 'ಧರ್ಮಿಸತ್ತಾನಿರಪೇಕ್ಷಧರ್ಮತ್ವಾದಿನಾ ಪ್ರಪಂಚಿತಮ್ ಆದ್ಯಪರಿಚ್ಛೇದೇ ಅಸತೋತ್ಯಂತಾಭಾವಪ್ರತಿಯೋಗಿತ್ವಸಮರ್ಥನವಾದೇ' ಇತ್ಯರ್ಥಃ।**

ಅನುವಾದ-ಸ್ವರೂಪರಹಿತವಾದ ಅಸತ್ ಪದಾರ್ಥಕ್ಕೆ ಅತ್ಯಂತಾಭಾವಪ್ರತಿಯೋಗಿತ್ವರೂಪವಾದ ಧರ್ಮವು ಹೇಗೆ ಕೂಡುತ್ತದೆ ? ಎಂಬ ಪ್ರಶ್ನೆಗೆ ಉತ್ತರವನ್ನು 'ಪ್ರಪಂಚಿತಂ ಚೈತತ್' ಎಂಬ ವಾಕ್ಯದಿಂದ ನೀಡಿದ್ದಾರೆ. ಧರ್ಮಿಸತ್ತಾನಿರಪೇಕ್ಷವಾದ ಧರ್ಮತ್ವಾದಿಗಳಿಂದ ಅಸತಃ ಅತ್ಯಂತಾಭಾವಪ್ರತಿಯೋಗಿತ್ವಸಮರ್ಥನವಾದದಲ್ಲಿ ಮೊದಲನೆಯ ಪರಿಚ್ಛೇದದಲ್ಲಿ ವಿಸ್ತಾರ ಮಾಡಲಾಗಿದೆ ಎಂದರ್ಥ.

ವಿವರಣೆ - ಆಕ್ಷೇಪ - 'ಪ್ರತೀತಸ್ಯ ಅನ್ವಯಸ್ಯ ಸತ್ವಂ' ಎಂಬುದಾಗಿ ತತ್ವವಾದಿಗಳು ಯೋಗ್ಯತೆಯ ಲಕ್ಷಣವನ್ನು ಅನ್ವಯಸತ್ವರೂಪವೆಂದು ಹೇಳಿದ್ದೀರಿ. ಈ ಯೋಗ್ಯತೆಯ ಜ್ಞಾನವು ಶಾಬ್ದಬೋಧವನ್ನು ಕುರಿತು ಕಾರಣವಾಗುವುದಿಲ್ಲ. ಆದರೆ ತಾರ್ಕಿಕರು ಹೇಳಿದ ಯೋಗ್ಯತಾಜ್ಞಾನವು ಶಾಬ್ದಬೋಧವನ್ನು ಕುರಿತು ಕಾರಣವಾಗಬಹುದು ಶಾಬ್ದಪ್ರಮಾವನ್ನು ಕುರಿತು ಯೋಗ್ಯತೆಯ ಪ್ರಮಾವೂ ಶಾಬ್ದಭ್ರಮವನ್ನು ಕುರಿತು ಯೋಗ್ಯತೆಯ ಭ್ರಮೆಯು ಕಾರಣವೆಂದು ಹೇಳಿದರೆ ಏನು ತಪ್ಪು ?

ಸಮಾಧಾನ - 'ಗೇಹೇ ಘಟಃ' ಎಂಬ ವಾಕ್ಯವನ್ನು ಕೇಳಿದಾಗ ಮೊದಲು ಸಂಸರ್ಗದ ಜ್ಞಾನವು ಇರುವುದೇ ಇಲ್ಲ. ವಾಕ್ಯ ಕೇಳಿದ ಅನಂತರ ಕೂಡಲೇ ಸಂಸರ್ಗಜ್ಞಾನವು ಬರುತ್ತದೆ. ಇಂಥ ಸ್ಥಳದಲ್ಲಿ ತಾರ್ಕಿಕರು ಹೇಳಿದ ಯೋಗ್ಯತೆಯು ಶಾಬ್ದಬೋಧಕ್ಕೆ ಕಾರಣವೆಂದು ಹೇಳಲು ಸಾಧ್ಯವಾಗುವುದಿಲ್ಲ.

ಆಕ್ಷೇಪ - ಯೋಗ್ಯತಾಜ್ಞಾನವು ಶಾಬ್ದಜ್ಞಾನವನ್ನು ಕುರಿತು ಕಾರಣವೆಂದು ಹೇಳುವುದಿಲ್ಲ ಶಾಬ್ದಪ್ರಮಾವನ್ನು ಕುರಿತು ಯೋಗ್ಯತಾಪ್ರಮಾ ಎಂಬುದು ಕಾರಣವಾಗಿದೆ. ಅಥವಾ ಶಾಬ್ದಪ್ರಮಾವನ್ನು ಕುರಿತು ಯೋಗ್ಯತೆಯು ಸ್ವರೂಪಸತ್ತಾಗಿ ಕಾರಣವಾಗಿದೆ ಎಂದು ಹೇಳಬಹುದಲ್ಲವೆ?

ಸಮಾಧಾನ - ತಾರ್ಕಿಕರು ಹೇಳುವ ಈ ವಿಷಯವನ್ನು ಪ್ರಾಮಾಣ್ಯಸ್ವತಸ್ತ್ವಪ್ರಕರಣದಲ್ಲಿಯೇ ನಿರಾಕರಣೆ ಮಾಡಿದ್ದೇವೆ.

ಪ್ರಮಾಣ್ಯಸ್ವತಸ್ತ್ವಪ್ರಕರಣದಲ್ಲಿ 'ಪ್ರತ್ಯಕ್ಷಾದಿಪ್ರಮಾಸು ಅನುಗತಹೇತುತ್ವಭಂಗಃ' ಎಂಬ ಪ್ರಕರಣದಲ್ಲಿ ಈ ವಿಷಯದ ವಿಸ್ತಾರವಿದೆ.

## ಪ್ರಮಾಣಲಕ್ಷಣಟೀಕೆಯಲ್ಲಿ ಯೋಗ್ಯತಾಲಕ್ಷಣ

**ತರ್ಕತಾಂಡವಮ್ – ಯತ್ತು ''ಪ್ರಮಾಣಲಕ್ಷಣಟೀಕಾಯಾಮ್ ಅನ್ಯೋನ್ಯಾನ್ವಯಯೋಗ್ಯತಾವದರ್ಥಾಭಿಧಾಯಕತ್ವಂ ಯೋಗ್ಯತ್ವಮ್'' ಇತ್ಯುಕ್ತಮ್ । ತನ್ನಿಶ್ಚಿತಾಪ್ರಾಮಾಣ್ಯಕಾತ್ 'ಅಗ್ನಿನಾ ಸಿಂಚತಿ' ಇತ್ಯಾದಿವಾಕ್ಯಾದ್ ವ್ಯಾವೃತ್ತಯೋಗ್ಯತಾನಿರೂಪಣಪರಮ್ । ನ ತು 'ಜಲೇನ ಸಿಂಚತಿ' ಇತ್ಯನಾಪ್ತವಾಕ್ಯವ್ಯಾವೃತ್ತಯೋಗ್ಯತಾನಿರೂಪಣಪರಮ್ । ತದ್ವ್ಯಾವೃತ್ತೇಃ ನಿರ್ದೋಷತ್ವವಿಶೇಷಣೇನೈವ ಸಿದ್ಧೇರಿತಿ ಜ್ಞೇಯಮ್ ।**

ಅನುವಾದ - ಪ್ರಮಾಣಲಕ್ಷಣಟೀಕೆಯಲ್ಲಿ 'ಅನ್ಯೋನ್ಯಾಭಾವಯೋಗ್ಯತಾವದರ್ಥಾಭಿಧಾಯಕತ್ವಮ್ ಯೋಗ್ಯತ್ವಮ್' 'ಪರಸ್ಪರವಾಗಿ ಅನ್ವಯಯೋಗ್ಯತೆಯುಳ್ಳ ಅರ್ಥವನ್ನು ಪ್ರತಿಪಾದನೆ ಮಾಡುವಿಕೆಯೇ

ಯೋಗ್ಯತಾ' ಎಂಬುದಾಗಿ ಲಕ್ಷಣವನ್ನು ಹೇಳಿದ್ದಾರೆ. 'ಅಗ್ನಿನಾ ಸಿಂಚತಿ' ಎಂಬ ನಿಶ್ಚಿತಾ-ಪ್ರಾಮಾಣಿಕವಾಕ್ಯದಲ್ಲಿ ಅತಿಪ್ರಸಂಗವು ಬರುವುದಿಲ್ಲ. ಏಕೆಂದರೆ ಅಗ್ನಿಗೂ ಸೇಚನಕ್ರಿಯೆಗೂ ಅನ್ವಯ-ಯೋಗ್ಯತೆಯೇ ಇರುವುದಿಲ್ಲ. ಆದ್ದರಿಂದ ನಿಶ್ಚಿತಾಪ್ರಾಮಾಣಿಕವಾದ ವಾಕ್ಯದಿಂದ ಈ ಲಕ್ಷಣವು ವ್ಯಾವೃತ್ತವಾಗುತ್ತದೆ. ಆದರೆ 'ಜಲೇನ ಸಿಂಚತಿ' ಎಂಬ ಅನಾಪ್ತವಾಕ್ಯದಿಂದ ವ್ಯಾವೃತ್ತವಾಗುವುದಿಲ್ಲ. ಜಲದಿಂದ ಸೇಚನೆಯನ್ನು ಮಾಡದಿದ್ದಾಗಲೂ ಕೂಡ ಅನಾಪ್ತನು ವಂಚನೆಗಾಗಿ 'ಜಲೇನ ಸಿಂಚತಿ' ಎಂದು ಹೇಳಿದಾಗ ಜಲದಲ್ಲಿ ಹಾಗೂ ಸೇಚನದಲ್ಲಿ ಪರಸ್ಪರ ಅನ್ವಯಯೋಗ್ಯತೆ ಇರುತ್ತದೆ. ಪ್ರಮಾಣ-ಲಕ್ಷಣಟೀಕೆಯಲ್ಲಿ ಹೇಳಲ್ಪಟ್ಟ ಯೋಗ್ಯತಾಲಕ್ಷಣವು ಅನಾಪ್ತವಾಕ್ಯದಲ್ಲಿ ಬರುವುದರಿಂದ ಅತಿಪ್ರಸಂಗ ಬರುತ್ತದಲ್ಲವೆ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ಪ್ರಮಾಣಲಕ್ಷಣಟೀಕೆಯಲ್ಲಿ ನಿಶ್ಚಿತಾ-ಪ್ರಾಮಾಣಿಕವಾದ ವಾಕ್ಯದಿಂದ ವ್ಯಾವೃತ್ತವಾದ ಲಕ್ಷಣವನ್ನು ಹೇಳಿದ್ದಾರೆ ಹೊರತು ಅನಾಪ್ತವಾಕ್ಯದಿಂದ ವ್ಯಾವೃತ್ತವಾದ ಯೋಗ್ಯತೆಯ ಲಕ್ಷಣವನ್ನು ಹೇಳಿರುವುದಿಲ್ಲ. ಅನಾಪ್ತವಾಕ್ಯದಲ್ಲಿ ಯೋಗ್ಯತೆ ಇಲ್ಲ-ವೆಂಬುದು ನಮ್ಮ ಅಭಿಪ್ರಾಯವೇ ಅಲ್ಲ. ಆದರೆ ಇದು ನಿರ್ದುಷ್ಟ ಆಗಮವೆನಿಸುವುದಿಲ್ಲ. ಆದ್ದರಿಂದ 'ನಿರ್ದೋಷಃ ಶಬ್ದಃ ಆಗಮಃ' ಎಂಬಲ್ಲಿ ನಿರ್ದೋಷತ್ವ ವಿಶೇಷಣದಿಂದಲೇ 'ಜಲೇನ ಸಿಂಚತಿ' ಎಂಬ ಅನಾಪ್ತವಾಕ್ಯವು ವ್ಯಾವೃತ್ತವಾಗುತ್ತದೆಂದು ತಿಳಿಯಬೇಕು.

ವಿವರಣೆ- ಶ್ರೀಮಟ್ಟೀಕಾಕೃತ್ಪಾದರು ಪ್ರಮಾಣಲಕ್ಷಣಟೀಕೆಯಲ್ಲಿ 'ಅನ್ಯೋನ್ಯಾಭಾವ-ಯೋಗ್ಯತಾವದರ್ಥಾಭಿಧಾಯಕತ್ವಂ ಯೋಗ್ಯತ್ವಮ್' ಎಂಬುದಾಗಿ ಯೋಗ್ಯತಾ-ಲಕ್ಷಣವನ್ನು ಹೇಳಿದ್ದಾರೆ. ಪದಗಳು ಯಾವ ಅರ್ಥವನ್ನು ಹೇಳುತ್ತವೋ ಅವುಗಳು ಪರಸ್ಪರ ಅನ್ವಯವನ್ನು ಹೊಂದಲು ಯೋಗ್ಯವಾದವುಗಳು ಆಗಿರುತ್ತವೆ. ಇಂಥ ಅರ್ಥವನ್ನು ಪ್ರತಿಪಾದನೆ ಮಾಡುವಿಕೆಯೇ ಯೋಗ್ಯತಾ ಎಂದು ಕರೆಸಿಕೊಳ್ಳುತ್ತದೆಂದು ಹೇಳಿದ್ದಾರೆ. 'ಅಗ್ನಿನಾ ಸಿಂಚತಿ' ಎಂಬಲ್ಲಿ ಅಗ್ನಿ ಎಂಬ ಪದವು ಅಗ್ನಿಯನ್ನು ಹೇಳುತ್ತದೆ. 'ಸಿಂಚತಿ' ಎಂಬ ಪದವು ಸೇಚನವನ್ನು ಹೇಳುತ್ತದೆ. ಅಗ್ನಿ ಹಾಗೂ ಸೇಚನವು ಪರಸ್ಪರ ಅನ್ವಯವನ್ನು ಹೊಂದಲು ಯೋಗ್ಯವಾಗಿರುವುದಿಲ್ಲ. 'ಜಲೇನ ಸಿಂಚತಿ' ಎಂಬಲ್ಲಿ ಜಲ ಎಂಬ ಪದ-ದಿಂದ ತಿಳಿಯುವ ಜಲ ಎಂಬರ್ಥವು 'ಸಿಂಚತಿ' ಎಂಬ ಪದದಿಂದ ತಿಳಿಯುವ 'ಸೇಚನ'ವು ಪರಸ್ಪರ ಅನ್ವಯವನ್ನು ಹೊಂದಲು ಯೋಗ್ಯವಾಗಿವೆ.

ಪ್ರಮಾಣಲಕ್ಷಣಟೀಕೆಯಲ್ಲಿ ಹೇಳಿರುವ ಈ ಯೋಗ್ಯತಾಲಕ್ಷಣಕ್ಕೆ ಅನಾಪ್ತನು ಪ್ರಯೋಗಿ-

ಸಿದ 'ಜಲೇನ ಸಿಂಚತಿ' ಎಂಬ ವಾಕ್ಯದಲ್ಲಿ ಅತಿಪ್ರಸಂಗ ಬರುತ್ತದೆ. ಏಕೆಂದರೆ ಅನಾಪ್ತನು ಪ್ರಯೋಗಿಸಲ್ಪಟ್ಟ ಈ ವಾಕ್ಯದಿಂದ ತಿಳಿಯುವ ಜಲ ಹಾಗೂ ಸೇಚನಕ್ಕೂ ಕೂಡ ಅನ್ವಯ-ವನ್ನು ಹೊಂದುವ ಯೋಗ್ಯತೆ ಇರುತ್ತದೆ. ಆದ್ದರಿಂದ ಮಣಿಕಾರ ಹೇಳಿದ ಲಕ್ಷಣಕ್ಕೆ ಅನಾಪ್ತವಾಕ್ಯದಲ್ಲಿ ಅತಿಪ್ರಸಂಗ ಬಂದಂತೆ ಪ್ರಮಾಣಲಕ್ಷಣಟೀಕೆಯಲ್ಲಿ ಹೇಳಿದ ಯೋಗ್ಯತಾಲಕ್ಷಣಕ್ಕೂ ಕೂಡ 'ಜಲೇನ ಸಿಂಚತಿ' ಎಂಬ ಅನಾಪ್ತವಾಕ್ಯದಲ್ಲಿ ಅತಿಪ್ರಸಂಗ ಬರುತ್ತದೆ. ಆದರೆ ಪ್ರಮಾಣಪದ್ಧತಿಯಲ್ಲಿ ಹೇಳಿದ 'ಪ್ರತೀತಾರ್ಥಸ್ಯ ಪ್ರಮಾಣವಿರೋಧಾ-ಭಾವಃ' ಎಂಬ ಲಕ್ಷಣಕ್ಕೆ ಅನಾಪ್ತವಾಕ್ಯದಲ್ಲಿ ಅತಿಪ್ರಸಂಗ ಬರುವುದಿಲ್ಲ. ಏಕೆಂದರೆ ಪ್ರತೀತವಾದ 'ಜಲ' ಹಾಗೂ 'ಸೇಚನ'ಕ್ರಿಯೆಗೆ ಪ್ರಮಾಣವಿರೋಧವೇ ಇದೆ. ತದ-ಭಾವವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಪ್ರಮಾಣಲಕ್ಷಣಟೀಕೆಯಲ್ಲಿ ಹೇಳಿದ ಯೋಗ್ಯತಾ ಲಕ್ಷಣವು ಹೇಗೆ ಸಾಧುವಾಗುತ್ತದೆ?

ಈ ಆಕ್ಷೇಪಕ್ಕೆ ಸಮಾಧಾನವನ್ನು ಹೀಗೆ ತಿಳಿಯಬೇಕು - ಪ್ರಮಾಣಲಕ್ಷಣಟೀಕೆಯಲ್ಲಿ ನಿಶ್ಚಿತ-ಅಪ್ರಾಮಾಣಿಕವಾದ 'ಅಗ್ನಿನಾ ಸಿಂಚತಿ' ಇತ್ಯಾದಿ ವಾಕ್ಯದಿಂದ ವ್ಯಾವೃತ್ತವಾದ ಯೋಗ್ಯತಾಲಕ್ಷಣವನ್ನಷ್ಟೇ ಹೇಳಿದ್ದಾರೆ, ಹೊರತು ಅನಾಪ್ತವಾಕ್ಯದಿಂದ ವ್ಯಾವೃತ್ತವಾದ ಯೋಗ್ಯತಾಲಕ್ಷಣವನ್ನು ಟೀಕಾರಾಯರು ಹೇಳುತ್ತಿಲ್ಲ. ಅನಾಪ್ತವಾಕ್ಯದಲ್ಲೂ ಸಾಧಾರಣ-ವಾದ ಯೋಗ್ಯತಾಲಕ್ಷಣವನ್ನೇ ಹೇಳುತ್ತಿದ್ದಾರೆ. ಹಾಗಾದರೆ 'ಜಲೇನ ಸಿಂಚತಿ' ಎಂಬ ಅನಾಪ್ತವಾಕ್ಯವೂ ಕೂಡ ಲಕ್ಷ್ಯವಾದ್ದರಿಂದ ಪ್ರಮಾಣವಾಗಲಿ ಎಂಬ ಅತಿಪ್ರಸಂಗವನ್ನು ಆಕ್ಷೇಪ ಮಾಡಬಾರದು. ಏಕೆಂದರೆ 'ನಿರ್ದೋಷಃ ಶಬ್ದಃ ಆಗಮಃ' ಎಂಬುದಾಗಿ ಆಗಮ ಲಕ್ಷಣದಲ್ಲಿ ಹೇಳಲ್ಪಟ್ಟ ನಿರ್ದೋಷತ್ವ ಎಂಬ ವಿಶೇಷಣದಿಂದಲೇ ಈ ಅನಾಪ್ತವಾಕ್ಯವು ಪ್ರಮಾಣವಲ್ಲವೆಂದು ವ್ಯಾವೃತ್ತವಾಗುತ್ತದೆ. ಏಕೆಂದರೆ ವಿಪರೀತಬೋಧಕತ್ವವೆಂಬ ದೋಷವೇ ಇರುವುದರಿಂದ ನಿರ್ದೋಷತ್ವವು ಈ ವಾಕ್ಯದಲ್ಲಿ ಇರುವುದಿಲ್ಲ.

### ಅನಾಪ್ತವಾಕ್ಯವಾಸಾಧರಣವಾಗಿದೆ ಯೋಗ್ಯತಾಲಕ್ಷಣ

**ನ್ಯಾಯದೀಪಃ – ಗ್ರಂಥಾಂತರೋಕ್ತಯೋಗ್ಯತಾಲಕ್ಷಣಸ್ಯ ಅಸದರ್ಥಕೇ 'ಜಲೇನ ಸಿಂಚತಿ' ಇತ್ಯಾದಿ ಅನಾಪ್ತವಾಕ್ಯೇ ಅತಿವ್ಯಾಪ್ತಿಮಾಶಂಕ್ಯ ತತ್ಸಾಧಾರಣ್ಯ-ಮೇವ ಅಭಿಪ್ರೇತಮ್, ಅತೋ ನ ದೋಷಃ ಇತ್ಯಾಹ – ಯತ್ತು ಇತ್ಯಾದಿನಾ ॥**

ಅನುವಾದ - ಪ್ರಮಾಣಲಕ್ಷಣ ಟೀಕೆಯಲ್ಲಿ ಯೋಗ್ಯತಾಲಕ್ಷಣವನ್ನು ಹೇಳಿದ್ದಾರೆ - ಇದು 'ಜಲೇನ ಸಿಂಚತಿ' ಇತ್ಯಾದಿ ವಾಕ್ಯದಲ್ಲಿ ಅತಿವ್ಯಾಪ್ತವಾಗುತ್ತದೆ. ಜಲದಲ್ಲಿ ಸೇಚನಕ್ರಿಯೆ ಇಲ್ಲದಿದ್ದಾಗಲೂ ಮೋಸ ಮಾಡುವ ದೃಷ್ಟಿಯಿಂದ ಅನಾಪ್ತನು 'ಜಲೇನ ಸಿಂಚತಿ' ಎಂದು ಹೇಳುತ್ತಾನೆ. ಆಗಲೂ ಜಲದಲ್ಲಿ ಹಾಗೂ ಸೇಚನಕ್ರಿಯೆಯಲ್ಲಿ ಅನ್ವಯ ಯೋಗ್ಯತೆಯು ಇರುವುದರಿಂದ 'ಅನ್ಯೋನ್ಯಾಭಾವಯೋಗ್ಯತಾವದರ್ಥಾಭಿಧಾಯಕತ್ವಂ' ಎಂಬ ಯೋಗ್ಯತಾಲಕ್ಷಣವು ಅನಾಪ್ತವಾಕ್ಯದಲ್ಲಿ ಬರುತ್ತದೆಂಬುದು ಆಕ್ಷೇಪ.

ಪ್ರಮಾಣಲಕ್ಷಣಟೀಕೆಯಲ್ಲಿ ಅನಾಪ್ತವಾಕ್ಯದಲ್ಲಿಯೂ ಸಾಧಾರಣವಾದ ಯೋಗ್ಯತಾಲಕ್ಷಣವನ್ನು ಹೇಳಿದ್ದಾರೆ. ಅನಾಪ್ತಯೋಗ್ಯತೆ ಇಲ್ಲವೆಂಬುದು ನಮ್ಮ ಅಭಿಪ್ರಾಯವೇ ಅಲ್ಲ ಎಂದು ತಿಳಿಯಬೇಕು. ಆದ್ದರಿಂದ ಅತಿಪ್ರಸಂಗವಿಲ್ಲ. ಈ ವಿಷಯವನ್ನು 'ಯತ್ತು' ಇತ್ಯಾದಿ ಗ್ರಂಥವು ಪ್ರತಿಪಾದನೆ ಮಾಡುತ್ತಿದೆ.

## ಆಗಮಲಕ್ಷಣದಲ್ಲಿ ನಿರ್ದೋಷತ್ವ ವಿಶೇಷಣದ ಸಾರ್ಥಕ್ಯ

**ನ್ಯಾಯದೀಪ– ಏವಂ ತರ್ಹಿ ತದ್ವಾಕ್ಯಸ್ಯಾಪಿ ಪ್ರಮಾಣಶಬ್ದತ್ವಾಪತ್ತಿಃ ಇತ್ಯತೋ 'ನಿರ್ದೋಷವಾಕ್ಯಮ್ ಆಗಮಃ' ಇತಿ ನಿರ್ದೋಷತ್ವವಿಶೇಷಣೇನೈವ ತನ್ನಿವಾರಣಾದ್ ಅನ್ಯಥಾ ನಿರ್ದೋಷೇತಿ ವ್ಯರ್ಥಮಾಪದ್ಯತ ಇತಿ ಭಾವಃ ।**

ಅನುವಾದ - ಅನಾಪ್ತವಾಕ್ಯದಲ್ಲಿ ಪ್ರಮಾಣಲಕ್ಷಣಟೀಕೆಯ ಯೋಗ್ಯತಾಲಕ್ಷಣ ಬರುವುದಾದರೆ ಅದೂ ಕೂಡ ಪ್ರಮಾಣಭೂತವಾದ ಶಬ್ದವಾಗಬೇಕಾದೀತು ? ಎಂಬ ಪ್ರಶ್ನೆಗೆ ಅವಕಾಶವಿಲ್ಲ.

ಏಕೆಂದರೆ 'ನಿರ್ದೋಷವಾಕ್ಯಮ್ ಆಗಮಃ' ಎಂಬುದಾಗಿ ಆಗಮಲಕ್ಷಣದಲ್ಲಿ ನಿರ್ದೋಷತ್ವ-ವಿಶೇಷಣದಿಂದಲೇ ಅನಾಪ್ತವಾಕ್ಯವು ಪ್ರಮಾಣವಲ್ಲವೆಂದು ಪರಿಹಾರವಾಗುತ್ತದೆ. ಅನಾಪ್ತವಾಕ್ಯವು ಪ್ರಮಾಣವಲ್ಲವೆಂದು ಪರಿಹಾರವಾಗುತ್ತದೆ.

ಹೀಗೊಪ್ಪದಿದ್ದರೆ ಆಗಮಲಕ್ಷಣದಲ್ಲಿ ನಿರ್ದೋಷತ್ವವೆಂಬ ವಿಶೇಷಣವು ವ್ಯರ್ಥವೇ ಆಗುತ್ತದೆ.

## ವೇದ ಅಪೌರುಷೇಯವಾದರೂ ಪ್ರಮಾಣವೇ

**ತರ್ಕತಾಂಡವ– ತಸ್ಮಾದ್ ವೇದಸ್ಯ ಅಪೌರುಷೇಯತ್ವೇಽಪಿ ಪ್ರಾಮಾಣ್ಯಸಂಭವಾತ್ ತಸ್ಯ ವಿಷ್ಣಾವೇವ ಶಕ್ತಿತಾತ್ಪರ್ಯೇ ಯುಕ್ತೇ ಇತಿ ॥**

॥ ಇತಿ ಯೋಗ್ಯತಾನಿರೂಪಣಮ್ ॥

ಅನುವಾದ - ವೇದವು ಅಪೌರುಷೇಯವಾದರೂ ಕೂಡ ಪ್ರಮಾಣವಾಗುತ್ತದೆಂದು ಸಿದ್ಧವಾಯಿತು. ಮತ್ತು ಅಂಥ ವೇದವು ವಿಷ್ಣುವಿನಲ್ಲಿಯೇ ಶಕ್ತಿ ಹಾಗೂ ತಾತ್ಪರ್ಯವುಳ್ಳದ್ದಾಗಿದೆ ಎಂಬುದೂ ಕೂಡ ಸಿದ್ಧವಾಯಿತು.

## ಮುಂದಿನ ಪ್ರಕರಣಕ್ಕೆ ಉಪಕ್ಷೇಪ

**ನ್ಯಾಯದೀಪ– ಏವಂ 'ವೇದಸ್ಯ ಅಪೌರುಷೇಯತ್ವೇ ಆಪ್ತವಾಕ್ಯತ್ವರೂಪ-ಲಕ್ಷಣಾಭಾವೇ ಅಪ್ರಾಮಾಣ್ಯಮ್' ಇತಿ ಶಂಕಿತೇ ನಿರ್ದೋಷವಾಕ್ಯರೂಪ-ಲಕ್ಷಣೇನೈವ ಪ್ರಾಮಾಣ್ಯಮ್ ।**

**'ವಾಕ್ಯತ್ವಂ ಚ ಆಕಾಂಕ್ಷಾಯೋಗ್ಯತಾಽಽಸತ್ತಿಮತ್ಪದಕದಂಬತ್ವಮ್' ಇತ್ಯಭಿ-ಪ್ರೇತ್ಯ, ಆಕಾಂಕ್ಷಾದಿಸ್ವರೂಪಂ ಚೋಪಪಾದ್ಯ , ಉತ್ತರಪ್ರಸಂಗಮ್ ಉಪಕ್ಷಿಪನ್ ಉಪಸಂಹರತಿ – ತಸ್ಮಾದಿತಿ ॥**

ಅನುವಾದ - ಆದ್ದರಿಂದ ವೇದವು ಅಪೌರುಷೇಯವೆಂಬ ನಮ್ಮ ಸಮರ್ಥನೆಗೆ ಆಪ್ತವಾಕ್ಯತ್ವ-ರೂಪವಾದ ಪ್ರಾಮಾಣ್ಯದ ಲಕ್ಷಣವೇ ಬರುವುದಿಲ್ಲವಾದ್ದರಿಂದ ವೇದವು ಅಪ್ರಮಾಣವಾಗುತ್ತದೆಂದು ತಾರ್ಕಿಕನು ಆಶಂಕೆ ಮಾಡಿದ್ದನು. ಅದನ್ನು ನಿರ್ದೋಷವಾಕ್ಯತ್ವವೆಂಬ ಲಕ್ಷಣವನ್ನು ಹೇಳುವ ಮೂಲಕ ನಿರಾಕರಣೆ ಮಾಡಿ ವೇದಪ್ರಾಮಾಣ್ಯವನ್ನು ಸಮರ್ಥನೆ ಮಾಡಿದ್ದಾಯಿತು. ವಾಕ್ಯತ್ವ ಎಂದರೆ ಆಕಾಂಕ್ಷಾ, ಯೋಗ್ಯತಾ ಆಸತ್ತಿಯುಳ್ಳ ಪದಗಳ ಸಮೂಹವೆಂಬ ಅಭಿಪ್ರಾಯದಿಂದ ಆಕಾಂಕ್ಷಾ, ಯೋಗ್ಯತಾ ಹಾಗೂ ಆಸತ್ತಿಗಳ ಸ್ವರೂಪವನ್ನು ಇಲ್ಲಿಯ ತನಕ ಉಪಪಾದನೆ ಮಾಡಿದ್ದಾಯಿತು.

ಪ್ರಕೃತ ಮುಂದಿನ ಪ್ರಕರಣಕ್ಕೆ ಉಪಯೋಗಿಯಾದ ಪ್ರಮೇಯವನ್ನು ತಸ್ಮಾತ್ ಇತ್ಯಾದಿಯಾಗಿ ಉಪಕ್ಷೇಪಮಾಡುತ್ತಿದ್ದಾರೆ.

## 'ಆದಿವರ್ಜಿತೈಃ ಆಮ್ನಾಯೈಃ' ಎಂಬುದು ಸಿದ್ಧವಾಯಿತು

**ನ್ಯಾಯದೀಪ – 'ಉಕ್ತರೀತ್ಯಾ ನಿರ್ದೋಷವಾಕ್ಯತ್ವಾದಿರೂಪಲಕ್ಷಣಸಂಭವಾತ್' ಇತ್ಯರ್ಥಃ । ಶಕ್ತೀತಿ ॥ ಪದಾನಾಂ ಶಕ್ತಿರೇವ ತತ್ಸಮುದಾಯವೇದಸ್ಯಾಪಿ ಶಕ್ತಿರಿತಿ ಭಾವಃ । ತಾತ್ಪರ್ಯಂ ತತ್ಪ್ರಮಿತಿಶೇಷತ್ವಂ ಪ್ರಾಗ್ ವೇದಾಪೌರುಷೇಯತ್ವವಾದೇ ವ್ಯಕ್ತಮ್ । ಏವಂ ಚಾದಿವರ್ಜಿತೈಃ ಆಮ್ನಾಯೈರಾಖ್ಯಾತಾ ಇತ್ಯುಕ್ತಂ ಯುಕ್ತಮಿತಿ ಭಾವಃ ॥**

॥ ಇತಿ ಯೋಗ್ಯತಾವಾದಃ ಸಮಾಪ್ತಃ ॥

ಅನುವಾದ - 'ತಸ್ಮಾತ್' ಎಂಬುದಕ್ಕೆ ಹಿಂದೆ ಹೇಳಿದಂತೆ 'ನಿರ್ದೋಷವಾಕ್ಯತ್ವಾದಿ ರೂಪವಾದ ಲಕ್ಷಣವು ಯುಕ್ತವಾಗುವುದರಿಂದ ಎಂದರ್ಥ. 'ಶಕ್ತಿತಾತ್ಪರ್ಯೇ ಯುಕ್ತೇ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಪದಗಳಿಗೆ ಶಕ್ತಿಯು ಯುಕ್ತವಾಗುವುದರಿಂದ ಪದಗಳ ಸಮುದಾಯರೂಪವಾದ ವೇದಕ್ಕೆ ಪರಮಾತ್ಮನಲ್ಲಿ ಶಕ್ತಿಯು ಉಪಪನ್ನವಾಗುತ್ತದೆಂದು ಇದರ ಅಭಿಪ್ರಾಯ.

ತಾತ್ಪರ್ಯಶಬ್ದಕ್ಕೆ 'ತತ್‌ಪ್ರಮಿತಿಶೇಷತ್ವ' ಎಂದರ್ಥ. ಪರಮಾತ್ಮನನ್ನು ತಿಳಿಸಲು ವೇದಗಳು ಸಾಧನೆಯಾಗಿವೆ. ಎಂಬುದು ಇದರ ಅಭಿಪ್ರಾಯ. ಇದನ್ನು ಅಪೌರುಷೇಯತ್ವವಾದದಲ್ಲಿಯೇ ಸಮರ್ಥನೆ ಮಾಡಿದ್ದಾಗಿದೆ.

ಆದ್ದರಿಂದ 'ಆದಿವರ್ಜಿತೈಃ ಅಮ್ನಾಯೈಃ ಆಖ್ಯಾತಃ' 'ಪರಮಾತ್ಮನು ಅಪೌರುಷೇಯವಾದ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ' ಎಂದು ಮಂಗಳಶ್ಲೋಕದಲ್ಲಿ ಗ್ರಂಥಕಾರರು ಹೇಳಿದ್ದು ಅತ್ಯಂತ ಸಮಂಜಸವಾಯಿತು.

ತರ್ಕತಾಂಡವದ್ವಿತೀಯಪರಿಚ್ಛೇದದಲ್ಲಿ
ಯೋಗ್ಯತಾಪ್ರಕರಣದ ಕನ್ನಡಾನುವಾದವು ಮುಗಿಯಿತು

## ನೆನಪಿಡಿ

* ತಾರ್ಕಿಕರು ಸಂಯೋಗವನ್ನಷ್ಟೇ ಅವ್ಯಾಪ್ಯವೃತ್ತಿ ಎನ್ನುತ್ತಾರೆ. ಅವರನ್ನು ನಿರಾಕರಣೆ ಮಾಡುವುದಕ್ಕಾಗಿ ನ್ಯಾಯದೀಪದಲ್ಲಿ 'ಸಂಯೋಗನಿರೂಪಿತತ್ವವಿಶಿಷ್ಟಸಮವಾಯಃ' ಎಂದು ಹೇಳಿದ್ದಾರೆ.

* ಸಂಯೋಗವು ಅವ್ಯಾಪ್ಯವೃತ್ತಿ ಆದಂತೆ ತನ್ನಿಷ್ಠವಾದ ಸಮವಾಯವೂ ಕೂಡ ಅವ್ಯಾಪ್ಯವೃತ್ತಿಯೇ ಆಗಿದೆ. ಹೀಗೆ ಸಂಯೋಗವು ತನ್ನಿರೂಪಿತವಿಶಿಷ್ಟವಾದ ಸಮವಾಯವೂ ಕೂಡ ಅವ್ಯಾಪ್ಯವೃತ್ತಿಯೇ ಆಗಿದೆ.

* 'ಸಜಾತೀಯೇ ಅನ್ವಯದರ್ಶನಂ ಯೋಗ್ಯತಾ' ಎಂಬುದು ಮಣಿಕಾರ ಹೇಳಿದ ಯೋಗ್ಯತಾಲಕ್ಷಣ. ಈ ಲಕ್ಷಣಕ್ಕೆ 'ಪಯಸಾ ಸಿಂಚತಿ' ಎಂಬ ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿ ಬರುತ್ತದೆ.

* 'ಸಮಭಿವ್ಯಾಹೃತಪದಾರ್ಥಸಂಸರ್ಗಾಭಾವವಾಪ್ಯಧರ್ಮಶೂನ್ಯತ್ವಂ ಯೋಗ್ಯತಾ' ಎಂಬುದು ತಾರ್ಕಿಕರು ಮಾಡಿದ ಪರಿಷ್ಕೃತ ಯೋಗ್ಯತಾಲಕ್ಷಣ. ಇದಕ್ಕೆ 'ಪ್ರಮೇಯಂ', 'ಅಭಿಧೇಯಮ್' ಇತ್ಯಾದಿ ಸ್ಥಳದಲ್ಲಿ ಅವ್ಯಾಪ್ತಿದೋಷವಿದೆ.

'ಸಮಭಿವ್ಯಾಹೃತಪದಾರ್ಥಸಂಸರ್ಗವ್ಯಾಪ್ಯಧರ್ಮವತ್ವಂ ಯೋಗ್ಯತಾ',

'ಅನ್ವಯಪ್ರತಿಯೋಗಿತಾವಚ್ಛೇದಕಧರ್ಮವತ್ತ್ವಂ ಯೋಗ್ಯತಾ' ಈ ಎರಡು ಲಕ್ಷಣಗಳಿಗೆ ಅನಾಪ್ತವಾಕ್ಯದಲ್ಲಿ ಅತಿವ್ಯಾಪ್ತಿ .

* 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತ್ವಪ್ರಮಾವಿಶೇಷ್ಯಾತ್ವಾಭಾವಃ ಯೋಗ್ಯತಾ'

'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕಧರ್ಮಶೂನ್ಯತ್ವಂ ಯೋಗ್ಯತಾ'

ಮಣಿಕಾರನ ಈ ಎರಡು ಲಕ್ಷಣಗಳಿಗೆ ಅವ್ಯಾಪ್ತಿ ಮೊದಲಾದ ದೋಷವನ್ನು ಸ್ವತಃ ಪಕ್ಷಧರಮಿಶ್ರನೇ ಹೇಳಿರುತ್ತಾನೆ.

* 'ಏಕಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಸಂಸರ್ಗನ್ಯೋನ್ಯಾಭಾವ ಪ್ರತಿಯೋಗಿತಾವಚ್ಛೇದಕಪ್ರಮಾವಿಶೇಷ್ಯತ್ವಾಭಾವಃ' ಎಂಬುದು ರುಚಿದತ್ತನು ಹೇಳಿದ ಯೋಗ್ಯತಾಲಕ್ಷಣ. 'ದ್ರವ್ಯಂ ಸಂಯೋಗೀ' ಎಂಬಲ್ಲಿ ಇದಕ್ಕೆ ಅವ್ಯಾಪ್ತಿ ಇದೆ.

* 'ಸಮಭಿವ್ಯಾಹೃತಶಬ್ದತಾತ್ಪರ್ಯವಿಷಯಸ್ಯ ಅನ್ವಯಸ್ಯ ಸತ್ತ್ವಂ ಯೋಗ್ಯತಾ' 'ಸಮಭಿವ್ಯಾಹೃತಶಬ್ದತಾತ್ಪರ್ಯವಿಷಯಸ್ಯ ಅನ್ವಯಾವಿನಾಭೂತಪ್ರಮಾಣಾವಿರೋಧಃ ಯೋಗ್ಯತಾ' ಎಂಬದು ಸಿದ್ಧಾಂತದಲ್ಲಿ ಪರಿಷ್ಕರಿಸಿದ ಯೋಗ್ಯತಾಲಕ್ಷಣ. ಇದಕ್ಕೆ ಯಾವುದೇ ದೋಷಗಳಿಲ್ಲ.

* 'ಪ್ರತೀತಾರ್ಥಸ್ಯ ಅನ್ವಯಸ್ಯ ಪ್ರಮಾಣವಿರೋಧಾಭಾವಃ ಯೋಗ್ಯತಾ' ಎಂಬುದು ಪ್ರಸಿದ್ಧವಾದ ಯೋಗ್ಯತಾಲಕ್ಷಣ.

* ಯೋಗ್ಯತೆಯು ವಿಶೇಷತ್ವರೂಪವಾಗಿದೆ. ಇದು ಸತ್ತಾಮಾತ್ರದಿಂದ ಅಥವಾ ಜ್ಞಾತವಾಗಿ ಶಾಬ್ದಬೋಧಕ್ಕೆ ಕಾರಣವಾಗುವುದಿಲ್ಲ.

* ಶಾಬ್ದಬೋಧಕ್ಕೆ ಅಯೋಗ್ಯತಾನಿಶ್ಚಯವಿರಹವು ಕಾರಣವೆಂಬುದು ಸಿದ್ಧಾಂತಿಗಳ ಅಭಿಪ್ರಾಯ.

* ಯೋಗ್ಯತೆಯು ಸಂಸರ್ಗರೂಪವಾಗಿರುವುದರಿಂದ ಶಾಬ್ದಬೋಧಕ್ಕೆ ಯೋಗ್ಯತೆಯನ್ನು ಕಾರಣವೆಂದರೆ ಆತ್ಮಾಶ್ರಯದೋಷವು ಬರುತ್ತದೆ.

* ಪ್ರಕೃತಪ್ರಮಾಣವಿರೋಧರೂಪಪ್ರತಿಯೋಗಿನಃ ಅಪ್ರಾಮಾಣಿಕತ್ವಾತ್ ತದಭಾವಃ ಕಥಂ ಪ್ರಾಮಾಣಿಕಃ ಸ್ಯಾತ್' ಎಂಬ ವಾಕ್ಯದಿಂದ ಅತ್ಯಂತಾಭಾವಪ್ರತಿಯೋಗಿಯು ಅಪ್ರಾಮಾಣಿಕವೆಂಬುದೇ ಗ್ರಂಥಕಾರರ ಅಭಿಪ್ರಾಯವೆಂಬುದು ಮನದಟ್ಟಾಗುತ್ತದೆ.

* ಪ್ರಮಾಣಲಕ್ಷಣಟೀಕೆಯಲ್ಲಿ - 'ಅನ್ಯೋನ್ಯಾನ್ವಯಯೋಗ್ಯತಾವದರ್ಥಾಭಿಧಾಯಕತ್ವಂ ಯೋಗ್ಯತ್ವಮ್' ಎಂಬುದನ್ನು ಯೋಗ್ಯತೆಯ ಲಕ್ಷಣವೆಂದು ಹೇಳಿರುತ್ತಾರೆ.

* 'ಆಕಾಂಕ್ಷಾಯೋಗ್ಯತಾ ಆಸತ್ತಿಮತ್ ಪದಕದಂಬಕತ್ವಮ್ ವಾಕ್ಯತ್ವಂ' ಎಂಬುದು ವಾಕ್ಯದ ಲಕ್ಷಣ.

* ಆಕಾಂಕ್ಷಾ, ಯೋಗ್ಯತಾ ಹಾಗೂ ಆಸತ್ತಿಗಳನ್ನು ಉಪಪಾದನೆ ಮಾಡಿದ್ದರಿಂದ ಅಪೌರುಷೇಯವಾದ ವೇದವು ಪ್ರಮಾಣವೆಂದು ಸಿದ್ಧವಾಯಿತು.

* * * * *

# ಪೂರ್ವಪಕ್ಷತಾಂಡವ

## ಆಕಾಂಕ್ಷಾ, ಆಸತ್ತಿ, ಯೋಗ್ಯತಾ
## ಪ್ರಕರಣಗಳು

1. ಉದಯನಾಚಾರ್ಯಪ್ರಣೀತ-ನ್ಯಾಯಕುಸುಮಾಂಜಲಿ
2. ಭಾಸ್ಕರಾಚಾರ್ಯಪ್ರಣೀತ-ನ್ಯಾಯಲೀಲಾವತಿ
3. ಗಂಗೇಶೋಪಾಧ್ಯಾಯಪ್ರಣೀತ-ತತ್ವಚಿಂತಾಮಣಿ
4. ರುಚಿದತ್ತಪ್ರಣೀತ-ಪ್ರಕಾಶ

* ** * *

ಅನುವಾದ

ವಿದ್ವಾನ್. ಪಿ.ಎಸ್. ಶೇಷಗಿರಿಆಚಾರ್ಯರು

ಮೈಸೂರು

ಉದಯನಾಚಾರ್ಯವಿರಚಿತ

# ನ್ಯಾಯಕುಸುಮಾಂಜಲಿ

## ಶಬ್ದ ಪ್ರಕರಣ

### ಶಬ್ದವು ಪ್ರತ್ಯೇಕವಾಗಿ ಪ್ರಮಾಣವಲ್ಲ ಎಂಬ ವಾದ

शब्दोऽपि न बाधकम् अनुमानानतिरेकात्' इति वैशेषिकादयः । तथाहि – यद्यप्येते पदार्था मिथः संसर्गवन्तो वाक्यत्वात् इति व्यधिकरणम्, पदार्थत्वादिति चाऽनैकान्तिकं, पदैः स्मारितत्वात् इत्यपि तथा । यद्यपि चैतानि पदानि स्मारितार्थसंसर्गवन्ति तत्स्मारकत्वात् इत्यादौ साध्याभावः । न ह्यत्र मत्वर्थः संयोगः समवायस्तादात्म्यं विशेषणविशेष्यभावो वा सम्भवति । ज्ञाप्य-ज्ञापकभावस्तु स्वातन्त्र्येणानुमानान्तर्भाववादिभिर्नेष्यते । न च लिङ्गतया ज्ञापकत्वम्, यल्लिङ्गस्य विषयस्तदेव तस्य, परस्परा-श्रयप्रसङ्गात् – तदुपलम्भे हि व्याप्तिसिद्धिस्तत्सिद्धौ च तदनुमानमिति ।।

तथापि आकाङ्क्षादिमद्भिः पदैः स्मारितत्वाद् गामभ्याजेतिपदार्थ-वदिति स्यात् । न च विशेषासिद्धिर्दोषः, संसर्गस्य सम्मृज्य-मानविशेषादेव विशिष्टत्वात् । यद्वा एतानि पदानि स्मारितार्थ-संसर्गज्ञानपूर्वकाणि आकाङ्क्षादिमत्त्वे सति तत्स्मारकत्वात् गामभ्याजेति पदवत् । न चैवमर्थासिद्धिः । ज्ञानावच्छेदकतयैव

**तत्सिद्धेः । तस्य च संसृज्यमानोपहितस्यैव अवच्छेदकत्वात् न विशेषाप्रतिलम्भ इति ।।**

ಹಿಂದೆ ಹೇಳಿದ ರೀತಿಯಲ್ಲಿ ಪ್ರತ್ಯಕ್ಷ ಅನುಮಾನ ಮತ್ತು ಉಪಮಾನ ಪ್ರಮಾಣಗಳು ಈಶ್ವರಸಿದ್ಧಿಯನ್ನು ಕುರಿತು ಬಾಧಕವಲ್ಲ ಎಂದು ಸಿದ್ಧವಾಯಿತು. ಶಬ್ದವೂ ಬಾಧಕವಲ್ಲ. ಏಕೆಂದರೆ ಶಬ್ದವು ಅನುಮಾನಕ್ಕಿಂತ ಭಿನ್ನವಲ್ಲ. ಅನುಮಾನವಂತೂ ಬಾಧಕವಲ್ಲ ಎಂದು ಮೊದಲೇ ಹೇಳಿದ್ದಾಗಿದೆ ಎಂದು ವೈಶೇಷಕಾದಿಗಳು ಹೇಳುತ್ತಾರೆ. ಶಬ್ದಕ್ಕೆ ಅನುಮಾನದಲ್ಲಿ ಅಂತರ್ಭಾವವು ಹೇಗೆ? ಪದಗಳಿಗೆ ಪ್ರತ್ಯೇಕವಾಗಿ ಶಕ್ತಿಗ್ರಹವಿರುವುದರಿಂದ ಅರ್ಥಸ್ಮಾರಕತ್ವವು ಇದೆ ಎಂದು ವೈಶೇಷಕಾದಿಗಳು ಒಪ್ಪುತ್ತಾರೆ. ಹೀಗೆ ಸ್ಮಾರಿತವಾದ ಪದಾರ್ಥಗಳ ಪರಸ್ಪರ ಸಂಸರ್ಗಾರ್ಥವೇ ವಾಕ್ಯಾರ್ಥ. ವಾಕ್ಯಕ್ಕೆ ಅಂತಹ ಸಂಸರ್ಗವಿಷಯಕಜ್ಞಾನಜನಕತ್ವವು ಅನುಮಾನ ಮುದ್ರೆಯಿಂದ ಇದೆಯೋ ಅಥವಾ ಪ್ರಕಾರಾಂತರದಿಂದ ಇದೆಯೋ ಎಂಬುದೇ ಚರ್ಚೆಯ ವಿಷಯ. ಜ್ಞಾಪ್ಯವಾದುದು ಸಂಸರ್ಗವೇ ಆದ್ದರಿಂದ ಸಂಸರ್ಗವತ್ತ್ವವನ್ನು ಸಾಧ್ಯತಯಾ ನಿರ್ದೇಶಮಾಡ-ಬೇಕೆಂಬುದು ನಿರ್ವಿವಾದವಾದುದು. ಪಕ್ಷ ಮತ್ತು ಹೇತುಗಳು ಯಾವುವು ಎಂಬುದು ವಿಚಾರ. ಅದರಲ್ಲಿ ಪದಾರ್ಥವನ್ನು ಪಕ್ಷವನ್ನು ಮಾಡಿ ಅನುಮಾನವನ್ನು ಪ್ರಯೋಗಿಸುತ್ತೀರೋ ಅಥವಾ ಪದವನ್ನು ಪಕ್ಷವನ್ನು ಮಾಡಿ ಪ್ರಯೋಗಿಸುತ್ತೀರೋ ಎಂದು ಪ್ರಶ್ನೆ. ಪದಾರ್ಥವನ್ನು ಪಕ್ಷ-ಮಾಡಿದರೆ ಸಾಧ್ಯವಾದ ಸಂಸರ್ಗವು ಪಕ್ಷದಲ್ಲಿಯೇ ಇರುವುದರಿಂದ ಪದಾರ್ಥಾಃ ಸಂಸರ್ಗವಂತಃ ಎಂಬ ಪ್ರತಿಜ್ಞೆಯು ಸಾಧುವಾಗುತ್ತದೆ. ಹೇತುವು ಯಾವುದು? ವಾಕ್ಯತ್ವವು ಹೇತುವಾದರೆ ಅದು ಪಕ್ಷವಾದ ಪದಾರ್ಥದಲ್ಲಿ ಇಲ್ಲದಿರುವುದರಿಂದ ಸಾಧ್ಯವ್ಯಧಿಕರಣವಾಗುತ್ತದೆ. ಪದಾರ್ಥತ್ವ ಅಥವಾ ಪದಸ್ಮಾರಿತತ್ವವನ್ನು ಹೇತುವೆಂದು ಹೇಳಿದರೆ ಗೌರಶ್ವಃ ಎಂಬ ಪದಗಳಿಂದ ಸ್ಮಾರಿತವಾದ ಪದಾರ್ಥದಲ್ಲಿ ವ್ಯಭಿಚಾರವು ಬರುತ್ತದೆ. ಇದರಂತೆ ಪದವನ್ನು ಪಕ್ಷಮಾಡಿ ಅನುಮಾನವನ್ನು ಪ್ರಯೋಗಿಸಲು ಬರುವುದಿಲ್ಲ. ಆ ಅನುಮಾನದಲ್ಲಿ ವಾಕ್ಯತ್ವವನ್ನು ಹೇತುಮಾಡಿದರೆ ಹೇತುವು ವ್ಯಧಿಕರಣವೇನೂ ಆಗುವುದಿಲ್ಲ. ಆದರೂ ವಾಕ್ಯತ್ವ ಎಂದರೆ ಏನು ಎಂಬ ಪ್ರಶ್ನೆಯು ಬರುತ್ತದೆ. ವಾಕ್ಯತ್ವ ಎಂದರೆ ಸಂಸರ್ಗಬೋಧಕತ್ವ ಎಂದು ಹೇಳಿದರೆ ಅಂತಹ ಹೇತುವು ಅಸಿದ್ಧವಾಗುತ್ತದೆ.

ಏಕೆಂದರೆ ಈ ಅನುಮಾನದಿಂದಲೇ ಸಂಸರ್ಗವನ್ನು ಈಗಷ್ಟೇ ಅನುಮಾನಮಾಡುತ್ತಿದ್ದೇವಷ್ಟೆ. ಆದ್ದರಿಂದ ಅನುಮಾನಪ್ರವೃತ್ತಿಗಿಂತಲೂ ಮೊದಲು ಪದಗಳಿಗೆ ಸಂಸರ್ಗಬೋಧಕತ್ವವು ಸಿದ್ಧವಾಗಿಲ್ಲ. ಇನ್ನು ಪದಸಮುದಾಯತ್ವ ಎಂದು ಹೇಳಿದರೆ ಅದರಲ್ಲಿ ಪದತ್ವ ಎಂದರೆ ಏನು ಎಂದು ಪ್ರಶ್ನೆ. ಪದ ಎಂದರೆ ಅರ್ಥಶಕ್ತವಾದುದು ಅಥವಾ ಅರ್ಥಸ್ಮಾರಕವಾದುದು ಎಂಬುದನ್ನು ಬಿಟ್ಟು ಬೇರೆ ಏನೂ ಹೇಳಲು ಸಾಧ್ಯವಿಲ್ಲ. ಹಾಗೆ ಮಾಡಿದರೆ 'ಈ ಪದಗಳು ಸ್ಮಾರಿತವಾದ ಅರ್ಥಸಂಸರ್ಗವುಳ್ಳವುಗಳು. ಸಂಸರ್ಗಸ್ಮಾರಕವಾದ್ದರಿಂದ' ಎಂದು ಅನುಮಾನ ಪ್ರಯೋಗವು ನಿಷ್ಪನ್ನವಾಗುತ್ತದೆ. ಆದರೆ ಇಲ್ಲಿ ಸಂಸರ್ಗವು ಪದಗಳಲ್ಲಿ ಇಲ್ಲ. ಆ ಸಂಸರ್ಗವು ಸಂಯೋಗ, ಸಮವಾಯ, ತಾದಾತ್ಮ್ಯ, ವಿಶೇಷ್ಯ ವಿಶೇಷಣಭಾವ ಯಾವುದೇ ಆದರೂ ಅದು ಪದಾರ್ಥ-ನಿಷ್ಠವೇ ಹೊರತು ಪದನಿಷ್ಠವಲ್ಲ ಆದ್ದರಿಂದ ಬಾಧವು ಬರುತ್ತದೆ. ಸಂಸರ್ಗವತ್ತ್ವಂ ಎಂದರೆ ಸಂಸರ್ಗಜ್ಞಾಪಕತ್ವ ಎಂದು ಅರ್ಥ. ಅದು ಪದಗಳಲ್ಲಿರುವುದರಿಂದ ಬಾಧವು ಬರುವುದಿಲ್ಲ ಎಂದು ಹೇಳಿದರೆ ಪದಗಳಿಗೆ ಸಂಸರ್ಗಜ್ಞಾಪಕತ್ವವು ಅನುಮಾನ ರೀತಿಯಿಂದಲೋ ಅಥವಾ ಪ್ರಕಾರಾಂತರದಿಂದಲೋ ಎಂದು ಪ್ರಶ್ನೆ. ಪದಸಮುದಾಯ ರೂಪವಾದ ವಾಕ್ಯವನ್ನು ಅನುಮಾನದಲ್ಲಿ ಅಂತರ್ಭಾವಮಾಡುವ ವಾದಿಗಳು ಪ್ರಕಾರಾಂತರದಿಂದ ಎಂದು ಒಪ್ಪುವುದಿಲ್ಲ. ಆದ್ದರಿಂದ ಸಂಸರ್ಗಜ್ಞಾಪಕತ್ವವೆಂದರೆ ಸಂಸರ್ಗಾನುಮಾಪಕ ಹೇತುತ್ವ ಎಂದೇ ಹೇಳಬೇಕು. ಇದಾದರೂ ಮೊದಲು ಹೇತುವಿನಿಂದ ಸಂಸರ್ಗವು ಅನುಮಿತವಾದರೆ ಅನುಮಿತಿಯನಂತರ ಹೇತುವಿನಲ್ಲಿ ಈ ಅನುಮಾಪಕತ್ವವು ಇದೆ ಎಂದು ತಿಳಿಯುತ್ತದೆ ಹೊರತು ಸಂಸರ್ಗವನ್ನು ಅನುಮಾನ ಮಾಡುವಾಗಲೇ ತಿಳಿಯುವುದಿಲ್ಲ. ಆದ್ದರಿಂದ ಸಂಸರ್ಗವತ್ತ್ವಂ ಎಂಬಲ್ಲಿ ಲಿಂಗನಿಷ್ಠವಾದ ಲಿಂಗದಲ್ಲಿರುವ ಅನುಮಾನವಿಧಯಾ ಜ್ಞಾಪಕತ್ವವೇ ಮತುಪ್ ಪ್ರತ್ಯಯದ ಅರ್ಥ ಎಂದು ಹೇಳಬೇಕು. ಆ ಲಿಂಗನಿಷ್ಠವಾದ ಜ್ಞಾಪಕತ್ವವೇ ಸಾಧ್ಯವೂ ಆಗಿದೆ. ಮತುಪಿನ ಅರ್ಥವು ಸಂಸರ್ಗಜ್ಞಾಪಕತ್ವರೂಪವಾದುದೇ ಹೊರತು ಸಂಸರ್ಗಾದಿಗಳು ಯಾವುದೂ ಅಲ್ಲ ಎಂಬ ಈ ನಿರ್ಣಯವನ್ನು ಅಂಗೀಕರಿಸಿದರೆ ಅನ್ಯೋನ್ಯಾಶ್ರಯವು ಬರುತ್ತದೆ. ಸಂಸರ್ಗಾನುಮಿತಿಯು ಉಂಟಾದರೆ ಮಾತ್ರ ಹೇತುವಿಗೂ ಮತ್ತು ಸಂಸರ್ಗಾನುಮಾಪಕತ್ವಕ್ಕೂ ವ್ಯಾಪ್ತಿಗ್ರಹ ಉಂಟಾಗುತ್ತದೆ. ಈ ವ್ಯಾಪ್ತಿಗ್ರಹವು ಸಿದ್ಧವಾದರೆ ಮಾತ್ರ ಹೇತುವಿನಿಂದ ಸಂಸರ್ಗಾನುಮಿತಿ

ಉಂಟಾಗುತ್ತದೆ. ಆದ್ದರಿಂದ ಪದವನ್ನು ಪಕ್ಷಮಾಡುವ ಕಲ್ಪದಲ್ಲಿ ಹೇತುವು ಯಾವುದಾದರೂ ಆಗಲಿ ಆದರೆ ಸಾಧಿಸಲು ಹೊರಟ ಸಂಸರ್ಗವತ್ತ್ವವಂತೂ ಸಿದ್ಧವಾಗುವುದಿಲ್ಲ. ಆದ್ದರಿಂದ ಶಬ್ದಕ್ಕೆ ಅನುಮಾನದಲ್ಲಿ ಹೇಗೆ ಅಂತರ್ಭಾವ ಎಂದು ಕೇಳಿದರೆ ಅದಕ್ಕೆ ಹೀಗೆ ಉತ್ತರವನ್ನು ಕೊಡುತ್ತೇವೆ. ಯದ್ಯಪಿ ಪದಪಕ್ಷದಲ್ಲಿಯೂ, ಪದಾರ್ಥಪಕ್ಷದಲ್ಲಿಯೂ ದೋಷವನ್ನು ಹೇಳಿದ್ದೀರಿ. ಆದರೆ ಅವುಗಳನ್ನೇ ಪಕ್ಷಗಳನ್ನಾಗಿ ಮಾಡಿ ಹೇತುಸಾಧ್ಯಗಳನ್ನು ಪರಿಷ್ಕಾರ ಮಾಡಿ ನಾವು ಅನುಮಾನವನ್ನು ಪ್ರಯೋಗಿಸುತ್ತೇವೆ. 'ಈ ಪದಾರ್ಥಗಳು ಪರಸ್ಪರಸಂಸರ್ಗವುಳ್ಳವುಗಳು. ಆಕಾಂಕ್ಷಾಯೋಗ್ಯತಾ ಸನ್ನಿಧಿಯುಳ್ಳ ಪದಗಳಿಂದ ಸ್ಮಾರಿತವಾದ್ದರಿಂದ. ಗಾಮಾನಯ ಎಂಬ ವಾಕ್ಯದ ಪದಾರ್ಥಗಳಿದ್ದಂತೆ'. ಇದು ಪದಾರ್ಥವನ್ನು ಪಕ್ಷವನ್ನಾಗಿ ಮಾಡುವ ಅನುಮಾನ. ಹೀಗೆ ಮಾಡಿದರೆ ಸಂಸರ್ಗ ಸಾಮಾನ್ಯವು ಸಿದ್ಧವಾದರೂ ವಿವಕ್ಷಿತವಾದ ವಿಶೇಷ ಸಂಸರ್ಗವು ಸಿದ್ಧವಾಗುವುದಿಲ್ಲ ಎಂಬ ಆಕ್ಷೇಪವು ಸರಿಯಲ್ಲ. ಪದಗಳಿಂದ ಸಂಬಂಧಿಗಳು ವಿಶೇಷಾಕಾರದಿಂದಲೇ ಸ್ಮಾರಿತವಾಗು-ವುದರಿಂದ ಅವುಗಳ ಸಂಬಂಧವೂ ಸಂಬಂಧವಿಶೇಷದಲ್ಲಿಯೇ ಎಂದರೆ ಸಂಬಂಧ್ಯಂತರ ವ್ಯಾವೃತ್ತ-ವಾಗಿ ಸಿದ್ಧವಾಗುತ್ತವೆ. ಅದರಂತೆ 'ಈ ಪದಗಳು ಸ್ಮಾರಿತವಾದ ಅರ್ಥಗಳ ಸಂಸರ್ಗಜ್ಞಾನ-ಪೂರ್ವಕವಾದವುಗಳು. ಆಕಾಂಕ್ಷವುಳ್ಳ ಪದಗಳಾದ್ದರಿಂದ. ಗಾಮಾನಯ ಎಂಬ ಪದಗಳಂತೆ' ಎಂಬುದು ಪದವನ್ನು ಪಕ್ಷ ಮಾಡಿದ ಅನುಮಾನದ ಪ್ರಯೋಗ. ಸಾಧ್ಯಘಟಕವಾದ ಜ್ಞಾನವಾದರೂ ಅರ್ಥಂ ಬುದ್ಧ್ವಾ ಶಬ್ದರಚನಾ ಎಂಬ ನ್ಯಾಯಸಿದ್ಧವಾದ ವಾಕ್ಯರಚನ ಹೇತುವಾದ ವಕ್ತೃಗತವಾದ ಜ್ಞಾನ. ಆದ್ದರಿಂದ ಈ ಅನುಮಾನದಲ್ಲಿ ಜ್ಞಾನಜನ್ಯತ್ವವು ಸಾಧ್ಯ. ಹಿಂದಿನ ಅನುಮಾನದಲ್ಲಿ ಜ್ಞಾನಜನಕತ್ವವು ಸಾಧ್ಯ. ಹೀಗೆ ಜ್ಞಾನವನ್ನು ಸಾಧನೆ ಮಾಡಿದರೆ ಸಂಸರ್ಗ-ರೂಪವಾದ ವಾಕ್ಯಾರ್ಥವು ಸಿದ್ಧವಾಗುವುದಿಲ್ಲವಾದ್ದರಿಂದ ಇಷ್ಟಸಿದ್ಧಿಯಾಗುವುದಿಲ್ಲ ಎಂದು ಹೇಳಬಾರದು. ಆ ಜ್ಞಾನವು ಸಂಸರ್ಗವಿಷಯಕತ್ವವಿಶಿಷ್ಟಜ್ಞಾನವಾದ್ದರಿಂದ ವಿಧೇಯಕೋಟಿ ಪ್ರವಿಷ್ಟವಾಗಿ ಸಂಸರ್ಗವು ಸಿದ್ಧವಾಗುತ್ತದೆ. ಮತ್ತು ಹಿಂದೆ ಹೇಳಿದ ರೀತಿಯಲ್ಲಿ ಆ ಸಂಸರ್ಗವು ವಿಶೇಷರೂಪದಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ ಶಬ್ದವು ಅನುಮಾನದಲ್ಲಿಯೇ ಅಂತರ್ಭಾವ-ವನ್ನು ಹೊಂದುತ್ತದೆ ಎಂಬುದು ವೈಶೇಷಿಕರ ವಾದ.

## ನೈಯಾಯಿಕ ಮತದಿಂದ ಸಿದ್ಧಾಂತ

**अनैकान्तः परिच्छेदे सम्भवे च न निश्चयः ।**
**आकाङ्क्षा सत्तया हेतुर्योग्यतासत्तिरबन्धना ।।१३।।**

ಅವಧಾರಣ (ನಿಯಮ)ವನ್ನು ಸಾಧನೆ ಮಾಡಿದರೆ ವ್ಯಭಿಚಾರವು ಬರುತ್ತದೆ. ಯೋಗ್ಯತೆಯನ್ನು ಸಾಧನೆ ಮಾಡಿದರೆ ಅದರ ಜ್ಞಾನವೇ ಉಂಟಾಗುವುದಿಲ್ಲ. ಆಕಾಂಕ್ಷೆಯು ಸತ್ತಯಾ ಕಾರಣವಾಗಿದೆ. ಆಕಾಂಕ್ಷೆಯನ್ನು ಬಿಟ್ಟು ಯೋಗ್ಯತಾ ಮತ್ತು ಆಸತ್ತಿಗಳನ್ನೇ ಹೇತುವಿನಲ್ಲಿ ಸೇರಿಸಿದರೆ ವ್ಯಾಪ್ತಿ ಇಲ್ಲ.

ಇದಕ್ಕೆ ನೈಯಾಯಿಕರು ಉತ್ತರವನ್ನು ಹೇಳುತ್ತಾರೆ. ಪದಾರ್ಥಪಕ್ಷಕವಾದ ಅನುಮಾನವು ಯುಕ್ತವಾದುದಲ್ಲ. ಈ ಪದಾರ್ಥಗಳು ಪರಸ್ಪರ ಸಂಸರ್ಗವುಳ್ಳವುಗಳು ಎಂದಾಗಲೀ ಅಥವಾ ಸಂಭಾವಿತ ಸಂಸರ್ಗವುಳ್ಳವುಗಳಾಗಿವೆ ಎಂದಾಗಲೀ ಸಾಧನೆ ಮಾಡಬೇಕು. ಪರಸ್ಪರ ಸಂಸರ್ಗವುಳ್ಳವುಗಳಾಗಿವೆ ಎಂದು ಸಾಧನೆ ಮಾಡಿದರೆ ವ್ಯಭಿಚಾರ ದೋಷವಿದೆ. ಸಂಸರ್ಗಯೋಗ್ಯತೆಯುಳ್ಳವುಗಳು ಎಂದು ಸಾಧನೆ ಮಾಡಿದರೆ ವಿವಕ್ಷಿತವಾದ ವಾಕ್ಯಾರ್ಥದ ನಿಶ್ಚಯವಾಗುವುದಿಲ್ಲ. ಲೋಕದಲ್ಲಿ ಪರಿಚ್ಛೇದ ಎಂದರೆ ಅವಧಾರಣ, ಸಂಭವ ಎಂದರೆ ಯೋಗ್ಯತಾ ಎಂದು ಅರ್ಥ. ಮತ್ತು ಹೇತುಶರೀರದಲ್ಲಿ ಪ್ರವಿಷ್ಟವಾದ ಆಕಾಂಕ್ಷೆಯು ಸ್ವರೂಪಸತ್ ಆಗಿ ಸಂಸರ್ಗಜ್ಞಾನವನ್ನು ಕುರಿತು ಕಾರಣವಾಗುತ್ತದೆ. ಲಿಂಗವಾದರೂ ಯಾವಾಗಲೂ ಜ್ಞಾಯಮಾನವಾಗಿಯೇ ಕಾರಣವಾಗುತ್ತದೆ. ಆದ್ದರಿಂದ ಜ್ಞಾಯಮಾನತಯಾ ಕಾರಣವಾದ ಲಿಂಗಕೋಟಿಯಲ್ಲಿ ಸತ್ತಯಾ ಕಾರಣವಾದ ಆಕಾಂಕ್ಷೆಯನ್ನು ಸೇರಿಸಲು ಸಾಧ್ಯವಿಲ್ಲ. ಅದಕ್ಕೋಸ್ಕರವಾಗಿ ಕೇವಲ ಯೋಗ್ಯನಿಷ್ಠ ಆಸತ್ತಿಯನ್ನು ಹೇತುವಿನಲ್ಲಿ ನಿವೇಶಮಾಡಿದರೆ ವ್ಯಭಿಚಾರವು ಬರುತ್ತದೆ ಆದ್ದರಿಂದ ವ್ಯಾಪ್ತಿಯು ಸಿದ್ಧವಾಗುವುದಿಲ್ಲ ಎಂದು ಅರ್ಥ.

## ಅನುಮಾನದಿಂದ ಸಂಸರ್ಗನಿಯಮವನ್ನು ಸಾಧನೆಮಾಡಿದರೆ ದೂಷಣ

एते पदार्था मिथः संसर्गवन्त इति सम्मृष्टा एवेति नियमो वा साध्यः, सम्भावितसंसर्गा इति वा? न प्रथमः । अनाप्तोक्तपद-कदम्बस्मारितैरनैकान्तात् । आप्तोक्त्या विशेषणाय..ति चेन्न । वाक्यार्थप्रतीतेः प्राक् तदसिद्धेः । न ह्यविप्रलम्भकत्वमात्रम् इह आप्तशब्देन विवक्षितम्, तदुक्तेरपि पदार्थसंसर्गव्यभिचारात्, अपि तु तदनुभवप्रामाण्यमपि । न चैतत् शक्यमसर्वज्ञेन सर्वदा सर्व-विषये 'सत्यज्ञानवान् अयम्' इति निश्चेतुम् । भ्रान्तेः पुरुषधर्मत्वात् । तत्र क्वचिदाप्तत्वमनाप्तत्वस्याप्यस्ति इति, न तेनोपयोगः । ततः अस्मिन्नर्थे 'अयमभ्रान्तः' इति केनचिदुपायेन ग्राह्यम् । न चैतत् संसर्गविशेषमप्रतीत्य शक्यम् । बुद्धेरर्थभेद-मन्तरेण निरूपयितुमशक्यत्वात् । पदार्थमात्रे चाभ्रान्तत्वसिद्धौ न किञ्चित् । अनाप्तसाधारण्यात् । एतेषां संसर्गे 'अयमभ्रान्तः' इति शक्यमिति चेन्न । एतेषां संसर्गे इत्यस्या एव बुद्धेरसिद्धेः । अननुभूतचरे स्मरणायोगात्, तदनुभवस्य लिङ्गाधीनतया तस्य च विशेषणसिद्धत्वेन अनुपपत्तेरिति ।

ಅದು ಹೇಗೆಂದರೆ ಈ ಪದಾರ್ಥಗಳು ಪರಸ್ಪರ ಸಂಸರ್ಗವುಳ್ಳವುಗಳೇ ಅಥವಾ ಸಂಸೃಷ್ಟಗಳೇ ಆಗಿವೆ ಎಂದು ನಿಯಮವನ್ನು ಸಾಧನೆಮಾಡುತ್ತೇವೆ ಎಂಬ ಮೊದಲನೆಯ ಪಕ್ಷದಲ್ಲಿ 'ನದೀ ತೀರೇ ಫಲಾನಿ ಸಂತಿ' ಎಂಬ ಅನಾಪ್ತವಾಕ್ಯದಲ್ಲಿ ವ್ಯಭಿಚಾರವು ಬರುತ್ತದೆ. ಏಕೆಂದರೆ ಅಲ್ಲಿ ಆಕಾಂಕ್ಷಾದಿ-

ಮತ್‌ಪದ ಸ್ಮಾರಿತತ್ವರೂಪವಾದ ಹೇತುವಿದೆ ಆದರೆ ಪರಸ್ಪರ ಸಂಸರ್ಗರೂಪವಾದ ಸಾಧ್ಯವಿಲ್ಲ. ಈ ವ್ಯಭಿಚಾರ ದೋಷವನ್ನು ಪರಿಹಾರಮಾಡಲು ಆಪ್ತೋಕ್ತ ಆಕಾಂಕ್ಷಾದಿಮತ್ ಪದಸ್ಮಾರಿತತ್ವಾತ್' ಎಂದು ಹೇತುಕೋಟಿಯಲ್ಲಿರುವ ಪದದಲ್ಲಿ ಆಪ್ತೋಕ್ತತ್ವರೂಪವಾದ ವಿಶೇಷಣವನ್ನು ಕೊಟ್ಟರೆ ಆಪ್ತತ್ವ ಎಂದರೇನು ಎಂಬ ಪ್ರಶ್ನೆ ಇದೆ. ಆಪ್ತತ್ವ ಎಂದರೆ ಅವಿಪ್ರಲಂಭಕತ್ವ ಎಂದು ಅಭಿಪ್ರಾಯವೇ ಅಥವಾ ಪ್ರಮಾತ್ವಕ ಅನುಭವವತ್ತ್ವ ಎಂದು ಅಭಿಪ್ರಾಯವೇ? ಅವಿಪ್ರಲಂಭಕತ್ವ ಎಂದು ಅರ್ಥ-ವಾದರೆ ಅವಿಪ್ರಲಂಭಕನಾದ ಆದರೆ ಭ್ರಾಂತನಾದ ಪುರುಷನಿಂದ ಉಕ್ತವಾದ ಪದಗಳ ಸ್ಥಳದಲ್ಲಿ ವ್ಯಭಿಚಾರವು ಬರುತ್ತದೆ. ಇನ್ನು ಆಪ್ತತ್ವ ಎಂದರೆ ಪ್ರಮಾತ್ವಕಅನುಭವವತ್ತ್ವ ಎಂಬ ಪಕ್ಷದಲ್ಲಿಯೂ ಸಾರ್ವಕಾಲಿಕ ಸರ್ವವಿಷಯಕ ಪ್ರಮಾವತ್ತ್ವ ಎಂದು ಅರ್ಥವೇ? ಅಥವಾ ಕಿಂಚಿದ್ವಿಷಯಕ ಪ್ರಮಾವತ್ತ್ವ ಎಂದು ಅರ್ಥವೇ? ಅಥವಾ ಪದಾರ್ಥ ಸಂಸರ್ಗಾತ್ಮಕವಾದ ಪ್ರಕೃತವಾಕ್ಯಾರ್ಥ ವಿಷಯಕವಾದ ಪ್ರಮಾವತ್ತ್ವ ಎಂದು ಅರ್ಥವೇ? ಅಥವಾ ಪದಾರ್ಥ ಮಾತ್ರವಿಷಯಕವಾದ ಪ್ರಮಾವತ್ತ್ವ ಎಂದು ಅರ್ಥವೇ? ಎಂದು ನಾಲ್ಕು ವಿಕಲ್ಪಗಳು ಉಂಟಾಗುತ್ತವೆ. ಭ್ರಾಂತಿಯು ಪುರುಷಸಾಮಾನ್ಯ ಧರ್ಮವಾಗಿರುವುದರಿಂದ ಸರ್ವಜ್ಞನಲ್ಲದವನಿಗೆ ಸಾರ್ವಕಾಲಿಕ ಸರ್ವವಿಷಯಕ ಪ್ರಮಾವತ್ವವು ಇಲ್ಲವಾದ್ದರಿಂದ ಮೊದಲನೆಯ ಪಕ್ಷವು ಅಸಂಭಾವಿತವಾದುದು. ಕಿಂಚಿದ್ವಿಷಯಕ ಪ್ರಮಾವತ್ತ್ವ ಎಂಬ ದ್ವಿತೀಯ ಪಕ್ಷದಲ್ಲಿ ಅನಾಪ್ತನಿಗೂ ಅಂತಹ ಪ್ರಮಾವತ್ತ್ವವಿರುವುದರಿಂದ ಅನಾಪ್ತೋಕ್ತಸ್ಥಳದಲ್ಲಿ ವ್ಯಭಿಚಾರವು ಬರುತ್ತದೆ. ಮೂರನೆಯ ಪಕ್ಷದಲ್ಲಿ ಮಾತ್ರ ವ್ಯಭಿಚಾರವಿಲ್ಲ. ಆದರೆ ಮೂರನೆಯ ಪಕ್ಷವನ್ನು ಅಂಗೀಕರಿಸಲು ಸಾಧ್ಯವಿಲ್ಲ. ಏಕೆಂದರೆ ವಾಕ್ಯಾರ್ಥ ಪ್ರತೀತಿಗಿಂತ ಮೊದಲು ವಕ್ತೃವಿಗೆ ಈ ವಾಕ್ಯಾರ್ಥ ವಿಷಯಕ ಪ್ರಮೆಯು ಇದೆ ಎಂಬ ನಿಶ್ಚಯವು ಬರಲು ಸಾಧ್ಯವಿಲ್ಲವಾದ್ದರಿಂದ ಹೇತುಜ್ಞಾನವೇ ಬರುವುದಿಲ್ಲ. 'ಅರ್ಥೇನೈವ ವಿಶೇಷೋ ಹಿ ನಿರಾಕಾರ-ತಯಾ ಧಿಯಾಂ' ಎಂಬ ನ್ಯಾಯದಿಂದ ಪ್ರಕೃತ ವಾಕ್ಯಾರ್ಥವನ್ನು ಮತ್ತು ಪ್ರಕೃತ ಜ್ಞಾನವನ್ನು ತೆಗೆದುಕೊಂಡು ಹೇತುವನ್ನು ಉಪಪಾದನೆ ಮಾಡಬೇಕು. ವಾಕ್ಯಾರ್ಥವಾದರೂ ಸಾಧ್ಯತ್ವೇನ ನಿರ್ದೇಶಮಾಡಿದ ಸಂಸರ್ಗವಿಶೇಷವೇ ಆಗಿದೆ. ಅದರ ಜ್ಞಾನವಾದರೂ ಸಹ ಅನುಮಿತಿ ರೂಪವಾದುದರಿಂದ ಲಿಂಗ ಜ್ಞಾನದ ನಂತರ ಲಿಂಗಜ್ಞಾನದಿಂದ ಬರಬೇಕು. ಆದ್ದರಿಂದ ಲಿಂಗ-ಜ್ಞಾನವು ಬರುವಾಗ ವಾಕ್ಯಾರ್ಥ ಜ್ಞಾನವು ಇಲ್ಲದಿರುವುದರಿಂದ ತದ್ಘಟಿತವಾದ ಲಿಂಗಜ್ಞಾನವೇ

ಬರುವುದಿಲ್ಲ. ನಾಲ್ಕನೆಯ ಪಕ್ಷದಲ್ಲಿಯೂ ಕೂಡ ಅನಾಪ್ತೋಕ್ತ ಪದಸ್ಥಳದಲ್ಲಿ ವ್ಯಭಿಚಾರವು ಬರುವುದರಿಂದ ಅದೂ ಯುಕ್ತವಾದುದಲ್ಲ. ಈ ಸಂಸರ್ಗದಲ್ಲಿ ಇವನಿಗೆ ಪ್ರಮೆಯಿದೆ ಎಂದು ವಿಶೇಷಾಕಾರೇಣ ಜ್ಞಾನವಿಲ್ಲದಿದ್ದರೂ ಪದಗಳ ಶಕ್ತಿಯಿಂದ ಸ್ಮಾರಿತವಾದ ಪದಾರ್ಥಗಳ ವಿಶೇಷಾ-ಕಾರೇಣ ಜ್ಞಾನವಿರುವುದರಿಂದ ಇವುಗಳ ಸಂಸರ್ಗದ ವಿಷಯದಲ್ಲಿ ಇವನಿಗೆ ಪ್ರಮೆಯಿದೆ ಎಂಬ ಜ್ಞಾನವು ಉಂಟಾಗಬಹುದು ಎಂದು ಶಂಕಿಸಿದರೆ ಆಗಲೂ ಅಂತಹ ಜ್ಞಾನವು ಉಂಟಾಗುವುದಿಲ್ಲ ಎಂದೇ ಉತ್ತರ. ಏಕೆಂದರೆ ಸಂಸರ್ಗದ ವಿಶೇಷವು ಸಂಬಂಧಿವಿಶೇಷಗಳ ಅಧೀನವಾಗಿದೆ. ಈ ಸಂಬಂಧಿವಿಶೇಷಗಳ ಪರಸ್ಪರ ಸಂಸರ್ಗವೇ ಸಾಧ್ಯವಾದುದು. ಆ ಸಂಸರ್ಗವು ಇದುವರೆಗೆ ಅನುಭೂತವಾಗಿಲ್ಲ. ಆದ್ದರಿಂದ ಆ ಸಂಸರ್ಗವನ್ನು ಸ್ಮರಣೆಮಾಡಿ ಈ ಸಂಸರ್ಗ ಎಂದು ನಿರ್ದೇಶ ಮಾಡಿ ಈ ಸಂಸರ್ಗದಲ್ಲಿ ಇವನಿಗೆ ಪ್ರಮೆಯಿದೆ ಎಂದು ನಿಶ್ಚಯಮಾಡಲು ಸಾಧ್ಯವಿಲ್ಲ. ಆದ್ದರಿಂದ ಹೇತುಘಟಕವಾದ ಪದದಲ್ಲಿ ಆಪ್ತೋಕ್ತತ್ವ ವಿಶೇಷಣವನ್ನು ಕೊಟ್ಟರೆ ವಿಶೇಷಣಾ ಸಿದ್ಧಿಯು ಉಂಟಾಗುವುದರಿಂದ ವಿಶಿಷ್ಟಲಿಂಗದ ಜ್ಞಾನವು ಉಂಟಾಗದೇ ಅನುಮಿತಿಯೇ ಉಂಟಾ-ಗುವುದಿಲ್ಲ ಎಂದು ಅಭಿಪ್ರಾಯ.

## ಸಂಭಾವಿತತ್ವವನ್ನು ಸಾಧನೆಮಾಡಿದರೆ ದೂಷಣ

**नापि द्वितीयः, योग्यतामात्रसिद्धावपि संसर्गानिश्चयात्, वाक्यस्य च तदेकफलत्वात्, योग्यतामात्रस्य प्रागेव सिद्धेः । अन्यथा तदसिद्धौ आसन्नसाकाङ्क्षपदस्मारितत्वात् इत्येव हेतुः स्यात् । तथा च 'अग्निना सिञ्चेत्' इत्यादिना स्मारितैरनैकान्तः । तथाविधानां सर्वथा संसर्गायोग्यत्वादिति ।**

ಆದ್ದರಿಂದ ಸಂಸರ್ಗವತ್ತ್ವವನ್ನು ಸಾಧನೆ ಮಾಡುವ ಪಕ್ಷವನ್ನು ಬಿಟ್ಟು ಸಂಸರ್ಗಯೋಗ್ಯತ್ವ-ವನ್ನು ಸಾಧನೆಮಾಡುವ ಎರಡನೆಯ ಪಕ್ಷವನ್ನು ಅಂಗೀಕರಿಸಿದರೆ ಆಗಲೂ ಪದಾರ್ಥಗಳಿಗೆ

ಸಂಸರ್ಗಯೋಗ್ಯತ್ವವನ್ನು ಅನುಮಾನ ಮಾಡಿದರೂ ವಾಕ್ಯಫಲತ್ವೇನ ಅಭಿಮತವಾದ ಸಂಸರ್ಗವಿಶೇಷದ ನಿಶ್ಚಯವು ಉಂಟಾಗುವುದಿಲ್ಲ. ಮತ್ತು ಸಿದ್ಧಸಾಧನವು ಬರುತ್ತದೆ. ಏಕೆಂದರೆ ಹೇತುಕೋಟಿಯಲ್ಲಿ ಆಕಾಂಕ್ಷಾ ಸನ್ನಿಧಿಗಳಂತೆ ಯೋಗ್ಯತೆಯೂ ನಿವಿಷ್ಟವಾಗಿರುವುದರಿಂದ ಹೇತುಜ್ಞಾನವು ಬಂದಾಗಲೇ ಯೋಗ್ಯತಾ ಜ್ಞಾನವು ಬಂದಿರುತ್ತದೆ. ಈ ಸಿದ್ಧಸಾಧನ ದೋಷವನ್ನು ಪರಿಹಾರ ಮಾಡಲು ಹೇತುಕೋಟಿಯಲ್ಲಿ ಯೋಗ್ಯತೆಯನ್ನು ನಿವೇಶ ಮಾಡದಿದ್ದರೆ ಆಕಾಂಕ್ಷಾ ಸನ್ನಿಧಿ (ಆಸತ್ತಿ) ಮತ್‌ಪದಸ್ಮಾರಿತತ್ವವು ಹೇತುವಾಗುತ್ತದೆ. ಅಂತಹ ಹೇತುವು ಅಗ್ನಿನಾ ಸಿಂಚತಿ ಎಂಬ ಪದಸ್ಮಾರಿತ ಪದಾರ್ಥಗಳಲ್ಲಿ ಬರುತ್ತದೆ. ಅಲ್ಲಿ ಸಂಸರ್ಗಯೋಗ್ಯತೆಯೇ ಇಲ್ಲದಿರುವು-ದರಿಂದ ವ್ಯಭಿಚಾರವು ಬರುತ್ತದೆ. ಆದ್ದರಿಂದ ಪದಾರ್ಥವನ್ನು ಪಕ್ಷವನ್ನಾಗಿ ಮಾಡಿದ ಅನು-ಮಾನವು ಸಮೀಚೀನವಾದುದಲ್ಲ.

## ಪದಪಕ್ಷಕಾನುಮಾನದಲ್ಲಿ ದೋಷೋದ್ಭಾವನೆ

द्वितीयेऽपि प्रयोगे हेतुराकाङ्क्षादिमत्त्वे सतीति ।

तत्र केयमाकाङ्क्षा नाम? न तावद्विशेषणविशेष्यभावः, तस्य संसर्ग(र्गविशेष)स्वभावतया साध्यत्वात् । नापि तद्योग्यता, योग्यतयैव गतार्थत्वात् । नाप्यविनाभावः, 'नीलं सरोजम्' इत्यादौ तदभावेऽपि वाक्यार्थप्रत्ययात् । तत्राऽपि विशेषाक्षिप्त-सामान्ययोरविनाभावोऽस्तीति(वोप्याकाङ्क्षेति) चेन्न – 'अहो विमलं जलं नद्याः, कच्छे महिषश्चरति' इत्यादौ वाक्यभेदा-नुपपत्तिप्रसङ्गात् । नापि प्रतिपत्तुर्जिज्ञासा, 'पटो भवति' इत्यादौ शुक्लादिजिज्ञासायां(सया) रक्तः पटो भवतीत्यस्यैकदेशवत् सर्वदा वाक्यापर्यवसानप्रसङ्गात् । ''गुणक्रियाद्यशेषविशेषजिज्ञासायामपि

पदस्मारितविशेषजिज्ञासा आकाङ्क्षा । 'पटः' इत्युक्ते, किं रूपः?, कुत्र किं करोति? इत्यादिरूपजिज्ञासा । तत्र, भवतीत्युक्ते, किं करोतीत्येषैव पदस्मारितविषया, न तु किंरूपः? इत्यादिरपि । यदा तु 'रक्तः' इत्युच्यते, तदा 'किंरूपः?' इत्येषाऽपि स्मारितविषया स्यात् इति न किञ्चिदनुपपन्नम्'' – इति चेत् एवं तर्हि चक्षुषी निमील्य परिभावयतु भवान्, किमस्यां जाताया-मन्वयप्रत्ययः अथ ज्ञातायामिति । तत्र प्रथमे नानया व्यभि-चारव्यावर्तनाय(वारणाय) हेतुर्विशेषणीयः, मनस्संयोगादिवत् सत्तामात्रेणोपयोगात् । आसत्तियोग्यतामात्रेण विशिष्टस्तु निश्चितोऽपि न गमकः, 'अयमेति पुत्रो राज्ञः पुरुषोऽपसर्यताम्' इत्यादौ व्यभिचारात् ।

ಈಗ ಹದಿಮೂರನೆಯ ಶ್ಲೋಕದ ಉತ್ತರಾರ್ಧವನ್ನು ವಿವರಿಸುತ್ತಾರೆ. ಪದಾರ್ಥ ಪಕ್ಷಕ ಅನುಮಾನದಲ್ಲಿ ಮಾಡಿದಂತೆ ಪದಪಕ್ಷಕ ಅನುಮಾನದಲ್ಲಿಯೂ ಸಹ ಹೇತು ಘಟಕವಾದ ಪದದಲ್ಲಿ ಆಕಾಂಕ್ಷಾದಿಮತ್ತ್ವ ವಿಶೇಷಣವನ್ನು ಕೊಡಬೇಕು. ಅದರಲ್ಲಿ ಆಕಾಂಕ್ಷೆ ಎಂದರೇನು? ಆಕಾಂಕ್ಷೆಯು ವಿಶೇಷ್ಯವಿಶೇಷಣಭಾವರೂಪವಾದುದು ಎಂದು ಹೇಳಿದರೆ ಅದರ ಅರ್ಥ ಯಾವುದೋ ಒಂದು ಸಂಬಂಧದಿಂದ ವಿಶೇಷ್ಯವು ವಿಶೇಷಣವಿಶಿಷ್ಟವಾಗಿದೆ ಎಂದು, ಗಾಮ್ ಎಂಬಲ್ಲಿ ಆಧೇಯತಾ ಸಂಬಂಧದಿಂದ ಕರ್ಮತ್ವವು ಗೋವಿಶಿಷ್ಟವಾದಂತೆ. ಈ ಸಂಬಂಧವಾದರೂ ಸಂಸರ್ಗವೇ ಆದುದರಿಂದ ಅದೇ ವಾಕ್ಯಾರ್ಥ. ಮತ್ತು ಆದ್ದರಿಂದ ಈ ಅನುಮಾನದಿಂದ ಸಾಧ್ಯವಾಗಿದೆ. ಆದ್ದರಿಂದ ಅದು ಹೇತುಘಟಕವಾಗಲಾರದು. ಆಕಾಂಕ್ಷೆ ಎಂದರೆ ವಿಶೇಷಣ-ವಿಶೇಷ್ಯಭಾವಯೋಗ್ಯತ್ವ ಎಂದು ಹೇಳಿದರೆ ಹೇತುಘಟಕವಾಗಿ ಈಗಾಗಲೇ ಯೋಗ್ಯತಾ ಎಂಬ ವಿಶೇಷಣವನ್ನು ಕೊಟ್ಟಿರುವುದರಿಂದ ಪುನರುಕ್ತಿದೋಷವು ಬರುತ್ತದೆ. ಎರಡು ಪದಾರ್ಥಗಳ

ಅವಿನಾಭಾವವೇ ಆಕಾಂಕ್ಷೆ ಎಂದು ಹೇಳಿದರೆ, ಅವಿನಾಭಾವವು ಕಾರಣವಲ್ಲ. ಏಕೆಂದರೆ ನೀಲಂ ಸರೋಜಂ ಎಂಬಲ್ಲಿ ಅವಿನಾಭಾವವಿಲ್ಲದಿದ್ದರೂ ಸಂಸರ್ಗಗ್ರಹ ಉಂಟಾಗುತ್ತದೆ. ಏಕೆಂದರೆ ಕೆಂಪು ಕಮಲದಲ್ಲಿ ನೀಲರೂಪವಿಲ್ಲ. ಸರೋಜಭಿನ್ನ ಆಗಸೆಯೂ ಕೂಡ ನೀಲಿಯಾಗಿದೆ. ''ಅಲ್ಲಿ ವಿಶೇಷವಾಗಿ ನೀಲ ಮತ್ತು ಸರೋಜಗಳಿಗೆ ಪರಸ್ಪರ ಪರಿಹಾರದಿಂದ ವೃತ್ತಿಯಿದ್ದರೂ ನೀಲ ಮತ್ತು ಸರೋಜಗಳಲ್ಲಿರುವ ಧರ್ಮರೂಪಗಳಾದ ಗುಣತ್ವ ಮತ್ತು ದ್ರವ್ಯತ್ವಕ್ಕೆ ಆಶ್ರಯವಾದ ಗುಣ ಮತ್ತು ಧರ್ಮಗಳಿಗೆ ಅವಿನಾಭಾವವು ಇದ್ದೇ ಇದೆ. ಆದ್ದರಿಂದ ಯಾವುದಾದರೂ ರೀತಿಯಲ್ಲಿ ಅವಿನಾಭಾವವಿದ್ದರೆ ಸಾಕು ಅದು ಸಂಸರ್ಗಗ್ರಹವನ್ನು ಕುರಿತು ಕಾರಣವಾಗುತ್ತದೆ. ಆದ್ದರಿಂದ ವ್ಯಭಿಚಾರವಿಲ್ಲ'' ಎಂದು ಹೇಳಿದರೆ, ಹಾಗಾದರೆ 'ಅಹೋ ವಿಮಲಂ ಜಲಂ ನದ್ಯಾಃ' ಎಂಬ ವಾಕ್ಯ ಪ್ರಯೋಗಾನಂತರದಲ್ಲಿ 'ಕಚ್ಛೇ ಮಹಿಷಶ್ಚರತಿ' ಎಂಬ ವಾಕ್ಯವನ್ನು ಪ್ರಯೋಗ ಮಾಡಿದಾಗ ಅಲ್ಲಿ ವಾಕ್ಯಭೇದವು ಬಾರದಿರಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಸಾಕಾಂಕ್ಷತ್ವವಿರುವ ಕಡೆಗಳಲ್ಲಿ ಒಂದೇ ವಾಕ್ಯವೆಂದಷ್ಟೆ ವಾಕ್ಯಜ್ಞರ ಅಭಿಪ್ರಾಯ. ನದಿ ಮತ್ತು ಕಚ್ಛಗಳಿಗೆ ಅವಿನಾಭಾವರೂಪವಾದ ಆಕಾಂಕ್ಷೆಯು ಇದ್ದೇ ಇದೆ. ಆದ್ದರಿಂದ ವಾಕ್ಯಭೇದವು ಬಾರದಿರಲಿ ಎಂಬ ಆಪತ್ತಿಯು ಉಂಟಾಗುತ್ತದೆ. ಇನ್ನು ಶ್ರೋತ್ರನಿಷ್ಠವಾದ ಜಿಜ್ಞಾಸೆಯೇ ಆಕಾಂಕ್ಷಾ ಎಂದು ಹೇಳಿದರೆ ಇದೇನೋ ಸತ್ಯವಾದುದು, ಆದರೂ ಅದರ ಸ್ವರೂಪವನ್ನು ನಿಷ್ಕರ್ಷೆಮಾಡಲು ಸ್ವಲ್ಪ ವಿಚಾರ ಮಾಡಬೇಕಾಗುತ್ತದೆ. 'ರಕ್ತಃ ಪಟೋ ಭವತಿ' ಎಂಬ ವಾಕ್ಯದಲ್ಲಿ ಪಟದಲ್ಲಿ ರೂಪಜಿಜ್ಞಾಸೆ ಇರುವುದರಿಂದ ರಕ್ತ ಪದವನ್ನು ಬಿಟ್ಟು ಆ ವಾಕ್ಯದ ಏಕದೇಶವಾದ 'ಪಟೋ ಭವತಿ' ಎಂದು ಪ್ರಯೋಗ-ಮಾಡಿದಾಗ ವಾಕ್ಯವು ಪರ್ಯವಸಾನವನ್ನು ಹೊಂದದೇ ಇರಬೇಕಾದೀತು. ಏಕೆಂದರೆ ಪಟದಲ್ಲಿ-ರುವ ಜಿಜ್ಞಾಸೆಯು ಎರಡು ಕಡೆಯಲ್ಲಿಯೂ ಸಮಾನವಾಗಿದೆ. ಮತ್ತು ಎರಡನೆಯ ವಾಕ್ಯದಲ್ಲಿ ಆ ಜಿಜ್ಞಾಸೆಯು ನಿವೃತ್ತವಾಗಿಲ್ಲ. ಅದರಂತೆ ಎಲ್ಲಾ ವಾಕ್ಯಗಳೂ ವಾಕ್ಯಗಳೇ ಅಲ್ಲ. ಹೀಗೆ ಮೇಲೆ-ಮೇಲೆ ಜಿಜ್ಞಾಸೆ ಬರಬಹುದಾದ್ದರಿಂದ ಎಲ್ಲಿಯೂ ಪರ್ಯವಸಾನವಿಲ್ಲ ಎಂದಾಗುತ್ತದೆ. ಇನ್ನು 'ಎಲ್ಲಾ ಜಿಜ್ಞಾಸೆಗಳೂ ಆಕಾಂಕ್ಷೆಯಲ್ಲ. ಆದರೆ ಒಂದುವಾಕ್ಯದಲ್ಲಿ ಎಷ್ಟು ಪದಗಳಿವೆಯೋ ಅಷ್ಟು ಪದಗಳಿಂದ ಉಂಟಾದ ಜಿಜ್ಞಾಸೆಯು ಮಾತ್ರ ಆಕಾಂಕ್ಷೆ. ಆದ್ದರಿಂದ 'ಪಟೋ ಭವತಿ' ಎಂಬ

ವಾಕ್ಯದಲ್ಲಿ ಅಂತಹ ಆಕಾಂಕ್ಷೆಯು ಇರುವುದರಿಂದ ಅದು ಪೂರ್ಣವಾದ ವಾಕ್ಯವೇ ಆಗುತ್ತದೆ'. ಹೀಗೆ ಹೇಳಿದರೆ ಶ್ರೋತೃಜಿಜ್ಞಾಸೆಯು ಆಕಾಂಕ್ಷೆಯಾಗಲಿ, ಆದರೆ ಆಕಾಂಕ್ಷೆಯು ಇದ್ದರೆ ಸಾಕೋ ಅಥವಾ ಆಕಾಂಕ್ಷೆಯ ಜ್ಞಾನವು ಬೇಕೋ ಎಂದು ಪ್ರಶ್ನೆ. ಆಕಾಂಕ್ಷೆಯ ಉತ್ಪತ್ತಿ ಮಾತ್ರ ಸಾಕು. ಅದು ಸ್ವರೂಪಸತ್ ಆಗಿ ಸಂಸರ್ಗ ಜ್ಞಾನವನ್ನು ಕುರಿತು ಕಾರಣವಾಗುತ್ತದೆ ಎಂದು ಹೇಳಿದರೆ, ಆತ್ಮಮನಸ್ಸಂಯೋಗಾದಿಗಳು ಹೇಗೆ ಸತ್ತಯಾ ಕಾರಣವಾಗುತ್ತದೋ ಅದರಂತೆ ಆಕಾಂಕ್ಷೆಯೂ ಕಾರಣವಾಗುವುದರಿಂದ ಜ್ಞಾತವಾಗಿ ಕಾರಣವಾಗುವ ಹೇತುಕೋಟಿಯಲ್ಲಿ ಆಕಾಂಕ್ಷೆಯನ್ನು ನಿವೇಶ ಮಾಡಬಾರದು. ಆಕಾಂಕ್ಷೆಯನ್ನು ಬಿಟ್ಟು ಕೇವಲ ಆಸತ್ತಿಯೋಗ್ಯತಾವತ್ತ್ವದ ಎಂದಿಷ್ಟೇ ವಿವಕ್ಷೆ ಮಾಡಿದರೆ 'ಅಯಮೇತಿ ಪುತ್ರೋರಾಜ್ಞಃ' ಎಂಬ ವಾಕ್ಯಪ್ರಯೋಗದ ನಂತರ 'ಪುರುಷೋ ಅಪಸಾರ್ಯತಾಂ' ಎಂದು ವಾಕ್ಯಪ್ರಯೋಗವನ್ನು ಮಾಡಿದಾಗ ರಾಜಪದ ಮತ್ತು ಪುರುಷ-ಪದಗಳಿಗೆ ಆಸತ್ತಿ ಮತ್ತು ಯೋಗ್ಯತೆಗಳು ಇರುವುದರಿಂದ, ವಾಸ್ತವವಾಗಿ ಪುರುಷನು ರಾಜ-ಸಂಬಂಧಿಯಲ್ಲದಿದ್ದಾಗ ಸಂಸರ್ಗವತ್ತ್ವರೂಪವಾದ ಸಾಧ್ಯವಾಗಲೀ, ಸಂಸರ್ಗಜ್ಞಾನಪೂರ್ವಕತ್ವ-ರೂಪಸಾಧ್ಯವಾಗಲೀ ಇಲ್ಲದಿರುವುದರಿಂದ ವ್ಯಭಿಚಾರವು ಬರುತ್ತದೆ.

## ಜ್ಞಾಯಮಾನ ಆಕಾಂಕ್ಷೆಯು ಕಾರಣ ಎಂಬ ಪಕ್ಷದಲ್ಲಿ ದೋಷ

द्वितीयस्तु स्यादपि, यद्यनुमानान्तरवत् तत्सद्भावेऽपि तज्ज्ञान-वैधुर्यादन्वयप्रत्ययो न जायते । नत्वेतदस्ति, आसत्तियोग्यता-मात्रप्रतिसन्धानादेव साकाङ्क्षस्य सर्वत्र वाक्यार्थप्रत्ययात् । निवृत्ताकाङ्क्षस्य च तदभावात् । कथमेष निश्चयः, साकाङ्क्ष एव प्रत्येति, न तु ज्ञाताकाङ्क्ष इति चेत् – तावन्मात्रेणोपपत्ता-वनुपलभ्यमानज्ञानकल्पनाऽनुपपत्तेः । अन्यथा तथा दर्शनाच्च । यथा(दा) हि दूराद्दृष्टसामान्यो जिज्ञासते कोऽयमिति, प्रत्यासीदंश्च, स्थाणुरयमिति प्रत्येति, तदा 'अस्य ज्ञातुमह-

मिच्छामि' इत्यनुव्यवसायाभावेऽपि स्थाणुरयमित्यर्थ(न्वय)-प्रत्ययो भवति – तथेहाप्यविशेषात् विशेषोपस्थानकाले संसर्गावगतिरेव जायते, न तु जिज्ञासावगतिरिति । न च विशेषोपस्थानात् प्रागेव जिज्ञासावगतिः प्रकृतोपयोगिनी, तावन्मात्रस्यानाकाङ्क्षा(ङ्क्ष)त्वात् ।

न चैवम्भूतोऽप्ययमैकान्तिको हेतुः । यदा हि 'अहमेति पुत्रो राज्ञः पुरुषोऽपसार्यताम्' इति वक्तोच्चारयति, श्रोता च व्यासङ्गादिना निमित्तेन अयमेति पुत्र इत्यश्रुत्वैव; 'राज्ञः पुरुषोऽपसार्यताम्' इति शृणोति, तदाऽस्त्यकाङ्क्षादिमत्त्वे सति पदकदम्बकत्वम्? न च स्मारितार्थसंसर्गज्ञानपूर्वकत्वमिति ।।

ಹಾಗಾದರೆ ಜ್ಞಾಯಮಾನವಾದ ಆಕಾಂಕ್ಷೆಯು ಸಂಸರ್ಗಗ್ರಹವನ್ನು ಕುರಿತು ಕಾರಣ ಎಂಬ ಎರಡನೆಯ ಪಕ್ಷವನ್ನು ಸ್ವೀಕರಿಸುತ್ತೇವೆ. ಆದ್ದರಿಂದ ಹೇತುವಿನಲ್ಲಿ ಆಕಾಂಕ್ಷೆಯನ್ನು ನಿವೇಶಮಾಡುವುದರಿಂದ ವ್ಯಭಿಚಾರವೂ ಇಲ್ಲ ಎಂದು ಹೇಳಿದರೆ ಸ್ವರೂಪಸತ್ತಯಾ ಜನಕತ್ವವು ಕೂಡದಿದ್ದರೆ ಮಾತ್ರ ಜ್ಞಾಯಮಾನತ್ವ ಪಕ್ಷವನ್ನು ಅವಲಂಬಿಸಬೇಕು. ಆಸತ್ತಿ ಯೋಗ್ಯತಾ, ವ್ಯಾಪ್ತಿ, ಪಕ್ಷಧರ್ಮತಾ ಇವುಗಳಿಗೆ ಸ್ವರೂಪಸತ್ತಯಾ ಜನಕತ್ವವು ಕೂಡುವುದಿಲ್ಲ. ಆದ್ದರಿಂದ ಅಲ್ಲಿ ಜ್ಞಾನಪರ್ಯಂತವಾಗಿ ಹೋಗಬೇಕು. ಆದರೆ ಪ್ರಕೃತವಾದ ಆಕಾಂಕ್ಷೆಯಲ್ಲಿ ಹಾಗಿಲ್ಲ. ಆಸತ್ತ್ಯಾದಿಜ್ಞಾನವುಳ್ಳ ಪುರುಷನಿಗೆ ಸ್ವತಃ ಆಕಾಂಕ್ಷೆಯಿದ್ದರೆ ಅಷ್ಟರಿಂದಲೇ ಬೋಧವು ಉಂಟಾಗುತ್ತದೆ. ಮತ್ತು ಆಕಾಂಕ್ಷೆಯು ನಿವೃತ್ತವಾದರೆ ಬೋಧವುಂಟಾಗುವುದಿಲ್ಲ. ಅಷ್ಟೇ ಅಲ್ಲದೇ ಆಕಾಂಕ್ಷಾಜ್ಞಾನವು ಕಾರಣ ಎಂದು ಹೇಳಿದರೆ ಆಕಾಂಕ್ಷೆಯು ಇಲ್ಲದೇ ಆಕಾಂಕ್ಷೆಯ ಭ್ರಮಸ್ಥಳದಲ್ಲಿಯೂ ಕೂಡ ಆಕಾಂಕ್ಷೆಯ ಜ್ಞಾನವಿರುವುದರಿಂದ ಬೋಧ ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಇದನ್ನು ಪರಿಹಾರ ಮಾಡಲು 'ಆಕಾಂಕ್ಷೆಯ ಜ್ಞಾನವು ಇಷ್ಟೇ ಸಾಲದು, ಆಕಾಂಕ್ಷೆಯು ನಿವೃತ್ತವಾದಾಗ

ಬೋಧವು ಉಂಟಾಗುವುದಿಲ್ಲವಾದ ಕಾರಣ ಆಕಾಂಕ್ಷೆಯ ಸದ್ಭಾವವು ಅಪೇಕ್ಷಿತವಾಗಿರುತ್ತದೆ. ಆದ್ದರಿಂದ ಕೇವಲ ಆಕಾಂಕ್ಷೆಯ ಉತ್ಪತ್ತಿ ಮಾತ್ರದಿಂದ ವಾಕ್ಯಾರ್ಥ ಪ್ರತ್ಯಯವು ಹೇಗೆ ಉಂಟಾಗುತ್ತದೆ' ಎಂದು ಪ್ರಶ್ನೆಮಾಡಿದರೆ ಹೀಗೆ ಉತ್ತರವನ್ನು ಹೇಳುತ್ತೇವೆ. ಆಕಾಂಕ್ಷಾತ್ವೇನ ಕಾರಣತ್ವವನ್ನು ಹೇಳುವುದನ್ನು ಬಿಟ್ಟು ಜ್ಞಾಯಮಾನ ಆಕಾಂಕ್ಷಾತ್ವೇನ ಕಾರಣತ್ವವನ್ನು ಕಲ್ಪನೆ ಮಾಡಿದರೆ ಗೌರವವು ಉಂಟಾಗುತ್ತದೆ. ಮತ್ತು ಆಕಾಂಕ್ಷಾ ಜ್ಞಾನವು ಉತ್ಪತ್ತಿಯಾಗದಿದ್ದಾಗಲೂ ಆಕಾಂಕ್ಷಾಜ್ಞಾನಕ್ಕೆ ಉತ್ಪತ್ತಿಯನ್ನು ಕಲ್ಪನೆಮಾಡಬೇಕಾಗಿ ಬರುವುದರಿಂದಲೂ ಗೌರವವು ಬರುವುದರಿಂದ ಕೇವಲ ಆಕಾಂಕ್ಷಾ ಉತ್ಪತ್ತಿ ಮಾತ್ರದಿಂದಲೇ ವಾಕ್ಯಾರ್ಥ ಪ್ರತ್ಯಯವು ಬರುತ್ತದೆ ಎಂದು ನಿಶ್ಚಯಮಾಡುತ್ತೇವೆ. ಇನ್ನು ಪ್ರತ್ಯಕ್ಷಸ್ಥಳದಲ್ಲಿ ಜಿಜ್ಞಾಸೆಯು ಸತ್ತಯಾ ಕಾರಣವಾಗಿರುವುದರಿಂದಲೂ ಸಹ ಇಲ್ಲಿಯೂ ಸಹ ಆಕಾಂಕ್ಷೆಯು ಸತ್ತಯಾಕಾರಣವೆಂದು ಹೇಳುತ್ತೇವೆ. ಪ್ರತ್ಯಕ್ಷಸ್ಥಳದಲ್ಲಿ ಹೇಗೆಂದರೆ ದೂರದಿಂದ ನೋಡಿದಾಗ ಊರ್ಧ್ವತಾ ಸಾಮಾನ್ಯ ಜ್ಞಾನವಾಗುತ್ತದೆ. ಅದರಿಂದ ವಿಶೇಷ ಜಿಜ್ಞಾಸೆಯು ಉಂಟಾಗುತ್ತದೆ. ಅನಂತರ ಸಮೀಪಕ್ಕೆ ಹೋದಾಗ ವಿಶೇಷ ಸನ್ನಿಕರ್ಷ ಉಂಟಾಗುತ್ತದೆ. ಅನಂತರ 'ಅಯಂ ಸ್ಥಾಣುಃ' ಎಂಬ ವಿಶೇಷ ಪ್ರತ್ಯಕ್ಷವು ಬರುತ್ತದೆ ಎಂಬುದು ಕ್ರಮ. ಅಲ್ಲಿ ವಿಶೇಷಪ್ರತ್ಯಕ್ಷವು ಜಿಜ್ಞಾಸಾ ವಿಷಯಕಜ್ಞಾನಾನಂತರದಲ್ಲಿ ಏನೂ ಉತ್ಪತ್ತಿಯಾಗುವುದಿಲ್ಲ.

ಅದರಂತೆ ಇಲ್ಲಿಯೂ ಜಿಜ್ಞಾಸೆಯಿದ್ದು ಅದರಿಂದ ಪದಾರ್ಥದ ವಿಶೇಷಸ್ಮರಣೆಯು ಬಂದಾಗ ಜಿಜ್ಞಾಸಾವಿಷಯಕ ಜ್ಞಾನವಿಲ್ಲದಿದ್ದರೂ ಆಸತ್ತಿ, ಯೋಗ್ಯತೆಗಳ ಅನುಸಂಧಾನ ಮಾತ್ರದಿಂದಲೇ ಸಂಸರ್ಗಜ್ಞಾನವು ಉಂಟಾಗುತ್ತದೆ. ಹೊರತು ಜಿಜ್ಞಾಸಾಜ್ಞಾನವು ಇಲ್ಲವೆಂಬ ಕಾರಣದಿಂದ ಸಂಸರ್ಗಗ್ರಹದಲ್ಲಿ ವಿಲಂಬವುಂಟಾಗುವುದಿಲ್ಲ. ಹಾಗಾದರೆ ಮೊದಲು ಜಿಜ್ಞಾಸೆಯ ಉತ್ಪತ್ತಿ, ಅನಂತರ ಜಿಜ್ಞಾಸೆಯ ಜ್ಞಾನ, ಅನಂತರ ಪದಾರ್ಥ ವಿಶೇಷ ಸ್ಮರಣೆ, ಅನಂತರ ಪ್ರತ್ಯಯ ಎಂದು ಕ್ರಮವನ್ನು ಹೇಳುತ್ತೇವೆ ಎಂದು ಶಂಕಿಸಿದರೆ, ಅದಕ್ಕೆ ಹೀಗೆ ಉತ್ತರವನ್ನು ಹೇಳುತ್ತೇವೆ. ಕೇವಲ ಜಿಜ್ಞಾಸೆಯು ಆಕಾಂಕ್ಷೆಯಲ್ಲ. ಪದಾರ್ಥ ವಿಶೇಷ ಸ್ಮರಣೆ ವಿಶಿಷ್ಟವಾದ ಜಿಜ್ಞಾಸೆಯೇ ಆಕಾಂಕ್ಷೆ ಎಂದು ಹಿಂದೆಯೇ ಹೇಳಿದ್ದೇವೆ. ಅಂತಹ ವಿಶಿಷ್ಟ ಜಿಜ್ಞಾಸೆಯ ಜ್ಞಾನವೇ ಆಕಾಂಕ್ಷಾಜ್ಞಾನವೆಂದು

ಅಂಗೀಕರಿಸಬೇಕು. ಆದರೆ ವಿಶೇಷ ಸ್ಮರಣೆ ಮತ್ತು ಸಂಸರ್ಗ- ಗ್ರಹಗಳ ಮಧ್ಯಕಾಲದಲ್ಲಿ ಅಂತಹ ಆಕಾಂಕ್ಷಾಜ್ಞಾನವು ಅನುಭವ ಸಿದ್ಧವಾಗಿಲ್ಲವಾದ್ದರಿಂದ ನೀವು ಹೇಳುವ ಕ್ರಮವನ್ನು ಒಪ್ಪಲು ಸಾಧ್ಯವಿಲ್ಲ.

ಜಿಜ್ಞಾಸೆಗೆ ಸತ್ತಯಾ ಕಾರಣತ್ವವು ಕೂಡುವುದಾದರೂ ವ್ಯಭಿಚಾರ ಪರಿಹಾರಾರ್ಥವಾಗಿ ಜ್ಞಾಯಮಾನತ್ವೇನ ಕಾರಣತ್ವವನ್ನು ಹೇಳಬೇಕು. ಆಗಲೂ ಶಬ್ದರೂಪವಾದ ಅತಿರಿಕ್ತವಾದ ಪ್ರಮಾಣವನ್ನು ಅಂಗೀಕರಿಸದೆ ಇರುವುದರಿಂದ ಲಾಘವವು ಇದ್ದೇಇದೆ ಎಂದು ಆಕ್ಷೇಪಿಸಿದರೆ ಅದಕ್ಕೆ ಉತ್ತರ, ಲಾಘವವು ಇರಲಿ ಆದರೆ ಹೇತುವಿಗೆ ವ್ಯಭಿಚಾರ ದೋಷವು ಬಂದೇಬರುತ್ತದೆ ಎಂದು. ವಕ್ತೃವು 'ಅಯಮೇತಿ ಪುತ್ರೋರಾಜ್ಞಃ ಪುರುಷೋ ಅಪಸಾರ್ಯತಾಂ' ಎಂಬ ಸಮಗ್ರ-ವಾಕ್ಯವನ್ನು ಪ್ರಯೋಗಿಸಿದಾಗ ಶ್ರೋತೃವಿಗೆ ಮನೋವಿಕ್ಷೇಪದಿಂದ ಅಯಮೇತಿ ಪುತ್ರಃ ಎಂಬ ಅಂಶವು ಕೇಳಿಸದೆ ರಾಜ್ಞಃ ಪುರುಷೋ ಅಪಸಾರ್ಯತಾಂ ಎಂಬ ಇಷ್ಟೇ ಅಂಶವನ್ನು ಕೇಳಿಸಿ-ಕೊಂಡಾಗ ಅಲ್ಲಿ ಶ್ರುತವಾದ ಪದಕದಂಬದಲ್ಲಿ ಜ್ಞಾಯಮಾನ ಆಕಾಂಕ್ಷಾದಿ ವಿಶಿಷ್ಟ ಹೇತುವಿದೆ. ಆದರೆ ವಿವಕ್ಷಿತವಾದ ಪದಾರ್ಥಸಂಸರ್ಗಜ್ಞಾನಪೂರ್ವಕತ್ವ ರೂಪವಾದ ಸಾಧ್ಯವು ಇಲ್ಲದೇ ಇರುವುದರಿಂದ ವ್ಯಭಿಚಾರವು ಬಂದೇ ಬರುತ್ತದೆ.

## ಅನುಮಾನಕ್ಕೆ ಇನ್ನೊಂದು ದೋಷ

स्यादेतत् – यावत्समभिव्याहृतत्वेन विशेषिते हेतौ नायं दोषः; तथाविधस्य व्यभिचारोदाहरणासंस्पर्शात् । कुतस्त्यस्तर्हि कतिपयपदश्राविणः संसर्गप्रत्ययः? अलिङ्ग एव लिङ्गत्वाध्यारोपात् । एतावनेवायं समभिव्याहार इति तत्र श्रोतुरभिमानः - न - तत्संदेहेऽपि श्रुतानुरूपसंसर्गावगमात् । भवति हि तत्र प्रत्ययः, न जाने किमपरमनेनोक्तम्, एतावदेव श्रुतम्, यद्राज्ञः पुरुषोऽ-

पसार्यतामिति । भ्रान्तिरसाविति चेत् – न तावदसौ दुष्टेन्द्रियजा, परोक्षाकारत्वात् । न लिङ्गाभासजा, लिङ्गाभिमानाभावेऽपि जायमानत्वात् । एतावत्प(दृक्प)दकदम्बप्रतिसन्धानमेव तां जनयतीति चेत् । यद्येवम्, तदेवादुष्टं सदभ्रान्तिं जनयन् केन वारणीयम् । व्याप्तिप्रतिसन्धानं विनाऽपि तस्य संसर्गप्रत्यायने सामर्थ्यावधारणात् चक्षुरादिवत् ॥

'नास्त्येव तत्र संसर्गप्रत्ययः, असंसर्गाग्रहमात्रेण तु तथा व्यवहारः' इति चेत् – तर्हि यावत् समभिव्याहारेणापि विशेषणेनाप्रतीकारः, तथाभूतस्यानाप्तवाक्यस्य संसर्गज्ञानपूर्वकत्वाभावात् । असंसर्गाग्रहपूर्वकत्वमात्रे साध्ये न व्यभिचार इति चेत्, एवं तर्हि संसर्गो न सिद्ध्येत् । आप्तवाक्येषु सेत्स्यतीति चेन्न – सर्वविषयाऽऽप्तत्वस्यासिद्धेः यत्र क्वचिदाप्तत्वस्यानैकान्तिकत्वात्, प्रकृतविषये चाप्तत्वसिद्धौ संसर्गविशेषस्य प्रागेव सिद्ध्यभ्युपगमादित्युक्तम् ।

न च सर्वत्र जिज्ञासा निबन्धनम्, अजिज्ञासोरपि वाक्यार्थप्रत्ययात् । आकाङ्क्षापदार्थस्तर्हि कः? जिज्ञासां प्रति योग्यता । सा च स्मारिततदाक्षिप्तयोर(प्ता)विनाभावे सति श्रोतरि तदुत्पाद्यसंसर्गावगमप्रागभावः । न चैषोऽपि ज्ञानमपेक्षते, प्रतियोगिनिरूपणाधीननिरूपणत्वात् तदभावस्य, तस्य च विषयनिरूप्यत्वादिति ॥

## ವೈಶೇಷಿಕಾನುಮಾನದಲ್ಲಿ ಹೇತುವನ್ನು ಪರಿಷ್ಕಾರ ಮಾಡಿದರೂ ದೋಷವಿದೆ

ಈ ಮುಂದೆ ಹೇಳುವ ಆಕ್ಷೇಪವು ಕೂಡುತ್ತದೆ – ಸಹೋಚ್ಚರಿತ ಯಾವತ್ಪದಕದಂಬ ರೂಪತ್ವೇಸತಿ ಆಕಾಂಕ್ಷಾದಿಮತ್ತ್ವವನ್ನು ಹೇತುವೆಂದು ಹೇಳುತ್ತೇವೆ. ಆದ್ದರಿಂದ ಹಿಂದೆ ಹೇಳಿದ ಸ್ಥಳದಲ್ಲಿ ಯಾವತ್‌ಪದಕದಂಬತ್ವರೂಪ ವಿಶೇಷಣವು ಇಲ್ಲದಿರುವುದರಿಂದ ಹೇತುವೇ ಇಲ್ಲ. ಆದ್ದರಿಂದ ವ್ಯಭಿಚಾರದೋಷವಿಲ್ಲ. ಅಲ್ಲಿ ಶ್ರೋತೃವಿಗೆ ಸಂಸರ್ಗಪ್ರತ್ಯಯವಂತೂ ಅನುಭವ ಸಿದ್ಧವಾಗಿದೆ. ಆದರೆ ಅದು ಕತಿಪಯ ಪದಗಳಲ್ಲಿ ಯಾವತ್ತ್ವಜ್ಞಾನರೂಪವಾದ ಹೇತುಭ್ರಮ-ದಿಂದಲೇ ನಿರ್ವಾಹವಾಗುತ್ತದೆ ಎಂಬ ಈ ಪರಿಹಾರವೂ ಸರಿಯಲ್ಲ. ಯಾವತ್ತ್ವಭ್ರಮವಿಲ್ಲ-ದಿದ್ದರೂ ವಕ್ತೃವು ಇಷ್ಟೇ ಪದಗಳನ್ನು ಹೇಳಿದ್ದಾನೆಯೋ ಅಥವಾ ಇದಕ್ಕಿಂತ ಹೆಚ್ಚು ಪದವನ್ನು ಹೇಳಿದ್ದಾನೆಯೋ ಎಂಬ ಸಂದೇಹವಿರುವಾಗಲೂ ಶ್ರುತವಾದ ಭಾಗಕ್ಕೆ ಇದು ಅರ್ಥ ಎಂದು ಸಂಸರ್ಗಜ್ಞಾನೋತ್ಪತ್ತಿಯು ಅನುಭವಸಿದ್ಧವಾಗಿದೆ. ಆದ್ದರಿಂದ ಯಾವತ್ತ್ವ ನಿಶ್ಚಯಕ್ಕೆ ಕಾರಣತ್ವವು ಕೂಡುವುದಿಲ್ಲವಾದ್ದರಿಂದ ಹೇತುಕೋಟಿಯಲ್ಲಿ ಯಾವತ್ತ್ವವನ್ನು ನಿವೇಶಮಾಡಬಾರದು. ಏಕೆಂದರೆ ನಿಶ್ಚಯರೂಪವಾದ ಹೇತುಜ್ಞಾನವೇ ಅನುಮಿತಿಗೆ ಕಾರಣವಷ್ಟೆ. ಇಲ್ಲಿ ಸಂದೇಹವಿದ್ದರೂ ಸಂಸರ್ಗಗ್ರಹಾನುಮಿತಿ ಬರುತ್ತಿದೆ. 'ರಾಜ್ಞಃ ಪುರುಷೋ ಅಪಸಾರ್ಯತಾಂ' ಎಂಬ ಇಷ್ಟೇ ಭಾಗದ ಶ್ರವಣದಿಂದ ಉಂಟಾದ ಸಂಸರ್ಗಜ್ಞಾನವು ಭ್ರಾಂತಿ ಎಂದು ಹೇಳುತ್ತೇವೆ. ಯಾವತ್ತ್ವಘಟಿತ ಹೇತು ನಿಶ್ಚಯವು ಪ್ರಮೆಯನ್ನು ಕುರಿತು ಮಾತ್ರ ಕಾರಣವಾಗುತ್ತದೆ ಎಂದು ಅಂಗೀಕರಿಸುವುದರಿಂದ ಹೇತುಕೋಟಿಯಲ್ಲಿ ಯಾವತ್ತ್ವವನ್ನು ನಿವೇಶಮಾಡಿದರೆ ದೋಷವಿಲ್ಲ ಎಂದು ಆಕ್ಷೇಪ ಮಾಡಿದರೆ ಹೀಗೆ ಸಮಾಧಾನವನ್ನು ಹೇಳುತ್ತೇವೆ. ಈ ಸಂಸರ್ಗವನ್ನು ಭ್ರಾಂತಿಯೆಂದು ಅಂಗೀಕರಿಸಿದರೂ ಕಾರಣವಿಲ್ಲದೇ ಆ ಭ್ರಾಂತಿಯು ಉತ್ಪನ್ನವಾಗುವುದಿಲ್ಲ. ವೈಶೇಷಿಕರಾದ ನೀವು ಪ್ರತ್ಯಕ್ಷ ಮತ್ತು ಅನುಮಾನಗಳು ಎರಡು ಮಾತ್ರ ಪ್ರಮಾಣಗಳೆಂದು ಒಪ್ಪುವುದರಿಂದ ಪ್ರಕೃತವಾದ ಸಂಸರ್ಗ-ಭ್ರಾಂತಿಯು ಪ್ರತ್ಯಕ್ಷರೂಪವಲ್ಲವಾದ್ದರಿಂದ ಇಂದ್ರಿಯ ದೋಷಾಧೀನವಲ್ಲ. ಇನ್ನು ಹೇತುಭ್ರಮಾ-ಧೀನವಾದ ಅನುಮಿತಿ ರೂಪವಾದ ಸಂಸರ್ಗಜ್ಞಾನ ಎಂದು ಹೇತ್ವಾಭಾಸದಲ್ಲಿ ಅಂತರ್ಭಾವವನ್ನು

ಹೇಳಬೇಕು. ಮತ್ತು ಕತಿಪಯ ಪದಗಳಲ್ಲಿ ಯಾವತ್ತ್ವಜ್ಞಾನವನ್ನೇ ಹೇತುಭ್ರಮವೆಂದು ಹೇಳಬೇಕು. ಆದರೆ ಅದೂ ಕೂಡುವುದಿಲ್ಲ. ಯಾವತ್ತ್ವಸಂದೇಹವಿದ್ದರೂ ಸಂಸರ್ಗಗ್ರಹ ಉಂಟಾಗುತ್ತದೆ ಎಂದು ಹಿಂದೆಯೇ ಹೇಳಿದ್ದೇವೆ. ಇನ್ನು ಕತಿಪಯತ್ವರೂಪ ದೋಷದುಷ್ಟವಾದ ಪದಕದಂಬದ ಪ್ರತಿಸಂಧಾನವೇ ಭ್ರಾಂತಿ ಜನಕವೆಂದು ಹೇಳಬೇಕು. ಹೀಗೆ ಹೇಳಿದರೆ ಯಾವುದು ದುಷ್ಟವಾಗಿ ವ್ಯಾಪ್ತಿ ಜ್ಞಾನ ಪರಾಮರ್ಶ ನಿರಪೇಕ್ಷವಾಗಿ ಭ್ರಾಂತಿಯನ್ನು ಉಂಟುಮಾಡುತ್ತದೆಯೋ ಅದೇ ಕಾರಣವೇ ಅದುಷ್ಟವಾಗಿ ಪ್ರಮಿತಿಯನ್ನು ಉಂಟುಮಾಡುತ್ತದೆ ಎಂದು ಸ್ವೀಕರಿಸಿದಂತಾಯಿತು. ಒಂದು ಅನುಮಾನವನ್ನು ಪ್ರಯೋಗಿಸುವುದಾದರೆ 'ಪದಕದಂಬವು ದೋಷ ಅಸಮವಧಾನ ಸಹಕಾರದಿಂದ ವ್ಯಾಪ್ತ್ಯಾದಿ ನಿರಪೇಕ್ಷವಾಗಿ ಪ್ರಮಿತಿಜನಕವಾಗಿದೆ. ದೋಷಸಹಕಾರದಿಂದ ವ್ಯಾಪ್ತ್ಯಾದಿ ನಿರಪೇಕ್ಷವಾಗಿ ಭ್ರಮವನ್ನು ಉಂಟುಮಾಡುವುದರಿಂದ ಚಕ್ಷುರಾದಿಗಳಂತೆ' ಎಂಬ ಈ ಅನುಮಾನದಿಂದ ಪದಕದಂಬಕ್ಕೆ ವ್ಯಾಪ್ತ್ಯಾದಿ ನಿರಪೇಕ್ಷವಾಗಿ ಪ್ರಮಿತಿ ಜನಕತ್ವವು ಸಿದ್ಧವಾಗುವುದರಿಂದ ಶಬ್ದವು ಅನುಮಾನಾತಿರಿಕ್ತ ಪ್ರಮಾಣವೆಂದು ಅಂಗೀಕರಿಸಲೇಬೇಕಾಗುತ್ತದೆ.

## ಪ್ರಾಭಾಕರ ಮತದ ವಿಮರ್ಶೆ

ವೈಶೇಷಿಕಮತದಲ್ಲಿ ಹೀಗೆ ದೋಷವು ಬರಬಹುದಾದರೂ ಪೌರುಷೇಯ ಶಬ್ದವು ಅನುಮಾನದಲ್ಲಿ ಅಂತರ್ಭಾವವನ್ನು ಹೊಂದುತ್ತದೆ ಎಂದು ಹೇಳುವ ಪ್ರಾಭಾಕರರ ಮತದಲ್ಲಿ ಈ ದೋಷವು ಬರುವುದಿಲ್ಲ. ಏಕೆಂದರೆ ಪ್ರಾಭಾಕರರಿಗೆ ಅಸಂಸರ್ಗ ಅಗ್ರಹವೇ ಭ್ರಾಂತಿ ಪದಾರ್ಥವಾದುದು. ಅನ್ಯಥಾ ಖ್ಯಾತಿಯು ಭ್ರಾಂತಿ ಪದಾರ್ಥವಲ್ಲ. ಆದ್ದರಿಂದ ಹೇತುವಿನಲ್ಲಿ ಯಾವತ್ತ್ವ ವಿಶೇಷಣವನ್ನು ಕೊಟ್ಟೇ ಕೊಡುತ್ತೇವೆ. ಅಂತಹ ಯಾವತ್ತ್ವಘಟಿತವಾದ ಹೇತುವು ಜ್ಞಾತವಾದರೆ ಸಂಸರ್ಗಪ್ರಮೆಯು ಉಂಟಾಗುತ್ತದೆ. ವಾಕ್ಯಘಟಕ ಕೆಲವೇ ಪದಗಳನ್ನು (ಕತಿಪಯಪದಗಳನ್ನು) ಕೇಳಿದವನಿಗೆ ಕಾರಣವಿಲ್ಲದಿರುವುದರಿಂದ ಸಂಸರ್ಗಪ್ರಮೆಯು ಉಂಟಾಗುವುದಿಲ್ಲ. ಅನ್ಯಥಾ ಖ್ಯಾತಿಯನ್ನು ಅಂಗೀಕಾರಮಾಡದಿರುವುದರಿಂದ ಅದು ಸಂಸರ್ಗಭ್ರಮವೂ ಅಲ್ಲ. ಆದರೆ ಪ್ರತ್ಯೇಕವಾಗಿ ಉಪಸ್ಥಿತವಿರುವ ಪದಾರ್ಥಗಳಿಗೆ ಪರಸ್ಪರ ಅಸಂಸರ್ಗ ಅಗ್ರಹವು ಮಾತ್ರ

ಉಂಟಾಗುತ್ತದೆ ಎಂದು ಪ್ರಾಭಾಕರ ಮತವನ್ನು ಆಶ್ರಯಿಸಿ ಶಂಕಿಸಿದರೂ ಕೂಡ ಪ್ರಾಭಾಕರಮತ ರೀತಿಯಿಂದಲೂ ಹೇತುವಿಗೆ ವ್ಯಭಿಚಾರದೋಷವು ಬಂದೇಬರುತ್ತದೆ. ಅನಾಪ್ತವಾಕ್ಯಸ್ಥಳದಲ್ಲಿ ಯಾವತ್ತ್ವಘಟಿತಹೇತುವಿದೆ. ಆದರೆ ಸಂಸರ್ಗಜ್ಞಾನ ಪೂರ್ವಕತ್ವವು ಇಲ್ಲ. ಆದ್ದರಿಂದ ವ್ಯಭಿಚಾರವು ಬರುತ್ತದೆ. ಪ್ರಾಭಾಕರ ಮತವನ್ನು ಅವಲಂಬಿಸುವಾಗ ಸಂಸರ್ಗಜ್ಞಾನಪೂರ್ವಕತ್ವವು ಸಾಧ್ಯವಲ್ಲ. ಅಸಂಸರ್ಗ ಅಗ್ರಹ ಪೂರ್ವಕತ್ವವೇ ಸಾಧ್ಯ ಎಂದು ಹೇಳಿದರೆ ಆಗ ಅಸಂಸರ್ಗ ಅಗ್ರಹವಿಶಿಷ್ಟ ಪದಾರ್ಥ ಸ್ಮೃತಿಜನಕತ್ವವು ಸಾಧ್ಯವೆಂದು ಹೇಳಿದಂತಾಯಿತು. ಆಗ ಅನು-ಮಾನಕ್ಕಂತೂ ಸಂಸರ್ಗ ಅನುಮಿತಿಹೇತುತ್ವವಿಲ್ಲ. ಸಂಸರ್ಗಜ್ಞಾನವಂತೂ ಉಂಟಾಗುತ್ತದೆ. ಆದ್ದರಿಂದ ಸಂಸರ್ಗಜ್ಞಾನವನ್ನು ಕುರಿತು ಶಬ್ದವು ಅತಿರಿಕ್ತವಾದ ಪ್ರಮಾಣವೆಂದು ಸಿದ್ಧವಾಗುತ್ತದೆ. ಇನ್ನು ಹೇತುಕೋಟಿಯಲ್ಲಿ ಯಾವತ್ತ್ವವನ್ನು ನಿವೇಶಮಾಡಿ ಸಂಸರ್ಗಜ್ಞಾನ ಪೂರ್ವಕತ್ವವನ್ನು ಸಾಧ್ಯವಾಗಿ ಉದ್ದೇಶಮಾಡುತ್ತೇವೆ. ಆಗ ಅನುಮಾನದಿಂದಲೇ ಸಂಸರ್ಗಗ್ರಹವು ಸಿದ್ಧವಾಗು-ವುದರಿಂದ ಶಬ್ದರೂಪವಾದ ಅತಿರಿಕ್ತಪ್ರಮಾಣವನ್ನು ಅಂಗೀಕರಿಸಬೇಕಾಗಿಲ್ಲ ಎಂದು ಹೇಳಿದರೆ ಅದೂ ಸರಿಯಲ್ಲ. ಹೇತುಕೋಟಿ ಪ್ರವಿಷ್ಟವಾದ ಆಪ್ತತ್ವವು ಪ್ರಮಾತ್ಮಕ ಅನುಭವಶಾಲಿತ್ವ-ರೂಪವಾದುದು. ಆ ಪ್ರಮೆಯು ಸರ್ವವಿಷಯಕವಾದುದೋ? ಯತ್ಕಿಂಚಿತ್ ವಿಷಯಕವಾದು-ದೋ? ಅಥವಾ ಸಂಸರ್ಗವಿಷಯಕವಾದುದೋ? ಎಂದು ವಿಕಲ್ಪಮಾಡಿ ಮೂರುಪಕ್ಷದಲ್ಲಿಯೂ ದೋಷಗಳನ್ನು ಪ್ರಥಮಾನುಮಾನ ಪ್ರಯೋಗ ಸಂದರ್ಭದಲ್ಲಿಯೇ ಹೇಳಿದ್ದೇವೆ. ಆದ್ದರಿಂದ ಹೀಗೆ ಅನುಮಾನವನ್ನು ಪ್ರಯೋಗಮಾಡಲು ಸಾಧ್ಯವಿಲ್ಲವಾದ್ದರಿಂದ ಶಬ್ದರೂಪವಾದ ಅತಿರಿಕ್ತವಾದ ಪ್ರಮಾಣವನ್ನು ಅಂಗೀಕರಿಸಲೇಬೇಕು.

* * * *

## ಆಕಾಂಕ್ಷಾಪದಾರ್ಥನಿರೂಪಣ

ಇಷ್ಟು ಪ್ರಬಂಧದಿಂದ ಜಿಜ್ಞಾಸೆಯೇ ಆಕಾಂಕ್ಷೆಯೆಂದು ಅಂಗೀಕರಿಸಿ ಅದಕ್ಕೆ ಜ್ಞಾಯಮಾನತ್ವೇನ ಕಾರಣತ್ವವು ಇಲ್ಲದಿರುವುದರಿಂದ ಮತ್ತು ಜ್ಞಾಯಮಾನತ್ವೇನ ಕಾರಣತ್ವವನ್ನು ಸ್ವೀಕರಿಸಿದರೂ

ಅನುಮಾನಕ್ಕೆ ದೋಷಾಂತರವು ಬರುವುದರಿಂದ ಜಿಜ್ಞಾಸೆಯು ಆಕಾಂಕ್ಷಾಪದಾರ್ಥವಲ್ಲ ಎಂದು ನಿರೂಪಿಸಿದ್ದಾಯಿತು. ಇನ್ನು ವಸ್ತುತಃ ಆಕಾಂಕ್ಷೆಯ ಸ್ವರೂಪವೇ ಬೇರೆಯಾದುದೆಂದೂ ಅದಕ್ಕೆ ಸತ್ತಯಾಹೇತುತ್ವವಿದೆ ಎಂದೂ ಮತ್ತು ಹೇತುವಿನಲ್ಲಿ ಅದನ್ನು ಪ್ರವೇಶಮಾಡಿಸಲು ಸಾಧ್ಯವಿಲ್ಲವೆಂದೂ ಹೇಳಿ ಅನುಮಾನಕ್ಕೆ ನಾವು ಹೇಳಿದ ಯಾವ ದೋಷವನ್ನೂ ಪರಿಹರಿಸಲು ಸಾಧ್ಯವಿಲ್ಲ ಎಂದು ಹೇಳುತ್ತೇವೆ. ಜಿಜ್ಞಾಸೆಯು ಸಂಸರ್ಗಗ್ರಹವನ್ನು ಕುರಿತು ಕಾರಣವಲ್ಲ. ಏಕೆಂದರೆ ಜಿಜ್ಞಾಸೆ ಇಲ್ಲದವನಿಗೂ ವಾಕ್ಯಾರ್ಥಪ್ರತೀತಿಯು ಉಂಟಾಗುವುದರಿಂದ ವ್ಯಭಿಚಾರವು ಬರುತ್ತದೆ. ಆದ್ದರಿಂದ ಆಕಾಂಕ್ಷಾ ಎಂದರೆ ಜಿಜ್ಞಾಸಾ ಯೋಗ್ಯತ್ವ ಎಂದು ಹೇಳಬೇಕು. ಮತ್ತು ಯೋಗ್ಯತೆ ಎಂದರೆ ಸ್ಮಾರಿತ ಮತ್ತು ತದಾಕ್ಷಿಪ್ತ ಪದಾರ್ಥಗಳಿಗೆ ಅವಿನಾಭಾವ ಎಂದು ಅರ್ಥವಲ್ಲ. ಹಾಗೆ ಮಾಡಿದರೆ 'ನದ್ಯಾಃ, ಕಚ್ಚೇ ...' ಎಂಬಲ್ಲಿ ವಾಕ್ಯಭೇದವು ಉಂಟಾಗಲಾರದು ಎಂಬ ದೋಷವನ್ನು ಮೊದಲೇ ಹೇಳಿದ್ದೇವೆ. ಮತ್ತೇನೆಂದರೆ ಸ್ಮಾರಿತ ಮತ್ತು ತದಾಕ್ಷಿಪ್ತ ಪದಾರ್ಥಗಳಿಗೆ ಅವಿನಾಭಾವವಿರುವಾಗ ತದುತ್ಪಾದ್ಯ ಸಂಸರ್ಗಗ್ರಹದ ಪ್ರಾಗಭಾವವೇ ಆಕಾಂಕ್ಷೆ. ಇದರ ಅರ್ಥವೇನೆಂದರೆ ಸ್ಮಾರಿತವಾದ ಅಥವಾ ತದಾಕ್ಷಿಪ್ತವಾದ ಪದಾರ್ಥಗಳಿಗೆ ಎಲ್ಲಿ ಅವಿನಾ-ಭಾವವಿದೆಯೋ ಅಲ್ಲಿ ಅವಿನಾಭಾವದಿಂದಾಗಲೀ, ಇಲ್ಲದಿದ್ದರೆ ಪ್ರಾಕಾರಾಂತರದಿಂದಾಗಲೀ ಉತ್ಪಾದ್ಯವಾದ ಯಾವ ಸಂಸರ್ಗ ಅವಗಮವಿದೆಯೋ ಅದರ ಪ್ರಾಗಭಾವವೇ ಆಕಾಂಕ್ಷಾ ಎಂದು ಅರ್ಥ. ಅಥವಾ ಜಿಜ್ಞಾಸೋಪಯೋಗಿಯಾದ ಅವಿನಾಭಾವವು ವಾಸ್ತವಿಕವಾಗಿ ಇರುವಾಗ ಮೊದಲು ತದಾಕ್ಷಿಪ್ತ ಎಂದು ಹೇಳಿದಾಗ ತತ್ಪದದಿಂದ ಗೃಹೀತವಾದ ಸ್ಮಾರಿತಾರ್ಥವು ಯಾವುದು ಇದೆಯೋ ಅದರಿಂದ ಉತ್ಪಾದ್ಯವಾದ ಸಂಸರ್ಗಗ್ರಹದ ಪ್ರಾಗಭಾವವೇ ಆಕಾಂಕ್ಷೆ ಎಂದು ಅರ್ಥ. ಅದು ಹೇಗೆಂದರೆ – ಪದಸ್ಮಾರಿತವಾದ ಅರ್ಥವನ್ನೇ ತೆಗೆದುಕೊಂಡು ಗಂಧವತೀ ಪೃಥಿವೀ ಎಂಬಲ್ಲಿ ಸಾಕ್ಷಾತ್ತಾಗಿಯೇ ಅವಿನಾಭಾವವಿದೆ. ನೀಲಂ ಸರೋಜಂ ಇತ್ಯಾದಿ ಸ್ಥಳಗಳಲ್ಲಿ ಅಂತಹ ಅವಿನಾಭಾವವಿಲ್ಲದಿದ್ದರೂ ನೀಲರೂಪವು ಗುಣವಾದ್ದರಿಂದ ದ್ರವ್ಯವಿಲ್ಲದೇ ಅದು ಇರಲು ಸಾಧ್ಯವಿಲ್ಲವಾದ್ದರಿಂದ ಸರೋಜವು ನಾನಾ ವರ್ಣವುಳ್ಳದ್ದಾದ್ದರಿಂದ ಯಾವ ವರ್ಣವೂ ಇಲ್ಲದೆ ಸರೋಜವು ಸಹ ಇರಲು ಸಾಧ್ಯವಿಲ್ಲವಾದ್ದರಿಂದ, ಅದರಂತೆ ಗಾಮಾನಯ ಇತ್ಯಾದಿ ಸ್ಥಳದಲ್ಲಿ

ಗೋಕರ್ಮಕತ್ವವು ಕ್ರಿಯೆಯಿಲ್ಲದಿದ್ದರೆ ಅಸಂಭಾವಿತವಾಗುವುದರಿಂದ ಆನಯನ ಕ್ರಿಯೆಯೂ ಸಹ ಮೂರ್ತದ್ರವ್ಯವಾದ ಒಂದು ಕಾರಕವಿಲ್ಲದಿದ್ದರೆ ಅಸಂಭಾವಿತವಾದುದರಿಂದ, ಸ್ಮಾರಿತ ಮತ್ತು ಆಕ್ಷಿಪ್ತವಾದ ಅರ್ಥವನ್ನು ತೆಗೆದುಕೊಂಡು ಅವುಗಳ ಅವಿನಾಭಾವವನ್ನು ಊಹಿಸಬೇಕು. ಈ ರೀತಿಯಾಗಿ ಅವಿನಾಭಾವದಿಂದಲೇ ಅಲ್ಲಲ್ಲಿ ಜಿಜ್ಞಾಸೆಯುಂಟಾಗುತ್ತದೆ. ಆ ಜಿಜ್ಞಾಸೆಯಾದರೂ ಸ್ಮಾರಕ ಪದವಿರುವಾಗ ಅದರ ಅರ್ಥದ ಅನ್ವಯದಿಂದಲೇ ಶಾಂತವಾಗುತ್ತದೆ. ಸ್ಮಾರಕಪದವು ಇಲ್ಲದಿದ್ದರೆ ಅನುತ್ಪನ್ನವಾಗಿಯೇ ಉಳಿಯುತ್ತದೆ. ಇದರ ಅಭಿಪ್ರಾಯ ಈ ರೀತಿ – ಅವಿನಾಭಾವವು ಆಕಾಂಕ್ಷಾ ಶರೀರದಲ್ಲಿ ಪ್ರವಿಷ್ಟವಾಗಿಲ್ಲ. ಆದರೆ ಅವಿನಾಭಾವವು ಯೋಗ್ಯತೆಯಲ್ಲ ಎಂದು ಸೂಚಿಸಲು ಅವಿನಾಭಾವೇಸತಿ ಎಂದು ವಿಶೇಷಣವನ್ನು ಕೊಡಲಾಗಿದೆ. ತಥಾಚ ಗಾಮಾನಯ ಎಂಬಲ್ಲಿ ಗೋಪದಕ್ಕೆ ಧಾತ್ವನ್ವಯವಾಗುವುದಕ್ಕೆ ಮುಂಚೆ ಸಾಕಾಂಕ್ಷತ್ವವಿದ್ದು ಧಾತ್ವನ್ವಯವಾದ ಮೇಲೆ ನಿರಾಕಾಂಕ್ಷತ್ವ ಉಂಟಾಗುತ್ತದೆ. ಹೀಗೆ ಲೋಕಾನುಭವವಿರುವುದರಿಂದ ಉತ್ಪಾದ್ಯವಾದ ಸಂಸರ್ಗಗ್ರಹದ ಪ್ರಾಗಭಾವವೇ ಆಕಾಂಕ್ಷಾ. ಒಂದುಪದಕ್ಕೆ ಸಾಕಾಂಕ್ಷತ್ವವೆಂದರೆ ತತ್ಪದಸ್ಮಾರಿತ ಅರ್ಥದಿಂದ ಉತ್ಪಾದ್ಯವಾದ ಪದಾಂತರ ಸ್ಮಾರಿತ ಅರ್ಥದ ಜೊತೆಯಲ್ಲಿ ಯಾವ ಸಂಸರ್ಗಾವಗಮವಿದೆಯೋ ಅದರ ಪ್ರಾಗಭಾವ ಎಂದು ಅರ್ಥ. 'ಜಲಂ ನದ್ಯಾಃ, ಪುತ್ರೋರಾಜ್ಞಃ' ಇತ್ಯಾದಿಗಳಲ್ಲಿ ಷಷ್ಠ್ಯಂತವಾದ ಪದಕ್ಕೆ ಯಾವ ಪದದ ಅರ್ಥದ ಜೊತೆಯಲ್ಲಿ ಸಂಸರ್ಗದ ಗ್ರಹವು ಉಂಟಾಗಬೇಕೋ ಅಂತಹ ಪದವಾದ ಜಲ ಮತ್ತು ಪುತ್ರಪದಗಳಿಗೆ ಸಂಸರ್ಗಗ್ರಹವು ಉತ್ಪಾದಿತವಾದುದರಿಂದ ಅಲ್ಲಿ ಸಂಸರ್ಗಾವಗಮದ ಪ್ರಾಗಭಾವವು ಇಲ್ಲದಿರುವುದರಿಂದ ಅಲ್ಲಿ ಪರಸ್ಪರ ನಿರಾಕಾಂಕ್ಷತ್ವವಿದೆ. ಅಲ್ಲಿ ಷಷ್ಠ್ಯಂತವಾದ ನದೀ ಪದಕ್ಕೆ ಕಚ್ಛ (ತೀರ) ದ ಜೊತೆಯಲ್ಲಿ ಹಾಗೆಯೇ ಷಷ್ಠ್ಯಂತವಾದ ರಾಜಪದಕ್ಕೆ ಪುರುಷನ ಜೊತೆಯಲ್ಲಿ ಉತ್ಪಾದ್ಯಮಾನವಾದ ಸಂಸರ್ಗಾವಗಮದ ಪ್ರಾಗಭಾವವಿದೆ. ಆದ್ದರಿಂದ ಅಲ್ಲಿ ಸಾಕಾಂಕ್ಷತ್ವವು ಬರಲಿ ಎಂಬ ಶಂಕೆಯನ್ನು ಮಾಡಬಾರದು. ಆ ಸಂಸರ್ಗಾವಗಮವು ಉತ್ಪಾದ್ಯವೆಂದು ವಕ್ತೃವಿಗೆ ವಿವಕ್ಷಿತವಾಗಿಲ್ಲ. ಇಲ್ಲಿ ಇಂತಹದೇ ಅವಗಮವು ಉತ್ಪಾದ್ಯವಾದುದು ಎಂಬುದು ಕೆಲವೊಮ್ಮೆ ಸಾಧ್ಯವಾದರೆ ಅವಿನಾಭಾವದಿಂದ, ಇನ್ನು ಕೆಲವುಕಡೆ ವಕ್ತೃತಾತ್ಪರ್ಯದಿಂದ, ಇನ್ನು ಕೆಲವು ಕಡೆ ಪ್ರಥಮ

ಶ್ರವಣದಿಂದ ಹೀಗೆ ಯಾವುದಾದರೂ ಪ್ರಕಾರದಿಂದ ನಿಶ್ಚಯಿಸಬೇಕು. ಆದ್ದರಿಂದ ಆ ಪದದಿಂದ ಉತ್ಪಾದ್ಯವಾದ ಸಂಸರ್ಗಾವಗಮದ ಪ್ರಾಗಭಾವವೇ ಆ ಪದದ ಆಕಾಂಕ್ಷೆ ಎಂದು ಸಿದ್ಧವಾಯಿತು. ಈ ಆಕಾಂಕ್ಷೆಯಾದರೂ ಸತ್ತಯಾ ಕಾರಣವಾಗುತ್ತದೆ. ಜ್ಞಾತತಯಾ ಕಾರಣ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಂಸರ್ಗಾವಗಮ ಪ್ರಾಗಭಾವವು ಒಂದು ಅಭಾವವಾದುದರಿಂದ ಇಲ್ಲಿ ಅಭಾವಜ್ಞಾನವು ಅವಗಮರೂಪವಾದ ಪ್ರತಿಯೋಗಿ ಜ್ಞಾನದಿಂದ ಸಾಧ್ಯವಾದುದು. ಪ್ರತಿಯೋಗಿಯಾದ ಅವಗಮವನ್ನಾದರೂ ಸಂಸರ್ಗ ರೂಪವಾದ ವಿಷಯವನ್ನು ಗ್ರಹಿಸದೇ ಗ್ರಹಿಸಲು ಸಾಧ್ಯವಿಲ್ಲ. ಶಬ್ದವನ್ನು ಅನುಮಾನದಲ್ಲಿ ಅಂತರ್ಭಾವವನ್ನು ಮಾಡುವ ಪಕ್ಷದಲ್ಲಿ ಅನುಮಿತಿಗಿಂತ ಮೊದಲು ಸಂಸರ್ಗವು ಗೃಹೀತವಾಗುವುದಿಲ್ಲವಾದ್ದರಿಂದ ಸಂಸರ್ಗಾವಗಮದ ಪ್ರಾಗಭಾವವೂ ಗೃಹೀತವಾಗುವುದಿಲ್ಲ. ಆದ್ದರಿಂದ ಜ್ಞಾತತಯಾ ಕಾರಣತ್ವವನ್ನು ಹೇಳಿದರೆ ಹೇತುಘಟಕವಾದ ಆಕಾಂಕ್ಷೆಯ ಜ್ಞಾನವೇ ಉಂಟಾಗುವುದಿಲ್ಲವಾದ್ದರಿಂದ ತದ್ಘಟಿತವಾದ ಹೇತುಜ್ಞಾನವೇ ಉಂಟಾಗುವುದಿಲ್ಲವೆಂದು ಸಿದ್ಧವಾಗುತ್ತದೆ. ಒಂದುಪಕ್ಷ ಹೇತುಗ್ರಹವನ್ನು ಒಪ್ಪಿದರೆ ಹೇತುಶರೀರಪ್ರವಿಷ್ಟವಾದ ಸಂಸರ್ಗವೂ ಕೂಡ ಅನುಮಿತಿಗಿಂತ ಮೊದಲೇ ಗೃಹೀತವಾಗಿ-ರುವುದರಿಂದ ಅನುಮಾನವು ವ್ಯರ್ಥವಾಗುತ್ತದೆ. ಆದ್ದರಿಂದ ಆಕಾಂಕ್ಷೆಯು ಸತ್ತಯಾ ಹೇತು ಮತ್ತು ಯೋಗ್ಯತಾ ಮತ್ತು ಆಸತ್ತಿಗಳು ಜ್ಞಾತವಾಗಿ ಹೇತು ಎಂದು ಸಿದ್ಧವಾಗುತ್ತದೆ. ಆದ್ದರಿಂದ ಪದಾರ್ಥ ಪಕ್ಷಕವಾದ ಮತ್ತು ಪದಪಕ್ಷಕವಾದ ಎರಡು ಅನುಮಾನಗಳೂ ದುಷ್ಟವಾದುದರಿಂದ ಶಬ್ದವು ಅನುಮಾನದಲ್ಲಿ ಅಂತರ್ಭಾವವನ್ನು ಹೊಂದುವುದಿಲ್ಲ ಎಂಬುದು ಸಿದ್ಧವಾಗುತ್ತದೆ.

* * * *

ವಲ್ಲಭಾಚಾರ್ಯರಿಂದ ವಿರಚಿತವಾದ

# ನ್ಯಾಯಲೀಲಾವತಿ

## ಶಬ್ದಪ್ರಕರಣ

## ಶಬ್ದವು ಅತಿರಿಕ್ತಪ್ರಮಾಣವಲ್ಲ

**न्यायलीलावती–** शब्दस्तु न मानान्तरम् । पदानि स्मारित-संसर्गविज्ञप्तिपूर्वकाणि, योग्यतासत्तिमत्त्वे सति संसृष्टार्थपरत्वात्, गामभ्याजेति पदकदम्बवदित्यनुमानादेव साध्यसिद्धेः ।

ಶಬ್ದವು ಅತಿರಿಕ್ತವಾದ ಪ್ರಮಾಣವಲ್ಲ. "ಪದಗಳು ತಮ್ಮಿಂದ ಸ್ಮಾರಿತವಾದ ಪದಾರ್ಥಗಳ ಸಂಸರ್ಗಜ್ಞಾನಪೂರ್ವಕವಾಗಿವೆ. ಯೋಗ್ಯತಾ ಆಸತ್ತಿಗಳಿಂದ ಕೂಡಿ ಸಂಸೃಷ್ಟಾರ್ಥಪರಗಳಾದುದರಿಂದ, ಗಾಮಾನಯ ಎಂಬ ಪದ ಸಮೂಹದಂತೆ" ಎಂಬ ಅನುಮಾನದಿಂದಲೇ ಸಂಸರ್ಗಜ್ಞಾನರೂಪವಾದ ಸಾಧ್ಯವು ಸಿದ್ಧವಾಗುತ್ತದೆ.

**न्यायलीलावती–** न च निराकाङ्क्षेण व्यभिचारः, तत्र संसृष्टार्थपरत्वस्यैवाभावात् । तात्पर्यञ्च ज्ञातं तदर्थप्रतीतिकारणम्, 'श्वेतो धावति' इत्यादौ लक्षणायां च तथादर्शनात् । संसृष्टार्थ-परत्वं चानन्यथासिद्धसम्भूयोच्चारणादेवावधार्यत इति शब्दभङ्गः ।।

ನಿರಾಕಾಂಕ್ಷ ಪದಸಮೂಹದಲ್ಲಿ ಸಂಸೃಷ್ಟಾರ್ಥಪರತ್ವರೂಪವಾದ ಹೇತುವೇ ಇಲ್ಲದಿರುವುದರಿಂದ ವ್ಯಭಿಚಾರವಿಲ್ಲ. ತಾತ್ಪರ್ಯವಾದರೂ ಜ್ಞಾತವಾಗಿ ಅರ್ಥಪ್ರತೀತಿಯನ್ನು ಕುರಿತು

ಕಾರಣವಾಗುತ್ತದೆ. ಏಕೆಂದರೆ ಶ್ವೇತೋ ಧಾವತಿ ಎಂಬ ಸ್ಥಳದಲ್ಲಿಯೂ ಮತ್ತು ಲಕ್ಷಣಾ-ಸ್ಥಳದಲ್ಲಿಯೂ ಹಾಗೆ ಕಂಡಿದೆ. ಸಂಸೃಷ್ಟಾರ್ಥಪರತ್ವವಾದರೂ ಅನನ್ಯಥಾ ಸಿದ್ಧವಾದ ಸಹೋ-ಚ್ಚಾರಣದಿಂದಲೇ ತಿಳಿಯಲ್ಪಡುತ್ತದೆ. ಆದ್ದರಿಂದ ಶಬ್ದವೆಂಬ ಅತಿರಿಕ್ತಪ್ರಮಾಣವನ್ನು ಸ್ವೀಕರಿಸ-ಬೇಕಾಗಿಲ್ಲ.

ವಲ್ಲಭಾಚಾರ್ಯವಿರಚಿತ ನ್ಯಾಯಾಲೀಲಾವತಿಯಲ್ಲಿ ಶಬ್ದಪ್ರಕರಣವು
ಮುಗಿಯಿತು

* * * * * *

## ವರ್ಧಮಾನ ಉಪಾಧ್ಯಾಯವಿರಚಿತ
# ನ್ಯಾಯಲೀಲಾವತೀಪ್ರಕಾಶಃ

लीलावतीप्रकाशः – शब्द इति ।। पदार्थसंसर्गस्यानुमानादेव सिद्धेरित्यर्थः । तदेवानुमान-माह – पदानीति ।। वैदिकानि लौकिकानि पदानि तात्पर्यविषयस्मारितपदार्थसंसर्गज्ञान-पूर्वकाणि इत्यर्थः ।

ಶಬ್ದ ಇತಿ – ಪದಾರ್ಥಸಂಸರ್ಗವು ಅನುಮಾನದಿಂದಲೇ ಸಿದ್ಧವಾಗುವ ಕಾರಣದಿಂದ ಎಂದು ಅರ್ಥ. ಆ ಅನುಮಾನವನ್ನೇ ಹೇಳುತ್ತಾರೆ – ಪದಾನೀತಿ. ಪದಾನಿ ಎಂದರೆ ವೈದಿಕ ಮತ್ತು ಲೌಕಿಕ ಪದಗಳು ಎಂದು ಅರ್ಥ. ಸ್ಮಾರಿತಸಂಸರ್ಗವಿಜ್ಞಪ್ತಿಪೂರ್ವಕಾಣಿ ಎಂದರೆ ತಾತ್ಪರ್ಯವಿಷಯವಾದ ಸ್ಮಾರಿತ ಪದಾರ್ಥ ಸಂಸರ್ಗದ ಜ್ಞಾನಪೂರ್ವಕಾಣಿ ಎಂದು ಅರ್ಥ.

लीलावतीप्रकाशः –तेन संसर्गस्य बहुप्रकारकत्वेऽपि नाऽनभिमतसंसर्ग-सिद्ध्याऽर्थान्तरम्, तस्य तात्पर्याऽविषयत्वात् । अन्यथा शब्दस्य मानान्तरत्वेऽपि अभिमतान्वयबोधो न स्यात् ।

ಆದ್ದರಿಂದ ಸಂಸರ್ಗವು ಅನೇಕ ವಿಧವಾದ್ದರಿಂದ ಅನಭಿಮತವಾದ ಸಂಸರ್ಗವನ್ನು ತೆಗೆದುಕೊಂಡು ಅರ್ಥಾಂತರವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಅನಭಿಮತ ಸಂಸರ್ಗವು ತಾತ್ಪರ್ಯವಿಷಯವಲ್ಲ. ಇಲ್ಲದಿದ್ದರೆ ಶಬ್ದವು ಅತಿರಿಕ್ತಪ್ರಮಾಣ ಎಂದು ಸ್ವೀಕರಿಸುವ ಪಕ್ಷದಲ್ಲಿಯೂ ಅನ್ವಯಗಳು ಬಹುವಿಧ-ವಾದ್ದರಿಂದ ಅಭಿಮತವಾದ ಅನ್ವಯಬೋಧವು ಉಂಟಾಗದಿರಲಿ ಎಂಬ ಆಪತ್ತಿ ಇದೆ.

लीलावतीप्रकाशः – यत्तु 'संसर्गान्तरज्ञानापूर्वकाणीति पक्षविशेषणम्' इति । तन्न । तस्य पूर्वं ज्ञातुमशक्यत्वात् ।

ಲೀಲಾವತಿ ಪ್ರಕಾಶ – ಸಂಸರ್ಗಜ್ಞಾನಪೂರ್ವಕಾಣಿ ಎಂದರೆ ಸಂಸರ್ಗಾಂತರಜ್ಞಾನ-ಅಪೂರ್ವಕಾಣಿ ಎಂದು ಅರ್ಥ ಎಂದು ಕೆಲವರು ಹೇಳುತ್ತಾರೆ ಅದು ಸರಿಯಲ್ಲ. ಅಭಿಮತವಾದ ಸಂಸರ್ಗವು ಮೊದಲು ತಿಳಿಯದೇ ಇರುವುದರಿಂದ ತದ್ಭಿನ್ನವಾದ ಸಂಸರ್ಗಾಂತರದ ಜ್ಞಾನವು ಬರಲು ಸಾಧ್ಯವಿಲ್ಲ.

लीलावतीप्रकाशः – संसृष्टार्थेति ॥ ननु संसृष्टो योऽर्थस्तत्परत्वं तत्परसन्निधिमत्त्वं वाऽसिद्धं संसर्गस्य प्रागप्रतीतेः, प्रतीतौ चानुमानवैयर्थ्यापत्तेः । न च संसृष्टत्वप्रकारक-प्रतीतिपरत्वं तत्प्रकारकसन्निधिमत्त्वं वा तदर्थः, अनाप्तोक्ते निराकाङ्क्षे च व्यभिचारात् । मैवम् । आकाङ्क्षायोग्यतासत्तिमत्त्वस्य तदर्थतया विवक्षितत्वात् ।

ಸಂಸೃಷ್ಟಾರ್ಥೇತಿ । ಸಂಸೃಷ್ಟಾರ್ಥಪರತ್ವ ಎಂದರೆ ಸಂಸೃಷ್ಟವಾದ ಯಾವ ಅರ್ಥವಿದೆಯೋ ತತ್ಪರತ್ವ ಎಂದು ಅರ್ಥವೋ ಅಥವಾ ತತ್ಪರವಾದ ಸನ್ನಿಧಿಮತ್ವ ಎಂದು ಅರ್ಥವೋ? ಎರಡುಪಕ್ಷಗಳಲ್ಲಿಯೂ ಹೇತುವು ಅಸಿದ್ಧವಾಗುತ್ತದೆ. ಏಕೆಂದರೆ ಸಂಸೃಷ್ಟಪದಘಟಕವಾದ ಸಂಸರ್ಗವು ಅನುಮಾನ ಪ್ರವೃತ್ತಿ-ಗಿಂತಲೂ ಮುಂಚೆ ಜ್ಞಾತವಾಗುವುದಿಲ್ಲ. ಒಂದುಪಕ್ಷ ಜ್ಞಾತವಾದರೆ ಅನುಮಾನವೇ ವ್ಯರ್ಥವಾಗುತ್ತದೆ. ಅಥವಾ ಸಂಸೃಷ್ಟತ್ವಪ್ರಕಾರಕಪ್ರತೀತಿಪರತ್ವಂ ಎಂದಾಗಲೀ ಸಂಸೃಷ್ಟತ್ವಪ್ರಕಾರಕ ಸನ್ನಿಧಿಮತ್ತ್ವಂ ಎಂದಾಗಲೀ ಅರ್ಥವಲ್ಲ. ಏಕೆಂದರೆ ಅನಾಪ್ತವಾಕ್ಯದಲ್ಲಿಯೂ ನಿರಾಕಾಂಕ್ಷ ಪದಸಮೂಹದಲ್ಲಿಯೂ ಅಂತಹ ಹೇತುವಿದ್ದರೂ ಸಂಸರ್ಗಜ್ಞಾನಪೂರ್ವಕತ್ವ ರೂಪವಾದ ಸಾಧ್ಯವಿಲ್ಲದಿರುವುದರಿಂದ ವ್ಯಭಿಚಾರವು ಬರುತ್ತದೆ ಎಂಬ ಈ ಶಂಕೆಯು ಬಂದರೆ ಸಂಸೃಷ್ಟಾರ್ಥಪರತ್ವ ಎಂದರೆ ಆಕಾಂಕ್ಷಯೋಗ್ಯತಾ ಸನ್ನಿಧಿ ಮತ್ತ್ವರೂಪವಾದುದು ಎಂದು ಹೇಳುತ್ತೇವೆ.

# ಆಕಾಂಕ್ಷಾದಿಗಳು ಜ್ಞಾತತಯಾ ಕಾರಣಗಳು

लीलावतीप्रकाशः – ननु बाधकमानाभावो योग्यता, संसर्गज्ञानप्रागभाव आकाङ्क्षा, अव्यवधानेनान्वयप्रतियोगिज्ञानमासत्तिः ताश्च स्वरूपसत्यो हेतवो नतु ज्ञाता इति न हेतुविशेषणानि । मैवम् ।

ಯೋಗ್ಯತಾ ಎಂದರೆ ಬಾಧಕಪ್ರಮಾಣಾಭಾವ, ಆಕಾಂಕ್ಷಾ ಎಂದರೆ ಸಂಸರ್ಗಜ್ಞಾನ ಪ್ರಾಗಭಾವ, ಆಸತ್ತಿ ಎಂದರೆ ಅವ್ಯವಧಾನದಿಂದ ಅನ್ವಯಪ್ರತಿಯೋಗಿಯ ಉಪಸ್ಥಿತಿ. ಇವೆಲ್ಲವೂ ಅರ್ಥಪ್ರತೀತಿಯನ್ನು ಕುರಿತು ಸತ್ತಯಾ ಕಾರಣವಾಗುತ್ತದೆ, ಜ್ಞಾತವಾಗಿ ಕಾರಣವಲ್ಲ. ಆದ್ದರಿಂದ ಜ್ಞಾತವಾಗಿ ಕಾರಣವಾಗುವ ಹೇತುವಿನಲ್ಲಿ ಇವು ವಿಶೇಷಣವಾಗುವುದಿಲ್ಲ ಎಂದು ಶಂಕೆ ಬಂದರೆ ಅದು ಸರಿಯಲ್ಲ. ಆಕಾಂಕ್ಷಾದಿಗಳಿಗೆ ಜ್ಞಾತತಯಾ ಅರ್ಥಪ್ರತೀತಿ ಕಾರಣತ್ವವನ್ನು ಅನುಮಾನದಿಂದ ಸಾಧನೆ ಮಾಡುತ್ತೇವೆ.

ಆ ಅನುಮಾನ ಪ್ರಯೋಗವು ಈ ರೀತಿಯಿದೆ –"ಆಕಾಂಕ್ಷಾದಿಗಳು ಅರ್ಥಪ್ರತೀತಿಯನ್ನು ಕುರಿತು ಜ್ಞಾತವಾಗಿ ಕಾರಣಗಳಾಗಿವೆ. ಕರಣವು ಜ್ಞಾಯಮಾನವಾಗಿರುವಾಗ ಜ್ಞಾನೋಪಯೋಗಿಯಾದ ವ್ಯಭಿಚಾರಿ ಕರಣದ ವೈಲಕ್ಷಣ್ಯ ಇರುವುದರಿಂದ, ವ್ಯಾಪ್ತಿಯಂತೆ ಎಂಬುದಾಗಿ". ಇಲ್ಲಿ ವ್ಯಾಪ್ತಿಯು ಅನುಮಾನಕ್ಕೆ ಉಪಯೋಗಿಯಾಗಿದೆ ಮತ್ತು ವ್ಯಭಿಚಾರಿಕರಣಗಳಿಂದ ವಿಲಕ್ಷಣವಾಗಿದೆ, ಜ್ಞಾಯಮಾನಕರಣವೂ ಆಗಿದೆ. ಅದರಲ್ಲಿ ಹೇಗೆ ಜ್ಞಾತತಯಾ ಕಾರಣತ್ವವು ಇದೆಯೋ, ಅದರಂತೆ ಆಕಾಂಕ್ಷಾದಿಗಳಲ್ಲಿಯೂ ಜ್ಞಾತತಯಾ ಕಾರಣತ್ವವಿದೆ ಎಂದು ಅನುಮಾನದ ಅಭಿಪ್ರಾಯ.

लीलावतीप्रकाशः – आकाङ्क्षादीनां ज्ञायमानकरणे ज्ञानोपयोगिव्यभिचारिवैलक्षण्यात् व्याप्तिवत् ज्ञातोपयोगित्वसाधनात् । नचाप्रयोजकत्वम्, आकाङ्क्षाद्यसत्त्वेऽपि तद्भ्रमेण संसर्गप्रत्ययात्, अन्यथा शब्दाभासोच्छेदापत्तेः । ज्ञानावच्छेदकतया च संसर्गसिद्धिः, ज्ञानज्ञानस्य तद्विषयत्वात् ।

ಇಲ್ಲಿ ಹೇತುವಿಗೆ ಅಪ್ರಯೋಜಕತ್ವವಿಲ್ಲ. ಏಕೆಂದರೆ ಆಕಾಂಕ್ಷಾದಿಗಳು ಇಲ್ಲದಿದ್ದರೂ ಆಕಾಂಕ್ಷಾದಿ ಭ್ರಮದಿಂದ ಸಂಸರ್ಗಗ್ರಹವು ಉಂಟಾಗುತ್ತದೆ. ಇಲ್ಲದಿದ್ದರೆ ಶಬ್ದಾಭಾಸ ಎಂಬುದೇ ಉಚ್ಛೇದವನ್ನು ಹೊಂದಬೇಕಾಗುತ್ತದೆ. ಜ್ಞಾತೋಪಯೋಗಿ ಸಾಧನತ್ವ ರೂಪವಾದ ಸಾಧ್ಯಸಿದ್ಧಿಯು ಆಗುವಾಗ ಜ್ಞಾನಾವ-

ಚ್ಛೇದಕತಯಾ ಸಂಸರ್ಗವು ಸಿದ್ಧವಾಗುತ್ತದೆ. ಏಕೆಂದರೆ ಜ್ಞಾನಜ್ಞಾನವು ಜ್ಞಾನವಿಷಯವಿಷಯಕವಾಗುತ್ತದೆ.

लीलावतीप्रकाशः – संसर्गे च सम्बन्धिन एव विशेषत्वात् पक्षधर्मताबलेन व्यापकत्वेनागृहीतस्यापि संसर्गविशेषस्य सिद्धिः ।

ಹೀಗೆ ಅನುಮಾನದಿಂದ ಸಂಸರ್ಗವು ಸಾಮಾನ್ಯಾಕಾರೇಣ ಸಿದ್ಧವಾಗಬಹುದಾದರೂ ಪದಾನಿ ಎಂದು ಪಕ್ಷಮಾಡಿರುವುದರಿಂದ ಆ ಪದಗಳು ಸಂಬಂಧಿವಿಶೇಷವನ್ನೇ ಉಪಸ್ಥಾಪನೆ ಮಾಡುವುದರಿಂದ ಸಂಸರ್ಗ ವಿಶೇಷಕ್ಕೆ ಮೊದಲು ವ್ಯಾಪಕತ್ವವು ಗೃಹೀತವಾಗದಿದ್ದರೂ ಪಕ್ಷಧರ್ಮತಾ ಬಲದಿಂದ ಸಂಸರ್ಗವಿಶೇಷವೇ ಸಿದ್ಧವಾಗುತ್ತದೆ.

लीलावतीप्रकाशः – न चैवं भ्रान्तिज्ञानमपि भ्रमः स्यात् । न ह्यसद्विषयत्वेन भ्रमत्वं भ्रमविषयाणां सत्त्वात्, किन्तु व्यधिकरणप्रकारकत्वेन ।

ಹಾಗಾದರೆ ಭ್ರಾಂತಿಯ ಜ್ಞಾನಕ್ಕೂ ಸಹ ಭ್ರಾಂತಿಯ ವಿಷಯವೇ ವಿಷಯವಾಗುವುದರಿಂದ ಭ್ರಾಂತಿ-ವಿಷಯಕಜ್ಞಾನವೂ ಭ್ರಾಂತಿಯಾಗಲಿ ಎಂಬ ಆಪತ್ತಿಯಿಲ್ಲ. ಏಕೆಂದರೆ ವಿಷಯದ ಅಸತ್ತ್ವವು ನೈಯಾ-ಯಿಕರಿಗೆ ಭ್ರಮತ್ವವನ್ನು ಕುರಿತು ಪ್ರಯೋಜಕವಲ್ಲ. ಏಕೆಂದರೆ ಭ್ರಮಕ್ಕೆ ವಿಷಯವಾದುದು ಅನ್ಯತ್ರ ಇದೆ ಅಸತ್ತಲ್ಲ ಎಂದು ನಾವು (ನೈಯಾಯಿಕರು) ಒಪ್ಪುತ್ತೇವೆ. ಆದ್ದರಿಂದ ವ್ಯಧಿಕರಣ ಪ್ರಕಾರಕತ್ವದಿಂದಲೇ ಭ್ರಮತ್ವವನ್ನು ಹೇಳಬೇಕು. ಭ್ರಮದ ಜ್ಞಾನದಲ್ಲಿ ವ್ಯಧಿಕರಣಪ್ರಕಾರಕತ್ವವಿಲ್ಲ.

लीलावतीप्रकाशः –न च भ्रमस्य ज्ञाने व्यधिकरणप्रकारकत्वं, रजतत्वप्रकारकत्वस्य भ्रमे सत्वात् । अन्यथा मानाभावाद् भ्रमोच्छेदापत्तेः ।

ಭ್ರಮದಲ್ಲಿರುವ ರಜತತ್ವಪ್ರಕಾರಕತ್ವವನ್ನು ಭ್ರಮದ ಜ್ಞಾನವು ವಿಷಯೀಕರಿಸುತ್ತದೆ. ರಜತತ್ವ-ಪ್ರಕಾರಕತ್ವವು ಭ್ರಮದ ಜ್ಞಾನದಲ್ಲಿ ವಿಶೇಷ್ಯವಾಗಿ ತೋರುವ ಭ್ರಮದಲ್ಲಿರುವುದರಿಂದ ಅದು ವ್ಯಧಿ-ಕರಣವಾಗುವುದಿಲ್ಲ ಎಂದು ಈ ಆಪತ್ತಿಯನ್ನು ಪರಿಹಾರ ಮಾಡುತ್ತೇವೆ.

ಇಲ್ಲದಿದ್ದರೆ ಭ್ರಮದ ಜ್ಞಾನವೂ ಭ್ರಾಂತಿಯಾದರೆ ಜ್ಞಾನರೂಪವಾದ ಪ್ರಮಾಣವೇ ಒಂದು ವಸ್ತುವನ್ನು

ವ್ಯವಸ್ಥೆ ಮಾಡುವುದರಿಂದ ಭ್ರಮದ ವಿಷಯದಲ್ಲಿ ಪ್ರಮಾಣವಿಲ್ಲದೇ ಭ್ರಮ ಎಂಬ ಒಂದು ವಸ್ತುವೇ ಸಿದ್ಧವಾಗುವುದಿಲ್ಲ ಎಂಬ ಆಪತ್ತಿಯು ಬರುತ್ತದೆ.

लीलावतीप्रकाशः – न च प्रतारकवाक्ये व्यभिचारः, तत्र विशेषदर्शनेन संसर्गज्ञानाभावादिति वाच्यम् । तत्र संसर्गे योग्यताविरहात् । अत एव विसंवादिवाक्ये शुकवदुच्चरिते न व्यभिचारः, संसर्गधीस्तत्र योग्यताभ्रमात् ।

ಹಿಂದೆ ಪ್ರಯೋಗಿಸಿದ ಅನುಮಾನಕ್ಕೆ ಪ್ರತಾರಕವಾಕ್ಯದಲ್ಲಿ ವ್ಯಭಿಚಾರವು ಬರುತ್ತದೆ, ಆ ವಾಕ್ಯ ಪ್ರಯೋಕ್ತೃವಿಗೆ ವಿಶೇಷ ಜ್ಞಾನವಿರುವುದರಿಂದ ಅವನಿಗೆ ಸಂಸರ್ಗಜ್ಞಾನವು ಇಲ್ಲದೇ ಇರುವುದರಿಂದ ಎಂಬುದು ಸರಿಯಲ್ಲ.

ಏಕೆಂದರೆ ಅಲ್ಲಿ ಸಂಸರ್ಗದಲ್ಲಿ ಬಾಧಕಮಾನಾಭಾವರೂಪವಾದ ಯೋಗ್ಯತೆಯೇ ಇಲ್ಲ. ಆದ್ದರಿಂದ ಹೇತುವೇ ಇಲ್ಲದಿರುವುದರಿಂದ ವ್ಯಭಿಚಾರದ ಪ್ರಸಕ್ತಿ ಇಲ್ಲ. ಆದ್ದರಿಂದಲೇ ನಿಸಂವಾದಿವಾಕ್ಯದಲ್ಲಿಯೂ ಶುಕವಾಕ್ಯದಲ್ಲಿಯೂ ವ್ಯಭಿಚಾರವಿಲ್ಲ. ಅಲ್ಲಿ ಯೋಗ್ಯತಾ ಭ್ರಮದಿಂದ ಸಂಸರ್ಗಭ್ರಮವು ಉಂಟಾಗುತ್ತದೆ ಹೊರತಾಗಿ ಯೋಗ್ಯತೆಯೇ ಇಲ್ಲ.

लीलावतीप्रकाशः – न च भ्रान्तप्रतारकवाक्ये व्यभिचारः, कथं वा तत्र संसर्गप्रमा वक्तृज्ञानानुमानासम्भवादिति वाच्यम् । वेदवदीश्वरस्यैव तत्र संसर्गज्ञानानुमानात् ।

ಹಾಗಾದರೆ ಪ್ರತಾರಕನು ಭ್ರಾಂತಿಯಿಂದ ಒಂದು ವಾಕ್ಯವನ್ನು ಉಚ್ಚಾರಮಾಡಿದಾಗ ಅಲ್ಲಿ ವ್ಯಭಿಚಾರವು ಬರುತ್ತದೆ. ಅಲ್ಲಿ ಸಂಸರ್ಗಪ್ರಮೆಯನ್ನು ಹೇಗೆ ಅನುಮಾನ ಮಾಡಲು ಸಾಧ್ಯ. ವಕ್ತೃವು ಭ್ರಾಂತನಾಗಿರುವುದರಿಂದ ವಕ್ತೃಜ್ಞಾನವನ್ನು ಅನುಮಾನ ಮಾಡಲು ಸಾಧ್ಯವಿಲ್ಲ ಎಂದರೆ ವೇದದಲ್ಲಿ ಹೇಗೆ ಈಶ್ವರಜ್ಞಾನಪೂರ್ವಕತ್ವವನ್ನು ತೆಗೆದುಕೊಂಡು ಸಂಸರ್ಗಭ್ರಮವನ್ನು ಕೂಡಿಸುತ್ತೇವೆಯೋ ಅದರಂತೆ. ಭ್ರಾಂತಪ್ರತಾರಕ ವಾಕ್ಯದಲ್ಲಿಯೂ ಕೂಡ ಯೋಗ್ಯತೆ ಇರುವುದರಿಂದ ಈಶ್ವರಜ್ಞಾನವನ್ನು ತೆಗೆದುಕೊಂಡೇ ಸಂಸರ್ಗಜ್ಞಾನವನ್ನು ಕೂಡಿಸುತ್ತೇವೆ.

लीलावतीप्रकाशः – ननु वाक्यार्थज्ञाने तात्पर्यज्ञानस्य हेतुत्वात् संसृष्टार्थपरत्वं न ज्ञातुं शक्यत इति विशेषणासिद्धिरित्यत आह – तात्पर्यं चेति ।।

ಸಂಸೃಷ್ಟಾರ್ಥಪರತ್ವವು ಹೇತುವಾಗಿದೆ. ಅದಕ್ಕೆ ಸಂಸೃಷ್ಟಾರ್ಥಪರಪದಸಮೂಹತ್ವ ಎಂದು ಅರ್ಥ. ವಾಕ್ಯಾರ್ಥಜ್ಞಾನವನ್ನು ಕುರಿತು ತಾತ್ಪರ್ಯಜ್ಞಾನವು ಕಾರಣ. ತಾತ್ಪರ್ಯಜ್ಞಾನವೆಂದರೆ ಅಭಿಮತ-ಸಂಸರ್ಗಜ್ಞಾನ. ಅದು ಅನುಮಿತಿಯಿಂದ ಸಿದ್ಧವಾಗಬೇಕೇ ಹೊರತು ಅನುಮಾನಪ್ರಯೋಗ ಕಾಲದಲ್ಲಿ ಸಿದ್ಧವಾಗಿರುವುದಿಲ್ಲ. ಆದ್ದರಿಂದ ಹೇತುವಿಗೆ ವಿಶೇಷಣಾಸಿದ್ಧಿರೂಪವಾದ ದೋಷವು ಬರುತ್ತದೆ ಎಂಬ ಶಂಕೆಯನ್ನು ಪರಿಹರಿಸುವುದಕ್ಕೋಸ್ಕರ ಹೇಳುತ್ತಾರೆ – ತಾತ್ಪರ್ಯಂ ಚ ಇತಿ.

## ಸಂಸರ್ಗಗ್ರಹಕ್ಕೆ ತಾತ್ಪರ್ಯಜ್ಞಾನವೇ ಕಾರಣ

लीलावतीप्रकाशः- तात्पर्यज्ञानं शाब्दज्ञानोपयोगि ज्ञायमानकरणे ज्ञानोपयोगिव्यभि-चारिवैलक्षण्यात् व्याप्तिवत् । अन्यथाऽन्यपरादन्यान्वयबोधो न स्यात् ।

"ತಾತ್ಪರ್ಯಜ್ಞಾನವು ಶಾಬ್ದಜ್ಞಾನೋಪಯೋಗಿಯಾಗಿದೆ. ಕರಣವು ಜ್ಞಾಯಮಾನವಾಗಿರುವಾಗ ಜ್ಞಾನೋಪಯೋಗಿ ವ್ಯಭಿಚಾರಿ ವೈಲಕ್ಷಣ್ಯವಿರುವುದರಿಂದ ವ್ಯಾಪ್ತಿಯಂತೆ" ಎಂಬ ಅನುಮಾನದಿಂದ ತಾತ್ಪರ್ಯ ಜ್ಞಾನಕ್ಕೆ ಕಾರಣತ್ವವು ಸಿದ್ಧವಾಗುತ್ತದೆ. ಇಲ್ಲದಿದ್ದರೆ ಅನ್ಯಪರವಾಕ್ಯದಲ್ಲಿ ಅದಕ್ಕಿಂತ ಭಿನ್ನವಾದ ಅನ್ವಯಬೋಧವು ಅದರಲ್ಲಿ ತಾತ್ಪರ್ಯವು ಇಲ್ಲದಿರುವುದರಿಂದ ಉಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ.

लीलावतीप्रकाशः- न च तात्पर्यग्राहकप्रकरणत्वादेः प्राथमिकत्वादावश्यकत्वाच्च कारणत्वम्, तेषामननुगतत्वेन व्यभिचारात् । तात्पर्यव्याप्यत्वस्याननुगमेऽपि सत्त्वात् ।

ತಾತ್ಪರ್ಯ ಗ್ರಾಹಕವಾದ ಪ್ರಕರಣಾದಿಗಳು ಮೊದಲೇ ಉಪಸ್ಥಿತವಾಗಿರುವುದರಿಂದ ಮತ್ತು ಆವಶ್ಯಕವೂ ಆದ್ದರಿಂದ ಅದರಿಂದಲೇ ತಾತ್ಪರ್ಯಜ್ಞಾನವು ಸಿದ್ಧವಾಗುತ್ತದೆ ಎಂಬುದು ಸರಿಯಲ್ಲ. ತಾತ್ಪರ್ಯ ಗ್ರಾಹಕಗಳು ಅನನುಗತವಾದ್ದರಿಂದ ಹಾಗೆಯೇ ಕಾರಣತ್ವವನ್ನು ಹೇಳಿದರೆ ವ್ಯಭಿಚಾರವು ಬರುತ್ತದೆ. ಆದರೂ ತಾತ್ಪರ್ಯ ವ್ಯಾಪ್ಯತ್ವವು ಅನುಗತವಾಗಿ ಸಿಗುವುದರಿಂದ ಅದರಿಂದಲೇ ತಾತ್ಪರ್ಯಜ್ಞಾನವು ಉಂಟಾಗುತ್ತದೆ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ – ಶ್ವೇತ ಇತಿ.

लीलावतीप्रकाशः – श्वेत इति ।। 'श्वित्री नेनक्ति, श्वेतगुणयुक्तः पुरुषो द्रुततरं याती'-त्यत्रार्थद्वये यत्र श्लेषस्तत्र तात्पर्यग्रहं विना अन्यतरनिश्चयाभावादित्यर्थः ।

ಶ್ವೇತೋ ಧಾವತಿ ಎಂಬ ವಾಕ್ಯಕ್ಕೆ ತೊನ್ನುರೋಗವಿದ್ದವನು ಹೊಳೆಯುತ್ತಾನೆ ಎಂದೂ ಬಿಳಿಯ ಬಣ್ಣದ ಪುರುಷನು ಓಡುತ್ತಾನೆ ಎಂದೂ ಎರಡು ಅರ್ಥವಾಗುತ್ತದೆ. ಹೀಗೆ ಶ್ಲೇಷವಿರುವ ಸ್ಥಳದಲ್ಲಿ ತಾತ್ಪರ್ಯಜ್ಞಾನವಿಲ್ಲದೇ ಅನ್ಯತರ ನಿಶ್ಚಯವು ಉಂಟಾಗುವುದಿಲ್ಲವಾದ್ದರಿಂದ ತಾತ್ಪರ್ಯಜ್ಞಾನವೇ ಅನ್ವಯಬೋಧವನ್ನು ಕುರಿತು ಕಾರಣ ಎಂದು ಅರ್ಥ.

लीलावतीप्रकाशः – लक्षणायां चेति ।। 'यष्टीः प्रवेशय' इत्यत्र संसर्गेऽनुपपत्तिज्ञानाभावान्नान्वयानुपपत्तिज्ञानं लक्षणाबीजं किन्तु तात्पर्यानुपपत्तिज्ञानम्, सा च तात्पर्ये ज्ञाता एव भवतीत्यर्थः । अनेकार्थे वाच्यत्वनिर्णयोऽपि तात्पर्यज्ञानं विना न स्यादित्यपि द्रष्टव्यम् ।

ಲಕ್ಷಣಾಂ ಚೇತಿ – ಯಷ್ಟೀಃ ಪ್ರವೇಶಯ ಎಂಬ ಸ್ಥಳದಲ್ಲಿ ಲಕ್ಷಣಾ ಮಾಡುತ್ತೇವೆ. ಅಲ್ಲಿ ಯಷ್ಟಿಗಳಿಗೆ ಪ್ರವೇಶಾನ್ವಯವು ಕೂಡುವುದರಿಂದ ಅನ್ವಯಾನುಪಪತ್ತಿ ಇಲ್ಲ. ಆದ್ದರಿಂದ ಅನ್ವಯಾನುಪಪತ್ತಿ ಜ್ಞಾನವು ಲಕ್ಷಣಾಬೀಜವಲ್ಲ. ಆದರೆ ತಾತ್ಪರ್ಯಾನುಪಪತ್ತಿ ಜ್ಞಾನವೇ ಲಕ್ಷಣಾಬೀಜ. ತಾತ್ಪರ್ಯಾನುಪಪತ್ತಿಜ್ಞಾನವು ಬರಬೇಕಾದರೆ ಮೊದಲು ತಾತ್ಪರ್ಯದ ಉಪಸ್ಥಿತಿ ಇರಬೇಕು. ಆದ್ದರಿಂದ ಸಂಸರ್ಗಗ್ರಹವನ್ನು ಕುರಿತು ತಾತ್ಪರ್ಯ ಜ್ಞಾನವೇ ಕಾರಣ ಎಂದು ಅಭಿಪ್ರಾಯ.

ವರ್ಧಮಾನ ಉಪಾಧ್ಯಾಯವಿರಚಿತ ನ್ಯಾಯಲೀಲಾವತೀಪ್ರಕಾಶದಲ್ಲಿ
ಶಬ್ದಪ್ರಕರಣವು ಮುಗಿಯಿತು.

## ಗಂಗೇಶೋಪಾಧ್ಯಾಯವಿರಚಿತವಾದ ತತ್ತ್ವಚಿಂತಾಮಣಿಯಲ್ಲಿ

# ಆಕಾಂಕ್ಷಾವಾದ

### ಆಕಾಂಕ್ಷಾಲಕ್ಷಣದ ಪೂರ್ವಪಕ್ಷ

अथ केयमाकाङ्क्षा? न तावदविनाभावः । 'नीलं सरोजम्' इत्यादावभावात् । 'विमलं जलं नद्याः । कच्छे महिषः' इत्यत्र जलान्वितनद्या अविनाभावात् कच्छे साकाङ्क्षतापत्तेः ।

### ತತ್ತ್ವಚಿಂತಾಮಣಿಃ ಆಸತ್ತಿವಾದ

ಆಕಾಂಕ್ಷಾ ಎಂದರೇನು? ಅದು ಅವಿನಾಭಾವರೂಪವಾದುದಲ್ಲ. 'ನೀಲಂ ಸರೋಜಂ' ಎಂಬಲ್ಲಿ ಅವಿನಾಭಾವವಿಲ್ಲ. ಏಕೆಂದರೆ ನೀಲವನ್ನು ಬಿಟ್ಟು ಕೆಂಪಾದ ಸರೋಜವಿದೆ. ಸರೋಜ-ವನ್ನು ಬಿಟ್ಟು ನೀಲವು ನೀಲವಸ್ತ್ರದಲ್ಲಿದೆ ಮತ್ತು ಅವಿನಾಭಾವವು ಆಕಾಂಕ್ಷೆ ಎಂದು ಹೇಳಿದರೆ, 'ವಿಮಲಂ ಜಲಂ ನದ್ಯಾಃ, ಕಚ್ಛೇ ಮಹಿಷಃ' ಎಂಬಲ್ಲಿ ಜಲಕ್ಕೂ ಮತ್ತು ಕಚ್ಛಕ್ಕೂ ಅವಿನಾ-ಭಾವವಿರುವುದರಿಂದ ಅವುಗಳಿಗೆ ಸಾಕಾಂಕ್ಷತ್ವ ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

नापि समभिव्याहृतपदस्मारितपदार्थजिज्ञासा । अजिज्ञासोरपि वाक्यार्थबोधात् ।

ಇನ್ನು ಸಮಭಿವ್ಯಾಹೃತ ಪದಗಳಿಂದ ಸ್ಮಾರಿತವಾದ ಪದಾರ್ಥಗಳ ಜಿಜ್ಞಾಸೆಯೇ ಆಕಾಂಕ್ಷೆ ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ಅಂತಹ ಪದಾರ್ಥ ಜಿಜ್ಞಾಸೆ ಇಲ್ಲದಿದ್ದ ವ್ಯಕ್ತಿಗೂ ವಾಕ್ಯಾರ್ಥ ಬೋಧವು ಉಂಟಾಗುತ್ತದೆ.

'विश्वजिता यजेत । द्वारम्' इत्यत्रापदार्थयोरप्यधिकारिणोऽध्याहृतस्य पिधानस्य चाकाङ्क्षितत्वाच्च । तत्र शब्दकल्पनपक्षेऽपि

ಶ್ವೇತೋ ಧಾವತಿ ಎಂಬ ವಾಕ್ಯಕ್ಕೆ ತೊನ್ನುರೋಗವಿದ್ದವನು ಹೊಳೆಯುತ್ತಾನೆ ಎಂದೂ ಬಿಳಿಯ ಬಣ್ಣದ ಪುರುಷನು ಓಡುತ್ತಾನೆ ಎಂದೂ ಎರಡು ಅರ್ಥವಾಗುತ್ತದೆ. ಹೀಗೆ ಶ್ಲೇಷವಿರುವ ಸ್ಥಳದಲ್ಲಿ ತಾತ್ಪರ್ಯಜ್ಞಾನವಿಲ್ಲದೇ ಅನ್ಯತರ ನಿಶ್ಚಯವು ಉಂಟಾಗುವುದಿಲ್ಲವಾದ್ದರಿಂದ ತಾತ್ಪರ್ಯಜ್ಞಾನವೇ ಅನ್ವಯಬೋಧವನ್ನು ಕುರಿತು ಕಾರಣ ಎಂದು ಅರ್ಥ.

लीलावतीप्रकाशः – लक्षणायां चेति ।। 'यष्टीः प्रवेशय' इत्यत्र संसर्गेऽनुपपत्तिज्ञानाभावान्नान्वयानुपपत्तिज्ञानं लक्षणाबीजं किन्तु तात्पर्यानुपपत्तिज्ञानम्, सा च तात्पर्ये ज्ञाता एव भवतीत्यर्थः । अनेकार्थे वाच्यत्वनिर्णयोऽपि तात्पर्यज्ञानं विना न स्यादित्यपि द्रष्टव्यम् ।

ಲಕ್ಷಣಾಂ ಚೇತಿ – ಯಷ್ಟೀಃ ಪ್ರವೇಶಯ ಎಂಬ ಸ್ಥಳದಲ್ಲಿ ಲಕ್ಷಣಾ ಮಾಡುತ್ತೇವೆ. ಅಲ್ಲಿ ಯಷ್ಟಿಗಳಿಗೆ ಪ್ರವೇಶಾನ್ವಯವು ಕೂಡುವುದರಿಂದ ಅನ್ವಯಾನುಪಪತ್ತಿ ಇಲ್ಲ. ಆದ್ದರಿಂದ ಅನ್ವಯಾನುಪಪತ್ತಿ ಜ್ಞಾನವು ಲಕ್ಷಣಾಬೀಜವಲ್ಲ. ಆದರೆ ತಾತ್ಪರ್ಯಾನುಪಪತ್ತಿ ಜ್ಞಾನವೇ ಲಕ್ಷಣಾಬೀಜ. ತಾತ್ಪರ್ಯಾನುಪಪತ್ತಿಜ್ಞಾನವು ಬರಬೇಕಾದರೆ ಮೊದಲು ತಾತ್ಪರ್ಯದ ಉಪಸ್ಥಿತಿ ಇರಬೇಕು. ಆದ್ದರಿಂದ ಸಂಸರ್ಗಗ್ರಹವನ್ನು ಕುರಿತು ತಾತ್ಪರ್ಯ ಜ್ಞಾನವೇ ಕಾರಣ ಎಂದು ಅಭಿಪ್ರಾಯ.

ವರ್ಧಮಾನ ಉಪಾಧ್ಯಾಯವಿರಚಿತ ನ್ಯಾಯಲೀಲಾವತೀಪ್ರಕಾಶದಲ್ಲಿ
ಶಬ್ದಪ್ರಕರಣವು ಮುಗಿಯಿತು.

## ಗಂಗೇಶೋಪಾಧ್ಯಾಯವಿರಚಿತವಾದ ತತ್ವಚಿಂತಾಮಣಿಯಲ್ಲಿ

# ಆಕಾಂಕ್ಷಾವಾದ

### ಆಕಾಂಕ್ಷಾಲಕ್ಷಣದ ಪೂರ್ವಪಕ್ಷ

अथ केयमाकाङ्क्षा? न तावदविनाभावः । 'नीलं सरोजम्' इत्यादावभावात् । 'विमलं जलं नद्याः । कच्छे महिषः' इत्यत्र जलान्वितनद्या अविनाभावात् कच्छे साकाङ्क्षातापत्तेः ।

### ತತ್ತ್ವಚಿಂತಾಮಣಿಃ ಆಸತ್ತಿವಾದ

ಆಕಾಂಕ್ಷಾ ಎಂದರೇನು? ಅದು ಅವಿನಾಭಾವರೂಪವಾದುದಲ್ಲ. 'ನೀಲಂ ಸರೋಜಂ' ಎಂಬಲ್ಲಿ ಅವಿನಾಭಾವವಿಲ್ಲ. ಏಕೆಂದರೆ ನೀಲವನ್ನು ಬಿಟ್ಟು ಕೆಂಪಾದ ಸರೋಜವಿದೆ. ಸರೋಜವನ್ನು ಬಿಟ್ಟು ನೀಲವು ನೀಲವಸ್ತ್ರದಲ್ಲಿದೆ ಮತ್ತು ಅವಿನಾಭಾವವು ಆಕಾಂಕ್ಷೆ ಎಂದು ಹೇಳಿದರೆ, 'ವಿಮಲಂ ಜಲಂ ನದ್ಯಾಃ, ಕಚ್ಛೇ ಮಹಿಷಃ' ಎಂಬಲ್ಲಿ ಜಲಕ್ಕೂ ಮತ್ತು ಕಚ್ಛಕ್ಕೂ ಅವಿನಾಭಾವವಿರುವುದರಿಂದ ಅವುಗಳಿಗೆ ಸಾಕಾಂಕ್ಷತ್ವ ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

नापि समभिव्याहृतपदस्मारितपदार्थजिज्ञासा । अजिज्ञासोरपि वाक्यार्थबोधात् ।

ಇನ್ನು ಸಮಭಿವ್ಯಾಹೃತ ಪದಗಳಿಂದ ಸ್ಮಾರಿತವಾದ ಪದಾರ್ಥಗಳ ಜಿಜ್ಞಾಸೆಯೇ ಆಕಾಂಕ್ಷೆ ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ಅಂತಹ ಪದಾರ್ಥ ಜಿಜ್ಞಾಸೆ ಇಲ್ಲದಿದ್ದ ವ್ಯಕ್ತಿಗೂ ವಾಕ್ಯಾರ್ಥ ಬೋಧವು ಉಂಟಾಗುತ್ತದೆ.

'विश्वजिता यजेत । द्वारम्' इत्यत्रापदार्थयोरप्यधिकारिणोऽध्याहृतस्य पिधानस्य चाकाङ्क्षितत्वाच्च । तत्र शब्दकल्पनपक्षेऽपि

**'घटः कर्मत्वमानयनं कृतिः' इत्यत्र जिज्ञासितस्यानयनादेरा-काङ्क्षितत्वापत्तेः ।**

'ವಿಶ್ವಜಿತಾ ಯಜೇತ, ದ್ವಾರಂ' ಎಂಬ ಎರಡು ಸ್ಥಳಗಳಲ್ಲಿ ಕ್ರಮವಾಗಿ ಅಧಿಕಾರಿಯು ಮತ್ತು ಪಿಧಾನವು ಪದಸ್ಮಾರಿತವಾಗಿಲ್ಲ. ಆದರೂ ಅಲ್ಲಿ ಆಕಾಂಕ್ಷೆ ಇದೆ. ವಿಶ್ವಜಿತಾ ಯಜೇತ ಎಂಬಲ್ಲಿ ಸ್ವರ್ಗಕಾಮಃ ಎಂಬ ಪದವನ್ನೂ, ದ್ವಾರಂ ಎಂಬಲ್ಲಿ ಪಿಧೇಹಿ ಎಂಬ ಪದವನ್ನೂ ಕಲ್ಪನೆ ಮಾಡುತ್ತೇವೆ ಎಂದು ಹೇಳಿದರೆ, 'ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬ ಸ್ಥಳದಲ್ಲಿ ಆನಯನಾದಿಗಳು ಜಿಜ್ಞಾಸಿತವಾಗಿರುವುದರಿಂದ ಅಲ್ಲಿಯೂ ಸಾಕಾಂಕ್ಷತ್ವವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

**अथ जिज्ञासायोग्यता सा । जिज्ञासा च विशेषाज्ञाने भवति । योग्यता च श्रोतरि तदुच्चारणजन्यसंसर्गावगमप्रागभावः ।**

ಇನ್ನು ಆಕಾಂಕ್ಷೆ ಎಂದರೆ ಜಿಜ್ಞಾಸ ಯೋಗ್ಯತಾ. ಜಿಜ್ಞಾಸೆಯಾದರೂ ಸಾಮಾನ್ಯ ಜ್ಞಾನವಿದ್ದು, ವಿಶೇಷ ಜ್ಞಾನವಿಲ್ಲದಿರುವಾಗ ಉಂಟಾಗುತ್ತದೆ. ಯೋಗ್ಯತಾ ಎಂದರೆ ಶ್ರೋತೃವಿನಲ್ಲಿ ಆ ಪದಗಳ ಉಚ್ಚಾರಣೆಯಿಂದ ಉಂಟಾಗುವ ಸಂಸರ್ಗಗ್ರಹದ ಪ್ರಾಗಭಾವ.

**'विमलं जलं नद्याः कच्छे महिष' इत्यत्र तात्पर्यवशात् कदाचित् नद्याः कच्छे संसर्गावगमात् तत्प्रागभावसत्त्वेऽपि श्रोतरि तदुच्चारणेन तात्पर्यवशात् जलान्वितनद्याः कच्छे संसर्गावगमो नेति न तत्प्रागभावः ।**

'ವಿಮಲಂ ಜಲಂ ನದ್ಯಾಃ, ಕಚ್ಛೇ ಮಹಿಷಃ' ಎಂಬಲ್ಲಿ ತಾತ್ಪರ್ಯಕ್ಕೆ ಅನುಗುಣವಾಗಿ ಒಂದೊಮ್ಮೆ ನದಿಗೆ ಕಚ್ಛದಲ್ಲಿ ಸಂಸರ್ಗವು ತಿಳಿದು ಬರುವುದರಿಂದ ಅದಕ್ಕೆ ಕಾರಣವಾದ ಸಂಸರ್ಗಗ್ರಹ ಪ್ರಾಗಭಾವವನ್ನು ಅಂಗೀಕರಿಸಿದರೂ ಶ್ರೋತೃವಿಗೆ ಆ ವಾಕ್ಯದ ಉಚ್ಚಾರಣೆಯಿಂದ

ತಾತ್ಪರ್ಯವಶದಿಂದ ನದಿಗೆ ಜಲದ ಸಂಸರ್ಗಗ್ರಹವೇ ಉಂಟಾಗಿ ಕಚ್ಛದ ಸಂಸರ್ಗಗ್ರಹವು ಉಂಟಾಗದೇ ಇರುವ ಸ್ಥಳದಲ್ಲಿ ಸಂಸರ್ಗಗ್ರಹಪ್ರಾಗಭಾವವು ಇಲ್ಲದಿರುವುದರಿಂದ ಅಲ್ಲಿ ಸಾಕಾಂಕ್ಷತ್ವವು ಬರದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ.

**घटः कर्मत्वमानयनमित्यत्रापि तथेति चेत्? न । निराकाङ्क्षे तदुच्चारणजन्यसंसर्गावगमप्रागभावस्य सिद्ध्यसिद्धिपराहतत्वात् ।**

ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬಲ್ಲಿಯೂ ಕೂಡ ಅದರಂತೆಯೇ ಎನ್ನುವ ಈ ಪಕ್ಷವು ಸರಿಯಲ್ಲ. ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬ ನಿರಾಕಾಂಕ್ಷ ಸ್ಥಳದಲ್ಲಿ ಉಚ್ಚಾರಣ-ಜನ್ಯಸಂಸರ್ಗಜ್ಞಾನಪ್ರಾಗಭಾವವು ಇದೇ ಎಂದಾದರೆ ಸಾಕಾಂಕ್ಷತ್ವವೇ ಬರುವುದರಿಂದ ಅನ್ವಯ-ಬೋಧವು ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

ಸಂಸರ್ಗಗ್ರಹದ ಪ್ರಾಗಭಾವವು ಇಲ್ಲವೆಂದೂ ಹೇಳಲು ಸಾಧ್ಯವಿಲ್ಲ. ಏಕೆಂದರೆ ಅಲ್ಲಿ ಸಂಸರ್ಗಗ್ರಹವು ಅಪ್ರಸಿದ್ಧವಾದುದರಿಂದ, ಪ್ರತಿಯೋಗಿಯು ಅಪ್ರಸಿದ್ಧವಾದಾಗ ಅಭಾವಜ್ಞಾನವು ಬರಲು ಸಾಧ್ಯವಿಲ್ಲವಾದ್ದರಿಂದ ಸಂಸರ್ಗಗ್ರಹದ ಪ್ರಾಗಭಾವ ಜ್ಞಾನವೇ ಬರುವುದಿಲ್ಲ.

**किञ्च यत्रैको विमलं जलमित्यश्रुत्वैव तात्पर्यभ्रमेण वा नद्याः कच्छान्वयपरत्वमवैति । अपरः समस्तमेव श्रुत्वा नद्याः जलान्वयपरत्वमवधारयति । तत्रोभयोरपि तदुच्चारणजन्यसंसर्गा-वगमात् नद्याः इत्युभयसाकाङ्क्षं स्यात् ।**

ಯಾವ ವ್ಯಕ್ತಿಯು ವಿಮಲಂ ಜಲಂ ನದ್ಯಾಃ ಕಚ್ಛೇ ಮಹಿಷಃ ಎಂಬ ವಾಕ್ಯದಲ್ಲಿ ವಿಮಲಂ ಜಲಂ ಎಂಬ ಅಂಶವನ್ನು ಕೇಳಿಸಿಕೊಳ್ಳದೆಯೇ ಅಥವಾ ತಾತ್ಪರ್ಯ ಭ್ರಮದಿಂದ ನದಿಗೆ ಕಚ್ಛಾನ್ವಯದಲ್ಲಿ ತಾತ್ಪರ್ಯವಿದೆ ಎಂದು ತಿಳಿಯುತ್ತಾನೆಯೋ ಮತ್ತು ಇನ್ನೊಬ್ಬ ವ್ಯಕ್ತಿಯು ಸಮಗ್ರವಾದ ವಾಕ್ಯವನ್ನು ಕೇಳಿ ನದಿಗೆ ಜಲಾನ್ವಯ ಪರತ್ವವನ್ನು ತಿಳಿಯುತ್ತಾನೆಯೋ ಆ ಸ್ಥಳದಲ್ಲಿ

ಇಬ್ಬರಿಗೂ ತದುಚ್ಚಾರಣ ಜನ್ಯ ಸಂಸರ್ಗ ಗ್ರಹವು ಇರುವುದರಿಂದ ಅದಕ್ಕೆ ಕಾರಣವಾದ ಸಂಸರ್ಗಗ್ರಹದ ಪ್ರಾಗಭಾವವನ್ನು ಒಪ್ಪಬೇಕಾಗುವುದರಿಂದ ನದಿಗೆ ಜಲದಲ್ಲಿಯೂ ಮತ್ತು ಕಚ್ಛದಲ್ಲಿಯೂ ಸಾಕಾಂಕ್ಷತ್ವವನ್ನು ಒಪ್ಪಬೇಕಾದೀತು ಎಂಬ ಆಪತ್ತಿಯು ಬರುತ್ತದೆ.

**अपि च प्रागभावाभावस्य कारणान्तराभावव्याप्तत्वात् तत एव कार्याभाव इति किमाकाङ्क्षया ।**

ಮತ್ತು ಎಲ್ಲಿ ಪ್ರಾಗಭಾವದ ಅಭಾವವಿರುತ್ತದೆಯೋ, ಅಲ್ಲಿ ಕಾರಣಾಂತರದ ಅಭಾವವು ಇದ್ದೇ ಇರುತ್ತದೆ. ಎಲ್ಲಿ ಘಟವು ಉತ್ಪತ್ತಿಯಾಗುವುದಿಲ್ಲವೋ ಅಲ್ಲಿ ಘಟಪ್ರಾಗಭಾವವಿಲ್ಲ. ಆದರೆ ಅಲ್ಲಿ ಘಟಕ್ಕೆ ಕಾರಣವಾದ ದಂಡಚಕ್ರಾದಿಗಳು (ಅಥವಾ ಅವುಗಳಲ್ಲಿ ಯಾವುದಾದರೂ) ಇರುವುದಿಲ್ಲ. ಆದ್ದರಿಂದ ಪ್ರಾಗಭಾವಾಭಾವವು ಕಾರಣಾಂತರಾಭಾವ ವ್ಯಾಪ್ತವಾಗಿದೆ. ಆದ್ದರಿಂದ ಕಾರಣಾಂತರ-ವಿಲ್ಲದಿರುವುದರಿಂದಲೇ ಕಾರ್ಯಾಭಾವವು ಇದೆ ಎಂದು ಹೇಳಲು ಬರುವಾಗ ಪ್ರಾಗಭಾವ-ರೂಪವಾದ ಆಕಾಂಕ್ಷಾ ಇಲ್ಲದಿರುವುದರಿಂದ ಅನ್ವಯಬೋಧರೂಪವಾದ ಕಾರ್ಯವು ಉಂಟಾ-ಗುವುದಿಲ್ಲ ಎಂದು ಹೇಳಿ ವಿಶೇಷವಾಗಿ ಏಕೆ ಆಕಾಂಕ್ಷೆಗೆ ಕಾರಣತ್ವವನ್ನು ಹೇಳಬೇಕು.

**एवञ्च योग्यतासत्ती अपि न हेतू अयोग्येऽनासन्ने च तदुच्चारण-जन्यसंसर्गज्ञानाभावेन तत्प्रागभावाभावात् ।**

ಆದರಂತೆ ಯೋಗ್ಯತೆ ಮತ್ತು ಆಸತ್ತಿಗಳೂ ಸಹ ಅನ್ವಯಬೋಧವನ್ನು ಕುರಿತು ಕಾರಣವಲ್ಲ. ವಹ್ನಿನಾ ಸಿಂಚತಿ ಎಂಬ ಅಯೋಗ್ಯಸ್ಥಳದಲ್ಲಿ ಮತ್ತು ವಿಲಂಬವಾಗಿ ಉಚ್ಚಾರಮಾಡಿದ ಅನಾಸನ್ನ ಸ್ಥಳದಲ್ಲಿ ತದುಚ್ಚಾರಣಜನ್ಯ ಸಂಸರ್ಗಜ್ಞಾನವೇ ಇಲ್ಲದಿರುವುದರಿಂದ ಕಾರ್ಯದಿಂದ ಊಹಿಸುವ ಸಂಸರ್ಗಜ್ಞಾನಪ್ರಾಗಭಾವವೂ ಇಲ್ಲ. ಆದರಿಂದಲೇ ಅನ್ವಯಬೋಧದ ಆಪತ್ತಿಯನ್ನು ವಾರಣೆ ಮಾಡಲು ಬರುವಾಗ ಯೋಗ್ಯತಾ ಮತ್ತು ಆಸತ್ತಿಗಳಿಗೆ ಪ್ರತ್ಯೇಕವಾಗಿ ಏಕೆ ಕಾರಣತ್ವವನ್ನು ಹೇಳಬೇಕು? ಸಂಸರ್ಗಗ್ರಹದ ಅಭಾವವನ್ನು (ಪ್ರಾಗಭಾವವನ್ನು) ಸಂಸರ್ಗಗ್ರಹವನ್ನು ಕುರಿತು ಕಾರಣ ಎಂದು ಹೇಳುವುದಾದರೆ ಬಾಧಾಭಾವಕ್ಕೂ ಕೂಡ ಅನುಮಿತಿಯನ್ನು ಕುರಿತು ಕಾರಣತ್ವ-ವನ್ನು ಅಂಗೀಕರಿಸಿ ಎಂಬ ಆಪತ್ತಿಯು ಇಲ್ಲ.

**न चैवं बाधाभावस्यानुमित्यादावपि हेतुत्वम् । प्रागभावाभावेनैव कार्याभावात् ।**

ಬಾಧವಿರುವ ಸ್ಥಳದಲ್ಲಿ ಅನುಮಿತಿಯು ಉಂಟಾಗುವುದಿಲ್ಲವಾದ್ದರಿಂದ ಅಲ್ಲಿ ಅನುಮಿತಿಯ ಪ್ರಾಗಭಾವವೂ ಇಲ್ಲ. ಅನುಮಿತಿಯ ಪ್ರಾಗಭಾವರೂಪವಾದ ಕಾರಣವಿಲ್ಲದಿರುವುದರಿಂದಲೇ ಕಾರ್ಯರೂಪವಾದ ಅನುಮಿತಿಯು ಉಂಟಾಗುವುದಿಲ್ಲ ಎಂದು ಆಪತ್ತಿಯನ್ನು ವಾರಣೆಮಾಡಲು ಬರುವಾಗ ಬಾಧಾಭಾವಕ್ಕೆ ಅನುಮಿತಿಯನ್ನು ಕುರಿತು ಪ್ರತ್ಯೇಕವಾಗಿ ಹೇತುತ್ವವನ್ನು ಕಲ್ಪನೆ-ಮಾಡಬೇಕಾಗಿಲ್ಲ.

ಬಾಧಸ್ಥಳದಲ್ಲಿ ಅನುಮಿತಿಯನ್ನು ಆಪತ್ತಿ ಮಾಡಲು ಬಂದರೆ ಮಾತ್ರ ಬಾಧಾಭಾವಕ್ಕೆ ಕಾರಣತ್ವವನ್ನು ಕಲ್ಪನೆಮಾಡಬೇಕು. ಆದರೆ ಬಾಧಸ್ಥಳದಲ್ಲಿ ಅನುಮಿತಿಯ ಪ್ರಾಗಭಾವವೇ ಇಲ್ಲದಿ-ರುವುದರಿಂದ ಅನುಮಿತಿಯ ಆಪಾದನೆಯನ್ನು ಮಾಡಲು ಬರುವುದಿಲ್ಲ.

**प्रागभावस्य च कार्यमात्रहेतुत्वात् शब्दे नासाधारण्यम् । उत्थितो-त्थाप्याकाङ्क्षयोरुत्कर्षापकर्षौ न स्यातां प्रागभावे तदभावात् ।**

ಪ್ರಾಗಭಾವವು ಕಾರ್ಯಮಾತ್ರವನ್ನು ಕುರಿತು ಕಾರಣವಾದುದರಿಂದ ಶಬ್ದಸ್ಥಳದಲ್ಲಿ ಮಾತ್ರ ಆಕಾಂಕ್ಷೆಗೆ ಅನ್ವಯಬೋಧ ಕಾರಣತ್ವವನ್ನು ಹೇಳಿ ಅಸಾಧಾರಣವಾಗಿ ಕಾರ್ಯಪ್ರಾಗಭಾವಕ್ಕೆ ಕಾರ್ಯಹೇತುತ್ವವನ್ನು ಕಲ್ಪನೆಮಾಡಬೇಕಾದ ಅಗತ್ಯವಿಲ್ಲ. ಇನ್ನು ಪ್ರಾಗಭಾವವೇ ಆಕಾಂಕ್ಷೆ ಎಂದು ಹೇಳುವುದಾದರೆ ಆಕಾಂಕ್ಷೆಯಲ್ಲಿ ಉತ್ಥಿತ ಮತ್ತು ಉತ್ಥಾಪ್ಯ ಆಕಾಂಕ್ಷೆಗಳಲ್ಲಿ ಉತ್ಕರ್ಷ ಅಪಕರ್ಷ-ಗಳು ಕಂಡುಬರುತ್ತವೆ.

ಉತ್ಥಿತ ಆಕಾಂಕ್ಷೆಯು ಉತ್ಕೃಷ್ಟವಾದುದು, ಉತ್ಥಾಪ್ಯ ಆಕಾಂಕ್ಷೆಯು ಅಪಕೃಷ್ಟವಾದುದು ಎಂದು. ಪ್ರಾಗಭಾವದಲ್ಲಿ ಇಂತಹ ತಾರತಮ್ಯವು ಅನುಪಪನ್ನವಾದ್ದರಿಂದ ಅನುಭವಸಿದ್ಧವಾದ ಈ ಉತ್ಕರ್ಷ ಅಪಕರ್ಷಗಳನ್ನು ಕೂಡಿಸಲು ಬರುವುದಿಲ್ಲ.

अथ ज्ञाप्यतदितरान्वयप्रकारकजिज्ञासानुकूलपदार्थोपस्थिति-
जनकत्वे सत्यजनिततात्पर्यविषयान्वयबोधत्वमाकाङ्क्षा ।।

ಜ್ಞಾಪ್ಯ ತದಿತರ ಅನ್ವಯಪ್ರಕಾರಕಜಿಜ್ಞಾಸಾನುಕೂಲ ಪದಾರ್ಥೋಪಸ್ಥಿತಿ ಜನಕತ್ವೇಸತಿ ಅಜನಿತ ತಾತ್ಪರ್ಯವಿಷಯಾನ್ವಯಬೋಧತ್ವಂ ಇದು ಆಕಾಂಕ್ಷೆ ಎಂದು ಹೇಳುತ್ತೇವೆ ಎಂಬ ಶಂಕೆ. ಘಟಮಾನಯತಿ ಎಂಬಲ್ಲಿ ಘಟಂ ಎಂಬ ಪದವನ್ನು ಕೇಳಿದ ತಕ್ಷಣ ಘಟವನ್ನು ತರುತ್ತಾನೆಯೋ ಅಥವಾ ನೋಡುತ್ತಾನೆಯೋ ಎಂಬ ಆಕಾಂಕ್ಷೆ ಉಂಟಾಗುತ್ತದೆ. ಹೀಗೆ ಘಟವೆಂಬ ಪದಕ್ಕೆ ಜ್ಞಾಪ್ಯವಾದ ಆನಯನದ ಮತ್ತು ತದಿತರದ ದರ್ಶನದ ಜಿಜ್ಞಾಸೆಗೆ ಅನುಕೂಲವಾದ ಪದಾರ್ಥೋಪಸ್ಥಿತಿ ಜನಕತ್ವವಿದೆ.

घटमानयतीत्यत्र घटमित्युक्ते किमानयति पश्यति वा । आनयतीत्युक्ते किं घटमन्यद्वेति जिज्ञासा भवति । घटः कर्मत्व-मानयनं कृतिरित्यत्राभेदेन नान्वयोऽयोग्यत्वात् । घटस्या-नयनमिति तु नान्वयबोधः । घट इति पदात् सम्बन्धित्वेन घटस्यानुपस्थितेः ।

ಆದರಂತೆ ಆನಯತಿ ಎಂದು ಹೇಳಿದಾಗ ಘಟವನ್ನೋ ಅಥವಾ ಬೇರೆಯ ಪದಾರ್ಥವನ್ನೋ ಎಂಬ ಜಿಜ್ಞಾಸೆಯು ಬರುವುದರಿಂದ ಜ್ಞಾಪ್ಯವಾದ ಘಟದ ಮತ್ತು ತದಿತರವಾದ ಇತರ ವಸ್ತುವಿನ ಜಿಜ್ಞಾಸಾನುಕೂಲವಾದ ಪದಾರ್ಥೋಪಸ್ಥಿತಿ ಜನಕತ್ವವು ಆನಯತಿ ಪದಕ್ಕೂ ಇದೆ.

ಇನ್ನು ತಾತ್ಪರ್ಯವಿಷಯವಾದ ಅನ್ವಯಬೋಧವು ಎರಡುಕಡೆಗಳಲ್ಲಿಯೂ ಉಂಟಾಗಿಲ್ಲ. ಆದ್ದರಿಂದ ಘಟಂ ಎಂಬ ಪದಕ್ಕೆ ಆನಯತಿ ಪದದಿಂದಲೂ, ಆನಯತಿ ಎಂಬ ಪದಕ್ಕೆ ಘಟಂ ಎಂಬ ಪದದಿಂದಲೂ ಸಾಕಾಂಕ್ಷತ್ವವಿದೆ. ಘಟಃ ಕರ್ಮತ್ವಂ ಆನಯನಂ ಕೃತಿಃ' ಎಂಬಲ್ಲಿ ಯೋಗ್ಯತೆ ಇಲ್ಲದಿರುವುದರಿಂದಲೇ ಅನ್ವಯಬೋಧವು ಉಂಟಾಗುವುದಿಲ್ಲ. ಆದ್ದರಿಂದ ಅಲ್ಲಿ ಆಕಾಂಕ್ಷೆಯನ್ನು ವಿಚಾರಮಾಡಬೇಕಾದ ಅಗತ್ಯವಿಲ್ಲ.

ಆ ಸ್ಥಳದಲ್ಲಿ ಘಟದ (ಘಟಸಂಬಂಧಿ) ಆನಯನ ಎಂಬ ಅನ್ವಯಬೋಧವು ಬರುವುದಿಲ್ಲ. ಏಕೆಂದರೆ ಘಟದ (ಘಟಸ್ಯ) ಎಂಬಲ್ಲಿ ಘಟಸಂಬಂಧಿತ್ವವನ್ನು ಉಪಸ್ಥಾಪನೆ ಮಾಡಿಕೊಡುವಂತೆ ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬಲ್ಲಿ ಸಂಬಂಧವನ್ನು ಉಪಸ್ಥಾಪನೆ ಮಾಡಿಕೊಡುವ ಯಾವ ಪದವೂ ಇಲ್ಲ.

**राज्ञ इति पुत्रेण जनितान्वयबोधत्वात् न पुरुषमाकाङ्क्षतीति चेत् । तर्हि नामविभक्तिधात्वाख्यातार्थानां घटकर्मत्वानयनकृतीनां स्वरूपेणोपस्थितिर्नान्वयप्रकारकजिज्ञासानुकूलेति तत्र नाकाङ्क्षा स्यात् ।**

'ಅಯಮೇತಿ ಪುತ್ರೋ ರಾಜ್ಞಃ, ಪುರುಷೋ ಅಪಸಾರ್ಯತಾಂ' ಎಂಬಲ್ಲಿ ರಾಜಪದಕ್ಕೆ ಜ್ಞಾಪ್ಯತದಿತರ ಅನ್ವಯ ಪ್ರಕಾರಕ ಜಿಜ್ಞಾಸಾನುಕೂಲ ಪದಾರ್ಥೋಪಸ್ಥಿತಿ ಜನಕಪದವಿದ್ದರೂ ಪುತ್ರಪದದಿಂದ ಅನ್ವಯ ಬೋಧವು ಉಂಟಾಗಿರುವುದರಿಂದ ತಥಾಚ ವಿಶೇಷ್ಯದಳವಿಲ್ಲದಿರುವುದರಿಂದ ಪುರುಷ ಪದದಿಂದ ಸಾಕಾಂಕ್ಷತ್ವವಿಲ್ಲ ಎಂದು ಹೀಗೆ ಶಂಕಿಸುವುದಾದರೆ ಇದೂ ಸರಿಯಲ್ಲ. ಏಕೆಂದರೆ ಘಟಮಾನಯ ಎಂಬಲ್ಲಿ ಘಟಂ ಎಂಬ ಪದದಿಂದ ಘಟ ಎಂಬ ಅಂಶದಿಂದ ಘಟವೂ, ವಿಭಕ್ತಿ ಅಂಶದಿಂದ ಕರ್ಮತ್ವವೂ, ಧಾತುವಿನಿಂದ ಆನಯನವೂ ಮತ್ತು ಆಖ್ಯಾತದಿಂದ ಕೃತಿಯೂ ಸ್ವರೂಪದಿಂದಲೇ ಉಪಸ್ಥಿತವಾಗುತ್ತದೆ. ಪ್ರಾಭಾಕರರು ಅಭಿಹಿತಾನ್ವಯವನ್ನು ಒಪ್ಪದಿರುವುದರಿಂದ ಈ ಸ್ವರೂಪೇಣ ಉಪಸ್ಥಿತಿಯು ಅನ್ವಯ ಪ್ರಕಾರಕ ಜಿಜ್ಞಾಸಾನುಕೂಲವಲ್ಲ. ಆದ್ದರಿಂದ ಘಟಮಾನಯ ಎಂಬಲ್ಲಿ ಆಕಾಂಕ್ಷೆಯು ಇಲ್ಲದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ.

**घटः कर्मत्वमानयनं कृतिरित्यत्र घटमानयतीत्यत्रेवान्वयबोधः स्यात् । नहि तत्र पदार्थस्वरूपाणामेतद्वैलक्षण्येनोपस्थितिः ।**

ಅದರಂತೆಯೇ ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬಲ್ಲಿ ಘಟಮಾನಯತಿ ಎಂಬಲ್ಲಿ

ಹೇಗೆ ಪದಾರ್ಥಗಳ ಉಪಸ್ಥಿತಿಯು ಬರುತ್ತದೆಯೋ ಅದರಂತೆಯೇ ಉಪಸ್ಥಿತಿಯು ಬರುವುದರಿಂದ ಘಟಮಾನಯತಿ ಎಂಬಲ್ಲಿ ಅನ್ವಯಬೋಧವು ಉಂಟಾದಂತೆ ಇಲ್ಲಿಯೂ ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಎರಡು ಸ್ಥಳಗಳಲ್ಲಿಯೂ ಪದಾರ್ಥೋಪಸ್ಥಿತಿಯಲ್ಲಿ ಸ್ವಲ್ಪವೂ ವ್ಯತ್ಯಾಸವಿಲ್ಲವಷ್ಟೆ?

त्रयाणां तुल्यवत् स्मरणे प्रथमं यतो राज्ञ इति पुरुषेण नान्वेति किन्तु पुत्रेण । तत एवाग्रेऽपि व्यर्थमजनितान्वयबोधत्वमिति ।।

इत्याकाङ्क्षावादपूर्वपक्षः ।।

ಇನ್ನು ಅಯಮೇತಿ ಪುತ್ರೋರಾಜ್ಞಃ ಪುರುಷೋ ಅಪಸಾರ್ಯತಾಂ ಎಂಬಲ್ಲಿ ರಾಜಪದಕ್ಕೆ ಜ್ಞಾಪ್ಯತದಿತರ ಪ್ರಕಾರಕ ಜಿಜ್ಞಾಸಾನುಕೂಲತ್ವವು ಇರುವುದರಿಂದ ಪುರುಷಪದದಿಂದ ಸಾಕಾಂಕ್ಷತ್ವ ಉಂಟಾಗಲಿ ಎಂಬ ಆಪತ್ತಿಯನ್ನು ಪರಿಹಾರ ಮಾಡಲು ಅಜನಿತತಾತ್ಪರ್ಯವಿಷಯಾನ್ವಯ ಬೋಧತ್ವರೂಪವಾದ ವಿಶೇಷ್ಯದಳವನ್ನು ಕೊಟ್ಟಿದ್ದೀರಿ, ಆದರೆ ಈ ವಾಕ್ಯದಿಂದ ಪುತ್ರ, ರಾಜ ಮತ್ತು ಪುರುಷರ ಉಪಸ್ಥಿತಿಯು ಸಮಾನವಾಗಿ ಬರುವಾಗ ಮೊದಲೇ ಪುತ್ರ ಪದದಿಂದ ರಾಜಪದವು ಅನ್ವಯವನ್ನು ಹೊಂದಿರುವುದರಿಂದ ಅಲ್ಲಿ ಜ್ಞಾಪ್ಯತದಿತರ ಅನ್ವಯಪ್ರಕಾರಕ ಜಿಜ್ಞಾಸಾನುಕೂಲತ್ವವೇ ಇಲ್ಲ. ಆದ್ದರಿಂದ ವಿಶೇಷಣದಳವೇ ಬರದಿರುವಾಗ ಈ ಆಪತ್ತಿಯನ್ನು ವಾರಣೆ ಮಾಡಲು ವಿಶೇಷ್ಯದಳವನ್ನು ಕೊಡುವುದು ವ್ಯರ್ಥವಾಗುತ್ತದೆ.

(ಇದು ಆಕಾಂಕ್ಷಾವಾದದ ಪೂರ್ವಪಕ್ಷ)

* * * * *

## ಆಕಾಂಕ್ಷಾವಾದದ ಸಿದ್ಧಾಂತ.

उच्यते । अभिधानापर्यवसानमाकाङ्क्षा यस्य येन विना न स्वार्थान्वयानुभावकत्वं तस्य तदपर्यवसानम् । नामविभक्ति-

**धात्वाख्यातक्रियाकारकपदानां परस्परं विना न परस्परस्य स्वार्थान्वयानुभवजनकत्वम् ।**

ಇದಕ್ಕೆ ನೈಯಾಯಿಕರಾದ ನಾವು ಉತ್ತರವನ್ನು ಹೇಳುತ್ತೇವೆ. ಅಭಿಧಾನದ ಅಪರ್ಯವಸಾನವೇ ಆಕಾಂಕ್ಷೆ. ಯಾವ ಪದಕ್ಕೆ ಯಾವ ಪದವಿಲ್ಲದಿದ್ದರೆ ತನ್ನ ಅನ್ವಯಾನುಭಾವಕತ್ವ ಇರುವುದಿಲ್ಲವೋ, ಆ ಪದಕ್ಕೆ ಅದು ಅನ್ವಯದ ಅಪರ್ಯವಸಾನ, ಆ ಪದಕ್ಕೆ ಆ ಇನ್ನೊಂದು ಪದದಿಂದ ಸಾಕಾಂಕ್ಷತ್ವವಿದೆ ಎಂದು ಅಭಿಪ್ರಾಯ.

ನಾಮ-ವಿಭಕ್ತಿ, ಧಾತು-ಆಖ್ಯಾತ, ಕ್ರಿಯಾ-ಕಾರಕ ಪದಗಳಿಗೆ ಪರಸ್ಪರ ಇನ್ನೊಂದು ಪದವಿಲ್ಲದಿದ್ದರೆ ಪರಸ್ಪರವಾಗಿ ಸ್ವಾರ್ಥಾನ್ವಯ ಅನುಭಾವಕತ್ವವಿರುವುದಿಲ್ಲ.

**परमते नीलो घटोऽस्ति नीलं घटमानयेत्यादौ नामार्थानां कारकाणां च न परस्परमन्वयबोधः । विशेषणान्वितविभक्त्यर्थान्वयात् इति न विशिष्टवैशिष्ट्येनान्वयः किन्त्वार्थः समाजः ।**

ಪ್ರಾಭಾಕರರ ಮತದಲ್ಲಿ 'ನೀಲೋ ಘಟೋಽಸ್ತಿ', ನೀಲಂ ಘಟಮಾನಯ' ಎಂಬ ಸ್ಥಳಗಳಲ್ಲಿ ನಾಮಾರ್ಥಗಳಿಗೂ ಮತ್ತು ಕಾರಕಗಳಿಗೂ ಪರಸ್ಪರ ಅನ್ವಯಬೋಧ ಉಂಟಾಗುವುದಿಲ್ಲ (ಆದ್ದರಿಂದ ಅವುಗಳಿಗೆ ಪರಸ್ಪರವಾಗಿ ಆಕಾಂಕ್ಷೆ ಇಲ್ಲ ಎಂಬ ದೋಷವು ಬರುತ್ತದೆ). ಏಕೆಂದರೆ ನೀಲರೂಪವಾದ ವಿಶೇಷಣಕ್ಕೆ ಮೊದಲು ವಿಭಕ್ತ್ಯರ್ಥದಲ್ಲಿ ಅನ್ವಯವನ್ನು ಹೇಳಿ ಅನಂತರ ವಿಭಕ್ತ್ಯರ್ಥಕ್ಕೆ ಘಟದಲ್ಲಿ ಅನ್ವಯವನ್ನು ಹೇಳಬೇಕು. ಆದ್ದರಿಂದ ನೀಲವಿಶಿಷ್ಟ ಘಟದ ವೈಶಿಷ್ಟ್ಯದ ಅನ್ವಯವು ಶಬ್ದದಿಂದ ತಿಳಿಯಲು ಸಾಧ್ಯವಿಲ್ಲ.

ಆದ್ದರಿಂದ ಈ ಮತದಲ್ಲಿ ವಿಶಿಷ್ಟ ವೈಶಿಷ್ಟ್ಯಾನ್ವಯ ಬೋಧವೇ ಇಲ್ಲ. ಅರ್ಥಗಳಾದ ನೀಲ-ಕರ್ಮತ್ವಗಳಿಗೂ ಘಟ-ಕರ್ಮತ್ವಗಳಿಗೂ ಒಂದೇ ಆನಯನಕ್ರಿಯೆಯಲ್ಲಿ ಅನ್ವಯ ಉಂಟಾಗು-

ತ್ತದೆ. ಇದನ್ನೇ ಅವರು ಅರ್ಥಸಮಾಜವೆಂದು ಹೇಳುತ್ತಾರೆ. ಅರ್ಥಸಮಾಜವೆಂದರೆ ಬೇರೆ ಬೇರೆ ಅರ್ಥಗಳಿಗೆ ಒಂದೇ ವಸ್ತುವಿನಲ್ಲಿ ಅನ್ವಯ ಎಂದು ಅರ್ಥ.

**अस्माकं तु नीलघटयोरभेदानुभवबलादभेद एव संसर्गः विशेषण-विभक्तिः साधुत्वार्था ।**

ನಾವಾದರೆ ಈ ಎರಡು ವಾಕ್ಯಗಳಲ್ಲಿ ನೀಲ ಮತ್ತು ಘಟ ಪದಾರ್ಥಗಳಿಗೆ ಅಭೇದಾನುಭವವು ಇರುವುದರಿಂದ ಅನುಭವ ಬಲದಿಂದ ಅಭೇದವೇ ಸಂಸರ್ಗ ಎಂದು ಹೇಳಿ ವಿಶೇಷಣ ವಿಭಕ್ತಿಯು ಕೇವಲ ಸಾಧುತ್ವಾರ್ಥ ಎಂದು ಹೇಳುತ್ತೇವೆ. ಆದ್ದರಿಂದ ನೀಲ ಪದಾರ್ಥಕ್ಕೆ ನೀಲವಾದ ಘಟದಲ್ಲಿ ಅನ್ವಯವನ್ನು ಹೇಳುವುದರಿಂದ ಆ ಘಟಕ್ಕೆ ಆನಯನಾದಿಗಳಲ್ಲಿ ಅನ್ವಯವನ್ನು ಹೇಳಿ ವಿಶಿಷ್ಟ-ವೈಶಿಷ್ಟ್ಯಾದಿ ಅನ್ವಯವನ್ನು ಕೂಡಿಸುತ್ತೇವೆ.

**यद्वा समानविभक्तिकयोरभेदानुभवबलात् विशेषणान्वितविभक्तेर-भेदार्थकत्वमतो विशेषणविशेष्यभावानुभावकत्वं तत्पदयोः । न परस्परं विना ।**

ಅಥವಾ ಸಮಾನವಿಭಕ್ತಿಕವಾದ ನಾಮಪದಾರ್ಥಗಳಿಗೆ ಅಭೇದಾನುಭವವು ಬರುವ ಬಲದಿಂದ ವಿಶೇಷಣವಾದ ವಿಭಕ್ತಿಗೆ ಅಭೇದವು ಅರ್ಥ ಎಂದು ಹೇಳುತ್ತೇವೆ. ಆದ್ದರಿಂದ ವಿಶೇಷಣ ವಿಶೇಷ್ಯಭಾವದ ಅನುಭವವು ಬರಬೇಕಾದರೆ ನೀಲ ಪದವೂ ಮತ್ತು ಘಟಪದವು ಇರಬೇಕು. ಅವೆರಡರಲ್ಲಿ ಯಾವುದು ಇಲ್ಲದಿದ್ದರೂ ಪರಸ್ಪರವಾದ ಅಭೇದಾನ್ವಯ ಉಂಟಾಗುವುದಿಲ್ಲ.

**'द्वारम्' इत्यत्राध्याहारं विना प्रतियोग्यलाभात् न स्वार्थान्वयानु-भावकत्वम् ।**

ದ್ವಾರಂ ಎಂಬಲ್ಲಿ ಅಧ್ಯಾಹಾರವನ್ನು ಮಾಡದಿದ್ದರೆ ಯಾವ ಅನ್ವಯಪ್ರತಿಯೋಗಿಯ

ಉಪಸ್ಥಿತಿಯು ಬರುವುದಿಲ್ಲವಾದ್ದರಿಂದ ಸ್ವಾರ್ಥಾನ್ವಯ ಅನುಭಾವಕತ್ವವು ಇಲ್ಲ. ಆದ್ದರಿಂದ ಅಲ್ಲಿ ಆಕಾಂಕ್ಷೆ ಇಲ್ಲ.

**'विश्वजिता यजेत' इत्यत्र ममेदं कार्यमिति प्रवर्तकतात्पर्य-विषयज्ञानं नाधिकारिणं विनेति तदाकाङ्क्षा ।**

'ವಿಶ್ವಜಿತಾ ಯಜೇತ' ಎಂಬಲ್ಲಿ ಕಾರ್ಯತ್ವವು ಲಿಙರ್ಥ. ಪ್ರವರ್ತಕವಾದುದು ವಿಧಿ. ಪ್ರವರ್ತಕ ತಾತ್ಪರ್ಯವಿಷಯ ಜ್ಞಾನವೆಂದರೆ ಮಮೇದಂ ಕಾರ್ಯಂ (ನಾನು ಇದನ್ನು ಮಾಡ-ಬೇಕು) ಎಂಬ ಜ್ಞಾನ. ಅಧಿಕಾರಿಯನ್ನು ಹೇಳುವ ಪದವಿಲ್ಲದಿದ್ದರೆ ಅಂತಹ ಜ್ಞಾನವು ಬರುವುದಿಲ್ಲ-ವಾದ್ದರಿಂದ ಅಲ್ಲಿಯೂ ಆಕಾಂಕ್ಷೆಯಿಲ್ಲ (ಸ್ವರ್ಗಕಾಮಃ ಎಂಬ ಪದವನ್ನು ಅಧ್ಯಾಹಾರ ಮಾಡಿದರೆ ಆಗ ಆಕಾಂಕ್ಷೆ ಉಂಟಾಗುತ್ತದೆ).

**यद्वा कर्तुरिवाधिकारिणोऽप्याक्षेपादेव लाभ इति तदन्वयो न शाब्दः किन्त्वानुमानिकः । मीमांसकगौणलाक्षणिकयोरननु-भावकत्वपक्षे तदुपस्थापितस्याध्याहृतस्येवेतरपदं विना नानु-भावकत्वम् ।**

ಅಥವಾ ಕರ್ತೃವಿಲ್ಲದೇ ಕ್ರಿಯೆಯು ಇರುವುದಿಲ್ಲ ಎಂಬ ನ್ಯಾಯದಿಂದ ಹೇಗೆ ಕ್ರಿಯಾ ಪದವು ಕರ್ತೃವನ್ನು ಆಕ್ಷೇಪ ಮಾಡುತ್ತದೆಯೋ ಅದರಂತೆ ಯಜೇತ ಎಂಬಲ್ಲಿರುವ ಯಾಗ ರೂಪ-ಕ್ರಿಯೆಯು ಅಧಿಕಾರಿ ಇಲ್ಲದಿದ್ದರೆ ಅನುಪಪನ್ನವಾಗುವುದರಿಂದ ಅಧಿಕಾರಿಯನ್ನು ಆಕ್ಷೇಪ ಮಾಡಿ-ಕೊಡುತ್ತದೆ. ಆದ್ದರಿಂದ ಸ್ವರ್ಗಕಾಮಃ ಎಂಬ ಪದವನ್ನು ಅಧ್ಯಾಹಾರ ಮಾಡದಿದ್ದರೂ ಅನುಮಾನದಿಂದಲೇ ಲಭ್ಯವಾದ ಅಧಿಕಾರಿಯ ಅನ್ವಯವು ಯಾಗ ರೂಪಕ್ರಿಯೆಯಲ್ಲಿ ಉಂಟಾಗುವುದರಿಂದ ಆಗ ಸಾಕಾಂಕ್ಷತ್ವವು ಉಂಟಾಗುತ್ತದೆ. ಗೌಣ ಮತ್ತು ಲಾಕ್ಷಣಿಕ ಪದಗಳಿಗೆ ಅನುಭಾವಕತ್ವವೇ ಇಲ್ಲವೆಂದು ಮೀಮಾಂಸಕರ ಪಕ್ಷ.

**घटः कर्मत्वमानयनं कृतिरित्यादावभेदेन नान्वयबोधोऽयोग्यत्वात् । तत्तत्पदेभ्यस्तात्पर्यविषयतत्तत्पदार्थस्वरूपज्ञानं च पदान्तरं विनैव ।**

ಆ ಪಕ್ಷದಲ್ಲಿಯೂ ಸಹ ಅಧ್ಯಾಹೃತವಾದ ಅರ್ಥವಿಲ್ಲದಿದ್ದರೆ ಹೇಗೆ ಇರುವ ಒಂದು ಪದಕ್ಕೂ ಅನುಭಾವಕತ್ವವಿಲ್ಲವೋ ಅದರಂತೆ ಇತರ ಪದವಿಲ್ಲದಿದ್ದರೆ ಗೌಣ ಲಾಕ್ಷಣಿಕ ಪದಗಳಿಗೂ ಅನುಭಾವಕತ್ವವಿಲ್ಲ. 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾಪದದಿಂದ ಉಪಸ್ಥಾಪಿತವಾದ ತೀರಕ್ಕೆ ಘೋಷಪದವಿಲ್ಲದಿದ್ದರೆ ಅನ್ವಯಾನುಭಾವಕತ್ವವು ಇಲ್ಲ. ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬಲ್ಲಿ ಅಭೇದಾನ್ವಯಬೋಧವು ಉಂಟಾಗುವುದಿಲ್ಲ. ಏಕೆಂದರೆ ಅಲ್ಲಿ ಯೋಗ್ಯತೆ ಇಲ್ಲ. ಇನ್ನು ಆಯಾ ಪದಗಳಿಂದ ತಾತ್ಪರ್ಯವಿಷಯವಾದ ಆಯಾ ಪದಾರ್ಥಗಳ ಸ್ವರೂಪಜ್ಞಾನವು ಪದಾಂತರವಿಲ್ಲದೆಯೇ ಬರುತ್ತದೆ. ಆದ್ದರಿಂದ ಪದಾಂತರ ವಿರಹ ಪ್ರಯುಕ್ತವಾದ ಅನ್ವಯ ಅನನುಭಾವಕತ್ವವು ಅಲ್ಲಿ ಇಲ್ಲದಿರುವುದರಿಂದ ಆಕಾಂಕ್ಷೆ ಇಲ್ಲ.

**घटमानयतीत्यत्रेव भ्रमेण तथान्वयतात्पर्येऽपि क्रियाकारकभावेन नान्वयः । नामविभक्तिधात्वाख्यातक्रियाकारकपदानामन्वयबोधे तान्येव पदानि समर्थानि न तु तदर्थकानि पदान्तराणि ।**

ವಕ್ತೃವಿಗೆ ಭ್ರಮದಿಂದ ಘಟಮಾನಯತಿ ಎಂಬಲ್ಲಿರುವಂತೆಯೇ ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬಲ್ಲಿಯೂ ಅನ್ವಯದಲ್ಲಿ ತಾತ್ಪರ್ಯವು ಅಭಿಪ್ರೇತವಾಗಿದ್ದರೂ ಸ್ತೋತೃವಿಗೆ ಕ್ರಿಯಾಕಾರಕ ಭಾವದಿಂದ ಅಲ್ಲಿ ಅನ್ವಯಬೋಧವು ಉಂಟಾಗುವುದಿಲ್ಲ.

ನಾಮ-ವಿಭಕ್ತಿ-ಧಾತು-ಆಖ್ಯಾತ-ಕ್ರಿಯಾ-ಕಾರಕಪದಗಳಿಂದ ಅನ್ವಯಬೋಧ ಉಂಟಾಗಬೇಕಾದರೆ ನಾಮ-ವಿಭಕ್ತಿ ಮೊದಲಾದ ಪದಗಳೇ ಇರಬೇಕೇ ಹೊರತು ತದರ್ಥಕವಾದ ಬೇರೆ ಪದಗಳಿಂದ ಅನ್ವಯಬೋಧ ಉಂಟಾಗುವುದಿಲ್ಲ.

**अग्निः करणत्वम् । ओदनः कर्मता । पाकः कृतिः इष्टसाधनता**

इत्यादिपदेभ्यः अग्निनौदनं पचतेत्यत्रेन अन्वयाबोधात् । अग्नि-करणकौदनकर्मकपाकविषयककृतिरिष्टसाधनमिति तु वाक्यं न पदम् । अत एव द्वारमित्यत्र पिधेहि पदाध्याहारः ।

ಏಕೆಂದರೆ ಅಗ್ನಿಃ ಕರಣತ್ವಂ, ಓದನಃ ಕರ್ಮತಾ, ಪಾಕಃ ಕೃತಿಃ ಇಷ್ಟಸಾಧನತಾ ಮೊದಲಾದ ಪದಗಳಿಂದ ಅಗ್ನಿನಾ ಓದನಂ ಪಚತ ಎಂಬಲ್ಲಿ ಬರುವ ಅನ್ವಯಬೋಧವು ಉಂಟಾಗುವುದಿಲ್ಲ. ಅಗ್ನಿಕರಣಕ ಓದನಕರ್ಮಕ ಪಾಕವಿಷಯಕಕೃತಿಃ ಇಷ್ಟಸಾಧನಂ ಎನ್ನುವ ವಾಕ್ಯದಿಂದ ಅಂತಹ ಬೋಧವು ಬರುತ್ತದೆ. ಆದರೆ ಅದು ಪದವಲ್ಲ. ಆದ್ದರಿಂದ ಅಲ್ಲಿ ಆಕಾಂಕ್ಷೆಯ ವಿಚಾರದ ಪ್ರಸಕ್ತಿ ಇಲ್ಲ. ಆದ್ದರಿಂದಲೇ ಎಂದರೆ ಕ್ರಿಯಾಪದದಿಂದ ಉಪಸ್ಥಾಪಿತವಾದ ಕ್ರಿಯೆಯಿಂದಲೇ ದ್ವಾರಪದಕ್ಕೆ ಸಾಕಾಂಕ್ಷತ್ವವು ಇರುವುದರಿಂದ ಪಿಧೇಹಿ ಎಂಬ ಕ್ರಿಯಾಪದವನ್ನೇ ಅಧ್ಯಾಹಾರ ಮಾಡುತ್ತೇವೆ.

क्रियापदार्थस्यान्यत उपस्थितावपि कारकानन्वयात् । असामर्थ्यं च स्वभावात् । अनासन्नमप्यसन्नतादशायामासन्नत्वभ्रमेण वाऽ-न्वयबोधसमर्थमेव ।

ಕ್ರಿಯಾರೂಪವಾದ ಪದಾರ್ಥವು ಕ್ರಿಯಾಪದವನ್ನು ಬಿಟ್ಟು ಬೇರೆ ರೀತಿಯಲ್ಲಿ ಉಪಸ್ಥಿತವಾದರೆ ಅದು ಕಾರಕದಿಂದ ಅನ್ವಯವನ್ನು ಹೊಂದುವುದಿಲ್ಲ. ಕ್ರಿಯಾಪದದಿಂದ ಉಪಸ್ಥಿತವಾದರೆ ಮಾತ್ರ ಅನ್ವಯವನ್ನು ಹೊಂದುತ್ತದೆ, ಬೇರೆ ರೀತಿಯಿಂದ ಉಪಸ್ಥಿತವಾದರೆ ಅನ್ವಯವನ್ನು ಹೊಂದು-ವುದಿಲ್ಲ ಎಂಬುದು ಕ್ರಿಯೆಯ (ವಸ್ತುವಿನ) ಸ್ವಭಾವ. ಅನಾಸನ್ನ ಪದವೂ ಆಸನ್ನತಾದೆಸೆಯಲ್ಲಿ ಅನ್ವಯವನ್ನು ಉಂಟುಮಾಡುತ್ತದೆ. ಏಕೆಂದರೆ ಆಸನ್ನವಾದಾಗ ಅಲ್ಲಿ ಆಕಾಂಕ್ಷೆ ಉಂಟಾಗುತ್ತದೆ. ಅದರಂತೆ ಅನಾಸನ್ನವಾದ ಪದವು ಆಸನ್ನತ್ವಭ್ರಮದಿಂದಲೂ ಅನ್ವಯಬೋಧಜನಕವಾಗುತ್ತದೆ.

वह्निना सिञ्चति इत्यत्र क्रियाकारकपदयोरन्वयबोधे सामर्थ्येऽप्य-योग्यताज्ञानं प्रतिबन्धकं दाहे समर्थस्याप्यग्नेर्मणिरिव ।

ವಹ್ನಿನಾ ಸಿಂಚತಿ ಎಂಬಲ್ಲಿ ಕ್ರಿಯಾ ಪದ ಮತ್ತು ಕಾರಕ ಪದಗಳಿಗೆ ಅನ್ವಯಬೋಧದಲ್ಲಿ ಸಾಮರ್ಥ್ಯವೇನೋ ಇದೆ. ಆದರೆ ದಾಹಸಮರ್ಥವಾದ ವಹ್ನಿಗೆ ಮಣಿಯು ಹೇಗೆ ಪ್ರತಿಬಂಧಕವಾಗುತ್ತದೆಯೋ ಅದರಂತೆ ಅಯೋಗ್ಯತಾ ಜ್ಞಾನರೂಪವಾದ ಪ್ರತಿಬಂಧಕವು ಇರುವುದರಿಂದ ಅನ್ವಯಬೋಧವು ಉಂಟಾಗುವುದಿಲ್ಲ. ಆದ್ದರಿಂದ ಅಯೋಗ್ಯತಾ ಜ್ಞಾನರೂಪವಾದ ಪ್ರತಿಬಂಧಕವು ಇಲ್ಲದಿರುವಾಗ ಯೋಗ್ಯತಾ ಭ್ರಮದಿಂದ ವಹ್ನಿನಾ ಸಿಂಚತಿ ಎಂಬ ವಾಕ್ಯದಿಂದಲೂ ಅನ್ವಯಬೋಧವುಂಟಾಗುತ್ತದೆ.

**अत एव योग्यताभ्रमात् प्रतिबन्धकाभावे ततोऽप्यन्वयबोधः ।**

ಆದ್ದರಿಂದ ವಹ್ನಿನಾ ಸಿಂಚತಿ ಎಂಬ ಪದಗಳಿಗೆ ಸ್ವಾಭಾವಿಕವಾಗಿ ಅನ್ವಯಬೋಧ ಸಾಮರ್ಥ್ಯವನ್ನು ಒಪ್ಪಬೇಕು. ಇಲ್ಲದಿದ್ದರೆ ಯೋಗ್ಯತಾ ಭ್ರಮದಿಂದಲಾದರೂ (ಆರೋಪಿತ ಯೋಗ್ಯತ್ವದಿಂದಲೂ) ಅನ್ವಯ ಬೋಧವನ್ನು ಉಂಟುಮಾಡಲಾರದು.

**नहि स्वभावतोऽसमर्थमारोपितसामर्थ्यं वा दहति पचति वेति । प्रकृते तु पदार्थस्वरूपज्ञानं न त्वन्वयभ्रमोऽपि ।**

ಸ್ವಾಭಾವಿಕವಾಗಿ ದಾಹಸಾಮರ್ಥ್ಯವಿಲ್ಲದ ವಸ್ತುವು ದಾಹಸಾಮರ್ಥ್ಯವನ್ನು ಆರೋಪ ಮಾಡಿದರೆ ದಹಿಸುವುದಿಲ್ಲವಷ್ಟೇ. ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬಲ್ಲಿ ಪದಾರ್ಥಸ್ವರೂಪಜ್ಞಾನವು ಬರುತ್ತದೆಯೇ ಹೊರತು ಅನ್ವಯಭ್ರಮವೂ ಬರುವುದಿಲ್ಲ.

**पुरुषपदं विनापि राज्ञ इत्यस्य पुत्रेण समं स्वार्थान्वयानुभावकत्वमिति न तदाकाङ्क्षा ।**

ಆದ್ದರಿಂದ ಅಲ್ಲಿ ಪರಸ್ಪರವಾಗಿ ಆಕಾಂಕ್ಷೆ ಇಲ್ಲ. 'ಅಯಮೇತಿ ಪುತ್ರೋರಾಜ್ಞಃ, ಪುರುಷಃ ಅಪಸಾರ್ಯತಾಂ' ಎಂಬಲ್ಲಿ ಪುರುಷ ಪದವಿಲ್ಲದಿದ್ದರೂ ರಾಜ್ಞಃ ಎಂಬ ಪದಕ್ಕೆ ಪುತ್ರ ಪದದ ಸಹಾಯದಿಂದ ಸ್ವಾರ್ಥಾನ್ವಯಾನುಭಾವಕತ್ವವಿರುವುದರಿಂದ ಅಲ್ಲಿ ರಾಜ್ಞಃ ಎಂಬ ಪದಕ್ಕೆ ಪುರುಷ ಪದದಿಂದ ಸಾಕಾಂಕ್ಷತ್ವವಿಲ್ಲ.

यद्वा त्रयाणां स्मरणेऽजनितान्वयबोधदशायां पुरुषान्वये तात्पर्याभावात् नान्वयबोध इत्यग्रेऽपि तथा । न च पुत्रस्योत्थिताकाङ्क्षत्वात् तेनैवान्वयबोध इति वाच्यम् ।

ಅಥವಾ ಪುತ್ರ, ರಾಜ ಮತ್ತು ಪುರುಷ ಈ ಮೂರು ಪದಾರ್ಥಗಳ ಸ್ಮರಣೆಯು ಇರುವಾಗ ಅನ್ವಯಬೋಧವು ಹುಟ್ಟದಿರುವ ದೆಸೆಯಲ್ಲಿ ಪುರುಷಾನ್ವಯ ತಾತ್ಪರ್ಯವಿಲ್ಲದಿರುವುದರಿಂದ ಪುರುಷಾನ್ವಯ ಬೋಧವು ಬರುವುದಿಲ್ಲವಾದ್ದರಿಂದ ಪುತ್ರನಿಂದ ಅನ್ವಯಬೋಧವು ಉಂಟಾದಮೇಲೆಯೂ ಪುರುಷನಿಂದ ಅನ್ವಯಬೋಧ ಉಂಟಾಗುವುದಿಲ್ಲ. ಹೊರತು ಪುತ್ರನಿಗೆ ಉತ್ಥಿತಾಕಾಂಕ್ಷೆ ಇರುವುದರಿಂದ ಪುತ್ರನಿಂದಲೇ ಅನ್ವಯಬೋಧ ಉಂಟಾಗುತ್ತದೆ ಎಂಬುದು ಸರಿಯಲ್ಲ.

तात्पर्यवशात् पुरुषेणैव प्रथममन्वयबोधात् । अत एव अन्वयबोधसमर्थत्वे सत्यजनिततात्पर्यविषयान्वयबोधमाकाङ्क्षेति केचित् ।

ಏಕೆಂದರೆ ಪುರುಷಾನ್ವಯದಲ್ಲಿ ತಾತ್ಪರ್ಯವಿದ್ದರೆ ಉತ್ಥಿತಾಕಾಂಕ್ಷೆಯುಳ್ಳ ಪುತ್ರನನ್ನು ಬಿಟ್ಟು ಪುರುಷನಿಂದಲೇ ಮೊದಲೇ ಅನ್ವಯಬೋಧ ಉಂಟಾಗುತ್ತದೆ. ಆದ್ದರಿಂದಲೇ ಕೆಲವರು ಅನ್ವಯ-ಬೋಧ ಸಮರ್ಥತ್ವೇ ಸತಿ ಅಜನಿತತಾತ್ಪರ್ಯ ವಿಷಯನ್ವಯ ಬೋಧತ್ವವುಳ್ಳ ಪದವು ಸಾಕಾಂಕ್ಷ ಎಂದು ಹೇಳುತ್ತಾರೆ.

प्रकृतिप्रत्ययाभ्यामन्वयबोधे जनितेऽपि वाक्यैकवाक्यतावत् क्रियाकारकपदयोरजनितान्वयबोधत्वमाकाङ्क्षा ।

ಘಟಮಾನಯ ಎಂಬಲ್ಲಿ ಘಟಂ ಎಂಬಲ್ಲಿ ಪ್ರಕೃತಿ ಪ್ರತ್ಯಯಗಳಿಗೂ ಆನಯ ಎಂಬಲ್ಲಿ ಧಾತು ಆಖ್ಯಾತಗಳಿಗೂ ಅನ್ವಯಬೋಧವು ಉಂಟಾಗಿದ್ದರೂ ಕ್ರಿಯಾಕಾರಕ ಪದಗಳಿಗೆ ಅನ್ವಯ ಬೋಧವು ಉಂಟಾಗಿಲ್ಲವಾದ್ದರಿಂದ ಕ್ರಿಯಾಕಾರಕ ಪದಗಳಿಗೆ ಪರಸ್ಪರವಾಗಿ ಆಕಾಂಕ್ಷೆಯಿದೆ.

ಹೇಗೆ ವಾಕ್ಯೈಕವಾಕ್ಯತಾ ಸ್ಥಳದಲ್ಲಿ ದರ್ಶಪೂರ್ಣಮಾಸ ವಾಕ್ಯಕ್ಕೂ, ಪ್ರಯಾಜವಾಕ್ಯಕ್ಕೂ ಪ್ರತ್ಯೇಕವಾಗಿ ಒಂದೊಂದರಲ್ಲೂ ಅನ್ವಯಬೋಧವಿದ್ದರೂ ದರ್ಶಪೂರ್ಣಮಾಸ ಮತ್ತು ಪ್ರಯಾಜಗಳಿಗೆ ಹೇಗೆ ಪರಸ್ಪರ ಆಕಾಂಕ್ಷೆ ಇದೆಯೋ ಅದರಂತೆ.

**नव्यास्तु पदविशेषजन्यपदार्थोपस्थितिः घटः कर्मत्वमानयनं कृतिरित्येवंविधपदाजन्यपदार्थोपस्थितिर्वा आसत्तिरन्वयबोधाङ्गमित्यासत्त्यभावादेवंविधशब्दान्नान्वयबोधः ।**

ನವೀನರಾದರೂ ಪದವಿಶೇಷಜನ್ಯವಾದ ಪದಾರ್ಥೋಪಸ್ಥಿತಿಯೇ ಅನ್ವಯ ಬೋಧಕ್ಕೆ ಕಾರಣ ಅಥವಾ ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬ ಈ ವಿಧವಾದ ಪದಗಳಿಂದ ಅಜನ್ಯವಾದ ಪದಾರ್ಥೋಪಸ್ಥಿತಿಯೇ ಕಾರಣ. ಘಟಃ ಕರ್ಮತ್ವಂ ಇತ್ಯಾದಿ ವಾಕ್ಯದಲ್ಲಿ ಆಸತ್ತಿ ಇಲ್ಲದಿರುವುದರಿಂದಲೇ ಅನ್ವಯಬೋಧ ಉಂಟಾಗುವುದಿಲ್ಲ.

ಆದ್ದರಿಂದ ಅಲ್ಲಿ ಆಕಾಂಕ್ಷೆಗೆ ಕಾರಣತ್ವವನ್ನು ಕಲ್ಪನೆಮಾಡುವ ಅಗತ್ಯವಿಲ್ಲ. ಮೀಮಾಂಸಕರಾದ ನೀವೂ ಸಹ ಆಕಾಂಕ್ಷೆಗೆ ಹೇತುವಾಗಿ ಇಂತಹ ಪದಾರ್ಥೋಪಸ್ಥಿತಿಯನ್ನು ಒಪ್ಪಲೇಬೇಕು. ಅಷ್ಟರಿಂದಲೇ ಅನ್ವಯಬೋಧವನ್ನು ಕೂಡಿಸಲು ಬರುವಾಗ ಆಕಾಂಕ್ಷೆಯನ್ನು ಒಪ್ಪಬೇಕಾಗಿಲ್ಲ.

**त्वयाप्येवं विधपदार्थोपस्थितेराकाङ्क्षाहेतुत्वेनावश्यमभ्युपेयत्वात् । जनितान्वयबोधात् नान्वयान्तरबोधः तात्पर्याभावादित्याकाङ्क्षाया कारणत्वमेव नास्ति । किन्तु स्वजनकोपस्थितेः परिचायकत्वमात्रमिति ।।**

इति श्रीमद्गङ्गेशोपाध्यायविरचिते तत्त्वचिन्तामणौ

शब्दाख्यतुरीयखण्डे आकाङ्क्षावादः ।।

ಆಕಾಂಕ್ಷೆಗೆ ಕಾರಣತ್ವವಿಲ್ಲದಿದ್ದರೆ ಒಂದು ವಾಕ್ಯದಿಂದ ಅನ್ವಯಬೋಧವುಂಟಾದ ನಂತರ ಅನ್ವಯಾಂತರಬೋಧವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ ಎಂದು ಆಕ್ಷೇಪಿಸಬಾರದು. ಅಂತಹ ಬೋಧದಲ್ಲಿ ತಾತ್ಪರ್ಯವೇ ಇಲ್ಲದಿರುವುದರಿಂದ ಬೋಧವು ಉಂಟಾಗುವುದಿಲ್ಲ ಎಂದು ಹೇಳಬಹುದು. ಆದ್ದರಿಂದ ಆಕಾಂಕ್ಷೆಗೆ ಅನ್ವಯಬೋಧವನ್ನು ಕುರಿತು ಕಾರಣತ್ವವೇ ಇಲ್ಲ. ಆದರೆ ಆಕಾಂಕ್ಷೆಗೆ ಈ ಲಕ್ಷಣವನ್ನು ಹೇಳಿದ್ದು ಅನ್ವಯಬೋಧ ಜನಕವಾದ ಉಪಸ್ಥಿತಿಯನ್ನು ಪರಿಚಯ ಮಾಡಿಕೊಡುವುದಕ್ಕೆ ಮಾತ್ರ ಎಂದು ನವೀನರು ಹೇಳುತ್ತಾರೆ.

ಗಂಗೇಶೋಪಾಧ್ಯಾಯವಿರಚಿತ ತತ್ತ್ವಚಿಂತಾಮಣಿಯಲ್ಲಿ
ಆಕಾಂಕ್ಷಾವಾದವು ಮುಗಿಯಿತು.

गङ्गेशोपाध्यायविरचिततत्वचिन्तामणौ

# आसत्तिवादः ॥

**आसत्तिश्च अव्यवधानेनान्वयप्रतियोग्युपस्थितिः । सा च स्मृतिर्नानुभवोऽतो नान्योन्याश्रयः । अथ नानाविशेषणककर्मकर्तृकरणाधिकरणक्रियादिक्रमिकपदज्ञानजन्यक्रमिकपदार्थस्मृतीनां न यौगपद्यं सम्भवति ।**

## ತತ್ತ್ವಚಿಂತಾಮಣಿಯಲ್ಲಿ ಆಸತ್ತಿವಾದ

ಆಸತ್ತಿ ಎಂದರೆ ವ್ಯವಧಾನವಿಲ್ಲದೆ ಅನ್ವಯಪ್ರತಿಯೋಗಿಯ ಉಪಸ್ಥಿತಿ. ಅದು ಸ್ಮೃತಿರೂಪವಾದುದು. ಅದನ್ನು ಅನುಭವರೂಪವೆಂದು ಹೇಳಿದರೆ ಆಸತ್ತಿಯ ಜ್ಞಾನವು ಶಾಬ್ದಬೋಧಕ್ಕೆ ಕಾರಣವಾದುದರಿಂದ ಅನ್ವಯ ಪ್ರತಿಯೋಗಿಯ ಉಪಸ್ಥಿತಿ ಇಲ್ಲದೆ ಅನ್ವಯಬೋಧರೂಪವಾದ ಶಾಬ್ದಬೋಧವು ಬರುವುದಿಲ್ಲ. ಅಂತಹ ಶಾಬ್ದಬೋಧವು ಬರದಿದ್ದರೆ ಅನ್ವಯಪ್ರತಿಯೋಗಿಯ ಉಪಸ್ಥಿತಿಯು ಉಂಟಾಗುವುದಿಲ್ಲ

ಹೇಗೆ ವಾಕ್ಯೈಕವಾಕ್ಯತಾ ಸ್ಥಳದಲ್ಲಿ ದರ್ಶಪೂರ್ಣಮಾಸ ವಾಕ್ಯಕ್ಕೂ, ಪ್ರಯಾಜವಾಕ್ಯಕ್ಕೂ ಪ್ರತ್ಯೇಕವಾಗಿ ಒಂದೊಂದರಲ್ಲೂ ಅನ್ವಯಬೋಧವಿದ್ದರೂ ದರ್ಶಪೂರ್ಣಮಾಸ ಮತ್ತು ಪ್ರಯಾಜಗಳಿಗೆ ಹೇಗೆ ಪರಸ್ಪರ ಆಕಾಂಕ್ಷೆ ಇದೆಯೋ ಅದರಂತೆ.

**नव्यास्तु पदविशेषजन्यपदार्थोपस्थितिः घटः कर्मत्वमानयनं कृतिरित्येवंविधपदाजन्यपदार्थोपस्थितिर्वा आसत्तिरन्वयबोधाङ्ग-मित्यासत्त्यभावादेवंविधशब्दान्नान्वयबोधः ।**

ನವೀನರಾದರೂ ಪದವಿಶೇಷಜನ್ಯವಾದ ಪದಾರ್ಥೋಪಸ್ಥಿತಿಯೇ ಅನ್ವಯ ಬೋಧಕ್ಕೆ ಕಾರಣ ಅಥವಾ ಘಟಃ ಕರ್ಮತ್ವಂ ಆನಯನಂ ಕೃತಿಃ ಎಂಬ ಈ ವಿಧವಾದ ಪದಗಳಿಂದ ಅಜನ್ಯವಾದ ಪದಾರ್ಥೋಪಸ್ಥಿತಿಯೇ ಕಾರಣ. ಘಟಃ ಕರ್ಮತ್ವಂ ಇತ್ಯಾದಿ ವಾಕ್ಯದಲ್ಲಿ ಆಸತ್ತಿ ಇಲ್ಲದಿರು-ವುದರಿಂದಲೇ ಅನ್ವಯಬೋಧ ಉಂಟಾಗುವುದಿಲ್ಲ.

ಆದ್ದರಿಂದ ಅಲ್ಲಿ ಆಕಾಂಕ್ಷೆಗೆ ಕಾರಣತ್ವವನ್ನು ಕಲ್ಪನೆಮಾಡುವ ಅಗತ್ಯವಿಲ್ಲ. ಮೀಮಾಂಸಕರಾದ ನೀವೂ ಸಹ ಆಕಾಂಕ್ಷೆಗೆ ಹೇತುವಾಗಿ ಇಂತಹ ಪದಾರ್ಥೋಪಸ್ಥಿತಿಯನ್ನು ಒಪ್ಪಲೇಬೇಕು. ಅಷ್ಟರಿಂದಲೇ ಅನ್ವಯಬೋಧವನ್ನು ಕೂಡಿಸಲು ಬರುವಾಗ ಆಕಾಂಕ್ಷೆಯನ್ನು ಒಪ್ಪಬೇಕಾಗಿಲ್ಲ.

**त्वयाप्येवं विधपदार्थोपस्थितेराकाङ्क्षाहेतुत्वेनावश्यमभ्युपेयत्वात् । जनितान्वयबोधात् नान्वयान्तरबोधः तात्पर्याभावादित्याकाङ्क्षाया कारणत्वमेव नास्ति । किन्तु स्वजनकोपस्थितेः परिचायकत्व-मात्रमिति ।।**

इति श्रीमद्गङ्गेशोपाध्यायविरचिते तत्त्वचिन्तामणौ

शब्दाख्यतुरीयखण्डे आकाङ्क्षावादः ।।

ಆಕಾಂಕ್ಷೆಗೆ ಕಾರಣತ್ವವಿಲ್ಲದಿದ್ದರೆ ಒಂದು ವಾಕ್ಯದಿಂದ ಅನ್ವಯಬೋಧವುಂಟಾದ ನಂತರ ಅನ್ವಯಾಂತರಬೋಧವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ ಎಂದು ಆಕ್ಷೇಪಿಸಬಾರದು. ಅಂತಹ ಬೋಧದಲ್ಲಿ ತಾತ್ಪರ್ಯವೇ ಇಲ್ಲದಿರುವುದರಿಂದ ಬೋಧವು ಉಂಟಾಗುವುದಿಲ್ಲ ಎಂದು ಹೇಳಬಹುದು. ಆದ್ದರಿಂದ ಆಕಾಂಕ್ಷೆಗೆ ಅನ್ವಯಬೋಧವನ್ನು ಕುರಿತು ಕಾರಣತ್ವವೇ ಇಲ್ಲ. ಆದರೆ ಆಕಾಂಕ್ಷೆಗೆ ಈ ಲಕ್ಷಣವನ್ನು ಹೇಳಿದ್ದು ಅನ್ವಯಬೋಧ ಜನಕವಾದ ಉಪಸ್ಥಿತಿಯನ್ನು ಪರಿಚಯ ಮಾಡಿಕೊಡುವುದಕ್ಕೆ ಮಾತ್ರ ಎಂದು ನವೀನರು ಹೇಳುತ್ತಾರೆ.

ಗಂಗೇಶೋಪಾಧ್ಯಾಯವಿರಚಿತ ತತ್ತ್ವಚಿಂತಾಮಣಿಯಲ್ಲಿ

ಆಕಾಂಕ್ಷಾವಾದವು ಮುಗಿಯಿತು.

गङ्गेशोपाध्यायविरचिततत्वचिन्तामणौ

# आसत्तिवादः ।।

**आसत्तिश्च अव्यवधानेनान्वयप्रतियोग्युपस्थितिः । सा च स्मृतिर्नानुभवोऽतो नान्योन्याश्रयः । अथ नानाविशेषणककर्मकर्तृकरणाधिकरणक्रियादिक्रमिकपदज्ञानजन्यक्रमिकपदार्थस्मृतीनां न यौगपद्यं सम्भवति ।**

## ತತ್ತ್ವಚಿಂತಾಮಣಿಯಲ್ಲಿ ಆಸತ್ತಿವಾದ

ಆಸತ್ತಿ ಎಂದರೆ ವ್ಯವಧಾನವಿಲ್ಲದೆ ಅನ್ವಯಪ್ರತಿಯೋಗಿಯ ಉಪಸ್ಥಿತಿ. ಅದು ಸ್ಮೃತಿರೂಪವಾದುದು. ಅದನ್ನು ಅನುಭವರೂಪವೆಂದು ಹೇಳಿದರೆ ಆಸತ್ತಿಯ ಜ್ಞಾನವು ಶಾಬ್ದಬೋಧಕ್ಕೆ ಕಾರಣವಾದುದರಿಂದ ಅನ್ವಯ ಪ್ರತಿಯೋಗಿಯ ಉಪಸ್ಥಿತಿ ಇಲ್ಲದೆ ಅನ್ವಯಬೋಧರೂಪವಾದ ಶಾಬ್ದಬೋಧವು ಬರುವುದಿಲ್ಲ. ಅಂತಹ ಶಾಬ್ದಬೋಧವು ಬರದಿದ್ದರೆ ಅನ್ವಯಪ್ರತಿಯೋಗಿಯ ಉಪಸ್ಥಿತಿಯು ಉಂಟಾಗುವುದಿಲ್ಲ

ಎಂದು ಅನ್ಯೋನ್ಯಾಶ್ರಯ ದೋಷವು ಬರುತ್ತವೆ. ಇನ್ನು "ಒಂದು ವಾಕ್ಯದಲ್ಲಿ ಅನೇಕ ವಿಶೇಷಣಗಳಿಂದ ಕೂಡಿದ ಕರ್ಮಪದ, ಕರ್ತೃಪದ, ಕರಣ ಅಧಿಕರಣ ಕ್ರಿಯಾಪದಗಳು ಇವುಗಳ ಜ್ಞಾನಗಳು ಕ್ರಮವಾಗಿ ಬರುತ್ತವೆ.

ಈ ಪದಗಳ ಜ್ಞಾನದಿಂದ ಉಂಟಾಗುವ ಪದಾರ್ಥಸ್ಮೃತಿಗಳೂ ಕೂಡ ಕ್ರಮವಾಗಿಯೇ ಉಂಟಾಗುತ್ತವೆ. ಆದ್ದರಿಂದ ಅವುಗಳಿಗೆ ಯೌಗಪದ್ಯವು ಕೂಡುವುದಿಲ್ಲ.

आशुतरविनाशिनां क्रमिकाणां मेलकानुपपत्तेरिति कथं तावत् पदार्थान्वयबोधः । विशेषणज्ञानसाध्यत्वाद् विशिष्टज्ञानस्येति चेत् । श्रौत्रप्रत्येकपदानुभवजन्यसंस्कारमेलकादेकदैव तावत्पद-स्मृतिः । तत एकदैव तावत् पदार्थस्मृतौ सत्यां वाक्यार्थानुभवः ।

ಅಲ್ಲದೇ ಪದಜ್ಞಾನವಾಗಲೀ ಅಥವಾ ಪದಾರ್ಥಸ್ಮೃತಿಗಳಾಗಲೀ ಆಶುತರ ವಿನಾಶಶಾಲಿಗಳಾ-ದುದರಿಂದ ಕ್ರಮಿಕವಾದ ಪದಾರ್ಥಸ್ಮೃತಿಗಳನ್ನು ಮೇಳನ ಮಾಡಲು (ಒಂದುಗೂಡಿಸಲು) ಯಾವ ಸಹಕಾರಿಯೂ ಇಲ್ಲ. ಹೀಗಿರುವಾಗ ಅಷ್ಟೂ ಪದಾರ್ಥಗಳ ಅನ್ವಯಬೋಧವು ಹೇಗೆ ಉಂಟಾಗುತ್ತದೆ? ವಿಶಿಷ್ಟಜ್ಞಾನವು ವಿಶೇಷಣ ಜ್ಞಾನಸಾಧ್ಯವಷ್ಟೆ' ಎಂಬ ಶಂಕೆಗೆ ಹೀಗೆ ಉತ್ತರ. ಆಯಾ ಪದಗಳ ಶ್ರವಣಾನುಭವವು ಬಂದಾಗ ಆ ಅನುಭವಗಳಿಂದ ಸಂಸ್ಕಾರಗಳು ಉಂಟಾಗುತ್ತವೆ. ಅಷ್ಟೂ ಸಂಸ್ಕಾರಗಳೇ ಪರಸ್ಪರ ಸಹಕಾರದಿಂದ ಅಷ್ಟೂ ಪದಗಳ ಒಂದುಸ್ಮೃತಿಯನ್ನು ಉಂಟುಮಾಡಿಕೊಡುತ್ತವೆ. ಅನಂತರ ಅಷ್ಟೂ ಪದಾರ್ಥಗಳ ಸ್ಮೃತಿಯು ಏಕಕಾಲದಲ್ಲಿ ಬರುತ್ತದೆ, ಅನಂತರ ವಾಕ್ಯಾರ್ಥದ ಅನುಭವವು ಬರುತ್ತದೆ.

न चान्यविषयकसंस्कारेण नान्यत्र स्मरणमिति वाच्यम् । वाक्यार्थानुपपत्त्या फलबलेन संस्काराणां परस्परसहकारेण तत्रैक-स्मरणकल्पनात् । प्रत्येकवर्णसंस्काराणामिवानन्यगतिकतया पद-स्मरणे ।

ಪದಜ್ಞಾನದ ಸಂಸ್ಕಾರಗಳು ಭಿನ್ನಭಿನ್ನವಾಗಿವೆ ಮತ್ತು ಭಿನ್ನಭಿನ್ನವಿಷಯಕವಾಗಿವೆ. ಹೀಗಿರುವಾಗ ಅಷ್ಟೂ ಪದಗಳ ಒಂದುಸ್ಮೃತಿಯು ಬರುವಾಗ ಬೇರೆಬೇರೆ ಪದಗಳ ಸಂಸ್ಕಾರಗಳು ಹೇಗೆ ಕಾರಣವಾಗುತ್ತವೆ? (ಕಾರಣವಾದ ಸಂಸ್ಕಾರಗಳು ಏಕಪದವಿಷಯಕವಾದುವು. ಜನ್ಯವಾದ ಪದಾರ್ಥ-ಸ್ಮೃತಿಯು ಮಾತ್ರ ಸರ್ವಪದವಿಷಯಕವಾದುದು ಇದು ಹೇಗೆ ಎಂದು ಪ್ರಶ್ನೆ). ಇದನ್ನು ಹೇಗೆ ಕೂಡಿಸುವುದು ಎಂಬ ಪ್ರಶ್ನೆಗೆ ಶಾಬ್ದಬೋಧರೂಪವಾದ ಫಲಬಲದಿಂದ ಬೇರೆಬೇರೆ ಸಂಸ್ಕಾರಗಳು ಪರಸ್ಪರ ಸಹಕಾರದಿಂದ ಒಂದುವಿಶಿಷ್ಟ ಸ್ಮರಣೆಯನ್ನು ಉಂಟುಮಾಡುತ್ತವೆ ಎಂದು ಕಲ್ಪಿಸುತ್ತೇವೆ. ಒಂದುಪದ ಸ್ಮರಣೆ ಬರುವಾಗ ಆ ಪದಘಟಕವಾದ ವರ್ಣಗಳ ಜ್ಞಾನವು ನಾಶವಾಗಿದ್ದರೂ ಆ ವರ್ಣಜ್ಞಾನಗಳಿಂದ ಜನ್ಯವಾದ ಸಂಸ್ಕಾರಗಳಿಂದ ಪರಸ್ಪರ ಸಹಕಾರದಿಂದ ಹೇಗೆ ಒಂದು ಪದಸ್ಮೃತಿಯು ಬರುತ್ತದೆಯೋ ಅದರಂತೆ ಇಲ್ಲಿಯೂ ಕೂಡ ಎಂದು ಉತ್ತರ.

अथ – 'यद् यदाकाङ्क्षितं योग्यं सन्निधानं प्रपद्यते ।
तेन तेनान्वितः स्वार्थः पदैरेवावगम्यते ।।

ಇನ್ನು ಯಾವ ಯಾವ ಪದಾರ್ಥಗಳು ಆಕಾಂಕ್ಷಿತ, ಯೋಗ್ಯ ಮತ್ತು ಸನ್ನಿಹಿತವಾಗುತ್ತವೆಯೋ ಅಂತಹ ಪದಾರ್ಥಗಳಿಂದ ಅನ್ವಿತವಾದ ಸ್ವಾರ್ಥಗಳು ಪದಗಳಿಂದ ತಿಳಿಸಲ್ಪಡುತ್ತವೆ.

न चैवमन्वयान्तराभिधानं न स्यात् विरम्य व्यापाराभावादिति वाच्यम् । एवमपि प्रथममनन्वये हेत्वनुपन्यासात् । उत्तरस्य हीदं सामग्रीवैकल्यं न पूर्वस्येति चेत्? अस्तु तावदेवं । तथापि चरमं तावत् पदार्थघटितवाक्यार्थानुभवे उक्तैव गतिरनन्य-गतिकत्वात् ।

ಹಾಗಾದರೆ ಶ್ಲೇಷಾದಿಸ್ಥಳದಲ್ಲಿ ಒಂದು ಅನ್ವಯಬೋಧವು ಬಂದಮೇಲೆ ಇನ್ನೊಂದು ಅನ್ವಯದ ಬೋಧವು ಬರಲು ಸಾಧ್ಯವಿಲ್ಲ. ಹಾಗೆ ಒಪ್ಪಿದರೆ ಪದಜ್ಞಾನಗಳಿಗೆ ವಿರಮ್ಯವ್ಯಾಪಾರ ಪ್ರಸಂಗವು ಉಂಟಾಗುತ್ತದೆ ಎಂಬ ಪ್ರಶ್ನೆ ಬಂದರೆ ಮೊದಲನೆಯ ಅನ್ವಯಬೋಧಕ್ಕಂತೂ ಯಾವ ಅನುಪಪತ್ತಿಯೂ

ಇಲ್ಲವೆಂದಾಯಿತು. ಎರಡನೆಯ ಅನ್ವಯಬೋಧವನ್ನು ಕುರಿತು ಸಾಮಗ್ರೀವೈಕಲ್ಯವನ್ನು ಹೇಳುತ್ತಿದ್ದೇವೆ ಎಂದು ಹೇಳಿದರೆ ಅದು ಹಾಗಿರಲಿ ಪದಾರ್ಥಸ್ಮೃತಿಗಳು ಬಂದಮೇಲೆ ಅಷ್ಟೂ ಪದಾರ್ಥಘಟಿತವಾದ ವಾಕ್ಯಾರ್ಥವನ್ನು ಕುರಿತು ಬೇರೆ ಯಾವ ಪ್ರಕಾರವನ್ನೂ ಹೇಳಲು ಬರುವುದಿಲ್ಲವಾದ್ದರಿಂದ ಹೀಗೆಯೇ ಅಂಗೀಕರಿಸಬೇಕು.

## ಆಸತ್ತಿವಾದದ ಪೂರ್ವಪಕ್ಷ

**अत्र वदन्ति । सन्निधिर्न पदजन्यैवान्वयबोधहेतुः । द्वारमित्यादावध्याहृतेनापि पिधानादिनाऽन्वयबोधदर्शनात् । न च पिधेहीति शब्द एवाध्याह्रियते । अनुपयोगात् । अर्थस्यैवान्वयप्रतियोगित्वेनोपयोगित्वात् आवश्यकत्वाच्च । अर्थापत्तेरुपपादकविषयत्वात् ।**

ಇಲ್ಲಿ ಹೀಗೆ ಹೇಳುತ್ತಾರೆ. ಪದಜನ್ಯವಾದ ಸನ್ನಿಧಿಯೇ (ಆಸತ್ತಿ ಜ್ಞಾನವೇ) ಅನ್ವಯ ಬೋಧವನ್ನು ಕುರಿತು ಕಾರಣವಲ್ಲ. ದ್ವಾರಂ ಎಂಬಲ್ಲಿ ಪಿಧೇಹಿ ಎಂಬ ಪದವಿಲ್ಲ. ಆದರೂ ಪಿಧಾನರೂಪವಾದ ಅರ್ಥವನ್ನು ಅಧ್ಯಾಹಾರಮಾಡಿ ಅನ್ವಯ ಬೋಧವುಂಟಾಗುತ್ತದೆ. ಅಲ್ಲಿ ಪಿಧೇಹಿ ಎಂಬ ಶಬ್ದವನ್ನೇ ಅಧ್ಯಾಹಾರ ಮಾಡುತ್ತೇವೆ ಎಂದು ಹೇಳಬಾರದು. ಏಕೆಂದರೆ ಶಬ್ದವನ್ನು ಅಧ್ಯಾಹಾರ ಮಾಡುವುದರಿಂದ ಯಾವ ಉಪಯೋಗವೂ ಇಲ್ಲ. ಅನ್ವಯಪ್ರತಿಯೋಗಿಯಾದುದು ಅರ್ಥವೇ ಹೊರತು ಶಬ್ದವಲ್ಲ. ಆದ್ದರಿಂದ ಅನ್ವಯಪ್ರತಿಯೋಗಿಯ ಉಪಸ್ಥಿತಿಯು ಆವಶ್ಯಕವಾದುದು. ಅರ್ಥಾಪತ್ತಿಯು ಉಪಪಾದಕ-ವಿಷಯವಾದುದು ಎಂದು ಸಿದ್ಧವಾದ ವಿಷಯ.

**न च शब्दमात्रमुपपादकम् । अपि तु तदर्थः । अवश्यकल्प्यार्थसाहचर्येण दैववशसम्पन्नशब्दस्मृतेरन्यथासिद्धेः । अन्यथा पदबोधितस्यैवार्थस्यान्वयबोधकत्वमिति नियमशक्तिकल्पनापत्तेः ।**

ಇಲ್ಲಿ ಅನ್ವಯಪ್ರತಿಯೋಗಿಯ ಉಪಸ್ಥಿತಿಯೇ ಉಪಪಾದಕವಾದುದರಿಂದ ಅರ್ಥಾಪತ್ತಿಯಿಂದ ಪದಾರ್ಥದ ಅಧ್ಯಾಹಾರವೇ ಸಿದ್ಧವಾಗುತ್ತದೆಯೇ ಹೊರತು ಪಿಧೇಹಿ ಶಬ್ದದ ಅಧ್ಯಾಹಾರವು

ಸಿದ್ಧವಾಗುವುದಿಲ್ಲ. ಯದ್ಯಪಿ ಪಿಧಾನರೂಪವಾದ ಅರ್ಥದ ಉಪಸ್ಥಿತಿಯಾದಾಗ ದೈವವಶಾತ್ ಪಿಧೇಹಿ ಎಂಬ ಶಬ್ದದ ಸ್ಮರಣೆಯೂ ಬರಬಹುದು. ಆದರೆ ಅನ್ವಯಬೋಧವನ್ನು ಕುರಿತು ಅದು ಅನ್ಯಥಾ ಸಿದ್ಧವಾದುದು. ಹಾಗಿಲ್ಲದಿದ್ದರೆ ಪದಬೋಧಿತವಾದ ಪದಾರ್ಥಕ್ಕೆ ಅನ್ವಯ ಬೋಧಕತ್ವವು ಇದೆ. ಬೇರೆ ರೀತಿಯಲ್ಲಿ ಉಪಸ್ಥಿತವಾದ ಪದಾರ್ಥಕ್ಕೆ ಅನ್ವಯ ಬೋಧಕತ್ವವಿಲ್ಲ ಎಂಬುದಕ್ಕೆ ನಿಯಮವನ್ನು ಕಲ್ಪನೆಮಾಡಬೇಕಾಗುತ್ತದೆ.

**स्वार्थान्वयपरत्वात् शब्दानां द्वारमिति न पिधानान्वयबोधकमिति तदन्वयबोधार्थमवश्यं शब्दकल्पनमिति चेत् । न । लक्षणायां व्यभिचारात् तवाप्याक्षिप्तेन कर्त्रान्वयबोधाच्च ।**

ಇನ್ನು ಶಬ್ದಗಳು ಸ್ವಾರ್ಥಾನ್ವಯದಲ್ಲಿ ತಾತ್ಪರ್ಯವುಳ್ಳವುಗಳಾಗುತ್ತವೆ. ದ್ವಾರಂ ಎಂಬಲ್ಲಿ ದ್ವಾರ ಶಬ್ದಕ್ಕೆ ದ್ವಾರಾನ್ವಯದಲ್ಲಿ ಮಾತ್ರ ತಾತ್ಪರ್ಯವಿದೆಯೇ ಹೊರತು ಪಿಧಾನಾನ್ವಯದಲ್ಲಿ ತಾತ್ಪರ್ಯವಿಲ್ಲ. ಆದ್ದರಿಂದ ಪಿಧಾನಾನ್ವಯ ಬೋಧವು ಉಂಟಾಗಬೇಕಾದರೆ ಪಿಧಾನಬೋಧಕ ಪದವನ್ನು ಅವಶ್ಯವಾಗಿ ಕಲ್ಪನೆ ಮಾಡಬೇಕು ಎಂಬ ಆಕ್ಷೇಪವೂ ಸರಿಯಲ್ಲ. ಏಕೆಂದರೆ ಈ ನಿಯಮಕ್ಕೆ ಲಕ್ಷಣಾಸ್ಥಳದಲ್ಲಿ ವ್ಯಭಿಚಾರವು ಬರುತ್ತದೆ. 'ಗಂಗಾಯಾಂ ಘೋಷಃ' ಎಂಬಲ್ಲಿ ತೀರೋಪಸ್ಥಾಪಕ ಪದವಿಲ್ಲದಿದ್ದರೂ ತೀರಾನ್ವಯ ಬೋಧವು ಉಂಟಾಗುತ್ತದೆ. ಮತ್ತು ನೀವೂ ಸಹ ಕ್ರಿಯಾಪದದಿಂದ ಆಕ್ಷಿಪ್ತವಾದ ಕರ್ತೃವಿನ ಜೊತೆಯಲ್ಲಿ ಕ್ರಿಯೆಗೆ ಅನ್ವಯವನ್ನು ಹೇಳುತ್ತೀರಿ. ಅಲ್ಲಿ ಕರ್ತೃಬೋಧಕಪದವಿಲ್ಲ.

**अथ द्वारपदसहभावमात्रं पिधेहिशब्दस्य कल्प्यते लाघवात् । न च पिधानाभिधायकानेकशब्दोपस्थितौ विनिगमकविरहः । संस्कार-तारतम्यात् पदविशेषस्मृतेरिति चेत् । न । आकाङ्क्षादि-मत्प्रतियोग्यन्वितस्वार्थपरत्वस्य क्लृप्तत्वात् लाघवेनार्थाध्याहारात् ।**

ಇನ್ನು ಪಿಧೇಹಿ ಎಂಬ ಶಬ್ದಕ್ಕೆ ದ್ವಾರಪದದ ಸಾಹಚರ್ಯವನ್ನು ಮಾತ್ರ ಕಲ್ಪನೆಮಾಡುತ್ತೇವೆ. ಯದ್ಯಪಿ ಪಿಧಾನವನ್ನು ಹೇಳುವ ಅನೇಕ ಶಬ್ದಗಳಿವೆ. ಆದರೂ ಆ ಶಬ್ದಗಳ ಸಂಸ್ಕಾರವು ಪ್ರಾಬಲ್ಯ ದೌರ್ಬಲ್ಯ-

ಗಳಿಂದ ಕೂಡಿರುವುದರಿಂದ ಯಾವ ಪದದ ಸಂಸ್ಕಾರವು ಪ್ರಬಲವಾಗಿದೆಯೋ ಅಂತಹ ಪದವಿಶೇಷದ ಸ್ಮರಣೆಯು ಬರುತ್ತದೆ ಎಂಬ ಶಂಕೆಯೂ ಸರಿಯಲ್ಲ. ಏಕೆಂದರೆ ಆಕಾಂಕ್ಷಾದಿಗಳನ್ನುಳ್ಳ ಪ್ರತಿಯೋಗ್ಯನ್ವಿತ ಸ್ವಾರ್ಥ ಪರತ್ವವು ಪದಗಳಿಗೆ ಕ್ಲಪ್ತವಾಗಿದೆ. ಆದ್ದರಿಂದ ಅಂತಹ ಆಕಾಂಕ್ಷಿತವಾದ ಅರ್ಥವನ್ನೇ ಕಲ್ಪನೆ ಮಾಡಿದರೆ ಲಾಘವ. ಪದವನ್ನು ಕಲ್ಪನೆಮಾಡಿ ಅನಂತರ ಅರ್ಥಕ್ಕೆ ಅನ್ವಯವನ್ನು ಹೇಳುವುದಾದರೆ ಗೌರವವು ಉಂಟಾಗುತ್ತದೆ.

**न च श्रुतपदानि लब्धप्रयोजनानीति कथमप्यध्याहृते तेषां तात्पर्यमिति वाच्यम् । श्रुतार्थान्वयानुपपत्त्याऽध्याहृते तात्पर्यात् । कथं तर्हि 'ओदनं पचति' इत्यत्र समभिव्याहृतमात्रान्वयः कलायादेरपि स्मृतत्वादिति चेत् । न ।**

ವಾಕ್ಯದಲ್ಲಿ ಶ್ರುತವಾದ ಪದಗಳಿಗೆ ಆಯಾ ಪದಾರ್ಥ ಸ್ಮೃತಿರೂಪವಾದ ಪ್ರಯೋಜನವು ಉಂಟಾಗಿದೆ. ಹೀಗಿರುವಾಗ ಸ್ಮೃತವಾದ ಪದಕ್ಕೆ ಅಧ್ಯಾಹೃತವಾದ ಅರ್ಥದಲ್ಲಿ ಏಕೆ ತಾತ್ಪರ್ಯವನ್ನು ಹೇಳಬೇಕು ಎಂಬ ಪ್ರಶ್ನೆ ಬಂದರೆ ಸ್ಮೃತವಾದ ಪದಾರ್ಥಗಳ ಅನ್ವಯ ಅನುಪಪತ್ತಿಯೇ ಅಧ್ಯಾಹೃತವಾದ ಅರ್ಥದಲ್ಲಿ ತಾತ್ಪರ್ಯವನ್ನು ಸೂಚಿಸಿಕೊಡುತ್ತದೆ ಎಂದು ಉತ್ತರವನ್ನು ಹೇಳುತ್ತೇವೆ. ಹಾಗಾದರೆ 'ಓದನಂ ಪಚತಿ' ಎಂಬಲ್ಲಿ ಪಾಕವನ್ನು ಕುರಿತು ಸಮಭಿವ್ಯಾಹೃತವಾದ ವ್ರೀಹಿಗಳಿಗೇ ಏಕೆ ಅನ್ವಯ? 'ಜವೆಗೋಧಿ' ಮೊದಲಾದವುಗಳು ಸ್ಮೃತವಾಗುವುದರಿಂದ ಅವುಗಳಿಗೂ ಪಾಕದಲ್ಲಿ ಅನ್ವಯವುಂಟಾಗಲಿ ಎಂಬ ಆಕ್ಷೇಪವು ಸರಿಯಲ್ಲ.

**तात्पर्यनियमादित्यवेहि । यत्परः शब्दः स हि शब्दार्थः । अन्यथा तवापि दैववशस्मृतकलायपदोपस्थापितेन अन्वयबोधः स्यात् । अयं देवदत्त ओदनम् इत्यादिवाक्ये क्रियापदाध्याहाराभावेन कर्तुरनभिधानात् तृतीया स्यादिति चेत् । न ।**

ತಾತ್ಪರ್ಯಕ್ಕೆ ಅನುಗುಣವಾಗಿ ಅನ್ವಯವುಂಟಾಗುತ್ತದೆ. ಪ್ರಕೃತದಲ್ಲಿ ವ್ರೀಹಿಯ ಅನ್ವಯದಲ್ಲೇ

ತಾತ್ಪರ್ಯವಿರುವುದರಿಂದ 'ಜವೆಗೋಧಿಗೆ' ಪಾಕಾನ್ವಯ ಬೋಧ ಉಂಟಾಗುವುದಿಲ್ಲ. ಶಬ್ದಕ್ಕೆ ಯಾವ ಅರ್ಥದಲ್ಲಿ ತಾತ್ಪರ್ಯವಿದೆಯೋ ಅದೇ ಶಬ್ದಾರ್ಥವಷ್ಟೆ. ಇಲ್ಲದಿದ್ದರೆ ನೈಯಾಯಿಕನಾದ ನಿನಗೂ ಸಹ 'ಓದನಂ ಪಚತಿ' ಎಂಬಲ್ಲಿ ದೈವವಶಾತ್ ಕಲಾಯ (ಜವೆಗೋಧಿ) ಪದಸ್ಮರಣೆಬಂದರೇ ನಿನಗೂ ಸಹ ಕಲಾಯಕ್ಕೆ ಪಾಕಾನ್ವಯ ಬೋಧವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಇನ್ನು 'ಅಯಂ ದೇವದತ್ತಃ ಓದನಂ' ಇಂದು ಇಷ್ಟೇ ವಾಕ್ಯವನ್ನು ಪ್ರಯೋಗಮಾಡಿದಾಗ ಕ್ರಿಯಾಪದವನ್ನು ಅಧ್ಯಾಹಾರ ಮಾಡದಿದ್ದರೆ ಕರ್ತೃವಿಗೆ ಅಭಿಧಾನವಿಲ್ಲದಿರುವುದರಿಂದ ಅನಭಿಹಿತವಾದ ಕರ್ತೃವಿಗೆ ತೃತೀಯಾ ವಿಭಕ್ತಿಯು ಬಂದು ದೇವದತ್ತೇನ ಎಂಬ ಪ್ರಯೋಗವುಂಟಾಗಲಿ ಎಂಬ ಆಪತ್ತಿಯು ಸರಿಯಲ್ಲ.

**अध्याहृतपचतिपदेनापि कर्तुरनभिधानात् । कर्तृसङ्ख्याऽभिहितेति चेत् । न । देवदत्तस्य पाक इत्यत्रापि तृतीयापत्तेः । तात्पर्यतस्तत्र व्यवस्थेति चेत् । तुल्यम् ।**

ನೀವು ಪಚತಿ ಎಂಬ ಪದವನ್ನು ಅಧ್ಯಾಹಾರ ಮಾಡಿದರೂ ಅದು ಕರ್ತೃವನ್ನು ಹೇಳುವುದಿಲ್ಲ-ವಾದ್ದರಿಂದ ನಿಮಗೂ ಇದೇ ಆಪತ್ತಿಯು ಇದೆ. ಕ್ರಿಯಾಪದವು ಕರ್ತೃವನ್ನು ಹೇಳದಿದ್ದರೂ ಕರ್ತೃ-ಸಂಖ್ಯೆಯು ಅಭಿಹಿತವಾಗುವುದರಿಂದ ಈ ಆಪತ್ತಿಯಿಲ್ಲ ಎಂದು ಹೇಳುವುದಾದರೆ ದೇವದತ್ತಸ್ಯ ಪಾಕಃ ಎಂಬಲ್ಲಿ ಪಾಕ ಎಂಬ ಕೃದಂತಪದವು ಕರ್ತೃವನ್ನಾಗಲೀ ಅಥವಾ ಕರ್ತೃಸಂಖ್ಯೆಯನ್ನಾಗಲೀ ಹೇಳದಿರು-ವುದರಿಂದ ದೇವದತ್ತಸ್ಯ ಪಾಕಃ ಎಂಬಲ್ಲಿಯೂ ದೇವದತ್ತ ಪದದ ಮೇಲೆ ತೃತೀಯಾ ವಿಭಕ್ತಿಯು ಬಂದು ದೇವದತ್ತೇನ ಪಾಕಃ ಎಂಬ ಪ್ರಯೋಗವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಅಲ್ಲಿ ಕರ್ತೃವಾಗಲೀ, ಕರ್ತೃಸಂಖ್ಯೆಯಾಗಲೀ ಅಭಿಹಿತವಾಗದಿದ್ದರೂ ದೇವದತ್ತನಿಗೆ ಪಾಕಸಂಬಂಧಿತ್ವೇನ ಬೋಧದಲ್ಲಿ ತಾತ್ಪರ್ಯ, ಪಾಕಕರ್ತೃತ್ವೇನ ಬೋಧದಲ್ಲಿ ತಾತ್ಪರ್ಯವಿಲ್ಲ, ಆದ್ದರಿಂದ ತೃತೀಯಾ ವಿಭಕ್ತಿಯು ಬರುವುದಿಲ್ಲ ಎಂದು ಹೇಳುವುದಾದರೆ ದೇವದತ್ತಃ ಓದನಂ ಎಂಬಲ್ಲಿಯೂ ನಾವು ಅದೇ ಉತ್ತರವನ್ನು ಹೇಳುತ್ತೇವೆ.

**ननु द्वारं पिधेहि इत्यादौ पिधानशब्दानुभवे पिधानोपस्थापकपदत्वेन जनकत्वमिति चेत् । न ।**

ಇನ್ನು ದ್ವಾರಂ ಪಿಧೇಹಿ ಎಂಬ ವಾಕ್ಯಸ್ಥಳದಲ್ಲಿ ಪಿಧಾನದ ಶಾಬ್ದಬೋಧವು ಬರುತ್ತದೆ. ಅದನ್ನು ಕುರಿತು ಪಿಧೇಹಿ ಎಂಬ ಪದವು ಪಿಧಾನೋಪಕಸ್ಥಾಪಕಪದತ್ವೇನ ಕಾರಣವಾಗುತ್ತದೆ. ಆದ್ದರಿಂದ ದ್ವಾರಂ ಎಂಬ ಇಷ್ಟೇ ಪದಪ್ರಯೋಗಮಾಡಿದ ಸ್ಥಳದಲ್ಲಿಯೂ ಪಿಧಾನಾನ್ವಯ ಬೋಧವು ಬರುವುದರಿಂದ ಅಲ್ಲಿಯೂ ಕೂಡ ಕಾರಣವಾದ ಪಿಧಾನೋಪಸ್ಥಾಪಕವಾದ ಪಿಧೇಹಿ ಪದವನ್ನು ಅಧ್ಯಾಹಾರ ಮಾಡಬೇಕು ಎಂಬ ಶಂಕೆಯೂ ಸರಿಯಲ್ಲ.

## अन्वयप्रतियोग्युपस्थापकपदत्वेन जनकत्वात् न तु तदुपस्थापक-यावत्पदत्वेन । गौरवात् ।

ಏಕೆಂದರೆ ದ್ವಾರಂ ಪಿಧೇಹಿ ಎಂಬಲ್ಲಿ ಪಿಧೇಹಿ ಶಬ್ದಕ್ಕೆ ಪಿಧಾನೋಪಕಸ್ಥಾಪಕಪದತ್ವೇನ ಕಾರಣತ್ವವು ಇಲ್ಲ. ಅನ್ವಯಪ್ರತಿಯೋಗ್ಯುಪಸ್ಥಾಪಕಪದತ್ವೇನ ಮಾತ್ರ ಕಾರಣತ್ವವಿದೆ. ಆದ್ದರಿಂದ ದ್ವಾರಂ ಎಂದಿಷ್ಟೇ ಪ್ರಯೋಗಮಾಡಿದರೆ ಅನ್ವಯಪ್ರತಿಯೋಗ್ಯುಪಸ್ಥಾಪಕವಾದ ದ್ವಾರ ಎಂಬ ಪದವೇ ಇರುವುದರಿಂದ ಕಾರ್ಯಕಾರಣಭಾವಕ್ಕೆ ವ್ಯಭಿಚಾರವು ಬರುವುದಿಲ್ಲ. ಆದ್ದರಿಂದ ಶಬ್ದಾಧ್ಯಾಹಾರವನ್ನು ಮಾಡ-ಬೇಕಾದ್ದಿಲ್ಲ.

ಇನ್ನು ಶಾಬ್ದಾನ್ವಯ ಬೋಧವನ್ನು ಕುರಿತು ಅನ್ವಯಪ್ರತಿಯೋಗ್ಯುಪಸ್ಥಾಪನೆ ಮಾಡುವ ಎಲ್ಲಾ ಪದಗಳೂ ಇರಬೇಕು ತಥಾಚ ಅನ್ವಯಪ್ರತಿಯೋಗ್ಯುಪಸ್ಥಾಪಕ ಯಾವತ್‌ಪದತ್ವೇನ ಕಾರಣತ್ವವನ್ನು ಹೇಳುತ್ತೇವೆ ಎಂದರೆ ಯಾವತ್ ಪದವನ್ನು ನಿವೇಶ ಮಾಡದೆಯೇ ಎಲ್ಲವನ್ನೂ ಕೂಡಿಸಲು ಬರುವುದರಿಂದ ಯಾವತ್ಪದವನ್ನು ನಿವೇಶಮಾಡಿದರೆ ಗೌರವವು ಬರುತ್ತದೆ.

## एवं पिधानान्वयबोधेऽपि । अन्यथा गौणलाक्षणिकयोरन्वयबोधो न स्यात् । तयोरननुभावकत्वादिति ।।

ಹೇಗೆ ಪಿಧಾನ ಶಬ್ದದ ಶಾಬ್ದಾನುಭವವು ಬರುವಾಗ ಪಿಧಾನೋಪಸ್ಥಾಪಕ ಪದತ್ವೇನ ಪಿಧೇಹಿ ಪದದ ಅವಶ್ಯಕತೆ ಇಲ್ಲವೋ ಅದರಂತೆ ಪಿಧಾನಾನ್ವಯ ಬೋಧವನ್ನು ಕುರಿತೂ ಸಹ ಪಿಧಾನೋ-ಪಕಸ್ಥಾಪಕಪದತ್ವೇನ ಜನಕತ್ವವಿಲ್ಲ. ಒಂದುಪಕ್ಷ ಆ ಶಾಬ್ದಾನುಭವವನ್ನು ಕುರಿತು ಯಾವತ್‌ಪದಗಳಿಗೂ ಪ್ರತಿಯೋಗ್ಯುಪಕಸ್ಥಾಪಕಪದತ್ವೇನ ಕಾರಣತ್ವವನ್ನು ಹೇಳುವುದಾದರೆ ಗೌಣ ಮತ್ತು ಲಾಕ್ಷಣಿಕ ಸ್ಥಳದಲ್ಲಿ

ಗೌಣ ಮತ್ತು ಲಾಕ್ಷಣಿಕವಾದ ಅರ್ಥಗಳಿಗೆ ಅನ್ವಯ ಬೋಧವೇ ಉಂಟಾಗಲಾರದು. ಏಕೆಂದರೆ ಗೌಣಲಾಕ್ಷಣಿಕ ಅರ್ಥಗಳಿಗೆ ಅನ್ವಯ ಬೋಧವು ಉಂಟಾಗಬೇಕಾದರೆ ತದುಪಸ್ಥಾಪಕ ಪದತ್ವೇನ ಒಂದು ಪದವು ಇರಬೇಕಷ್ಟೆ. ಆದರೆ ಗೌಣ ಲಾಕ್ಷಣಿಕ ಪದಗಳಿಗೆ ಅನ್ವಯಾನುಭವ ಜನಕತ್ವವೇ ಇಲ್ಲದಿರುವುದರಿಂದ ಗೌಣಲಾಕ್ಷಣಿಕ ಸ್ಥಳದಲ್ಲಿ ಗೌಣಲಾಕ್ಷಣಿಕ ಅರ್ಥಗಳ ಅನ್ವಯಬೋಧವೇ ಉಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ. ಮೀಮಾಂಸಕರಾದ ನಮಗಾದರೆ ನಾವು ಯಾವತ್ ಎಂಬ ವಿಶೇಷಣವನ್ನು ಕೊಡದಿರುವುದರಿಂದ ಗೌಣಲಾಕ್ಷಣಿಕ ಪದಘಟಿತ ವಾಕ್ಯದಲ್ಲಿ ಅನ್ವಯಪ್ರತಿಯೋಗ್ಯುಪಸ್ಥಾಪಕವಾದ ಇತರ ಪದದಿಂದಲೇ ಅನ್ವಯ ಬೋಧವು ಉಪಪನ್ನವಾಗುವುದರಿಂದ ಯಾವ ಅನುಪತ್ತಿಯೂ ಇಲ್ಲ.

ಇಲ್ಲಿಗೆ ಆಸತ್ತಿವಾದದ ಪೂರ್ವಪಕ್ಷವು ಮುಗಿಯಿತು

## ಆಸತ್ತಿವಾದ ಸಿದ್ಧಾಂತ

**उच्यते । क्रियापदोपस्थापिता क्रिया । कारकपदोपस्थापितश्च कारकं परस्परमाकाङ्क्षति न तूपस्थितिमात्रम् । अन्यथा द्वारं कर्मता पिधेहि । द्वारं पिधानं कृतिरित्यत्रापि क्रियाकर्माध्याहार इवान्वयबोधप्रसङ्गः क्रियायाः कर्मणश्चोपस्थितेस्तुल्यत्वात् ।**

ಇದಕ್ಕೆ ನೈಯಾಯಿಕರಾದ ನಾವು ಉತ್ತರವನ್ನು ಹೇಳುತ್ತೇವೆ. ಕ್ರಿಯಾಪದದಿಂದ ಉಪಸ್ಥಾಪಿತವಾದ ಕ್ರಿಯೆಗೂ ಮತ್ತು ಕಾರಕ ಪದದಿಂದ ಉಪಸ್ಥಾಪಿತವಾದ ಕಾರಕಕ್ಕೂ ಪರಸ್ಪರ ಆಕಾಂಕ್ಷೆಯಿದೆ. ಕೇವಲ (ಪದವನ್ನು ಬಿಟ್ಟು) ಉಪಸ್ಥಿತಿಗೆ (ಉಪಸ್ಥಿತವಾದ ಪದಾರ್ಥಗಳಿಗೆ) ಪರಸ್ಪರ ಆಕಾಂಕ್ಷೆಯಿಲ್ಲ. ಇಲ್ಲದಿದ್ದರೆ 'ದ್ವಾರಂ (ಇದು ಪ್ರಥಮಾ ವಿಭಕ್ತಿ) ಕರ್ಮತಾ ಪಿಧೇಹಿ, ದ್ವಾರಂ (ಇದು ದ್ವಿತೀಯಾ ವಿಭಕ್ತಿ) ಪಿಧಾನಂ ಕೃತಿಃ' ಎಂಬ ಸ್ಥಳದಲ್ಲಿಯೂ ಮೊದಲನೆಯ ಸ್ಥಳದಲ್ಲಿ ಕರ್ಮಪದವನ್ನೂ ಮತ್ತು ಎರಡನೆಯ ಸ್ಥಳದಲ್ಲಿ ಕ್ರಿಯಾಪದವನ್ನೂ ಅಧ್ಯಾಹಾರವನ್ನು ಮಾಡಿದರೆ ಹೇಗೆ ಅನ್ವಯಬೋಧವು ಬರುತ್ತದೆಯೋ ಹಾಗೆಯೇ ಈ ಸ್ಥಳದಲ್ಲಿಯೂ ಅನ್ವಯಬೋಧವು ಬರಲಿ ಎಂಬ ಆಪತ್ತಿಯು ಬರುತ್ತದೆ. ಏಕೆಂದರೆ ಕ್ರಿಯಾ ಮತ್ತು ಕರ್ಮಗಳ ಉಪಸ್ಥಿತಿಯು ಎರಡುಕಡೆಗಳಲ್ಲಿಯೂ ಸಮಾನವಾಗಿದೆ.

**एवंविधपदोपस्थापिते परस्परमाकाङ्क्षा नास्तीति चेत्? तर्ह्याका-**

ङ्क्षायां पदविशेषोपस्थापितत्वं तन्त्रं न तूपस्थितिमात्रम् । अर्थ-विशेषेऽसाधुत्वान्नात्रान्वयबोध इति चेत्? न । पिधेहीति पदं विना द्वारमित्यस्याप्यसाधुत्वात् । तदर्थयोगे साधुत्वस्य तुल्यत्वात् ।

ಈ ಪದಗಳಿಂದ ಉಪಸ್ಥಾಪಿತವಾದ ಅರ್ಥಗಳಿಗೆ ಪರಸ್ಪರವಾಗಿ ಆಕಾಂಕ್ಷೆಯಿಲ್ಲ ಎಂದು ಹೇಳಿದರೆ ಹಾಗಾದರೆ ಆಕಾಂಕ್ಷೆಯನ್ನು ಕುರಿತು ಪದವಿಶೇಷದಿಂದ ಉಂಟಾದ ಉಪಸ್ಥಿತಿಯೇ ಕಾರಣ; ಕೇವಲ ಉಪಸ್ಥಿತಿಯಲ್ಲ ಎಂದು ಸಿದ್ಧವಾಯಿತು. ಉದಾಹೃತವಾದ ಸ್ಥಳದಲ್ಲಿ ಅರ್ಥವಿಶೇಷಬೋಧವನ್ನು ಕುರಿತು ಪದಗಳು ಅಸಾಧುವಾದ್ದರಿಂದ ಅನ್ವಯ ಬೋಧವು ಬರುವುದಿಲ್ಲ ಎಂದು ಹೇಳಿದರೆ ದ್ವಾರಂ ಪಿಧೇಹಿ ಎಂಬಲ್ಲಿಯೂ ಪಿಧೇಹಿ ಎಂಬ ಪದವಿಲ್ಲದಿದ್ದರೆ ದ್ವಾರಂ ಎಂಬ ಪದವು ಅರ್ಥವಿಶೇಷದಲ್ಲಿ ಅಸಾಧು-ವಾಗುತ್ತದೆ ಎಂದು ಹೇಳುತ್ತೇವೆ. ಅರ್ಥವನ್ನು ಅಧ್ಯಾಹಾರ ಮಾಡಿದರೆ ಶಬ್ದಸಾಧುತ್ವವುಂಟಾಗುತ್ತದೆ ಎಂದು ಹೇಳುವುದಾದರೆ ಪದವನ್ನು ಅಧ್ಯಾಹಾರ ಮಾಡಿದರೆ ಶಬ್ದಸಾಧುತ್ವವು ಉಂಟಾಗುತ್ತದೆ ಎಂದು ನಾವೂ ಹೇಳುತ್ತೇವೆ.

साधुत्वज्ञानस्यान्वयबोधेऽप्रयोजकत्वाच्च गौरवादपभ्रंशादप्यन्वय-बोधाच्च । न चात्रासंसर्गाग्रहः । बाधकाभावात् । तस्मात् क्रिया-पदस्य कारकपदेन कारकपदस्य क्रियापदेन सहान्वयबोधकत्वं न त्वेकं विनाऽपरस्य ।

ಮತ್ತು ಶಬ್ದಸಾಧುತ್ವಜ್ಞಾನವು ಅನ್ವಯ ಬೋಧವನ್ನು ಕುರಿತು ಪ್ರಯೋಜಕವೇ ಅಲ್ಲ. ಏಕೆಂದರೆ ಕ್ಲಪ್ತವಾದ ಕಾರ್ಯಕಾರಣ ಭಾವಗಳಿಂದಲೇ ಅನ್ವಯಬೋಧಗಳನ್ನು ಉಪಪಾದಿಸಲು ಬರುವಾಗ ಹೊಸದಾಗಿ ಇನ್ನೊಂದು ಕಾರ್ಯಕಾರಣಭಾವವನ್ನು ಕಲ್ಪನೆಮಾಡಿದರೆ ಗೌರವದೋಷವು ಬರುತ್ತದೆ. ಅಲ್ಲದೇ, ಅಪಭ್ರಂಶಸ್ಥಳದಲ್ಲಿ ಈ ಕಾರ್ಯಕಾರಣಭಾವಕ್ಕೆ ವ್ಯಭಿಚಾರವು ಬರುತ್ತದೆ. ಏಕೆಂದರೆ ಅಲ್ಲಿ ಶಬ್ದಸಾಧುತ್ವವಿಲ್ಲ, ಆದರೂ ಅನ್ವಯಬೋಧವು ಉಂಟಾಗುತ್ತದೆ. ಅಪಭ್ರಂಶಸ್ಥಳದಲ್ಲಿ ಅನ್ವಯ-ಬೋಧವೇ ಉಂಟಾಗುವುದಿಲ್ಲ, ಕೇವಲ ಅಸಂಸರ್ಗದ ಅಗ್ರಹಮಾತ್ರ ಎಂದು ಹೇಳುವಂತಿಲ್ಲ. ಅನ್ವಯಬೋಧವನ್ನು ಅಂಗೀಕಾರ ಮಾಡಿದರೆ ಯಾವ ಬಾಧಕವೂ ಇಲ್ಲ ಮತ್ತು ಅನ್ವಯಬೋಧವು

ಅಲ್ಲಿಯೂ ಅನುಭವಸಿದ್ಧವಾಗಿದೆ. ಆದ್ದರಿಂದ ಕ್ರಿಯಾಪದಕ್ಕೆ ಕಾರಕಪದದ ಜೊತೆಯಲ್ಲಿ ಅನ್ವಯ-ಬೋಧಕತ್ವ, ಕಾರಕ ಪದಕ್ಕೆ ಕ್ರಿಯಾಪದದ ಜೊತೆಯಲ್ಲಿ ಅನ್ವಯ ಬೋಧಕತ್ವ ಇದೆಯೇ ಹೊರತಾಗಿ ಒಂದನ್ನುಬಿಟ್ಟು ಇನ್ನೊಂದಕ್ಕೆ ಅನ್ವಯ ಬೋಧಕತ್ವವೇ ಇಲ್ಲ.

**अपि च सकर्मकक्रियापदयोगं विना द्वितीयानुपपत्तिः । न हि क्रियापदार्थयोगे द्वितीया । घट आनयनं कृतिरित्यत्रापि द्वितीया-पत्तेः । तथा च पुष्पेभ्य इत्यत्र स्पृहयति पदाध्याहारं विना चतुर्थ्यनुपपत्तिः । यदि स्पृहयति पदार्थयोगे चतुर्थी तदा 'पुष्प-मिच्छति' इत्यत्रापि स्यात् स्पृहयतीच्छतिपदयोरेकार्थत्वात् ।**

ಇನ್ನು ಸಕರ್ಮಕ ಕ್ರಿಯಾಪದದ ಯೋಗವಿಲ್ಲದಿದ್ದರೆ ದ್ವಿತೀಯಾ ವಿಭಕ್ತಿಯು ಬರುವುದಿಲ್ಲ. ಸಕರ್ಮಕ ಕ್ರಿಯಾರೂಪವಾದ ಅರ್ಥದ ಯೋಗವಿರುವಾಗ ದ್ವಿತೀಯಾ ವಿಭಕ್ತಿಯನ್ನು ಅನುಶಾಸನ ಮಾಡುವುದಿಲ್ಲ. ಇಲ್ಲದಿದ್ದರೆ 'ಘಟಃ ಆನಯನಂ ಕೃತಿಃ' ಎಂಬಲ್ಲಿಯೂ ಕ್ರಿಯಾಯೋಗವಿರುವುದರಿಂದ ಘಟಶಬ್ದದ ಮೇಲೆ ದ್ವಿತೀಯಾ ವಿಭಕ್ತಿಯು ಬರಲಿ ಎಂಬ ಆಪತ್ತಿಯು ಬರುತ್ತದೆ. ಅದರಂತೆ ಪುಷ್ಪೇಭ್ಯಃ ಎಂಬಲ್ಲಿ ಸ್ಪೃಹಯತಿ ಎಂಬ ಪದವನ್ನು ಅಧ್ಯಾಹಾರ ಮಾಡದಿದ್ದರೆ ಚತುರ್ಥೀ ವಿಭಕ್ತಿಯು ಅನು-ಪಪನ್ನವಾಗುತ್ತದೆ. ಅಲ್ಲಿ ಸ್ಪೃಹಾರೂಪವಾದ ಪದಾರ್ಥದ ಯೋಗವಿರುವಾಗ ಚತುರ್ಥೀ ವಿಭಕ್ತಿಯು ಬರುವುದೆಂದು ಹೇಳಿದರೆ 'ಪುಷ್ಪಮಿಚ್ಛತಿ' ಎಂಬಲ್ಲಿಯೂ ಸಹ ಪುಷ್ಪ ಪದದ ಮೇಲೆ ಚತುರ್ಥೀ ವಿಭಕ್ತಿಯು ಬರಲಿ ಎಂಬ ಆಪತ್ತಿಯು ಬರುತ್ತದೆ. ಏಕೆಂದರೆ ಸ್ಪೃಹಾ ಮತ್ತು ಇಚ್ಛೆ ಎಂಬುದು ಒಂದೇ (ಸ್ಪೃಹಾ ಮತ್ತು ಇಚ್ಛಾ ಎಂಬ ಪದಗಳು ಪರ್ಯಾಯ ಪದಗಳು).

**अथ साधुत्वार्थं द्वारं पुष्पेभ्य इत्यत्र पिधेहिस्पृहयतिपदाध्या-हारोऽनुमन्यते न त्वन्वयबोधार्थम् । तस्यान्वयप्रतियोगि-विज्ञानादेवोपपत्तेरिति चेत् । तर्हि क्रियापदयोगं विना न कारकविभक्तिः । कारकपदयोगं विना न तदन्वययोग्यं क्रियापद-मिति केवलकारकपदे क्रियापदाध्याहारः । केवलक्रियायां च**

कारकपदाध्याहारः साधुत्वार्थमावश्यक इति तज्जन्योपस्थितिरन्वयबोधौपयिकी । तस्मात् क्रियाकारकपदोपस्थापितयोरेव क्रियाकारकयोः परस्परमन्वय इति शब्दाध्याहार एव । कर्त्राक्षेपे तु वक्ष्यामः ।।

ಇನ್ನು ಶಬ್ದಸಾಧುತ್ವಕ್ಕೋಸ್ಕರವಾಗಿ (ದ್ವಾರಂ ಎಂಬಲ್ಲಿ ದ್ವಿತೀಯಾ ವಿಭಕ್ತಿಯನ್ನು, ಪುಷ್ಪೇಭ್ಯಃ ಎಂಬಲ್ಲಿ ಚತುರ್ಥೀ ವಿಭಕ್ತಿಯನ್ನು ಕೂಡಿಸುವುದಕ್ಕಾಗಿ) ದ್ವಾರಂ ಎಂಬಲ್ಲಿ ಪಿಧೇಹಿ ಎಂಬ ಶಬ್ದವನ್ನು ಪುಷ್ಪೇಭ್ಯಃ ಎಂಬಲ್ಲಿ ಸ್ಪೃಹಯತಿ ಶಬ್ದವನ್ನು ಅಧ್ಯಾಹಾರ ಮಾಡುತ್ತೇವೆ, ಅನ್ವಯಬೋಧಾರ್ಥವಾಗಿ ಅಲ್ಲ. ಅನ್ವಯಬೋಧವು ಅನ್ವಯ ಪ್ರತಿಯೋಗಿಯ ಉಪಸ್ಥಿತಿಯಿಂದಲೇ ಉಂಟಾಗುತ್ತದೆ ಎಂದು ಹೇಳಿದರೆ ಕ್ರಿಯಾಪದಯೋಗವಿಲ್ಲದಿದ್ದರೆ ಕಾರಕವಿಭಕ್ತಿಯು ಉಂಟಾಗುವುದಿಲ್ಲ. ಕಾರಕ ಪದವಿಲ್ಲದಿದ್ದರೆ ತದನ್ವಯಯೋಗ್ಯವಾದ ಕ್ರಿಯಾಪದವಿರುವುದಿಲ್ಲ. ಆದ್ದರಿಂದ ಕೇವಲ ಕಾರಕಪದವನ್ನು ಪ್ರಯೋಗಮಾಡಿದಾಗ ಕ್ರಿಯಾ ಪದದ ಅಧ್ಯಾಹಾರ ಮತ್ತು ಕೇವಲ ಕ್ರಿಯಾಪದವನ್ನು ಪ್ರಯೋಗ ಮಾಡಿದಾಗ ಕಾರಕ ಪದದ ಅಧ್ಯಾಹಾರ ಸಾಧುತ್ವಾರ್ಥಕ್ಕಾದರೂ ಆವಶ್ಯಕ ಮತ್ತು ಆ ಪದಗಳಿಂದ ಉಂಟಾದ ಉಪಸ್ಥಿತಿಯೇ ಅನ್ವಯ ಬೋಧಕ ಪ್ರಯೋಜಕವಾದುದು ಎಂದು ಅಂಗೀಕಾರ ಮಾಡಿದಂತಾಯಿತು. ಆದ್ದರಿಂದ ಕ್ರಿಯಾಪದ ಮತ್ತು ಕಾರಕಪದಗಳಿಂದ ಉಪಸ್ಥಿತವಾದ ಕ್ರಿಯಾಕಾರಕಗಳಿಗೇ ಪರಸ್ಪರ ಅನ್ವಯ ಬೋಧವು ಉಂಟಾಗುವುದರಿಂದ ಶಬ್ದಾಧ್ಯಾಹಾರವೇ ಯುಕ್ತವಾದ ಪಕ್ಷ ಎಂದು ಸಿದ್ಧವಾಯಿತು.

ಕ್ರಿಯಾಪದದಿಂದ ಕರ್ತೃವನ್ನು ಆಕ್ಷೇಪಮಾಡುವ ವಿಷಯದಲ್ಲಿ ಉತ್ತರವನ್ನು ಮುಂದೆ ಹೇಳುತ್ತೇವೆ.

ಇಲ್ಲಿಗೆ ತತ್ತ್ವಚಿಂತಾಮಣಿಯಲ್ಲಿ ಆಸತ್ತಿವಾದವು ಮುಗಿಯಿತು.

गङ्गेशोपाध्यायविरचिततत्वचिन्तामणौ

# योग्यतावादः

ननु का योग्यता? । न तावत् सजातीयेऽन्वयदर्शनम् । यथा कथञ्चित् साजात्यस्याव्यावर्तकत्वात् । पदार्थतावच्छेदकेन

साजात्यस्याद्यजातः पयः पिबतीत्यादावभावात् । वाक्यार्थस्यापूर्वत्वाच ।

## ಯೋಗ್ಯತಾವಾದ

ಯೋಗ್ಯತೆ ಎಂದರೆ ಏನು? ಸಜಾತೀಯದಲ್ಲಿ ಅನ್ವಯ ದರ್ಶನವನ್ನು ಯೋಗ್ಯತೆ ಎಂದು ಹೇಳಲು ಬರುವುದಿಲ್ಲ. ಯಾವುದಾದರೂ ರೂಪದಿಂದ ಸಾಜಾತ್ಯವನ್ನು ವಿವಕ್ಷೆ ಮಾಡಿದರೆ ಅದು ಅನಾಪ್ತವಾಕ್ಯದಲ್ಲಿಯೂ ಬರುತ್ತದೆ.

ಪದಾರ್ಥತಾವಚ್ಛೇದಕರೂಪದಿಂದ ಸಜಾತೀಯತ್ವವನ್ನು ವಿವಕ್ಷೆಮಾಡಿದರೆ 'ಅದ್ಯಜಾತಃ ಪಯಃ ಪಿಬತಿ' ಎಂಬಲ್ಲಿ ಅದ್ಯಜಾತತ್ವವು ಪದಾರ್ಥತಾವಚ್ಛೇದಕವಾಗುತ್ತದೆ. ಅದಕ್ಕೆ ಸಜಾತೀಯವಾದುದು ಯಾವುದೂ ಇಲ್ಲವಾದ್ದರಿಂದ ಸಜಾತೀಯದಲ್ಲಿ ಅನ್ವಯದರ್ಶನವಿರಲು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ಯೋಗ್ಯತೆ ಇಲ್ಲವೆಂದಾಗುತ್ತದೆ. ಮತ್ತು ವಾಕ್ಯಾರ್ಥವು ಪ್ರತಿಯೊಂದು ವಾಕ್ಯದಲ್ಲಿಯೂ ಅಪೂರ್ವವಾದದ್ದೇ ಆಗಿದೆ. ಆದ್ದರಿಂದ ಅದಕ್ಕೆ ಸಜಾತೀಯವಾದುದು ಯಾವುದೂ ಇಲ್ಲ. ಆದ್ದರಿಂದ ಯಾವ ವಾಕ್ಯದಲ್ಲಿಯೂ ಯೋಗ್ಯತೆಯಿಲ್ಲವೆಂದಾಗುತ್ತದೆ.

नापि समभिव्याहृतपदार्थसंसर्गव्याप्यधर्मवत्त्वम् । वाक्यार्थस्यानुमेयत्वापत्तेः ।

ಹಾಗಾದರೆ ವಸ್ತುತಃ ಪದಾರ್ಥಸಂಸರ್ಗವ್ಯಾಪ್ಯ ಧರ್ಮವತ್ತ್ವಂ (ಸಮಭಿವ್ಯಾಹೃತ ಪದಾರ್ಥಗಳ ಸಂಸರ್ಗಕ್ಕೆ ವ್ಯಾಪ್ಯವಾದ ಧರ್ಮವನ್ನು ಹೊಂದಿರುವಿಕೆ) ಇದನ್ನು - ಯೋಗ್ಯತೆ ಎಂದು ಹೇಳುತ್ತೇವೆ. ಜಲೇನ ಸಿಂಚತಿ ಎಂಬಲ್ಲಿ ಸಮಭಿವ್ಯಾಹೃತ ಪದಾರ್ಥ ಸಂಸರ್ಗವೆಂದರೆ ಜಲ ಮತ್ತು ಸೇಕಗಳ ಸಂಸರ್ಗ. ಆ ಸಂಸರ್ಗವ್ಯಾಪ್ಯವಾದ ಧರ್ಮವು ಜಲತ್ವ ಮತ್ತು ಸೇಕತ್ವಗಳು ಆಗುತ್ತವೆ. ತದ್ವತ್ತ್ವವು ಜಲದಲ್ಲಿಯೂ ಮತ್ತು ಸೇಕದಲ್ಲಿಯೂ ಬರುತ್ತದೆ ಎಂದು ಹೀಗೆ ಹೇಳುವುದಾದರೆ ವ್ಯಾಪ್ಯಧರ್ಮದ ಅನುಸಂಧಾನದಿಂದ ವಾಕ್ಯಾರ್ಥದ ಜ್ಞಾನವು ಬರುವುದರಿಂದ ವಾಕ್ಯಾರ್ಥವು ಅನುಮೇಯವಾಗುತ್ತದೆ ಎಂಬ ಆಪತ್ತಿಯು ಬರುತ್ತದೆ.

न च वस्तुगत्या संसर्गव्याप्यो यो धर्मस्तद्वत्त्वं तच्च न ज्ञात-मुपयुज्यते इति नानुमेयः संसर्ग इति वाच्यम् । योग्यता-भ्रमाच्छाब्दभ्रमानुपपत्तेः ।

ಇನ್ನು ಅಂತಹ ಸಂಸರ್ಗವ್ಯಾಪ್ಯಧರ್ಮವು ಇದ್ದರೆ ಸಾಕು ಅದರ ಜ್ಞಾನವು ಬೇಕಾಗಿಲ್ಲ. ಆದ್ದರಿಂದ ವಾಕ್ಯಾರ್ಥವಾದ ಸಂಸರ್ಗವು ಅನುಮೇಯವಾಗುವುದಿಲ್ಲ ಎಂದು ಹೇಳುವುದಾದರೆ ಯೋಗ್ಯತಾ ಭ್ರಮದಿಂದ ಭ್ರಮಾತ್ಮಕವಾದ ಶಾಬ್ದಬೋಧವು ಬರದೇ ಹೋಗಲಿ ಎಂಬ ಆಪತ್ತಿಯು ಬರುತ್ತದೆ. ಏಕೆಂದರೆ ಅಲ್ಲಿ ಅಂತಹ ಸಂಸರ್ಗವ್ಯಾಪ್ಯವಾದ ಧರ್ಮವಿಲ್ಲ. ಆದರೆ ಅಂತಹ ಧರ್ಮದ ಭ್ರಾಂತಿಯಿಂದ ಶಾಬ್ದಬೋಧವು ಅನುಭವ ಸಿದ್ಧವಾಗಿದೆ.

अत एवानन्वयनिश्चयविरह एव योग्यता स्वरूपसती हेतुः । तत्र तद्धर्माभावनिश्चये तत्प्रकारकशाब्दज्ञानानुदयादिति परास्तम् ।

ಹೀಗೆ ಹೇಳಿದುದರಿಂದಲೇ (ಎಂದರೆ ಯೋಗ್ಯತಾ ಭ್ರಮದಿಂದ ಶಾಬ್ದಬೋಧವು ಬರುತ್ತದೆ ಎಂದು ಹೇಳಿದುದರಿಂದಲೇ) ''ಅನನ್ವಯನಿಶ್ಚಯವಿರಹವೇ ಯೋಗ್ಯತಾ. ಅದು ಸ್ವರೂಪತಃ ಇದ್ದು ಕಾರಣ-ವಾಗುತ್ತದೆ. ಅದರ ಜ್ಞಾನದ ಅವಶ್ಯಕತೆ ಇಲ್ಲ. ಏಕೆಂದರೆ ಅನನ್ವಯ ನಿಶ್ಚಯವೆಂದರೆ ತದ್ಧರ್ಮಾಭಾವ-ನಿಶ್ಚಯ. ತದ್ಧರ್ಮಾಭಾವ ನಿಶ್ಚಯವಿರುವಾಗ ತದ್ಧರ್ಮಪ್ರಕಾರಕ ಶಾಬ್ದಬೋಧವು ಬರುವುದಿಲ್ಲವಾದ್ದ-ರಿಂದ ಹೀಗೆ ಹೇಳಬಹುದು'' ಎಂಬುದು ನಿರಸ್ತವಾಯಿತು. ಏಕೆಂದರೆ ಯೋಗ್ಯತೆಯು ಸ್ವರೂಪಸತ್ತಾಗಿ ಕಾರಣವಾಗುವುದಾದರೆ ಯೋಗ್ಯತೆಯು ಇಲ್ಲದ ಸ್ಥಳದಲ್ಲಿ ಯೋಗ್ಯತಾ ಭ್ರಮದಿಂದ ಶಾಬ್ದಬೋಧವು ಬರದೇ ಹೋಗಲಿ ಎಂಬ ಆಪತ್ತಿಯು ಇದ್ದೇ ಇದೆ.

नापि समभिव्याहृतपदार्थसंसर्गाभावव्याप्यधर्मशून्यत्वम् । प्रमेयम-भिधेयमित्यादौ संसर्गाभावस्याप्रसिद्ध्या तदनिरूपणात् । गेहनिष्ठ-घटाभावे प्रमिते घटोऽस्तीतिवाक्यात् तन्निश्चयेऽप्यन्वयज्ञाना-नुदयाच्च ।

ಅಥವಾ ಯೋಗ್ಯತೆ ಎಂದರೆ ಸಮಭಿವ್ಯಾಹೃತ ಪದಾರ್ಥಗಳ ಸಂಸರ್ಗಾಭಾವವ್ಯಾಪ್ಯ ಧರ್ಮ-ಶೂನ್ಯತ್ವಂ - ಇದು ಯೋಗ್ಯತೆ ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ 'ಪ್ರಮೇಯಂ ಅಭಿಧೇಯಂ' ಎಂಬ ವಾಕ್ಯಸ್ಥಳದಲ್ಲಿ ಸಮಭಿವ್ಯಾಹೃತವಾದ ಪದಾರ್ಥವಾದ ಅಭಿಧೇಯತ್ವದ ಅಭಾವವು ಅಪ್ರಸಿದ್ಧವಾಗಿರುವುದರಿಂದ ಅಲ್ಲಿ ಯೋಗ್ಯತೆಯನ್ನು ನಿರ್ವಚನ ಮಾಡಲು ಬರುವುದಿಲ್ಲ. ಮತ್ತು ಗೃಹದಲ್ಲಿ ಘಟವಿಲ್ಲ ಎಂದು ತಿಳಿದವನಿಗೆ ಸಮಭಿವ್ಯಾಹೃತ ಪದಾರ್ಥ ಸಂಸರ್ಗಾಭಾವ ವ್ಯಾಪ್ಯ ಧರ್ಮ-ಶೂನ್ಯತ್ವವು ನಿಶ್ಚಿತವಾಗಿದ್ದರೂ ಘಟೋಸ್ತಿ ಎಂಬ ವಾಕ್ಯದಿಂದ ಅಲ್ಲಿ ಅನ್ವಯಜ್ಞಾನವು ಉಂಟಾಗು-ವುದಿಲ್ಲ.

**नापि बाधकप्रमाणाभावः । अन्यत्र यद्बाधकं तदभावस्यायोग्येऽपि सत्त्वात् । नापि प्रकृतसंसर्गबाधकस्याभावः । प्रतियोगिसिद्ध्यसिद्धिव्याघातात् ।**

ಇನ್ನು ಬಾಧಕ ಪ್ರಮಾಣಾಭಾವವೇ ಯೋಗ್ಯತೆ ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ವಹ್ನಿನಾ ಸಿಂಚತಿ ಎಂಬ ಅಯೋಗ್ಯಸ್ಥಳದಲ್ಲಿಯೂ ಅನ್ಯಸ್ಥಳದಲ್ಲಿರುವ ಬಾಧಕಪ್ರಮಾಣದ ಅಭಾವವು ಇದೆ. ಹಾಗಾದರೆ ಪ್ರಕೃತಸಂಸರ್ಗಬಾಧಕ ಪ್ರಮಾಣಾಭಾವ ಎಂದು ಹೇಳುತ್ತೇವೆ ಎನ್ನುವುದು ಸರಿಯಲ್ಲ. ಪ್ರಕೃತಸಂಸರ್ಗಬಾಧಕವು ಸಿದ್ಧವಾಗಿದ್ದರೆ ಅಲ್ಲಿ ಅದರ ಅಭಾವವು ಬರುವುದಿಲ್ಲ. ಪ್ರಕೃತಸಂಸರ್ಗ-ಬಾಧಕವು ಅಸಿದ್ಧವಾಗುವುದಾದರೆ ಪ್ರತಿಯೋಗಿಯೇ ಅಪ್ರಸಿದ್ಧವಾಗುವುದರಿಂದ ಅದರ ಅಭಾವವು ಬರುವುದಿಲ್ಲ. ಆದ್ದರಿಂದ ಯಾವ ವಾಕ್ಯದಲ್ಲಿಯೂ ಯೋಗ್ಯತೆಯು ಬರುವುದಿಲ್ಲ.

**न च प्रकृतसंसर्गेऽन्यत्र सिद्धस्य बाधकप्रमाणस्याभावः । प्रकृतसंसर्गस्य प्रथममप्रतीतेः । अयोग्येऽपि तत्सत्त्वाच्च । तत्र बाधकमप्यस्तीति चेत्? तर्हि प्रकृतसंसर्गबाधकस्याभावः । तच्चाप्रसिद्धम् । अत एव तत्र बाधकस्याप्यनिरूपणम् ।**

ಹಾಗಾದರೆ ಪ್ರಕೃತಸಂಸರ್ಗದ ವಿಷಯದಲ್ಲಿ ಅನ್ಯತ್ರಸಿದ್ಧವಾದ ಬಾಧಕಪ್ರಮಾಣದ ಅಭಾವವನ್ನು ಯೋಗ್ಯತೆ ಎಂದು ಹೇಳುತ್ತೇವೆ ಎಂಬುದು ಸರಿಯಲ್ಲ. ಏಕೆಂದರೆ ಇಂತಹ ಯೋಗ್ಯತೆಯ ಜ್ಞಾನ-

ವಿರಬೇಕಾದರೆ ಅದು ಪ್ರಕೃತಸಂಸರ್ಗ ಘಟಿತವಾದ್ದರಿಂದ ಪ್ರಕೃತಸಂಸರ್ಗದ ಜ್ಞಾನವಿರಬೇಕು. ಆದರೆ ಶಾಬ್ದಬೋಧಕ್ಕಿಂತ ಮೊದಲು ಪ್ರಕೃತ ಸಂಸರ್ಗದ ಜ್ಞಾನವು ಉಂಟಾಗುವುದಿಲ್ಲ. ಇನ್ನು ಅಯೋಗ್ಯ-ಸ್ಥಳದಲ್ಲಿಯೂ ಕೂಡ ಪ್ರಕೃತಸಂಸರ್ಗಕ್ಕೆ ಅನ್ಯತ್ರಸಿದ್ಧವಾದ ಬಾಧಕಪ್ರಮಾಣದ ಅಭಾವವು ಬರುವು-ದರಿಂದ ಅತಿವ್ಯಾಪ್ತಿಯು ಬರುತ್ತದೆ. ಅಯೋಗ್ಯಸ್ಥಳದಲ್ಲಿಯೇ ಬಾಧಕವು ಇದೆ ಎಂದು ಹೇಳು-ವುದಾದರೆ ಪ್ರಕೃತಸಂಸರ್ಗಕ್ಕೆ ಬಾಧಕಪ್ರಮಾಣಾಭಾವವು ಯೋಗ್ಯತೆ ಎಂದು ಹೇಳಿದಂತಾಯಿತು. ಅದು ಹಿಂದೆಯೇ ತಿಳಿಸಿದಂತೆ ಅಪ್ರಸಿದ್ಧವಾಗುತ್ತದೆ. ಆದ್ದರಿಂದಲೇ ಅಯೋಗ್ಯಸ್ಥಳದಲ್ಲಿ ಪ್ರಕೃತಸಂಸರ್ಗವು ಅಪ್ರಸಿದ್ಧವಾದುದರಿಂದ ಬಾಧಕವನ್ನೂ ನಿರೂಪಣೆ ಮಾಡಲು ಬರುವುದಿಲ್ಲ.

**नापीतरपदार्थसंसर्गाभावप्रमाविषयत्वाभावोऽपरपदार्थे । केवलान्वयिन्यप्रसिद्धेः । एतेन यत्रासम्बन्धग्राहकं प्रमाणं नास्ति तद्योग्यमिति निरस्तम् ।**

ಹಾಗಾದರೆ ಅಪರ ಪದಾರ್ಥದಲ್ಲಿ ಇತರ ಪದಾರ್ಥಸಂಸರ್ಗಾಭಾವ ಪ್ರಮಾವಿಷಯತ್ವಾಭಾವವು ಯೋಗ್ಯತೆ ಎಂದು ಹೇಳುತ್ತೇವೆ ಎಂಬುದು ಸರಿಯಲ್ಲ (ಜಲೆ ಸೇಕಸಂಸರ್ಗೋ ನಾಸ್ತಿ ಎಂಬ ಪ್ರಮೆಯು ಇಲ್ಲದಿರುವುದರಿಂದ ಸೇಕಸಂಸರ್ಗಾಭಾವ ಪ್ರಕಾರಕ ಪ್ರಮಾವಿಷಯತ್ವಾಭಾವವು ಜಲದಲ್ಲಿ ಬರುತ್ತದೆ. ಆದ್ದರಿಂದ ಅಲ್ಲಿ ಯೋಗ್ಯತೆಯು ಇದೆ). ಏಕೆಂದರೆ ಕೇವಲಾನ್ವಯಿ ಸ್ಥಳದಲ್ಲಿ ಇತರ ಸಂಸರ್ಗಾಭಾವವು ಅಪ್ರಸಿದ್ಧವಾಗುವುದರಿಂದ ಯೋಗ್ಯತೆಯನ್ನು ನಿರೂಪಣೆಮಾಡಲು ಬರುವುದಿಲ್ಲ. ಕೇವಲಾನ್ವಯಿ ಸ್ಥಳದಲ್ಲಿ ಅಪ್ರಸಿದ್ಧಿಯು ಬರುವುದರಿಂದಲೇ ಅಸಂಬಂಧಾಗ್ರಾಹಕ ಪ್ರಮಾಣಾಭಾವವು ಯೋಗ್ಯತೆ ಎಂಬ ಪಕ್ಷವು ನಿರಸ್ತವಾಗುತ್ತದೆ (ಕೇವಲಾನ್ವಯಿ ಸ್ಥಳದಲ್ಲಿ ಅಸಂಬಂಧವೇ ಅಪ್ರಮಾಣಿಕವಾದುದರಿಂದ).

**नापि बोधनीयसंसर्गाभावप्रमाविरहः । प्रतियोग्यसिद्धेः । बोधनीयसंसर्गस्य प्रागप्रतीतेः योग्यता च न स्वरूपसत्युपयुज्यते इत्युक्तम् । अयोग्ये तत्सत्त्वस्यानिरूपणाच्च ।**

ಇನ್ನು ಬೋಧನೀಯ ಸಂಸರ್ಗಾಭಾವ ಪ್ರಮಾ ವಿರಹವು ಯೋಗ್ಯತೆ ಎಂದು ಹೇಳಲು ಬರುವುದಿಲ್ಲ (ಜಲೇನ ಸಿಂಚತಿ ಎಂಬಲ್ಲಿ ಜಲ ಮತ್ತು ಸೇಕಗಳ ಸಂಸರ್ಗವು ಬೋಧನೀಯವಾದುದು. ಜಲ ಮತ್ತು

ಸೇಕಗಳಿಗೆ ಸಂಸರ್ಗವಿಲ್ಲ ಎಂಬ ಪ್ರಮೆಯು ಇಲ್ಲದಿರುವುದರಿಂದ ಬೋಧನೀಯ ಸಂಸರ್ಗಾಭಾವ ಪ್ರಮಾವಿರಹರೂಪವಾದ ಯೋಗ್ಯತೆಯು ಅಲ್ಲಿ ಲಭ್ಯವಾಗುತ್ತದೆ). ಏಕೆಂದರೆ ಬೋಧನೀಯ ಸಂಸರ್ಗವು ಶಾಬ್ದಬೋಧಕ್ಕಿಂತ ಮೊದಲು ಪ್ರತೀತವಾಗುವುದಿಲ್ಲವಾದ್ದರಿಂದ ಬೋಧನೀಯ ಸಂಸರ್ಗ ಘಟಿತವಾದ ಬೋಧನೀಯ ಸಂಸರ್ಗಾಭಾವ ಪ್ರಮಾರೂಪವಾದ ಪ್ರತಿಯೋಗಿಯು ಅಪ್ರಸಿದ್ಧವಾಗುತ್ತದೆ. ಪ್ರತಿಯೋಗಿಯು ಅಪ್ರಸಿದ್ಧವಾದರೆ ಅಭಾವದ ಜ್ಞಾನವು ಬರುವುದಿಲ್ಲ. ಯೋಗ್ಯತೆಯಂತೂ ಸ್ವರೂಪ-ಸತ್ ಆಗಿ ಕಾರಣವಾಗುವುದಿಲ್ಲ, ಜ್ಞಾತವಾಗಿಯೇ ಕಾರಣವಾಗುತ್ತದೆ ಎಂದು ಮೊದಲೇ ಹೇಳಿದ್ದೇವೆ. ಇನ್ನು ಅಯೋಗ್ಯ ಸ್ಥಳದಲ್ಲಿ ಬೋಧನೀಯಸಂಸರ್ಗಾಭಾವ ಪ್ರಮೆಯೇ ಇರುವುದರಿಂದ ಅಲ್ಲಿ ಯೋಗ್ಯತೆಯನ್ನು ನಿರೂಪಣೆ ಮಾಡಲು ಬರುವುದಿಲ್ಲ (ಅಯೋಗ್ಯಸ್ಥಳದಲ್ಲಿಯೂ ಶಾಬ್ದಬೋಧವು ಉಂಟಾಗುವುದರಿಂದ ಅಲ್ಲಿ ಯೋಗ್ಯತೆಯನ್ನು ನಿರೂಪಣೆ ಮಾಡಬೇಕಾಗುತ್ತದೆ).

**अपि च स्वीयबाधकप्रमाविरहस्यायोग्येऽपि सत्त्वात् बाधकप्रमामात्रविरहस्य योग्येऽपि ज्ञातुमशक्यत्वात् परप्रमाया अयोग्यत्वात् ।**

ಇನ್ನು ಬಾಧಕಪ್ರಮಾವಿರಹವೆಂದರೆ ತನ್ನ ಬಾಧಕ ಪ್ರಮೆಯ ವಿರಹವೋ ಅಥವಾ ಬಾಧಕಪ್ರಮೆಯ ಸಾಮಾನ್ಯವಿರಹವೋ ಎಂದು ಪ್ರಶ್ನೆ. ಅಯೋಗ್ಯಸ್ಥಳದಲ್ಲಿ ವಕ್ತೃವಿಗೆ ತನ್ನ ಬಾಧಕಪ್ರಮಾವಿರಹದ ಜ್ಞಾನವು ಇದ್ದೇ ಇದೆ. ಆದ್ದರಿಂದ ಅಲ್ಲಿ ಯೋಗ್ಯತೆಯನ್ನು ಒಪ್ಪಬೇಕಾದೀತು. ಅದನ್ನು ಪರಿಹರಿಸಲು ಬಾಧಕ ಪ್ರಮಾಸಾಮಾನ್ಯವಿರಹ ಎಂದು ಹೇಳಿದರೆ ಯೋಗ್ಯಸ್ಥಳದಲ್ಲಿಯೂ ಸಹ ಅಂತಹ ಬಾಧಕಪ್ರಮಾ ಸಾಮಾನ್ಯಾಭಾವವನ್ನು ತಿಳಿಯಲು ಸಾಧ್ಯವಿಲ್ಲ. ಬಾಧಕಪ್ರಮಾ ಸಾಮಾನ್ಯದಲ್ಲಿ ಅನ್ಯಾನ್ಯನಿಷ್ಠವಾದ ಪ್ರಮೆಗಳು ಸೇರುವುದರಿಂದ ಪರಪ್ರಮೆಯು ಅಯೋಗ್ಯವಾದ್ದರಿಂದ ಅಲ್ಲಿ ಯೋಗ್ಯತೆಯನ್ನು ನಿರೂಪಣೆ ಮಾಡಲು ಸಾಧ್ಯವಿಲ್ಲ.

**न च स्वरूपसन्नेवायं हेतुः । स्वीयबाधकप्रमाविरहदशायां योग्यताभ्रमेण शाब्दभ्रमानुपपत्तेः । अन्वयप्रयोजकरूपवत्त्वेन बाधकप्रमामात्रविरहोऽनुमेय इति चेत्? न ।**

ಇನ್ನು ಬಾಧಕಪ್ರಮಾ ವಿರಹವು ಸ್ವರೂಪಸತ್ ಆಗಿ ಹೇತು ಎಂದು ಹೇಳಿ ಈ ದೋಷವನ್ನು ಪರಿಹರಿಸುವುದಾದರೆ ತನ್ನ ಬಾಧಕಪ್ರಮಾವು ಇಲ್ಲದಿರುವಾಗ ಯೋಗ್ಯತಾ ಭ್ರಮದಿಂದ ಭ್ರಮಾತ್ಮಕಶಾಬ್ದ-ಬೋಧವು ಉಂಟಾಗದಿರಲಿ ಎಂಬ ಆಪತ್ತಿಯು ಬರುತ್ತದೆ. ಇನ್ನು ಅನ್ವಯಪ್ರಯೋಜಕರೂಪ-ವಿರುವುದರಿಂದ ಬಾಧಕ ಪ್ರಮಾ ಸಾಮಾನ್ಯಾಭಾವವನ್ನು ಅನುಮಾನ ಮಾಡುತ್ತೇವೆ ಎಂದು ಹೇಳುವುದು ಸರಿಯಲ್ಲ. ಸೇಕಾನ್ವಯವಿಲ್ಲದ ಜಲದಲ್ಲಿ ದ್ರವದ್ರವ್ಯತ್ವರೂಪವಾದ ಅನ್ವಯ ಪ್ರಯೋಜಕರೂಪವಿದ್ದರೂ ಇದಕ್ಕೆ ಸೇಕಾನ್ವಯವಿಲ್ಲ ಎಂಬ ಬಾಧಕಜ್ಞಾನವಿರುವಾಗ ಅಲ್ಲಿ ಬಾಧಕಪ್ರಮಾ ವಿರಹವನ್ನು ಅನು-ಮಾನವನ್ನು ಮಾಡಲು ಸಾಧ್ಯವಿಲ್ಲ.

**सेकानन्विततोये द्रवद्रव्यत्वे सत्यपि बाधकसत्त्वेन व्यभिचारात् उपजीव्यत्वेन तस्यैव योग्यतात्वापत्तेश्च ।**

ಹೇತುವಿದ್ದು ಸಾಧ್ಯವಿಲ್ಲದಿರುವುದರಿಂದ ವ್ಯಭಿಚಾರದೋಷವು ಬರುತ್ತದೆ. ಅಲ್ಲದೇ ಅನ್ವಯ ಪ್ರಯೋಜಕರೂಪದಿಂದ ಬಾಧಕಪ್ರಮಾಭಾವವನ್ನು ಸಾಧನೆ ಮಾಡಿ ಅದನ್ನು ಯೋಗ್ಯತೆ ಎಂದು ಹೇಳು-ವುದಕ್ಕಿಂತಲೂ ಉಪಜೀವ್ಯವಾದ ಅನ್ವಯ ಪ್ರಯೋಜಕ ರೂಪವನ್ನೇ ಯೋಗ್ಯತೆ ಎಂದು ಹೇಳುವುದು ಉಚಿತವಾಗುತ್ತದೆ.

**न चैवमेवेति वाच्यम् । आकाङ्क्षासत्त्यन्वयप्रयोजकरूपवत्त्वे सत्यप्यनाप्तवाक्ये बाधकप्रमायामन्वयाबोधात् । बाधकप्रमाविरहो हेतुरिति चेत्? तर्ह्यावश्यकत्वात् सैव योग्यता? ॥**

ಹಾಗಾದರೆ ಅನ್ವಯಪ್ರಯೋಜಕರೂಪವತ್ತ್ವವನ್ನೇ ಯೋಗ್ಯತೆ ಎಂದು ಹೇಳುತ್ತೇವೆ ಎಂಬ ಪಕ್ಷವೂ ಸರಿಯಲ್ಲ. ಏಕೆಂದರೆ ಅನಾಪ್ತವಾಕ್ಯಸ್ಥಳದಲ್ಲಿ ಆಕಾಂಕ್ಷಾ, ಆಸತ್ತಿ ಮತ್ತು ಅನ್ವಯ ಪ್ರಯೋಜಕ-ರೂಪವಿದ್ದರೂ ಬಾಧಕಪ್ರಮೆಯು ಇರುವುದರಿಂದ ಅನ್ವಯ ಬೋಧವು ಉಂಟಾಗುವುದಿಲ್ಲ. ಬಾಧಕಪ್ರಮಾಭಾವವನ್ನೇ ಹೇತುವೆಂದು ಹೇಳುತ್ತೇವೆ ಎಂದು ಹೇಳಿದರೆ ಯೋಗ್ಯತೆಯನ್ನು ಬೇರೆ ರೀತಿ ನಿರ್ವಚನ ಮಾಡಿ ಅದನ್ನು ಸಾಧಿಸಲು ಬಾಧಕಪ್ರಮಾ ವಿರಹವು ಹೇತು ಎಂದು ಹೇಳುವುದಕ್ಕಿಂತ ಬಾಧಕಪ್ರಮಾವಿರಹವೇ ಯೋಗ್ಯತೆ ಎಂದು ಹೇಳುವುದು ಒಳ್ಳೆಯದು.

ಇಲ್ಲಿಗೆ ಯೋಗ್ಯತಾವಾದದ ಪೂರ್ವಪಕ್ಷವು ಮುಗಿಯಿತು.

## ಯೋಗ್ಯತಾವಾದ ಸಿದ್ಧಾಂತ

**उच्यते । बाधकप्रमाविरहो योग्यता । सा चेतरपदार्थसंसर्गेऽपर-पदार्थनिष्ठात्यन्ताभावप्रतियोगित्वप्रमाविशेष्यत्वाभावः ।**

ನೈಯಾಯಿಕರಾದ ನಾವು ಉತ್ತರವನ್ನು ಹೇಳುತ್ತೇವೆ. ಬಾಧಕಪ್ರಮಾವಿರಹವೇ ಯೋಗ್ಯತೆ. ಬಾಧಕ-ಪ್ರಮಾವಿರಹವೆಂದರೆ ಇತರ ಪದಾರ್ಥ ಸಂಸರ್ಗದಲ್ಲಿ ಅಪರಪದಾರ್ಥನಿಷ್ಠ ಅತ್ಯಂತಾಭಾವ-ಪ್ರತಿಯೋಗಿತ್ವ ಪ್ರಮಾವಿಶೇಷ್ಯತ್ವಾಭಾವರೂಪವಾದುದು (ಜಲೇನ ಸಿಂಚತಿ ಎಂಬುವ ಕಡೆಯಲ್ಲಿ ಸಮನ್ವಯವಾಗುತ್ತದೆ ಇತರ ಪದಾರ್ಥವು ಸೇಕ. ಇತರ ಪದಾರ್ಥಸಂಸರ್ಗವೆಂದರೆ ಸೇಕ ಸಂಸರ್ಗ. ಅಪರಪದಾರ್ಥವೆಂದರೆ ಜಲ. ಸೇಕಸಂಸರ್ಗವು ಜಲದಲ್ಲಿ ಇಲ್ಲ ಎಂಬ ಪ್ರಮೆ ಇದ್ದರೆ ಆಗ ಸೇಕ ಸಂಸರ್ಗದಲ್ಲಿ ಜಲನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವ ಪ್ರಕಾರಕ ಪ್ರಮಾವಿಶೇಷ್ಯತ್ವವು ಬರುತ್ತಿತ್ತು. ಆದರೆ ಸೇಕಸಂಸರ್ಗವು ಜಲದಲ್ಲಿ ಇಲ್ಲ ಎಂಬ ಪ್ರಮೆಯು ಇಲ್ಲದಿರುವುದರಿಂದ ಜಲನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವ ಪ್ರಕಾರಕ ಪ್ರಮಾವಿಶೇಷ್ಯತ್ವಾಭಾವವು ಸೇಕಸಂಸರ್ಗದಲ್ಲಿ ಬರುತ್ತದೆ).

**प्रमेयं वाच्यमित्यत्र प्रमेयनिष्ठात्यन्ताभावप्रतियोगित्वप्रमा-विशेष्यत्वं गोत्वे प्रसिद्धं वाच्यत्वसंसर्गे तदभावः । वस्तुतस्त्वि-तरपदार्थसंसर्गेऽपरपदार्थनिष्ठात्यन्ताभावप्रतियोगितावच्छेदकधर्म-शून्यत्वं योग्यता लाघवात् शक्यज्ञानत्वाच्च ।**

ಪ್ರಮೇಯಂ ವಾಚ್ಯಂ ಎಂಬ ಸ್ಥಳದಲ್ಲಿ ವಾಚ್ಯತ್ವ ಸಂಸರ್ಗಾಭಾವವು ಅಪ್ರಸಿದ್ಧವಾದರೂ ಪ್ರಮೇಯ ನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವ ಪ್ರಮಾವಿಶೇಷ್ಯತ್ವವು ಗೋತ್ವದಲ್ಲಿ ಪ್ರಸಿದ್ಧವಾಗುತ್ತದೆ (ಗಜವು ಒಂದು ಪ್ರಮೇಯವಾಗಿರುವುದರಿಂದ ಅಲ್ಲಿ ಗೋತ್ವ ಇಲ್ಲದಿರುವುದರಿಂದ ಗಜರೂಪ ಪ್ರಮೇಯನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವ ಪ್ರಕಾರಕ ಪ್ರಮಾವಿಶೇಷ್ಯತ್ವವು ಗೋತ್ವದಲ್ಲಿ ಬರುತ್ತದೆ). ಹಾಗೆ ಗೋತ್ವ-ದಲ್ಲಿ ಪ್ರಸಿದ್ಧವಾದ ಅಂತಹ ಪ್ರಮಾ ವಿಶೇಷ್ಯತ್ವದ ಅಭಾವವನ್ನು ವಾಚ್ಯತ್ವ ಸಂಸರ್ಗದಲ್ಲಿ ಹೇಳಬಹುದು. ಆದ್ದರಿಂದ ಅಲ್ಲಿ ಯೋಗ್ಯತೆಯ ಅನಿರೂಪಣೆಯು ಇಲ್ಲ. ವಾಸ್ತವವಾಗಿ ಇತರ ಪದಾರ್ಥಸಂಸರ್ಗದಲ್ಲಿ ಅಪರಪದಾರ್ಥನಿಷ್ಠ ಅತ್ಯಂತಾಭಾವಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವವೇ ಯೋಗ್ಯತೆ ಎಂದು

ಹೇಳಿದರೆ ಲಾಘವವು ಇದೆ. ಇದು ಪ್ರಮಾಘಟಿತವಲ್ಲವಾದ್ದರಿಂದ ಇಂತಹ ಯೋಗ್ಯತೆಯ ಜ್ಞಾನವು ಸುಲಭವಾಗಿ ಬರುತ್ತದೆ.

**न च नरशिरःशौचानुमानबाधात् तदशौचबोधकशब्दादन्वयाबोध इति वाच्यम् । उपजीव्यजातीयत्वेन शब्दस्य बलवत्त्वात् तेनैव तदनुमानबाधात् ।**

ಹಾಗಾದರೆ ನರಕಪಾಲದಲ್ಲಿ ಅಶುಚಿತ್ವವನ್ನು ಹೇಳುವ ಶಬ್ದದ ಸ್ಥಳದಲ್ಲಿ ನರಕಪಾಲಕ್ಕೆ ಶುಚಿತ್ವವನ್ನು ಸಾಧನೆ ಮಾಡುವ ಅನುಮಾನದಿಂದ ಬಾಧ ಬರುವುದರಿಂದ ಅಂತಹ ಶಬ್ದದಿಂದ ಅನ್ವಯ ಬೋಧವು ಉಂಟಾಗದಿರಲಿ ಎಂಬ ಆಪತ್ತಿಯು ಬರಲಿ ಎಂದು ಶಂಕಿಸಬಾರದು. ಆ ಸ್ಥಳದಲ್ಲಿ ಶುಚಿತ್ವ ಅಶುಚಿತ್ವಾದಿಗಳು ಶಬ್ದೈಕ್ಯವೇದ್ಯವಾದ್ದರಿಂದ ಅನುಮಾನಕ್ಕೆ ಅಪೇಕ್ಷಿತವಾದ ಸಾಧ್ಯವು ಶಬ್ದದಿಂದಲೇ ಸಿದ್ಧವಾಗುವುದರಿಂದ ಶಬ್ದವು ಉಪಜೀವ್ಯವಾಗುತ್ತದೆ. ನರಕಪಾಲಕ್ಕೆ ಅಶುಚಿತ್ವವನ್ನು ಹೇಳಿದ ಶಬ್ದವು ಉಪಜೀವ್ಯಶಬ್ದ ಜಾತೀಯವಾದ್ದರಿಂದಲೇ ಪ್ರಬಲವಾಗುವುದರಿಂದ ಅಲ್ಲಿ ಅನುಮಾನಕ್ಕೆ ಅದರಿಂದಲೇ ಬಾಧವು ಬರುತ್ತದೆ.

**नन्वकाङ्क्षासत्तिमत्त्वेन शब्दस्य प्रमाणता नतु योग्यतापि तन्निवेशनी बाधाभावस्य प्रमामात्रहेतुत्वादिति चेत्? न । बाधे हि प्रमाणदोषोऽवश्यं वक्तव्यः । अन्यथा प्रमाणविषये बाधासम्भवात् ।**

ಇನ್ನು ಆಕಾಂಕ್ಷಾ ಆಸತ್ತಿ ಎರಡೇ ಶಬ್ದದ ಪ್ರಾಮಾಣ್ಯವನ್ನು ನಿರ್ವಾಹಮಾಡಲು ಸಾಕಾಗುತ್ತದೆ. ಯೋಗ್ಯತೆಯನ್ನು ಅಲ್ಲಿ ಸೇರಿಸಬೇಕಾಗಿಲ್ಲ. ಏಕೆಂದರೆ ಯೋಗ್ಯತೆಯು ಬಾಧಾಭಾವರೂಪವಾದುದು. ಬಾಧಾಭಾವವು ಪ್ರಮಾ ಸಾಮಾನ್ಯಕ್ಕೆ ಹೇತುವಾದ್ದರಿಂದ ಶಾಬ್ದಬೋಧಕ್ಕೆ ಅಸಾಧಾರಣವಲ್ಲ ಎಂಬ ಶಂಕೆಯು ಸರಿಯಲ್ಲ. ಬಾಧವಿರುವಲ್ಲಿ ಅನ್ವಯಬೋಧವು ಉಂಟಾಗುವುದಿಲ್ಲ.

ಆದ್ದರಿಂದ ಆ ಸ್ಥಳದಲ್ಲಿ ಪ್ರಮೆಯು ಉಂಟಾಗದಿರುವುದಕ್ಕೆ ಕಾರಣವಾದ ಪ್ರಮಾಣದೋಷವನ್ನು

ಅವಶ್ಯವಾಗಿ ಹೇಳಲೇಬೇಕು. ಇಲ್ಲದಿದ್ದರೆ ಎಂದರೆ ಪ್ರಮಾಣದಲ್ಲಿ ದೋಷವಿಲ್ಲದಿದ್ದರೆ ತಜ್ಜನ್ಯಜ್ಞಾನಕ್ಕೆ ಬಾಧವು ಬರಲು ಸಾಧ್ಯವಿಲ್ಲ.

**यथानुमाने बाधादुपाधिकल्पनद्वारा व्याप्तिविघातः । निरुपाधौ बाधानवकाशात् ।**

ಹೇಗೆ ಅನುಮಾನಸ್ಥಳದಲ್ಲಿ ಬಾಧವಿರುವುದರಿಂದ ಉಪಾಧಿಯನ್ನು ಕಲ್ಪನೆಮಾಡಿ ತನ್ಮೂಲಕವಾಗಿ ವ್ಯಾಪ್ತಿಭಂಗವನ್ನು ಹೇಳುತ್ತೇವೆಯೋ ಉಪಾಧಿ ಇಲ್ಲದಿದ್ದರೆ ಬಾಧವೇ ಇರುವುದಿಲ್ಲ. ಇದು ಹೇಗೋ ಅದರಂತೆ ಬಾಧವಿರುವ ಸ್ಥಳದಲ್ಲಿ ಅದಕ್ಕೆ ಪ್ರಯೋಜಕವಾದ ಪ್ರಮಾಣ ದೋಷವನ್ನು ಅವಶ್ಯವಾಗಿ ಹೇಳಬೇಕಾದುದರಿಂದ ಪ್ರಕೃತದಲ್ಲಿ ಅಯೋಗ್ಯತೆಯನ್ನು ಪ್ರಮಾಣದೋಷವೆಂದು ಹೇಳುತ್ತೇವೆ. ತಥಾಚ ಯೋಗ್ಯತ್ವವನ್ನು ಆಕಾಂಕ್ಷಾ ಆಸತ್ತಿಗಳ ಜೊತೆಯಲ್ಲಿ ನಿವೇಶಮಾಡಿ ಶಬ್ದಪ್ರಾಮಾಣ್ಯಕ್ಕೆ ಉಪಪಾದಕವಾದುದು ಎಂದು ಹೇಳಬೇಕು.

**सेयं न स्वरूपसती प्रयोजिका शब्दाभासोच्छेदप्रसङ्गात् । तन्निश्चयश्च न भवत्युपायाभावात् इति चेत्? न । संशय-विपर्ययप्रमासाधारणस्य योग्यताज्ञानमात्रस्य कारणत्वात् । अयोग्यताज्ञानस्य प्रतिबन्धकस्य सर्वत्राभावात् क्वचित्तन्निश्चयोऽपि योग्यानुपलब्ध्या यथेह घटो नास्तीति ।।**

ಈ ಯೋಗ್ಯತೆಯಾದರೂ ಸ್ವರೂಪಸತ್ ಆಗಿ ಅನ್ವಯಬೋಧ ಪ್ರಯೋಜಕವಲ್ಲ. ಹಾಗಾದರೆ ಶಬ್ದಾಭಾಸವೇ ಉಚ್ಛಿನ್ನವಾಗಬೇಕಾಗುತ್ತದೆ. ಈ ಬಾಧಾಭಾವರೂಪವಾದ ಯೋಗ್ಯತೆಯ ನಿಶ್ಚಯವನ್ನೇ ಮಾಡಲು ಸಾಧ್ಯವಿಲ್ಲ ಎಂದು ಹಿಂದೆ ಹೇಳಿದ ದೋಷವು ಇಲ್ಲ. ನಾವು ಯೋಗ್ಯತಾ ಜ್ಞಾನವು ಕಾರಣವೆಂದು ಹೇಳುತ್ತೇವೆ. ಅದು ಯೋಗ್ಯತೆಯ ಸಂಶಯವಿರುವಾಗಲೂ, ಯೋಗ್ಯತ್ವದ ಭ್ರಾಂತಿ ಇರುವಾಗಲೂ ಮತ್ತು ಯೋಗ್ಯತ್ವದ ಪ್ರಮೆ ಇರುವಾಗಲೂ ಇದ್ದೇ ಇದೆ.

ಈ ಮೂರುಸ್ಥಳದಲ್ಲಿಯೂ ಅನ್ವಯಬೋಧಕ್ಕೆ ಪ್ರತಿಬಂಧಕವಾದ ಅಯೋಗ್ಯತಾ ಜ್ಞಾನವಿಲ್ಲ.

ಕೆಲವುಕಡೆ ಅಯೋಗ್ಯತಾಜ್ಞಾನದ ಅಭಾವವನ್ನಾದರೂ ಯೋಗ್ಯಾನುಪಲಬ್ಧಿಯಿಂದ ಇಲ್ಲಿ ಘಟವಿಲ್ಲ ಎಂದು ಹೇಗೆ ನಿಶ್ಚಯ ಮಾಡುತ್ತೇವೋ ಅದರಂತೆ ಯೋಗ್ಯಾನುಪಲಬ್ಧಿಯಿಂದಲೇ ನಿಶ್ಚಯಮಾಡಬೇಕು.

ತತ್ತ್ವಚಿಂತಾಮಣಿಯಲ್ಲಿ ಯೋಗ್ಯತಾವಾದವು ಮುಗಿಯಿತು

* * * * * *

# ಸಿದ್ಧಾಂತ ತಾಂಡವ

## ಆಕಾಂಕ್ಷಾ, ಆಸತ್ತಿ, ಯೋಗ್ಯತಾ ಪ್ರಕರಣಗಳು

1. ಪ್ರಮಾಣಲಕ್ಷಣ
2. ಪ್ರಮಾಣಲಕ್ಷಣಟೀಕೆ
3. ಪ್ರಮಾಣಪದ್ಧತಿ
4. ಯುಕ್ತಿಮಲ್ಲಿಕಾ
5. ಅಭಿನವ ತಾಂಡವ

# ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಪ್ರಮಾಣಲಕ್ಷಣ

ಹಾಗೂ

## ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ ಪ್ರಮಾಣಲಕ್ಷಣ ಟೀಕೆ

### ಆಗಮಲಕ್ಷಣ

(टी.) आगमलक्षणमाह - **निर्दोषः शब्द आगमः**

ಆಗಮಲಕ್ಷಣವನ್ನು ಹೇಳುತ್ತಿದ್ದಾರೆ. ದೋಷವಿಲ್ಲದ ಶಬ್ದವೇ 'ಆಗಮ'.

अज्ञानविपर्ययसंशयप्रमादविप्रलम्भाऽदिपुरुषदोषपूर्वकत्वाभावो निर्दोषत्वम् । शब्दो वाक्याऽत्मा । विभक्त्यन्ता वर्णाः पदम् ।

ಅಜ್ಞಾನ, ವಿಪರೀತಜ್ಞಾನ, ಸಂಶಯಜ್ಞಾನ, ಪ್ರಮಾದ, ಮೋಸ ಇವೇ ಮೊದಲಾದ ಪುರುಷನ ದೋಷಗಳು ಇಲ್ಲದಿರುವುದೇ ನಿರ್ದೋಷ ಎಂದು ಕರೆಸಿಕೊಳ್ಳುತ್ತದೆ. ದೋಷರಹಿತವಾದ ಶಬ್ದವೇ ವಾಕ್ಯ. ವಿಭಕ್ತ್ಯಂತವಾದ ವರ್ಣಗಳು ಪದ.

### ಆಕಾಂಕ್ಷಾಲಕ್ಷಣ

आकांक्षायोग्यतासन्निधिमन्ति पदानि वाक्यम् । श्रोतुराकाङ्क्षिता-र्थाभिधायकत्वं पूर्वपदसञ्जाताऽकाङ्क्षापूरकत्वं वा आकाङ्क्षावत्त्वम् ।

**तेन विरक्तं प्रति वाणिज्योपदेशस्य, गौरश्वः पुरुषो हस्ती-त्यादेश्चावाक्यत्वं भवति ।**

ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಇವುಗಳಿಂದ ಕೂಡಿರುವ ಪದಗಳ ಸಮೂಹ ರೂಪವಾದದ್ದು ವಾಕ್ಯ . ಕೇಳುವವನಿಗೆ ಯಾವ ವಿಷಯದಲ್ಲಿ ಆಕಾಂಕ್ಷೆ ಇರುತ್ತದೋ, ಅದನ್ನು ತಿಳಿಸುವುದು ಆಕಾಂಕ್ಷಾ ಎನಿಸುತ್ತದೆ. ಅಥವಾ ಹಿಂದಿನ ಪದದಿಂದ ಯಾವ ಜಿಜ್ಞಾಸೆ ಹುಟ್ಟಿರುತ್ತದೋ, ಅದನ್ನು ಶಾಂತಗೊಳಿಸುವುದು ಆಕಾಂಕ್ಷಾ ಎನಿಸುತ್ತದೆ. ಹೀಗೆ ಹೇಳಿದ್ದರಿಂದ ವಿರಕ್ತನಿಗೆ ವ್ಯಾಪಾರದ ಬಗ್ಗೆ ಉಪದೇಶ ಮಾಡುವ ಮಾತಿನಲ್ಲಿ ವಾಕ್ಯದ ಲಕ್ಷಣವು ಬರುವುದಿಲ್ಲವೆಂದು ಹೇಳಿದಂತಾಗುತ್ತದೆ. ಮತ್ತು 'ಗೌರಶ್ವಃ ಪುರುಷೋ ಹಸ್ತಿ' ಎಂಬ ವಾಕ್ಯದಲ್ಲಿ ಹಿಂದಿನ ಪದವನ್ನು ಕೇಳಿದಾಗ ಆಕಾಂಕ್ಷೆಯು ಹುಟ್ಟದ ಕಾರಣ ಇಲ್ಲಿಯೂ ವಾಕ್ಯದ ಲಕ್ಷಣವು ಬರುವುದಿಲ್ಲವೆಂದು ಹೇಳಿದಂತಾ-ಗುತ್ತದೆ.

## ಸನ್ನಿಧಿಲಕ್ಷಣ

**सन्निहितार्थाभिधायकत्वं अविलम्बेतोच्चरितत्वं वा सन्निहितत्वम् । तेन चोलेषु वर्तमानं तृषितं प्रति 'सन्ति सुरसरिति शीतलानि जलानि' इत्युपदेशस्य विलम्बेनोच्चरितपदानां च वाक्यत्वनिरासः ।**

ಹತ್ತಿರದ ಅರ್ಥವನ್ನು ತಿಳಿಸುವಿಕೆಯು 'ಸನ್ನಿಧಿ' ಎನಿಸುತ್ತದೆ. ಅಥವಾ ತಡಮಾಡದೇ ಉಚ್ಚರಿಸುವಿಕೆಯನ್ನೂ ಕೂಡ ಸನ್ನಿಧಿಯೆನ್ನಬಹುದು. ಹೀಗೆ ಹೇಳಿದ್ದರಿಂದ 'ದಾಕ್ಷಿಣಾತ್ಯನಿಗೆ ಬಾಯಾರಿಕೆಯಾದಾಗ ಗಂಗೆಯಲ್ಲಿ ಶೀತಲವಾದ ನೀರು ಸಿಗುತ್ತದೆ' ಎಂದು ಉಪದೇಶವನ್ನು ಮಾಡುವ ವಾಕ್ಯದಲ್ಲಿ ಸನ್ನಿಧಿಲಕ್ಷಣವು ಇಲ್ಲವೆಂದು ಹೇಳಿದಂತಾಯಿತು. ಮತ್ತು ವಿಳಂಬವಾಗಿ ಉಚ್ಚರಿಸುವ ಪದಗಳಲ್ಲಿಯೂ ಕೂಡ ವಾಕ್ಯತ್ವವಿಲ್ಲವೆಂದು ಹೇಳಿದಂತಾಯಿತು.

## ಯೋಗ್ಯತಾಲಕ್ಷಣ

**अन्योन्यान्वययोग्यतावदर्थाभिधायकत्वं योग्यतावत्त्वम् । तथा च 'अग्निना सिञ्चेद्' इत्यादेर्वाक्यत्वनिरासः । निर्दोष इत्यागमाऽभासनिवृत्तिः । शब्द इति प्रत्यक्षाऽदिव्युदासः । आगमश्च सम्यग्ज्ञात एव बोधकः । अन्यथाऽतिप्रसङ्गात् ।**

ಪರಸ್ಪರವಾಗಿ ಅನ್ವಯಯೋಗ್ಯತೆಯುಳ್ಳ ಅರ್ಥವನ್ನು ಪ್ರತಿಪಾದನೆ ಮಾಡುವ ವಾಕ್ಯವು ಯೋಗ್ಯತಾವುಳ್ಳದ್ದೆಂದು ಕರೆಸಿಕೊಳ್ಳುತ್ತದೆ. ಆದ್ದರಿಂದ 'ಅಗ್ನಿನಾ ಸಿಂಚೇತ್' ಎಂಬಲ್ಲಿ ವಾಕ್ಯತ್ವವಿಲ್ಲವೆಂದು ಹೇಳಿದಂತಾಗುತ್ತದೆ. 'ನಿರ್ದೋಷಃ' ಎಂಬ ವಿಶೇಷಣದಿಂದ ಆಗಮವನ್ನು ವ್ಯಾವೃತ್ತಿ ಮಾಡಿದಂತಾಯಿತು. 'ಶಬ್ದಃ' ಎಂಬ ವಿಶೇಷಣದಿಂದ ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಆಗಮವಲ್ಲವೆಂದು ಹೇಳಿದಂತಾಯಿತು. ಈ ಆಗಮವೂ ಕೂಡ ಚೆನ್ನಾಗಿ ಜ್ಞಾತವಾದಾಗ ಮಾತ್ರ ಬೋಧಕವಾಗುತ್ತದೆ. ಹೀಗೊಪ್ಪದಿದ್ದರೆ ಅತಿಪ್ರಸಂಗ ಬರುತ್ತದೆ.

ಇಲ್ಲಿಗೆ ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ ಪ್ರಮಾಣ ಲಕ್ಷಣ ಟೀಕೆಯಲ್ಲಿ
ಯೋಗ್ಯತಾಲಕ್ಷಣ ಮುಗಿಯಿತು

* * * *

ಶ್ರೀಮದ್-ರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
## ಪ್ರಮಾಣ ಲಕ್ಷಣ ಟೀಕಾವ್ಯಾಖ್ಯಾನ

## ಆಕಾಂಕ್ಷಾಲಕ್ಷಣ

निर्दोषपदेन निरभिधेयत्वानन्वितत्वाऽदिराहित्यविवक्षायां शब्दपदस्य वाक्याऽत्मत्वविवक्षा पुनरुक्तिदोषपराहता स्यात् । अतो विवक्षितदोषराहित्यमाह - **अज्ञानेति** ।।

ನಿರ್ದೋಷಪದದಿಂದ ನಿರಭಿಧೇಯತ್ವ, ಅನನ್ವಿತತ್ವ ಮೊದಲಾದ ದೋಷಗಳ ರಾಹಿತ್ಯವನ್ನು ವಿವಕ್ಷಿಸುವುದಾದರೆ ಶಬ್ದಪದಕ್ಕೆ ಪುನಃ ವಾಕ್ಯಾತ್ಮತ್ವವನ್ನು ವಿವಕ್ಷಿಸಿದಾಗ ಪುನರುಕ್ತಿ ದೋಷವು ಬರುತ್ತದೆ. ಅದಕ್ಕೋಸ್ಕರ ನಿರ್ದೋಷಪದದಿಂದ ವಿವಕ್ಷಿತವಾದ ದೋಷರಾಹಿತ್ಯವನ್ನು 'ಅಜ್ಞಾನ' ಇತ್ಯಾದಿಯಾಗಿ ಸ್ಪಷ್ಟಪಡಿಸುತ್ತಿದ್ದಾರೆ.

## ಶಬ್ದದೋಷಗಳು

शब्दबोध्यार्थविषयाज्ञानविपर्ययसंशयेत्यर्थः । प्रमादोऽनवधानम् । विप्रलम्भो वञ्चनम्, अविद्यमानस्य विद्यमानताविवक्षेति यावत् । आदिपदेन करणपाटवगुरूपायविवक्षानिष्प्रयोजन-कानपेक्षितार्थप्रतिपादकत्वाऽदिग्रहः । 'आगमोऽदुष्टवाक्यं च' इति तत्वविनिर्णयोक्तब्रह्मतर्क-वाक्यानुरोधादाह - **शब्दो वाक्याऽत्मेति ।।**

'ಅಜ್ಞಾನ' ಇತ್ಯಾದಿ ವಾಕ್ಯಕ್ಕೆ ಶಬ್ದಬೋಧ್ಯವಾದ ಅರ್ಥವಿಷಯಕವಾದ ಅಜ್ಞಾನ, ವಿಪರೀತಜ್ಞಾನ ಹಾಗೂ ಸಂಶಯಗಳು ಎಂದರ್ಥ. ಪ್ರಮಾದ ಶಬ್ದಕ್ಕೆ 'ಅನವಧಾನ' ಎಂದರ್ಥ. 'ವಿಪ್ರಲಂಭ' ಶಬ್ದಕ್ಕೆ 'ವಂಚನೆ' ಎಂದರ್ಥ. ಇಲ್ಲದೇ ಇರುವುದನ್ನು ಇದೆ ಎಂದು ವಿವಕ್ಷಿಸುವುದೇ 'ವಂಚನೆ' ಎಂದು ಕರೆಯುತ್ತಾರೆ. ಆದಿಪದದಿಂದ ಕರಣಪಾಟನವಿಲ್ಲದಿರುವಿಕೆಯನ್ನು, ಲಘುವಾದ ಉಪಾಯವಿರಬೇಕಾದರೆ ಗುರುಭೂತವಾದ ಉಪಾಯವನ್ನು ವಿವಕ್ಷಿಸುವುದನ್ನು, ಪ್ರಯೋಜನ ಇಲ್ಲದ ವಾಕ್ಯವನ್ನು ಪ್ರಯೋಗಿಸು-ವುದನ್ನು, ಅನಪೇಕ್ಷಿತವಾದ ಅರ್ಥವನ್ನು ಪ್ರತಿಪಾದನೆ ಮಾಡುವುದನ್ನು ವಿವಕ್ಷಿಸಬೇಕು. 'ಆಗಮೋಽ-ದುಷ್ಟವಾಕ್ಯಂ ಚ' ಎಂದು ತತ್ವನಿರ್ಣಯದಲ್ಲಿ ಹೇಳಿದ ಬ್ರಹ್ಮತರ್ಕವಾಕ್ಯದ ಅನುಸಾರಿಯಾಗಿ 'ಶಬ್ದಃ ವಾಕ್ಯಾತ್ಮ' ಎಂದು ಹೇಳಿರುತ್ತಾರೆ.

ವಿವರಣೆ - 'ಕಚಟಪತಾಪಾನಾಂ ಜಗಗಜಡತ್ವಾತ್' ಎಂಬ ವಾಕ್ಯದಲ್ಲಿ ಅರ್ಥವಿರು-ವುದಿಲ್ಲ. 'ಕುಂಡಮಜಾಜಿನಂ ದಶಜಾತಿಮಾನಿಂ ಶಡಪೂಪಾಃ' ಎಂಬಲ್ಲಿ ಅನ್ವಯವು ಇರುವುದಿಲ್ಲ.

1. ಜಗತ್ತು ಸುಳ್ಳು ಈಶನಲ್ಲ ಎಂಬುದು ವಿಪರೀತ ಬೋಧಕವಾಗಿದೆ.

2. ಅಗ್ನಿಯು ಬಿಸಿಯಾಗಿದೆ ಎಂದು ಜ್ಞಾತಜ್ಞಾಪಕವಾಗಿದೆ.

3. ಕಾಗೆಗೆ ಎಷ್ಟು ಹಲ್ಲುಗಳಿವೆ ಎಂಬುದು ನಿಷ್ಪ್ರಯೋಜಕವಾಗಿದೆ.

4. ವಿರಕ್ತನ ಬಳಿ ವ್ಯಾಪಾರದ ಬಗ್ಗೆ ಉಪದೇಶಿಸುವುದು ಅನಭಿಮತಪ್ರಯೋಜನವಾಗಿದೆ.

5. ಮುಮುರ್ಷು ಆದವನಿಗೆ ಹಿಮವತ್ಪರ್ವತದಲ್ಲಿ ಮೃತಸಂಜೀವಿನಿ ಎಂಬ ಔಷಧವಿದೆ. ಅದನ್ನು ತಂದರೆ ಮರಣಭಯವು ಪರಿಹಾರವಾಗುತ್ತದೆ ಎಂಬುದು ಅಸಾಧ್ಯವಾದದ್ದನ್ನು ಉಪದೇಶಿಸುವುದಕ್ಕೆ ಉದಾಹರಣೆಯಾಗಿದೆ.

6. ದಾಕ್ಷಿಣಾತ್ಯನಿಗೆ ಗಂಗೆಯಲ್ಲಿ ಶೀತಲವಾದ ಜಲವಿದೆ ಎಂದು ಉಪದೇಶಿಸುವುದು ಲಘೂಪಾಯೇ ಸತಿ ಗುರೂಪಾಯೋಪದೇಶಕ್ಕೆ ಉದಾಹರಣೆಯಾಗಿದೆ.

ಇವೆಲ್ಲವೂ ಶಬ್ದದೋಷಗಳು. ಇಂಥ ದೋಷವಿಲ್ಲದ ವಾಕ್ಯವು 'ಆಗಮ' ಎಂದು ಕರೆಸಿ-ಕೊಳ್ಳುತ್ತದೆ.

ಪ್ರಥಮಾವಿಭಕ್ತಿ, ದ್ವಿತೀಯಾವಿಭಕ್ತಿ, ತೃತೀಯಾವಿಭಕ್ತಿ, ಚತುರ್ಥಿವಿಭಕ್ತಿ, ಪಂಚಮೀ-ವಿಭಕ್ತಿ, ಷಷ್ಠೀವಿಭಕ್ತಿ ಹಾಗೂ ಸಪ್ತಮೀವಿಭಕ್ತಿ ಇವುಗಳೇ ಕೊನೆಯಾಗಿವುಳ್ಳ ವರ್ಣಗಳೇ ಪದ ಎಂದು ಕರೆಸಿಕೊಳ್ಳುತ್ತದೆ.

ಆಕಾಂಕ್ಷಾ, ಸನ್ನಿಧಿ, ಯೋಗ್ಯತಾಗಳುಳ್ಳ ಪದಗಳ ಸಮೂಹವು ವಾಕ್ಯ ಎನಿಸುತ್ತದೆ.

ಆದ್ದರಿಂದ ನಿರ್ದುಷ್ಟವಾಗಿ ಆಕಾಂಕ್ಷಾ, ಸನ್ನಿಧಿ, ಯೋಗ್ಯತಾವುಳ್ಳ ಪದಗಳ ಸಮೂಹವೇ ಆಗಮವೆಂದು ಪರಿಷ್ಕರಿಸಿದಂತಾಯಿತು.

ವಾಸ್ತವಿಕವಾಗಿ ವರ್ಣಗಳು ನಿತ್ಯವ್ಯಾಪ್ತವಾಗಿರುವುದರಿಂದ ವರ್ಣಗಳ ಸಮುದಾಯ-ರೂಪವಾದ ವಾಕ್ಯದ ಪ್ರತೀತಿಯನ್ನು ಕೂಡಿಸುವುದು ಕಷ್ಟವೇ ಆಗಿದೆ. ಆದರೂ ಕೂಡ ಮೊದಲು ಕೇಳಿದ ವರ್ಣಾನುಭವದಿಂದ ಸಂಸ್ಕಾರವು ಹುಟ್ಟುತ್ತದೆ. ಆ ಸಂಸ್ಕಾರದಿಂದ ಕೂಡಿದ ಮತ್ತೊಂದು ವರ್ಣವೂ ಸೇರಿದಾಗ ಇದಕ್ಕೆ ಈ ಅರ್ಥವು ವಾಚ್ಯವಾಗಿದೆ ಎಂಬುದಾಗಿ ವಾಚ್ಯವಾಚಕಭಾವಗ್ರಹಣಜನ್ಯಸಂಸ್ಕಾರಾನುಗೃಹೀತವಾದ ಕೊನೆಯ ವರ್ಣ-ದಿಂದ ಸನ್ನಿಕೃಷ್ಟವಾದ ಶ್ರೋತ್ರವೇ ಅನೇಕ ವರ್ಣಗಳಲ್ಲಿಯೂ ಒಂದು ಪದವೆಂಬ ಬುದ್ಧಿ-

ಯನ್ನು ಹುಟ್ಟಿಸುತ್ತದೆ. ಹಾಗೇ ಪೂರ್ವಪೂರ್ವಪದಾನುಭವದಿಂದ ಹುಟ್ಟಿದ ಸಂಸ್ಕಾರ-ಸಹಕೃತವಾದ ಕೊನೆಯ ಪದವನ್ನು ವಿಷಯೀಕರಿಸಿದ ಶ್ರೋತ್ರವು ಆಕಾಂಕ್ಷಾದ್ಯನು-ಸಾರಿಯಾಗಿ ವಾಕ್ಯದ ಬುದ್ಧಿಯನ್ನು ಹುಟ್ಟಿಸುತ್ತದೆ.

## ಆಗಮಲಕ್ಷಣದಲ್ಲಿ ದಲಕೃತ್ಯಚಿಂತನೆ

निष्प्रयोजनत्वाऽदिदोषनिरासार्थमावश्यकनिर्दोषत्वविशेषणेनैव निरभिधेयाऽदावतिव्याप्ति-निराससम्भवेऽपि वाक्याऽत्मत्वविवक्षा शिष्याणां पदवाक्याऽदिस्वरूपज्ञानार्था इति भावेन पदाऽदिस्वरूपं दर्शयति ।। **विभक्त्यन्ता इति** ।। सुबन्तास्तिङन्ताश्चेत्यर्थः ।

'ನಿಷ್ಪ್ರಯೋಜನತ್ವ' ಇತ್ಯಾದಿ ದೋಷಗಳ ಪರಿಹಾರಕ್ಕಾಗಿ ನಿರ್ದೋಷತ್ವ ವಿಶೇಷಣವನ್ನು ಆಗಮ-ಲಕ್ಷಣದಲ್ಲಿ ಹೇಳಲೇಬೇಕು. ಇದರಿಂದಲೇ ನಿರಭಿಧೇಯಾದಿಗಳಲ್ಲಿ ಅತಿವ್ಯಾಪ್ತಿಯು ಪರಿಹಾರವಾಗು-ವುದಾದರೂ ಕೂಡ ವಾಕ್ಯಾತ್ಮತ್ವವನ್ನು ವಿವಕ್ಷಿಸಿದ್ದು, ಶಿಷ್ಯರಿಗೆ ಪದ ಹಾಗೂ ವಾಕ್ಯಗಳ ಸ್ವರೂಪದ ಜ್ಞಾನವಾಗಬೇಕೆಂಬ ಉದ್ದೇಶಕ್ಕಾಗಿ. ಆದ್ದರಿಂದ ಪದಾದಿಗಳ ಸ್ವರೂಪವನ್ನು 'ವಿಭಕ್ತ್ಯಂತಾಃ' ಇತ್ಯಾದಿಯಾಗಿ ಹೇಳಿದ್ದಾರೆ. ವಿಭಕ್ತ್ಯಂತಾಃ ಎಂಬ ಪದಕ್ಕೆ ಸುಬಂತವಾದ ಹಾಗೂ ತಿಙಂತವಾದ ಎಂದರ್ಥ.

'विभक्तिश्च' इति सूत्रे सुप्तिङोर्विभक्तिसञ्ज्ञोक्तेः । बहुवचनं प्रायिककत्वाभिप्रायेणोपात्तम् । न च विवक्षितम् । विभक्त्यन्तो वर्णः विभक्त्यन्तौ वर्णौ इत्यपि ध्येयम् । तेन 'अः इति ब्रह्म' 'अप्रकेतं सलिलं सर्वमा इदम्' इत्यादौ अ आ इत्यादेरपि पदत्वसिद्धिर्ध्येया । 'विभक्त्यन्तं पदम्' इति वाच्ये वर्णा इत्युक्तिः स्फोटनिरासायेत्याहुः ।

'ವಿಭಕ್ತಿಶ್ಚ' ಎಂಬ ಸೂತ್ರದಲ್ಲಿ ಸುಪ್ ಹಾಗೂ ತಿಙ್‌ಗಳಿಗೆ ವಿಭಕ್ತಿ ಸಂಜ್ಞೆಯನ್ನು ಹೇಳಿರುವುದರಿಂದ 'ವಿಭಕ್ತ್ಯಂತಾಃ' ಎಂಬ ಪದದಿಂದ ಸುಬಂತವಾದ ಹಾಗೂ ತಿಙಂತವಾದ ಶಬ್ದಸ್ವರೂಪವನ್ನು ವಿವಕ್ಷಿಸಬೇಕು. ಬಹುವಚನವನ್ನು ಪ್ರಾಯಿಕವಾಗಿ ಪ್ರಯೋಗಿಸಿದ್ದಾರೆ. ಅನೇಕ ವರ್ಣಗಳಿದ್ದರೆ ಮಾತ್ರ ಪದವೆಂದು ಇದರಿಂದ ಭ್ರಾಂತಿ ಬರುತ್ತದೆ. ಆದರೆ ಒಂದು ಹಾಗೂ ಎರಡು ವರ್ಣಗಳಿದ್ದಾಗಲೂ ಕೂಡ ಪದಸಂಜ್ಞೆ ಬರುತ್ತದೆ. ಆದ್ದರಿಂದ ವಿಭಕ್ತ್ಯಂತಃ ವರ್ಣಃ, ವಿಭಕ್ತ್ಯಂತೌ ವರ್ಣೌ ಎಂಬುದನ್ನೂ ಕೂಡ ಇಲ್ಲಿ

ವಿವಕ್ಷಿಸಬೇಕು. 'ಅಃ ಇತಿ ಬ್ರಹ್ಮ' 'ಅಪ್ರಕೇತಂ ಸಲಿಲಂ ಸರ್ವಮಾ ಇದಮ್' ಇತ್ಯಾದಿ ಸ್ಥಳದಲ್ಲಿ ಅ, ಆ ಮೊದಲಾದ ಅಕ್ಷರಗಳಿಗೂ ಕೂಡ ಪದತ್ವವನ್ನು ಹೇಳಿದ್ದು ಸಾಧುವಾಗುತ್ತದೆ. 'ವಿಭಕ್ತ್ಯಂತಂ ಪದಂ' ಎಂದು ಹೇಳಿದ್ದರೆ ಸಾಕಾಗಿತ್ತು. ಆದರೂ 'ವರ್ಣಾಃ' ಎಂದು ಹೇಳಿರುವುದು ವೈಯ್ಯಾಕರಣರ ಸ್ಫೋಟವಾದವನ್ನು ನಿರಾಕರಣೆ ಮಾಡುವ ಉದ್ದೇಶಕ್ಕಾಗಿ ಎಂಬುದು ಕೆಲವರು ವ್ಯಾಖ್ಯಾನ.

**श्रोतुराकाङ्क्षितेति** ।। आकाङ्क्ष्यत इति आकाङ्क्षितं जिज्ञासितं तदभिधायकत्वं तद्-बोधकपदवत्त्वमित्यर्थः ।। **पूर्ववदेति** ।। शब्दमात्रपरोऽत्र पदशब्दः । तेन प्रकृतिजनिताऽ-काङ्क्षापूरकप्रत्ययनिष्ठसाकाङ्क्षत्वेनाव्याप्तिः । आकाङ्क्षा जिज्ञासा । पूर्वपदश्रवणेन सञ्जाता किम्? इति या जिज्ञासा तत्पूरकत्वम् । यज्ज्ञाने सति पूर्वपदोत्थजिज्ञासा शाम्यति तज्जनकशब्दः तेन साकाङ्क्ष इत्यर्थः ।

'ಶ್ರೋತುರಾಕಾಂಕ್ಷಿತಾರ್ಥಾಭಿಧಾಯಕತ್ವಂ' ಎಂಬುದಕ್ಕೆ - 'ಆಕಾಂಕ್ಷ್ಯತೇ ಇತಿ ಆಕಾಂಕ್ಷಿತಂ' ಎಂಬ ನಿಷ್ಪತ್ತಿಯಂತೆ ಜಿಜ್ಞಾಸಿತವಾದ ಯಾವ ಅರ್ಥವಿದೆಯೋ, ಅದನ್ನು ಪ್ರತಿಪಾದನೆ ಮಾಡುವ ಪದ ಎಂದು ಅರ್ಥ. 'ಪೂರ್ವಪದ' ಎಂಬ ಶಬ್ದಕ್ಕೆ 'ಶಬ್ದ' ಎಂದಷ್ಟೇ ಅರ್ಥವನ್ನು ವಿವಕ್ಷಿಸಬೇಕು. ಆದ್ದರಿಂದ ಪ್ರಕೃತಿಯಿಂದ ಯಾವ ಆಕಾಂಕ್ಷೆಯು ಬಂದಿರುತ್ತದೋ, ತತ್ ಪೂರ್ವಕವಾದ ಸಾಕಾಂಕ್ಷತ್ವವು ಪ್ರತ್ಯಯ-ದಲ್ಲಿ ಇರುವುದರಿಂದ ಅವ್ಯಾಪ್ತಿದೋಷವು ಬರುವುದಿಲ್ಲ. ಆಕಾಂಕ್ಷೆ ಎಂಬ ಪದಕ್ಕೆ ಜಿಜ್ಞಾಸೆ ಎಂದರ್ಥ. ಹಿಂದಿನ ಪದವನ್ನು ಕೇಳಿದಾಗ 'ಏನು ಬಂದಿತು?' ಎಂಬುದಾಗಿ ಯಾವ ಜಿಜ್ಞಾಸೆವುಂಟಾಗುತ್ತದೋ, ಅದಕ್ಕೆ ಪೂರಕವಾದದ್ದು ಎಂದರ್ಥ. ಯಾವುದರ ಜ್ಞಾನದಿಂದ ಹಿಂದಿನ ಪದದಿಂದ ಹುಟ್ಟಿದ ಜಿಜ್ಞಾಸೆಯು ಶಮನವಾಗುತ್ತದೋ, ತಜ್ಜನಕವಾದ ಶಬ್ದವು ಆ ಪದದಿಂದ ಆಕಾಂಕ್ಷೆಯನ್ನು ಹೊಂದಿರುತ್ತದೆಂದು ತಿಳಿಯಬೇಕು.

## ಆಕಾಂಕ್ಷಾ ಲಕ್ಷಣದಲ್ಲಿ ಪರಿಷ್ಕಾರ

जिज्ञासाविषयज्ञानजनको हि जिज्ञासापूरको भवति । तादृशज्ञानविषयत्वयोग्यज्ञान-जनकतावच्छेदकरूपवत्त्वमिति यावत् । भवति हि घटमानय इत्यादौ पूर्वपदेन सञ्जाताया

जिज्ञासाया विषयत्वयोग्यं यत् ज्ञानं क्रियाज्ञानं तज्जनकतावच्छेदकरूपक्रियापदत्वम् तादृश-रूपवत् क्रियापदं घटरूपकारकपदेन साकाङ्क्षम् ।

ಜಿಜ್ಞಾಸಾವಿಷಯವಾದದ್ದರ ಜ್ಞಾನಕ್ಕೆ ಜನಕವಾದದ್ದು ಜಿಜ್ಞಾಸಾಪೂರಕವಾಗುತ್ತದೆ. ಅಂಥ ಜ್ಞಾನ-ವಿಷಯತ್ವಯೋಗ್ಯಜ್ಞಾನಜನಕತಾವಚ್ಛೇದಕರೂಪವತ್ವವು ಇದರ ಅಭಿಪ್ರಾಯವೆಂದು ತಿಳಿಯಬೇಕು. 'ಘಟಮಾನಯ' ಎಂಬಲ್ಲಿ ಘಟಶಬ್ದದಿಂದ ಯಾವ ಜಿಜ್ಞಾಸೆ ಬರುತ್ತದೋ, ಅದಕ್ಕೆ ವಿಷಯವಾದ ಯಾವ ಜ್ಞಾನವಿದೆಯೋ, ಅಂಥ ಕ್ರಿಯಾಜ್ಞಾನಜನಕತಾವಚ್ಛೇದಕರೂಪ ಕ್ರಿಯಾಪದತ್ವವು 'ಸಾಕಾಂಕ್ಷ' ಎಂದು ಕರೆಸಿಕೊಳ್ಳುತ್ತದೆ. ಈ ಪದವು ಘಟರೂಪಕಾರಕ ಪದದಿಂದ ಸಾಕಾಂಕ್ಷಿತವಾಗಿದೆ ಎಂದಭಿಪ್ರಾಯ.

## ಎರಡು ಆಕಾಂಕ್ಷಾ ಲಕ್ಷಣವೇಕೆ ?

लक्षणद्वयस्यापि क्रमात् व्यावर्त्यमाह - **तेनेति** ।। द्विविधलक्षणेनेत्यर्थः । अवाक्यत्वम् इत्याकृष्यते । यद्यपि एतादृशोपदेशस्य पूर्वपदेत्यादिनोक्ताकाऽङ्क्षाऽदिराहित्ये तत एवा-वाक्यत्वम्, तद्वत्त्वे च वाक्यार्थप्रमितिजनकत्वात् अस्त्येव वाक्यत्वम् इति तन्निरासायाऽ-द्यलक्षणमनपेक्षितम् तथाऽपि श्रोतुरनाऽकाङ्क्षितत्वमात्रेण तस्यावाक्यत्वोक्तिरित्येव । वस्तुत-स्तादृशोपदेशोऽपि संग्राह्य एव । अन्वयप्रमित्युपयोग्युक्तवक्ष्यमाणाऽकाङ्क्षाऽदिमत्वात् । परं तु श्रोतुरनपेक्षित्वात् तन्मात्रस्यानुपादेयत्वमिति ज्ञातव्यम् ।।

ಮೂಲದಲ್ಲಿ ಹೇಳಿದ ಎರಡು ಬಗೆಯ ಆಕಾಂಕ್ಷಾ ಲಕ್ಷಣಕ್ಕೆ ಕ್ರಮವಾಗಿ ವ್ಯಾವರ್ತ್ಯವಾದದ್ದನ್ನು 'ತೇನ' ಇತ್ಯಾದಿಯಾಗಿ ಟೀಕೆಯಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ತೇನ' ಎಂಬ ಪದಕ್ಕೆ ಎರಡು ಬಗೆಯ ಲಕ್ಷಣದಿಂದ ಎಂದರ್ಥ. ಅವಾಕ್ಯತ್ವಮ್ ಎಂಬುದನ್ನು 'ವಾಣಿಜ್ಯೋಪದೇಶಸ್ಯ' ಎಂಬಲ್ಲಿ ಆಕರ್ಷಣೆ ಮಾಡಿ-ಕೊಳ್ಳಬೇಕು. ವಾಸ್ತವಿಕವಾಗಿ ವಿರಕ್ತನಿಗೆ ವಾಣಿಜ್ಯೋಪದೇಶ ಮಾಡುವ ಮಾತಿನಲ್ಲಿ ಆಕಾಂಕ್ಷೆಯು ಇರುವುದಿಲ್ಲ ಎಂಬುದು 'ಪೂರ್ವಪದಸಂಜಾತ-ಆಕಾಂಕ್ಷಾಪೂರಕತ್ವಮ್' ಎಂಬ ಲಕ್ಷಣದಿಂದಲೇ ತಿಳಿಯುತ್ತದೆ. ಆದ್ದರಿಂದಲೇ ಇಂಥದ್ದು ವಾಕ್ಯವಲ್ಲವೆಂದೂ ಕೂಡ ಸ್ಪಷ್ಟವಾಗುತ್ತದೆ. ಏಕೆಂದರೆ ಒಂದು ವೇಳೆ ವಿರಕ್ತನಿಗೂ ಕೂಡ ಪೂರ್ವಪದದಿಂದ ಆಕಾಂಕ್ಷೆಯು ಬರುವುದಾದಲ್ಲಿ, ವಾಕ್ಯಾರ್ಥಪ್ರಮಿತಿ-

ಜನಕತ್ವವಿರುವುದರಿಂದ ವಾಕ್ಯತ್ವವು ಅದರಲ್ಲಿ ಬಂದೇ ಬರುತ್ತದೆ. ಆದ್ದರಿಂದ 'ಶ್ರೋತುರಾಕಾಂಕ್ಷಿತಾರ್ಥಾಭಿಧಾಯಕತ್ವಂ' ಎಂಬ ಮೊದಲನೆಯ ಲಕ್ಷಣವು ಅನಪೇಕ್ಷಿತವಾಗಿದೆ. ಹೀಗಿದ್ದರೂ ಕೂಡ ಶ್ರೋತುವಿಗೆ ಆಕಾಂಕ್ಷೆ ಇಲ್ಲದ ಕಾರಣದಿಂದಲೇ ಅದಕ್ಕೆ ವಾಕ್ಯತ್ವವಿಲ್ಲವೆಂಬುದನ್ನು ತಿಳಿಸುವುದಕ್ಕಾಗಿ ಮೊದಲಿನ ಲಕ್ಷಣವನ್ನು ಹೇಳಿರುತ್ತಾರೆ. ವಾಸ್ತವಿಕವಾಗಿ ಅಂಥ ಉಪದೇಶವನ್ನೂ ಕೂಡ ಸಂಗ್ರಹ ಮಾಡಲೇಬೇಕು. ಏಕೆಂದರೆ ಅನ್ವಯಪ್ರಮಿತಿಗೆ ಉಪಯುಕ್ತವಾದ ಹಿಂದೆ ಹೇಳಿದ ಮತ್ತು ಮುಂದೆ ಹೇಳಲ್ಪಡುವ ಆಕಾಂಕ್ಷಾದಿಗಳು ಇರುತ್ತದೆ. ಆದರೆ ಶ್ರೋತುವಿಗೆ ಅದು ಅನಪೇಕ್ಷಿತವಾಗಿರುವ ಕಾರಣದಿಂದ ಅದನ್ನು ವಾಕ್ಯವೆಂದು ಪರಿಗಣಿಸಬಾರದೆಂಬ ಸೂಕ್ಷ್ಮವನ್ನು ಗಮನಿಸಬೇಕು.

**गौरश्व इति** ।। गोपदोत्थजिज्ञासापूरकत्वमश्वाऽदिपदस्याभावात् नातिव्याप्तिरिति भावः । अत्र पूर्वपदजातजिज्ञासाविषयज्ञानजनकत्वं तादृशज्ञानजननयोग्यता विवक्षिता । न तु फलोपधानम् । तेन जनितान्वयबोधे वाक्ये अन्वयबोधप्राक्कालीनवाक्ये च नाव्याप्तिरित्यपि ध्येयम् । इदं चाऽकाङ्क्षवत्त्वं ज्ञातमेव वाक्यार्थान्वयबोधहेतुः ।

'ಗೌರಶ್ವಃ ಪುರುಷೋ ಹಸ್ತಿ' ಎಂಬಲ್ಲಿ ಗೋಪದವನ್ನು ಕೇಳಿದಾಗ ಯಾವ ಜಿಜ್ಞಾಸೆಯು ಹುಟ್ಟುತ್ತದೋ, ಅದಕ್ಕೆ ಪೂರಕವಾದ ಪದತ್ವವು ಅಶ್ವಾದಿಗಳಲ್ಲಿ ಇರುವುದಿಲ್ಲ. ಆದ್ದರಿಂದ ಅತಿವ್ಯಾಪ್ತಿದೋಷವಿಲ್ಲವೆಂದು ತಿಳಿಯಬೇಕು. 'ಪೂರ್ವಪದಸಂಜಾತ-ಆಕಾಂಕ್ಷಾಪೂರಕತ್ವಮ್' ಎಂಬ ಆಕಾಂಕ್ಷಾ ಲಕ್ಷಣದಲ್ಲಿ ಜ್ಞಾನಜನಕತ್ವವನ್ನು ಯೋಗ್ಯತಾರೂಪವಾದದ್ದನ್ನು ವಿವಕ್ಷಿಸಬೇಕೇ ಹೊರತು, ಫಲೋಪಧಾನರೂಪವಾದದ್ದನ್ನು ವಿವಕ್ಷಿಸಬಾರದು. ಆದ್ದರಿಂದ ಜನಿತಾನ್ವಯಬೋಧದ ವಾಕ್ಯದಲ್ಲಿ ಅನ್ವಯಬೋಧ ಬರುವ ಮೊದಲು ಆ ವಾಕ್ಯದಲ್ಲಿ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಈ ಆಕಾಂಕ್ಷಾವತ್ತ್ವವೂ ಕೂಡ ಜ್ಞಾತವಾಗಿಯೇ ವಾಕ್ಯಾರ್ಥಾನ್ವಯದ ಬೋಧಕ್ಕೆ ಕಾರಣವಾಗುತ್ತದೆ.

## ಸನ್ನಿಧಿಲಕ್ಷಣ

सन्निधिलक्षणमाह - **सन्निहितेति** ।। यद्यपि क्रमप्राप्तयोग्यतालक्षण-मेवाऽदौ वक्तव्यम् तथाऽपि आकाङ्क्षाया लक्षणद्वयोक्तिप्रक्रमात् सन्निधिलक्षणद्वस्यापि तदनन्तरमुक्तिरित्यदोषः ।

व्यवहितार्थबोधकवाक्येऽप्याकाङ्क्षाऽदिमत्वे अन्वयप्रमितिजनकत्वेन प्रमाणतयाऽस्त्येव वाक्यत्वम् तथाऽप्यनुपादेयत्वं तस्यास्ति । लक्षणे निर्दोषपदेन तादृशदोषस्यापि वारणमभिप्रेतमिति भावेन पूर्वत्र अत्र च लक्षणद्वयसमुच्चयोक्तिः ।

ಸನ್ನಿಧಿಯ ಲಕ್ಷಣವನ್ನು 'ಸನ್ನಿಹಿತವಾಕ್ಯಾರ್ಥಬೋಧಕತ್ವಂ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ವಾಸ್ತವಿಕವಾಗಿ ಕ್ರಮಪ್ರಾಪ್ತವಾದದ್ದು ಯೋಗ್ಯತಾಲಕ್ಷಣ. ಅದನ್ನು ಮೊದಲು ಹೇಳಬೇಕಿತ್ತು. ಆದರೂ ಕೂಡ ಆಕಾಂಕ್ಷೆಯ ಲಕ್ಷಣವನ್ನು ಎರಡು ಬಗೆಯಲ್ಲಿ ಹೇಳಿದ್ದರಿಂದ ಸನ್ನಿಧಿಯ ಲಕ್ಷಣವೂ ಕೂಡ ಎರಡು ಬಗೆಯಲ್ಲಿರುವುದರಿಂದ ಆಕಾಂಕ್ಷೆಯ ಅನಂತರ ಸನ್ನಿಧಿಯ ಲಕ್ಷಣವನ್ನು ಹೇಳುತ್ತಿದ್ದಾರೆ.

ವ್ಯವಹಿತವಾದ ಅರ್ಥಬೋಧಕವಾಕ್ಯದಲ್ಲಿಯೂ ಆಕಾಂಕ್ಷಾದಿಗಳು ಇದ್ದರೆ ಅನ್ವಯಪ್ರಮಿತಿಯು ಹುಟ್ಟುವುದರಿಂದ ಪ್ರಮಾಣವೇ ಆಗುತ್ತದೆ. ಅಲ್ಲಿಯೂ ಕೂಡ ವಾಕ್ಯತ್ವವಿರುತ್ತದೆ. ಆದರೆ ಅದು ಅನು-ಪಾದೇಯವಾಗಿದೆ ಎಂದು ತಿಳಿಯಬೇಕು. ಲಕ್ಷಣದಲ್ಲಿ ನಿರ್ದೋಷ ಪದದಿಂದ ಅನುಪಾದೇಯತ್ವ-ರೂಪವಾದ ದೋಷವನ್ನೂ ಕೂಡ ವ್ಯಾವೃತ್ತಿ ಮಾಡಿದ್ದಾರೆ. ಆದ್ದರಿಂದ ಆಕಾಂಕ್ಷೆಯಲ್ಲಿ ಮತ್ತು ಸನ್ನಿಧಿಯಲ್ಲಿ ಎರಡು ಲಕ್ಷಣಗಳನ್ನು ವಿವಕ್ಷಿಸಲಾಗಿದೆ.

**अविलम्बेनोच्चरितत्वमिति** ।। न च 'गौरश्वः' इत्यादौ च वाक्येऽतिव्याप्तिः । तत्र सन्निधेः सत्वात्, अन्वयबोधविरहस्य चाऽकाङ्क्षाऽभावनिबन्धनत्वात्तत्र इति तात्पर्यात् ।

'ಅವಿಲಂಬೇನ ಉಚ್ಚರಿತತ್ವಮ್' ಎಂಬುದಾಗಿ ಸನ್ನಿಧಿಲಕ್ಷಣವನ್ನು ವಿವಕ್ಷಿಸಿದಾಗ 'ಗೌರಶ್ವಃ ಪುರುಷೋ ಹಸ್ತಿ' ಎಂಬ ವಾಕ್ಯದಲ್ಲಿ ಅತಿಪ್ರಸಂಗ ಬರುತ್ತದೆ. ಏಕೆಂದರೆ ಅಲ್ಲಿಯೂ ಕೂಡ 'ಗೌರಶ್ವಃ ಪುರುಷೋ ಹಸ್ತಿ' ಎಂಬಲ್ಲಿ ಅವಿಲಂಬೇನ ಉಚ್ಚರಿತತ್ವವು ಇರುವುದರಿಂದ ಸನ್ನಿಧಿಯ ಲಕ್ಷಣವು ಬರುತ್ತದೆ ಎಂದು ಅತಿವ್ಯಾಪ್ತಿಯನ್ನು ಆಶಂಕಿಸಬಾರದು. ಏಕೆಂದರೆ ಅನ್ವಯಬೋಧದವಿರಹವು ಆಕಾಂಕ್ಷಾಭಾವನಿಬಂಧನ-ವಾಗಿ ಅಲ್ಲಿ ಇರುತ್ತದೆ ಎಂದು ತಾತ್ಪರ್ಯ.

न च तथाऽपि 'नेदृशं स्थलममलं शमलघ्नं नास्य तीर्थसलिलस्य समं वाः' इत्यादौ मौनिलिखितश्लोके अव्याप्तिः तत्रोच्चारणाभावात् इति शङ्क्यम् । उच्चरितस्य पदस्य उच्चारणा-

भिप्रायसाधारणव्यापारमात्रपरत्वेन अविलम्बेन पदोपस्थित्यनुकूलवक्तृव्यापारविषयत्वं सन्निहित-त्वमित्यर्थस्य विवक्षितत्वात् । तथा च अविलम्बेनोपस्थित्यनुकूलाभिप्रायविषयत्वं तादृशो-च्चारणविषयत्वं चेत्यर्थः । मौनिश्लोके च उच्चारणाभावेऽपि निष्फलेन अन्वयबोधविरोधिना व्यवधानशून्यतया पदोपस्थित्यनुकूलाभिप्रायरूपवक्तृव्यापारविषयत्वस्य सन्निहितत्वस्य मौनि-श्लोकाऽदावपि सत्वात् नाव्याप्तिः ।

ಆದರೂ ಕೂಡ 'ನೇದೃಶಂ ಸ್ಥಲಮಲಂ ಶಮಲಘ್ನಂ ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ' ಎಂಬ ಕಾಷ್ಠಮೌನದಲ್ಲಿ ಶ್ರೀಮದಾಚಾರ್ಯರು ಬರೆದ ಶ್ಲೋಕದಲ್ಲಿ ಅವ್ಯಾಪ್ತಿಯು ಬರುತ್ತದೆ. ಇಲ್ಲಿ ಉಚ್ಚಾರಣೆಯೇ ಇರುವುದಿಲ್ಲ. ಹೀಗೆ ಆಶಂಕಿಸಬಾರದು.

'ಉಚ್ಚರಿತ' ಎಂಬ ಪದಕ್ಕೆ ಉಚ್ಚಾರಣಾಭಿಪ್ರಾಯಸಾಧಾರಣವಾದ ವ್ಯಾಪಾರವನ್ನಷ್ಟೇ ವಿವಕ್ಷಿಸ-ಲಾಗಿದೆ. ಆದ್ದರಿಂದ 'ಅವಿಲಂಬೇನ ಪದೋಪದಸ್ಥಿತ್ಯನುಕೂಲವಕ್ತೃ ವ್ಯಾಪಾರವಿಷಯತ್ವಂ' ವಿಲಂಬ-ವಿಲ್ಲದೆ ಪದದ ಉಪಸ್ಥಿತಿಗೆ ಅನುಕೂಲವಾದ ವಕ್ತೃವ್ಯಾಪಾರ ವಿಷಯತ್ವವನ್ನು 'ಸನ್ನಿಧಿ' ಎಂದು ತಿಳಿಯಬೇಕು. ಆದ್ದರಿಂದ ವಿಲಂಬವಿಲ್ಲದ ಉಪಸ್ಥಿತಿಗೆ ಅನುಕೂಲವಾದ ಅಭಿಪ್ರಾಯ ವಿಷಯತ್ವವು ಅಂಥ ಉಚ್ಚಾರಣೆಗೆ ವಿಷಯವಾಗಿದೆ ಎಂದು ಹೇಳಿದಂತಾಯಿತು. ಮೌನಿಶ್ಲೋಕದಲ್ಲಿ ಉಚ್ಚಾರಣೆ ಇಲ್ಲದಿದ್ದರೂ ಕೂಡ ಅನ್ವಯಬೋಧಕ್ಕೆ ವಿರೋಧಿಯಾದ ವ್ಯವಧಾನವು ನಿಷ್ಫಲವಾದ್ದರಿಂದ ಇರುವುದಿಲ್ಲ. ಪದದ ಉಪಸ್ಥಿತಿಗೆ ಅನುಕೂಲವಾದ ವಕ್ತೃವ್ಯಾಪಾರವಿಷಯತ್ವ ಎಂಬ ಸನ್ನಿಧಿಯು ಮೌನಿಶ್ಲೋಕದಲ್ಲಿಯೂ ಇರುತ್ತದೆ. ಆದ್ದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

वेदेऽपि तादृशेश्वराभिप्रायविषयत्वात् तत्रापि नाव्याप्तिः । सन्निहितत्वमपि ज्ञातमेव शाब्दधीहेतुर्ज्ञेयः ।। **विलम्बेनेति** ।। निष्फलेन अन्वयबोधविरोधिना व्यवधानेन वक्तृव्यापार-विषयपदानामित्यर्थः ।

ವೇದದಲ್ಲಿಯೂ ಕೂಡ ಇಂಥ ಸನ್ನಿಧಿಯು ಈಶ್ವರನ ಅಭಿಪ್ರಾಯಕ್ಕೆ ವಿಷಯವಾಗಿರುವುದರಿಂದ ಅವ್ಯಾಪ್ತಿಯು ಬರುವುದಿಲ್ಲ. ಈ ಸನ್ನಿಧಿಯೂ ಕೂಡ ಜ್ಞಾತವಾಗಿಯೇ ಶಾಬ್ದಬೋಧಕ್ಕೆ ಕಾರಣ-

ವಾಗುತ್ತದೆ. 'ವಿಲಂಬೇನ ಉಚ್ಚರಿತಪದಾನಾಂ' ಎಂಬ ಟೀಕೆಗೆ ವ್ಯರ್ಥವಾದ್ದರಿಂದ ಅನ್ವಯಬೋಧ ವಿರೋಧಿಯಾದ ವ್ಯವಧಾನದಿಂದ ವಕ್ತೃವ್ಯಾಪಾರಕ್ಕೆ ವಿಷಯವಾದ ಪದಗಳಿಗೆ ಎಂದರ್ಥ.

## ಯೋಗ್ಯತಾಲಕ್ಷಣ

**अन्योन्येति** ।। घटमानय इत्यादौ क्रियाकारकयोर्योऽन्योन्यमन्वयः तद्योग्यतावन्तौ यावर्थौ घटाऽनयनाऽदिरूपौ तत्प्रतिपादकपदवत्वमित्यर्थः ।।

ಅನ್ಯೋನ್ಯಾನ್ವಯ ಯೋಗ್ಯತಾರ್ಥಾಭಿಧಾಯಕತ್ವವು ಯೋಗ್ಯತೆಯ ಲಕ್ಷಣ. 'ಘಟಮಾನಯ' ಇತ್ಯಾದಿ ಸ್ಥಳದಲ್ಲಿ ಕ್ರಿಯಾಕಾರಕಗಳಿಗೆ ಯಾವ ಪರಸ್ಪರವಾದ ಅನ್ವಯವಿದೆಯೋ, ಅದಕ್ಕೆ ಯೋಗ್ಯತಾವುಳ್ಳ ಯಾವ ಅರ್ಥಗಳಿವೆಯೋ ಅವುಗಳನ್ನು, ಪ್ರತಿಪಾದನೆ ಮಾಡುವ ಘಟ ಹಾಗೂ ಆನಯ ಪದಗಳಿರುವಿಕೆ ಎಂದರ್ಥ.

**इत्यादेर्वाक्यत्वनिरास इति** ।। न चैवं निश्चिताप्रामाण्यकस्य 'अग्निना' इत्यादि-वाक्यस्य निरासेऽपि 'जलेन सिञ्चति' इत्यनाप्तोक्तवाक्येऽतिव्याप्तिरिति शङ्क्यम् । आवश्यक-निर्दोषत्वविशेषणेनैव तादृशवाक्यस्यापि निवारणात् इति भावेनाह - **निर्दोष इति** ।। आगमाऽभासोऽनाप्तवाक्यम् ।

'ಇತ್ಯಾದೇಃ ವಾಕ್ಯತ್ವನಿರಾಸಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರಿಂದ ತಿಳಿಯುವ ವಿಷಯ ಹೀಗಿದೆ - 'ಅಗ್ನಿನಾ ಸಿಂಚತಿ' ಎಂಬ ನಿಶ್ಚಿತ-ಅಪ್ರಾಮಾಣ್ಯಕ ಸ್ಥಳದಲ್ಲಿ ಯೋಗ್ಯತಾಲಕ್ಷಣವಿಲ್ಲವೆಂದು ನಿರಾಕರಣೆ ಮಾಡಿದರೂ ಕೂಡ 'ಜಲೇನ ಸಿಂಚತಿ' ಎಂಬ ಆಪ್ತವಾಕ್ಯದಲ್ಲಿ ಅತಿವ್ಯಾಪ್ತಿದೋಷ ಬರುತ್ತದೆ ಎಂದು ಆಶಂಕಿಸಬಾರದು. ಲಕ್ಷಣದಲ್ಲಿ ಅತ್ಯಂತ ಆವಶ್ಯಕವಾದ ನಿರ್ದೋಷತ್ವ ಎಂಬ ವಿಶೇಷಣದಿಂದಲೇ 'ಅಗ್ನಿನಾ ಸಿಂಚತಿ' ಇತ್ಯಾದಿ ವಾಕ್ಯದಲ್ಲಿ ಯೋಗ್ಯತಾಲಕ್ಷಣವಿಲ್ಲವೆಂದು ಸ್ಪಷ್ಟವಾಗುತ್ತದೆ ಎಂಬ ಅಭಿಪ್ರಾಯ -ದಿಂದ 'ನಿರ್ದೋಷ' ಇತ್ಯಾದಿ ಟೀಕೆಯು ಹೊರಟಿದೆ. 'ಆಗಮಾಭಾಸ' ಎಂದರೆ 'ಅನಾಪ್ತವಾಕ್ಯ' ಎಂದರ್ಥ.

एतच्च योग्यत्वं आकाङ्क्षासन्निधिवत् न ज्ञातं शाब्दान्वयधीहेतुः । तथात्वेऽन्वयज्ञानं विना

तद्योग्यार्थाभिप्रायकत्वज्ञानायोगेनाऽत्माश्रयाऽपत्तेः । शाब्दान्वयप्रमितिं प्रति स्वरूपसत्कारणमपि शाब्दान्वयबोधमात्रे स्वरूपं सदपि न कारणम् तदभावनिश्चयेऽपि 'अग्निना' इत्यादि-वाक्यान्वयबोधस्य जननात् । मेरुः सर्षपः इत्यादिवाक्यात् मेरोः सर्षपत्वप्रतिभासात् इति अन्यथाख्यातिप्रकरणे सुधोक्तेश्च । पद्धता तु प्रतीतार्थस्य प्रमाणविरोधाभावो योग्यता । तत्प्रतिपादकत्वात् पदान्यपि योग्यतावन्ति इत्युक्तम् । तदा तु तेनैवागमाऽभासनिरासो व्यक्तः ॥

ಈ ಯೋಗ್ಯತೆಯು ಆಕಾಂಕ್ಷಾ ಹಾಗೂ ಸನ್ನಿಧಿಗಳಂತೆ ಜ್ಞಾತವಾಗಿ ಶಾಬ್ದಬೋಧಕ್ಕೆ ಕಾರಣವಲ್ಲ. ಹಾಗಾದಲ್ಲಿ ಅನ್ವಯಜ್ಞಾನವಿಲ್ಲದೇ ತದ್ಯೋಗ್ಯವಾದ ಅರ್ಥಾಭಿಪ್ರಾಯಕತ್ವ ರೂಪವಾದ ಜ್ಞಾನವು ಬಾರದ ಕಾರಣ ಆತ್ಮಾಶ್ರಯದೋಷವು ಬರುತ್ತದೆ. ಪ್ರಮಾತ್ಮಕವಾದ ಶಾಬ್ದಬೋಧವನ್ನು ಕುರಿತು ಸ್ವರೂಪ-ಸತ್ಕಾರಣವೂ ಕೂಡ ಶಾಬ್ದಾನ್ವಯಬೋಧ ಮಾತ್ರದಲ್ಲಿ ಸ್ವರೂಪತಃ ಸತ್ತಾಗಿದ್ದರೂ ಕೂಡ ಕಾರಣ-ವಾಗುವುದಿಲ್ಲ. ತದಭಾವನಿಶ್ಚಯವಿದ್ದರೂ ಕೂಡ ಅಗ್ನಿನಾ ಇತ್ಯಾದಿ ವಾಕ್ಯದಿಂದ ಅನ್ವಯಬೋಧ ಹುಟ್ಟುತ್ತದೆ. ನ್ಯಾಯಸುಧೆಯಲ್ಲಿ 'ಮೇರುಃ ಸರ್ಷಪ ಇತ್ಯಾದಿ ವಾಕ್ಯಾತ್ ಮೇರೋಃ ಸರ್ಷಪತ್ವ-ಪ್ರತಿಭಾಸಾತ್', 'ಮೇರುಃ ಸರ್ಷಪಃ' ಎಂಬ ವಾಕ್ಯದಿಂದ ಮೇರುವಿನಲ್ಲಿ ಸರ್ಷಪತ್ವದ ಪ್ರತಿಭಾಸವು ಬರುತ್ತದೆ ಎಂದು ಅನ್ಯಥಾಖ್ಯಾತಿ ಪ್ರಕರಣದಲ್ಲಿ ಹೇಳಿದ್ದಾರೆ. ಪ್ರಮಾಣಪದ್ಧತಿಯಲ್ಲಿಯೂ ಕೂಡ ಪ್ರತೀತಾರ್ಥಸ್ಯ ಪ್ರಮಾಣವಿರೋಧಾಭಾವಃ ಯೋಗ್ಯತಾ' ಪ್ರತೀತವಾದ ಅರ್ಥಕ್ಕೆ ಯಾವುದೇ ಪ್ರಮಾಣ-ವಿರೋಧವಿಲ್ಲದಿರುವುದೇ 'ಯೋಗ್ಯತಾ' ಎಂದು 'ತತ್‌ಪ್ರತಿಪಾದಕತ್ವಾತ್ ಪದಾನ್ಯಪಿ ಯೋಗ್ಯಾತಾವಂತಿ' ಅದನ್ನು ಪ್ರತಿಪಾದನೆ ಮಾಡುವುದರಿಂದ ಪದಗಳೂ ಕೂಡ ಯೋಗ್ಯತಾವುಳ್ಳವುಗಳಾಗುತ್ತವೆ ಎಂದು ಹೇಳಿದ್ದಾರೆ. ಈ ಪಕ್ಷದಲ್ಲಿ ಆಗಮಾಭಾಸನಿರಾಸವೂ ಕೂಡ ಅದರಿಂದಲೇ ಆಗುತ್ತದೆಂದು ಸ್ಪಷ್ಟವಾಯಿತು.

ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
ಪ್ರಮಾಣ ಲಕ್ಷಣ ಟೀಕಾವ್ಯಾಖ್ಯಾನದಲ್ಲಿ ಯೋಗ್ಯತಾಲಕ್ಷಣ ಸಮಾಪ್ತವಾಯಿತು.

* * * * * * *

## प्रमाणलक्षणव्याख्यारूपायां-तर्कताण्डवमूलभूतायां प्रमाणपद्धत्यां शब्दप्रकरणभागः

# आगमलक्षणम्

(१) निर्दोषः शब्दः आगमः । निरभिधेयत्वेनान्वयाभावेन वाऽबोधकत्वं, विपरीतबोधकत्वं, ज्ञातज्ञापकत्वं, अप्रयोजनत्वं, अनभिमतप्रयोजनत्वं, अशक्यसाधनप्रतिपादनं, लघूपाये सति गुरुपायोपदेशनमित्यादिदोषरहितः शब्दः आगमः । निर्दोषं वाक्य-मिति वा ।

## पद-वाक्य-आकाङ्क्षा-योग्यता-सन्निधिलक्षणानि

(२) विभक्त्यन्ता वर्णाः पदम् । आकाङ्क्षासन्निधियोग्यतावतां पदानां समूहो वाक्यम् । आकाङ्क्षा जिज्ञासा । सा चेतनधर्मः । तद्विषयत्वादर्थाः साकाङ्क्षाः । तत्प्रतिपादकत्वात्पदान्यपि । सन्निधिरविलम्बेनोच्चरितत्वं पदधर्म एव । प्रतीतान्वयस्य प्रमाण-विरोधाभावो योग्यता पदार्थधर्मः । तद्वाचकत्वात्पदान्यपि योग्यतावन्तीत्युच्यन्ते । तत्र पदत्वेन निरभिधेयत्वस्य, आकाङ्क्षा-सन्निधिभ्यामन्वयाभावस्य, योग्यतया विपरीतबोधकत्वस्य च निरासे सत्यशेषदोषनिरासार्थं निर्दोषग्रहणम् ।

(३) पूर्वपूर्ववर्णानुभवजनितसंस्कारसहितं वाच्यवाचकभाव-सम्बन्धग्रहणसंस्कारानुगृहीतम् अन्त्यवर्णसन्निकृष्टं श्रोत्रमनेकेष्वपि वर्णेष्वेकां पदबुद्धिं जनयति । तथा पूर्वपूर्वपदानुभवजनित-संस्कारसहकृतमन्त्यपदविषयं श्रोत्रमनेकेषु पदेष्वेकां वाक्यबुद्धि-माकाङ्क्षाद्यनुसारेण जनयति । तेन वर्णानां पदानां च सहानव-स्थितप्रतीतीनामपि समुदायो युज्यते ।

* * * *

## ।। अथ प्रमाणपद्धत्याम् आगमपरिच्छेदः ।।

## ॥ ಅಥ ಪ್ರಮಾಣಪದ್ಧತ್ಯಾಮಾಗಮನಿರೂಪಣಮ್ ॥

### ಪ್ರಮಾಣಪದ್ಧತಿಯಲ್ಲಿ ಹೇಳಿದ ಆಗಮಲಕ್ಷಣವೇನು ?

आगमलक्षणम्

प्रमाणपद्धतिः — निर्दोषः शब्द आगमः । [१] निरभिधेयत्वेना-न्वयाभावेन वाऽबोधकत्वं, विपरीतबोधकत्वं, ज्ञातज्ञापकत्वम्, अप्रयोजकत्वम्[२], अनभिमतप्रयोजकत्वम्, अशक्यसाधनप्रति-पादनं[३], लघूपाये सति गुरूपायोपदेशनम् इत्यादि दोषरहितः शब्द आगमः ।

ನಿರ್ದುಷ್ಟವಾದ ಶಬ್ದವು ಆಗಮ ಎಂದು ಕರೆಸಿಕೊಳ್ಳುತ್ತದೆ. ಅರ್ಥ ಇಲ್ಲದ ಕಾರಣದಿಂದ ಅಥವಾ ಅನ್ವಯ ಇಲ್ಲ ಎಂಬ ಕಾರಣದಿಂದ ಅಬೋಧಕತ್ವ ಎಂಬ ದೋಷ, ಹಾಗೂ ವಿಪರೀತಬೋಧಕತ್ವ, ಜ್ಞಾತಜ್ಞಾಪಕತ್ವ, ಅಪ್ರಯೋಜಕತ್ವ, ಅನಭಿಮತಪ್ರಯೋಜಕತ್ವ, ಅಶಕ್ಯ-ಸಾಧನಪ್ರತಿಪಾದನ ಹಾಗೂ ಸುಲಭವಾದ ಉಪಾಯವಿದ್ದಾಗ ಕಷ್ಟವಾದ ಉಪಾಯದ ಉಪದೇಶ ಮುಂತಾದ ದೋಷವಿಲ್ಲದ ಶಬ್ದವು ಆಗಮ ಎಂದು ಕರೆಸಿಕೊಳ್ಳುತ್ತದೆ.

(१)अनुमानस्य ये दोषास्तद्रहितः शब्द आगम इत्यन्यथाप्रतीतिवारणाय शब्द-दोषकथनपूर्वकं निर्दोषशब्दार्थमाह - निरभिधेयत्वेनेति । निर्गतमभिधेयं वाच्यं यस्य तन्निरभिधेयं तस्य भावस्तत्त्वं वाच्यरहितत्वमिति यावत् । तथा च शब्दानामवाचकत्वेन वाचकत्वेऽप्यन्योन्यमन्वयाभावेन वा पदार्थान्वया-बोधकत्वमित्यर्थः । विपरीतबोधकत्वं विपरीतस्य विद्यमानार्थस्य बोधकं ज्ञापकं तस्य भावस्तत्त्वमित्यर्थः । ज्ञापकत्वं ज्ञातमात्रज्ञापकत्वमित्यर्थः । अप्रयोजनत्वं प्रयोजनरहितत्वमित्यर्थः । अनभिमतप्रयोजनत्वमनभिलषितप्रयोजनत्वमित्यर्थः । अशक्यसाधनप्रतिपादनं कृत्यसाध्येष्टसाधनाभिधानमित्यर्थः । लघूपाये सति गुरूपायोपदेशनमनायाससाध्येष्टसाधने सति विद्यमाने बह्वायाससाध्येष्टोपाय-प्रतिपादनमित्यर्थः । अज्ञानसंशयऽविप्रलम्भमूलत्वमादिशब्दार्थः । इत्यादयो दोषाः प्रमाप्रतिबन्धकास्तद्रहित इत्यर्थः ।

ननु ज्ञातज्ञापकत्वादयो न शब्ददोषास्तत्सद्भावेऽपि शब्देन प्रमोत्पत्तिदर्शनादिति चेन्न । सति ज्ञातज्ञापकत्वादौ शब्देन स्वार्थप्रमित्यनुदयात् । तथा हि । न तावच्छब्दात्प्रतीत एवार्थः । यजमानः प्रस्तर इत्यादिपौरुषेयवाक्यप्रतीतार्थस्य च शब्दार्थतापातात् । मीमांसावैय्यर्थ्याच्च । किन्तु तात्पर्यगोचर एव । अत एव यत्परः शब्दः स एव शब्दार्थ इति प्रेक्षावतां प्रवादः । तत्तात्पर्यगोचरार्थ-स्त्वज्ञात एव भवति । मानविरोधस्यैव मानान्तरप्राप्तेरपि तत्पराविरोधित्वात् । अत एवानन्यलभ्यः शब्दार्थ इति विदुषां प्रवादः । यथोक्तं मायावाद-

खण्डनटीकायाम् । अज्ञातो हि विषयो भवति । अन्यथाऽतिप्रसङ्गादिति । उक्तं सुधायाम् । ब्रह्मैव वाक्यार्थं इति चेन्न । तस्य स्वप्रकाशत्वादिति । तथाच ज्ञातज्ञापकशब्दप्रतीतार्थस्य शब्दार्थत्वाभावादज्ञातज्ञापकशब्दस्या-ज्ञातविषयान्तराभावे सर्वथा निर्विषयत्वेन स्वार्थप्रमित्यजनकत्वान्न प्रामाण्यम् । गौरश्वः पुरुषो हस्तीत्यादिपदजातवज्ज्ञातज्ञापकवाक्यं दुष्टमप्रमां चेत्यभ्युपेयम् । ननु प्रमाकरणत्वाज्ज्ञातज्ञापकं वाक्यं प्रमाणमिति चेन्न । यजमानः प्रस्तर इत्यादिवाक्यस्य प्रमासाधनत्वात्प्रमाणमित्यापातात् । न्यायसाम्यात् । यजमानः प्रस्तर इत्यादिवाक्यं स्वार्थाप्रमित्यसाधन त्वात्प्रमाणमिति चेत् । तर्हि ज्ञातज्ञापकं वाक्यं स्वार्थप्रमित्यजनकत्वान्न प्रमाणमविशेषात् । तस्माद्यथा यजमानः प्रस्तर इत्यादिवाक्यस्य भ्रमसाधनत्वेऽपि स्वार्थगोचरप्रमासाधनत्वा-भावान्न प्रामाण्यम् । तथा ज्ञातज्ञापकवाक्यस्य प्रमितिसाधनत्वेऽपि स्वार्थप्रमितिसाधनत्वाभावान्न प्रामाण्यमिति । न च ज्ञातज्ञापकशब्दस्य दुष्टत्वे प्रमाणत्वाभावे च स्मृत्यनुवादयोर्नाप्रामाण्यमिति प्रमाणलक्षणवाक्यविरोधः । प्रामाण्यमनुवादस्य स्मृतेरपि च हीयत इत्यनुव्याख्यानविरोधश्च स्यात् । गृहीतग्राहिणोऽप्यनुवादस्य ताभ्यां प्रामाण्यकथनादिति वाच्यम् । विनाऽर्थस्य चानुवादस्यातथाविधेयनिषेधसंसर्गज्ञापकत्वादग्निर्हिमस्य भेषजमित्यादेश्चानुवादस्य अर्थान्तरपरत्वाच्चानुवादस्य प्रामाण्येऽपि स्मृतिवदज्ञातज्ञापकत्वेनाविरोधादिति ।

(२) एवं निष्प्रयोजनत्वमपि शब्ददोषः । तस्मिन्सति शब्देन स्वार्थप्रमित्य-नुदयात् । तथा हि । शब्दबोध्योऽर्थो हि शब्दार्थः शब्देन बोधनीयश्चार्थः । सागात्परम्परया चादुष्टसाधनरूप एव । न तूदासिनः शब्दस्य परार्थत्वात् । न हि निष्प्रयोजनवाक्यानि परार्थानि सम्भवन्ति । व्याहतेः । अत एवोक्तं सुधायाम् । शास्त्रस्य विषयप्रयोजनाभ्यां भाव्यम् । प्रमात्वात्परार्थत्वाच्चेति । तथा च परार्थेन शब्देन परप्रयोजनरूपज्ञानविषय एव बोधनार्थो न त्वन्यदिति स एव परोपदेशरूपशब्दविषयो भवत्यतो निष्प्रयोजनमसौ काकदन्ता इति वाक्यं निर्विषयतया स्वार्थप्रमित्यजनकत्वादाकाङ्क्षाद्यङ्गरहित वाक्यवदुष्टमप्रमाणं भवति ।

यद्यपि फलवत्त्वं न प्रामाण्यं यार्थार्थं प्रामाण्यमित्यङ्गीकारात् । नापि प्रामाण्यव्यापकम् । तृणादिज्ञाने प्रामाण्यसद्भावेऽपि निष्फलत्वदर्शनात् । तथा च कथं सफलत्वाभावः प्रामाण्याभावे तन्त्रम् । तथाऽपि वाक्यप्रामाण्यं सफलत्व-नियतमिति निष्प्रयोजनवाक्यमप्रमाणम् । तदुक्तं सुधायाम् । एतदुक्तं भवति । प्रामाण्यमात्रस्य प्रयोजनवत्त्वेन व्याप्त्यभावेऽपि तद्विशेषस्य वाक्यप्रामाण्य-स्यास्त्येव पदानामिष्टसाधन एव । गृहीतसङ्गतिकत्वात् । पदसङ्गतिग्रहण-संयोगस्यैव वाक्यस्य बोधकत्वात् । फलस्य विषयविशेषप्रामाण्यनिर्णयहेतुत्वात् च । अतो व्यापकाभावे व्याप्याभावप्रामाण्याभावात्प्रामाण्याभावोपपादनमुपपन्न-मेवेति ।

(३) एतेन ज्ञातज्ञापकं वाक्यमपि निष्प्रयोजनत्वेनाप्रमाणं चेत्युक्तं वेदितव्यम् । एवमभिमतं प्रयोजनं विरक्तं प्रति वाणिज्योपदेशरूपं वाक्यमपि निष्प्रयोजन-वाक्यतुल्यतया दुष्टमप्रमाणं चेति ज्ञातव्यम् ।

एवमशक्यसाधनमप्रतिपादकं ''चोलेषु तृषितं पङ्गुं प्रति सन्ति सुरसति शीतलानि जलानी''ति वाक्यमपि निष्प्रयोजनवाक्यतुल्यत्वात् दुष्टमप्रमाणम् । न हीष्टसाधनमपि तत्कृत्यसाध्यं तस्येष्टसाधनं भवति । अतस्तदपि निष्प्रयोजन-वाक्यवन्निर्विषयत्वाद्दुष्टमप्रमाणं चेति बोध्यम् । एवं सति लघूपाये गुरूपाये कस्याप्यपेगाभावात्प्रत्युत लघूपाय एव सर्वस्याप्यपेगासद्भावात्सति लघूपाये बुद्धिपूर्वकं तं परित्यज्य गुरूपायबोधकं परानभिलषितार्थबोधकत्वान्निष्प्रयो-जनवाक्यतुल्यतया भवति दुष्टम् अप्रमाणम् ।

किञ्च सति लघूपाये बुद्धिपूर्वकं तं परित्यज्य गुरूपायबोधकं विप्रलम्भक-वाक्यतुल्यत्वाद्भवति दुष्टमप्रमां चेति युक्तं ज्ञातज्ञापकत्वादीनां पदार्थभूत-शब्ददोषत्वमिति ।

राघवेन्द्रीयम्— क्रमप्राप्तमागमं लक्षयति ।। निर्दोष इति । शब्ददोषोक्तिपूर्वकं निर्दोष-

शब्दार्थं वदन् समग्रवाक्यार्थमाह ।। निरभिधेयत्वेनेत्यादिना । वाच्यहीनत्वेनेत्यर्थः । कचटतपानां जबगडदत्वादित्यादिशब्दे कुण्डमजाजिनं दश दाडिमानि षडपूषा इत्यादावन्वयाभावेनाबोधकत्वमित्यबोधकत्वमेव दोषः । तत्र चैतद्वयं हेतुरिति सूचितम् ।

ಕ್ರಮಪ್ರಾಪ್ತವಾದ ಆಗಮದ ಲಕ್ಷಣವನ್ನು ನಿರ್ದೋಷ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಶಬ್ದದೋಷವನ್ನು ಹೇಳುವ ಮುಖಾಂತರ ನಿರ್ದೋಷ ಎಂಬ ಶಬ್ದದ ಅರ್ಥವನ್ನು ಹೇಳುತ್ತಾ ಸಮಗ್ರವಾಕ್ಯದ ಅರ್ಥವನ್ನು ನಿರಭಿಧೇಯತ್ವೇನ ಮುಂತಾದ ವಾಕ್ಯದಿಂದ ಹೇಳುತ್ತಿದ್ದಾರೆ. ನಿರಭಿಧೇಯತ್ವ ಎಂಬುದಕ್ಕೆ ವಾಚ್ಯರಹಿತವಾದ ಎಂದರ್ಥ. ಕಚಟತಪಾನಾಂ ಜಬಗಡದತ್ವಾತ್ ಮುಂತಾದ ಶಬ್ದದಲ್ಲಿ, ಹಾಗೂ ಕುಂಡಮಜಾಜಿನಂ ದಶ ದಾಡಿಮಾನಿ ಷಡಪೂಪಾಃ ಮುಂತಾದ ವಾಕ್ಯಗಳಲ್ಲಿ ಅನ್ವಯ ಇಲ್ಲದಕಾರಣದಿಂದ ಅಬೋಧಕತ್ವವೇ ದೋಷವಾಗುತ್ತದೆ. ಅಬೋಧಕತ್ವದಲ್ಲಿ ಎರಡುಕಾರಣಗಳಿವೆ ಎಂದು ಸೂಚಿಸಿದ್ದಾರೆ.

**राघवेन्द्रीयम्**— विपरीतबोधकत्वं वक्तुरनाप्त्यादिनाऽविद्यमानार्थकबोधकत्वम् । ज्ञातज्ञापकत्वं ज्ञातमात्रज्ञापकत्वं वह्निरनुष्ण इत्यादिवाक्ये । 'काकस्य कति वा दन्ता' इत्यादाविवाप्रयोजकत्वम् । विरक्तस्य वाणिज्योपदेश इवानभिमतप्रयोजनकत्वम् । हिमाचले सञ्जीवन्युपदेश इवाशक्यसाधनप्रतिपादनम् । पिपासुं दाक्षिणात्यं प्रति गङ्गातीरे कूपखननोपदेश इव लघूपाये गुरूपायोपदेशनम् । आदिपदेनातिव्यवहितान्वयित्वातिदुर्बोधकपदवाक्योपेतत्वादिग्रहः ।

೧. ಅನಾಪ್ತ ಮುಂತಾದ ಕಾರಣಗಳಿಂದ ಇಲ್ಲದೇ ಇರುವ ಅರ್ಥವನ್ನು ವಕ್ತೃವು ತಿಳಿಸುವ ವಾಕ್ಯವು ವಿಪರೀತಬೋಧಕ ಎಂದು ಕರೆಸಿಕೊಳ್ಳುತ್ತದೆ.

೨. ಮೊದಲು ತಿಳಿದಿರುವ ಅರ್ಥವನ್ನೇ ಮತ್ತೆ ಅರ್ಥವನ್ನು ತಿಳಿಸುವ ವಾಕ್ಯವು ಜ್ಞಾತಜ್ಞಾಪಕ ಎಂದು ಕರೆಸಿಕೊಳ್ಳುತ್ತದೆ. ಬೆಂಕಿಯು ಬಿಸಿಯಾಗಿದೆ ಎಂಬ ವಾಕ್ಯವು ಇದಕ್ಕೆ ಉದಾಹರಣೆ.

೩. ಕಾಗೆಗೆ ಎಷ್ಟು ಹಲ್ಲುಗಳಿವೆ ಮುಂತಾದ ವಾಕಗಳಲ್ಲಿ ಪ್ರಯೋಜನವಿಲ್ಲದೇ ಇರುವುದು ಕಂಡಿದೆ.

೪. ವಿರಕ್ತನಾದ ಸನ್ಯಾಸಿಗೆ ವಾಣಿಜ್ಯದ ಉಪದೇಶವು ಅವನಿಗೆ ಅಭಿಮತವಾದ ಪ್ರಯೋಜನವನ್ನು ಕೊಡದೇ ಇರುವ ವಾಕ್ಯವಾಗಿದೆ.

೫. ಸತ್ತವ್ಯಕ್ತಿಯನ್ನು ಬದುಕಿಸಲು ಹಿಮಾಲಯದಲ್ಲಿರುವ ಸಂಜೀವನೀಮೂಲಿಕೆಯನ್ನು ತರುವ ಉಪದೇಶವು ಅಶಕ್ಯಸಾಧನಪ್ರತಿಪಾದಕವಾಕ್ಯ ಎಂದು ಕರೆಸಿಕೊಳ್ಳುತ್ತದೆ.

೬. ಬಾಯಾರಿದ ದಕ್ಷಿಣದಿಕ್ಕಿನಲ್ಲಿರುವ ವ್ಯಕ್ತಿಗೆ ಗಂಗಾತೀರದಲ್ಲಿ ಭಾವಿಯನ್ನು ತೋಡಿ ನೀರನ್ನು ಕುಡಿ ಎಂದು ಉಪದೇಶಿಸುವುದು ಸುಲಭವಾದ ಉಪಾಯವಿದ್ದಾಗ ಗುರೂಪಾಯೋಪದೇಶ ಎಂದು ಕರೆಸಿ-ಕೊಳ್ಳುತ್ತದೆ. ಆದಿಪದದಿಂದ ಅತಿವ್ಯವಹಿತತ್ವ, ಅತಿದುರ್ಬೋಧಕಪದವಾಕ್ಯೋಪೇತತ್ವ ಮುಂತಾದವು-ಗಳನ್ನು ಗ್ರಹಣ ಮಾಡಬೇಕು.

**भावचन्द्रिका**— क्रमप्राप्तं शब्दं लक्षयति- निर्दोषेति ।। शब्दानामबोधकत्वं द्विविधं पदार्थाबोधकत्वं संसर्गाबोधकत्वं चेति । तत्राऽद्यं निरभिधेयत्वेन । निर्गतमभिधेयं वाच्यं यस्येति व्युत्पत्त्याऽ-वाचकत्वमेव निरभिधेयत्वं तेन भवति । द्वितीयं त्वर्थानां कर्तृकर्माभावाद्यन्वयाभावप्रयुक्तमिति भावेनाऽह- निरभिधेयत्वेनेति ।। विपरीतबोधकत्वं तु विपरीतान्वयबोधकत्वम् । तत्तु वक्तुर्विपरीतज्ञानाधीनमिति ज्ञेयम् । ज्ञातज्ञापकत्वमिति ।। ज्ञातमात्रज्ञापकत्वमित्यर्थः । तेन विशेषविधानार्थं चोक्तार्थानुवादरूपशब्दे नाप्रामाण्यप्रसङ्गः । अप्रयोजनत्वमिति ।। उद्देश्यप्रयोजनरहितत्वमित्यर्थः । स्वस्य परस्य वा प्रयोजनोद्देशं विना वाक्यप्रयोगानुपपत्तेः प्रयोजनं विना प्रयुक्त-वाक्यार्थरूपसंसर्गस्य क्वचिदसङ्गततया क्वचिन्निषेध्यतयाऽवगमाच्चाप्रयोजनत्वं वाक्याप्रामाण्यापादकतया दोष एवेति भावः । अनभिमतप्रयोजनकत्वं चेति ।। बुभुक्षुं जलं ग्राह्यमिति प्रयुक्तवाक्ये जलगतग्राह्यत्वसंसर्गस्य निषेधशिरस्कत्वेनावगमाद् यत्प्रतीत्युद्देशेन वाक्यं प्रवृत्तं तस्याः जलग्राह्यत्वप्रतीतेरनुदयेनानभिमत-प्रयोजनवाक्यस्य प्रवृत्त्यजनकत्वादनभिमतप्रयोजनकत्वं शब्ददोष इति भावः । अशक्येति ।। कृत्यसाध्यं यदिष्टसाधनं तस्य प्रतिपादनं, तत्प्रतिपादकमिति यावत् । कृषिरूपेष्टसाधनबुभुत्सया प्रष्टारं दाक्षिणात्यं प्रति कुरुदेशे अनड्वाहो बहवः सन्तीति प्रयुक्तवाक्ये उद्देश्यायाः कृतिसाध्येष्टसाधनप्रतीतेरनुदयाद् अशक्यसाधनप्रतिपादकत्वं शब्ददोष इति भावः । लघूपाये सति

गुरूपायोपदर्शनमिति ।। अल्पायाससाध्येष्टसाधने सत्यपि बह्वायाससाध्येष्टसाधनप्रतिपादकत्व-मित्यर्थः । तथा च बह्वायाससाध्येष्टसाधनप्रतिपादकवाक्याद् उद्देश्याया इष्टसाधनत्वप्रतीतेरनुदयात् गुरूपायप्रदर्शकत्वं वाक्यदोष इति भाव. । लघूपायाभावे गुरूपायेऽप्युद्देश्यायाः इष्ट-साधनत्वप्रतीतेरुदयाद् अप्रामाण्याभावेन लघूपाये सतीत्युक्तम् । अज्ञानसंशयादि-मूलकत्वमादिशब्दार्थः ।

ननु ज्ञातज्ञापकत्वं कथं शब्ददोषः ? सत्यपि तस्मिन् शाब्दप्रमोदयादिति चेन्न । वाक्यतात्पर्यार्थगोचरप्रमाजनकत्वेनैव वाक्य-प्रामाण्यस्य विवक्षितत्वात् । वाक्यतात्पर्यं तु मानान्तरविरुद्धार्थ इव मानान्तरसिद्धेऽप्ययुक्तम् । तथा च ज्ञातज्ञापकत्वमात्रस्थले वाक्यतात्पर्यविषयभूतार्थस्यैवाभावात् उद्देश्यप्रमितिजनकत्वाभावेन ज्ञातज्ञापकत्वमपि शब्ददोष एवेति ज्ञेयम् । अत एव 'यजमानः प्रस्तरः' इति वाक्यानां प्रतीतार्थबाधेऽपि तात्पर्यार्थस्य निर्बाधादेव प्रामाण्यमिति ।

**विजयीन्द्रतीर्थीयम्**— आगमलक्षणमाह ।। निर्दोष इति । प्रमाप्रतिबन्धकदोषरहित इत्यर्थः । तान्त्रिकव्यवहारोपयोगिलक्षणमाह ।। निरभिधेयत्वेनेति । गवादिपदे गकारदे-रागमत्वव्यवहाराभावादभिधेयराहित्याभावः । अनासन्नेऽनाकाङ्क्षे च तदभावान्वयबोधयोग्यत्वा-भावः । अयोग्ये तदभावाद्विपरीतबोधकत्वाभावः । पुनरुक्ते तदभावादज्ञातज्ञापकत्वाभावः ।

ಆಗಮದ ಲಕ್ಷಣವನ್ನು ನಿರ್ದೋಷ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಪ್ರಮಾಪ್ರತಿಬಂಧಕವಾದ ದೋಷರಹಿತವಾದ ಎಂದರ್ಥ. ತಾಂತ್ರಿಕವ್ಯವಹಾರಕ್ಕೆ ಉಪಯೋಗಿಯಾದ ಲಕ್ಷಣವನ್ನು ನಿರಭಿಧೇ-ಯತ್ವೇನ ಎಂಬುದಾಗಿ ಹೇಳುತ್ತಿದ್ದಾರೆ. ಗೋ ಮುಂತಾದ ಪದಗಳಲ್ಲಿ ಗಕಾರ ಮುಂತಾದವುಗಳಿಗೆ ಆಗಮ ಎಂಬ ವ್ಯವಹಾರ ಇಲ್ಲದಿರುವುದರಿಂದ ಅಭಿಧೇಯರಾಹಿತ್ಯವು ಇರುವುದಿಲ್ಲ. ಅನಾಸನ್ನ ಹಾಗೂ ಆಕಾಂಕ್ಷಾರಹಿತವಾಕ್ಯಗಳಲ್ಲಿ ಆಸತ್ತಿ ಹಾಗೂ ಆಕಾಂಕ್ಷಾಗಳು ಇಲ್ಲದ ಕಾರಣ ಅನ್ವಯಬೋಧಯೋಗ್ಯತ್ವವು ಇರುವುದಿಲ್ಲ. ಅಯೋಗ್ಯವಾಕ್ಯದಲ್ಲಿ ಆಸತ್ತ್ಯಾದಿಗಳು ಇಲ್ಲದಿರುವುದರಿಂದ ವಿಪರೀತಬೋಧಕತ್ವವು ಇರುವುದಿಲ್ಲ. ಪುನರುಕ್ತವಾಕ್ಯದಲ್ಲೂ ಸಹ ಇದರಂತೆಯೇ ಅಜ್ಞಾತಜ್ಞಾಪಕತ್ವವು ಇರುವುದಿಲ್ಲ.

**विजयीन्द्रतीर्थीयम्**— काकदन्तादिवाक्ये तदभावादप्रयोजकत्वाभावः । द्रव्यार्थिनं प्रति

विद्याद्युपदेशे तदभावादभिमतप्रयोजनकत्वाभावः । तक्षचूडामण्यानयनोपदेशे तदभावादशक्य-साधनप्रतिपादकत्वाभावः । फलतौल्ये समीपस्थजलपानादि विहाय दूरस्थतदुपदेशे तदभावादसम्भवल्लघूपाये गुरूपायोपदेशत्वाभावः । आदिशब्देनातात्पर्यविषयकत्वाभावश्चोक्तः ।

ಕಾಕದಂತಾದಿವಾಕ್ಯಗಳಲ್ಲಿ ಆಗಮ ಎಂಬ ವ್ಯವಹಾರ ಇಲ್ಲದಿರುವುದರಿಂದ ಅಪ್ರಯೋಜಕತ್ವವು ಇಲ್ಲ. ದ್ರವ್ಯಾರ್ಥಿಯನ್ನು ಕುರಿತು ವಿದ್ಯಾದಿಗಳ ಉಪದೇಶಕವಾಕ್ಯಗಳಲ್ಲಿಯೂ ಆಗಮ ಎಂಬ ವ್ಯವಹಾರ ಇಲ್ಲದಿರುವುದರಿಂದ ಅಭಿಮತಪ್ರಯೋಜಕತ್ವವು ಇಲ್ಲ. ತಕ್ಷಚೂಡಾಮಣಿಯನ್ನು ತರುವ ಉಪದೇಶವಾಕ್ಯದಲ್ಲಿಯೂ ಇದರಂತೆಯೇ ಅಶಕ್ಯಸಾಧನಪ್ರತಿಪಾದನತ್ವವು ಇಲ್ಲ. ಬಾಯಾರಿದಾಗ ಸಮೀಪದಲ್ಲಿ ಇರುವ ನೀರು ಕುಡಿಯುವುದನ್ನು ಹೇಳುವುದರ ಹೊರತಾಗಿ ದೂರದಲ್ಲಿರುವ ನೀರನ್ನು ತರುವ ಉಪದೇಶವಾಕ್ಯದಲ್ಲಿಯೂ ಆಗಮ ಎಂಬ ವ್ಯವಹಾರ ಇಲ್ಲದಿರುವುದರಿಂದ ಲಘೂಪಾಯೇ ಸತಿ ಗುರೂಪಾಯೋಪದೇಶತ್ವವು ಇರುವುದಿಲ್ಲ. ಆದಿಶಬ್ದದಿಂದ ತಾತ್ಪರ್ಯವಿಷಯಕತ್ವ ಇಲ್ಲದೇ ಇರುವ ವಾಕ್ಯವನ್ನೂ ಗ್ರಹಣ ಮಾಡಬೇಕು.

प्रमाणपद्धतिः — **निर्दोषं वाक्यमिति वा**(१) ।

ನಿರ್ದೋಷವಾದ ವಾಕ್ಯ ಎಂಬುದೂ ಸಹ ಆಗಮದ ಮತ್ತೊಂದು ಲಕ್ಷಣವಾಗಿದೆ.

(१) ''आगमोऽदुष्टवाक्यं चे''ति ब्रह्मतर्कानुसारेण लक्षणान्तरमाह ।। निर्दोषं वाक्यमिति वेति । ननु निर्दोषः शब्द आगम इत्यत्र शब्दपदं वाक्यपरं न वा । नाद्यः । लक्षणद्वयाभावेन वाशब्दानुपपत्तेः । न द्वितीयः । प्रमाणलक्षणटीकायां निर्दोषः शब्द आगम इति लक्षणवाक्ये मूलस्थशब्दपदस्य शब्दो वाक्यात्मेत्यनेन वाक्यपरत्वकथनवैय्यर्थ्यादिति चेन्न । द्वितीयपक्षाङ्गीकारात् । न च तत्पक्षोक्त-दोषप्राप्तिः । तत्रापि निर्दोषशब्दस्यैवागमलक्षणत्वसम्भवेऽपि भगवत्पादैः –

'आनन्दतीर्थमुनिना ब्रह्मतर्कानुसारतः ।
मानलक्षणमित्युक्तं सङ्क्षेपाद्ब्रह्मसिद्धये'

इत्यनेन स्वग्रन्थस्य ब्रह्मतर्कानुसारित्वकथनात् । ब्रह्मतर्कानुसारित्वज्ञापनाय ''निर्दोषः शब्द आगम'' इत्यागमलक्षणस्थशब्दपदस्य शब्दो वाक्यात्मेत्यनेन वाक्यपरत्वकथनसम्भवेनावैय्यर्थ्यात् । पद्धतौ त्वावश्यकनिर्दोषत्वविशेषणादेव सकलागमाभासव्यवच्छेदसम्भवात्प्रमाणलक्षणोक्त- यथाश्रुतागमलक्षणवाक्यानु-सारेणैकं लक्षणमभिधाय ब्रह्मतर्कानुसारेणापि लक्षणान्तरमुक्तमिति न कश्चित्क्षुद्रोपद्रवः।

यद्वा प्रमाणलक्षणोक्तेऽप्यागमलक्षणवाक्ये शब्दपदं यथाश्रुतमेवास्तु । न चैवं सति शब्दो वाक्यात्मेति तट्टीकावचनवैय्यर्थ्यापत्तिः । वाक्यत्वस्य लक्षणशरीरा-प्रवेशेऽप्यागमरूपी शब्दो वाक्यात्मक एव न त्वेकपदरूप इति वस्तुस्थिति-प्रदर्शनार्थम् । तद्वाक्यप्रवृत्त्युपपत्तेर्वैय्यर्थ्याभावात् । अत एव प्रमाणलक्षणटीकायां शब्दो वाक्यात्मेत्युक्तव्यावृत्तिकथनावसरे निर्दोष इत्यागमाभासनिवृत्तिरित्यनेन निर्दोषत्वविशेषणादेव सकलागमाभासव्यावृत्तिरुक्ता । शब्द इति प्रत्यक्षस्य व्युदास इत्यनेन शब्दत्वरूपविशेषणादेव व्यावृत्तिरभिहिता । अन्यथा वाक्यमिति प्रत्यक्षस्य व्युदास इत्याद्यवक्ष्यत् । न चैवं सति प्रमाणलक्षणोक्तागमलक्षणस्य ब्रह्मतर्कानुसारित्वं न स्यादिति वाच्यम् । वाक्यत्वस्य लक्षणशरीरप्रवेशेऽपि ब्रह्मतर्कोक्तवाक्यात्मैव शब्द आगम इत्यभ्युपगमेन ब्रह्मतर्कानुनारित्वसिद्धेरिति ।

**राघवेन्द्रीयम्—** प्रमाणलक्षणोक्त्यनुरोधेनैकं लक्षणमुक्त्वाऽऽगमोऽदुष्टवाक्यं चेति तत्त्व-निर्णयोक्तब्रह्मतर्कवाक्यानुसारेण लक्षणान्तरं पदवाक्यादिस्वरूपप्रकाशनायाह ।। निर्दोषवाक्य-मिति वेति । आगम इत्यनुषङ्गः ।

ಪ್ರಮಾಣಲಕ್ಷಣಕ್ಕೆ ಅನುಸಾರವಾಗಿ ಒಂದು ಲಕ್ಷಣವನ್ನು ಹೇಳಿ ಆಗಮಃ ಅದುಷ್ಟವಾಕ್ಯಂ ಚ ಎಂಬ ತತ್ವನಿರ್ಣಯದಲ್ಲಿ ಹೇಳಿದ ಬ್ರಹ್ಮತರ್ಕವಾಕ್ಯಕ್ಕೆ ಅನುಸಾರವಾಗಿ ಮತ್ತೊಂದು ಲಕ್ಷಣವನ್ನು ಪದ, ವಾಕ್ಯ ಮುಂತಾದವುಗಳ ಸ್ವರೂಪವನ್ನು ತೋರಿಸುವುದಕ್ಕೋಸ್ಕರ ನಿರ್ದೋಷವಾಕ್ಯಂ ವಾ ಎಂದು ಎರಡನೆಯ ಲಕ್ಷಣವನ್ನು ಹೇಳುತ್ತಿದ್ದಾರೆ. ಆಗಮಃ ಎಂದು ಇಲ್ಲಿ ಅನುಷಂಗವನ್ನು ಮಾಡಿಕೊಳ್ಳಬೇಕು.

विद्याद्युपदेशे तदभावादभिमतप्रयोजनकत्वाभावः । तक्षचूडामण्यानयनोपदेशे तदभावादशक्य-साधनप्रतिपादकत्वाभावः । फलतौल्ये समीपस्थजलपानादि विहाय दूरस्थतदुपदेशे तदभावादसम्भवल्लघूपाये गुरूपायोपदेशत्वाभावः । आदिशब्देनातात्पर्यविषयकत्वाभावश्चोक्तः ।

ಕಾಕದಂತಾದಿವಾಕ್ಯಗಳಲ್ಲಿ ಆಗಮ ಎಂಬ ವ್ಯವಹಾರ ಇಲ್ಲದಿರುವುದರಿಂದ ಅಪ್ರಯೋಜಕತ್ವವು ಇಲ್ಲ. ದ್ರವ್ಯಾರ್ಥಿಯನ್ನು ಕುರಿತು ವಿದ್ಯಾದಿಗಳ ಉಪದೇಶಕವಾಕ್ಯಗಳಲ್ಲಿಯೂ ಆಗಮ ಎಂಬ ವ್ಯವಹಾರ ಇಲ್ಲದಿರುವುದರಿಂದ ಅಭಿಮತಪ್ರಯೋಜಕತ್ವವು ಇಲ್ಲ. ತಕ್ಷಚೂಡಾಮಣಿಯನ್ನು ತರುವ ಉಪದೇಶವಾಕ್ಯದಲ್ಲಿಯೂ ಇದರಂತೆಯೇ ಅಶಕ್ಯಸಾಧನಪ್ರತಿಪಾದನತ್ವವು ಇಲ್ಲ. ಬಾಯಾರಿದಾಗ ಸಮೀಪದಲ್ಲಿ ಇರುವ ನೀರು ಕುಡಿಯುವುದನ್ನು ಹೇಳುವುದರ ಹೊರತಾಗಿ ದೂರದಲ್ಲಿರುವ ನೀರನ್ನು ತರುವ ಉಪದೇಶವಾಕ್ಯದಲ್ಲಿಯೂ ಆಗಮ ಎಂಬ ವ್ಯವಹಾರ ಇಲ್ಲದಿರುವುದರಿಂದ ಲಘೂಪಾಯೇ ಸತಿ ಗುರೂಪಾಯೋಪದೇಶತ್ವವು ಇರುವುದಿಲ್ಲ. ಆದಿಶಬ್ದದಿಂದ ತಾತ್ಪರ್ಯವಿಷಯಕತ್ವ ಇಲ್ಲದೇ ಇರುವ ವಾಕ್ಯವನ್ನೂ ಗ್ರಹಣ ಮಾಡಬೇಕು.

प्रमाणपद्धतिः — **निर्दोषं वाक्यमिति वा**(१) ।

ನಿರ್ದೋಷವಾದ ವಾಕ್ಯ ಎಂಬುದೂ ಸಹ ಆಗಮದ ಮತ್ತೊಂದು ಲಕ್ಷಣವಾಗಿದೆ.

(१) ''आगमोऽदुष्टवाक्यं चे''ति ब्रह्मतर्कानुसारेण लक्षणान्तरमाह ।। निर्दोषं वाक्यमिति वेति । ननु निर्दोषः शब्द आगम इत्यत्र शब्दपदं वाक्यपरं न वा । नाद्यः । लक्षणद्वयाभावेन वाशब्दानुपपत्तेः । न द्वितीयः । प्रमाणलक्षणटीकायां निर्दोषः शब्द आगम इति लक्षणवाक्ये मूलस्थशब्दपदस्य शब्दो वाक्यात्मेत्यनेन वाक्यपरत्वकथनवैयर्थ्यादिति चेन्न । द्वितीयपक्षाङ्गीकारात् । न च तत्पक्षोक्त-दोषप्राप्तिः । तत्रापि निर्दोषशब्दस्यैवागमलक्षणत्वसम्भवेऽपि भगवत्पादैः –

'आनन्दतीर्थमुनिना ब्रह्मतर्कानुसारतः ।
मानलक्षणमित्युक्तं सङ्क्षेपाद्ब्रह्मसिद्धये'

इत्यनेन स्वग्रन्थस्य ब्रह्मतर्कानुसारित्वकथनात् । ब्रह्मतर्कानुसारित्वज्ञापनाय "निर्दोषः शब्द आगम" इत्यागमलक्षणस्थशब्दपदस्य शब्दो वाक्यात्मेत्यनेन वाक्यपरत्वकथनसम्भवेनावैय्यर्थ्यात् । पद्धतौ त्वावश्यकनिर्दोषत्वविशेषणादेव सकलागमाभासव्यवच्छेदसम्भवात्प्रमाणलक्षणोक्त- यथाश्रुतागमलक्षणवाक्यानु-सारेणैकं लक्षणमभिधाय ब्रह्मतर्कानुसारेणापि लक्षणान्तरमुक्तमिति न कश्चित्क्षुद्रोपद्रवः।

यद्वा प्रमाणलक्षणोक्तेऽप्यागमलक्षणवाक्ये शब्दपदं यथाश्रुतमेवास्तु । न चैवं सति शब्दो वाक्यात्मेति तट्टीकावचनवैय्यर्थ्यापत्तिः । वाक्यत्वस्य लक्षणशरीरा-प्रवेशेऽप्यागमरूपी शब्दो वाक्यात्मक एव न त्वेकपदरूप इति वस्तुस्थिति-प्रदर्शनार्थम् । तद्वाक्यप्रवृत्त्युपपत्तेर्वैय्यर्थ्याभावात् । अत एव प्रमाणलक्षणटीकायां शब्दो वाक्यात्मेत्युक्तव्यावृत्तिकथनावसरे निर्दोष इत्यागमाभासनिवृत्तिरित्यनेन निर्दोषत्वविशेषणादेव सकलागमाभासव्यावृत्तिरुक्ता । शब्द इति प्रत्यक्षस्य व्युदास इत्यनेन शब्दत्वरूपविशेषणादेव व्यावृत्तिरभिहिता । अन्यथा वाक्यमिति प्रत्यक्षस्य व्युदास इत्याद्यवक्ष्यत् । न चैवं सति प्रमाणलक्षणोक्तागमलक्षणस्य ब्रह्मतर्कानुसारित्वं न स्यादिति वाच्यम् । वाक्यत्वस्य लक्षणशरीरप्रवेशेऽपि ब्रह्मतर्कोक्तवाक्यात्मैव शब्द आगम इत्यभ्युपगमेन ब्रह्मतर्कानुनारित्वसिद्धेरिति ।

**राघवेन्द्रीयम्**— प्रमाणलक्षणोक्त्यनुरोधेनैकं लक्षणमुक्त्वाऽऽगमोऽदुष्टवाक्यं चेति तत्त्व-निर्णयोक्तब्रह्मतर्कवाक्यानुसारेण लक्षणान्तरं पदवाक्यादिस्वरूपप्रकाशनायाह ।। निर्दोषवाक्य-मिति वेति । आगम इत्यनुषङ्गः ।

ಪ್ರಮಾಣಲಕ್ಷಣಕ್ಕೆ ಅನುಸಾರವಾಗಿ ಒಂದು ಲಕ್ಷಣವನ್ನು ಹೇಳಿ ಆಗಮಃ ಅದುಷ್ಟವಾಕ್ಯಂ ಚ ಎಂಬ ತತ್ತ್ವನಿರ್ಣಯದಲ್ಲಿ ಹೇಳಿದ ಬ್ರಹ್ಮತರ್ಕವಾಕ್ಯಕ್ಕೆ ಅನುಸಾರವಾಗಿ ಮತ್ತೊಂದು ಲಕ್ಷಣವನ್ನು ಪದ, ವಾಕ್ಯ ಮುಂತಾದವುಗಳ ಸ್ವರೂಪವನ್ನು ತೋರಿಸುವುದಕ್ಕೋಸ್ಕರ ನಿರ್ದೋಷವಾಕ್ಯಂ ವಾ ಎಂದು ಎರಡನೆಯ ಲಕ್ಷಣವನ್ನು ಹೇಳುತ್ತಿದ್ದಾರೆ. ಆಗಮಃ ಎಂದು ಇಲ್ಲಿ ಅನುಷಂಗವನ್ನು ಮಾಡಿಕೊಳ್ಳಬೇಕು.

**भावचन्द्रिका**—निर्दोषमिति ।। ननु 'निर्दोषः शब्द आगमः' इत्यत्र शब्दपदं वाक्यपरं न वा ? नाऽद्यः । निर्दोषं वाक्यमिति वेति वाशब्दानुपपत्तेः । न द्वितीयः । प्रमाणलक्षणटीकायां 'निर्दोषः शब्द आगमः' इत्यागमलक्षणवाक्ये शब्दो वाक्यात्मेति व्याख्यानविरोधादिति चेन्न । द्वितीयपक्षाङ्गीकारात् । न च तत्पक्षोक्तदोषः । र्दोषशब्दत्वस्यैव आगमलक्षणत्वसम्भवेऽपि भगवत्पादैः–

**'आनन्दतीर्थमुनिना ब्रह्मतर्कोक्तिमार्गतः ।**
**मानलक्षणमित्युक्तं सङ्क्षेपाद् ब्रह्मसिद्धये'**

इति स्वग्रन्थस्य ब्रह्मतर्कानुसारित्वकथनाद् ब्रह्मतर्के च,

'अदुष्टमिन्द्रियं त्वक्षं तर्कोऽदुष्टस्तथाऽनुमा । आगमोऽदुष्टवाक्यं च' इत्यागमलक्षणकथनेन तथा व्याख्यानकथनसम्भवात् । पद्धतौ त्वावश्यकनिर्दोषत्वविशेषणादेव सकलागमा-भासव्यवच्छेदसम्भवात् प्रमाणलक्षणोक्तयथाश्रुतागमलक्षणवाक्यानुसारेण लक्षणमभिधाय, ब्रह्मतर्कवाक्यानुसारेण लक्षणान्तरमुक्तमित्यदोषः । अत्र शब्दग्रहणं प्रत्यक्षादिव्युदासार्थम् ।

## पदलक्षणम्

### ಪ್ರಮಾಣಪದ್ಧತಿಯಲ್ಲಿ ಹೇಳಿದ ಪದ ಲಕ್ಷಣವೇನು?

प्रमाणपद्धतिः— **विभक्त्यन्ता वर्णाः पदम् ।**

ವಿಭಕ್ತಿಯು ಕಡೆಯಲ್ಲಿರುವ ವರ್ಣಗಳು ಪದ ಎಂದು ಕರೆಸಿಕೊಳ್ಳುತ್ತವೆ.

राघवेन्द्रीयम्— वाक्यस्वरूपं विवक्षुस्तदुपयुक्तमाह ।। विभक्त्यन्ता इति । वर्णा इति बहुवचनमतन्त्रम् । तेन अ इति ब्रह्म कश्छन्दसां योगमित्यादौ अ क इत्यादेः पदत्वसिद्धिः । विभक्त्यन्ता इति व्यधिकरणबहुव्रीहिः ।

ವಾಕ್ಯದ ಸ್ವರೂಪವನ್ನು ಹೇಳಲು ಅದಕ್ಕೆ ಉಪಯುಕ್ತವಾದ ಅಂಶವನ್ನು ವಿಭಕ್ತ್ಯಂತಾ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ವರ್ಣಾಃ ಎಂಬಲ್ಲಿ ಬಹುವಚನವು ಅತಂತ್ರವಾಗಿದೆ. ಆದ್ದರಿಂದ ಅ ಇತಿ ಬ್ರಹ್ಮ, ಕಶ್ಛಂದಸಾಂ ಯೋಗಮಾವೇದ ಧೀರಃ ಮುಂತಾದ ವಾಕ್ಯದಲ್ಲಿ ಅ, ಕ ಮುಂತಾದವುಗಳಗೆ ಪದತ್ವವು ಸಿದ್ಧಿಸುತ್ತದೆ. ವಿಭಕ್ತ್ಯಂತಾಃ ಎಂಬಲ್ಲಿ ವ್ಯಧಿಕರಣಬಹುವ್ರೀಹಿಸಮಾಸವು.

**राघवेन्द्रीयम्**—विभक्तिर्नाम सुप्तिङौ । विभक्तिश्च सुप्तिङौ विभक्तिसङ्ज्ञौ भवत इति वैयाकरणोक्तेः । सुप्तिङन्तं पदमिति पाणिन्युक्तेः । तदनुरोधाद्विभक्त्यन्ता इत्युक्तम् । विभक्त्यन्तत्वस्य वर्णाव्यभिचारेऽपि वर्णा इत्युक्तिः स्पष्टार्थं वा । स्फोटनिरासाय वेति ज्ञेयम् ।

ವಿಭಕ್ತಿ ಎಂದರೆ ಸುಪ್ ಮತ್ತು ತಿಙ್‌ಗಳು. 'ವಿಭಕ್ತಿಶ್ಚ ' ಎಂಬ ಸೂತ್ರದವೃತ್ತಿಯಲ್ಲಿ ' ಸುಪ್ ಮತ್ತು ತಿಙ್ ಪ್ರತ್ಯಯಗಳು ವಿಭಕ್ತಿಸಂಜ್ಞೆಯನ್ನು ಹೊಂದುತ್ತವೆ' ಎಂದು ವೈಯಾಕರಣರು ಹೇಳಿದ್ದಾರೆ. ಪಾಣಿನಿಯೂ ಸಹ 'ಸುಪ್ತಿಙಂತಂ ಪದಮ್' ಎಂದು ಹೇಳಿದ್ದಾನೆ. ಅದಕ್ಕನುಸಾರವಾಗಿ ವಿಭಕ್ತ್ಯಂತಾಃ ಎಂದು ಹೇಳಲಾಗಿದೆ. ವಿಭಕ್ತ್ಯಂತತ್ವವು ವರ್ಣಗಳಲ್ಲಿ ವ್ಯಭಿಚರಿತವಾಗದಿದ್ದರೂ ಸಹ ವರ್ಣಾಃ ಎಂದು ಹೇಳಿರುವುದು ಸ್ಪಷ್ಟತೆಗಾಗಿ ಅಥವಾ ವರ್ಣಸ್ಫೋಟನಿರಾಸಕ್ಕಾಗಿ ಎಂದು ತಿಳಿಯಬೇಕು.

**राघवेन्द्रीयम्**—केचित्तु देवदत्त इत्यादावन्तिमवर्णस्य विभक्त्यन्ततया पूर्वेषां तदभावाद्विभक्त्यन्तवर्णोपेतं पदमित्यर्थलाभाय वणा इत्युक्तिरित्याहुः । विभक्त्यन्तं पदमिति बहुवचनमतन्त्रम् । तेन गामानयेत्यादेरपि वाक्यत्वसिद्धिः ।

ಕೆಲವರು 'ದೇವದತ್ತ' ಮುಂತಾದ ಸ್ಥಳಗಳಲ್ಲಿ ಕಡೆಯವರ್ಣವು ವಿಭಕ್ತಿ ಅಂತವಾಗಿರುವುದರಿಂದ ಹಿಂದಿನ ವರ್ಣಗಳಿಗೆ ವಿಭಕ್ತ್ಯಂತತ್ವವು ಇಲ್ಲದಿರುವುದರಿಂದ ವಿಭಕ್ತ್ಯಂತವಾದ ವರ್ಣದಿಂದ ಕೂಡಿರುವಿಕೆಯು ಪದದ ಲಕ್ಷಣ ಎಂಬ ಅರ್ಥವು ಸಿದ್ಧಿಸುವುದಕ್ಕೋಸ್ಕರ 'ವರ್ಣಾಃ' ಎಂದು ಬಹುವಚನವನ್ನು ಹೇಳಿದ್ದಾರೆ ಎಂದು ಹೇಳುತ್ತಾರೆ. 'ವಿಭಕ್ತ್ಯಂತಂ ಪದಮ್' ಎಂಬಲ್ಲಿ ಬಹುವಚನವು ತಂತ್ರವಿವಕ್ಷೆಯಿಂದ ಹೇಳಿಲ್ಲ. ಆದ್ದರಿಂದ 'ಗಾಮಾನಯ'ಮುಂತಾದ ವಾಕ್ಯಗಳಿಗೂ ಸಹ ವಾಕ್ಯತ್ವವು ಸಿದ್ಧಿಸುತ್ತದೆ.

## वाक्यलक्षणम्

### ಪ್ರಮಾಣಪದ್ಧತಿಯಲ್ಲಿ ಹೇಳಿದ ವಾಕ್ಯಲಕ್ಷಣವೇನು ?

**प्रमाणपद्धतिः– आकाङ्क्षासन्निधियोग्यतावतां पदानां समूहो वाक्यम् ।**

ಆಕಾಂಕ್ಷಾಯೋಗ್ಯತಾಸನ್ನಿಧಿಗಳು ಇರುವ ಪದಗಳ ಸಮೂಹವನ್ನು ವಾಕ್ಯ ಎಂದು ಕರೆಯುತ್ತೇವೆ.

## आकाङ्क्षालक्षणम्

### ಪ್ರಮಾಣಪದ್ಧತಿಯಲ್ಲಿ ಹೇಳಿದ ಆಕಾಂಕ್ಷಾ ಲಕ್ಷಣವೇನು ?

**प्रमाणपद्धतिः— आकाङ्क्षा जिज्ञासा । सा चेतनधर्मः[१] । तद्विषयत्वादर्थाः साकाङ्क्षाः । तत्प्रतिपादकत्वात्पदान्यपि ।[२]**

ಆಕಾಂಕ್ಷಾ ಎಂದರೆ ಜಿಜ್ಞಾಸೆ. ಇದು ಚೇತನಧರ್ಮ. ಚೇತನವಿಷಯಕವಾದ್ದರಿಂದ ಪದಾರ್ಥಗಳು ಸಾಕಾಂಕ್ಷ ಎಂದು ಕರೆಸಿಕೊಳ್ಳುತ್ತವೆ. ಇದನ್ನು ಪ್ರತಿಪಾದನೆ ಮಾಡುವುದರಿಂದ ಪದಗಳೂ ಸಹ ಆಕಾಂಕ್ಷಾವುಳ್ಳವುಗಳು ಎಂದು ಕರೆಸಿಕೊಳ್ಳುತ್ತವೆ.

(१) आदर्शः— आकाङ्क्षा चेतनधर्म इति ।। तत्प्रतिपादकत्वात्पदान्यपीति । तथा च तत्पदजन्याकाङ्क्षानिवर्तकत्वतदनिवर्त्याकाङ्क्षोत्थापकत्वान्यतरत्वम् आकाङ्क्षेत्यर्थः ।

ननु नेदमाकाङ्क्षारूपम् । तथा सति नियमेनाकाङ्क्षोत्पत्त्यभावेन यत्राकाङ्क्षा नोत्पन्ना तत्र वाक्यस्य निराकाङ्क्षत्वापातात् । न चाकाङ्क्षानुदयेऽपि तत्स्वरूपयोग्यत्वमक्षतमेवेति चेन्न । इच्छाविशेषत्वावच्छिन्नं प्रति पदविशेषत्वेन तज्ज्ञानत्वेन वा कारणताया अक्लृप्तत्वेन स्वरूपयोग्यत्वासम्भवात् । न च

तत्पदजन्यार्थोपस्थिताविच्छोत्पत्तेरानुभविकत्वेनोपस्थितिद्वारा पदस्य तज्ज्ञानस्य वा कारणत्वमिति वाच्यम् । उपस्थित्या तस्यान्यथासिद्धत्वात् । अन्यथा कुलालपित्रादेरपि घटकारणत्वापत्तेः । पर्यायवाचकैः पदैरेकस्यैवार्थस्योपस्थित्या-ऽऽकाङ्क्षायाश्चोदयेन पदस्य तज्ज्ञानस्य वा कारणताङ्गीकारे पदान्तर-जन्योपस्थितिसाध्यजिज्ञासायां व्यभिचाराच्च । अव्यवहितत्वनिवेशेन व्यभिचार-परिहारगौरवम् । यत्र कार्यकारणभावः प्रामाणिकस्तत्रैव व्यभिचारपरिहारोपाय-स्त्वयम् । न च प्रयोजकत्वमास्तामिति वाच्यम् । तत्रापि प्रमाणाभावात् । न च सामान्यधर्मावच्छिन्नज्ञानस्य तद्विशेषजिज्ञासां प्रति हेतुत्वं पदात् सामान्यस्योपस्थितौ विशेषजिज्ञासाया उदयात् सामान्यधर्मावच्छिन्नोप-स्थितिजनकानां बहूनामपि पदानां तादृशजिज्ञासाप्रयोजकत्वमङ्गीक्रियत इति वाच्यम् । बहूनामपि प्रयोजकत्वाङ्गीकारेणाकाङ्क्षोपपादने गौरवात् ।

(२) प्रमाणलक्षणटीकायां तु पूर्वपदसञ्जाताकाङ्क्षापूर्वकत्वमाकाङ्क्षावत्त्वमित्युक्तम् । तत्र पूर्वपदं प्रथमोपस्थितपदं तेन स्वजन्यज्ञानद्वारा सञ्जाताकाङ्क्षा पूर्वपदोप-स्थितिजन्यपदार्थान्तरजिज्ञासैव । जिज्ञासापूर्तिश्च जिज्ञासितार्थाभिधानेन भवतीति तत्पूर्वकं पदानां तद्विषयार्थप्रतिपादकत्वमेव । अतस्तेनापि पूर्वपद-सञ्जातश्रोतृजिज्ञासाविषयार्थप्रतिपादकत्वमेवोक्तमिति न विरोधशङ्कावकाशः । यद्यपि प्रमाणलक्षणटीकायां श्रोतुराकाङ्क्षितार्थाभिधायित्वपूर्वपदसञ्जाताकाङ्क्षा-पूर्वकत्वं चाकाङ्क्षावत्त्वम् । तेन विरक्तं प्रति वाणिज्योपदेशस्य निराकाङ्क्षत्व-मशक्यत्वं चाभ्युपेयम् । तथाऽप्यावश्यकनिर्दोषत्वविशेषणादेव तद्व्यवच्छेदा-सम्भवात्पूर्वपदसञ्जातश्रोतृ जिज्ञासाविषयार्थप्रतिपादकत्वमात्रेण पदेषु साकाङ्क्षत्व-व्यवहाराच्च । विरक्तं प्रति वाणिज्योपदेशस्य वाक्यत्वमभ्युपेत्य पद्धतावन्वया-बोधोपयुक्ताकाङ्क्षामात्रमुक्तम् ।

प्रमाणलक्षणटीकायां तु शब्दस्य परार्थत्वात्पराभिलषितज्ञानविषयस्यैव पदार्थ-शब्दबोध्यतया परापेक्षितत्वस्यैव वाक्यार्थत्वाद्वाक्यार्थ भूतान्वयबोधकत्वस्य

गौरश्व: पुरुषो हस्तीति पदजाते विरक्तं प्रति वाणिज्योपदेशरूपपदजाते च समा गौरश्व: पुरुषो हस्तीति पदजातवद्विरक्तं प्रति वाणिज्योपदेशरूपपदजातमपि निराकाङ्क्षं वाक्यं चेत्यभिप्रेत्य तद्व्यावृत्त्यर्थं श्रोतुराकाङ्क्षितार्थाभिधायकत्वमप्या- काङ्क्षाशरीरे प्रवेशितं तथाविधाकाङ्क्षारहितत्वाद्विरक्तं प्रति वाणिज्योपदेशरूपं पदजातमपि न वाक्यमित्युक्तम् । तथा च विवक्षाभेदेन ग्रन्थद्वयप्रवृत्ते- र्विरोधशङ्काऽनवकाश इति ।

**राघवेन्द्रीयम्**— यत्पदार्थज्ञाने सति पदान्तरार्थविषयिणी जिज्ञासा भवति तद्वाचकयो: पदयोस्तादृशजिज्ञासाविषयार्थविषयकत्वं साकाङ्क्षत्वमित्याह ।। जिज्ञासेत्यादिना ।। पदान्यपि इति । साकाङ्क्षाणीति योज्यम् ।

'ಯಾವ ಪದಾರ್ಥದ ಜ್ಞಾನವು ಬಂದಾಗ ಮತ್ತೊಂದು ಪದಾರ್ಥವಿಷಯಕವಾದ ಜಿಜ್ಞಾಸೆಯು ಬರುತ್ತದೋ ಅದನ್ನು ಹೇಳುವ ಪದಗಳಿಗೆ ಅಂತಹ ಜಿಜ್ಞಾಸಾವಿಷಯವಾದ ಅರ್ಥವಿಷಯಕತ್ವವಿರುವುದೇ ಸಾಕಾಂಕ್ಷತ್ವ ' ಎಂಬ ಅಭಿಪ್ರಾಯದಿಂದ 'ಜಿಜ್ಞಾಸಾ 'ಮುಂತಾದ ವಾಕ್ಯವು ಹೊರಟಿದೆ. ಪದಗಳೂ ಸಹ ಸಾಂಕಾಂಕ್ಷವಾಗಿವೆ ಎಂದು ಯೋಜನೆ ಮಾಡಿಕೊಳ್ಳಬೇಕು.

**विजयीन्द्रतीर्थीयम्**— अत एव वाक्यपदार्थमाह ।। आकाङ्क्षेति । कथं तर्ह्यर्थपदयो: साकाङ्क्षत्वमित्यत आह ।। तद्विषयत्वादिति । तत्तद्रूपावच्छिन्नपदप्रयोज्यजिज्ञासाविषयत्वयोग्य- ज्ञानविषयान्वय प्रतियोगित्वाभिमतत्वं परार्थे आकाङ्क्षा । पूर्वोक्तजिज्ञासाविषययोग्यज्ञान- जनकावच्छेदकरूपवत्त्वं पदस्येत्यर्थ: ।

ಆದ್ದರಿಂದಲೇ ವಾಕ್ಯಪದದ ಅರ್ಥವನ್ನು ' ಆಕಾಂಕ್ಷಾ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಹಾಗಾದರೆ ಅರ್ಥಕ್ಕೂ ಪದಕ್ಕೂ ಹೇಗೆ ಸಾಕಾಂಕ್ಷತ್ವವು ಕೂಡುತ್ತದೆ ಎಂಬ ಪ್ರಶ್ನೆಗೆ ಉತ್ತರವನ್ನು ' ತದ್ವಿಷಯತ್ವಾತ್' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ವಾಕ್ಯಪ್ರಯೋಗ ಮಾಡಿದಾಗ ಬೇರೆಯವರಿಗೆ ಆ ವಾಕ್ಯದಲ್ಲಿ 'ತತ್ತದ್ರೂಪಾವಚ್ಛಿನ್ನವಾದ ಪದದಿಂದ ಪ್ರಯೋಜ್ಯವಾದ ಜಿಜ್ಞಾಸೆಗೆ ವಿಷಯವಾದ ಜ್ಞಾನಕ್ಕೆ ಯೋಗ್ಯವಾದ ವಿಷಯದಲ್ಲಿ ಅನ್ವಯವಾಗುವ ಪ್ರತಿಯೋಗಿ 'ಎಂದು ಯಾವುದು ಅಭಿಮತವೋ ಅದೇ ಆಕಾಂಕ್ಷಾ ಎಂದು ಕರೆಸಿಕೊಳ್ಳುತ್ತದೆ. ಹಿಂದೆ ಹೇಳಿದ ಜಿಜ್ಞಾಸಾವಿಷಯವಾದ ಯೋಗ್ಯಜ್ಞಾನವನ್ನು

त्यादिशब्दात् अयं करिष्यतीति धीरुदेतीति शब्दस्य प्रवर्तकज्ञान-जनकत्वं नानुपपन्नमिति ।

इति स्वमते शब्दस्वातन्त्र्यसमर्थनम्

ಈ ಆಕ್ಷೇಪವು ಸರಿಯಲ್ಲ. ಶಬ್ದವು ಅರ್ಥವನ್ನು ತಿಳಿಸುವಾಗ ವ್ಯುತ್ಪತ್ತಿಯ ಆಪೇಕ್ಷೆ ಇದೆ. ವ್ಯುತ್ಪತ್ತಿಯು ಬರುವ ಕ್ರಮ ಬೇರೆ ಬೇರೆ ರೀತಿಯಾಗಿದೆ. ಘಟ ಮುಂತಾದ ಶಬ್ದಗಳಿಂದ ಬರುವ ವ್ಯುತ್ಪತ್ತಿಯೇ ಬೇರೆ. ತ್ವಂ ಅಹಂ ಮುಂತಾದ ಶಬ್ದಗಳಿಂದ ಬರುವ ವ್ಯುತ್ಪತ್ತಿಯೇ ಬೇರೆ. ಆದ್ದರಿಂದ ಘಟ ಮುಂತಾದ ಶಬ್ದಗಳು ತಮ್ಮ ವ್ಯುತ್ಪತ್ತಿ ಪ್ರಕಾರಕ್ಕನುಸಾರವಾಗಿ ಘಟಾದಿ ಶಬ್ದಗಳನ್ನು ಉಲ್ಲೇಖ ಮಾಡುವ ಬುದ್ಧಿಯನ್ನು ಹುಟ್ಟಿಸುತ್ತವೆ. ತ್ವಂ ಅಹಂ ಮುಂತಾದ ವಿಶೇಷ ಶಬ್ದಗಳು ವ್ಯುತ್ಪತ್ತಿ ಗ್ರಹಣ ಮಾಡುವ ಕಾಲದಲ್ಲಿ ಸಂಬೋಧ್ಯತ್ವ , ಪ್ರಯೋಕ್ತೃತ್ವ ಮುಂತಾದ ಪ್ರಯೋಗದ ಅೀನವಾಗಿ ಔಪಾಧಿಕವಾಗಿ ಆಯಾ ಶಬ್ದಗಳಿಂದ ಉಲ್ಲೇಖವಾಗುವ ಬುದ್ಧಿಯನ್ನು ಹುಟ್ಟಿಸುತ್ತವೆ.

ಅದು ಹೀಗಿದೆ : 'ಯುಷ್ಮತ್' ಶಬ್ದವು ಸಂಬೋಧ್ಯನಾದ ಪ್ರಯೋಗವನ್ನು ಅನುಸರಿಸಿ ಬರುವುದರಿಂದ ಆ ಶಬ್ದವನ್ನು ಪ್ರಯೋಗ ಮಾಡುವ ವ್ಯಕ್ತಿಯು 'ನಾನು ಮಾಡಬೇಕು' ಎಂಬ ವಿಷಯವನ್ನು ತಿಳಿಯುವುದಕ್ಕೋಸ್ಕರ ನೀನು ಎಂಬುದಾಗಿ ಯುಷ್ಮತ್ ಶಬ್ದವನ್ನು ಪ್ರಯೋಗ ಮಾಡುತ್ತಾನೆ. ಈ ಪ್ರಯೋಗಕ್ಕೆ ಅನುಸಾರವಾಗಿ ಕ್ರಿಯಾಪದದಲ್ಲೂ ಸಹ ಮಧ್ಯಮ ಪುರುಷವಿರುವ ಕುರು ಎಂಬ ಪದವನ್ನು ಪ್ರಯೋಗ ಮಾಡುತ್ತಾನೆ. ಆದ್ದರಿಂದ ಇಂತಹ ಶಬ್ದಪ್ರಯೋಗದಿಂದ ಕೇಳುವ ವ್ಯಕ್ತಿಗೆ ವ್ಯುತ್ಪತ್ತಿಯ ಅಧೀನವಾಗಿ ಅಸ್ಮತ್ ಶಬ್ದ ಹಾಗೂ ಉತ್ತಮ ಪುರುಷಾಂತವಾದ ಕ್ರಿಯಾಪದವನ್ನು ಉಲ್ಲೇಖ ಮಾಡುವ ಮತ್ತೊಂದು ಬುದ್ಧಿಯು ಹುಟ್ಟುತ್ತದೆ.

ಇದರಂತೆ 'ಅಹಂ ಕುರ್ಯಾಂ' ಮುಂತಾದ ಶಬ್ದಗಳ ಪ್ರಯೋಗಕ್ಕೆ ಅನುಸಾರವಾಗಿ ಅಯಂ ಕರಿಷ್ಯತಿ ಇವನು ಮಾಡುತ್ತಾನೆ ಮುಂತಾದ ಜ್ಞಾನವು ಹುಟ್ಟುತ್ತದೆ. ಇದರಿಂದ ಶಬ್ದವು ಪ್ರವರ್ತಕ ಜ್ಞಾನವನ್ನು ಹುಟ್ಟಿಸುತ್ತದೆ ಎಂಬ ವಿಷಯದಲ್ಲಿ ಯಾವುದೇ ಅನುಪಪತ್ತಿಯು ಇಲ್ಲ.

ಇಲ್ಲಿಗೆ ಸ್ವಮತರೀತ್ಯಾ ಶಬ್ದಸ್ವಾತಂತ್ರ್ಯಸಮರ್ಥನೆಯು ಸಮಾಪ್ತವಾಯಿತು.

## वैशेषिकोक्तशब्दास्वातन्त्र्यभङ्गः ।

वैशेषिका मन्यते । शब्दो न प्रमाणान्तरम् । पदार्थसंसर्गस्यानुमानादेव सिद्धेः । तथा हि विमतानि पदानि तात्पर्यविषयस्वस्मारितार्थसंसर्गज्ञानपूर्वकाणि आकाङ्क्षादिमत्पदकदम्बत्वात् घटमानयेति मत्प्रयुज्यमानपदसमूहवत् ।

## ವೈಶೇಷಿಕರು ಹೇಳುವ ಶಬ್ದ ಅಸ್ವಾತಂತ್ರ್ಯವು ಸಹ ಸರಿಯಲ್ಲ.

ವೈಶೇಷಿಕರ ಅಭಿಪ್ರಾಯ ಹೀಗಿದೆ : ಶಬ್ದವು ಸ್ವತಂತ್ರವಾದ ಮತ್ತೊಂದು ಪ್ರಮಾಣವಲ್ಲ. ಪದಾರ್ಥಗಳ ಸಂಬಂಧವು ಅನುಮಾನದಿಂದಲೇ ಸಿದ್ಧವಾಗುತ್ತದೆ. ಅನುಮಾನದ ಆಕಾರವು ಹೀಗಿದೆ: ವಿಮತಾನಿ, ಪದಾನಿ, ತಾತ್ಪರ್ಯವಿಷಯಸ್ವಸ್ಮಾರಿತಾರ್ಥಸಂಸರ್ಗಜ್ಞಾನಪೂರ್ವಕಾಣಿ ಆಕಾಂಕ್ಷಾದಿಮತ್ ಪದಕದಂಬತ್ವಾತ್ ಘಟಮಾನಯಯತಿ ಮತ್ಪ್ರಯುಜ್ಯಮಾನ ಪದಸಮೂಹವತ್ ಎಂಬುದಾಗಿ.

ವಿವಾದಕ್ಕೆ ವಿಷಯವಾದ ಪದಗಳು ತಮ್ಮಿಂದ ಅಭಿಪ್ರೇತವಾದ ಪದಾರ್ಥಗಳನ್ನು ಸ್ಮರಣೆಗೆ ತಂದುಕೊಡುವ ಪದಾರ್ಥದ ಸಂಬಂಧಜ್ಞಾನವನ್ನು ಸಹ ಮುಂಚೆಯೇ ತಂದುಕೊಡುತ್ತವೆ. ಏಕೆಂದರೆ ಪದಗಳಲ್ಲಿ ಆಕಾಂಕ್ಷಾ ಮುಂತಾದ ಲಕ್ಷಣಗಳು ಇವೆ.

ಉದಾಹರಣೆಗೆ ನಾನು ಘಟಂ ಆನಯ ಎಂಬ ಪ್ರಯೋಗವನ್ನು ಮಾಡುತ್ತೇನೆ. ಈ ಪದಸಮೂಹದಲ್ಲಿ ಆನಯ ಎಂಬ ಪದದ ಜೊತೆಗೆ ಘಟಪದದ ಆಕಾಂಕ್ಷೆಯು ಇದೆ. ಇಲ್ಲಿ ಘಟಪದವನ್ನು ಪ್ರಯೋಗ ಮಾಡಿದಾಗ ಆ ಶಬ್ದವು ತನ್ನ ಒಟ್ಟಿಗೆ ಸಂಬಂಧಪಡುವ ಮತ್ತೊಂದು ಯಾವುದೋ ಒಂದು ಕ್ರಿಯೆಯ ಸಂಬಂಧವನ್ನು ಸಹ ಸೂಚಿಸುತ್ತದೆ. ಇದರಂತೆ ಎಲ್ಲಾ ಪದಗಳಲ್ಲೂ ಸಹ ತಿಳಿಯಬೇಕು.

## ಸಂಸರ್ಗಜ್ಞಾನಪೂರ್ವಕತ್ವಸಿದ್ಧವಾಗುವಾಗಲೇ ಸಂಸರ್ಗವು ಸಿದ್ಧವಾಗುತ್ತದೆ

**यद्यप्यत्र संसर्गज्ञानपूर्वकत्वमेव साध्यते । तथाऽपि तत्सिद्धि-दशायामेव ज्ञनावच्छेदकतया संसर्गः सिध्यति । संसर्गे च सम्बन्धिन एव विशेषत्वात् पक्षधर्मताबलाद्व्यापकत्वेनाग्रहीत-स्यापि संसर्गविशेषस्य सिद्धिः ।**

ವಸ್ತುತಃ ಈ ಅನುಮಾನದಲ್ಲಿ ಪದಾರ್ಥ ಸಂಸರ್ಗಜ್ಞಾನಪೂರ್ವಕತ್ವವು ಪದಗಳಿಗೆ ಇದೆ ಎಂದು ಸಾಧನೆ ಮಾಡಲು ಹೊರಟಿದೆ. ಆದರೂ ಸಹ ಆ ಸಾಧನೆಯ ಸಮಯದಲ್ಲಿಯೇ ಜ್ಞಾನದಲ್ಲಿ ಅವಚ್ಛೇದಕವಾದ ಸಂಬಂಧವೂ ಸಹ ಸಿದ್ಧವಾಗುತ್ತದೆ. ಸಂಬಂಧದಲ್ಲಿ ಸಂಬಂಧಿಯಾದ ಪದಾರ್ಥವೇ ಪ್ರಬಲವಾದ್ದರಿಂದ ಪಕ್ಷಧರ್ಮತಾ ಬಲದಿಂದ ಮೊದಲು ಗ್ರಹಣವಾಗದೆ ಇದ್ದ ಸಂಬಂಧ ವಿಶೇಷವು ಸಿದ್ಧವಾಗುತ್ತದೆ. ಸಂಬಂಧಿಯು ವ್ಯಾಪಕವಾಗಿರುವುದೇ ಇದಕ್ಕೆ ಕಾರಣ.

## ಪದಾರ್ಥಗಳ ಸಂಬಂಧ ಅನುಮಾನದಿಂದಲೇ ಸಿದ್ಧ

**अथवा एते पदार्था मिथः संसर्गवन्तः आकाङ्क्षादिमद्भिः पदैः स्मारितत्वात् । गामभ्याजेति पदार्थसार्थवत् । इत्यनुमानात् साक्षादेव संसर्गसिद्धिरिति । तन्न ।**

ಅಥವಾ ಈ ಪದಾರ್ಥಗಳು ಪರಸ್ಪರವಾಗಿ ಸಂಬಂಧವುಳ್ಳವುಗಳಾಗಿವೆ. ಆಕಾಂಕ್ಷಾದಿ ಧರ್ಮ-ಗಳುಳ್ಳ ಪದಗಳಿಂದ ಈ ಪದಗಳು ಸ್ಮರಣೆಗೆ ಬಂದಿವೆ. ಗಾಂ ಅಭ್ಯಾಜ ಮುಂತಾದ ಪದಗಳಿಗೆ ಪದಾರ್ಥಗಳ ಜೊತೆ ಅರ್ಥವು ಇರುವುದೇ ಇದಕ್ಕೆ ದೃಷ್ಟಾಂತ. ಅನುಮಾನದ ಆಕಾರ ಹೀಗಿದೆ : ಏತೇ ಪದಾರ್ಥಃ ಮಿಥಃ ಸಂಸರ್ಗವಂತಃ 'ಆಕಾಂಕ್ಷಾದಿಮದ್ಭಿಃ ಪದೈಃ ಸ್ಮಾರಿತ್ವಾತ್ ಗಾಮಭ್ಯಾಜ ಇತಿ ಪದಾರ್ಥಸಾರ್ಥವತ್' ಎಂಬುದಾಗಿ. ಹೀಗೆ ಅನುಮಾನದಿಂದಲೇ ಸಾಕ್ಷಾತ್ತಾಗಿ ಪದಾರ್ಥ-ಗಳಿಗೆ ಸಂಬಂಧವು ಸಿದ್ಧವಾಗುತ್ತದೆ ಎಂಬುದಾಗಿ. ಇದು ಸರಿಯಲ್ಲ.

## ಶಬ್ದಕ್ಕೆ ಅನುಮಾನತ್ವೇನ ಪ್ರಾಮಾಣ್ಯ ಒಪ್ಪುವರ ಪ್ರಕಾರ

शब्दस्य न पृथक्प्रामाण्यमिति वदता अनुमानत्वेन प्रामाण्यस्याङ्गीकृतत्वात् शब्दस्य हेतूकर्तव्यत्वेन आकाङ्क्षादिमत्पदकदम्बत्वस्य आकाङ्क्षादिमत्पदस्मारितत्वस्य वा हेतूकरणायोगात् । योग्यतासन्देहदशायामपि प्रवतर्कीभूतज्ञानदर्शनात्सन्दिग्धस्य लिङ्गस्य तज्जनकत्वायोगेन शब्दस्वातन्त्र्यस्यावर्जनीयत्वाच्च । ज्ञानावच्छेदकतया संसर्गसिद्धेरप्रवर्तकत्वेन प्रवर्तकसंसर्गज्ञानाय शब्दप्रामाण्यस्य वक्तव्यत्वाच्च । अन्यथा रजतज्ञानवानयमिति भ्रान्तिज्ञस्यापि पुरोवर्तिनि प्रवृत्तिः स्यात् ।

ಶಬ್ದವು ಪ್ರತ್ಯೇಕವಾಗಿ ಪ್ರಮಾಣವಲ್ಲ ಎಂದು ಹೇಳುವವರು ಇದಕ್ಕೆ ಅನುಮಾನತ್ವೇನ ಪ್ರಾಮಾಣ್ಯವನ್ನು ಅಂಗೀಕಾರ ಮಾಡಿದ್ದಾರೆ. ಈ ಅನುಮಾನದಲ್ಲಿ ಹೇತುವನ್ನು ಹೇಳುವಾಗ ಶಬ್ದವನ್ನೇ ಹೇತುವನ್ನಾಗಿ ಮಾಡಬೇಕು ಹೊರತು, ಆಕಾಂಕ್ಷಾದಿಮತ್ ಪದಕದಂಬತ್ವವನ್ನಾಗಲಿ ಅಥವಾ ಆಕಾಂಕ್ಷಾದಿಮತ್‌ಪದಸ್ಮಾರಿತತ್ವವನ್ನಾಗಲಿ ಹೇತುವನ್ನಾಗಿಸಲು ಬರುವುದಿಲ್ಲ.

ಯೋಗ್ಯತಾಸಂದೇಹ ಬಂದ ಸಮಯದಲ್ಲೂ ಸಹ ಪ್ರವರ್ತಕವಾದ ಜ್ಞಾನವು ಕಂಡಿದೆಯಾದ್ದರಿಂದ ಸಂದಿಗ್ಧವಾದ ಲಿಂಗವು ಇಂತಹ ಪ್ರವರ್ತಕ ಜ್ಞಾನವನ್ನು ಹುಟ್ಟಿಸಲು ಸಾಧ್ಯವಿಲ್ಲ. ಆದ್ದರಿಂದ ಶಬ್ದಸ್ವಾತಂತ್ರ್ಯವನ್ನು ಬಿಡಲು ಸಾಧ್ಯವಿಲ್ಲ. ಹಾಗೂ ಜ್ಞಾನದಲ್ಲಿ ಅವಚ್ಛೇದಕವಾಗಿ ಸಿದ್ಧವಾಗುವ ಸಂಬಂಧವು ಪ್ರವೃತ್ತಿಯನ್ನು ಉಂಟು ಮಾಡಿಸಲು ಸಾಧ್ಯವಿಲ್ಲ. ಪ್ರವರ್ತಕವಾದ ಸಂಬಂಧಜ್ಞಾನವನ್ನು ಹೇಳುವುದಕ್ಕೋಸ್ಕರ ಶಬ್ದಪ್ರಾಮಾಣ್ಯವನ್ನು ಪ್ರತ್ಯೇಕವಾಗಿ ಹೇಳಲೇಬೇಕಾಗಿದೆ. ಹೀಗಿಲ್ಲದಿದ್ದರೆ ಭ್ರಾಂತಿಯಿಂದ ಕಪ್ಪೆಚಿಪ್ಪನ್ನು ನೋಡಿ ಬೆಳ್ಳಿ ಎಂಬ ಜ್ಞಾನ ಬಂದ ಭ್ರಾಂತಪುರುಷನಿಗೂ ಸಹ ಎದುರಿಗೆ ಕಾಣುವ ಕಪ್ಪೆಚಿಪ್ಪಿನಲ್ಲಿ ಬೆಳ್ಳಿ ಎಂಬ ಬುದ್ಧಿಯಿಂದ ಪ್ರವೃತ್ತಿಯು ಉಂಟಾಗಬೇಕಾದೀತು.

## ಶಾಬ್ದಬೋಧಜನಕವಾದ ಅನುಮಾನದ ನಿರಾಕರಣೆ

**किञ्च एते पदार्था इति अविशेषेण स्मृता सर्वेऽपि पदार्थाः पक्षीक्रियन्ते उत व्यक्तिविशेषा । नाद्यः बाधात् । न हि नदी-तीरस्य यावत्फलानां चाधाराधेयभावोऽस्ति येन बाधो न स्यात् । न द्वितीयः । विशेषस्मरणाभावात् । न च पदतात्पर्य-वशात् अन्वयप्रतियोगिविशेषस्मृतिर्भविष्यतीति वाच्यम् । विशिष्य पदार्थोपस्थितिं विना विशिष्य तात्पर्यग्रहस्यैवायोगात् ।**

ಮತ್ತು ಈ ಪದಾರ್ಥಗಳು ಎಂಬುದಾಗಿ ಪಕ್ಷವನ್ನು ನಿರ್ದೇಶ ಮಾಡುವಾಗ ಎಲ್ಲಾ ಪದಾರ್ಥಗಳನ್ನು ಸಹ ಪಕ್ಷಕೋಟಿಯಲ್ಲಿ ಸೇರಿಸಿ ಅನುಮಾನವನ್ನು ಮಾಡುವುದೋ ಅಥವಾ ವ್ಯಕ್ತಿವಿಶೇಷ ನಿಷ್ಠವಾಗಿ ಕೆಲವು ಪದಾರ್ಥಗಳನ್ನು ಪಕ್ಷೀಕರಿಸಿ ಅನುಮಾನ ಮಾಡುತ್ತೀರೋ ಎಂಬುದಾಗಿ ಪ್ರಶ್ನೆ ಹುಟ್ಟುತ್ತದೆ. ಸಕಲ ಪದಾರ್ಥಗಳನ್ನು ಪಕ್ಷದಲ್ಲಿ ಸೇರಿಸಲು ಸಾಧ್ಯವಿಲ್ಲ. ಹೀಗೆ ಹೇಳಿದರೆ ಬಾಧವು ಬರುತ್ತದೆ. ನದಿಯ ತೀರದಲ್ಲಿರುವ ಎಲ್ಲಾ ಫಲಗಳಿಗೂ ಸಹ ಆಧಾರ ಆಧೇಯ ಭಾವವು ಕಂಡುಬಂದಿಲ್ಲ.

ಹೀಗಿದ್ದ ಪಕ್ಷದಲ್ಲಿ ಬಾಧವು ಬರದೇ ಇರುತ್ತಿತ್ತು. ಇದರಂತೆ ವ್ಯಕ್ತಿವಿಶೇಷ ರೂಪವಾದ ದ್ವಿತೀಯ ಪಕ್ಷವನ್ನು ಸಹ ಹೇಳಲು ಸಾಧ್ಯವಿಲ್ಲ . ಹೀಗೆ ಹೇಳಬೇಕಾದರೆ ಪದಾರ್ಥಗಳ ವಿಶೇಷ ಸ್ಮರಣೆಯು ಬೇಕಾಗುತ್ತದೆ. ಅದು ಇಲ್ಲ. ಪದಗಳ ತಾತ್ಪರ್ಯವಶಾತ್ ಅನ್ವಯಪ್ರತಿಯೋಗಿ ಪದಾರ್ಥಗಳ ವಿಶೇಷಸ್ಮೃತಿಯು ಆಗುತ್ತದೆ ಎಂದು ಹೇಳಲು ಸಹ ಬರುವುದಿಲ್ಲ. ಪದಾರ್ಥೋಪಸ್ಥಿತಿ ಇಲ್ಲದೆ ವಿಶಿಷ್ಟ ತಾತ್ಪರ್ಯಗ್ರಹಣವನ್ನು ಸಹ ಹೇಳಲು ಬರುವುದಿಲ್ಲ.

## ಅನುಮಾನದಿಂದ ಶಾಬ್ದಬೋಧ ಬರುವುದು ಅನುಭವವಿರುದ್ಧ

**अपिच किमियं लौकिकीप्रतीतिराहोस्वित् स्वसमयानुरोधादेवं**

उच्यते । नाद्यः । शब्दश्राविणां शब्दादेवार्थस्य झडिति प्रतीयमानत्वेन शब्दपक्षकस्यार्थपक्षकम्य वा अनुमानस्याप्रवृत्तेः । न द्वितीयः । त्वत्समयस्याप्रामाणिकत्वात् ।

ಈ ಪ್ರತೀತಿಯು ಲೌಕಿಕ ಪ್ರತೀತಿಯೋ ಅಥವಾ ನಿಮ್ಮ ಸಿದ್ಧಾಂತಾನುಸಾರವಾಗಿ ಈ ರೀತಿ ಆಕ್ಷೇಪವನ್ನು ಮಾಡಲಾಗುತ್ತದೆಯೋ ಲೌಕಿಕ ಪ್ರತೀತಿ ಎಂಬ ಮೊದಲನೆಯ ಪಕ್ಷವು ಸರಿಯಲ್ಲ. ಶಬ್ದವನ್ನು ಕೇಳುವವರಿಗೆ ಸಾಕ್ಷಾತ್ತಾಗಿ ಶಬ್ದದಿಂದಲೇ ಪದಾರ್ಥದ ಸ್ಮರಣೆಯು ಕೂಡಲೇ ಬರುವುದರಿಂದ ಶಬ್ದಪಕ್ಷಕವಾದ ಅಥವಾ ಅರ್ಥ ಪಕ್ಷಕವಾದ ಅನುಮಾನವನ್ನು ಮಾಡಿ ಅವರು ಅರ್ಥ ಮಾಡಿಕೊಳ್ಳದೇ ಇರುವುದರಿಂದ ಅನುಮಾನದ ಪ್ರವೃತ್ತಿಯೇ ಇಲ್ಲ. ಸ್ವಸಿದ್ಧಾಂತಾನುಸಾರವಾಗಿ ಎಂಬ ಎರಡನೆಯ ಪಕ್ಷವು ಸರಿಯಲ್ಲ. ನಿಮ್ಮ ಸಿದ್ಧಾಂತವೇ ಅಪ್ರಾಮಾಣಿಕ.

## ಸಂಸರ್ಗಜ್ಞಾನ ಹೇಗೆ ಬರುತ್ತದೆ ?

किञ्च परार्थानुमाने पर्वतोऽग्निमानिति प्रतिज्ञामात्रेणैव पर्वताग्निसंसर्गसिद्धेर्हेत्वभिधानवैय्यर्थ्यं स्यात् । न चाप्तिनिश्चयाभावेन आकाङ्क्षादिमत्पदकदम्बकत्वनिश्चयाभावान्न संसर्गसिद्धिरिति वाच्यम् । शब्दस्वातन्त्र्याभावे अनुमानस्याप्यप्रवृत्तौ संसर्गज्ञानाभावेन कुत इति आकाङ्क्षोदयाभावप्रसङ्गात् ।

ಪರಾರ್ಥಾನುಮಾನದಲ್ಲಿ ಪರ್ವತಃ ಅಗ್ನಿಮಾನ್ ಎಂಬ ಕೇವಲ ಪ್ರತಿಜ್ಞೆಯಿಂದಲೇ ಪರ್ವತ ಹಾಗೂ ಅಗ್ನಿಗಳ ಸಂಬಂಧವು ಸಿದ್ಧವಾಗುವುದರಿಂದ ಹೇತು, ನಿಗಮನ ಮುಂತಾದವುಗಳನ್ನು ಹೇಳುವುದು ವ್ಯರ್ಥವಾಗುತ್ತದೆ.

ಪ್ರಶ್ನೆ : ಆಪ್ತಿಯು ನಿಶ್ಚಿತವಾಗದೇ ಇರುವುದರಿಂದ ಆ ವಾಕ್ಯದಲ್ಲಿ ಆಕಾಂಕ್ಷಾದಿಗಳು ಇದೆ ಎಂಬ

ನಿಶ್ಚಯವು ಬರುವುದಿಲ್ಲ. ಆದ್ದರಿಂದ ಆಕಾಂಕ್ಷಾದಿಮತ್ ಪದಕದಂಬಕತ್ವ ರೂಪವಾದ ಹೇತುವೇ ಇಲ್ಲವಾದ್ದರಿಂದ ಆ ಸ್ಥಳದಲ್ಲಿ ಸಂಸರ್ಗವೇ ಸಿದ್ಧವಾಗುವುದಿಲ್ಲವಲ್ಲವೇ?

ಉತ್ತರ : ಶಬ್ದಕ್ಕೆ ಸ್ವಾತಂತ್ರ್ಯ ಇಲ್ಲದೇ ಇರುವ ಪಕ್ಷದಲ್ಲಿ ಅನುಮಾನವು ಸಹ ಪ್ರವೃತ್ತಿ-ಯಾಗುವುದಿಲ್ಲ. ಆದ್ದರಿಂದ ಸಂಸರ್ಗಜ್ಞಾನವೇ ಇಲ್ಲವಾದ್ದರಿಂದ ಹೇಗೆ ಎಂಬುದಾಗಿ ಆಕಾಂಕ್ಷೆಯೇ ಹುಟ್ಟದೇ ಇರುವ ಪ್ರಸಂಗ ಬರುತ್ತದೆ. ಆದ್ದರಿಂದ ಸಂಸರ್ಗವು ಇದೇ ಎಂದು ಹೇಳಬೇಕು.

## ಅನಾಪ್ತವಾಕ್ಯದಿಂದ ಜ್ಞಾನ ಹುಟ್ಟಿದರೂ ಹುಟ್ಟದಿದ್ದರೂ ದೋಷ ತಪ್ಪಿದ್ದಲ್ಲ

**किञ्च अनाप्तवाक्याज्ज्ञानमुत्पद्यते न वा । नेति पक्षे निषेधानुपपत्तिः । आद्येऽपि तज्ज्ञानं शब्देन भवति । उत लिङ्गेन । नाद्यः । अपसिद्धान्तात् । नापि द्वितीयः । लिङ्गाभावात् । न च अयोग्यपदकदम्बकत्वेन संसर्गभ्रमपूर्वकत्वानुमानं शक्यमिति वाच्यम् । विसंवादिशुकवाक्ये व्यभिचारात् ।**

इति वैशेषिकोक्तशब्दास्वातन्त्र्यभङ्गः ।

ಮತ್ತೇನೆಂದರೆ ಅನಾಪ್ತನ ವಾಕ್ಯದಿಂದ ಜ್ಞಾನವು ಹುಟ್ಟುತ್ತದೆಯೇ ಇಲ್ಲವೇ? ಹುಟ್ಟುವುದಿಲ್ಲ ಎನ್ನುವ ಪಕ್ಷದಲ್ಲಿ ನಿಷೇಧವನ್ನು ಸಹ ಮಾಡಲು ಬರುವುದಿಲ್ಲ. ಜ್ಞಾನ ಹುಟ್ಟುವ ಪಕ್ಷದಲ್ಲಿ ಆ ಜ್ಞಾನವು ಶಬ್ದದಿಂದಲೋ ಅಥವಾ ಲಿಂಗದಿಂದಲೋ ಎಂಬ ಪ್ರಶ್ನೆ ಬರುತ್ತದೆ. ಶಬ್ದದಿಂದ ಎಂದು ಹೇಳಿದರೆ ಅಪಸಿದ್ಧಾಂತವಾಗುತ್ತದೆ. ಲಿಂಗದಿಂದ ಎಂದು ಹೇಳಲು ಬರುವುದಿಲ್ಲ. ಲಿಂಗವೇ ಇಲ್ಲ-ವಾದ್ದರಿಂದ. ಅಯೋಗ್ಯವಾದ ಪದಸಮೂಹ ಇರುವುದರಿಂದ ಸಂಸರ್ಗಭ್ರಮ ಬಂದು ಆ ಮುಖಾಂತರ ಅನುಮಾನವನ್ನು ಮಾಡಲು ಬರುತ್ತದಲ್ಲವೇ?

ಉತ್ತರ : ಹೀಗೆ ಹೇಳಿದರೆ ವಿಸಂವಾದಿಯಾದ ಶುಕವಾಕ್ಯದಲ್ಲಿ ವ್ಯಭಿಚಾರ ಬರುತ್ತದೆ. ಅಲ್ಲೂ

ಸಹ ಅಯೋಗ್ಯ ಪದಸಮೂಹವಿದೆ. ಆದರೆ ಶುಕವು ಪ್ರಾಣಿಯಾದ್ದರಿಂದ ಅದಕ್ಕೆ ಸಂಸರ್ಗ-ಭ್ರಮವೇ ಬರಲು ಸಾಧ್ಯವಿಲ್ಲ. ಆದ್ದರಿಂದ ತತ್‌ಪೂರ್ವಕವಾದ ಅನುಮಾನವನ್ನು ಸಹ ಹೇಳಲು ಬರುವುದಿಲ್ಲ. ಹೀಗೆ ವೈಶೇಷಿಕರ ವಾದವೂ ಸಹ ಸರಿಯಲ್ಲ.

ಇಲ್ಲಿಗೆ ವೈಶೇಷಿಕೋಕ್ತ ಶಬ್ದ ಅಸ್ವಾತಂತ್ರ್ಯಭಂಗವು ಸಮಾಪ್ತವಾಯಿತು.

## मण्युक्ताकाङ्क्षालक्षणभङ्गः

**आकाङ्क्षा च सम्भूय एकान्वयप्रतीतिजननसामर्थ्यम् । यद्यप्याकाङ्क्षाशब्द इच्छायां रूढः । तथापीह लाक्षणिकार्थो विवक्षितः । न च प्रयोजनाभावाल्लक्षणाऽयोग इति वाच्यम् । दण्डो हि घटजननाय चक्रचीव्रादिकमाकाङ्क्षत इत्यादिप्रयोगदर्शनेन रूढलक्षणात्वात् ।।**

ಆಕಾಂಕ್ಷಾವು ಎಲ್ಲದರ ಜೊತೆ ಸೇರಿಕೊಂಡು ಒಟ್ಟಿಗೆ ಏಕಾನ್ವಯದ ಪ್ರತೀತಿಯನ್ನು ಹುಟ್ಟಿಸುವ ಸಾಮರ್ಥ್ಯವನ್ನು ಪಡೆದಿದೆ. ವಸ್ತುತಃ ಆಕಾಂಕ್ಷಾ ಶಬ್ದಕ್ಕೆ ಇಚ್ಛಾ ಎಂಬ ಅರ್ಥದಲ್ಲಿ ರೂಢಿ ಇದೆ. ಆದರೂ ಸಹ ಇಲ್ಲಿ ಲಾಕ್ಷಣಿಕವಾದ ಅರ್ಥವನ್ನು ವಿವಕ್ಷಿಸಲಾಗಿದೆ.

ಪ್ರಶ್ನೆ : ಪ್ರಯೋಜನ ಇಲ್ಲದೆ ಇರುವ ಕಾರಣದಿಂದ ಲಕ್ಷಣಾ ಏಕೆ ಮಾಡಬೇಕು.

ಉತ್ತರ : ಸಾಕ್ಷಾತ್ತಾಗಿ ಪ್ರಯೋಜನ ಕಂಡು ಬರದೇ ಇದ್ದರೂ ಸಹ ರೂಢಲಕ್ಷಣಾವನ್ನು ಇಲ್ಲಿ ಆಶ್ರಯಿಸಲಾಗಿದೆ. ದಂಡವು ಘಟವನ್ನು ಹುಟ್ಟಿಸಲು ಚಕ್ರ , ಕುಲಾಲ, ಮುಂತಾದವುಗಳನ್ನು ಆಕಾಂಕ್ಷಿಸುತ್ತದೆ ಎಂಬುದಾಗಿ ಲೋಕದಲ್ಲಿ ಪ್ರಯೋಗವು ಕಂಡು ಬಂದಿದೆ. ಇಲ್ಲಿ ಆಕಾಂಕ್ಷ ಶಬ್ದಕ್ಕೆ ಲಾಕ್ಷಣಿಕವಾಗಿಯೇ ಅರ್ಥೈಸಲಾಗಿದೆ.

## ಮಣಿಕಾರನ ಆಕಾಂಕ್ಷಾಲಕ್ಷಣದ ನಿರಾಕರಣೆ

**मणिकारस्तु । अभिधानापर्यवसानमाकाङ्क्षा । यस्य येन विना न स्वार्थान्वयानुभावकत्वं तस्य तदपर्यवसानम् । नामधात्वाख्यात-क्रियाकारकपदानां परस्परं विना परस्परं न स्वार्थान्वयानुभव-जनकत्वम् इत्याह । तन्न । आनयेति पदस्य घटमिति पदा-भावेऽपि करीरमितिपदेन सह तात्पर्यविषयीभूतस्वार्थान्वय-बोधकत्वेन घटमितिपदेन साकाङ्क्षत्वाभावप्रसङ्गात् ।**

ಮಣಿಕಾರನ ಮತ ಹೀಗಿದೆ - 'ಅಭಿಧಾನಾಪರ್ಯವಸಾನಂ ಆಕಾಂಕ್ಷಾ' ಎಂದು ಆಕಾಂಕ್ಷಾ-ಲಕ್ಷಣ. ಯಾವುದಕ್ಕೆ ಯಾವುದರಿಂದ ಹೊರತಾಗಿ ಸ್ವಾರ್ಥಾನ್ವಯ ಅನುಭಾವಕತ್ವವು ಇರುವು-ದಿಲ್ಲವೋ, ಅದಕ್ಕೆ ಅದರಲ್ಲಿ ಪರ್ಯವಸಾನ ಇಲ್ಲದೇ ಇರುವಿಕೆ ಎಂದರ್ಥ. ನಾಮಪದ, ಧಾತು, ಕ್ರಿಯಾಪದ, ಆಖ್ಯಾತಪ್ರತ್ಯಯ, ಕಾರಕಪದಗಳಿಗೆ ಪರಸ್ಪರವಾಗಿ ಒಂದನ್ನೊಂದು ಬಿಟ್ಟು ಸ್ವಾರ್ಥಾನ್ವಯ ಅನುಭವ ಜನಕತ್ವವು ಇಲ್ಲ ಎಂಬುದಾಗಿ ಇವರ ಸಿದ್ಧಾಂತ.

ಈ ಸಿದ್ಧಾಂತ ಸರಿಯಲ್ಲ. ಆನಯ ಎಂಬ ಪದಕ್ಕೆ ಘಟಂ ಎಂಬ ಪದದ ಜೊತೆಗೆ ಅನ್ವಯ-ವಿರುವಂತೆ ಕರೀರಂ ಎಂಬ ಪದದ ಜೊತೆಗೂ ಸಹ ಅನ್ವಯವು ಇದೆ. ಆದ್ದರಿಂದ ಆನಯ ಎಂಬ ಪದವನ್ನು ಹೇಳಿದಾಗ ಘಟಂ ಎಂಬ ಪದವಿಲ್ಲದೇ ಇದ್ದರೂ ಸಹ ಮತ್ತೊಂದು ಕರೀರಂ ಎಂಬ ಪದದ ಜೊತೆಗೆ ತಾತ್ಪರ್ಯವಿಷಯೀಭೂತವಾದ ಸ್ವಾರ್ಥಾನ್ವಯ ಬೋಧಕತ್ವವು ಇರುವುದರಿಂದ ಘಟಪದದ ಜೊತೆಗೇ ಸಾಕಾಂಕ್ಷತ್ವವು ಇಲ್ಲದೇ ಇರುವ ಪ್ರಸಂಗ ಬರುತ್ತದೆ.

## ಪರಿಷ್ಕೃತಲಕ್ಷಣವೂ ದುಷ್ಟವಾಗಿದೆ

**न च यस्य पदस्य येन यत्पर्यायेण विना न स्वार्थान्वया-नुभावकत्वं तत्तेन साकाङ्क्षमिति विवक्षितमिति वाच्यम् । गङ्गायां**

**घोष इत्यत्र घोषपदस्य तीरतत्पर्यायाभ्यां विनाऽपि गङ्गायामिति पदेन सह स्वार्थान्वयानुभावकत्वदर्शनेन घोषपदस्य तीरपदेन साकाङ्क्षत्वाभावप्रसङ्गात् । न चेष्टापत्तिः । कदाचित्तीरे घोष इत्युक्तेऽप्यन्वयबोधाभावप्रसङ्गात् ।**

ಪ್ರಶ್ನೆ : ಯಸ್ಯಪದಸ್ಯ ಯೇನ ಯತ್ಪರ್ಯಾಯೇಣ ವಿನಾ ನ ಸ್ವಾರ್ಥಾನ್ವಯಾನುಭಾವಕತ್ವಂ ತತ್ ತೇನ ಸಾಕಾಂಕ್ಷಂ ಎಂಬುದಾಗಿ ಲಕ್ಷಣವನ್ನು ಹೇಳುತ್ತೇವೆ. ಯೇನ ಎಂಬ ಶಬ್ದಕ್ಕೆ ಯತ್ಪರ್ಯಾಯೇಣ ಎಂದು ಅರ್ಥ ಮಾಡಿದಾಗ ಹಿಂದೆ ಹೇಳಿದ ದೋಷ ಬರುವುದಿಲ್ಲ. ಕರೀರ ಶಬ್ದವು ಘಟ ಶಬ್ದವು ಪರ್ಯಾಯವಾಗಿದೆ.

ಉತ್ತರ : ಈ ಲಕ್ಷಣವೂ ಸಹ ಸರಿಯಲ್ಲ. 'ಘಟಂ ಆನಯ' ಎಂಬಲ್ಲಿ ಲಕ್ಷಣ ಸಮನ್ವಯ-ವಾದರೂ ಸಹ 'ಗಂಗಾಯಾಂ ಘೋಷಃ' ಎಂಬಲ್ಲಿ ದೋಷ ಬರುತ್ತದೆ. ಲಕ್ಷಣಸಮನ್ವಯ ಆಗುವುದಿಲ್ಲ. ಘೋಷ ಶಬ್ದಕ್ಕೆ ತೀರ ಹಾಗೂ ಅದರ ಪರ್ಯಾಯವಾದ ಮತ್ತೊಂದು ಶಬ್ದಗಳ ಹೊರತಾಗಿಯೂ ಸಹ ಗಂಗಾಶಬ್ದದ ಒಟ್ಟಿಗೆ ಸ್ವಾರ್ಥಾನ್ವಯ ಅನುಭಾವಕತ್ವವು ಕಂಡಿದೆ-ಯಾದ್ದರಿಂದ ಘೋಷಪದಕ್ಕೆ ತೀರಪದದ ಜೊತೆಗೆ ಸಾಕಾಂಕ್ಷತ್ವವು ಇಲ್ಲದೇ ಹೋಗಬೇಕಾದೀತು. ಇಷ್ಟಾಪತ್ತಿಯನ್ನು ಹೇಳುವ ಹಾಗಿಲ್ಲ.

ಕೆಲವೊಮ್ಮೆ 'ತೀರೇ ಘೋಷಃ' ಎಂದು ಹೇಳಿದಾಗ ಅನ್ವಯಬೋಧ ಬರದೇ ಇರುವ ಪ್ರಸಂಗ ಬರುತ್ತದೆ.

## 'ಯತ್ಪದಂ' ಇತ್ಯಾದಿ ಲಕ್ಷಣಕ್ಕೆ ಗೌರವದೋಷ

**न च यत्पदं स्वार्थान्वयप्रतियोग्युपस्थापकपदसामान्यस्याभावान्न स्वार्थान्वयानुभावकं तत् तदुपस्थापकमात्रेण प्रत्येकं साकाङ्क्षमिति**

विवक्षितमिति वाच्यम् । परस्परान्वयप्रतियोग्युपस्यापकत्वं साकाङ्क्षत्वमित्येतावतैव पूर्णत्वेन त्वदुक्तगुरुभूतलक्षणाङ्गीकारा-योगात् ।

ಪ್ರಶ್ನೆ : 'ಯತ್ಪದಂ ಸ್ವಾರ್ಥಾನ್ವಯಪ್ರತಿಯೋಗ್ಯುಪಸ್ಥಾಪಕ ಪದಸಾಮಾನ್ಯಸ್ಯಾಭಾವಾತ್ ನ ಸ್ವಾರ್ಥಾನ್ವಯಾನುಭಾವಕಂ ತತ್ ತದುಪಸ್ಥಾಪಕಮಾತ್ರೇಣ ಪ್ರತ್ಯೇಕಂ ಸಾಕಾಂಕ್ಷಮ್' ಎಂದು ಲಕ್ಷಣವನ್ನು ವಿವಕ್ಷಿಸುತ್ತೇವೆ. ಯಾವ ಪದವು ತನ್ನ ಅರ್ಥದ ಅನ್ವಯವನ್ನು ಹೇಳುವ ಪ್ರತಿಯೋಗಿ-ಯನ್ನು ಉಪಸ್ಥಾಪನೆ ಮಾಡುವ ಪದಸಾಮಾನ್ಯವೇ ಇಲ್ಲದೇ ಇದ್ದರೆ ಆ ಕಾರಣದಿಂದ ಸ್ವಾರ್ಥಾ-ನ್ವಯದ ಅನುಭಾವಕವಾಗುವುದಿಲ್ಲವೋ ಅದು ಅಂತಹ ಪದದ ಉಪಸ್ಥಾಪಕವಾಗಿ ಪ್ರತ್ಯೇಕವಾಗಿ ಸಾಂಕ್ಷಾಂಕ್ಷವಾಗುತ್ತದೆ ಎಂದರ್ಥ. ತೀರೇ ಘೋಷಃ ಎಂಬಲ್ಲಿ ಪದಸಾಮಾನ್ಯವು ಇರುವ ಕಾರಣ ದೋಷ ಬರುವುದಿಲ್ಲ.

ಉತ್ತರ : ಈ ಲಕ್ಷಣವು ಗುರುಭೂತವಾದ ಲಕ್ಷಣವಾಗಿದೆ. ಇದಕ್ಕಿಂತ ಲಘುಭೂತವಾಗಿ ಹೀಗೆ ಲಕ್ಷಣವನ್ನು ಮಾಡಲು ಬರುತ್ತದೆ. ಪರಸ್ಪರಾನ್ವಯ ಪ್ರತಿಯೋಗ್ಯುಪಸ್ಥಾಪಕತ್ವಂ ಸಾಕಾಂಕ್ಷತ್ವಂ ಎಂದೇ ಲಕ್ಷಣ ಸಾಕು. ಆದ್ದರಿಂದ ಪೂರ್ವೋಕ್ತಲಕ್ಷಣವೂ ಸಹ ಸರಿಯಲ್ಲ.

## ಜನಿತಾನ್ವಯ ವಾಕ್ಯಗಳು ಲಕ್ಷ್ಯವೇ

ननु परस्परमन्वयप्रतियोग्युपस्थापकत्वं साकाङ्क्षत्वमित्ययुक्तम् । जनितान्वयबोधेष्वतिव्याप्तेरिति चेत्, न । तेषामपि लक्ष्यत्वात् । न च जनितान्वयबोधेनापि पुनरन्वयबोधापत्तिः । अन्वयबोध-हेतोः पदोपस्थितेर्विनश्यदवस्थापन्नत्वात् ।

ಪ್ರಶ್ನೆ : ಪರಸ್ಪರವಾಗಿ ಅನ್ವಯಪ್ರತಿಯೋಗಿಗಳನ್ನು ಉಪಸ್ಥಾಪನೆ ಮಾಡುವುದು ಎಂಬ

ಅರ್ಥವನ್ನು ಹೇಳಿದಾಗ ಒಮ್ಮೆ ಅನ್ವಯವನ್ನು ಹುಟ್ಟಿಸಿದ ಶಬ್ದಗಳಲ್ಲಿ ಮತ್ತೂ ಸಹ ಅನ್ವಯ-ಪ್ರತಿಯೋಗ್ಯುಪಸ್ಥಾಪಕತ್ವರೂಪವಾದ ಧರ್ಮವಿರುವ ಕಾರಣ ಪುನಃ ಅವುಗಳಿಗೆ ಸಾಕಾಂಕ್ಷತ್ವವು ಬಂದು ಮತ್ತೆ ಅನ್ವಯಬೋಧ ಬರುವ ಪ್ರಸಂಗ ಬರುತ್ತದೆ. ಆದ್ದರಿಂದ ಜನಿತಾನ್ವಯ ಬೋಧಕ ವಾಕ್ಯಗಳಲ್ಲಿ ಅತಿವ್ಯಾಪ್ತಿಯು ಬರುತ್ತದೆಯಲ್ಲವೇ?

ಉತ್ತರ : ಇವುಗಳೂ ಸಹ ಲಕ್ಷ್ಯವೇ ಆಗಿವೆ. ಆದ್ದರಿಂದ ಅತಿವ್ಯಾಪ್ತಿ ಬರುವುದಿಲ್ಲ. ಮತ್ತೊಮ್ಮೆ ಅನ್ವಯಬೋಧ ಬರಲಿ ಎಂಬ ಪ್ರಸಂಗವೂ ಸಹ ಇಲ್ಲ. ಅನ್ವಯಬೋಧಕ್ಕೆ ಕಾರಣವಾದ ಪದೋಪಸ್ಥಿತಿಯು ನಾಶವಾಗುವ ಅವಸ್ಥೆಯನ್ನು ಹೊಂದಿರುತ್ತದೆ.

## 'ಪದ' ಎಂದರೆ ಪದೋಪಸ್ಥಿತಿ - ರುಚಿದತ್ತ

**यच्चोक्तं रुचिदत्तेन अत्र पदपदं तदुपस्थितिपरम् । तेन मौनिश्लोकाव्याप्तिः, पदस्य स्वभावत एवाननुभावकत्वेना-सम्भवश्चेति दोषद्वयमलग्नकं बोध्यमिति । तदपि न । मौनि-श्लोकस्यैवासत्त्वेन तत्राव्याप्तिपरिहाराय विवक्षाकरणायोगात् ।**

ರುಚಿದತ್ತನು ಈ ದೋಷಗಳನ್ನು ಪರಿಹರಿಸಿಕೊಳ್ಳಲು ಪದಶಬ್ದವು ಪದೋಪಸ್ಥಿತಿಪರವಾಗಿದೆ. ಹೀಗೆ ಹೇಳುವ ಮುಖಾಂತರ ಮೌನಿಶ್ಲೋಕಗಳಲ್ಲಿ ಅವ್ಯಾಪ್ತಿಯು ಬರುವುದಿಲ್ಲ. ಪದವು ಸ್ವಾಭಾವಿಕವಾಗಿಯೇ ಅನನುಭಾವಕವಾದ್ದರಿಂದ ಅಸಂಭವದೋಷವೂ ಸಹ ಇಲ್ಲ ಎಂಬುದಾಗಿ ಎರಡು ದೋಷಗಳನ್ನೂ ಸಹ ಪರಿಹರಿಸಿಕೊಳ್ಳುವ ಪ್ರಯತ್ನ ಮಾಡಿದ್ದಾನೆ.

ಇದೂ ಸಹ ಸರಿಯಲ್ಲ. ಮೌನಿಶ್ಲೋಕವೇ ಇಲ್ಲವಾದ್ದರಿಂದ, ಇಲ್ಲದೇ ಇರುವ ವಸ್ತುವಿನಲ್ಲಿ ದೋಷವನ್ನು ಪರಿಹಾರ ಮಾಡಿಕೊಳ್ಳಲು ಪದಶಬ್ದಕ್ಕೆ ಉಪಸ್ಥಿತಿಪರವಾಗಿ ವಿವಕ್ಷೆ ಮಾಡಲು ಕಾರಣವಿಲ್ಲ.

## ಪರರಿಗೆ ಮೌನಿಶ್ಲೋಕವೇ ಇಲ್ಲ

**न हि परमते मौनिश्लोको नाम युज्यते । तथा हि । श्लोका नामानुपूर्वीविशेषावच्छिन्नवर्णाः । ते च परमते ताल्वोष्ठपुट-व्यापारजन्या एव न तु नित्याः । न च मौनी ताल्वोष्ठपुट-व्यापारवान् । तदभावे च तच्छ्लोकाभावः सिद्ध एव । कारणा-भावे कार्यस्यायोगात् ।**

ಪರಕೀಯರ ಸಿದ್ಧಾಂತದಂತೆ ಮೌನಿಶ್ಲೋಕ ಎಂಬುದೇ ಇಲ್ಲ. ಅದು ಹೀಗಿದೆ.

ಶ್ಲೋಕ ಎಂದರೆ ಆನುಪೂರ್ವೀವಿಶೇಷದಿಂದ ಕೂಡಿದ ಅಕ್ಷರಗಳ ಸಮೂಹ. ಈ ಅಕ್ಷರಗಳು ಅವರ ಸಿದ್ಧಾಂತದಂತೆ ಕಿರುನಾಲಿಗೆ ಮತ್ತು ತುಟಿಗಳ ವ್ಯಾಪಾರದಿಂದ ಹುಟ್ಟಿದವುಗಳು, ಹೊರತು ನಿತ್ಯವಲ್ಲ. ಮೌನ ಮಾಡುವವನು ಕಿರುನಾಲಿಗೆ ಮತ್ತು ತುಟಿಗಳನ್ನು ಅಲ್ಲಾಡಿಸುವುದಿಲ್ಲ. ತಾಲ್ವೋಷ್ಠಪುಟವ್ಯಾಪಾರವನ್ನು ಮಾಡುವುದಿಲ್ಲ ಎಂದರ್ಥ. ಈ ವ್ಯಾಪಾರವೇ ಇಲ್ಲದಿದ್ದರೆ ಅವ-ನಿಂದ ಯಾವ ಅಕ್ಷರಗಳೂ ಸಹ ಹೊರಡುವುದಿಲ್ಲ. ಆದ್ದರಿಂದ ಮೌನಿಯಿಂದ ಶ್ಲೋಕ ಹೊರಡುವುದಿಲ್ಲ ಎಂಬುದು ಸಿದ್ಧವಾದ ವಿಚಾರ. ಕಾರಣವೇ ಇಲ್ಲದಿದ್ದಾಗ ಕಾರ್ಯವು ಇರಲೂ ಸಹ ಸಾಧ್ಯವಿಲ್ಲ.

## ಅನ್ವಿತಾಭಿಧಾನದಲ್ಲಿ ಶಕ್ತವಾದ ಪದೋಪಸ್ಥಿತಿಯೇ ಬೋಧಕ್ಕೆ ಕಾರಣ

**किञ्च समीपस्थस्य समनस्कस्याबधिरस्य शब्दाः श्रोत्रग्राह्या एव । न च मौनिश्लोकस्तथाविधेन गृह्यत इत्यसन्नेव मौनिश्लोकोऽभ्यु-पगन्तव्यः । पदस्य स्वत एवाननुभावकत्वादित्यप्ययुक्तम् । पदानामन्वयाननुभावकत्वे पदोपस्थितेरनुभावकत्वाभावप्रसङ्गात् ।**

न हि पदोपस्थितिः पदोपस्थितिरित्येव घटाद्यन्वयबोधहेतुः । पटपदोपस्थितेरपि घटाद्यन्वयबोधहेतुत्वप्रसङ्गात् । किं नामान्विताभिधानशक्तपदोपस्थितित्वेन । तथा च पदानामनुभावकत्वमकामेनाप्यभ्युपगन्तव्यम् । परं तु पदानां करणत्वात्तदुपस्थितिरपि हेतुरिति ।

ಸಮೀಪದಲ್ಲಿ ಇರುವ ಸಮಾನ ಮನಸ್ಕನಾದ ಕಿವುಡಿಲ್ಲದ ವ್ಯಕ್ತಿಗೆ ಶಬ್ದಗಳು ಕೇಳಿಸುತ್ತದೆ. ಮೌನಿಶ್ಲೋಕವು ಈ ರೀತಿಯ ಶಬ್ದವಲ್ಲ. ಆದ್ದರಿಂದ ಇಲ್ಲದೇ ಇರುವ ಮೌನಿಶ್ಲೋಕವನ್ನೇ ಒಪ್ಪಬೇಕು. ಪದವು ಸ್ವಾಭಾವಿಕವಾಗಿಯೇ ಅರ್ಥ ಅನುಭಾವಕವಲ್ಲ ಎಂಬುದೂ ಸಹ ಸರಿಯಲ್ಲ. ಪದಗಳಿಗೆ ಅನ್ವಯ ಅನುಭಾವಕತ್ವವು ಇಲ್ಲದಿದ್ದ ಪಕ್ಷದಲ್ಲಿ ಪದೋಪಸ್ಥಿತಿಗೂ ಸಹ ಅನುಭಾವಕತ್ವವು ಇಲ್ಲದೇ ಹೋಗುವ ಪ್ರಸಂಗ ಬರುತ್ತದೆ. ಪದೋಪಸ್ಥಿತಿಯು 'ಪದೋಪಸ್ಥಿತಿ' ಎಂಬ ಧರ್ಮದಿಂದಲೇ ಘಟಾದಿ ಅನ್ವಯಬೋಧಕ್ಕೆ ಕಾರಣವಲ್ಲ. ಪಟ ಎಂಬ ಶಬ್ದವನ್ನು ಹೇಳಿದಾಗಲೂ ಸಹ ಘಟ ಮುಂತಾದ ಶಬ್ದಗಳ ಜೊತೆ ಅನ್ವಯಬೋಧವು ಬರುವ ಪ್ರಸಂಗ ಬರುತ್ತದೆ. ಮತ್ತೇನೆಂದರೆ ಅನ್ವಿತವಾದ ಅಭಿಧಾನದಲ್ಲಿ ಶಕ್ತವಾದ ಪದೋಪಸ್ಥಿತಿ ಎಂಬ ಧರ್ಮದಿಂದ ಅನ್ವಯಬೋಧಕ್ಕೆ ಕಾರಣ. ಆದ್ದರಿಂದ ಇಷ್ಟವಿಲ್ಲದೇ ಇದ್ದರೂ ಸಹ ಪದಗಳಿಗೆ ಅನುಭಾವಕತ್ವವನ್ನು ಒಪ್ಪಬೇಕು. ಮತ್ತೇನೆಂದರೆ ಪದಗಳು ಕರಣವಾದ್ದರಿಂದ ಪದೋಪಸ್ಥಿತಿಯನ್ನೂ ಸಹ ಕಾರಣ ಎಂದೂ ಒಪ್ಪಬೇಕು.

## ಮಣಿಗೆ ಬೆಂಬಲಿಸಿದ ರುಚಿದತ್ತನ ಲಕ್ಷಣವು ಅಸಾಧು

यदपि पदपदं तदुपस्थितिपरमिति विवक्षया दूषणद्वयमलग्नकं बोध्यमिति । तदप्ययुक्तम् । अविवक्षादशायां दोषद्वयस्यालग्नत्वेन तद्विवक्षयाऽलग्नत्वाभिधानायोगात् । न हि अव्याप्त्यसम्भवो

भवति असम्भवे वाऽव्याप्तिर्भवति । विरोधात् । येन दूषणद्वय-परिहाराय पदोपस्थितिविवक्षा युक्ता स्यात् ।। ५ ।।

इति मण्युक्ताकाङ्क्षालक्षणभङ्गः ।

ಪದ ಎಂಬ ಶಬ್ದಕ್ಕೆ ಪದೋಪಸ್ಥಿತಿಪರವಾಗಿ ಅರ್ಥವನ್ನು ವಿವಕ್ಷಿಸಿ ಅಸಂಭವ ಮತ್ತು ಅವ್ಯಾಪ್ತಿಗಳು ಘಟಿಸುವುದಿಲ್ಲ (ಅಲಗ್ನವಾಗುತ್ತವೆ) ಎಂದು ಹೇಳಿದ್ದೂ ಸಹ ಸರಿಯಲ್ಲ. ವಿವಕ್ಷೆಯೇ ಮಾಡದೇ ಇದ್ದಾಗ ದೋಷಗಳು ಲಗ್ನವೋ, ಅಲಗ್ನವೋ ಎಂಬ ಜಿಜ್ಞಾಸೆ ಕೊಡುವುದಿಲ್ಲ. ಅವ್ಯಾಪ್ತಿ ಬಂದಾಗ ಅಸಂಭವ ಬರುವುದಿಲ್ಲ. ಅಸಂಭವವಿದ್ದಾಗ ಅವ್ಯಾಪ್ತಿ ಬರುವುದಿಲ್ಲ. ಎರಡೂ ಸಹ ಪರಸ್ಪರ ವಿರುದ್ಧವಾಗಿವೆ. ಈ ಕಾರಣದಿಂದ ಈ ಎರಡೂ ದೋಷಗಳ ಪರಿಹಾರಕ್ಕಾಗಿ ಪದೋಪಸ್ಥಿತಿಯನ್ನು ವಿವಕ್ಷಾ ಮಾಡಿದ್ದು ಯುಕ್ತವಾಗುತ್ತಿತ್ತು. ಹೀಗೆ ರುಚಿದತ್ತನ ಆಕಾಂಕ್ಷಾ ಲಕ್ಷಣದ ವಿವರಣೆಯೂ ಸಹ ಸರಿಯಲ್ಲ.

ಇಲ್ಲಿಗೆ ಮಣ್ಯುಕ್ತ ಆಕಾಂಕ್ಷಾಲಕ್ಷಣಭಂಗವು ಸಮಾಪ್ತವಾಯಿತು.

## ಆಕಾಂಕ್ಷಾವುಳ್ಳ ಪದಗಳೇ ಶಾಬ್ದಬೋಧಜನಕ

सेयमाकाङ्क्षा न शाब्दधीहेतुः न वा तज्ज्ञानम् । किं नाम आकाङ्क्षावन्ति अनुसंहितानि पदान्येव शाब्दधीहेतवः । आकाङ्क्षायाः सम्भूयार्थान्वयप्रतीतिजननसामर्थ्यरूपत्वात् न हि सामर्थ्यं कारणम् । असमर्थस्य कारणत्वायोगेन तत्रापि सामर्थ्य वाच्यम् । तस्याप्येवमित्यनवस्थाप्रसङ्गात् । पदानामन्वयबोधसामर्थ्यसद्भावे व्युत्पत्तिमतः सामर्थ्यज्ञानविलम्बेन कार्यविलम्बादर्शनाच्च ।

ಆಕಾಂಕ್ಷೆಯಾಗಲೀ, ಆಕಾಂಕ್ಷಾಜ್ಞಾನವಾಗಲೀ ಶಾಬ್ದಬೋಧಕ್ಕೆ ಕಾರಣವಲ್ಲ ಮತ್ತೇನಂದರೆ ಆಕಾಂಕ್ಷಾ ಇರುವ ಹಾಗೂ ಅನುಸಂಹಿತವಾದ ಪದಗಳು ಮಾತ್ರವೇ ಶಾಬ್ದಬೋಧಜ್ಞಾನಕ್ಕೆ

ಕಾರಣ. ಆಕಾಂಕ್ಷೆಯು ಸಂಭೂಯ ಅರ್ಥಾನ್ವಯ ಪ್ರತೀತಿ ಹುಟ್ಟಿಸುವ ಸಾಮರ್ಥ್ಯವನ್ನು ಒಳಗೊಂಡಿದೆ. ಸಾಮರ್ಥ್ಯವು ಕಾರಣವಲ್ಲ. ಅಸಮರ್ಥವಾದದ್ದು ಕಾರಣವಾಗುವುದು ಸಾಧ್ಯವಿಲ್ಲವಾದ್ದರಿಂದ ಅಲ್ಲೂ ಸಹ ಸಾಮರ್ಥ್ಯವನ್ನು ಹೇಳಬೇಕು. ಅಲ್ಲಿರುವ ಸಾಮರ್ಥ್ಯವೂ ಸಹ ಸಾಕ್ಷಾತ್ತಾಗಿ ಕಾರಣವಲ್ಲವಾದ್ದರಿಂದ ಅಲ್ಲೂ ಪುನಃ ಸಾಮರ್ಥ್ಯವನ್ನು ಹೇಳಿದರೆ ಅನವಸ್ಥಾ ದೋಷವು ಬರುತ್ತದೆ.

ಆದ್ದರಿಂದ ಪದಗಳಿಗೆ ಅನ್ವಯಬೋಧ ಸಾಮರ್ಥ್ಯವಿದ್ದರೂ ಸಹ ವ್ಯುತ್ಪತ್ತಿ ಇದ್ದ ವ್ಯಕ್ತಿಗೆ ಅವನ ಸಾಮರ್ಥ್ಯ ಜ್ಞಾನದಲ್ಲಿ ವಿಳಂಬವಾಗಿ ಅದರಿಂದ ಉಂಟಾಗುವ ಅರ್ಥಜ್ಞಾನದಲ್ಲೂ ಸಹ ವಿಳಂಬವೂ ಕಂಡು ಬರುವುದಿಲ್ಲ.

## 'ಅಯಮೇತಿ ಪುತ್ರಃ' ಎಂಬಲ್ಲಿ ಬೋಧಕ್ರಮ

**न चैवं सति अयमेति पुत्रो राज्ञः पुरुषोऽपसार्यतामित्यत्र राजपदस्य पुत्रपदेनेव पुरुषपदेनापि साकाङ्क्षत्वात् पुरुषपदेनान्वयबोधापत्तिरिति वाच्यम् । पुत्रपदेनान्वयतात्पर्यग्रहस्य प्रतिबन्धकत्वात् । ततः पूर्वं तु भवत्येवान्वयबोधः ।**

ಪ್ರಶ್ನೆ : 'ಅಯಮೇತಿ ಪುತ್ರೋ ರಾಜ್ಞಃ ಪುರುಷಃ ಅಪಸಾರ್ಯತಾಂ' ಎಂಬ ವಾಕ್ಯದಲ್ಲಿ ರಾಜಪದಕ್ಕೆ ಪುತ್ರಪದದ ಜೊತೆಗೆ ಅನ್ವಯವಿರುವಂತೆ ಪುರುಷ ಪದದ ಜೊತೆಗೂ ಆಕಾಂಕ್ಷೆಯು ಇರುವುದರಿಂದ ಪುರುಷ ಪದದ ಜೊತೆಗೆ ಅನ್ವಯವು ಬರಬೇಕಾದೀತು.

ಉತ್ತರ : ಇಲ್ಲಿ ಪುತ್ರಪದದ ಜೊತೆಗೆ ಅನ್ವಯವಿದೆ ಎಂಬ ತಾತ್ಪರ್ಯಗ್ರಹಣವೇ ಪುರುಷ ಪದದ ಜೊತೆಗೆ ಅನ್ವಯಬೋಧ ಬರದೇ ಇರಲು ಪ್ರತಿಬಂಧಕವಾಗಿದೆ. ಈ ತಾತ್ಪರ್ಯಗ್ರಹಣಕ್ಕಿಂತ ಮುಂಚೆಯಾದರೂ ಪ್ರತಿಬಂಧಕವಿಲ್ಲದೇ ಇರುವುದರಿಂದ ಅನ್ವಯಬೋಧ ಬಂದರೂ ಬರಬಹುದು. ಆದ್ದರಿಂದ ಸಾಮರ್ಥ್ಯವನ್ನು ಕಾರಣ ಎಂದು ಹೇಳಬಾರದು.

भवति असम्भवे वाऽव्याप्तिर्भवति । विरोधात् । येन दूषणद्वय-परिहाराय पदोपस्थितिविवक्षा युक्ता स्यात् ।। ५ ।।

इति मण्युक्ताकाङ्क्षालक्षणभङ्गः ।

ಪದ ಎಂಬ ಶಬ್ದಕ್ಕೆ ಪದೋಪಸ್ಥಿತಿಪರವಾಗಿ ಅರ್ಥವನ್ನು ವಿವಕ್ಷಿಸಿ ಅಸಂಭವ ಮತ್ತು ಅವ್ಯಾಪ್ತಿಗಳು ಘಟಿಸುವುದಿಲ್ಲ (ಅಲಗ್ನವಾಗುತ್ತವೆ) ಎಂದು ಹೇಳಿದ್ದೂ ಸಹ ಸರಿಯಲ್ಲ. ವಿವಕ್ಷೆಯೇ ಮಾಡದೇ ಇದ್ದಾಗ ದೋಷಗಳು ಲಗ್ನವೋ, ಅಲಗ್ನವೋ ಎಂಬ ಜಿಜ್ಞಾಸೆ ಕೊಡು-ವುದಿಲ್ಲ. ಅವ್ಯಾಪ್ತಿ ಬಂದಾಗ ಅಸಂಭವ ಬರುವುದಿಲ್ಲ. ಅಸಂಭವವಿದ್ದಾಗ ಅವ್ಯಾಪ್ತಿ ಬರುವುದಿಲ್ಲ. ಎರಡೂ ಸಹ ಪರಸ್ಪರ ವಿರುದ್ಧವಾಗಿವೆ. ಈ ಕಾರಣದಿಂದ ಈ ಎರಡೂ ದೋಷಗಳ ಪರಿಹಾರಕ್ಕಾಗಿ ಪದೋಪಸ್ಥಿತಿಯನ್ನು ವಿವಕ್ಷಾ ಮಾಡಿದ್ದು ಯುಕ್ತವಾಗುತ್ತಿತ್ತು. ಹೀಗೆ ರುಚಿದತ್ತನ ಆಕಾಂಕ್ಷಾ ಲಕ್ಷಣದ ವಿವರಣೆಯೂ ಸಹ ಸರಿಯಲ್ಲ.

ಇಲ್ಲಿಗೆ ಮಣ್ಯುಕ್ತ ಆಕಾಂಕ್ಷಾಲಕ್ಷಣಭಂಗವು ಸಮಾಪ್ತವಾಯಿತು.

## ಆಕಾಂಕ್ಷಾವುಳ್ಳ ಪದಗಳೇ ಶಾಬ್ದಬೋಧಜನಕ

सेयमाकाङ्क्षा न शाब्दधीहेतुः न वा तज्ज्ञानम् । किं नाम आकाङ्क्षावन्ति अनुसंहितानि पदान्येव शाब्दधीहेतवः । आकाङ्क्षायाः सम्भूयार्थान्वयप्रतीतिजननसामर्थ्यरूपत्वात् न हि सामर्थ्यं कारणम् । असमर्थस्य कारणत्वायोगेन तत्रापि सामर्थ्य वाच्यम् । तस्याप्येवमित्यनवस्थाप्रसङ्गात् । पदानामन्वयबोधसामर्थ्यसद्भावे व्युत्पत्तिमतः सामर्थ्यज्ञानविलम्बेन कार्यविलम्बादर्शनाच्च ।

ಆಕಾಂಕ್ಷೆಯಾಗಲೀ, ಆಕಾಂಕ್ಷಾಜ್ಞಾನವಾಗಲೀ ಶಾಬ್ದಬೋಧಕ್ಕೆ ಕಾರಣವಲ್ಲ ಮತ್ತೇನಂದರೆ ಆಕಾಂಕ್ಷಾ ಇರುವ ಹಾಗೂ ಅನುಸಂಹಿತವಾದ ಪದಗಳು ಮಾತ್ರವೇ ಶಾಬ್ದಬೋಧಜ್ಞಾನಕ್ಕೆ

ಕಾರಣ. ಆಕಾಂಕ್ಷೆಯು ಸಂಭೂಯ ಅರ್ಥಾನ್ವಯ ಪ್ರತೀತಿ ಹುಟ್ಟಿಸುವ ಸಾಮರ್ಥ್ಯವನ್ನು ಒಳಗೊಂಡಿದೆ. ಸಾಮರ್ಥ್ಯವು ಕಾರಣವಲ್ಲ. ಅಸಮರ್ಥವಾದದ್ದು ಕಾರಣವಾಗುವುದು ಸಾಧ್ಯವಿಲ್ಲವಾದ್ದರಿಂದ ಅಲ್ಲೂ ಸಹ ಸಾಮರ್ಥ್ಯವನ್ನು ಹೇಳಬೇಕು. ಅಲ್ಲಿರುವ ಸಾಮರ್ಥ್ಯವೂ ಸಹ ಸಾಕ್ಷಾತ್ತಾಗಿ ಕಾರಣವಲ್ಲವಾದ್ದರಿಂದ ಅಲ್ಲೂ ಪುನಃ ಸಾಮರ್ಥ್ಯವನ್ನು ಹೇಳಿದರೆ ಅನವಸ್ಥಾ ದೋಷವು ಬರುತ್ತದೆ.

ಆದ್ದರಿಂದ ಪದಗಳಿಗೆ ಅನ್ವಯಬೋಧ ಸಾಮರ್ಥ್ಯವಿದ್ದರೂ ಸಹ ವ್ಯುತ್ಪತ್ತಿ ಇದ್ದ ವ್ಯಕ್ತಿಗೆ ಅವನ ಸಾಮರ್ಥ್ಯ ಜ್ಞಾನದಲ್ಲಿ ವಿಳಂಬವಾಗಿ ಅದರಿಂದ ಉಂಟಾಗುವ ಅರ್ಥಜ್ಞಾನದಲ್ಲೂ ಸಹ ವಿಳಂಬವೂ ಕಂಡು ಬರುವುದಿಲ್ಲ.

## 'ಅಯಮೇತಿ ಪುತ್ರಃ' ಎಂಬಲ್ಲಿ ಬೋಧಕ್ರಮ

**न चैवं सति अयमेति पुत्रो राज्ञः पुरुषोऽपसार्यतामित्यत्र राजपदस्य पुत्रपदेनेव पुरुषपदेनापि साकाङ्क्षत्वात् पुरुषपदेनान्वयबोधापत्तिरिति वाच्यम् । पुत्रपदेनान्वयतात्पर्यग्रहस्य प्रतिबन्धकत्वात् । ततः पूर्वं तु भवत्येवान्वयबोधः ।**

ಪ್ರಶ್ನೆ : 'ಅಯಮೇತಿ ಪುತ್ರೋ ರಾಜ್ಞಃ ಪುರುಷಃ ಅಪಸಾರ್ಯತಾಂ' ಎಂಬ ವಾಕ್ಯದಲ್ಲಿ ರಾಜಪದಕ್ಕೆ ಪುತ್ರಪದದ ಜೊತೆಗೆ ಅನ್ವಯವಿರುವಂತೆ ಪುರುಷ ಪದದ ಜೊತೆಗೂ ಆಕಾಂಕ್ಷೆಯು ಇರುವುದರಿಂದ ಪುರುಷ ಪದದ ಜೊತೆಗೆ ಅನ್ವಯವು ಬರಬೇಕಾದೀತು.

ಉತ್ತರ : ಇಲ್ಲಿ ಪುತ್ರಪದದ ಜೊತೆಗೆ ಅನ್ವಯವಿದೆ ಎಂಬ ತಾತ್ಪರ್ಯಗ್ರಹಣವೇ ಪುರುಷ ಪದದ ಜೊತೆಗೆ ಅನ್ವಯಬೋಧ ಬರದೇ ಇರಲು ಪ್ರತಿಬಂಧಕವಾಗಿದೆ. ಈ ತಾತ್ಪರ್ಯಗ್ರಹಣಕ್ಕಿಂತ ಮುಂಚೆಯಾದರೂ ಪ್ರತಿಬಂಧಕವಿಲ್ಲದೇ ಇರುವುದರಿಂದ ಅನ್ವಯಬೋಧ ಬಂದರೂ ಬರಬಹುದು. ಆದ್ದರಿಂದ ಸಾಮರ್ಥ್ಯವನ್ನು ಕಾರಣ ಎಂದು ಹೇಳಬಾರದು.

## 'ಅಯಮೇತಿ ಪುತ್ರಃ' ಎಂಬಲ್ಲಿ ಎರಡು ಬಗೆಯ ಬೋಧ

**तथा हि । अयमेतीति वाक्यश्राविणः द्वावन्वयबोधौ भवतः । राज्ञः पुत्र इत्येकः, राज्ञः पुरुष इत्यपरः । ततः पुनरेष विचारो जायते । कः पुनरनयोरभिप्रेत इति । ततस्तात्पर्यगवेषणाय प्रवर्तते । प्रकरणादिवशात् पुत्रादान्वयतात्पर्यग्रहे पुनरनुसंहितेन वाक्येनायमेति राज्ञः पुत्र इत्यवधारणरूपं तात्पर्यविषया-न्वयविषयकं ज्ञानं जन्यते । तात्पर्यग्रहप्रतिन्त्वत्वात् राजपदस्य न पुनः पुरुषपदेनान्वयबोध उदेति । प्रागुत्पन्नस्तु पुरुष-पदार्थान्वयबोधो नाद्रीयते । तात्पर्यानुपपत्त्या यष्टीः प्रवेशये-त्यादौ दण्डप्रवेशबोधवत् ।। ६ ।।**

।। इत्याकाङ्क्षातज्ज्ञानयोः कारणत्वभङ्गः ।।

ಅದು ಹೀಗಿದೆ - 'ಅಯಮೇತಿ' ಎಂಬ ವಾಕ್ಯವನ್ನು ಕೇಳುವ ವ್ಯಕ್ತಿಗೆ ಎರಡು ರೀತಿಯಾಗಿ ಅನ್ವಯಬೋಧವು ಬರುತ್ತದೆ.

1.'ರಾಜ್ಞಃ ಪುತ್ರಃ' ಎಂಬುದಾಗಿ . 2. 'ರಾಜ್ಞಃ ಪುರುಷಃ' ಎಂಬುದು ಎರಡನೆಯದು,

ಈ ರಾಜನ ಮಗನು ಬರುತ್ತಿದ್ದಾನೆ. ಪುರುಷನೇ ದೂರ ಸರಿ ಎಂಬುದು ಮೊದಲನೆಯದರ ಅರ್ಥ.

ಈ ಮಗನು ಬರುತ್ತಿದ್ದಾನೆ, ರಾಜನ ಪುರುಷನೇ ದೂರ ಸರಿ ಎರಡನೆಯದರ ಅರ್ಥ.

ಇವುಗಳಲ್ಲಿ ಮತ್ತೆ ಹೀಗೆ ವಿಚಾರ ಹುಟ್ಟುತ್ತದೆ - ಈ ಎರಡು ವಾಕ್ಯದ ಅರ್ಥಗಳಲ್ಲಿ ಅಭಿಪ್ರೇತವಾದ ಅರ್ಥ ಯಾವುದು ಎಂಬುದಾಗಿ. 'ಇವನು ಬರುತ್ತಿದ್ದಾನೆ ಮಗನು, ರಾಜನ

ಪುರುಷನೇ ದೂರ ಸರಿ' ಎಂಬ ವಾಕ್ಯದಲ್ಲಿ ಅಭಿಪ್ರೇತವಾದ ತಾತ್ಪರ್ಯವು ಯಾವುದು ಎಂದು ವಿಚಾರ ಮಾಡಿದಾಗ ಪ್ರಸಂಗವನ್ನು ನೋಡಲಾಗುತ್ತದೆ. ಪ್ರಕರಣವಶಾತ್ ಅಲ್ಲಿ ರಾಜನ ಮಗನು ಬರುತ್ತಿದ್ದರೆ ರಾಜ್ಞಃ ಎಂಬ ಪದಕ್ಕೆ ಪುತ್ರ ಪದದ ಜೊತೆಗೆ ತಾತ್ಪರ್ಯವನ್ನು ಹಾಗೂ ಅನ್ವಯವನ್ನು ಗ್ರಹಣ ಮಾಡುತ್ತಾನೆ. ಅನಂತರ ಪುರುಷ ಪದದ ಜೊತೆಗೆ ಅನ್ವಯವಿದ್ದರೂ ಸಹ ಪ್ರಸಂಗದಲ್ಲಿ ರಾಜಪುರುಷನ ಪ್ರಸಕ್ತಿ ಇಲ್ಲವಾದ್ದರಿಂದ ರಾಜನ ಮಗನೇ ಬರುತ್ತಿದ್ದಾನೆ ಎಂಬ ನಿಶ್ಚಯ ಜ್ಞಾನವು ಉಂಟಾಗುತ್ತದೆ. ಆದ್ದರಿಂದ ಪುರುಷ ಪದದ ಜೊತೆಗೆ ಅನ್ವಯವನ್ನು ಮಾಡುವುದಿಲ್ಲ. ಮೊದಲು ಹುಟ್ಟಿದ ಅನ್ವಯಜ್ಞಾನವು ಪುರುಷ ಪದದ ಜೊತೆಗೆ ಆದರೂ ಸಹ ಅದನ್ನು ಅಂಗೀಕಾರ ಮಾಡುವುದಿಲ್ಲ. ತಾತ್ಪರ್ಯ ಅನುಪತ್ತಿಯೇ ಇಲ್ಲಿ ಪ್ರಬಲವಾದ ಕಾರಣ.

ಇದಕ್ಕೆ ದೃಷ್ಟಾಂತ - 'ಯಷ್ಟೀಃ ಪ್ರವೇಶಯ' ಎಂಬುದು. ದಂಡಗಳನ್ನು ಒಳಗೆ ಬಿಡು ಎಂದರೆ ದಂಡ ಹಿಡಿದು ಬಂದ ಮುದುಕರು ಅಥವಾ ರಾಜಭಟರು ಎಂದರ್ಥ ಹೊರತು ಕೇವಲ ಕೋಲುಗಳನ್ನು ರಾಜಮಂದಿರದ ಒಳಗೆ ಕಳಿಸು ಎಂದರ್ಥವಲ್ಲ. ಇಲ್ಲಿ ತಾತ್ಪರ್ಯವೇ ಪ್ರಧಾನವಾಗಿದೆ. ದಂಡ ಶಬ್ದಕ್ಕೆ ದಂಡಧರನಾದ ಪುರುಷನಲ್ಲಿ ತಾತ್ಪರ್ಯವು ಅಭಿಪ್ರೇತವಾಗಿದೆ. ಇದರಂತೆ ರಾಜನ ಮಗನು ಬರುತ್ತಿದ್ದಾನೆ ಎಂಬ ಅರ್ಥವೇ ಈ ಪ್ರಕರಣದಲ್ಲಿ ಪ್ರಸಕ್ತವಾದ್ದರಿಂದ ಈ ಅರ್ಥವೇ ಗ್ರಾಹ್ಯವಾಗಿದೆ.

**ಇಲ್ಲಿಗೆ ಆಕಾಂಕ್ಷಾ ಹಾಗೂ ಆಕಾಂಕ್ಷಾಜ್ಞಾನಗಳು ಸಾಕ್ಷಾತ್ ಶಾಬ್ದಬೋಧಕಾರಣಭಂಗವು ಸಮಾಪ್ತವಾಯಿತು.**

*****

## ಸ್ವಮತರೀತ್ಯಾ ಯೋಗ್ಯತಾನಿರೂಪಣೆ
## योग्यताप्रकरणम्

**योग्यता च अबाधितार्थकत्वम्, सा च प्रामाण्यप्रयोजिका । इयं च अपरा योग्यता यत् अन्वयप्रयोजकरूपवत्त्वम् । सा च**

**अर्थनिष्ठैव द्रवद्रव्यत्वादिरूपा । इयं च न शाब्दधीहेतुः । वह्निना सिञ्चेदिति वाक्यान्वयबोधदर्शनात् ।**

ಯೋಗ್ಯತೆ ಎಂದರೆ ಆ ಶಬ್ದದಿಂದ ಬರುವ ಅರ್ಥಕ್ಕೆ ಯಾವುದೇ ಬಾಧಕವು ಇರಬಾರದು ಎಂದರ್ಥ. ಇದೇ ಶಬ್ದದ ಪ್ರಾಮಾಣ್ಯಕ್ಕೆ ಪ್ರಯೋಜಕವಾದದ್ದು, ಇದರಂತೆ ಮತ್ತೊಂದು ಯೋಗ್ಯತೆಯೂ ಸಹ ಇದೆ. ಇದನ್ನು ಅನ್ವಯಪ್ರಯೋಜಕರೂಪವಾದಯೋಗ್ಯತಾ ಎಂದು ಕರೆಯುತ್ತೇವೆ. ಈ ಯೋಗ್ಯತೆಯು ಪದಾರ್ಥದಲ್ಲಿಯೇ ಇರುತ್ತದೆ. ದ್ರವದ್ರವ್ಯತ್ವ ಎಂಬ ಧರ್ಮವು ನೀರಿನಲ್ಲಿದೆ. ಇದು ಪ್ರಾಮಾಣ್ಯಕ್ಕೆ ಪ್ರಯೋಜಕವಲ್ಲ ಹಾಗೂ ಶಾಬ್ದಬೋಧಜ್ಞಾನಕ್ಕೂ ಕಾರಣವಲ್ಲ. ಏಕೆಂದರೆ ಬೆಂಕಿಯಿಂದ ಸಿಂಪಡಿಸುತ್ತಾನೆ. 'ವಹ್ನಿನಾ ಸಿಂಚೇತ್' ಎಂಬುದಾಗಿ ಪ್ರಯೋಗ ಮಾಡಿದಾಗ ಈ ವಾಕ್ಯದಿಂದ ಅನ್ವಯಬೋಧವು ಕಂಡಿದೆ. ಆದರೆ ಇದರಲ್ಲಿ ಯೋಗ್ಯತೆಯೂ ಇಲ್ಲ.

**ಯೋಗ್ಯತಾ ಜ್ಞಾನವೂ ಸಹ ಶಾಬ್ದಬೋಧಜ್ಞಾನಕ್ಕೆ ಕಾರಣವಲ್ಲ**

**नापि तज्ज्ञानम् । अनेनैव वाक्येन, तद्व्यतिरेकनिश्चयेऽपि, अन्वयबोधदर्शनात् । किन्तु इदमस्यां क्रियायां योग्यमिति व्यवहारहेतुः । अत एव लौकिकाः जलेन सिञ्चतीति वक्तारं बाधितार्थकत्वं ज्ञात्वाऽपि योग्यमेवायं सेककरणत्वेन ब्रवीति, अग्निना सिञ्चेदिति वक्तारं तु अयोग्यमेवायं ब्रवीतीति वदन्ति ।**

ಇದೇ ವಾಕ್ಯದಿಂದಲೇ ಬೆಂಕಿಯಿಂದ ಸಿಂಪಡಿಸಲು ಸಾಧ್ಯವಿಲ್ಲ ಎಂಬ ಅರ್ಥವೂ ಬಂದರೂ ಸಹ ನೀರಿನಿಂದಲೇ ಸಿಂಪಡಿಸಲು ಸಾಧ್ಯ ಎಂಬ ಅರ್ಥವು ಬಂದರೂ ಸಹ ಅನ್ವಯಬೋಧವು ಕಂಡು ಬರುತ್ತದೆ. ಆದ್ದರಿಂದ ಅರ್ಥನಿಷ್ಠವಾದ ಯೋಗ್ಯತೆಯು ವ್ಯವಹಾರಕ್ಕೆ ಮಾತ್ರವೇ ಕಾರಣ. ಇದು ಈ ಕ್ರಿಯೆಯಲ್ಲಿ ಯೋಗ್ಯ ಎಂದು ಇದರ ಅಭಿಪ್ರಾಯ. ಈ ಕಾರಣದಿಂದಲೇ ಲೌಕಿಕ

ಪುರುಷರು 'ಜಲೇನ ಸಿಂಚೇತ್'ಎಂದು ಪ್ರಯೋಗ ಮಾಡುವ ವ್ಯಕ್ತಿಯನ್ನು ನೋಡಿ ಇವನು ಯೋಗ್ಯವಾದ ಅರ್ಥವನ್ನೇ ಸೇಚನಕ್ಕೆ ಕರಣವಾಗಿ ಹೇಳುತ್ತಿದ್ದಾನೆ.

ಇದು ಸರಿಯಾದ ಅರ್ಥವೇ ಆಗಿದೆ ಎಂದು ಆ ವ್ಯಕ್ತಿಯು ಹೇಳುವ ಅರ್ಥವನ್ನು ಅಂಗೀಕರಿಸುತ್ತಾರೆ. ಆದರೆ 'ಅಗ್ನಿನಾ ಸಿಂಚೇತ್' ಎಂದು ಪ್ರಯೋಗ ಮಾಡುವ ವ್ಯಕ್ತಿಯನ್ನು ನೋಡಿ ಇವನು ಅಯೋಗ್ಯವಾದ ಅರ್ಥವನ್ನೇ ಹೇಳುತ್ತಿದ್ದಾನೆ ಎಂದು ಹೇಳುತ್ತಾರೆ.

**नापि प्रामाण्यप्रयोजिका । जलेन सिञ्चतीति अनाप्तवाक्ये तत्सद्भावेऽपि अप्रामाण्यदर्शनात् । आद्या प्रामाण्यप्रयोजिकाऽपि न शाब्दधीहेतुः । तदभावेऽपि शब्दाद् भ्रमदर्शनात् । नापि तज्ज्ञानम् । तद्व्यतिरेकनिश्चयेऽपि अग्निना सिञ्चेदिति वाक्यात्त-दर्थावगमदर्शनात् । अन्यथा बधिरकलहापत्तिः ।**

।। इति स्वमते योग्यतानिरूपणम् ।।

ಅರ್ಥನಿಷ್ಠವಾದ ಅನ್ವಯಪ್ರಯೋಜಕತ್ವರೂಪವಾದ ಯೋಗ್ಯತೆಯೂ ಪ್ರಾಮಾಣ್ಯಕ್ಕೆ ಪ್ರಯೋಜಕವಲ್ಲ. ಆಪ್ತನಲ್ಲದೇ ಇರುವ ವ್ಯಕ್ತಿಯು 'ಜಲೇನ ಸಿಂಚತಿ' ಎಂಬ ಪ್ರಯೋಗವನ್ನು ಮಾಡಿದಾಗ ಈ ವಾಕ್ಯದಲ್ಲಿ ಯೋಗ್ಯತಾ ಇದ್ದರೂ ಸಹ ಇದು ಅನಾಪ್ತಪ್ರಯುಕ್ತವಾದ್ದರಿಂದ ಈ ವಾಕ್ಯಕ್ಕೆ ಪ್ರಮಾಣ್ಯವನ್ನು ಹೇಳುವುದಿಲ್ಲ.

ಅಬಾಧಿತಾರ್ಥಕತ್ವರೂಪವಾದ ಯೋಗ್ಯತೆ ಪ್ರಾಮಾಣ್ಯ ಪ್ರಯೋಜಕವಾದರೂ ಸಹ ಶಾಬ್ದ-ಬೋಧಕ್ಕೆ ಕಾರಣವಲ್ಲ. ಇದಿಲ್ಲದೇ ಇದ್ದರೂ ಸಹ ಶಬ್ದದಿಂದ ಭ್ರಮೆ ಬರುವುದು ಕಂಡು ಬಂದಿದೆ. ಈ ಜ್ಞಾನವೂ ಸಹ ಕಾರಣವಲ್ಲ. ಇದಕ್ಕೆ ವಿರುದ್ಧವಾದ ನಿಶ್ಚಯವಿದ್ದರೂ ಸಹ ಯೋಗ್ಯತಾರಹಿತವಾಕ್ಯದಿಂದ ಇದರ ಯೋಗ್ಯತಾ ಸಹಿತವಾದ ಅರ್ಥ ಬರುವುದೂ ಸಹ ಕಂಡುಬರುತ್ತದೆ. ಹೀಗೆ ಒಪ್ಪದೇ ಇದ್ದರೆ ನಾನಾಡಿದ ಮಾತು ನಿನಗೆ ಅರ್ಥವಾಗದೆ, ನೀನಾಡಿದ ಮಾತೂ ಸಹ ನನಗೂ ಅರ್ಥವಾಗದೆ ವಾದವು ಕಿವುಡರ ಜಗಳದಂತೆ ಆಗಬೇಕಾಗುತ್ತದೆ.

**अर्थनिष्ठैव द्रवद्रव्यत्वादिरूपा । इयं च न शाब्दधीहेतुः । वह्निना सिञ्चेदिति वाक्यान्वयबोधदर्शनात् ।**

ಯೋಗ್ಯತೆ ಎಂದರೆ ಆ ಶಬ್ದದಿಂದ ಬರುವ ಅರ್ಥಕ್ಕೆ ಯಾವುದೇ ಬಾಧಕವು ಇರಬಾರದು ಎಂದರ್ಥ. ಇದೇ ಶಬ್ದದ ಪ್ರಾಮಾಣ್ಯಕ್ಕೆ ಪ್ರಯೋಜಕವಾದದ್ದು, ಇದರಂತೆ ಮತ್ತೊಂದು ಯೋಗ್ಯತೆಯೂ ಸಹ ಇದೆ. ಇದನ್ನು ಅನ್ವಯಪ್ರಯೋಜಕರೂಪವಾದಯೋಗ್ಯತಾ ಎಂದು ಕರೆಯುತ್ತೇವೆ. ಈ ಯೋಗ್ಯತೆಯು ಪದಾರ್ಥದಲ್ಲಿಯೇ ಇರುತ್ತದೆ. ದ್ರವದ್ರವ್ಯತ್ವ ಎಂಬ ಧರ್ಮವು ನೀರಿನಲ್ಲಿದೆ. ಇದು ಪ್ರಾಮಾಣ್ಯಕ್ಕೆ ಪ್ರಯೋಜಕವಲ್ಲ ಹಾಗೂ ಶಾಬ್ದಬೋಧಜ್ಞಾನಕ್ಕೂ ಕಾರಣವಲ್ಲ. ಏಕೆಂದರೆ ಬೆಂಕಿಯಿಂದ ಸಿಂಪಡಿಸುತ್ತಾನೆ. 'ವಹ್ನಿನಾ ಸಿಂಚೇತ್' ಎಂಬುದಾಗಿ ಪ್ರಯೋಗ ಮಾಡಿದಾಗ ಈ ವಾಕ್ಯದಿಂದ ಅನ್ವಯಬೋಧವು ಕಂಡಿದೆ. ಆದರೆ ಇದರಲ್ಲಿ ಯೋಗ್ಯತೆಯೂ ಇಲ್ಲ.

## ಯೋಗ್ಯತಾ ಜ್ಞಾನವೂ ಸಹ ಶಾಬ್ದಬೋಧಜ್ಞಾನಕ್ಕೆ ಕಾರಣವಲ್ಲ

**नापि तज्ज्ञानम् । अनेनैव वाक्येन, तद्व्यतिरेकनिश्चयेऽपि, अन्वयबोधदर्शनात् । किन्तु इदमस्यां क्रियायां योग्यमिति व्यवहारहेतुः । अत एव लौकिकाः जलेन सिञ्चतीति वक्तारं बाधितार्थकत्वं ज्ञात्वाऽपि योग्यमेवायं सेककरणत्वेन ब्रवीति, अग्निना सिञ्चेदिति वक्तारं तु अयोग्यमेवायं ब्रवीतीति वदन्ति ।**

ಇದೇ ವಾಕ್ಯದಿಂದಲೇ ಬೆಂಕಿಯಿಂದ ಸಿಂಪಡಿಸಲು ಸಾಧ್ಯವಿಲ್ಲ ಎಂಬ ಅರ್ಥವೂ ಬಂದರೂ ಸಹ ನೀರಿನಿಂದಲೇ ಸಿಂಪಡಿಸಲು ಸಾಧ್ಯ ಎಂಬ ಅರ್ಥವು ಬಂದರೂ ಸಹ ಅನ್ವಯಬೋಧವು ಕಂಡು ಬರುತ್ತದೆ. ಆದ್ದರಿಂದ ಅರ್ಥನಿಷ್ಠವಾದ ಯೋಗ್ಯತೆಯು ವ್ಯವಹಾರಕ್ಕೆ ಮಾತ್ರವೇ ಕಾರಣ. ಇದು ಈ ಕ್ರಿಯೆಯಲ್ಲಿ ಯೋಗ್ಯ ಎಂದು ಇದರ ಅಭಿಪ್ರಾಯ. ಈ ಕಾರಣದಿಂದಲೇ ಲೌಕಿಕ

ಪುರುಷರು 'ಜಲೇನ ಸಿಂಚೇತ್'ಎಂದು ಪ್ರಯೋಗ ಮಾಡುವ ವ್ಯಕ್ತಿಯನ್ನು ನೋಡಿ ಇವನು ಯೋಗ್ಯವಾದ ಅರ್ಥವನ್ನೇ ಸೇಚನಕ್ಕೆ ಕರಣವಾಗಿ ಹೇಳುತ್ತಿದ್ದಾನೆ.

ಇದು ಸರಿಯಾದ ಅರ್ಥವೇ ಆಗಿದೆ ಎಂದು ಆ ವ್ಯಕ್ತಿಯು ಹೇಳುವ ಅರ್ಥವನ್ನು ಅಂಗೀಕರಿಸುತ್ತಾರೆ. ಆದರೆ 'ಅಗ್ನಿನಾ ಸಿಂಚೇತ್' ಎಂದು ಪ್ರಯೋಗ ಮಾಡುವ ವ್ಯಕ್ತಿಯನ್ನು ನೋಡಿ ಇವನು ಅಯೋಗ್ಯವಾದ ಅರ್ಥವನ್ನೇ ಹೇಳುತ್ತಿದ್ದಾನೆ ಎಂದು ಹೇಳುತ್ತಾರೆ.

**नापि प्रामाण्यप्रयोजिका । जलेन सिञ्चतीति अनाप्तवाक्ये तत्सद्भावेऽपि अप्रामाण्यदर्शनात् । आद्या प्रामाण्यप्रयोजिकाऽपि न शाब्दधीहेतुः । तदभावेऽपि शब्दाद् भ्रमदर्शनात् । नापि तज्ज्ञानम् । तद्व्यतिरेकनिश्चयेऽपि अग्निना सिञ्चेदिति वाक्यात्तदर्थावगमदर्शनात् । अन्यथा बधिरकलहापत्तिः ।**

।। इति स्वमते योग्यतानिरूपणम् ।।

ಅರ್ಥನಿಷ್ಠವಾದ ಅನ್ವಯಪ್ರಯೋಜಕತ್ವರೂಪವಾದ ಯೋಗ್ಯತೆಯೂ ಪ್ರಾಮಾಣ್ಯಕ್ಕೆ ಪ್ರಯೋಜಕವಲ್ಲ. ಆಪ್ತನಲ್ಲದೇ ಇರುವ ವ್ಯಕ್ತಿಯು 'ಜಲೇನ ಸಿಂಚತಿ' ಎಂಬ ಪ್ರಯೋಗವನ್ನು ಮಾಡಿದಾಗ ಈ ವಾಕ್ಯದಲ್ಲಿ ಯೋಗ್ಯತಾ ಇದ್ದರೂ ಸಹ ಇದು ಅನಾಪ್ತಪ್ರಯುಕ್ತವಾದ್ದರಿಂದ ಈ ವಾಕ್ಯಕ್ಕೆ ಪ್ರಮಾಣ್ಯವನ್ನು ಹೇಳುವುದಿಲ್ಲ.

ಅಬಾಧಿತಾರ್ಥಕತ್ವರೂಪವಾದ ಯೋಗ್ಯತೆ ಪ್ರಾಮಾಣ್ಯ ಪ್ರಯೋಜಕವಾದರೂ ಸಹ ಶಾಬ್ದ-ಬೋಧಕ್ಕೆ ಕಾರಣವಲ್ಲ. ಇದಿಲ್ಲದೇ ಇದ್ದರೂ ಸಹ ಶಬ್ದದಿಂದ ಭ್ರಮೆ ಬರುವುದು ಕಂಡು ಬಂದಿದೆ. ಈ ಜ್ಞಾನವೂ ಸಹ ಕಾರಣವಲ್ಲ. ಇದಕ್ಕೆ ವಿರುದ್ಧವಾದ ನಿಶ್ಚಯವಿದ್ದರೂ ಸಹ ಯೋಗ್ಯತಾರಹಿತವಾಕ್ಯದಿಂದ ಇದರ ಯೋಗ್ಯತಾ ಸಹಿತವಾದ ಅರ್ಥ ಬರುವುದೂ ಸಹ ಕಂಡುಬರುತ್ತದೆ. ಹೀಗೆ ಒಪ್ಪದೇ ಇದ್ದರೆ ನಾನಾಡಿದ ಮಾತು ನಿನಗೆ ಅರ್ಥವಾಗದೆ, ನೀನಾಡಿದ ಮಾತೂ ಸಹ ನನಗೂ ಅರ್ಥವಾಗದೆ ವಾದವು ಕಿವುಡರ ಜಗಳದಂತೆ ಆಗಬೇಕಾಗುತ್ತದೆ.

## ಗಂಗೇಶೋಪಾಧ್ಯಾಯ ಹೇಳಿದ ಆಕಾಂಕ್ಷಾಲಕ್ಷಣ

**अत्राह गङ्गेशः । बाधकप्रमाविरहो योग्यता । सा चेतरपदार्थसंसर्गे अपरपदार्थनिष्ठात्यन्ताभावप्रतियोगित्वप्रमाविशेष्यत्वाभावः । प्रमेयं वाच्यम् इत्यत्र प्रमेयनिष्ठात्यन्ताभावप्रतियोगित्वप्रमा-विशेष्यत्वं गोत्वे प्रसिद्धम् । वाच्यत्वसंसर्गे तदभावः । वस्तुतस्तु इतरपदार्थसंसर्गे अपरपदार्थनिष्ठात्यन्ताभावप्रतियोगितावच्छेदक-धर्मशून्यत्वं योग्यता । सेयं न स्वरूपसती प्रयोजिका । किन्तु संशयविपर्ययप्रमासाधारणं तज्ज्ञानं हेतुरिति ।**

ಈ ಪ್ರಸಂಗದಲ್ಲಿ ಗಂಗೇಶೋಪಾಧ್ಯಾಯ ಹೇಳುವ ಲಕ್ಷಣ ಹೀಗಿದೆ -

'ಬಾಧಕಪ್ರಮಾವಿರಹಃ ಯೋಗ್ಯತಾ' ಎಂಬುದಾಗಿ ಯೋಗ್ಯತೆಯ ಲಕ್ಷಣ. ಇದು ಇತರ ಪದಾರ್ಥಸಂಸರ್ಗದಲ್ಲಿ ಅಪರಪದಾರ್ಥನಿಷ್ಠವಾದ ಅತ್ಯಂತಾಭಾವಪ್ರತಿಯೋಗಿತ್ವಪ್ರಮಾ-ವಿಶೇಷ್ಯತ್ವಾಭಾವರೂಪವಾದದ್ದು. 'ಪ್ರಮೇಯಂ ವಾಚ್ಯಂ' ಎಂಬಲ್ಲಿ ಪ್ರಮೇಯನಿಷ್ಠ ಅತ್ಯಂತಾ-ಭಾವ ಪ್ರತಿಯೋಗಿತ್ವರೂಪವಾದ ಪ್ರಮಾವಿಶೇಷ್ಯತ್ವವು ಗೋತ್ವದಲ್ಲಿ ಇದೆ ಎಂಬುದು ಪ್ರಸಿದ್ಧ-ವಾಗಿದೆ. ವಾಚ್ಯತ್ವದ ಸಂಸರ್ಗದಲ್ಲಿ ಏತಾದೃಶಪ್ರಮಾವಿಶೇಷ್ಯತ್ವವು ಇಲ್ಲ. ವಾಸ್ತವಿಕವಾಗಿ ಇತರ ಪದಾರ್ಥಸಂಸರ್ಗದಲ್ಲಿ ಅಪರಪದಾರ್ಥನಿಷ್ಠ ಅತ್ಯಂತಾಭಾವಪ್ರತಿಯೋಗಿತಾವಚ್ಛೇದಕ ಧರ್ಮ-ಶೂನ್ಯತ್ವಂ ಎಂಬುದಾಗಿ ಯೋಗ್ಯತೆಯ ಲಕ್ಷಣ. ಇದು ಕೇವಲ ಇದ್ದ ಮಾತ್ರದಿಂದಲೇ ಪ್ರಯೋಜಕವಲ್ಲ. ಹೊರತಾಗಿ ಸಂಶಯ ವಿಪರ್ಯಯ ಪ್ರಮಾಸಾಧಾರಣವಾದ ಏತಾದೃಶ-ಜ್ಞಾನವೂ ಕಾರಣ ಎಂಬುದಾಗಿ ಅಭಿಪ್ರಾಯ ಪಡುತ್ತಾನೆ.

## ಯೋಗ್ಯತೆಯು ಪ್ರಮಾವಿಷಯತ್ವಾಭಾವರೂಪವಲ್ಲ

स स्थूलदृश्वा । बाधकप्रमाविरहो योग्यतेति योग्यताया

**निरूपितत्वेन पुनः सा चेति योग्यतानिरूपणाय योग्यता-परामर्शायोगात् । प्रमाविरहरूपायाः योग्यतायाः प्रमाविषयत्वा-भावरूपत्वाभिधानायोगाच्च ।**

ಇವನೂ ಸಹ ಸ್ಥೂಲವಾದ ಬುದ್ಧಿಯುಳ್ಳವನು. ಬಾಧಕಪ್ರಮಾ ಇರಬಾರದು ಎಂದು ಹೇಳಿದಾಗಲೇ ಯೋಗ್ಯತೆಯನ್ನು ಹೇಳಲಾಗಿದೆ. ಪುನಃ ಅದನ್ನು ನಿರೂಪಣೆ ಮಾಡಲು ಸಾ ಚ ಯೋಗ್ಯತಾ ಎಂದು ಹೇಳಿ ಯೋಗ್ಯತೆಯನ್ನು ನಿರೂಪಣೆ ಮಾಡುವ ಅವಶ್ಯಕತೆಯು ಇಲ್ಲ. ಪ್ರಮಾವಿರಹ ರೂಪವಾದ ಯೋಗ್ಯತೆಯು ಪ್ರಮಾವಿಷಯತ್ವಾಭಾವರೂಪವಾಗಲು ಸಾಧ್ಯವಿಲ್ಲ.

## ಅಪರತ್ವವು ಪದದಲ್ಲಿ ವಿಶೇಷಣವೋ? ಪದಾರ್ಥದಲ್ಲಿ ವಿಶೇಷಣವೋ?

**किञ्च अपरपदार्थेत्यत्र अपरत्वं पदविशेषणम् अपरं यत्पदमिति । आहोस्वित् पदार्थविशेषणम् । अपरो यः पदार्थ इति । नाद्यः । यजेतेतिपदस्य यागेष्टसाधनताबोधकस्याप्ययोमवत्वप्रसङ्गात् । न द्वितीयः । प्रमेयत्वे प्रमेयत्वमिति वाक्यस्यायोग्यत्वप्रसङ्गात् । वृक्षे कपिरिति वाक्यस्यायोग्यत्वप्रसङ्गाच्च । तत्र पदपदार्थभेदे विद्यमानेऽपि एकपदार्थसंसर्गस्याव्याप्यवृत्तित्वेन अपरपदार्थनिष्ठा-त्यन्ताभावप्रतियोगित्वप्रमाविशेष्यत्वात् ।**

ಅಪರಪದಾರ್ಥ ಎಂಬಲ್ಲಿ ಅಪರತ್ವವು ಪದಕ್ಕೆ ವಿಶೇಷಣವಾಗಿದೆ. ಅಪರವಾದ ಯಾವ ಪದವು ಪದಾರ್ಥಕ್ಕೆ ವಿಶೇಷಣವಾಗಿದೆ. ಅಪರವಾದ ಯಾವ ಪದವು ಎಂಬುದಾಗಿ. ಇವೆರಡರಲ್ಲಿ ಮೊದಲನೆಯ ಪಕ್ಷವು ಸರಿಯಲ್ಲ. 'ಯಜೇತ' ಎಂಬಲ್ಲಿ ಈ ಪದಕ್ಕೆ ಯಾಗ ಇಷ್ಟಸಾಧನತಾವನ್ನು ಹೇಳುತ್ತಿದ್ದರೂ ಕೂಡ, ಅಯೋಗ್ಯವಾಗುವ ಪ್ರಸಂಗ ಬರುತ್ತದೆ. ಪದಾರ್ಥಕ್ಕೆ ವಿಶೇಷಣ ಎಂಬ

ಎರಡನೆಯ ಪಕ್ಷವೂ ಸರಿಯಲ್ಲ. ಪ್ರಮೇಯತ್ವದಲ್ಲಿ ಪ್ರಮೇಯತ್ವವಿದೆ ಎಂಬ ವಾಕ್ಯವೂ ಸಹ ಅಯೋಗ್ಯವಾಗಬೇಕಾಗುತ್ತದೆ.

'ವೃಕ್ಷೇ ಕಪಿಃ' ಮರದಲ್ಲಿ ಕೋತಿ ಇದೆ ಎಂಬ ವಾಕ್ಯವೂ ಸಹ ಅಯೋಗ್ಯವಾಗಬೇಕಾಗುತ್ತದೆ. ಇಲ್ಲಿ ಪದ ಹಾಗೂ ಪದಾರ್ಥಗಳು ಭಿನ್ನ ಭಿನ್ನವಾಗಿ ಇದ್ದರೂ ಸಹ ಒಂದು ಪದಾರ್ಥದ ಸಂಬಂಧವು ಇನ್ನೊಂದು ಪದಾರ್ಥದಲ್ಲಿರುವ ಅತ್ಯಂತ ಭಾವ ಪ್ರತಿಯೋಗಿತ್ವ ಪ್ರಮಾಕ್ಕೆ ವಿಶೇಷ್ಯವಾಗಿದೆ. ಸಂಸರ್ಗವು ಅವ್ಯಾಪ್ಯವೃತ್ತಿಯಾಗಿರುವುದೇ ಕಾರಣ.

## ಮಣಿಕಾರ ಹೇಳಿದ ಯೋಗ್ಯತಾಲಕ್ಷಣದ ಸಮರ್ಥನೆ ಪಕ್ಷಧರನಿಂದ

**पक्षधरस्तु मण्युक्तलक्षणस्य दूषणमाशङ्क्य विवक्षां कृत्वा समादधौ । तथा हि अत्र वदन्ति । नेदं लक्षणं युक्तम् । गन्धवानाद्यक्षणवर्ती घट, इत्याद्यपि वाक्यं योग्यं स्यात् । प्रागभावसत्त्वेऽप्यत्यन्ताभावप्रतियोगित्वाभावात् । एवं ध्वंसस्थलेऽपि । अपि च द्रव्यं संयोगीत्यपि वाक्यमयोग्यं स्यात् । तन्निष्ठात्यन्ताभावप्रतियोगित्वात् संयोगस्येति ।**

ಪಕ್ಷಧರನು ಹೀಗೆ ಅಭಿಪ್ರಾಯ ಪಡುತ್ತಾನೆ - ಮಣಿಕಾರ ಹೇಳಿದ ಲಕ್ಷಣಕ್ಕೆ ದೋಷವನ್ನು ಹೇಳಿ ಅದಕ್ಕೆ ತನ್ನದೇ ಆದ ಸಮಾಧಾನವನ್ನು ಹೀಗೆ ನೀಡಿದ್ದಾನೆ.

ಹಿಂದೆ ಹೇಳಿದ ಯೋಗ್ಯತಾ ಲಕ್ಷಣವೂ ಸಹ ಸರಿಯಲ್ಲ. ಮೊದಲನೆಯ ಕ್ಷಣದಲ್ಲಿ ಹುಟ್ಟಿರುವ ಮಡಕೆಯು ಗಂಧವುಳ್ಳದ್ದು 'ಗಂಧವಾನ್ ಆದ್ಯಕ್ಷಣವರ್ತೀ ಘಟಃ' ಎಂಬ ವಾಕ್ಯವೂ ಸಹ ಯೋಗ್ಯವಾಗಬೇಕಾದೀತು. ಪ್ರಾಗಭಾವವು ಇದ್ದರೂ ಸಹ ಅತ್ಯಂತಾಭಾವ ಪ್ರತಿಯೋಗಿತ್ವವು ಇಲ್ಲ. ಇದರಂತೆ ಧ್ವಂಸಸ್ಥಳದಲ್ಲೂ ಸಹ ತಿಳಿಯಬೇಕು. ಇದರಂತೆ 'ದ್ರವ್ಯಂ ಸಂಯೋಗೀ' ಎಂಬ

ವಾಕ್ಯವೂ ಸಹ ಅಯೋಗ್ಯವಾಗಬೇಕಾದೀತು. ಸಂಯೋಗವೂ ದ್ರವ್ಯದಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ ಎಂದು ಹೇಳುತ್ತಾನೆ.

## ಸಿದ್ಧಾಂತದಲ್ಲಿ ಯೋಗ್ಯತಾಲಕ್ಷಣ

**अत्र वयं ब्रूमः । तात्पर्यविषयीभूतसंसर्गे तदाश्रयत्वाभिमतापर-पदार्थनिष्ठधर्मविरोधित्वप्रमाविशेष्यत्वाभावो योग्यता । तथा च तात्पर्यविषयविशिष्टवैशिष्ट्यसंसर्गे तादृशप्रागभावाद्यपि विरोधीति नातिव्याप्तिः । संयोगि द्रव्यमित्यत्रापि सामानाधिकरण्यमात्रे न विरोध इति नायोग्यत्वम् । विशिष्टवैशिष्ट्ये तु विरोध एवेति न योग्यता । यस्मिन् ज्ञाते यज्ज्ञाने नेत्यस्यैव विरोधित्वात् इति ।**

ಇದಕ್ಕೆ ನಮ್ಮ ಉತ್ತರ ಹೀಗಿದೆ -

ತಾತ್ಪರ್ಯವಿಷಯವಾದ ಸಂಬಂಧದಲ್ಲಿ ಅದಕ್ಕೆ ಆಶ್ರಯ ಎಂದು ಅಭಿಮತವಾದ ಮತ್ತೊಂದು ಪದಾರ್ಥದಲ್ಲಿ ಇರುವ ಧರ್ಮಕ್ಕೆ ವಿರೋಧಿಯಾದ ಪ್ರಮಾವಿಶೇಷ್ಯತ್ವದ ಇಲ್ಲದೇ ಇರುವಿಕೆಗೆ ಯೋಗ್ಯತೆ ಎಂದು ಹೆಸರು. ಹೀಗಾಗಿ ತಾತ್ಪರ್ಯವಿಷಯವಿಶಿಷ್ಟ ವೈಶಿಷ್ಟ್ಯ ಸಂಸರ್ಗ-ದಲ್ಲಿ ಇಂತಹ ಪ್ರಾಗಭಾವಾದಿಗಳು ಇದ್ದರೂ ಸಹ ವಿರೋಧಿ ಅಲ್ಲ ಎಂಬ ಕಾರಣದಿಂದ ಅತಿವ್ಯಾಪ್ತಿ ಇಲ್ಲ. 'ಸಂಯೋಗಿ ದ್ರವ್ಯಂ' ಎಂಬಲ್ಲಿ ಕೇವಲ ಸಾಮಾನಾಧಿಕರಣ್ಯದ ಅಂಶದಲ್ಲಿ ವಿರೋಧವಿಲ್ಲ. ಆದ್ದರಿಂದ ಅಯೋಗ್ಯತ್ವವನ್ನು ಹೇಳಬಾರದು. ವಿಶಿಷ್ಟವೈಶಿಷ್ಟ್ಯದಲ್ಲಿ ವಿರೋಧವೇ ಇರುವ ಕಾರಣ ಯೋಗ್ಯತೆಯು ಇರುವುದೇ ಇಲ್ಲ. ಯಾವುದರ ಜ್ಞಾನವು ಬಂದಾಗ ಯಾವ ಜ್ಞಾನವು ಇರುವುದೇ ಇಲ್ಲವೋ ಅವುಗಳಿಗೆ ಪರಸ್ಪರ ವಿರೋಧವೂ ಇದೆ.

## ಪರರು ಹೇಳಿದ ಅತಿವ್ಯಾಪ್ತಿ ಅಜ್ಞಾನಮೂಲಕ

**स स्थूलदृश्वा । गन्धप्रागभावावच्छिन्ने घटे गन्धसंसर्गस्य**

**समवायस्य नित्यत्वात् प्रागभावाभावेन, प्रागभावसत्त्वेऽपीति परोक्तातिव्याप्तित्युत्पादनस्याज्ञानमूलकस्य स्वीकारायोगात् ।**

ಇದೂ ಸಹ ಸ್ಥೂಲವಾದ ಅಭಿಪ್ರಾಯ - 'ಗಂಧಪ್ರಾಗಭಾವಾವಚ್ಛಿನ್ನಘಟದಲ್ಲಿ ಗಂಧ-ಸಂಸರ್ಗವು ಹಾಗೂ ಸಮವಾಯವು ನಿತ್ಯವಾದ್ದರಿಂದ ಪ್ರಾಗಭಾವವು ಇರುವುದಿಲ್ಲ. ಆದ್ದರಿಂದ ಪ್ರಾಗಭಾವವಿದ್ದರೂ ಸಹ ಎಂಬ ಪರಕೀಯರು ಹೇಳುವ ಅತಿವ್ಯಾಪ್ತಿಯ ವ್ಯುತ್ಪಾದನೆಯು ಅಜ್ಞಾನ ಮೂಲಕವಾಗಿದೆ. ಆದ್ದರಿಂದ ಇದನ್ನು ಸ್ವೀಕರಿಸುವುದು ಯೋಗ್ಯವಲ್ಲ.

## 'ದ್ರವ್ಯಂ ಸಂಯೋಗೀ' ಎಂಬಲ್ಲಿ ಅವ್ಯಾಪ್ತಿಯೇ ಬರುವುದಿಲ್ಲ

**द्रव्यं संयोगीत्यत्र दण्डीत्यादौ दण्डसम्बन्धस्येव, संयोगीत्यत्रापि संयोगससर्गस्यैव मतुबर्थतया ग्राह्यत्वात्, तस्य च समवायत्वेन द्रव्यनिष्ठात्यन्ताभावप्रतियोगित्वप्रमाविशेष्यत्वाभावाद् अव्याप्तेर-भावेन तत्स्वीकारायोगाच्च ।**

'ದ್ರವ್ಯಂ ಸಂಯೋಗೀ' ಎಂಬಲ್ಲಿ ಯಾವ ರೀತಿಯಾಗಿ ದಂಡೀ ಎಂದು ಹೇಳಿದಾಗ ದಂಡದ ಸಂಬಂಧವು ತೋರುತ್ತದೋ ಅದರಂತೆ ಸಂಯೋಗದ ಸಂಬಂಧವು ತೋರುತ್ತದೆ. ಸಂಯೋಗಿ ಎಂಬಲ್ಲಿರುವ ಮತುಪ್ ಪ್ರತ್ಯಯದ ಅರ್ಥವಾಗಿ ಇದನ್ನೇ ಗ್ರಹಣ ಮಾಡಬೇಕಾಗಿದೆ. ಈ ಅರ್ಥವು ಸಮವಾಯತ್ವೇನ ದ್ರವ್ಯನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವ ಪ್ರಮಾವಿಶೇಷ್ಯತ್ವ-ರೂಪವಲ್ಲವಾದ್ದರಿಂದ ಅವ್ಯಾಪ್ತಿಯು ಬರುವುದಿಲ್ಲ.

## ತಾತ್ಪರ್ಯವಿಷಯಸಂಸರ್ಗದಲ್ಲಿ ತದಾಶ್ರಯತ್ವನಿಷ್ಠತವಷ್ಟೇ ಸಾಕು

**अथ संयोगी एव अन्वयप्रतियोगीत्यभ्युपगम्यते तथाऽपि नाव्याप्तिः । तादात्म्यस्यैव संसर्गत्वात् । तस्य च द्रव्यनिष्ठत्वेन**

तन्निष्ठात्यन्ताभावप्रतियोगित्वाभावात् । तात्पर्यविषयसंसर्गे तदाश्रयत्वाभिमतनिष्ठत्वम् इत्येतावतैव पूर्णत्वेन तन्निष्ठधर्मविरोधित्वप्रकारकप्रमाविशेष्यत्वाभावपर्यन्तं धावनायोगाच्च ।

ಒಂದು ವೇಳೆ ಸಂಯೋಗಿಯನ್ನೇ ಅನ್ವಯಪ್ರತಿಯೋಗಿ ಎಂದು ಒಪ್ಪುವುದಾದರೆ ಅವ್ಯಾಪ್ತಿಯು ಬರುವ ಸಂಭವವಿರುತ್ತಿತ್ತು, ಆದರೆ ತಾದಾತ್ಮ್ಯವೇ ಸಂಸರ್ಗವಾದ್ದರಿಂದ ಇದು ದ್ರವ್ಯನಿಷ್ಠವಾದ್ದರಿಂದ, ತನ್ನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವವು ಬರುವುದಿಲ್ಲ. ತಾತ್ಪರ್ಯ ವಿಷಯ ಸಂಸರ್ಗದಲ್ಲಿ ತದಾಶ್ರಯತ್ವಾಭಿಮತನಿಷ್ಠತ್ವಂ ಎಂದಿಷ್ಟೇ ಲಕ್ಷಣವನ್ನು ಹೇಳಿದರೂ ಸಹ ಲಕ್ಷಣವು ಪೂರ್ಣವಾಗುವುದರಿಂದ ತನ್ನಿಷ್ಠಧರ್ಮವಿರೋಧಿತ್ವಪ್ರಕಾರಕಪ್ರಮಾವಿಶೇಷ್ಯತ್ವಾಭಾವದವರೆಗೆ ಲಕ್ಷಣವನ್ನು ಕೊಂಡೊಯ್ಯುವುದು ವ್ಯರ್ಥವೂ ಸಹ ಆಗುತ್ತದೆ.

## 'ಸಂಯೋಗೀ ದ್ರವ್ಯಂ' ಎಂಬಲ್ಲೂ ವಿರೋಧವಿಲ್ಲ

यदपि संयोगि द्रव्यमित्यत्रापि सामानाधिकरण्यमात्रे न विरोध इति नायोग्यता । विशिष्टवैशिष्ट्ये तु विरोध एवेत्ययोग्यतेति तदपि न । द्रव्यं संयोगीति वाक्यस्य द्रव्यत्वसमानाधिकरणतया संयोगबोधने विरोधाभावेन योग्यत्ववत् द्रव्यत्वविशिष्टे सर्वत्र संयोगवैशिष्ट्यमिति बोधनेऽपि विरोधाभावेन योग्यतासद्भावात् ।

'ಸಂಯೋಗೀ ದ್ರವ್ಯಂ' ಎಂಬಲ್ಲೂ ಸಹ ಕೇವಲ ಸಾಮಾನಾಧಿಕರಣ್ಯವನ್ನು ಹೇಳುವುದರಿಂದ ವಿರೋಧವಿಲ್ಲ ಎಂದು ಯೋಗ್ಯತಾ ಲಕ್ಷಣವನ್ನು ಅಲ್ಲಿ ಸಮನ್ವಯ ಮಾಡಿದ ಕ್ರಮವೂ ಸಹ ಸರಿಯಲ್ಲ. 'ದ್ರವ್ಯಂ ಸಂಯೋಗೀ' ಎಂಬಲ್ಲಿ ಈ ವಾಕ್ಯಕ್ಕೆ ದ್ರವ್ಯತ್ವದ ಸಮಾನಾಧಿಕರಣವಾಗಿ ಸಂಯೋಗವನ್ನು ಹೇಳಿದ ಪಕ್ಷದಲ್ಲಿ ವಿರೋಧವು ಇರುವುದಿಲ್ಲ. ಆದ್ದರಿಂದ ಯೋಗ್ಯತಾ ಇದೆ ಎಂದು ಹೇಳಲು ಬರುತ್ತದೆ.

ಇದರಂತೆ ದ್ರವ್ಯತ್ವ ವಿಶಿಷ್ಟವಾದ ಎಲ್ಲಾ ಪದಾರ್ಥಗಳಲ್ಲೂ, ಎಲ್ಲಾ ಸ್ಥಳಗಳಲ್ಲೂ ಸಹ ಸಂಯೋಗ ವೈಶಿಷ್ಟ್ಯವನ್ನು ಹೇಳಿದರೂ ಸಹ ವಿರೋಧವು ಬರುವುದಿಲ್ಲ. ಆದ್ದರಿಂದ ಯೋಗ್ಯತಾ ಲಕ್ಷಣವನ್ನು ಕೂಡಿಸಲು ಬರುತ್ತದೆ.

## ಅತ್ಯಂತಾಭಾವಪದವು ವಿರೋಧ್ಯರ್ಥಕವಾದ್ದರಿಂದ ರುಚಿದತ್ತನ ಮತ ನಿರಾಕೃತವಾಯಿತು

**एतेनैव अत्यन्ताभावपदं विरोधिपरं, तेन गन्धप्रागभावावच्छिन्नो घटो गन्धवानित्यादौ विशिष्टवैशिष्ट्यसंसर्गे प्रागभावादेरपि विरोधित्वान्नातिव्याप्तिरिति वदन् रुचिदत्तः परास्तो वेदितव्यः ।**

ಅತ್ಯಂತಾಭಾವಪದವು ವಿರೋಧಿಪರವಾಗಿದೆ. ಆದ್ದರಿಂದ ಗಂಧಪ್ರಾಗಭಾವಾವಚ್ಛಿನ್ನಘಟವು ಗಂಧವುಳ್ಳದ್ದು, ಮುಂತಾದ ಸ್ಥಳಗಳಲ್ಲಿ ವಿಶಿಷ್ಟವೈಶಿಷ್ಟ್ಯಸಂಸರ್ಗದಲ್ಲಿ ಪ್ರಾಗಭಾವಾದಿಗಳು ಇರುವುದರಿಂದ ಅವುಗಳ ವಿರೋಧವು ಬರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ ಎಂಬ ರುಚಿ-ದತ್ತನ ಲಕ್ಷಣವೂ ಸಹ ನಿರಾಸ ಮಾಡಿದಂತಾಯಿತು.

## ಗಂಧಪ್ರಾಗಭಾವವು ತತ್ಸಂಸರ್ಗಸಮವಾಯಕ್ಕೆ ವಿರೋಧಿಯಲ್ಲ

**गन्धप्रागभावस्य गन्धं प्रति विरोधित्वेऽपि तत्संसर्गसमवायं प्रति विरोधित्वाभावेनातिव्याप्तिपरिहाराभिधानायोगात् । ननु गन्ध-संसर्गं प्रति गन्धप्रागभावस्य विरोधित्वं नाम न तद्विरहरूपत्वम् । नापि तद्व्याप्यत्वम् । येनोक्तदोषः स्यात् । किं नाम तज्ज्ञान-प्रतिबन्धकज्ञानविषयत्वम् । तथा च गन्धप्रागभावस्य गन्धसंसर्ग**

प्रति विरोधित्वेन तत्प्रतियोगित्वप्रमाविशेप्यत्वाभावस्य गन्ध-संसर्गे अभावान्नातिव्याप्तिरिति चेत् । न ।

ಗಂಧಪ್ರಾಗಭಾವವೂ ಗಂಧವನ್ನು ಕುರಿತು ವಿರೋಧಿಯಾದರೂ ಸಹ ಗಂಧಪ್ರಾಗಭಾವ ಸಂಸರ್ಗಸಮವಾಯವನ್ನು ಕುರಿತು ವಿರೋಧಿಯಲ್ಲವಾದ್ದರಿಂದ ಅತಿವ್ಯಾಪ್ತಿಯನ್ನು ಹೇಳಿದ್ದೇ ಸರಿಯಲ್ಲ.

ಗಂಧಸಂಸರ್ಗವನ್ನು ಕುರಿತು ಗಂಧಪ್ರಾಗಭಾವವು ವಿರೋಧಿ ಎಂದರೆ ಗಂಧಪ್ರಾಗಭಾವ-ವಿರಹತ್ವರೂಪ ಅಥವಾ ತದ್‌ವ್ಯಾಪ್ಯತ್ವರೂಪವಾದ ವಿರೋಧವನ್ನು ಹೇಳುವುದಲ್ಲ. ಮತ್ತೇ-ನೆಂದರೆ ತದ್‌ಜ್ಞಾನಪ್ರತಿಬಂಧಕಜ್ಞಾನವಿಷಯತ್ವರೂಪವಾದದ್ದು. ಈಗ ಗಂಧಪ್ರಾಗಭಾವವು ಗಂಧಸಂಸರ್ಗವನ್ನು ಕುರಿತು ವಿರೋಧಿಯಾದ್ದರಿಂದ ತತ್ಪ್ರತಿಯೋಗಿತ್ವ ಪ್ರಮಾವಿಶೇಷತ್ವಾಭಾವವು ಗಂಧಸಂಸರ್ಗದಲ್ಲಿ ಇಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ ಎಂದು ಆಕ್ಷೇಪಿಸಲು ಬರುವುದಿಲ್ಲ.

## ತದಭಾವವ್ಯಾಪ್ಯವೂ ವಿರೋಧಿ

समवायेन गन्धज्ञानस्यापरपदार्थनिष्ठगन्धप्रागभावज्ञानविरोधित्वेऽपि गन्धसमवायज्ञानस्य विरोधित्वाभावात् । अस्तु वा कथञ्चित् विरोधित्वम् । तथाऽपि गन्धसंसर्गस्य गन्धप्रागभावप्रतियोगित्वाभावेन तत्प्रतियोगित्वप्रमाविशेष्यकत्वाभावोऽस्तीति अतिव्याप्तिरेव । न हि घटस्य घटात्यन्ताभाववत् तद्व्याप्यमपि विरोधीत्येतावता घटः स्वाभावस्येव तद्व्याप्यस्यापि प्रतियोगी भवति ।

ಸಮವಾಯ ಸಂಬಂಧದಿಂದ ಗಂಧಜ್ಞಾನವು ಅಪರಪದಾರ್ಥನಿಷ್ಠ ಪ್ರಾಗಭಾವಜ್ಞಾನಕ್ಕೆ

ವಿರೋಧಿಯಾದರೂ ಸಹ ಗಂಧಸಮವಾಯಜ್ಞಾನಕ್ಕೆ ವಿರೋಧಿಯಲ್ಲ ಅಥವಾ ಯಥಾಕಥಂ ಚಿತ್ ವಿರೋಧವನ್ನು ಒಪ್ಪಿದರೂ ಸಹ ಅತಿವ್ಯಾಪ್ತಿಯು ಇದ್ದೇ ಇದೆ. ಗಂಧಸಂಸರ್ಗವು ಗಂಧಪ್ರಾಗಭಾವ-ಪ್ರತಿಯೋಗಿಯಲ್ಲವಾದ್ದರಿಂದ ತತ್ಪ್ರತಿಯೋಗಿತ್ವ ಪ್ರಮಾವಿಶೇಷ್ಯತ್ವಾಭಾವವು ಇದೆ ಎಂಬುದಾಗಿ ಲಕ್ಷಣ ಸಮನ್ವಯವು ಆಗುತ್ತದೆ.

ಘಟಕ್ಕೆ ಘಟಾತ್ಯಂತಾಭಾವದ ಜೊತೆಗೆ ವಿರೋಧ ಇರುವಂತೆ ಘಟಾತ್ಯಂತಾಭಾವ ವ್ಯಾಪ್ಯವು ಸಹ ವಿರೋಧಿಯಾಗುತ್ತದೆ. ಇದರಿಂದ ಘಟವು ತನ್ನ ಅಭಾವವನ್ನು ಕುರಿತು ತಾನು ಪ್ರತಿಯೋಗಿ-ಯಾದಂತೆ ಸ್ವಾಭಾವ ವ್ಯಾಪ್ಯಕ್ಕೂ ಸಹ ಪ್ರತಿಯೋಗಿಯಾಗುವುದಿಲ್ಲ.

## ತಾರ್ಕಿಕರ ಮತ್ತೊಂದು ಯೋಗ್ಯತಾಲಕ್ಷಣದ ನಿರಾಕರಣೆ

**यत्तु, वस्तुतस्तु इतरपदार्थसंसर्गे अपरपदार्थनिष्ठात्यन्ताभावप्रतियोगितावच्छेदकधर्मशून्यत्वं योग्यतेति । तदपि न । इतरपदार्थसंसर्गमात्रे अपरपदार्थनिष्ठद्वित्वावच्छिन्नप्रतियोगिकात्यन्ताभावप्रतियोगितावच्छेदकद्वित्वस्य सत्वेन प्रतियोगितावच्छेदकधर्मशून्यत्वस्य क्वाप्यभावात् । प्रतियोगितावच्छेदकस्याव्यासज्यवृत्तित्वविवक्षायामपि वृक्षे कपिरिति वाक्यस्यायोग्यत्वापत्तेः । कपिसंयोगस्यापरनिष्ठात्यन्ताभावप्रतियोगितावच्छेदकधर्मवत्त्वात्। गन्धप्रागभावावच्छिन्नो घटो गन्धवानिति वाक्यस्य योग्यत्वापत्तेश्च । गन्धसमवायस्यापरपदार्थनिष्ठात्यन्ताभावप्रतियोगितावच्छेदकधर्मशून्यत्वात् ।**

'ಇತರಪದಾರ್ಥಸಂಸರ್ಗೇ ಅಪರಪದಾರ್ಥನಿಷ್ಠಅತ್ಯಂತಾಭಾವಪ್ರತಿಯೋಗಿತಾವಚ್ಛೇದಕ ಧರ್ಮ ಶೂನ್ಯತ್ವಂ ಯೋಗ್ಯತಾ' ಎಂಬ ಲಕ್ಷಣವು ಸಹ ಸರಿಯಲ್ಲ.

ಈ ಲಕ್ಷಣವು ಎಲ್ಲೂ ಬರುವುದಿಲ್ಲ. ಏಕೆಂದರೆ ಇತರ ಪದಾರ್ಥದ ಕೇವಲ ಸಂಬಂಧದಲ್ಲಿ ಮತ್ತೊಂದು ಪದಾರ್ಥದಲ್ಲಿರುವ ಧರ್ಮ ಎಂದರೆ ದ್ವಿತ್ವ. ತದವಚ್ಛಿನ್ನವಾದ ತತ್ಪ್ರತಿಯೋಗಿತಾಕ ಅತ್ಯಂತಾಭಾವ ಎಂದರೆ ದ್ವಿತ್ವಾಭಾವ. ತತ್ಪ್ರತಿಯೋಗಿತಾವಚ್ಛೇದಕವಾದ ಧರ್ಮ ಎಂದರೆ ದ್ವಿತ್ವ.

ಈ ಧರ್ಮವು ಇತರ ಪದಾರ್ಥ ಸಂಸರ್ಗಮಾತ್ರದಲ್ಲಿ ಇದೆ. ಆದ್ದರಿಂದ ಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವವನ್ನು ಯಾವುದೇ ಸಂಸರ್ಗದಲ್ಲಿ ಹೇಳಲು ಬರುವುದಿಲ್ಲ.

ಪ್ರಶ್ನೆ : ಪ್ರತಿಯೋಗಿತಾವಚ್ಛೇದಕಧರ್ಮವನ್ನು ವ್ಯಾಸಜ್ಯವೃತ್ತಿ ಎಂದು ಅಂಗೀಕರಿಸಿದರೆ ಈ ದೋಷವು ಬರುತ್ತದೆ. ಆದ್ದರಿಂದ ಹೀಗೆ ಒಪ್ಪದಿದ್ದರೆ ಯೋಗ್ಯತಾಲಕ್ಷಣವು ಸಂಗಮವಾಗುತ್ತದೆಯಲ್ಲವೇ?

ಉತ್ತರ : ಹೀಗೆ ಅವ್ಯಾಸಜ್ಯವೃತ್ತಿಯೆಂದು ಒಪ್ಪಿದಲ್ಲಿ 'ವೃಕ್ಷೇ ಕಪಿಃ' ಎಂಬ ವಾಕ್ಯವು ಅಯೋಗ್ಯವಾಗುವ ಪ್ರಸಂಗ ಬರುತ್ತದೆ. ಕಪಿ ಸಂಯೋಗವು ಅಪರಪದಾರ್ಥನಿಷ್ಠ ಅತ್ಯಂತಾಭಾವ ಪ್ರತಿಯೋಗಿತಾವಚ್ಛೇದಕ ಧರ್ಮವಾಗಿದೆ.

ಇದರಂತೆ ಗಂಧಪ್ರಾಗಭಾವವುಳ್ಳ ಘಟವು ಗಂಧವುಳ್ಳದ್ದಾಗಿದೆ. 'ಗಂಧಪ್ರಾಗಭಾವಾವಚ್ಛಿನ್ನಃ ಘಟಃ ಗಂಧವಾನ್' ಎಂಬ ವಾಕ್ಯವು ಯೋಗ್ಯವಾಗಬೇಕಾಗುತ್ತದೆ. ಏಕೆಂದರೆ ಗಂಧಸಮವಾಯವು ಅಪರಪದಾರ್ಥನಿಷ್ಠ ಅತ್ಯಂತಾಭಾವ ಪ್ರತಿಯೋಗಿತಾವಚ್ಛೇದಕಧರ್ಮರಹಿತವಾಗಿದೆ.

## ಯೋಗ್ಯತೆಯು ಸ್ವರೂಪಸತ್ತಾಗಿ ಕಾರಣವಲ್ಲ

यत्तु सेयं न स्वरूपसती प्रयोजिका किन्तु संशयविपर्ययप्रमासाधारणं तज्ज्ञानं हेतुरिति । तदपि न । ज्ञानस्यैव संशयविपर्ययप्रमाभेदभिन्नत्वात् संशयविपर्ययप्रमासाधारणत्वायोगेन संशयविपर्ययप्रमासाधारणं तज्ज्ञानं हेतुरित्युक्त्ययोगात् । उक्त-

रूपयोग्यताज्ञानाभावेऽपि प्रत्युत तद्विपरीतायोग्यताज्ञानसद्भावेऽपि वादिवाक्यात् शब्दबोधदर्शनेन तस्य तत्र हेतुत्वायोगाच्च । न च अयोग्यतया निश्चिताद्वादिवाक्यात् शाब्दबोधो न भवतीति वक्तुं शक्यम् । निराकरणाभावप्रसङ्गात् । दूष्याज्ञाने दूषणाभिधानायोगात् ।

ಯೋಗ್ಯತೆಯು ಸ್ವರೂಪಸತ್ತಾಗಿ ಪ್ರಯೋಜಕವಲ್ಲ ಮತ್ತೇನೆಂದರೆ ಸಂಶಯ, ವಿಪರ್ಯಯ, ಪ್ರಮಾಸಾಧಾರಣವಾದ ಯೋಗ್ಯತಾ ಜ್ಞಾನವು ಹೇತು ಎಂದು ಹಿಂದೆ ನಿರೂಪಿಸಲಾಗಿದೆ. ಈ ಪ್ರಕ್ರಿಯೆಯೂ ಸಹ ಸರಿಯಲ್ಲ. ಜ್ಞಾನವು ಸಂಶಯ, ವಿಪರೀತ ಜ್ಞಾನ, ಯಥಾರ್ಥ ಜ್ಞಾನ ಎಂಬುದಾಗಿ ಭಿನ್ನ ಭಿನ್ನವಾಗಿದೆ. ಆದ್ದರಿಂದ ಸಂಶಯ, ವಿಪರ್ಯಯ, ಹಾಗೂ ಪ್ರಮಾಗಳಲ್ಲಿ ಸಾಧಾರಣವಾಗಿ ಒಂದು ಜ್ಞಾನವನ್ನು ಹೇಳಲು ಬರುವುದಿಲ್ಲ. ಆದ್ದರಿಂದ 'ಸಂಶಯ-ವಿಪರ್ಯಯಪ್ರಮಾಸಾಧಾರಣಂ ತಜ್ಜ್ಞಾನಂ ಹೇತುಃ' ಎಂಬ ಲಕ್ಷಣವು ಸರಿಯಲ್ಲ. ಹಿಂದೆ ಹೇಳಿದ ಯೋಗ್ಯತಾ ಜ್ಞಾನವಿಲ್ಲದೆ ಇದ್ದರೂ ಮಾತ್ರವಲ್ಲದೆ ಇದಕ್ಕೆ ವಿಪರೀತವಾಗಿ ಅಯೋಗ್ಯತಾ-ಜ್ಞಾನವು ಇದ್ದರೂ ಸಹ ವಾದಿಗಳು ಆಡುವ ಮಾತಿನಿಂದ ಶಾಬ್ದಬೋಧವು ಖಂಡಿದೆಯಾದ್ದರಿಂದ ಈ ಸ್ಥಳದಲ್ಲಿ ಶಾಬ್ದಬೋಧವನ್ನು ಕುರಿತು ಹಿಂದೆ ಹೇಳೀದ ಯೋಗ್ಯತಾ ಜ್ಞಾನವು ಕಾರಣವು ಆಗದೇ ಇರಬೇಕಾದೀತು.

ಪ್ರಶ್ನೆ : ವಾದಿವಾಕ್ಯವು ಅಯೋಗ್ಯ ಎಂದು ನಿಶ್ಚಯವಾಗಿದೆ. ಆದ್ದರಿಂದ ಆ ವಾಕ್ಯದಿಂದ ಶಾಬ್ದಬೋಧವು ಹೇಗೆ ಬರಲು ಸಾಧ್ಯ?

ಉತ್ತರ : ವಾದಿವಾಕ್ಯವು ಅಯೋಗ್ಯವಾದರೂ ಸಹ ಅದರಿಂದ ಶಾಬ್ದಬೋಧಜ್ಞಾನವನ್ನು ಅಂಗೀಕಾರಮಾಡಲೇಬೇಕು. ಇಲ್ಲದಿದ್ದರೆ ವಾದಿವಾಕ್ಯವನ್ನು ನಿರಾಕರಣೆಯೇ ಮಾಡಲು ಸಾಧ್ಯ-ವಿಲ್ಲ. ದೂಷ್ಯವಾದ ಅಂಶದ ಜ್ಞಾನವೇ ಇಲ್ಲದಿದ್ದರೆ ಆ ವಾಕ್ಯಕ್ಕೆ ದೋಷವನ್ನೂ ಸಹ ಹೇಳಲು ಸಾಧ್ಯವಿಲ್ಲ.

## ವಿಷಯಾಬಾಧವೂ ಯೋಗ್ಯತೆಯಲ್ಲ

रुचिदत्तस्तु विषयाबाधो योग्यता । सा चेकान्वयप्रतियोगिन्य-परान्वयप्रतियोगिसंसर्गः । येन सम्बन्धेन यत्र यद् ग्राह्यं तेन तत्र तद्वत्त्वमिति यावत् । तज्ज्ञानं संशयसाधारणं कारणम् । पर्वतो वह्निमान् न वेतिवत् अयं पदार्थो अपरपदार्थसंसृष्टो न वेति संशयस्य सुलभत्वात् । तत्प्रमा च गुणः संशयेऽप्येककोटौ तथात्वमस्त्वेव । तदभावश्चायोग्यता । तन्निश्चयश्चाप्रामाण्य-शङ्काशून्यः प्रतिबन्धक इत्याह ।

ರುಚಿದತ್ತನು ಹೇಳುವ ಲಕ್ಷಣ ಹೀಗಿದೆ - 'ವಿಷಯಾಬಾಧಃ ಯೋಗ್ಯತಾ' ಎಂಬುದಾಗಿ ಇದು ಒಂದು ಪದಾರ್ಥದ ಅನ್ವಯಕ್ಕೆ ಪ್ರತಿಯೋಗಿಯಾದ ಪದಾರ್ಥದಲ್ಲಿ ಮತ್ತೊಂದು ಪದಾರ್ಥದ ಅನ್ವಯಪ್ರತಿಯೋಗಿಯ ಸಂಬಂಧವನ್ನು ತಿಳಿಸುತ್ತದೆ. ಯಾವ ಸಂಬಂಧದಿಂದ ಎಲ್ಲಿ ಯಾವುದು ಇದೆಯೋ ಆ ಸಂಬಂಧದಿಂದ ಆ ಪದಾರ್ಥವನ್ನು ಅಲ್ಲಿ ಸಂಬದ್ಧವಾಗಿದೆ ಎಂದು ತಿಳಿಸುವ ಧರ್ಮವೇ ಯೋಗ್ಯತಾ. ಈ ಜ್ಞಾನವು ಸಂಶಯಸಾಧಾರಣವಾದದ್ದು. ಪರ್ವತದಲ್ಲಿ ಅಗ್ನಿ ಇದೆಯೋ, ಇಲ್ಲವೋ ಎಂಬ ಸಂಶಯ ಬರುವಂತೆ ಈ ಪದಾರ್ಥವು ಮತ್ತೊಂದು ಪದಾರ್ಥದ ಸಂಬಂಧವನ್ನು ಹೊಂದಿದೆಯೋ, ಇಲ್ಲವೋ ಎಂಬ ಸಂಶಯವು ಸುಲಭವಾಗಿ ಹೇಳಬಹುದಾಗಿದೆ. ಈ ಜ್ಞಾನದ ಪ್ರಾಮಾಣ್ಯವು ಅಪ್ರಧಾನವಾಗಿದೆ. ಸಂಶಯದಲ್ಲಿ ಎರಡು ಕೋಟಿಗಳ ಮಧ್ಯದಲ್ಲಿ ಏಕಕೋಟಿಯಲ್ಲಿ ಅಪ್ರಾಧಾನವಾಗಿರುತ್ತದೆ. ಇಂತಹ ಗುಣಾಭಾವವೇ ಅಯೋಗ್ಯತಾ ಎಂದು ಕರೆಸುತ್ತದೆ. ಈ ಅಯೋಗ್ಯತಾಕ ನಿಶ್ಚಯವು ಅಪ್ರಾಮಾಣ್ಯಶಂಕಾರಹಿತವಾಗಿದ್ದರೆ ಅದು ಪ್ರತಿಬಂಧಕವಾಗುತ್ತದೆ.

स स्थूलदृश्वा । विषयाबाधो योग्यतेति योग्यताया निरूपितत्वेन पुनस्तन्निरूपणाय सा चेति परामर्शायोगात् । विषयबाधा-

**भावत्वेन निरूपिताया योग्यतायाः अन्वयप्रतियोगिसंसर्गात्मना निरूपणायोगाच्च ।**

ರುಚಿದತ್ತನ ಈ ಜ್ಞಾನವು ಸ್ಥೂಲವಾಗಿದೆ. ಒಮ್ಮೆ ಯೋಗ್ಯತೆಯ ಲಕ್ಷಣವನ್ನು 'ವಿಷಯಾಬಾಧಃ ಯೋಗ್ಯತಾ' ಎಂದು ನಿರೂಪಣೆ ಮಾಡಿ ಮತ್ತೆ ಅದನ್ನೇ ವಿವರಣೆ ಮಾಡಲು 'ಸಾ ಚ' ಎಂಬುದಾಗಿ ಪರಾಮರ್ಶೆ ಮಾಡುವುದು ಸರಿಯಲ್ಲ. ವಿಷಯಕ್ಕೆ ಬಾಧವಿಲ್ಲದೆ ಇದ್ದಲ್ಲಿ ಯೋಗ್ಯತೆಯು ಇರುತ್ತದೆ ಎಂದು ನಿರೂಪಣೆ ಮಾಡಿದ ಮೇಲೆ ಅನ್ವಯಕ್ಕೆ ಪ್ರತಿಯೋಗಿಯಾಗಿ ಹಾಗೂ ಅದರ ಸಂಬಂಧರೂಪವಾಗಿ ಯೋಗ್ಯತೆಯು ಇರುತ್ತದೆ ಎಂದು ಹೇಳುವುದು ಸರಿಯಲ್ಲ.

## ಸಂಶಯಸಾಧಾರಣವಾದ ಯೋಗ್ಯತಾಜ್ಞಾನವು ಕಾರಣವಲ್ಲ

**यदपि तज्ज्ञानं संशयसाधारणं कारणमिति तदपि न । ज्ञानत्वस्यैव संशयसाधारणत्वेन ज्ञानस्य संशयसाधारणत्वाभावात् । यदा योग्यताप्रमा तद्भ्रमो वा तिष्ठति तदा वाक्यस्य ज्ञातज्ञापकत्वेन वैयर्थ्यप्रसङ्गाच्च ।**

ಮತ್ತು ಯೋಗ್ಯತಾಜ್ಞಾನವು ಸಂಶಯಸಾಧಾರಣವಾಗಿ ಕಾರಣವಾಗಿದೆ. 'ತಜ್ಞಾನಂ ಸಂಶಯ-ಸಾಧಾರಣಂ ಕಾರಣಂ' ಎಂದು ನಿರೂಪಣೆ ಮಾಡಿದ್ದು ಸಹ ಸರಿಯಲ್ಲ. ಜ್ಞಾನತ್ವವು ಸಂಶಯ ಸಾಧಾರಣವೇ ಹೊರತು ಜ್ಞಾನವು ಸಂಶಯಸಾಧಾರಣವಲ್ಲ. ಯಾವಾಗ ಯೋಗ್ಯತಾಪ್ರಮಾವು ಅಥವಾ ಯೋಗ್ಯತಾಭ್ರಮೆಯು ಇರುತ್ತದೋ ಆಗ ವಾಕ್ಯವು ಹಿಂದೆ ಹೇಳಿದ ವಿಷಯವನ್ನೇ ಮತ್ತೂ ತಿಳಿಸುವುದರಿಂದ ಜ್ಞಾತಜ್ಞಾಪಕ ಎಂದಾಗಿ ವ್ಯರ್ಥವಾಗಬೇಕಾಗುತ್ತದೆ.

## ಯೋಗ್ಯತಾಸಂಶಯವೇ ಕಾರಣವೆನ್ನಿರಿ

**योग्यतासंशयस्यैव हेतुत्वमभिमतं न विपर्ययादीनामिति चेत् ।**

न । तथासति तत्संशयो हेतुरिति वक्तव्यत्वेन संशयसाधारणं तज्ज्ञाने कारणमित्युक्त्ययोगात् । प्रत्यक्षादिना घटं जानता घटोऽस्तीति वाक्याद्बोधाभावप्रसङ्गाच्च ।

ಪ್ರಶ್ನೆ : ಯೋಗ್ಯತಾಸಂಶಯವೇ ಹೇತು ಎಂದು ಹೇಳುತ್ತೇವೆ, ಹೊರತು ವಿಪರ್ಯಾದಿ-ಗಳಿಗೆ ಹೇತುತ್ವವನ್ನು ಹೇಳುವುದಿಲ್ಲ. ಹೀಗೆ ಹೇಳಿದಾಗ ಲಕ್ಷಣವು ಸರಿಯಾಗುತ್ತದೆಯೇ?

ಉತ್ತರ : ಹೀಗೆ ಹೇಳುವ ಪಕ್ಷದಲ್ಲಿ 'ತತ್ಸಂಶಯಃ ಹೇತುಃ' ಎಂದು ಹೇಳಬೇಕಾಗಿತ್ತು. ಹೊರತು 'ತಜ್ಜ್ಞಾನಂ ಸಂಶಯಸಾಧಾರಣಂ ಕಾರಣಂ' ಎಂದು ಹೇಳಿದ್ದು ಸರಿಯಲ್ಲ ಹಾಗೂ ಪ್ರತ್ಯಕ್ಷ ಅಥವಾ ಅನುಮಾನದಿಂದ ಘಟವನ್ನು ನೋಡಿ ಅದನ್ನು ತಿಳಿದ ವ್ಯಕ್ತಿಗೆ ಇನ್ನೊಬ್ಬ ಪ್ರಯೋಗ ಮಾಡುವ 'ಘಟಃ ಅಸ್ತಿ' ಘಟವು ಇದೆ ಎಂಬ ಮಾತಿನಿಂದ ಜ್ಞಾನವೇ ಬರದೇ ಇರಬೇಕಾದೀತು.

## ಶ್ರೋತೃಗತವಾದ ಗುಣವು ಅಪ್ರಯೋಜಕ

यदपि तत्प्रमा च गुणः । संशयेऽप्येककोटौ तथात्वमस्त्येवेति । तदपि न । शाब्दप्रमायां वक्तृनिष्ठास्यादेरेव गुणत्वेन, श्रोतृनिष्ठ-योग्यताप्रमाया गुणत्वायोगात् । योगे वा संशयस्य सर्वत्राप्येक-कोटौ प्रमात्वेन भ्रान्तवाक्यजन्यज्ञानस्यापि प्रमात्वप्रसङ्गो दुर्वारः ।

'ತತ್ಪ್ರಮಾ ಚ ಗುಣಃ, ಸಂಶಯೇಪಿ ಏಕಕೋಟೌ ತಥಾತ್ವಂ ಅಸ್ತ್ಯೇವ' ಎಂಬುದಾಗಿ ನಿರೂಪಣೆ ಮಾಡಿದ್ದು ಸಹ ಸರಿಯಲ್ಲ. ಶಾಬ್ದಪ್ರಮಾದಲ್ಲಿ ವಕ್ತೃನಿಷ್ಠವಾದ ಆಪ್ತಿ ಮೊದಲಾದ ಧರ್ಮಗಳೇ ಗುಣವಾಗಿವೆ, ಹೊರತು ಕೇಳುಗನಲ್ಲಿರುವ ಯೋಗ್ಯತಾ ಪ್ರಮಾವು ಗುಣವಲ್ಲ,

ಒಂದು ವೇಳೆ ಇದನ್ನು ಗುಣ ಎಂದು ಒಪ್ಪಿದರೂ ಸಹ ಸಂಶಯದ ಎಲ್ಲಾ ಸ್ಥಳದಲ್ಲೂ ಸಹ ಒಂದು ಭಾಗದಲ್ಲಿ ಯಥಾರ್ಥವಾದ ಅಂಶವೇ ನಿಯಮೇನ ಇರುತ್ತದೆ. ಆದ್ದರಿಂದ ಭ್ರಾಂತಿಯಿಂದ ಹೇಳುವ ವಾಕ್ಯದಿಂದ ಹುಟ್ಟಿದ ಜ್ಞಾನವು ಸಹ ಯಥಾರ್ಥವೇ ಆಗಬೇಕಾದೀತು. ಇದನ್ನು ತಪ್ಪಿಸಲು ಸಾಧ್ಯವಿಲ್ಲ.

## ವಕ್ತೃವಿನಲ್ಲಿರುವ ಆಪ್ತತ್ವಾದಿಗುಣಗಳೇ ಪ್ರಯೋಜಕ

**वक्तुराप्त्याद्यभावात् न तज्जन्यं ज्ञानं प्रमेति चेत् । वक्तुराप्त्यादिकमेव गुणोऽस्तु । किं श्रोतृनिष्ठयोग्यताप्रमाया गुणत्वाङ्गीकारेण ।**

ಪ್ರಶ್ನೆ : ಹೇಳುವವನಿಗೆ ಆಪ್ತಿ ಮುಂತಾದ ಗುಣಗಳು ಇಲ್ಲವಾದ್ದರಿಂದ ಅವನಿಂದ ಹುಟ್ಟುವ ಜ್ಞಾನವು ಪ್ರಮಾಣವಾಗುವುದು ಹೇಗೆ? ಆದ್ದರಿಂದ ಅಲ್ಲಿ ಪ್ರಾಮಾಣ್ಯವನ್ನು ಅಂಗೀಕಾರ ಮಾಡುವುದಿಲ್ಲ. ಶ್ರೋತೃವಿನಲ್ಲೇ ಪ್ರಾಮಾಣ್ಯವನ್ನು ಒಪ್ಪಬಹುದಲ್ಲವೆ?

ಉತ್ತರ : ಹೀಗೆ ಏಕೆ ಅಂಗೀಕಾರ ಮಾಡಬೇಕು. ಕೇಳುವವನಲ್ಲಿರುವ ಯೋಗ್ಯತೆಯು ಯಥಾರ್ಥ ಎಂದು ಏಕೆ ಹೇಳಬೇಕು. ಮಾತನಾಡುವವನಿಗೆ ಸರಿಯಾದ ಜ್ಞಾನವಿದೆ ಎಂದು ಹೇಳಲು ಬರುತ್ತದೆ. ಆದ್ದರಿಂದ ಆಪ್ತ್ಯಾದಿಗಳೇ ಗುಣವಾಗುತ್ತದೆ. ಯೋಗ್ಯತಾ ಪ್ರಮಾವನ್ನು ಶೋತೃನಿಷ್ಠವಾಗಿ ಹೇಳಿ ಅದಕ್ಕೆ ಗುಣತ್ವವನ್ನು ಅಂಗೀಕಾರ ಮಾಡುವುದರಿಂದ ಯಾವ ಪ್ರಯೋಜನವು ಇಲ್ಲ.

## ಅಯೋಗ್ಯತಾಜ್ಞಾನಕ್ಕೆ ಪ್ರತಿಬಂಧಕತ್ವವನ್ನೂ ಸಮರ್ಥಿಸಲಾಗದು

**यदपि तदभावश्चायोग्यता । तन्निश्चयश्चाप्रामाण्यशङ्काशून्यः प्रतिबन्धक इति । तदपि न । अप्रामाण्यशङ्काशून्यायोग्यतानिश्चयसद्भावेऽपि अग्निना सिञ्चेदित्याद्युन्मत्तवाक्यस्य बोध-**

हेतुत्वदर्शनात् । कथमन्यथा तदर्थं निराकुर्यात् । अत एवा-
योग्यताज्ञानं प्रतिबन्धकमिति वदन्तौ पक्षधरमणिकारौ परा-
स्ताविति ॥

॥ इति परोक्तयोग्यतालक्षणभङ्गः ॥

'ತದಭಾವಶ್ಚ ಅಯೋಗ್ಯತಾ. ತನ್ನಿಶ್ಚಯಶ್ಚ ಅಪ್ರಾಮಾಣ್ಯಶಂಕಾಶೂನ್ಯಃ ಪ್ರತಿಬಂಧಕಃ' ಎಂದು ಹೇಳಿದ್ದೂ ಸಹ ಸರಿಯಲ್ಲ. ಅಪ್ರಾಮಾಣ್ಯಶಂಕಾ ಇಲ್ಲದಿರುವ ಹಾಗೂ ಅಯೋಗ್ಯ ಎಂದು ನಿಶ್ಚಯವು ಇರುವ ವಾಕ್ಯದಲ್ಲಿ ಜ್ಞಾನಹೇತುತ್ವವು ಕಂಡುಬಂದಿದೆ. ಹುಚ್ಚನು ಹೇಳುವ 'ಅಗ್ನಿನಾ ಸಿಂಚೇತ್' ಎಂಬ ವಾಕ್ಯದಿಂದ ಜ್ಞಾನವು ಬರುತ್ತಿದೆ. ಆದರೆ ಈ ವಾಕ್ಯದಲ್ಲಿ ಅಪ್ರಾಮಾಣ್ಯ ಶಂಕಾ ಇಲ್ಲ. ಹಾಗೂ ಈ ವಾಕ್ಯವು ಅಯೋಗ್ಯ ಎಂದು ನಿಶ್ಚಯವಾಗಿದೆ. ಈ ವಾಕ್ಯವು ಸಹ ಯೋಗ್ಯ-ವಾದ ವಾಕ್ಯ ಎಂದಾಗಬೇಕಾಗುತ್ತದೆ. ಏಕೆಂದರೆ ಈ ವಾಕ್ಯವು ಯಾವ ವಿಷಯಕ್ಕೂ ಸಹ ಪ್ರತಿ-ಬಂಧಕವಾಗಿಲ್ಲ. ಹೀಗೆ ಒಪ್ಪದಿದ್ದರೆ ಉನ್ಮತ್ತನ ವಾಕ್ಯವನ್ನು ಹೇಗೆ ತಾನೆ ನಿರಾಕರಣೆ ಮಾಡಲು ಸಾಧ್ಯ. ಈ ಕಾರಣದಿಂದಲೇ 'ಅಯೋಗ್ಯತಾಜ್ಞಾನವು ಪ್ರತಿಬಂಧಕ' ಎಂದು ಹೇಳುವ ಪಕ್ಷಧರ ಹಾಗೂ ಮಣಿಕಾರರು ಹೇಳಿದ ಲಕ್ಷಣವನ್ನೂ ಸಹ ನಿರಾಕರಣೆ ಮಾಡಿದಂತಾಯಿತು.

ಇಲ್ಲಿಗೆ ಪರೋಕ್ತಯೋಗ್ಯತಾಲಕ್ಷಣಭಂಗವು ಸಮಾಪ್ತವಾಯಿತು.

* * * * *

# ಆಸತ್ತಿ ಪ್ರಕರಣ

## ಆಸತ್ತಿಲಕ್ಷಣ

आसत्तिश्च पदनिष्ठान्वयबोधविरोधिव्यवधानाभावः । ततश्च व्यवहितान्वयवन्ति वेदादीनि आसन्नत्वाद्वाक्यानीति बोध्यम् । घटकं च चकन्दानयनं पुत्रकरं करमिति वाक्याभासगतानि घटमानय पुत्रकेति पदानि न वाक्यम् । कम्, च, चकमित्यादि-व्यर्थाक्षरैर्व्यवहितत्वात् ।

ಆಸತ್ತಿಯ ಲಕ್ಷಣ ಹೀಗಿದೆ - 'ಪದನಿಷ್ಠ ಅನ್ವಯಬೋಧವಿರೋಧಿವ್ಯವಧಾನಾಭಾವಃ'. ಆಸತ್ತಿ ಎಂದರೆ ಪದಗಳ ಮಧ್ಯೆ ಅನ್ವಯಜ್ಞಾನವು ಬರಲು ವಿರೋಧಿಯಾದ ವ್ಯವಧಾನವು ಇರಬಾರದು ಎಂದಭಿಪ್ರಾಯ. ಆದ್ದರಿಂದ ವೇದ ಮುಂತಾದವುಗಳಲ್ಲಿ ಅನ್ವಯ ವ್ಯವಧಾನವು ಇದ್ದರೂ ಸಹ ಆ ವ್ಯವಧಾನವು ಅನ್ವಯಬೋಧಕ್ಕೆ ವಿರೋಧಿಯಲ್ಲವಾದ್ದರಿಂದ ವೇದವಾಕ್ಯಗಳು ಆಸತ್ತಿಯುಕ್ತ ವಾಕ್ಯವಾಗಿವೆ ಎಂದು ತಿಳಿಯಬೇಕು. ' ಘಟಕಂ ಚ ಚಕಂದಾನಯನಂ ಪುತ್ರಕರಂ ಕರಂ' ಮುಂತಾದ ವಾಕ್ಯಾಭಾಸಗಳಲ್ಲಿ ಇರುವ ಪದಗಳು ವಾಕ್ಯ ಎಂದು ಕರಿಸಿಕೊಳ್ಳುವುದಿಲ್ಲ, ಏಕೆಂದರೆ ಈ ವಾಕ್ಯದಲ್ಲಿ ಮಧ್ಯದಲ್ಲಿ 'ಕಂ ಚ ಚಕಂ' ಮುಂತಾದ ಅರ್ಥರಹಿತವಾದ ವ್ಯರ್ಥವಾದ ಅಕ್ಷರ-ಗಳು ಇವೆ. ಆದ್ದರಿಂದ ಇದನ್ನು ಯೋಗ್ಯವಾದ ವಾಕ್ಯ ಎಂದು ವ್ಯವಹಾರ ಮಾಡುವುದಿಲ್ಲ.

## ಶಾಬ್ದಬೋಧಕ್ಕೆ ಆಸತ್ತಿಯ ಜ್ಞಾನ ಅನಾವಶ್ಯಕ

इयं चासत्तिः स्वरूपसत्येव शाब्दधीहेतुः । देवदत्त गामभ्याजेति पदश्राविणः अन्वयबोधविरोधिव्यवधानाभावरूपासत्त्यनुसन्धान-विरहेऽपि आसन्नेभ्यः पदेभ्योऽन्वयबोधदर्शनात् ।

ಈ ಆಸತ್ತಿಯು ಮೂಲಭೂತವಾಗಿ ವಾಕ್ಯದಲ್ಲಿ ಇದ್ದರೆ ಸಾಕು, ಶಾಬ್ದಬೋಧಜ್ಞಾನವು ಬರುತ್ತದೆ. ಉದಾಹರಣೆಗೆ 'ದೇವದತ್ತ ಗಾಂ ಅಭ್ಯಾಜ' ದೇವದತ್ತನೇ ಹಸುವನ್ನು ಮೇಯಿಸು ಎಂದು ಪ್ರಯೋಗ ಮಾಡಿದಾಗ ಈ ವಾಕ್ಯವನ್ನು ಕೇಳುವ ವ್ಯಕ್ತಿಗೆ ಅನ್ವಯಬೋಧಕ್ಕೆ ವಿರೋಧಿಯಾದ ವ್ಯವಧಾನವು ಇಲ್ಲದೇ ಇರುವುದರಿಂದ ಆಸತ್ತಿಯು ಈ ವಾಕ್ಯದಲ್ಲಿ ಇದ್ದು ಆದರೆ ಈ ವಾಕ್ಯದಲ್ಲಿ ಆಸತ್ತಿ ಇದೆ ಎಂಬ ಜ್ಞಾನವು ಇಲ್ಲದಿದ್ದರೂ ಸಹ ಆಸನ್ನವಾದ ಈ ಪದಗಳಿಂದ ಅನ್ವಯಬೋಧವು ಬರುವುದು ಕಂಡಿದೆ.

## ಆಸತ್ತಿಭ್ರಮದಿಂದ ಶಾಬ್ದಬೋಧ ಬರುವುದಿಲ್ಲ

**न चैवमनासन्नेभ्यः पदेभ्य आप्ताभासवाक्येन आसत्तिभ्रमे शाब्दबोधो न स्यादिति वान्यम् । दृष्टत्वात् । न हि अन्वयबोधविरोधिव्यवधाने सत्यपि तदभावभ्रममात्रे शाब्दबोधः सम्भवति । व्याहतत्वात् । अन्यथा दाहप्रतिबन्धकमणिमन्त्रादिसमवधानदशायां तदभावभ्रममात्रेण दाहप्रसङ्गो दुर्वारः स्यात् ।**

ಪ್ರಶ್ನೆ : ಹೀಗೆ ಹೇಳಿದರೆ ಆಸತ್ತಿರಹಿತವಾದ ಪದಗಳಿಂದ ಆಪ್ತಾಭಾಸನು ಪ್ರಯೋಗ ಮಾಡುವ ವಾಕ್ಯದಿಂದ ಆಸತ್ತಿಭ್ರಮ ಬರುತ್ತದೆ. ಈ ಸ್ಥಳದಲ್ಲಿ ಹಿಂದೆ ಹೇಳಿದ ಲಕ್ಷಣವು ಇಲ್ಲವಾದ್ದರಿಂದ ಈ ವಾಕ್ಯದಿಂದ ಶಾಬ್ದಬೋಧ ಬರುತ್ತದೆಯೇ.

ಉತ್ತರ : ಈ ಸ್ಥಳದಲ್ಲಿ ಶಾಬ್ದಬೋಧವು ಬರುವುದಿಲ್ಲ ಎಂದು ನಾವೂ ಸಹ ಅಂಗೀಕಾರ ಮಾಡಿದ್ದೇವೆ. ಆದ್ದರಿಂದ ಆಸತ್ತಿ ಭ್ರಮದಲ್ಲಿ ಶಾಬ್ದಬೋಧವು ಬರದೇ ಇರಬೇಕಾದೀತು ಎಂಬ ಆಕ್ಷೇಪವು ಇಷ್ಟಾಪತ್ತಿಯಾಗಿದೆ. ಅನ್ವಯಬೋಧ ವಿರೋಧಿಯಾದ ವ್ಯವಧಾನವಿದ್ದರೂ ಸಹ ಅನ್ವಯಬೋಧ ವಿರೋಧಿಯಾದ ವ್ಯವಧಾನ ಅಭಾವದ ಭ್ರಾಂತಿಯಿಂದ ಶಾಬ್ದಬೋಧವು ಬರುತ್ತದೆ ಎಂಬುದು ವ್ಯಾಹತವಾಗಿದೆ. ಇಲ್ಲದಿದ್ದರೆ ದಾಹಕ್ಕೆ ಪ್ರತಿಬಂಧಕವಾದ ಮಣಿ, ಮಂತ್ರ

ಮುಂತಾದವುಗಳು ಇದ್ದ ಸಂದರ್ಭದಲ್ಲೂ ಸಹ ಮಣಿ-ಮಂತ್ರಾದಿಗಳು ಇಲ್ಲ ಎಂಬ ಭ್ರಮೆಯಿಂದ ದಾಹವು ಆಗದೇ ಇರಬೇಕಾಗುವ ಪ್ರಸಂಗವು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

## ಮಣಿಕಾರ ಹೇಳಿದ ಆಸತ್ತಿಯ ಲಕ್ಷಣ

**अत्रोक्तं मणिकृतां । आसत्तिश्चाव्यवधानेनान्वयप्रतियोग्युपस्थितिः । सा च स्मृतिर्नानुभवोऽतो नान्योन्याश्रय इति । स स्थूलदृश्वा । आसत्तेः पदधर्मभूताया आत्मधर्मोपस्थित्यात्मकत्वाभावेन आसत्तेस्तदात्मकत्वोक्त्ययोगात्। अनासन्नमप्यासत्तिभ्रमेणान्वयबोधसमर्थमेवेति स्वयमेव आकाङ्क्षावादेऽभिहितत्वेन तद्विरोधाच्च । नह्यासत्तेः पदार्थोपस्थित्यात्मकत्वे तद्विरहवेलायां तद्भ्रमः सम्भवति । येन शाब्दबोधः स्यात् ।**

ಮಣಿಕಾರನು ಆಸತ್ತಿಯ ಲಕ್ಷಣವನ್ನು ಹೀಗೆ ಹೇಳುತ್ತಾನೆ - 'ಅವ್ಯವಧಾನೇನ ಅನ್ವಯ-ಪ್ರತಿಯೋಗಿ-ಉಪಸ್ಥಿತಿಃ ಸಾ ಚ ಸ್ಮೃತಿಃ, ನ ಅನುಭವಃ. ಅತಃ ನಾನ್ಯೋನ್ಯಾಶ್ರಯಃ' ಎಂಬುದಾಗಿ ಇವನ ಬುದ್ಧಿಯೂ ಸಹ ಸ್ಥೂಲವಾಗಿದೆ. ಆಸತ್ತಿಯು ಪದದ ಧರ್ಮ, ಇದು ಆತ್ಮಧರ್ಮವಾಗಲು ಸಾಧ್ಯವಿಲ್ಲ. ಆದ್ದರಿಂದ ಆತ್ಮಧರ್ಮ ಉಪಸ್ಥಿತಿರೂಪವಾಗಿ ಆಸತ್ತಿಯನ್ನು ನಿರೂಪಿಸುವುದು ಸರಿ-ಯಲ್ಲ. ಹಾಗೂ ಆಸತ್ತಿ ಇಲ್ಲದೇ ಇದ್ದರೂ ಸಹ ಅನಾಸನ್ನವಾದ ಪದಾರ್ಥವು ಆಸತ್ತಿಭ್ರಮದಿಂದ ಅನ್ವಯಬೋಧವನ್ನು ಉಂಟುಮಾಡಲು ಸಮರ್ಥವಾಗಿದೆ ಎಂದು ತಾನೇ ಆಕಾಂಕ್ಷಾವಾದದಲ್ಲಿ ಹೇಳುವುದರಿಂದ ಇಲ್ಲಿ ಅದಕ್ಕೆ ವಿಪರೀತವಾಗಿ ಪ್ರತಿಯೋಗಿಯ ಉಪಸ್ಥಿತಿಯನ್ನು ಹೇಳಿದರೆ ಸ್ವವ್ಯಾಹತಿ ರೂಪವಾದ ದೋಷವು ಬರುತ್ತದೆ. ಆಸತ್ತಿಯು ಪದಾರ್ಥೋಪಸ್ಥಿತಿರೂಪವಾದರೆ ಪದಾರ್ಥೋಪಸ್ಥಿತಿ ಇಲ್ಲದ ಸಮಯದಲ್ಲಿ ಆಸತ್ತಿ ಭ್ರಮವು ಬರಲು ಸಾಧ್ಯವಿಲ್ಲ. ಹೀಗೆ ಬಂದಿದ್ದರೆ ಶಾಬ್ದಬೋಧವು ಬರಬಹುದಿತ್ತು.

## ಆಸತ್ತಿಯು ಸ್ಮೃತಿರೂಪವಲ್ಲ ಎಂಬುದೂ ತಪ್ಪು

**यदपि चोक्तं सा च स्मृतिर्नानुभवोऽतो नान्योन्याश्रय इति । तदपि न । आसत्तेरनुभवात्मकत्वेऽपि अन्योन्याश्रयप्रसक्त्यभावेन तत्परिहाराभिधानायोगात् । न हि अन्वयप्रतियोग्यनुभवः अन्वयानुभवजन्यः येन तस्य तद्धेतुत्वाङ्गीकारेऽन्योन्याश्रयः स्यात् ।**

ಇದರಂತೆ 'ಸಾಚ ಸ್ಮೃತಿಃ, ನ ಅನುಭವಃ. ಅತಃ ನಾನ್ಯೋನ್ಯಾಶ್ರಯಃ' ಎಂದು ಆಸತ್ತಿಯು ಸ್ಮೃತಿರೂಪ ಹೊರತು ಅನುಭವವಲ್ಲ, ಆದ್ದರಿಂದ ಅನ್ಯೋನ್ಯಾಶ್ರಯ ದೋಷವು ಇಲ್ಲ ಎಂದು ನಿರೂಪಣೆ ಮಾಡಿದ್ದು ಸಹ ಸರಿಯಲ್ಲ. ಆಸತ್ತಿಯು ಅನುಭವ ಸ್ವರೂಪ ಎಂದು ಒಪ್ಪಿದರೂ ಸಹ ಅನ್ಯೋನ್ಯಾಶ್ರಯದ ಪ್ರಸಕ್ತಿಯೇ ಇಲ್ಲವಾದ್ದರಿಂದ ಆ ದೋಷಕ್ಕೆ ಪರಿಹಾರವನ್ನು ಹೇಳುವುದು ಸರಿಯಲ್ಲ. ಅನ್ವಯಪ್ರತಿಯೋಗಿಯ ಅನುಭವವು ಅನ್ವಯ ಅನುಭವದಿಂದ ಹುಟ್ಟುವುದಿಲ್ಲ. ಒಂದು ವೇಳೆ ಹೀಗೆ ಹುಟ್ಟಿದ್ದಾದರೆ ಆಗ ಆ ಅನುಭವಕ್ಕೆ ಅನುಭವಜನ್ಯತ್ವವನ್ನು ಹೇಳಿ ಆಗ ಅನ್ಯೋನ್ಯಾಶ್ರಯ ದೋಷವು ಸಂಭವಿಸುತ್ತಿತ್ತು.

## ಅವ್ಯವಧಾನೇನ ಅರ್ಥೋಪಸ್ಥಿತ್ಯನುಕೂಲ ವ್ಯಾಪಾರವೂ ಆಸತ್ತಿಯಲ್ಲ

**पक्षधरस्तु अव्यवधानेनार्थोपस्थित्यनुकूलो व्यापारः आसत्तिः । स चैकपदानन्तरमपरपदे तात्पर्यमुच्चारणं वा । तेन शुकादिवाक्ये नाव्याप्तिः ।**

ಪಕ್ಷಧರನು ಹೇಳುವ ಲಕ್ಷಣ ಹೀಗಿದೆ. ಅವ್ಯವಧಾನೇನ ಅರ್ಥೋಪಸ್ಥಿತ್ಯನುಕೂಲಃ ವ್ಯಾಪಾರಃ ಆಸತ್ತಿಃ' ಯಾವುದೇ ವ್ಯವಧಾನವಿಲ್ಲದೆ ಪದಾರ್ಥದ ಉಪಸ್ಥಿತಿಗೆ ಅನುಕೂಲವಾದ ವ್ಯಾಪಾರವೇ ಆಸತ್ತಿ. ಇದು ಒಂದು ಪದದ ಉಚ್ಚಾರಣೆಯ ನಂತರ ಮತ್ತೊಂದು ಪದದ ಉಚ್ಚಾರಣೆ

ಮಾಡಿದಾಗ ಆ ಎರಡು ಪದಗಳ ಮಧ್ಯದಲ್ಲಿ ಉಚ್ಚಾರಣೆ ಅಥವಾ ತಾತ್ಪರ್ಯವು ವ್ಯವಹಿತ-ವಾಗಿರಬಾರದು ಎಂದಭಿಪ್ರಾಯ. ಹೀಗೆ ಹೇಳುವುದರಿಂದ ಶುಕಾದಿ ವಾಕ್ಯಗಳಲ್ಲಿ ಅವ್ಯಾಪ್ತಿ-ದೋಷವು ಬರುವುದಿಲ್ಲ.

## ಅನುಗತಧರ್ಮ ಉಪಪಾದಿಸಲಾಗದು

**न चैवमननुगमः । सामान्यतोऽव्यवहितपदार्थोपस्थित्यनुकूल-व्यापारत्वेन जनकत्वादित्याह । तन्न । पदधर्मभूतासत्तेः वक्तृ-निष्ठव्यापारात्मकत्वाभिधानायोगात् । व्यवहितान्वयोपेतपद-घटितवाक्येन योजनयाप्यन्वयबोधाभावप्रसङ्गाच्च । न हि तत्रा-व्यवधानेनान्वयप्रतियोग्युपस्थित्यनुकूलो व्यापारोऽस्ति । किं तर्हि व्यवधानेनान्वयप्रतियोग्युपस्थित्यनुकूल उच्चारणरूपो व्यापारोऽस्ति ।**

ಅನುಗಮವನ್ನು ಮಾಡಲು ಸಾಧ್ಯವಿಲ್ಲ ಎಂಬ ಜಿಜ್ಞಾಸೆಯು ಸರಿಯಲ್ಲ. ಸಾಮಾನ್ಯತಃ ಅವ್ಯವಹಿತ ಪದಾರ್ಥ ಉಪಸ್ಥಿತಿ ಅನುಕೂಲ ವ್ಯಾಪಾರ ಎಂಬ ಧರ್ಮವೇ ಇಲ್ಲಿ ಅನುಗತವಾದ ಧರ್ಮವಾಗಿದೆ. ಈ ಅಭಿಪ್ರಾಯವು ಸರಿಯಲ್ಲ. ಪದಧರ್ಮಭೂತವಾದ ಆಸತ್ತಿಯು ವಕ್ತೃನಿಷ್ಠ-ವಾದ ವ್ಯಾಪಾರ ರೂಪವಾಗಲು ಸಾಧ್ಯವಿಲ್ಲ. ಹಾಗೂ ವ್ಯವಹಿತವಾದ ಅನ್ವಯವು ಇರುವ ಪದಗಳಿಂದ ಕೂಡಿದ ವಾಕ್ಯದಿಂದ ಆ ವಾಕ್ಯವನ್ನು ಯೋಜನಾ ಮಾಡಿಕೊಂಡರೂ ಸಹ ಅನ್ವಯ-ಬೋಧವು ಬರದೇ ಇರಬೇಕಾದೀತು. ಅಲ್ಲಿ ಅವ್ಯವದಾನವಿದ್ದು, ಅನ್ವಯ ಪ್ರತಿಯೋಗಿ ಉಪಸ್ಥತಿಗೆ ಅನುಕೂಲವಾದ ವ್ಯಾಪಾರವು ಇಲ್ಲ. ಮತ್ತೇನೆಂದರೆ ವ್ಯವಧಾನವಿದ್ದು ಅನ್ವಯ-ಪ್ರತಿಯೋಗಿ ಉಪಸ್ಥಿತಿಗೆ ಅನುಕೂಲವಾದ ಉಚ್ಚಾರಣ ರೂಪವಾದ ವ್ಯಾಪಾರವೇ ಇದೆ.

## ತಾರ್ಕಿಕರ ಆಸತ್ತಿಲಕ್ಷಣ ಅನುಸರಿಸಿದರೆ ವೇದಾಪ್ರಾಮಾಣ್ಯ ಬರುತ್ತದೆ

**न च तत्रापि कर्मवाचकपदानन्तरं क्रियापदमित्यादिप्रकारेण वक्तुः पदतात्पर्यम्, अव्यवधानेन पदार्थोपस्थित्यनुकूलव्यापारोऽस्तीति वाच्यम् । एवं सति तात्पर्यविषयीभूतक्रमस्य पठ्यमानक्रमान्यत्त्वेन तदवच्छिन्नपदात्मकवाक्यस्यैव बोधकत्वं न तु पठ्यमानक्रमावच्छिन्नवाक्यस्येत्यापातेन वेदपुराणादीनामप्रामाण्यप्रसङ्गात् ।**

ಪ್ರಶ್ನೆ : ಈ ಸ್ಥಳದಲ್ಲೂ ಸಹ ಕರ್ಮವನ್ನು ಹೇಳುವ ಪದವನ್ನು ಉಚ್ಚಾರಣೆ ಮಾಡಿದ ಮೇಲೆ ಕ್ರಿಯಾಪದವನ್ನು ಹೇಳಬೇಕು. ಮುಂತಾದ ಮಾತನಾಡುವವನ ತಾತ್ಪರ್ಯವು ಇದೆ. ಇಂತಹ ವಕ್ತೃತಾತ್ಪರ್ಯವು ವ್ಯವಹಿತವಾಗಿ ಇಲ್ಲವಾದ್ದರಿಂದ, ಅವ್ಯವಹಿತವಾದ ವ್ಯಾಪಾರವೇ ಇದೆಯಲ್ಲವೇ?

ಉತ್ತರ : ಹೀಗೆ ಹೇಳುವುದಾದರೆ ಹೇಳುವವನಿಗೆ ಇರುವ ತಾತ್ಪರ್ಯವು ಓದುವ ಕ್ರಮಕ್ಕಿಂತ ಭಿನ್ನವಾಗಿರುತ್ತದೆ. ಆದ್ದರಿಂದ ಪಠ್ಯಮಾನಕ್ರಮಾವಚ್ಛಿನ್ನಪದಾತ್ಮಕ ವಾಕ್ಯವೇ ಬೋಧಕವಾಗುತ್ತದೆ , ಹೊರತು ವ್ಯವಹಿತಕ್ರಮಾವಚ್ಛಿನ್ನವಾದ ವಾಕ್ಯವು ಬೋಧಕವಾಗುವುದಿಲ್ಲ ಎಂದು ಹೇಳಿದಂತಾಗುತ್ತದೆ.

ಹೀಗೆ ಒಪ್ಪಿದರೆ ವೇದ ಮತ್ತು ಪುರಾಣಾದಿಗಳಲ್ಲಿ ಇರುವ ಕ್ರಮವು ವ್ಯವಹಿತವೇ ಆಗಿರುವುದರಿಂದ ಓದುವ ಕ್ರಮದಲ್ಲೇ ಆ ಪದಗಳು ಅರ್ಥವನ್ನು ತಿಳಿಸುಕೊಡುವುದಿಲ್ಲವಾದ್ದರಿಂದ ವೇದ ಪುರಾಣಾದಿಗಳು ಅಪ್ರಮಾಣ ಎಂದಾಗಬೇಕಾಗುತ್ತದೆ.

## ತಾರ್ಕಿಕರಿಗೆ ವೇದವಾಕ್ಯಗಳಲ್ಲಿ ಆಸತ್ತಿಯನ್ನೂ ಸಮರ್ಥಿಸಲಾಗದು

**तात्पर्यज्ञानस्यैवान्वयप्रतियाग्युपस्थित्यनुकूलत्वेन तात्पर्यस्यान्वयप्रतियोग्युपस्थित्यनुकूलत्वाभावाच्च । न हि तात्पर्यज्ञानसद्भावे तात्पर्यविलम्बेन कार्यविलम्बः । येन तात्पर्यमप्युपस्थित्यनुकूलो व्यापारः स्यात् । अज्ञोच्चरितवेदादिवाक्येन यदा अन्वयबोधः तदा अव्यवधानेनार्थोपस्थित्यनुकूलयोः तात्पर्योच्चारणयोरुभयोरप्यभावेनासत्त्यभावापाताच्च ।**

ತಾತ್ಪರ್ಯಜ್ಞಾನವೇ ಅನ್ವಯಪ್ರತಿಯೋಗಿಯ ಉಪಸ್ಥಿತಿಗೆ ಅನುಕೂಲವಾದ್ದರಿಂದ ಅನ್ವಯಪ್ರತಿಯೋಗಿ ಉಪಸ್ಥಿತಿ ಅನುಕೂಲವು ತಾತ್ಪರ್ಯಕ್ಕೆ ಬರುವುದೂ ಇಲ್ಲ. ತಾತ್ಪರ್ಯಜ್ಞಾನವಿದ್ದರೂ ಸಹ ತಾತ್ಪರ್ಯ ಬರುವುದರಲ್ಲಿ ತಡವಾಗಿ ಶಾಬ್ದಬೋಧ ಜ್ಞಾನರೂಪವಾದ ಕಾರ್ಯವು ವಿಳಂಬವಾಗುವುದು ಇಲ್ಲ. ಹೀಗಾಗಿದ್ದರೆ ತಾತ್ಪರ್ಯವೂ ಸಹ ಉಪಸ್ಥಿತಿಗೆ ಅನುಕೂಲವಾದ ವ್ಯಾಪಾರವೆಂದಾಗಲು ಸಾಧ್ಯವಿತ್ತು. ಹಾಗೂ ತಾತ್ಪರ್ಯಜ್ಞಾನಾದಿಗಳು ಇಲ್ಲದೇ ಇರುವ ಅಜ್ಞಾನಿಯು ವೇದಾದಿವಾಕ್ಯಗಳನ್ನು ಉಚ್ಚಾರಣೆ ಮಾಡಿದಾಗ ಆವಾಕ್ಯದಿಂದ ಅನ್ವಯಬೋಧವು ಬರದೇ ಇರಬೇಕಾದೀತು.

ಏಕೆಂದರೆ ಅಜ್ಞಾನಿಗೆ ಪದಗಳ ತಾತ್ಪರ್ಯದಲ್ಲಿ ಅಭಿಪ್ರಾಯವಿಲ್ಲ. ಆದ್ದರಿಂದ ಅವ್ಯವಧಾನೇನ ಅರ್ಥೋಪಸ್ಥಿತಿಗೆ ಅನುಕೂಲವಾದ ತಾತ್ಪರ್ಯ ಹಾಗೂ ಉಚ್ಚಾರಣೆ ಎರಡೂ ಇಲ್ಲದಿರುವುದರಿಂದ ಅಂತಹ ವೇದವಾಕ್ಯಗಳಲ್ಲಿ ಆಸತ್ತಿಯೇ ಇಲ್ಲದೇ ಇರಬೇಕಾದೀತು.

## ಅವ್ಯವಹಿತತ್ವೇನ ಪದತಾತ್ಪರ್ಯವೂ ಆಸತ್ತಿಯಲ್ಲ

**स्वतन्त्रवक्तुस्तात्पर्यमस्तीति चेत् । न । वर्णानित्यत्ववादिमते स्वतन्त्रपुरुषप्रणीताज्ञोच्चरितवाक्ययोर्भिन्नत्वेन स्वतन्त्रपुरुषप्रणीत-**

**वाक्यस्यासन्नत्वेऽपि अज्ञोचरितवाक्यस्यानासन्नत्वापरिहारात् । न हि वाक्यान्तरगतया आसत्त्या वाक्यान्तरमासन्नं भवतीति । अत एवाव्यवहितत्वेन पदतात्पर्यमासत्तिरिति निरस्तम् । शुकादि-वाक्येऽव्याप्तेः । न चेश्वरतात्पर्यं तत्रास्तीति वाच्यम् । ईश्वर-तात्पर्यस्य ज्ञातुमशक्यत्वेन तव आसत्तिज्ञानाभावेन वाक्यार्थ-बोधाभावप्रसङ्गात् इति ।**

ಸ್ವತಂತ್ರವಾಗಿ ಉಚ್ಚಾರಣೆ ಮಾಡುವ ವ್ಯಕ್ತಿಗೆ ಎಂದರೆ ಈಶ್ವರನಿಗೆ ಉಚ್ಚಾರಣೆಯಲ್ಲಿ ತಾತ್ಪರ್ಯವು ಇರುವುದರಿಂದ ಅಜ್ಞಾನಿಯು ಪ್ರಯೋಗ ಮಾಡಿದ ವೇದವಾಕ್ಯದಲ್ಲೂ ಸಹ ಆಸತ್ತಿಯನ್ನು ಹೇಳಬಹುದಲ್ಲವೇ?

ವರ್ಣಗಳನ್ನು ಅನಿತ್ಯ ಎಂದು ಹೇಳುವ ವಾದಿಗಳ ಮತದಂತೆ ಸ್ವತಂತ್ರ ಪುರುಷ ರಚನೆ ಮಾಡಿದ ವಾಕ್ಯವು ಹಾಗು ಅಜ್ಞಾನಿ ಉಚ್ಚಾರಣೆ ಮಾಡಿದ ವಾಕ್ಯವು ಭಿನ್ನ ಭಿನ್ನವಾಗಿದೆ. ಆದ್ದರಿಂದ ಸ್ವತಂತ್ರಪುರುಷ ಪ್ರಣೀತವಾಕ್ಯದಲ್ಲಿ ಆಸತ್ತಿಯನ್ನು ಹೇಳಲು ಬಂದರೂ ಸಹ ಅಜ್ಞೋಚ್ಚರಿತ ವಾಕ್ಯದಲ್ಲಿ ಆಸತ್ತಿಯನ್ನು ಉಪಪಾದನೆ ಮಾಡಲು ಸಾಧ್ಯವಿಲ್ಲ. ಹಾಗೂ ಅನಾಸನ್ನತ್ವವನ್ನು ಸಹ ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ. ಬೇರೆ ಯಾವುದೋ ವಾಕ್ಯದಲ್ಲಿರುವ ಆಸತ್ತಿಯಿಂದ ಮತ್ತೊಂದು ವಾಕ್ಯದಲ್ಲಿ ಆಸತ್ತಿ ಇದೆ ಎಂದು ಹೇಳಲು ಸಾಧ್ಯವಿಲ್ಲ.

ಈ ಕಾರಣದಿಂದಲೇ 'ಅವ್ಯವಹಿತತ್ವೇನ ಪದತಾತ್ಪರ್ಯಂ ಆಸತ್ತಿಃ' ಎಂಬ ಆಸತ್ತಿಯ ಲಕ್ಷಣವನ್ನು ನಿರಾಕರಣೆ ಮಾಡಿದಂತಾಯಿತು. ಶುಕಾದಿವಾಕ್ಯದಲ್ಲಿ ಪದತಾತ್ಪರ್ಯವು ಇಲ್ಲವಾದ್ದ-ರಿಂದ ಅವ್ಯಾಪ್ತಿದೋಷವು ಬರುತ್ತದೆ. ಶುಕಾದಿವಾಕ್ಯದಲ್ಲೂ ಸಹ ಈಶ್ವರ ತಾತ್ಪರ್ಯವನ್ನು ಹೇಳಿ ಅವ್ಯಾಪ್ತಿ ದೋಷವನ್ನು ಪರಿಹಾರ ಮಾಡಲು ಸಾಧ್ಯವಿಲ್ಲ. ಈಶ್ವರನ ತಾತ್ಪರ್ಯವನ್ನು ತಿಳಿಯಲು

ಸಾಧ್ಯವಿಲ್ಲವಾದ್ದರಿಂದ ನಿನಗೇ ಆಸತ್ತಿಜ್ಞಾನವು ಇಲ್ಲವಾದ್ದರಿಂದ ವಾಕ್ಯಾರ್ಥಬೋಧವೇ ಬರದೇ ಇರುವ ಪ್ರಸಂಗ ಬರುತ್ತದೆ.

## ಅವ್ಯವಹಿತಪದಜ್ಞಾನಜನ್ಯಾವ್ಯವಹಿತಾನ್ವಯಪ್ರತಿಯೋಗ್ಯುಪಸ್ಥಿತಿಯೂ ಆಸತ್ತಿಯಲ್ಲ

**केचित्तु अव्यवहितपदज्ञानजन्याव्यवहितान्वयप्रतियोग्युपस्थिति-रासत्तिः सा च ज्ञाता शाब्दधीहेतुः ।**

ಮತ್ತೆ ಕೆಲವರು ಆಸತ್ತಿಯ ಲಕ್ಷಣವನ್ನು ಹೀಗೆ ಹೇಳುತ್ತಾರೆ - 'ಅವ್ಯವಹಿತಪದಜ್ಞಾನಜನ್ಯ ಅವ್ಯವಹಿತಾನ್ವಯಪ್ರತಿಯೋಗಿಉಪಸ್ಥಿತಿಃ, ಸಾ ಚ ಜ್ಞಾತಾ, ಶಾಬ್ದಧೀಹೇತುಃ' ವ್ಯವಧಾನ ಇಲ್ಲದೇ ಇರುವ ಪದಗಳ ಜ್ಞಾನದಿಂದ ಹುಟ್ಟಿದ ವ್ಯವಧಾನವಿಲ್ಲದೇ ಇರುವ ಅನ್ವಯದ ಪ್ರತಿಯೋಗಿಯ ಉಪಸ್ಥಿತಿಯೇ ಆಸತ್ತಿ. ಇದು ಜ್ಞಾತವಾದದ್ದೇ ಶಾಬ್ದಬೋಧ ಜ್ಞಾನಕ್ಕೆ ಕಾರಣವಾಗುತ್ತದೆ.

## ಆಸತ್ತಿನಿಶ್ಚಯವೇ ಶಾಬ್ದಬೋಧಕಾರಣ

**गिरिर्भुक्तमग्निमान् देवदत्तेनेत्यादौ यदा गिरिरग्निमानित्येव श्रुत्वा पदार्थौ स्मरति तदाऽपि समभिव्याहृतपदजन्या नेयं पदार्थ-स्मृतिः । किन्तु व्यवहितपदजन्येति व्यतिरेकनिश्चये तत्संशये च शाब्दानुभवप्रतिबन्धात् । यत्संशयव्यतिरेकनिश्चयौ यत्र प्रति-बन्धकौ तन्निश्चयस्तद्धेतुरिति व्याप्तेरुक्तरूपासत्तिनिश्चयो हेतुरि-त्याहुः ।**

'ಗಿರಿಃ ಭುಕ್ತಂ ಅಗ್ನಿಮಾನ್ ದೇವದತ್ತೇನ' ಪರ್ವತ ತಿನ್ನಲ್ಪಟ್ಟಿತು. ಅಗ್ನಿಯುಳ್ಳದ್ದು, ದೇವದತ್ತನಿಂದ ಎಂಬ ವಾಕ್ಯವನ್ನು ಕೇಳಿದ ವ್ಯಕ್ತಿ ಪರ್ವತವು ಬೆಂಕಿವುಳ್ಳದ್ದು ಎಂಬ ವಿಷಯವನ್ನು ತಿಳಿದು ಆ ವಿಷಯವನ್ನು ತಿಳಿಸುವ ಪದಗಳನ್ನು ಯಾವಾಗ ಸ್ಮರಣೆ ಮಾಡಿಕೊಳ್ಳುತ್ತಾನೋ ಆಗ ಸಮಭಿವ್ಯಾಹೃತವಾದ ಪದದಿಂದ ಹುಟ್ಟಿದ ಜ್ಞಾನವು ಪದಾರ್ಥಸ್ಮೃತಿ ರೂಪವಾದದ್ದಾಗುವುದಿಲ್ಲ ಮತ್ತೇನೆಂದರೆ ವ್ಯವಹಿತವಾದ ಪದದಿಂದಲೇ ಹುಟ್ಟಿದ್ದಾಗಿದೆ. ಹೀಗೆ ವ್ಯತಿರೇಕವಾಗಿ ನಿಶ್ಚಯ ಮಾಡಿಕೊಂಡಾಗ ಅಥವಾ ಅದರ ಸಂಶಯವು ಬಂದಾಗ ಶಾಬ್ದಬೋಧದ ಅನುಭವಕ್ಕೆ ಪ್ರತಿ-ಬಂಧಕವಾಗಿ ಈ ವಾಕ್ಯದಿಂದ ಶಾಬ್ದಬೋಧವು ಬರದೇ ಇರಬೇಕಾದೀತು.

ವ್ಯಾಪ್ತಿಯು ಹೀಗಿದೆ. 'ಯತ್ ಸಂಶಯವ್ಯತಿರೇಕನಿಶ್ಚಯೌ ಯತ್ರ ಪ್ರತಿಬಂಧಕೌ ತನ್ನಿಶ್ಚಯಃ ತದ್ಧೇತುಃ' ಎಂಬುದಾಗಿ. ಯಾವುದರ ಸಂಶಯ ಹಾಗೂ ವ್ಯತಿರೇಕಗಳ ನಿಶ್ಚಯವು ಅನ್ವಯ ಜ್ಞಾನಕ್ಕೆ ಪ್ರತಿಬಂಧಕವಾಗಿದೆಯೋ ಆ ಸ್ಥಳದಲ್ಲಿ ಸಂಶಯವ್ಯತಿರೇಕಗಳ ನಿಶ್ಚಯವು ಶಾಬ್ದಾನುಭವ ಪ್ರತಿಬಂಧಕವಾಗಿದೆ ಎಂಬುದಾಗಿ, ಆದ್ದರಿಂದ ಹಿಂದೆ ಹೇಳಿದ ಆಸತ್ತಿ ನಿಶ್ಚಯವೇ ಕಾರಣ.

**'न चेश्वरः सर्वज्ञो नेति वाच्यम्' इति वाक्ये इति न वाच्यमिति पदजन्योपस्थितीनां व्यवहितपदजन्यत्वनिश्चयेऽपि अन्वयबोध-दर्शनेनोक्तरूपासत्तिव्यतिरेकनिश्चयस्याप्रतिबन्धकत्वादिति । तस्माद् अन्वयबोधजनकताविरोधिव्यवधानाभाव एवासत्तिरित्युक्त-लक्षणमेवास्थेयम् ।। छ ।।**

।। इति स्वाभिमतासत्तिलक्षणनिरूपणपूर्वकं पराभिमतासत्तिलक्षणभङ्गः ।।

ಈ ವಾದವು ಸರಿಯಲ್ಲ. 'ನ ಚ ಈಶ್ವರಃ ಸರ್ವಜ್ಞಃ ನ ಇತಿ ವಾಚ್ಯಂ' ಈಶ್ವರನು ಸರ್ವಜ್ಞನಲ್ಲ ಎಂದು ಹೇಳಬಾರದು ಎಂಬ ವಾಕ್ಯವನ್ನು ಉಚ್ಚಾರಣೆ ಮಾಡಿದಾಗ ಈ ವಾಕ್ಯದಲ್ಲಿರುವ 'ನ ವಾಚ್ಯಂ' ಎಂಬ ಪದಜನ್ಯವಾದ ಉಪಸ್ಥಿತಿಗೆ ವ್ಯವಹಿತಪದಜನ್ಯತ್ವ ನಿಶ್ಚಯ ಇದ್ದರೂ ಸಹ ಅನ್ವಯ ಬೋಧವು ಕಂಡಿದೆ. ಆದ್ದರಿಂದ ಆಸತ್ತಿ ವ್ಯತಿರೇಕನಿಶ್ಚಯವು ಪ್ರತಿಬಂಧಕವಲ್ಲ. ಆದ್ದರಿಂದ

'ಅನ್ವಯಬೋಧ ಜನಕತಾವಿರೋಧಿಯಾದ ವ್ಯವಧಾನವಿಲ್ಲದೇ ಇರುವಿಕೆಯೇ ಆಸತ್ತಿ' ಎಂಬು-ದಾಗಿ ಆಸತ್ತಿ ಲಕ್ಷಣವನ್ನು ಅಂಗೀಕಾರ ಮಾಡಬೇಕು.

ಇಲ್ಲಿಗೆ ಸ್ವಾಭಿಮತ ಆಸತ್ತಿ ಲಕ್ಷಣನಿರೂಪಣ ಪೂರ್ವಕವಾಗಿ ಪರಾಭಿಮತವಾದ ಆಸತ್ತಿ ಲಕ್ಷಣ ನಿರಾಕರಣೆಯು ಸಮಾಪ್ತವಾಯಿತು.

ತರ್ಕತಾಂಡವ ವಿಶ್ವರೂಪ ಸಿದ್ಧಾಂತತಾಂಡವದಲ್ಲಿ ಆಕಾಂಕ್ಷಾ, ಯೋಗ್ಯತಾ, ಆಸತ್ತಿ ಪ್ರಕರಣವು ಮುಗಿಯಿತು.

* * *

॥ಶ್ರೀಮಧ್ವೇಶಾರ್ಪಣಮಸ್ತು॥



ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು
ಲೇಖಕರಾದ ವಿ॥ ಬೆಮ್ಮತ್ತಿವೇಂಕಟೇಶಾಚಾರ್ಯರಿಗೆ 'ತರ್ಕತಾಂಡವ-ವಿಶ್ವರೂಪ'
ಕೃತಿಯ ರಚನೆಗೆ ರಾಯರ ಪ್ರೇರಣೆಯಂತೆ ದಿನಾಂಕ : ೦೯.೧೨.೨೦೧೪ ರಂದು ಅನುಗ್ರಹಪೂರ್ವಕ ಆದೇಶಿಸಿದರು.



## ತರ್ಕತಾಂಡವ ವಿಶ್ವರೂಪ-ದಲ್ಲಿರುವ ಗ್ರಂಥಗಳು

೧. ಪ್ರಮಾಣಲಕ್ಷಣ
೨. ಪ್ರಮಾಣಲಕ್ಷಣ ಟೀಕೆ
೩. ಪ್ರಮಾಣಪದ್ಧತಿ
೪. ಯುಕ್ತಿಮಲ್ಲಿಕಾ
೫. ತರ್ಕತಾಂಡವ
೬. ನ್ಯಾಯದೀಪ
೭. ಅಭಿನವ ತಾಂಡವ
೮. ಶ್ರೀ ವಿಜಯೀಂದ್ರತೀರ್ಥೀಯ ಪ್ರ. ಪದ್ಧತಿ
೯. ನ್ಯಾಯಕುಸುಮಾಂಜಲಿ
೧೦. ನ್ಯಾಯಲೀಲಾವತಿ
೧೧. ತತ್ವಚಿಂತಾಮಣಿ
೧೨. ಪ್ರಕಾಶ



**ದೇವರು ತರ್ಕಕ್ಕೆ ನಿಲುಕದವನು, ತರ್ಕವನ್ನು ಮೀರಿದವನು ಎಂಬುದನ್ನು
ತರ್ಕಬದ್ಧವಾಗಿ ತಿಳಿಸುವುದೇ ಬ್ರಹ್ಮತರ್ಕ.
ಉಳಿದ ತರ್ಕಗಳೆಲ್ಲಾ ಶುಷ್ಕತರ್ಕ.
ಪ್ರತಿವಾದಿಗಳ ಕುತರ್ಕಗಳ ಮೇಲೆ ನಿರಾಯಾಸವಾಗಿ,
ಮನಮೋಹಕವಾಗಿ ತಾಂಡವನೃತ್ಯ ಮಾಡಿದ
ಶ್ರೀವ್ಯಾಸರಾಜರ ಕೃತಿಯ ವಿಶ್ವರೂಪ ಇದೋ ನಿಮಗಾಗಿ !! ....**